# ಯುಕ್ತಿಮಲ್ಲಿಕಾ

(ಮೂಲಸಹಿತ ಕನ್ನಡ ಅರ್ಥಾನುವಾದ)

ನ ಮಾಧವಸಮೋ ದೇವೋ ನ ಚ ಮಧ್ವಸಮೋ ಗುರುಃ |
ನ ತದ್ವಾಕ್ಯಸಮಂ ಶಾಸ್ತ್ರಂ ನ ಚ ತಸ್ಯ ಸಮಃ ಪುಮಾ ||

ಅನುವಾದಕರು :

**ಬಿ. ಭೀಮರಾವ್**

ದಾವಣಗೆರೆ

ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘ

ದಾವಣಗೆರೆ

# ಯುಕ್ತಿಮಲ್ಲಿಕಾ

## (ಮೂಲಸಹಿತ ಕನ್ನಡ ಅರ್ಥಾನುವಾದ)

ನ ಮಾಧವಸಮೋ ದೇವೋ ನ ಚ ಮಧ್ವಸಮೋ ಗುರುಃ |
ನ ತದ್ವಾಕ್ಯಸಮಂ ಶಾಸ್ತ್ರಂ ನ ಚ ತಸ್ಯ ಸಮಃ ಪುಮಾನ್ ||

ಅನುವಾದಕರು :

**ಬಿ. ಭೀಮರಾವ್**

ದಾವಣಗೆರೆ

ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘ

**ದಾವಣಗೆರೆ**



ಶ್ರೀ ಪಲಿಮಾರು ಭಂಡಾರಕೇರಿ ಉಭಯ ಮಠಾಧೀಶರಾದ
**ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರು**



ಶ್ರೀ ಸೋದೆ ಮಠಾಧೀಶರಾದ

**ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರು**



ಗ್ರಂಥಾನುವಾದಕರಾದ

**ಮಾಧ್ವಭೂಷಣ ಶ್ರೀ ಬಿ. ಭೀಮರಾಯರು**

# ಪ್ರಕಾಶಕರ ಮುನ್ನುಡಿ

ಇದೀಗ ನಿಮ್ಮೆಲ್ಲರ ಸಹಕಾರದಿಂದಾಗಿ 'ಶ್ರೀ ಯುಕ್ತಿಮಲ್ಲಿಕಾ' ಗ್ರಂಥದ ಮೊದಲನೆಯ ಸಂಪುಟವನ್ನು ಓದುಗರ ಮುಂದಿಡಲು ಶ್ರೀಹರಿವಾಯುಗಳು ನಮ್ಮ ಸಂಘಕ್ಕೆ ಅನುಗ್ರಹಮಾಡಿದ್ದಾರೆ. ಅದಕ್ಕಾಗಿ ಶ್ರೀಹರಿವಾಯುಗಳಿಗೆ ನಮ್ಮ ಪ್ರಣಾಮಗಳನ್ನು ಸಲ್ಲಿಸಿ ಸಮಸ್ತ ವೈಷ್ಣವ ಪೀಠಾಧಿಪತಿಗಳಿಗೂ ಪ್ರಣಾಮಗಳ ಸಹಿತ ಕೃತಜ್ಞತೆಯನ್ನು ಸೂಚಿಸಿ ಸಂಘದ ಪರವಾಗಿ ಕೆಲವೆರಡು ಮಾತುಗಳನ್ನು ಹೇಳಬಯಸುತ್ತೇನೆ.

ಈಗಾಗಲೇ ನಮ್ಮ ಸಂಘವು ಜ್ಞಾನಪ್ರಚಾರ ಕಾರ್ಯದಲ್ಲಿ ಮುಂದುವರೆದು ಇದುವರೆಗೆ ಅನೇಕ ಗ್ರಂಥಗಳನ್ನು ಪ್ರಕಟಿಸಿ ಸಜ್ಜನಬಾಂಧವರ ಮುಂದೆ ಇಟ್ಟಿದೆ. ಇದಕ್ಕಾಗಿ, ನಮ್ಮ ಸಂಘದ ಕಟ್ಟಡದ ಅಡಿಗಲ್ಲನ್ನು ಹಾಕಿದ ಪ್ರಾತಃಸ್ಮರಣೀಯರಾದ ಕೀರ್ತಿಶೇಷರಾದ ಶ್ರೀ ಶ್ರೀ ಶ್ರೀ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರನ್ನು ಸ್ಮರಿಸಿ ಕೊಂಡು, ಈ ಸಂಘದ ಸಂಸ್ಥಾಪಕರಲ್ಲೊಬ್ಬರಾದ ಮತ್ತು ಸಂಘದ ಏಳಿಗೆಗಾಗಿ ಈ ವೃದ್ಧಾಪ್ಯದಲ್ಲಿಯೂ ಸಹಾ ಸತತವಾಗಿ ತಮ್ಮ ದೇಹಾರೋಗ್ಯವು ಅಷ್ಟು ಸಮರ್ಪಕವಾಗಿಲ್ಲದಿದ್ದರೂ ಶ್ರೀ ಹರಿವಾಯುಗಳ ಪ್ರೇರಣೆಯಿಂದ ಮತ್ತು ಅನುಗ್ರಹ ದಿಂದ ಶ್ರೀ ಯುಕ್ತಿಮಲ್ಲಿಕಾ ಗ್ರಂಥದ ಕನ್ನಡಾನುವಾದವನ್ನು ಮಾಡುವ ಕಾರ್ಯ ದಲ್ಲಿ ತೊಡಗಿರುವ ಮಾಧ್ವಭೂಷಣ ಶ್ರೀ ಬಿ. ಭೀಮರಾಯರಿಗೆ ನಮ್ಮ ಕೃತಜ್ಞತೆ ಯನ್ನು ಸೂಚಿಸಿ ವಂದನೆಗಳನ್ನು ಅರ್ಪಿಸುತ್ತೇವೆ.

ಶ್ರೀ 'ಯುಕ್ತಿಮಲ್ಲಿಕಾ' ಗ್ರಂಥದ ಅನುವಾದದ ಮಹತ್ಕಾರ್ಯವು ನಮ್ಮ ಸಂಘದಿಂದ ನಡೆಯಿಸಲ್ಪಡಬೇಕೆಂದು ಪ್ರೇರಣೆಮಾಡಿದವರು ಶ್ರೀ ವಾದಿರಾಜರೆಂದು ಹೇಳಬಹುದು. ನನಗೆ ಈ ಗ್ರಂಥದ ವಿಚಾರವಾಗಿ ಹೆಸರೊಂದಾಗಿ ಇನ್ನೇನೂ ತಿಳಿಯದು ; ಓದಿರುವ ಮಾತು ಹಾಗಿರಲಿ ; ಒಂದು ದಿನ ಬ್ರಾಹ್ಮೀಮುಹೂರ್ತದಲ್ಲಿ ನನ್ನ ಕೆಲಸದಲ್ಲಿ ತೊಡಗಿದ್ದಾಗ ಈ ಗ್ರಂಥವನ್ನು ಕನ್ನಡಕ್ಕೆ ಅನುವಾದ ಮಾಡಿಸಿ ನಮ್ಮ ಸಂಘದಿಂದ ಏಕೆ ಪ್ರಕಟಿಸಬಾರದು ಎಂಬ ಅಪೇಕ್ಷೆಯು ಇದ್ದಕ್ಕಿದ್ದಹಾಗೆಯೇ ಅನಿರೀಕ್ಷಿತವಾಗಿ ನನ್ನಲ್ಲಿ ಅಂಕುರಿಸಿತು. ಅಂದಿನಿಂದ ಆ ವಿಚಾರವಾಗಿ ಪೂಜ್ಯರಾದ ಶ್ರೀ ಭೀಮರಾಯರನ್ನು ಈ ಕೆಲಸವನ್ನು ಮಾಡಿಕೊಡಬೇಕೆಂದು ಅನೇಕಾವರ್ತಿ ಪ್ರಾರ್ಥನೆ ಮಾಡಿದರೂ ಅವರು ಉತ್ತರವಾಗಿ 'ಅದು ದೊಡ್ಡ

ಗ್ರಂಥ; ನನ್ನ ಶಕ್ತಿಯೋ ಸೀಮಿತವಾದದ್ದು; ಮೇಲಾಗಿ ನನ್ನ ದೇಹಾರೋಗ್ಯವೂ ಕುಂದುತ್ತಾ ಇದೆ; ಇದು ನನ್ನ ಕೈಲಾಗದ ಕೆಲಸ' ಎಂದೇ ಹೇಳುತ್ತಾ ಬಂದರು. ನಳನಾಮ ಸಂವತ್ಸರದ ಕಾರ್ತೀಕ ಮಾಸದ ಬಹುಳ ಏಕಾದಶಿ ದಿನ ಅಕಸ್ಮಾತ್ ಶ್ರೀ ಉತ್ತರಾದಿ ಮಠಾಧೀಶರಾದ ೧೧೦ಲ ಶ್ರೀ ಶ್ರೀ ಶ್ರೀ ಸತ್ಯಪ್ರಮೋದತೀರ್ಥರ ದರ್ಶನವಾದ ಕಾಲದಲ್ಲಿ ಅವರ ಮುಂದೆ ನನ್ನ ಅಪೇಕ್ಷೆಯನ್ನು ಇಟ್ಟು ಇದು ಪೂರ್ಣವಾಗುವಂತೆ ಆಶೀರ್ವಾದ ಮಾಡಿ ಅನುಗ್ರಹ ಮಾಡಬೇಕಾಗಿ ಪ್ರಾರ್ಥಿಸಿ ಕೊಂಡಾಗ ಅವರು ಹೃತ್ಪೂರ್ವಕವಾಗಿ ಆಶೀರ್ವಾದ ಮಾಡಿ ಅನುಗ್ರಹ ಮಾಡಿ ಮಂತ್ರಾಕ್ಷತೆಯನ್ನು ಕೊಟ್ಟು 'ನಮ್ಮ ಪರಮಶಿಷ್ಯರಾದ ಭೀಮರಾಯರು ಇದನ್ನು ಬರೆಯಲು ಶಕ್ತರು ಮತ್ತು ಯೋಗ್ಯರು. ಕಾರ್ಯವು ಸಂಪೂರ್ಣವಾಗುವುದು. ಮುಂದುವರಿಸಿರಿ' ಎಂದು ಅಪ್ಪಣೆ ಕೊಡಿಸಿದಾಗ ನನಗೆ ಅತ್ಯಂತ ಆನಂದ ವಾಯಿತೆಂದು ಹೇಳಬೇಕಾದ ಅವಶ್ಯಕತೆಯಿಲ್ಲ. ಅಂದಿನಿಂದ ಶ್ರೀ ಭೀಮರಾಯ ರನ್ನು ನಾವುಗಳು ಪದೇ ಪದೇ ಪ್ರಾರ್ಥಿಸಿ ಒತ್ತಾಯಪಡಿಸಿದ ಮೇಲೆ ಈ ಅನುವಾದ ಕಾರ್ಯವನ್ನು ಹಿಡಿದು ಇದುವರೆಗೂ ರಚನಾಕಾರ್ಯವು ಅವ್ಯಾಹತ ವಾಗಿ ನಡೆದಿದೆ. ಆಗಾಗ್ಗೆ ದೇಹದಲ್ಲಿ ಸ್ವಲ್ಪ ಆಲಸ್ಯವು ಕಂಡುಬಂದರೂ ಅದರಿಂದ ಬೇಗನೆ ಚೇತರಿಸಿಕೊಂಡು ಗ್ರಂಥರಚನಾಕಾರ್ಯವನ್ನು ಸಾಧಿಸಿಕೊಂಡು ಬಂದಿದ್ದಾರೆ. ಅವರ ವಿಚಾರವಾಗಿ ಇನ್ನೆರಡು ಮಾತುಗಳನ್ನು ಹೇಳಬೇಕೆಂದರೆ, ಅವರಲ್ಲಿರುವುದು ಶ್ರೀಮದಾಚಾರ್ಯರ ಸೇವಾದೃಷ್ಟಿಯೊಂದೇ; ಪ್ರತಿಫಲಾಪೇಕ್ಷೆ ಯಿಲ್ಲ; ತಾವು ಪ್ರಾರಂಭಮಾಡಿದ ಸಂಘವು ಅನೇಕ ರೂಪದಲ್ಲಿ ಶ್ರೀ ಹರಿವಾಯು ಗಳ ಪೂಜೆಯನ್ನು ಮಾಡಿ ಮಾಧ್ವ ಸಮಾಜಕ್ಕೆ ಮಾಧ್ವ-ತತ್ವ ಪ್ರಚಾರವನ್ನು ಸತತವಾಗಿ ನಡೆಸಿಕೊಂಡು ಬಂದಾಗ ಅವರಿಗೆ ಆಗುವ ಆನಂದ ನಿಸ್ಸೀಮಿತ ವಾದದ್ದು. ಇಂದಿಗೂ ಸಂಘದ ದಿನದಿನದ ಕಾರ್ಯಕ್ರಮಗಳಲ್ಲಿ ಆಸಕ್ತಿ ವಹಿಸಿ ನಮಗೆಲ್ಲಾ ಕಾಲಕಾಲಕ್ಕೆ ಸೂಕ್ತ ಸಲಹೆಗಳನ್ನು ಕೊಡುತ್ತಾ ಮಾರ್ಗದರ್ಶಕರಾಗಿ ರುತ್ತಾರೆ. ಅದಕ್ಕಾಗಿ ನನ್ನದಾಗಿ ಅನೇಕ ನಮಸ್ಕಾರಗಳನ್ನು ಅರ್ಪಿಸಿ ಸಂಘದ ಪರವಾಗಿ ಅದರ ಕೃತಜ್ಞತೆಯನ್ನು ಸಹಾ ಸೂಚಿಸಬಯಸುತ್ತೇನೆ. ಶ್ರೀಹರಿಯು ಅವರಿಗೆ ಆಯುರಾರೋಗ್ಯವನ್ನು ಕೊಟ್ಟು ಅವರಿಂದ ಅನಂತಸೇವೆಯನ್ನು ತೆಗೆದು ಕೊಳ್ಳಲೆಂದು ಶ್ರೀ ಹರಿವಾಯುಗಳಲ್ಲಿ ನಮ್ಮ ಪ್ರಾರ್ಥನೆ.

ಪ್ರಕೃತ ಈ ಯುಕ್ತಿಮಲ್ಲಿಕಾ ಗ್ರಂಥದ ವಿಚಾರವಾಗಿ ನನಗೇನೂ ತಿಳಿಯ ದೆಂದು ಹೇಳಿದ್ದೇನೆ. ಈ ಗ್ರಂಥವು ಶ್ರೀ ವಾದಿರಾಜ ಗುರುವರ್ಯರಿಂದ ರಚಿತ

ವಾಗಿದ್ದು ಗುಣಸೌರಭ, ಶುದ್ಧಿಸೌರಭ, ಭೇದಸೌರಭ, ವಿಶ್ವಸೌರಭ ಮತ್ತು ಫಲಸೌರಭಗಳೆಂಬ ಐದು ವಿಭಾಗಗಳಲ್ಲಿ ಶ್ರೀಹರಿಯ ಅನಂತಗುಣಪೂರ್ಣತ್ವ, ದೋಷದೂರತ್ವ, ಜೀವೇಶಭೇದ, ಜಗತ್ಸತ್ಯತ್ವ ಮತ್ತು ಮೋಕ್ಷಫಲ ವಿಷಯಗಳು ಅನುಕ್ರಮವಾಗಿ ನಿರೂಪಿಸಲ್ಪಟ್ಟಿವೆ. ಇದು ಟೀಕಾಸಮೇತ ೭೧೫ ವಾಲೆಯುಳ್ಳ ಗ್ರಂಥವಾಗಿದ್ದು ಇದರಲ್ಲಿ ಸುಮಾರು ೫,೩೦೦ ಶ್ಲೋಕಗಳು ಅಡಕಗೊಂಡಿವೆ. ಯಥೋಚಿತವಾದ ಅನುವಾದಕರ ಪ್ರಸ್ತಾವನೆಯು ಓದುಗರಿಗೆ ಗ್ರಂಥವನ್ನು ಅನುಸರಿಸುವುದಕ್ಕೆ ಬಹು ಸಹಾಯಕವಾಗುತ್ತದೆಂಬುದನ್ನು ಮನಗಂಡು ಈ ಕೆಲಸದಲ್ಲಿ ತೊಡಗಿದ್ದೇವೆ. ಈ ಪುಸ್ತಕವನ್ನು ೧೨ ರಿಂದ ೧೪ ಸಂಪುಟಗಳಲ್ಲಿ ಹೊರಡಿಸಬೇಕೆಂದು ಹಿರಿಯರು ನಿಶ್ಚಯಿಸಿದ್ದಾರೆ. ಇದನ್ನು ನಡೆಸಿಕೊಡುವುದು ಓದುಗರ ಕೈಯಲ್ಲಿದೆ. ತಮ್ಮ ಪುಸ್ತಕದ ಪೂರ್ತಿ ಹಣವನ್ನು ಇದುವರೆಗೂ ಮುಟ್ಟಿಸಿಲ್ಲದಿದ್ದರೆ ಕೂಡಲೆ ಕಳುಹಿಸಿಕೊಡುವುದಲ್ಲದೆ ಮತ್ತು ತಮ್ಮ ಬಂಧು ಬಾಂಧವ ಮತ್ತು ಮಿತ್ರವರ್ಗದಲ್ಲಿ ಈ ಗ್ರಂಥದ ಹಿರಿಮೆಯನ್ನು ತಿಳಿಸಿ ಅವರೂ ಸಹಾ ಗ್ರಂಥವನ್ನು ಕೊಂಡುಕೊಳ್ಳುವುದರ ಮೂಲಕ ಈ ಕಾರ್ಯಕ್ಕೆ ಸಹಾಯ ವನ್ನು ಮಾಡಬೇಕಾಗಿ ನಿಮ್ಮೆಲ್ಲರನ್ನೂ ಕಳಕಳಿಯಿಂದ ಬೇಡಿಕೊಳ್ಳುತ್ತೇವೆ. ಗ್ರಂಥವು ದೊಡ್ಡದಾಗಿದ್ದು ಕಾರ್ಯವು ದೀರ್ಘಕಾಲವನ್ನು ತೆಗೆದುಕೊಳ್ಳುವುದೂ ಅಲ್ಲದೆ ಅದಕ್ಕಾಗಿ ಅಪಾರ ದ್ರವ್ಯವನ್ನು ಒದಗಿಸತಕ್ಕದ್ದಿದೆ. ಇದಕ್ಕಾಗಿ ತಮ್ಮೆಲ್ಲರ ಸಹಾಯಕ್ಕಾಗಿ ಮತ್ತೆ ಮತ್ತೆ ಪ್ರಾರ್ಥಿಸುತ್ತೇವೆ.

ಈ ಗ್ರಂಥದ ಪ್ರಕಟನಾಕಾರ್ಯವನ್ನು ಹಿಡಿದಮೇಲೆ ಮಾಧ್ವ ಪೀಠಾಧಿ ಪತಿಗಳನ್ನು ದರ್ಶನ ಮಾಡಿಕೊಂಡು ಅವರಿಂದ ಗ್ರಂಥರಚನಾಕಾರ್ಯಕ್ಕೆ ಆಶೀರ್ವಾದ ಮತ್ತು ಅನುಗ್ರಹಪೂರ್ವಕವಾದ ಫಲಮಂತ್ರಾಕ್ಷತೆಯನ್ನು ಪಡೆದಿರು ತ್ತೇವೆ. ಈ ಗ್ರಂಥ ಪ್ರಚಾರಕಾರ್ಯಕ್ಕಾಗಿ ಈ ಕೆಳಗೆ ಕಾಣಿಸಿರುವ ಪೀಠಾಧಿಪತಿ ಗಳು ಉದಾರವಾಗಿ ಧನಸಹಾಯ ಮಾಡಿರುತ್ತಾರಲ್ಲದೆ ಕಾರ್ಯವನ್ನು ನಿಲ್ಲಿಸದೆ ಅಗತ್ಯ ಬಿದ್ದಾಗ ಅವರುಗಳನ್ನು ಕಂಡು ಪುನಃ ಧನಸಹಾಯವನ್ನು ಪಡೆಯುವು ದೆಂದು ಆಶ್ವಾಸನ ಕೊಟ್ಟಿರುತ್ತಾರೆ.

೧. ಶ್ರೀಮದುತ್ತರಾದಿಮಠಾಧೀಶರಾದ
೧೦೦೮ ಶ್ರೀ ಶ್ರೀ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರು.
೨. ಶ್ರೀ ಫಲಿಮಾರು ಭಂಡಾರಕೇರಿ ಉಭಯ ಮಠಾಧೀಶರಾದ
೧೦೦೮ ಶ್ರೀ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರು.

*

೩. ಶ್ರೀ ಪೇಜಾವರ ಮಠಾಧೀಶರಾದ
೧೦೦೮ ಶ್ರೀ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು.

೪. ಶ್ರೀ ಸೋದೆ ಮಠಾಧೀಶರಾದ
೧೦೦೮ ಶ್ರೀ ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರು.

೫. ಶ್ರೀ ಅದಮಾರು ಮಠಾಧೀಶರಾದ
೧೦೦೮ ಶ್ರೀ ಶ್ರೀ ಶ್ರೀ ವಿಬುಧೇಶತೀರ್ಥ ಶ್ರೀಪಾದಂಗಳವರು.

ಇದಕ್ಕಾಗಿ ಸಂಘವು ಇವರೆಲ್ಲರಿಗೂ ತಮ್ಮ ಕೃತಜ್ಞತಾಪೂರ್ವಕವಾದ ಪ್ರಣಾಮಗಳನ್ನು ಅರ್ಪಿಸುತ್ತದೆ.

ಇದಲ್ಲದೆ ಅನೇಕ ಸಜ್ಜನರು ಉದಾರವಾಗಿ ಧನಸಹಾಯಮಾಡಿ ಪೋಷಕರಾಗಿದ್ದಾರೆ. ಅವರೆಲ್ಲರಿಗೂ ಅವರ ಉದಾರ ಸಹಾಯಕ್ಕಾಗಿ ಸಂಘವು ಚಿರಋಣಿ. ಅವರಿಗೆ ಶ್ರೀಹರಿಯು ಆಯುರಾರೋಗ್ಯ ಜ್ಞಾನ ಭಕ್ತಿ ವೈರಾಗ್ಯಭಾಗ್ಯವನ್ನೂ ಸಹಾ ಕೊಟ್ಟು ಕಾಪಾಡಲೆಂದು ಪ್ರಾರ್ಥಿಸುತ್ತೇವೆ. ಇವರ ಹೆಸರುಗಳನ್ನು ಮುಂದಿನ ಪುಟಗಳಲ್ಲಿ ಕಾಣಿಸಿರುತ್ತೆ.

ಇದುವರೆಗೆ ಗ್ರಂಥದ ಪ್ರತಿಗಳಿಗಾಗಿ ಬೆಂಗಳೂರು, ತುಮಕೂರು, ಬಳ್ಳಾರಿ, ರಾಯಚೂರು, ಗಂಗಾವತಿ, ಭದ್ರಾವತಿ, ಹುಬ್ಬಳ್ಳಿ, ಧಾರವಾಡ, ಮದ್ರಾಸ್ ಮತ್ತು ಕೊಯಮತ್ತೂರು ಕಡೆಗಳಿಂದ ಅನೇಕರಿಂದ ಬೇಡಿಕೆಗಳು ಬಂದಿವೆಯಾದರೂ ಬೇಡಿಕೆಗಳು ಕೇವಲ ಸ್ವಲ್ಪವೇ. ಮತ್ತೊಮ್ಮೆ ಹೇಳುವುದಾದರೆ ಗ್ರಂಥವು ಪ್ರಕಟವಾದಂತೆಲ್ಲಾ ಓದುಗರ ಕೈಸೇರಿ ಅವರಿಂದ ಹಣವು ಬಂದರೆ ಮಾತ್ರ ಮುಂದಿನ ಸಂಪುಟಗಳು ಹೊರಬೀಳಲಿಕ್ಕೆ ಸಾಧ್ಯತೆಯನ್ನು ಕಲ್ಪಿಸಿದಂತಾಗುತ್ತದೆ. ಆದುದರಿಂದ ತಾವೆಲ್ಲರೂ ಈ ಮಹತ್ಕಾರ್ಯವು ಪೂರ್ಣವಾಗಲೆಂದು ಪರಮಾತ್ಮನನ್ನು ಪ್ರಾರ್ಥಿಸುವುದಲ್ಲದೆ ಇನ್ನೂ ಅನೇಕ ಓದುಗರನ್ನು ಒದಗಿಸಿ ಸಹಾಯಮಾಡಿ ಪುಣ್ಯಭಾಗಿಗಳಾಗಬೇಕೆಂದು ಸವಿನಯ ಪ್ರಾರ್ಥನೆ ಮಾಡುತ್ತೇವೆ.

ಗ್ರಂಥಕರ್ತರಾದ ಶ್ರೀ ಭೀಮರಾಯರು ಸಂಘದಮೇಲೆ ಅಭಿಮಾನ ಅಂತಃಕರಣಗಳನ್ನಿಟ್ಟು ಈ ದೊಡ್ಡ ಅನುವಾದಕಾರ್ಯವನ್ನು ಮಾಡಲಿಕ್ಕೆ ಒಪ್ಪಿಕೊಂಡು ಮಹದುಪಕಾರ ಮಾಡಿ ಅದರಂತೆಯೇ ನಿರಂತರ ಅದೇ ಕೆಲಸದಲ್ಲಿ ತೊಡಗಿರುವ

ದಕ್ಕಾಗಿ ಅವರಿಗೆ ಸಂಘದ ಕೃತಜ್ಞತೆಯನ್ನು ಸೂಚಿಸುತ್ತೇವೆ. ಶ್ರೀಮದಾಚಾರ್ಯರ ಅಂತರ್ಗತನಾದ ಶ್ರೀ ವೇದವ್ಯಾಸದೇವರು ಅವರಿಗೆ ಅನುಗ್ರಹಮಾಡಿ ಈ ಗ್ರಂಥವನ್ನು ಪೂರ್ತಿಮಾಡುವುದಲ್ಲದೆ ಇನ್ನೂ ಕೆಲವು ಗ್ರಂಥಗಳನ್ನು ಬರೆಯುವಂತೆ ಪ್ರೇರಣೆಮಾಡಿ ತದನುಕೂಲವಾಗುವಂತೆ ಅವರಿಗೆ ಆಯುರಾರೋಗ್ಯವನ್ನು ಕೊಟ್ಟು ಕಾಪಾಡಲೆಂದು ಪ್ರಾರ್ಥಿಸುತ್ತೇವೆ.

ಯಾವಾಗಲೂ ನಮ್ಮ ಸಂಘದವರಾಗಿಯೇ ಇದ್ದು ನಮ್ಮ ಗ್ರಂಥ ಪ್ರಕಟನಾ ಕಾರ್ಯದಲ್ಲಿ ನಮಗೆ ಉತ್ತೇಜನ ಕೊಟ್ಟು ತಮ್ಮ ಕೆಲಸದಂತೆ ಟೊಂಕಕಟ್ಟಿ ನಿಂತು ಕೆಲಸಮಾಡಿ ಸಕಾಲಕ್ಕೆ ಗ್ರಂಥಗಳನ್ನು ಅಂದವಾಗಿ ಮುದ್ರಿಸಿಕೊಟ್ಟು ನಮ್ಮ ಸಂಘಕ್ಕೆ ಉಪಕಾರಮಾಡಿ ತದ್ವಾರಾ ಶ್ರೀ ಹರಿವಾಯುಗಳ ಸೇವೆಯನ್ನು ಮಾಡುತ್ತಿರುವ ಬೆಂಗಳೂರಿನ ಪ್ರಭಾ ಮುದ್ರಣಾಲಯದ ಮಾಲೀಕರಾದ ಶ್ರೀ ಡಿ. ಎಸ್. ಕೃಷ್ಣಾಚಾರ್ಯರಿಗೆ ನಮ್ಮ ವಂದನೆಗಳನ್ನು ಅರ್ಪಿಸಿ ಅವರಿಗೆ ಪರಮಾತ್ಮನು ಆಯುರಾರೋಗ್ಯವನ್ನು ಕೊಟ್ಟು ಕಾಪಾಡಲೆಂದು ಪ್ರಾರ್ಥಿಸುತ್ತೇವೆ.

ಈ 'ಯುಕ್ತಿಮಲ್ಲಿಕಾ' ಗ್ರಂಥದ ಅನುವಾದಕ್ಕೆ ತಮ್ಮ ಅಮೃತಹಸ್ತದಿಂದ ಕನ್ನಡದಲ್ಲಿ ಮುನ್ನುಡಿಯನ್ನು ಬರೆದುಕೊಡಬೇಕೆಂದು ಫಲಿಮಾರು ಮಠಾಧೀಶರಾದ ಶ್ರೀ ಶ್ರೀ ಶ್ರೀ ವಿದ್ಯಾಮಾನ್ಯ ಶ್ರೀಪಾದಂಗಳವರನ್ನು ಮತ್ತು ಸೋದೆ ಮಠಾಧೀಶರಾದ ಶ್ರೀ ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರನ್ನು ಪ್ರಾರ್ಥಿಸಿದ್ದರಮೇಲೆ ಇಬ್ಬರೂ ಪೀಠಾಧಿಪತಿಗಳೂ ಮುನ್ನುಡಿಗಳನ್ನು ಬರೆದುಕೊಟ್ಟು ಮಹದುಪಕಾರ ಮಾಡಿದ್ದಾರೆ. ಸಂಘದ ಮೇಲೆ ಅವರು ಇಟ್ಟಿರುವ ಅಭಿಮಾನಕ್ಕಾಗಿ ಸಂಘವು ತನ್ನ ಕೃತಜ್ಞತಾಪೂರ್ವಕವಾದ ಪ್ರಣಾಮಗಳನ್ನು ಅರ್ಪಿಸುತ್ತದೆ.

ಅಲ್ಲದೆ ಬೆಂಗಳೂರು ಯೂನಿವರ್ಸಿಟಿ ಸಂಸ್ಕೃತ ಪ್ರೊಫೆಸರ್ ಶ್ರೀ ಕೆ. ಟಿ. ಪಾಂಡುರಂಗಿಯವರು ನಮ್ಮ ಈ ಗ್ರಂಥಾನುವಾದಕ್ಕೆ ಇಂಗ್ಲೀಷಿನಲ್ಲಿ ಮುನ್ನುಡಿಯನ್ನು ಬರೆದುಕೊಡಬೇಕೆಂಬ ನಮ್ಮ ಪಾರ್ಥನೆಯನ್ನು ಮನ್ನಿಸಿ ಮುನ್ನುಡಿಯನ್ನು ಬರೆದುಕೊಟ್ಟಿದ್ದಾರೆ. ಇದಕ್ಕಾಗಿ ಸಂಘವು ಅವರಿಗೆ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತದೆ. ಮತ್ತು ಈ ದಿನ ಗ್ರಂಥದ ಬಿಡುಗಡೆಯನ್ನು ಮಾಡಲಿಕ್ಕೆ ತಮ್ಮ ಅನೇಕ ಕಾರ್ಯಕ್ರಮಗಳ ಅನಿವಾರ್ಯವಿದ್ದರೂ

ನಮ್ಮ ಆಹ್ವಾನವನ್ನು ಸ್ವೀಕರಿಸಿ ಬಂದು ಈ ಗ್ರಂಥವನ್ನು ಬಿಡುಗಡೆ ಮಾಡಿ ಕೊಟ್ಟಿದ್ದಕ್ಕಾಗಿ ಅವರಿಗೆ ಸಂಘದಿಂದ ವಂದನೆಗಳನ್ನರ್ಪಿಸುತ್ತೇವೆ.

ಈ ಗ್ರಂಥವು ಮುದ್ರಿತವಾಗಿ ಬಂದಂತೆಲ್ಲಾ ಅದನ್ನು ಪರಿಶೀಲಿಸಿ ಒಪ್ಪೋಲೆಯನ್ನು ಸಿದ್ಧಪಡಿಸಿಕೊಟ್ಟ ಮಾನ್ಯರಾದ ವಕೀಲ್ ಶ್ರೀ ಹೆಚ್. ವೆಂಕೋಬಾಚಾರ್ಯರಿಗೆ ನಮ್ಮ ವಂದನೆಗಳನ್ನು ಸಲ್ಲಿಸುತ್ತೇವೆ.

ಸಂಘದ ಕೆಲಸಗಳಲ್ಲಿಯೂ ತತ್ರಾಪಿ ಈ ಗ್ರಂಥದ ಪ್ರಚಾರ ಕಾರ್ಯದಲ್ಲಿ ನಿರತರಾಗಿ ತಮ್ಮ ದೇಹಾರೋಗ್ಯವನ್ನೂ ಬದಿಗೊತ್ತಿ ಭಗವತ್ಸೇವೆಯೇ ತಮ್ಮ ಗುರಿಯೆಂಬ ದೃಷ್ಟಿಯಿಂದ ಕೆಲಸಮಾಡುತ್ತಿರುವ ಸಂಘದ ಸೆಕ್ರೆಟರಿಗಳೂ ಮತ್ತು ನನ್ನ ಮಾನ್ಯ ಮಿತ್ರರೂ ಆದ ಶ್ರೀ ಕಡ್ಲಬಾಳ್ ಪ್ರಹ್ಲಾದರಾಯರಿಗೆ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನರ್ಪಿಸಿ ಅವರಿಗೆ ಶ್ರೀಮದಾಚಾರ್ಯರ ಅಂತರ್ಗತನಾದ ಶ್ರೀ ಧನ್ವಂತರಿಯು ಆಯುರಾರೋಗ್ಯವನ್ನು ಕೊಡಲೆಂದು ಪ್ರಾರ್ಥಿಸುತ್ತೇನೆ. ಅಲ್ಲದೆ ಸಂಘದ ಎಲ್ಲಾ ಕೆಲಸಗಳಲ್ಲೂ ನನ್ನೊಂದಿಗೆ ನಿಂತು ಕೆಲಸಮಾಡಿ ಕಾಲೋಚಿತವಾಗಿ ಸಂಘದ ಸುವ್ಯವಸ್ಥೆಗೆ ಸೂಕ್ತ ಸಲಹೆಗಳನ್ನು ಕೊಟ್ಟು ಸಂಘದ ಅಭಿವೃದ್ಧಿಗಾಗಿಯೇ ದುಡಿಯುತ್ತಿರುವ ಕಾರ್ಯಕಾರಿ ಸಮಿತಿಯ ಎಲ್ಲ ಸದಸ್ಯರಿಗೂ ನನ್ನ ಕೃತಜ್ಞತೆಯನ್ನು ಸೂಚಿಸಬಯಸುತ್ತೇನೆ.

ಸಕಲ ಸಜ್ಜನರಿಗೂ ಶ್ರೀಹರಿಯು ಮಂಗಳವನ್ನು ಮಾಡಲಿ.

ದಾವಣಗೆರೆ, ತಾ|| ೨೧–೧೦–೧೯೭೭
ಪಿಂಗಳನಾಮ ಸಂ|| ಆಶ್ವಯುಜ ಶುದ್ಧ ದಶಮಿ

**ಎನ್. ಆರ್. ಸುಬ್ಬರಾವ್**
ಅಧ್ಯಕ್ಷರು

## ಈ ಗ್ರಂಥಪ್ರಚಾರ ಕಾರ್ಯಕ್ಕಾಗಿ ಉದಾರವಾಗಿ ಧನಸಹಾಯಮಾಡಿರುವ ಪೋಷಕವರ್ಗ

1. ಶ್ರೀ ಉತ್ತರಾದಿ ಮಠಾಧೀಶರಾದ **೧೦೦೮ ಶ್ರೀಶ್ರೀಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರು** ರೂ. 1000
2. ಶ್ರೀ ಫಲಿಮಾರು ಭಂಡಾರಕೇರಿ ಉಭಯಮಠಾಧೀಶರಾದ **೧೦೦೮ ಶ್ರೀಶ್ರೀಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರು** ರೂ. 1000
3. ಶ್ರೀ ಪೇಜಾವರ ಮಠಾಧೀಶರಾದ **೧೦೦೮ ಶ್ರೀಶ್ರೀಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು** ರೂ. 1000
4. ಶ್ರೀ ಸೋದೆ ಮಠಾಧೀಶರಾದ **೧೦೦೮ ಶ್ರೀಶ್ರೀಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರು** ರೂ. 1000
5. ಶ್ರೀ ಅದಮಾರು ಮಠಾಧೀಶರಾದ **೧೦೦೮ ಶ್ರೀಶ್ರೀಶ್ರೀ ವಿಬುಧೇಶತೀರ್ಥ ಶ್ರೀಪಾದಂಗಳವರು** ರೂ. 1500

* * * *

1. **ಡಾ|| ಕೆ. ವೆಂಕಟರಾವ್,** 1/29, ಜಿ. ಕೋಯಿಲ್ ಸ್ಟ್ರೀಟ್, ಮದ್ರಾಸ್–89 ರೂ. 1000
2. ಶ್ರೀ **ಸಿ. ಆರ್. ನಾರಾಯಣರಾವ್,** ಲಸ್ ಪೋಸ್ಟ್‌ಬಾಕ್ಸ್ ನಂ. 624, ಮದ್ರಾಸ್–೪ ರೂ. 1001
3. ಶ್ರೀ **ಎಂ. ಭೀಮಸೇನರಾವ್,** ಛಾರ್ಟರ್ಡ್ ಅಕೌಂಟೆಂಟ್, ದಾವಣಗೆರೆ. ರೂ. 500
4. ಶ್ರೀ **ಬುರ್ಲಿ ಅನಂತರಾವ್,** ಬಿ.ಇ., ರೆಸಿಡೆಂಟ್ ಇಂಜನಿಯರ್, ಕಾಂಟಿನೆಂಟಲ್ ಕನ್‌ಸ್ಟ್ರಕ್ಷನ್ ಕಂಪೆನಿ, ಜೋಗೀಂದ್ರನಗರ, ಹಿಮಾಚಲಪ್ರದೇಶ್. ರೂ. 500
5. ಶ್ರೀ **ಬಿ. ವಾಸುದೇವಮೂರ್ತಿ,** ಅಸಿಸ್ಟೆಂಟ್ ಇಂಜನಿಯರ್, K. P. W. D., ನರಗುಂದ. ರೂ. 500

6. **ಮೇಜರ್ ಡಾ|| ಎನ್. ಎಸ್. ರಾಜಗೋಪಾಲ್,**
ಮೆಡಿಕಲ್ ಆಫೀಸರ್, ಹಿಸ್ಸಾರ್, ಹರಿಯಾಣ. ರೂ. 500

7. ಶ್ರೀ **ಎನ್. ಬಿ. ಹುದ್ದಾರ್,** 'ಚಂದ್ರಸದನ',
ಸ್ಟೇಷನ್ ರೋಡ್, ಧಾರವಾಡ-1 ರೂ. 500

8. **ಡಾ|| ವಿ. ಎಸ್. ರಾವ್,** M.D., F.R.C.S. (C)
Salisbury, Maryland-21801. ರೂ. 500

## 1977-78ನೇ ಸಾಲಿನ ಕಾರ್ಯಕಾರಿ ಸಮಿತಿ

ಶ್ರೀಯುತರುಗಳಾದ —

| | | |
|---|---|---|
| 1. | N. R. ಸುಬ್ಬರಾವ್, B.SC., LL.B. | ಅಧ್ಯಕ್ಷರು |
| 2. | ಕಡ್ಲಬಾಳ್ ಪ್ರಹ್ಲಾದರಾವ್ | ಕಾರ್ಯದರ್ಶಿಗಳು |
| 3. | B. ಮಾಧವರಾವ್, B.A., LL.B. | ,, |
| 4. | ಆಡೂರು ಶ್ರೀನಿವಾಸಾಚಾರ್ | ಸದಸ್ಯರು |
| 5. | K. ಮುಕುಂದಾಚಾರ್ಯರು | ,, |
| 6. | C. V. ಗುರುರಾಜಾಚಾರ್, M.A., B.Ed. | ,, |
| 7. | N. S. ಸತ್ಯನಾರಾಯಣ, B. com. | ,, |

# ಅನುವಾದಕರ ಪ್ರಸ್ತಾವನೆ

ಶ್ರೀ ಸಂಘವು, ಶ್ರೀ ವಾದಿರಾಜಯತಿವರೇಣ್ಯರ ಶ್ರೀ ಯುಕ್ತಿಮಲ್ಲಿಕಾ ಗ್ರಂಥವನ್ನು ಕನ್ನಡಾನುವಾದದೊಂದಿಗೆ, ಪ್ರಕಟಿಸುವ ಮಹಾಕಾರ್ಯವನ್ನು ಈಗ ಕೈಗೊಂಡಿದೆ. ಈ ಮಹೋದ್ದೇಶವನ್ನು ಶ್ರೀ ಹರಿವಾಯುಗಳು ಪೂರ್ಣಗೊಳಿಸಬೇಕು. ಈ ಶ್ರೇಷ್ಠತಮಗ್ರಂಥವನ್ನು ಸಂಸ್ಕೃತ ತಿಳಿಯದವರಿಗೂ ಉಪಯೋಗವಾಗುವಂತೆ, ಪ್ರಚಾರಗೊಳಿಸುವುದು, ಕಳೆದ ೪೫ ವರ್ಷಗಳಿಂದ ಜ್ಞಾನಪ್ರಚಾರದಲ್ಲಿ ತೊಡಗಿರುವ, ಈ ಸಂಘದ ಕಾರ್ಯಗಳಲ್ಲಿ ಅತ್ಯುಪಯುಕ್ತವೂ, ಅತ್ಯುತ್ತಮವೂ ಆಗಿರುತ್ತದೆ—ಸಜ್ಜನಲೋಕಕ್ಕೆ ಮಹದುಪಕಾರವಾಗುತ್ತದೆ; ಅಲ್ಲದೇ, ಉತ್ಕೃಷ್ಟ ಶ್ರೀ ಹರಿಸೇವೆಯೂ ಆಗಿರುತ್ತದೆ.

ಆಧುನಿಕ ತರುಣ ಸಜ್ಜನರಿಗೆ ಯುಕ್ತಿಯು ಬಹುವಾಗಿ ಒಪ್ಪಿತವಾಗಿದೆ. ಯುಕ್ತಿಯೆಂದರೆ, ತರ್ಕ, ಅನುಮಾನ ಅಥವಾ ನ್ಯಾಯ (Logic-reasoning): ಸಕಲ ಆಗಮಗಳೂ ಯುಕ್ತಿಮೂಲವುಳ್ಳವುಗಳೇ ಆಗಿವೆ; ತರ್ಕವು, ಪ್ರತ್ಯಕ್ಷ ಅಥವಾ/ಮತ್ತು ಆಗಮಗಳ ಬಲದಿಂದಲೇ ಪ್ರಮಾಣವಾಗಬಲ್ಲದು; ಆದ್ದರಿಂದ 'ಅನುಮಾನ'ವೆಂಬ ಅದರ ನಾಮವೂ ಅನ್ವರ್ಥವಾಗಿದೆ. ಶ್ರೀ ವಿಷ್ಣು ಸರ್ವೋತ್ತಮತ್ವ ಮತ್ತು ವಾಯುಜೀವೋತ್ತಮತ್ವ ಜ್ಞಾನನಿಶ್ಚಯವು, ಮಾತ್ರ ಮೋಕ್ಷಸಾಧಕವು—ಅನ್ಯಮಾರ್ಗವಿಲ್ಲೆಂಬುದು, ಸಕಲ ಶಾಸ್ತ್ರಗಳ ಸಾರವಾಗಿದೆ. ಇದನ್ನು ಸುಸ್ಪಷ್ಟವಾಗಿ ಬೋಧಿಸುವ ಗ್ರಂಥಗಳೇ ಸದಾಗಮಗಳು; ಸದಾಗಮಗಳ ಸಿದ್ಧಾಂತವನ್ನು ಶ್ರೀಮಧ್ವಮತವು ಮಾತ್ರ ಸ್ಥಾಪಿಸಿ, ಉಪದೇಶಿಸುತ್ತದೆ. ಶ್ರೀಮಧ್ವಮತದ ತತ್ವಗಳೆಲ್ಲವೂ ವೇದಾರ್ಥನಿರ್ಣಾಯಕ ಬ್ರಹ್ಮಸೂತ್ರಪ್ರತಿಪಾದ್ಯಗಳೇ ಆಗಿವೆ; ಯುಕ್ತಿಯುಕ್ತವಾದ ಈ ಸಿದ್ಧಾಂತ ತತ್ವಗಳನ್ನು ಅತ್ಯಂತ ಯುಕ್ತಿಯುಕ್ತವೆಂದು, ಯುಕ್ತಿಯಿಂದಲೇ ಸಾಧಿಸಿಕೊಡುವ ಅತ್ಯುತ್ತಮ ಗ್ರಂಥವೇ ಶ್ರೀ ಯುಕ್ತಿಮಲ್ಲಿಕೆಯು. ಭಾವಿಸಮೀರರೆಂಬ ಪ್ರಸಿದ್ಧಿಗೆ ಪಾತ್ರರಾದ ಶ್ರೀ ವಾದಿರಾಜಯತಿವರೇಣ್ಯರು, ಈ ಗ್ರಂಥವನ್ನು ರಚಿಸಿ, ಸಜ್ಜನಲೋಕಕ್ಕೆ ಮಹೋಪಕಾರವನ್ನು ಮಾಡಿರುತ್ತಾರೆ: ಇದು ಮಹಾಪ್ರೌಢ ಗ್ರಂಥ; ಸಂಸ್ಕೃತ ಲಿಪಿಯಲ್ಲಿರುವ ಗ್ರಂಥವೂ ಈಗ ಉಪಲಬ್ಧವಿಲ್ಲ; ಶ್ರೀ ವಾದಿರಾಜಗುರುವರ್ಯರ ಪೂರ್ವಾಶ್ರಮದ ಸಹೋದರರಾದ ಶ್ರೀ ಸುರೋತ್ತಮತೀರ್ಥ ಶ್ರೀಪಾದರವರು,

ಸಂಸ್ಕೃತ ಭಾಷೆಯಲ್ಲಿ ಈ ಗ್ರಂಥಕ್ಕೆ ಟೀಕೆಯನ್ನು ರಚಿಸಿದ್ದಾರೆ. ಮೂಲಗ್ರಂಥದಲ್ಲಿ ಐದು ಸಾವಿರಕ್ಕೆ (೫,೦೦೦) ಮೇಲ್ಪಟ್ಟು ಶ್ಲೋಕಗಳಿವೆ. ಮನೋಹರವಾದ ಕಾವ್ಯವೂ ಆಗಿದೆ; ಟೀಕೆಯು ೭೨೦ ವಾಲಿಗಳಷ್ಟು ದೀರ್ಘವಾಗಿದ್ದರೂ, ಸಾಕಷ್ಟು ವಿಸ್ತಾರವಾಗಿಲ್ಲದಿರುವುದು, ಪಂಡಿತರಲ್ಲದವರಿಗೆ ಕೊರತೆಯೇ ಆಗಿದೆ. ಇಂಥ ಉದ್ಗ್ರಂಥದ ಪ್ರಚಾರಮಾಡಿ, ಶ್ರೀ ಯುಕ್ತಿಮಲ್ಲಿಕೆಯ ಪರಿಮಳ ಗಂಧ ವನ್ನು ಸಂಸ್ಕೃತ ಅನಭಿಜ್ಞರಿಗೂ ಮುಟ್ಟಿಸಿ, ಮೂಲಗ್ರಂಥವಾದರೂ ಮುಂದಿನ ಪೀಳಿಗೆಯವರಿಗೆ ದೊರೆಯುವಂತೆ ಮಾಡಬೇಕೆಂಬ ಸದುದ್ದೇಶ್ಯವು ಸಂಘಕ್ಕಿದೆ. ಈ ಕಾರ್ಯವು ಸಾಧಿಸಿದರೆ, ದೊಡ್ಡ ಸೇವೆಯಾಗುವುದರಲ್ಲಿ ಸಂಶಯವಿಲ್ಲ.

ಈ ಗ್ರಂಥಪ್ರಚಾರದ ವಿಷಯವನ್ನು ನನ್ನಲ್ಲಿ, ಸಂಘದ ಅಧ್ಯಕ್ಷರಾದ ನನ್ನ ಮಾನ್ಯಮಿತ್ರ ಶ್ರೀ ಎನ್. ಆರ್. ಸುಬ್ಬರಾಯರು ಪ್ರಸ್ತಾಪಮಾಡಿದಾಗ, ಕನ್ನಡಾನುವಾದ ಕಾರ್ಯವನ್ನು ನಾನು ಮಾಡಬೇಕೆಂದು ಸೂಚಿಸಿದರು. ಈ ಕಾರ್ಯಕ್ಕೆ ಅವಶ್ಯಕವಾದ ಪಾಂಡಿತ್ಯವಾಗಲಿ, ದೇಹಶಕ್ತಿಯಾಗಲಿ, ನನಗಿರುವು ದಿಲ್ಲ; ಆದ್ದರಿಂದ ಈ ಮಹಾಪುಣ್ಯಕ್ಕೆ ನಾನು ಭಾಗಿಯಾಗಲು ಅನರ್ಹನಾಗಿ ದ್ದೇನೆ—ಬೇರೆ ವ್ಯವಸ್ಥೆಮಾಡಿಕೊಂಡು, ಕಾರ್ಯ ಸಾಧಿಸಿರಿ, ಎಂದೆ. ಪ್ರತಿ ಶ್ಲೋಕಕ್ಕೂ ಪದಶಃ ಅರ್ಥ, ತಾತ್ಪರ್ಯ ಮತ್ತು ವಿಶೇಷಗಳನ್ನು ಕನ್ನಡದಲ್ಲಿ ಬರೆದು ಪ್ರಕಟಿಸಬೇಕೆಂದು ಪರಸ್ಪರ ವಿಚಾರವಿನಿಮಯದಿಂದ ನಿರ್ಧರಿಸಿದೆವು. ೧—೨ ತಿಂಗಳ ನಂತರ ಅವರು ಪುನಃ ನನ್ನಲ್ಲಿ ಬಂದು, ಈ ಕೆಲಸವನ್ನು ನೀವೇ ವಹಿಸಿಕೊಳ್ಳಬೇಕು, ಶ್ರೀ ಶ್ರೀಮದುತ್ತರಾದಿ ಮಠಾಧೀಶರಾದ ಶ್ರೀ ಶ್ರೀಸತ್ಯ ಪ್ರಮೋದತೀರ್ಥರಲ್ಲಿ ವಿಜ್ಞಾಪನೆ ಮಾಡಿಕೊಂಡಿದ್ದರಲ್ಲಿ, ನಿಮ್ಮಿಂದ ಮಾಡಿಸಿರೆಂದು ಅನುಮತಿ ಇತ್ತು ಆಶೀರ್ವದಿಸಿ ಮಂತ್ರಾಕ್ಷತೆಯನ್ನಿತ್ತಿದ್ದಾರೆಂದು ತಿಳಿಸಿದರು; ಈ ವಾರ್ತೆಯನ್ನು ಕೇಳಿ, ನನಗೆ ಭಯವೂ, ಆಶ್ಚರ್ಯವೂ ಆದುದಲ್ಲದೇ, ಈ ಮಹಾಸೇವೆಯ ಪುಣ್ಯಭಾಗಿಯಾಗಬಹುದೆಂಬ ಕಲ್ಪನೆಯಿಂದ ಮಹಾನಂದ ದಿಂದ ರೋಮಾಂಚಿತನಾದೆನು; ಈ ಮಧ್ಯೆ ಶ್ರೀ ಸೋದೆಮಠಾಧೀಶರಾದ ಶ್ರೀಶ್ರೀ ವಿಶ್ವೋತ್ತಮತೀರ್ಥರ ಆಶೀರ್ವಾದಪತ್ರವೂ ಬಂದಿತೆಂದೂ ತಿಳಿದುಬಂದು, ಶ್ರೀ ವಾದಿರಾಜರ ಇಚ್ಛೆಗೆ ಈ ಅಲ್ಪನನ್ನು ಈ ಮಹಾಕೆಲಸದಲ್ಲಿ ಯೋಜನೆಮಾಡಿ, ತಾವೇ ನನ್ನಲ್ಲಿ ನಿಂತು ಈ ಕಾರ್ಯವನ್ನು ನೆರವೇರಿಸುವುದು, ಬಂದಿರುತ್ತದೆಂಬ ಭಾವನೆಯಿಂದ ಆನಂದತುಂದಿಲನಾದೆನು. ಶುಭದಿನದ ಶುಭಮುಹೂರ್ತದಲ್ಲಿ

ಬರೆಯಲು ಆರಂಭಿಸಿದೆನು. ನಿತ್ಯವೂ ಕನಿಷ್ಠ ಪಕ್ಷ ೩ ಗಂಟೆಗಳ ಕಾಲ ಈ ಮಹಾ ತಪಸ್ಸಿಗೆ ವಿನಿಯೋಗಿಸುವ ಕಾಲದ ಅವಧಿಯೆಂದು ನಿಶ್ಚಯಿಸಿದೆನು. ಬರೆಯುವಾಗಲೆಲ್ಲ (ಆರಂಭಿಸುವಾಗ ಮಾತ್ರವಲ್ಲ), ಶ್ರೀ ವಾದಿರಾಜಪ್ರಭುಗಳ ಸ್ಮರಣೆಯಿಂದಲೇ ಲೇಖಣಿಯನ್ನು ಹಿಡಿದು ಬರೆದಿದ್ದೇನೆ; ಅವರೇ ಅನುವಾದಕರು; ನಾನು ಕೇವಲ ಲಿಪಿಗಾರ (ಲೇಖಕ) ಎಂಬ ಭಾವವು ಎಂದೂ ತಪ್ಪಿಲ್ಲ; ಅವರೇ, ಈ ಅನುಭವವನ್ನು ಚೆನ್ನಾಗಿ ತಿಳಿಯುವಂತೆ ಮಾಡಿಕೊಟ್ಟು ಅನುಗ್ರಹಿಸಿದ್ದಾರೆ; ನನ್ನ ಯೋಗ್ಯತೆಯ ಅರಿವನ್ನು ಉಂಟುಮಾಡಿಕೊಟ್ಟಿದ್ದಾರೆ. ಆದ್ದರಿಂದ ಆ ಮಹಾನುಭಾವರೇ ಅನುವಾದಕರು; ಈ ಉದ್ಯಮದಲ್ಲಿ ಕಂಡುಬರುವ ದೋಷಗಳು ಅಧಿಷ್ಠಾನನಾದ ನನ್ನವೇ, ಎಂಬಲ್ಲಿ ಸಂಶಯವಿಲ್ಲ–ಗುಣಭಾಗಕ್ಕೆಲ್ಲ ಪೂರ್ಣವಾಗಿ ಅವರೇ ಪಾತ್ರರಾಗಿದ್ದಾರೆ; ಇದು ಉಪಚಾರದ ನುಡಿಯು ಸರ್ವಥಾ ಅಲ್ಲ–ಹೃತ್ಪೂರ್ವಕವಾದ ಪ್ರಾಮಾಣಿಕಸತ್ಯವೇ ಆಗಿದೆ.

ಅನುವಾದದಲ್ಲಿ ಅನುಸರಿಸಿರುವ ಕ್ರಮವನ್ನು ನಿರೂಪಿಸುವುದು ಓದುಗರಿಗೆ ಗ್ರಂಥಾನುಸರಣೆಗೆ ಉಪಯುಕ್ತವಾಗಬಹುದೆಂದು ನಂಬಿದ್ದೇನೆ–ಶ್ರೀ ಸುರೋತ್ತಮತೀರ್ಥರ ಭಾವವಿಲಾಸಿನೀ ಟೀಕೆಯನ್ನು ಅನುಸರಿಸಿದ್ದೇನೆ; ಪ್ರತಿಶ್ಲೋಕವನ್ನು ಕನ್ನಡ ಲಿಪಿಯಲ್ಲಿ ಬರೆದು, ಅದರ ಟೀಕಾ ಅವತಾರಿಕೆಯ ಅರ್ಥವನ್ನು ಕನ್ನಡದಲ್ಲಿ ಬರೆದು ನಂತರ ಪದಶಃ ಅರ್ಥವನ್ನು ಬರೆದಿದ್ದೇನೆ; ನನಗೆ ತಿಳಿದಂತೆ ಬೇರೆ ಟೀಕೆಗಳಾವುವೂ ಇದ್ದಂತಿಲ್ಲ; ಕೆಳಭಾಗದಲ್ಲಿ ಪ್ರತಿಶ್ಲೋಕದ ತಾತ್ಪರ್ಯವನ್ನು ಸಂಗ್ರಹವಾಗಿ ಬರೆದು ಶ್ಲೋಕಸಂಖ್ಯೆಗಳನ್ನು ಗುರ್ತಿಸಿದ್ದೇನೆ; ಪದಶಃ ಅರ್ಥ ಬರೆದು ಟೀಕೋಕ್ತ ಕೆಲವು ವಿಶೇಷಗಳನ್ನು ಕಂಸದಲ್ಲಿ ಬರೆದಿದ್ದೇನೆ; ಈ ವಿಶೇಷಗಳು ಶಬ್ದಾರ್ಥಗಳನ್ನು ಸ್ಪಷ್ಟವಾಗಿ ಗ್ರಹಿಸಲು ಸಹಾಯಕವಾಗುತ್ತವೆ; ಮತ್ತೆ ಕೆಲವು ವಿಶೇಷ ಪ್ರಮೇಯಗಳನ್ನು ಅಡಿಟಿಪ್ಪಣಿಗಳಲ್ಲಿ ವಿವರಿಸಿದ್ದೇನೆ; ಟೀಕಾಸಮೇತವಾದ ಮೂಲಗ್ರಂಥವನ್ನು ಅಭ್ಯಾಸಮಾಡುವವರಿಗೆ ಇವು ಬಹುಮಟ್ಟಿಗೆ ಅನುಕೂಲವಾಗುತ್ತವೆಂದು ತಿಳಿದಿದ್ದೇನೆ; ಮತ್ತೆ ಕೆಲವೆಡೆಗಳಲ್ಲಿ ಬೇರೆ ಪ್ರಮಾಣಗಳನ್ನು ಉದಹರಿಸಿ, ವಿಸ್ತರಿಸಿರುವುದೂ ಉಂಟು; ಮೂಲಗ್ರಂಥವೇ ವಿಸ್ತಾರವಾದುದು; ಆದ್ದರಿಂದ ವಿಸ್ತಾರವಾದ ವಿವೇಚನೆಗಳಿಗೆ ಪ್ರವೇಶಿಸಿರುವುದಿಲ್ಲ; ಅವಶ್ಯ ಬರೆಯಬೇಕಾದ ವಿಷಯಗಳು ಬಹಳವಾಗಿವೆ; ಅನ್ಯಮತ ಪ್ರಕ್ರಿಯೆಗಳನ್ನು, ವಿವರಿಸುವುದು ಅವಶ್ಯಕವೆನಿಸಿದರೂ, ಗ್ರಂಥವಿಸ್ತಾರ ಭಯದಿಂದ ಅದಕ್ಕೆ ಕೈಹಾಕಲಿಲ್ಲ; ಸಂಕ್ಷೇಪ ಟಿಪ್ಪಣಿಗಳನ್ನು ಕೊಟ್ಟಿದ್ದೇನೆ; ಪಾರಿಭಾಷಿಕ ಶಬ್ದಗಳ ಅರ್ಥವನ್ನು ಪ್ರತ್ಯೇಕವಾಗಿ

ವಿವರಿಸದೇ, ಅಲ್ಲಲ್ಲಿಯೇ (ಕಂಸದಲ್ಲಿ) ಸಂಕ್ಷೇಪವಾಗಿ ನಿರೂಪಿಸಿದ್ದೇನೆ; ಏವಂಚ, ಅನುವಾದದ ಉಪಯುಕ್ತತೆಗೆ ಅವಶ್ಯಕವೆನಿಸಿದ ಎಲ್ಲ ಎಚ್ಚರಿಕೆಗಳನ್ನು ವಹಿಸಿ, ತರ್ಕಶಾಸ್ತ್ರವನ್ನು ಅಭ್ಯಾಸಮಾಡದ ಸಾಮಾನ್ಯರೂ ಅನುಸರಿಸಿಲು ಅನುಕೂಲ ವಾಗುವಂತೆ ಎಲ್ಲ ಯತ್ನವನ್ನು ಮಾಡಿದ್ದೇನೆ. ಮನಸ್ಸಿನಲ್ಲಿ ನಿಂತು ಭಾವಗಳನ್ನು ಪ್ರಚೋದಿಸಿ, ಮುಖ್ಯ ಸಹಾಯಕರು, ಶ್ರೀ ವಾದಿರಾಜರೇ ಆದರೂ, ಬಾಹ್ಯದಲ್ಲಿ ಬಹು ಜನರಿಂದ ಈ ಕಾರ್ಯದಲ್ಲಿ ಉಪಕೃತನಾಗಿದ್ದೇನೆ ಅದನ್ನು ಇಲ್ಲಿಹೇಳಿ, ಅವರೆಲ್ಲರಿಗೆ ನನ್ನ ಕೃತಜ್ಞತೆಯನ್ನು ಸೂಚಿಸದಿದ್ದರೆ ನನ್ನ ಮುಖ್ಯಕರ್ತವ್ಯವೊಂದು ಲೋಪವಾದಂತಾಗುತ್ತದೆ. ಶ್ರೀ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಗಳವರು, ನನಗೆ ಅರ್ಥವಾಗದ ವಿಷಯಕ್ಕೆ ಕಾಗದಬರೆದ ಕೂಡಲೆ ತಮ್ಮ ಕಾರ್ಯಗೌರವಗಳ ಮಧ್ಯದಲ್ಲಿ, ಉತ್ತರಗಳನ್ನು ಬರೆದು ಸಹಾಯಮಾಡುತ್ತಿದ್ದಾರೆ; ಹೀಗೆಯೇ ಶ್ರೀಸೋದಾಮಠದ ಶ್ರೀ ಶ್ರೀ ವಿಶ್ವೋತ್ತಮತೀರ್ಥರೂ ಸಹಾಯವನ್ನು ಕೊಡುತ್ತಿದ್ದಾರೆ. ಈ ಉಭಯ ಶ್ರೀಗಳವರಿಗೂ ಅನಂತ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇನೆ. ಶ್ರೀ ಕೆ. ಟಿ. ಪಾಂಡುರಂಗಿ, ಎಂ.ಎ., ಸಂಸ್ಕೃತ ಪ್ರೊಫೆಸರ್, ಬೆಂಗಳೂರು ವಿಶ್ವವಿದ್ಯಾಲಯ, ಇವರು ನಾನು ಬರವಣಿಗೆಯನ್ನು ಆರಂಭಿಸುವ ಕಾಲದಲ್ಲಿ ನಮ್ಮ ಸಂಘದಲ್ಲಿ ಶ್ರೀ ಯುಕ್ತಿಮಲ್ಲಿಕಾ ವಿಷಯವಾಗಿ ಕೊಟ್ಟ ಉಪನ್ಯಾಸಗಳು, ಬಹುಮಟ್ಟಿಗೆ ನನಗೆ ಉಪಯೋಗವಾದವು. ಆಮೂಲಾಗ್ರ ವಾಗಿ ಈ ಗ್ರಂಥವನ್ನು ನಾನು ಗುರುಗಳನ್ನು ಇಟ್ಟುಕೊಂಡು ಅಭ್ಯಾಸಮಾಡಲಿಲ್ಲ. ಈ ಮೂಲಗ್ರಂಥವನ್ನು ನನಗೆ ಭಾಷ್ಯಶಾಂತಿ ಹಾಕಿಸಿ, ಆರಂಭದಲ್ಲಿ ಶ್ರೀಮಧ್ವ ಶಾಸ್ತ್ರದ ಅಭ್ಯಾಸದಲ್ಲಿ ತೊಡಗಲು ಅಪ್ಪಣೆಯಿತ್ತು ಅನುಗ್ರಹಿಸಿದ ಕೀರ್ತಿಶೇಷರಾದ ಶ್ರೀಪುತ್ತಿಕಾ ಮಠಾಧೀಶರಾದ ಶತಾಯುಷಿ ಶ್ರೀ ಶ್ರೀ ಸುಧೀಂದ್ರತೀರ್ಥಶ್ರೀಗಳವರು, ಶಾಂತಿಪಾಠ ಹೇಳಿದಾಗ, (ಈಗ ಸುಮಾರು ೪೭ ವರ್ಷಗಳ ಹಿಂದೆ), ತಮ್ಮ ಮಠದಲ್ಲಿ ಪೂಜೆಯಲ್ಲಿದ್ದ ಶ್ರೀ ಯುಕ್ತಿಮಲ್ಲಿಕಾ (ಟೀಕಾಸಹಿತ) ಗ್ರಂಥವನ್ನು ನನಗೆ ಕೊಟ್ಟು, ಗೊತ್ತಾಗದ ಭಾಗಗಳನ್ನು ಆಗಾಗ ನಿಮ್ಮಲ್ಲಿಗೆ ಬರುವ ಪಂಡಿತ ರಿಂದ ಕೇಳಿ ತಿಳಿದುಕೊಳ್ಳಿರಿ—ನಿಮಗೆ ನಮ್ಮ ಶ್ರೀ ವಿಠಲದೇವರು ಜ್ಞಾನದಾನ ಮಾಡುತ್ತಾರೆಂದು ಹೇಳಿ, ಅನುಗ್ರಹಿಸಿ ಆಶೀರ್ವದಿಸಿದರು. ಅದರಂತೆ ಬಹು ಪಂಡಿತರಿಂದ ಕೆಲಕೆಲವು ವಿಶೇಷ ಭಾಗಗಳನ್ನು ಹೇಳಿಸಿಕೊಂಡೆನು. ಆ ಎಲ್ಲರಿಗೂ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಇವರುಗಳಲ್ಲಿ ದಿವಂಗತ ಪಂಡಿತ ಕೊರ್ಲಹಳ್ಳಿ ಕೃಷ್ಣಾಚಾರ್ಯರು ಮತ್ತು ಪಂಡಿತ ಉಮರ್ಜಿ ರಾಮಾಚಾರ್ಯರುಗಳ ಹೆಸರುಗಳನ್ನು ಉಲ್ಲೇಖಿಸುವುದು ಅತ್ಯಂತ ಉಚಿತವಾಗಿದೆ. ಕೇವಲ ೪-೬

ಶ್ಲೋಕಗಳಂತೆ, ಒಂದೊಂದು ಪ್ರಮೇಯಕ್ಕೆ ಮಾತ್ರ ಸಂಬಂಧಿಸಿದ ಭಾಗಗಳನ್ನು ಹಲವಾರು ಪಂಡಿತರಿಂದ ಕೇಳಿ ತಿಳಿದುಕೊಂಡು ಉಪಕೃತನಾಗಿದ್ದೇನೆ. ಈ ಎಲ್ಲರನ್ನೂ ಈ ಸಂದರ್ಭದಲ್ಲಿ ವಂದಿಸುತ್ತೇನೆ.

ಉಡುಪಿಯಿಂದ ಈ ಮೊದಲು ಹೊರಡುತ್ತಿದ್ದ ಮಾಸಪತ್ರಿಕೆಯಾದ 'ಧರ್ಮಬೋಧ'ದಲ್ಲಿ ಪ್ರಕಟವಾಗುತ್ತಿದ್ದ ಪಂಡಿತ ವೆಂಕಟರಮಣಾಚಾರ್ಯರ ಶ್ರೀ ಯುಕ್ತಿಮಲ್ಲಿಕೆಯ ಭಾವಾರ್ಥಗಳನ್ನು (ದೊರೆತಷ್ಟೆ) ಉಪಯೋಗಿಸಿಕೊಂಡಿದ್ದೇನೆ. ಅದರಿಂದ ನನ್ನ ಕಾರ್ಯದಲ್ಲಿ ಸಾಕಷ್ಟು ಸಹಾಯ ದೊರೆತಿದೆ, ಎಂಬುದನ್ನು ಕೃತಜ್ಞತೆಯಿಂದ ಸ್ಮರಿಸಿ ಅವರನ್ನು ವಂದಿಸುತ್ತೇನೆ.

ಶ್ರೀಮಧ್ವಶಾಸ್ತ್ರಾಭ್ಯಾಸದಲ್ಲಿ ಆಸಕ್ತಿಯುಳ್ಳ ಸಜ್ಜನರಿಗೆ ಶ್ರೀ ಯುಕ್ತಿಮಲ್ಲಿಕೆಯು ಬಹುಮುಖ್ಯವಾದ ಉಪಯುಕ್ತಗ್ರಂಥವಾಗಿದೆ. ವೇದಾಪೌರುಷೇಯತ್ವ, ಸಾಕ್ಷಿಪ್ರಾಮಾಣ್ಯ ಮುಂತಾದ ಪ್ರಧಾನಪ್ರಮೇಯಗಳ ನಿಶ್ಚಯಜ್ಞಾನವನ್ನು ದೊರಕಿಸಿಕೊಳ್ಳಲು, ಇದರಿಂದ ತುಂಬಸಹಾಯವಾಗುತ್ತದೆ. ಪ್ರಗತಿಯನ್ನು ಅತಿ ಶೀಘ್ರವಾಗಿ ಹೊಂದುತ್ತಿರುವ ಆಧುನಿಕ ವಿಜ್ಞಾನದಿಂದ, ನಿತ್ಯವೂ ನೂತನ ಪರಿಶೋಧನೆಗಳಿಂದ ಸಿದ್ಧವಾಗುತ್ತಿರುವ ಅದ್ಭುತ ಪ್ರಮೇಯಗಳಿಂದ, ವಿಚಾರವಂತರಿಗೆ ಉಂಟಾಗುವ ಬಹುಪರಿಯ ಸಂಶಯಗಳ ಪರಿಹಾರವು ಇಲ್ಲಿ ದೊರೆಯುತ್ತದೆ. ತ್ರಿಕಾಲಜ್ಞಾನಿಗಳಾದ ಶ್ರೀಮದ್ವಾದಿರಾಜ ಯತಿವರೇಣ್ಯರು, ಆಧುನಿಕ ವಿಜ್ಞಾನ (modern science) ದ ಪ್ರಭಾವದಿಂದ ಬೆಳೆಯುತ್ತಿರುವ ನಾಸ್ತಿಕ್ಯಭಾವನೆಗಳಿಗೆ ಪರಿಹಾರೋಪಾಯವನ್ನು ಕಂಡು, ಈ ಗ್ರಂಥವನ್ನು ರಚಿಸಿರಬಹುದೇ, ಎಂಬ ಭಾವನೆಗಳಿಗೆ ಎಡೆಕೊಡುವ ಗ್ರಂಥವಿದು. ಅದ್ವೈತಮತದ ಮೂಲಾಧಾರಗಳೆಂಬ ಶ್ರುತಿವಾಕ್ಯಗಳನ್ನೆಲ್ಲಾ ಬಹುಮುಖದಿಂದ, ಯುಕ್ತಿಯುಕ್ತವಾಗಿ ವಿವೇಚಿಸಿ, ಅವುಗಳಿಂದ ಅದ್ವೈತಮತತತ್ವಗಳು ಸರ್ವಥಾ ಸಾಧಿಸುವುದಿಲ್ಲವೆಂದು ತೋರಿಸಿಕೊಟ್ಟಿರುತ್ತಾರೆ. ಸಂಸ್ಕೃತ ಭಾಷೆಯಲ್ಲಿರುವ ಪಂಡಿತಮಾತ್ರಗಮ್ಯವಾದ ಈ ಗ್ರಂಥದ ಉಪಯೋಗವನ್ನು ಹೊಂದುವ ಅಧಿಕಾರಿಗಳು ಈಗ ಬಹುಕಡಿಮೆ. ಮೇಲಾಗಿ ಮೂಲಗ್ರಂಥವೂ ದೊರೆಯುವುದಿಲ್ಲ. ಹೀಗಿರುವ ಪರಿಸ್ಥಿತಿಯಲ್ಲಿ, ಕನ್ನಡದಲ್ಲಿ, ಪದಶಃ ಅರ್ಥ ತಾತ್ಪರ್ಯಗಳೊಂದಿಗೆ, ಈ ಗ್ರಂಥವನ್ನು ಮುದ್ರಿಸಿ ಪ್ರಚಾರಗೊಳಿಸುವ ಕಾರ್ಯದ ಮಹತ್ವವು ಎದ್ದು ತೋರುತ್ತದೆ.

ಈ ದೊಡ್ಡ ಗ್ರಂಥವನ್ನು ೧೨ ಅಥವಾ ೧೫ ಸಂಪುಟಗಳಲ್ಲಿ ಪೂರ್ಣಗೊಳಿಸುವ ಉದ್ದೇಶವಿದೆ. ಒಂದೊಂದು ಸಂಪುಟವು ಸುಮಾರು ೩೦೦ ಪುಟ

ಗಳುಳ್ಳದ್ದಾಗಿರುತ್ತದೆ. ಒಂದೊಂದರಲ್ಲಿ ಪೂರ್ತಿಗೊಳಿಸಬಹುದಾದ (ಘಟ್ಟಗಳು) ವಿಷಯುಗಳು ಸಿಗುತ್ತಿಲ್ಲವಾದ್ದರಿಂದ, ಈ ಗ್ರಂಥದ ಐದು ಸೌರಭಗಳನ್ನು ಒಂದೊಂದು ಸೌರಭದ ವಿಷಯವಿಸ್ತಾರವನ್ನು ಗಮನಿಸಿ, ಗೊತ್ತಾದ ಸಂಖ್ಯೆಯು ಸಂಪುಟಗಳಲ್ಲಿ ಮುಗಿಸುವುದೆಂದು ನಿರ್ಧಾರಮಾಡಲಾಗಿದೆ. ಪ್ರತಿಸೌರಭದ ಸಂಪುಟಗಳಿಗೆ, ಒಂದೊಂದಕ್ಕೆ ಬೇರೆ ಪುಟಸಂಖ್ಯೆಯನ್ನು ಕೊಡದೇ, ಸೌರಭದ ಕೊನೆಯವರೆಗೆ ಮುಂದರಿಸಲಾಗುತ್ತದೆ ಮತ್ತು ಆ ಸೌರಭದ ಶ್ಲೋಕಸಂಖ್ಯೆಗಳನ್ನು, ಎಲ್ಲ ಸಂಪುಟಗಳಲ್ಲಿ ಮುಂದರಿಸಲಾಗುತ್ತದೆ. ಗ್ರಾಹಕರು, ತಮ್ಮ ಇಚ್ಛಾನುಸಾರವಾಗಿ ಒಂದೊಂದು ಸೌರಭದ ಸಂಪುಟಗಳನ್ನು ಒಟ್ಟುಗೂಡಿಸಿ ಬೈಂಡ್‌ಮಾಡಿಸಿಕೊಳ್ಳಲು ಅನುಕೂಲವಿರುತ್ತದೆ.

ಅನುವಾದವನ್ನು ಬರೆದು, ಓದಿ ಶುದ್ಧಗೊಳಿಸಿ ಪುನಹ ಬರೆಯುವುದು ನನಗೆ ಕಷ್ಟಸಾಧ್ಯವಾದ್ದರಿಂದ, ಬರೆದುದನ್ನು ಹಾಗೆಯೇ ಮುದ್ರಣಕ್ಕೆ ಕೊಡುತ್ತಿದ್ದೇನೆ. ಮುದ್ರಣಾಲಯದ ಮಾಲಿಕರಾದ ಮಾನ್ಯ ಶ್ರೀ ಡಿ. ಎಸ್. ಕೃಷ್ಣಾಚಾರ್ಯ, ಎಂ.ಎಸ್‌ಸಿ., ಇವರು ವಿಶೇಷ ಶ್ರಮವಹಿಸಿ, ಶ್ರದ್ಧೆಯಿಂದ ಓದಿ, ತಿದ್ದಿಕೊಂಡು, ಮುದ್ರಣಮಾಡಿಸುತ್ತಿದ್ದಾರೆ. ಅವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ; ವಿದ್ಯಾವಂತರೂ ಶ್ರೀಹರಿವಾಯುಭಕ್ತರೂ ಆದ ಅವರ ಉಪಕಾರವನ್ನು, ಸಂಘವು ಎಂದೂ ಮರೆಯುವಂತಿಲ್ಲ. ಅವರಿಗೆ ನನ್ನ ಅನಂತವಂದನೆಗಳನ್ನು ಅರ್ಪಿಸುತ್ತೇನೆ. ಗ್ರಂಥವನ್ನು ಆದಷ್ಟು ಆಕರ್ಷಕವಾಗಿರುವಂತೆ ಮಾಡಿ ಈ ಗ್ರಂಥಮಾಲೆಯು ಪೂರ್ಣಗೊಳ್ಳುವವರೆಗೆ, ಹೀಗೆಯೇ ಸಹಕರಿಸಿ, ತಾವೂ ಮಹಾಪುಣ್ಯಭಾಗಿಗಳಾಗಬೇಕೆಂದು ಆಶಿಸುತ್ತೇನೆ.

ಸಜ್ಜನರ ಜ್ಞಾನದಾರ್ಢ್ಯಕ್ಕೆ ಅಲ್ಪವಾದರೂ ಈ ಗ್ರಂಥಮಾಲೆಯಿಂದ ಸಹಾಯವಾದರೆ, ನಾನು ಧನ್ಯ; ಪ್ರತಿಪಾದಿತವಿಷಯುಗಳನ್ನು ಹಂಸಕ್ಷೀರನ್ಯಾಯದಿಂದ ಸ್ವೀಕರಿಸಿ, ಹರ್ಷಿಸಿ, ತನ್ಮೂಲಕ ನನ್ನಮೇಲೆ ಶ್ರೀಹರಿವಾಯುಗಳ ಅನುಗ್ರಹವಾಗುವಂತೆ ಓದುಗರು ಉಪಕರಿಸಲೆಂದು ಪ್ರಾರ್ಥಿಸುತ್ತೇನೆ. ಈ ರೂಪದ ಸೇವೆಯಲ್ಲಿ ನನ್ನನ್ನು ತೊಡಗಿಸಿ, ನನಗೆ ಮಹೋಪಕಾರಮಾಡಿರುವ ಶ್ರೀಸಂಘದ ಅಧ್ಯಕ್ಷರು ಮತ್ತು ಕಾರ್ಯಸಮಿತಿಯುವರನ್ನೆಲ್ಲ, ಕೃತಜ್ಞನಾಗಿ ವಂದಿಸುತ್ತೇನೆ.

'ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ'

|| ಶ್ರೀಕೃಷ್ಣಾರ್ಪಣಮಸ್ತು ||

# ಮುನ್ನುಡಿ

ಶ್ರೀ ಯುಕ್ತಿಮಲ್ಲಿಕೆಯು ಶ್ರೀಮಧ್ವಶಾಸ್ತ್ರದುಗ್ಧಾಬ್ಧಿಯಿಂದ ಉದ್ಧೃತವಾದ ಅಮೃತದಿಂದ ತುಂಬಿದ ಪೂರ್ಣ ಕಲಶದಂತೆ ಇದೆ. ಭವಭುಜಂಗದಂಶನದಿಂದ ಜೀವನ್ಮೃತರಾದಂತೆ ಇರುವ ಸಜ್ಜೀವರು ಈ ಅಮೃತಕಲಶವನ್ನು ಸ್ವಬುದ್ಧಿ ಕೋಶದಲ್ಲಿ ಧರಿಸಿಕೊಂಡು ನಿತ್ಯವೂ ಪಾನಮಾಡುತ್ತಾ ಇದ್ದರೆ ಅವರಿಗೆ ಅಮೃತತ್ವದ ಪ್ರಾಪ್ತಿಯು ನಿಶ್ಚಿತ.

ಸುವಾಸಿನೀಯರು ಸುವರ್ಣಾಭರಣಗಳಿಂದ ಅಲಂಕೃತರಾದರೂ ಸುಗಂಧ ಪುಷ್ಪಾಲಂಕೃತರಾಗದೆ ಇದ್ದರೆ ಶೋಭಿಸುವದಿಲ್ಲ. ಅದರಂತೆ ಶ್ರುತಿಕನ್ಯಕೆಯು ವಿಷ್ಣುಸರ್ವೋತ್ತಮತ್ವಾದಿರೂಪ ಉತ್ತಮೋತ್ತಮ ಅರ್ಥಗಳಿಂದ ಅಲಂಕೃತಳಾಗಿ ಇದ್ದರೂ ಯುಕ್ತಿಮಲ್ಲಿಕಾ ಕುಸುಮಮಾಲಾಗಳಿಂದ ಯುಕ್ತಳಾಗದೆ ಇದ್ದರೆ ಶೋಭಿಸಲಾರಳು.

ಮೋಕ್ಷಾಪತ್ಯವನ್ನು ಅಪೇಕ್ಷಿಸುವ ವಿಚಕ್ಷಣರು ಯುಕ್ತಿಮಲ್ಲಿಕಾ ಕುಸುಮಗಳಿಂದ ಅಲಂಕೃತಳಾದ ಶೃತಿಕನ್ಯಕೆಯ ಪಾಣಿಗ್ರಹಣವನ್ನು ಮಾಡಿ ಅವಳಲ್ಲಿ ಸದಾ ರಮಿಸುತ್ತಿರಬೇಕು.

ಆಧುನಿಕ ಜನತೆಯು ಶಾಸ್ತ್ರವಚನಗಳನ್ನು ಧಿಕ್ಕರಿಸಿ ಕೇವಲ ಯುಕ್ತಿಗಳನ್ನು ಪುರಸ್ಕರಿಸಿ, ಪರತತ್ವ, ಧರ್ಮ, ಅಧರ್ಮಗಳ ಸ್ವರೂಪವನ್ನು ಅನ್ಯಥಾ ಪ್ರತಿಪಾದಿಸುತ್ತಾ ಇದೆ. ಪಾದಲಗ್ನವಾದ ಕಂಟಕವನ್ನು ಕಂಟಕದಿಂದಲೇ ಉದ್ಧರಿಸುವಂತೆ ಇಂತಹ ಜನತೆಯ ಕುಯುಕ್ತಿವಾದವನ್ನು ಪ್ರಬಲ ಯುಕ್ತಿಗಳಿಂದಲೇ ಪ್ರತಿಭಟಿಸಬೇಕು. ಈ ವಿಷಯದಲ್ಲಿ ಈ ಯುಕ್ತಿಮಲ್ಲಿಕಾ ಗ್ರಂಥವು ಅತ್ಯುಪಯುಕ್ತವಾಗಿದೆ.

ಆಧುನಿಕ ಜನತೆಯು "ಅಹಿಂಸೆಯು, ಪರೋಪಕಾರವೂ ಧರ್ಮ; ಅಹಿಂಸೆಯು ದುಃಖಾಭಾವಕ್ಕೆ, ಪರೋಪಕಾರವು ಸುಖಕ್ಕೆ ಹೇತುವಾಗಿದೆ" ಎಂದು ಯುಕ್ತಿವಾದದಿಂದಲೇ ಸಮರ್ಥಿಸುತ್ತದೆ. ಈ ವಿಷಯಕ್ಕೆ ಶಾಸ್ತ್ರವು ಏಕೆ ಎಂದು ಪ್ರಶ್ನಿಸುತ್ತದೆ. ಇಂತಹ ವಾದವನ್ನು ಶ್ರೀ ವಾದಿರಾಜಗುರುಸಾರ್ವಭೌಮರು ಈ ಗ್ರಂಥದಲ್ಲಿ ಬಹು ಚಮತ್ಕಾರದಿಂದ ನಿರಾಕರಿಸಿದ್ದಾರೆ. ಅದು ಈರೀತಿಯಾಗಿದೆ :

ದೇಹಬಂಧಾತ್ ಬಹಿರ್ಜೀವಾನ್ ಕುರ್ಯಾತ್ ಕಾರಾಗೃಹಾದಿವ |
ಪರೋಪಕಾರಬುಧ್ಯಾ ಚ ಗಚ್ಛೇತ್ಕಾಮಾತುರಾಂಗನಾಂ ||

ಬಹುಜನರು ವೃದ್ಧಾಪ್ಯದಲ್ಲಿ ನಾನಾತರಹದ ರೋಗಪೀಡಿತರಾಗಿ ಯಾವ ಔಷಧಿಗಳಿಂದಲೂ ರೋಗ ನಿವಾರಣೆಯಾಗದೆ ದಿನೇ ದಿನೇ ರೋಗವು ವೃದ್ಧಿಯಾಗುತ್ತಾ ಇದ್ದುದರಿಂದ ತುಂಬಾ ಕಷ್ಟವನ್ನು ಅನುಭವಿಸುತ್ತಾ ಇರುತ್ತಾರೆ. ಜೈಲಿನಲ್ಲಿ ಕಷ್ಟ ಪಡುವವರಕ್ಕಿಂತಲೂ ಅಧಿಕ ದುಃಖವನ್ನು ಅನುಭವಿಸುತ್ತಿರುವ ಇಂತಹ ಜನರನ್ನು ದೇಹಬಂಧದಿಂದ ಬಿಡುಗಡೆ ಮಾಡಿ ನಿರ್ದುಃಖರನ್ನಾಗಿ ಮಾಡುವದೇ ಉಚಿತ. ದೇಹಬಂಧದಿಂದ ಬಿಡುಗಡೆ ಮಾಡುವಾಗ ಅವರಿಗೆ ದುಃಖವಾಗುವದು ನಿಜ. ಆದರೆ ರೋಗಿಗಳಿಗೆ ಡಾಕ್ಟರು ಶಸ್ತ್ರಚಿಕಿತ್ಸೆಯನ್ನು ಮಾಡಿ ರೋಗ ಪರಿಹಾರವನ್ನು ಮಾಡುತ್ತಾನೆ. ಶಸ್ತ್ರಚಿಕಿತ್ಸೆಯನ್ನು ಮಾಡುವಾಗ ರೋಗಿಗೆ ದುಃಖವು ಆಗುತ್ತದೆ. ಆದರೆ ದೊಡ್ಡ ದುಃಖದ ಪರಿಹಾರಕ್ಕಾಗಿ ಸಣ್ಣ ದುಃಖವನ್ನು ಅನುಭವಿಸಲೇಬೇಕು. ಅದರಂತೆ ವೃದ್ಧಾಪ್ಯದಲ್ಲಿ ಅಪರಿಹಾರ್ಯ ರೋಗಗಳಿಂದ ಬಹು ದುಃಖವನ್ನು ಅನುಭವಿಸುತ್ತಿರುವವರನ್ನೆಲ್ಲ ಕೊಲ್ಲುವದು ಏಕೆ ಧರ್ಮವಲ್ಲ? ಪರಪುರುಷರಲ್ಲಿ ಕಾಮಪೀಡಿತರಾಗಿರುವ ಪರಾಂಗನೆಯರ ಸಂಗ ಮಾಡುವುದು ಪರಪುರುಷರಿಗೆ ಪರೋಪಕಾರರೂಪ ಧರ್ಮವಾಗಲಿಕ್ಕಿಲ್ಲವೆ? ಇತ್ಯಾದಿ ಪ್ರಶ್ನೆಗಳನ್ನು ಈ ಗ್ರಂಥದಲ್ಲಿ ಕೇಳಿದ್ದಾರೆ. ಈ ಪ್ರಶ್ನೆಗಳಿಗೆ ಆಧುನಿಕ ಜನತೆಯು ಏನೂ ಉತ್ತರವನ್ನು ಕೊಡಲು ಸಮರ್ಥವಲ್ಲ. ಆದುದರಿಂದ "ತಸ್ಮಾತ್ ಶಾಸ್ತ್ರಪ್ರಮಾಣಂ ತೇ ಕಾರ್ಯಾಕಾರ್ಯ ವ್ಯವಸ್ಥಿತೌ" ಎಂದು ಶ್ರೀಕೃಷ್ಣಪರಮಾತ್ಮನು ಉಪದೇಶಿಸಿದಂತೆ ಕರ್ತವ್ಯಾಕರ್ತವ್ಯನಿರ್ಣಯಕ್ಕಾಗಿ ಶಾಸ್ತ್ರವನ್ನೇ ಮೊರೆಹೊಂದಬೇಕು ಎಂದು ಈ ಗ್ರಂಥವು ಸಿದ್ಧಮಾಡುತ್ತದೆ.

ಶಾಸ್ತ್ರವು ಕರ್ತವ್ಯಾಕರ್ತವ್ಯ ವಿಷಯದಲ್ಲಿ ಪ್ರಮಾಣ ಎಂದು ಹೇಳಿದಾಗ ಆಧುನಿಕ ಜನತೆಯು ಶಾಸ್ತ್ರವೆಂದರೆ ಯಾವುದು? ಎಲ್ಲ ಶಾಸ್ತ್ರಗಳೂ ಸಮಾನವಾಗಿ ಇರುವಾಗ ವೇದಶಾಸ್ತ್ರಕ್ಕೇನೇ ದೊಡ್ಡ ಗೌರವವು ಏಕೆ? ಎಂದು ಪ್ರಶ್ನಿಸುತ್ತದೆ. ಈ ಪ್ರಶ್ನೆಗೆ ಈ ಗ್ರಂಥದಲ್ಲಿ ಈ ರೀತಿ ಸಮಾಧಾನವಿದೆ. ಷಟ್‌ದರ್ಶನಕಾರರು ಇಡೀ ಜಗತ್ತಿನಲ್ಲಿ ಪ್ರಸಿದ್ಧರು. ಅವರ ಹೆಸರು ವೇದಾಂತಿಗಳು, ಸಾಂಖ್ಯರು, ತಾರ್ಕಿಕರು, ಮೀಮಾಂಸಕರು, ಬೌದ್ಧರು, ಜೈನರು ಎಂದು ಇದೆ. ಇವರಲ್ಲಿ ಬೌದ್ಧರು, ಜೈನರು ಇವರಿಬ್ಬರು ಮಾತ್ರ ವೇದಶಾಸ್ತ್ರವನ್ನು ಅಪ್ರಮಾಣವೆಂದು ಹೇಳುತ್ತಾರೆ. ಬಾಕೀ ನಾಲ್ಕು ದರ್ಶನಕಾರರು ಪರಸ್ಪರ ವಿರುದ್ಧ ತತ್ವವಾದಿಗಳು ಇದ್ದಾರೆ. ತಾವು ಪ್ರತಿಪಾದಿಸುವ ತತ್ವಗಳಿಗೆ ವೇದದಲ್ಲಿ ವಿರುದ್ಧವಾಗಿ ಹೇಳು

ವಂತೆ ಇರುವ ವಚನಗಳು ತುಂಬಾ ಕಾಣುತ್ತವೆ. ಹೀಗೆ ಇದ್ದರೂ ನಾಲ್ಕು ದರ್ಶನಕಾರರೂ ಐಕಕಂಠ್ಯದಿಂದ ವೇದವನ್ನು ಪ್ರಮಾಣವೆಂದು ಅಂಗೀಕರಿಸುತ್ತಾರೆ. ತಾವು ಪ್ರತಿಪಾದಿಸುವ ತತ್ವಗಳು ವೇದಪ್ರತಿಪಾದ್ಯಗಳೆಂದು ಸಿದ್ಧಮಾಡಲಿಕ್ಕೆ ಮಹಾಪ್ರಯತ್ನವನ್ನೂ ಮಾಡುತ್ತಾ ಇದ್ದಾರೆ. ನಾಲ್ಕು ಜನರು ಕೋರ್ಟಿನಲ್ಲಿ ಸಾಕ್ಷಿಯನ್ನು ಹೇಳತಕ್ಕವರು ಪರಸ್ಪರ ಸ್ನೇಹಿತರಾಗಿದ್ದರೆ ಸ್ನೇಹಮೂಲಕವಾಗಿ ಒಬ್ಬರು ಸಾಕ್ಷಿಹೇಳಿದ್ದನ್ನು ಅನುಸರಿಸಿಯೇ ಇತರರು ಹೇಳುತ್ತಾರೆ. ಸತ್ಯವನ್ನೇ ಹೇಳಬೇಕೆಂದು ಅವರಿಗೆ ಉದ್ದೇಶವು ಇರುವುದಿಲ್ಲ. ಪ್ರಕೃತದಲ್ಲಿ ಹಾಗೆ ಇಲ್ಲ. ನಾಲ್ಕು ದರ್ಶನಕಾರರು ಪರಸ್ಪರ ಸ್ನೇಹಿತರಲ್ಲ. ಪ್ರತ್ಯುತ ಪರಸ್ಪರ ಕಲಹಕರ್ತೃಗಳೇ ಆಗಿದ್ದಾರೆ. ಹೀಗೆ ಇದ್ದರೂ ನಾಲ್ಕೂ ಜನರೂ ವೇದ ಪ್ರಮಾಣವೆಂದೇ ಹೇಳಬೇಕಾದರೆ ವೇದದ ಪ್ರಾಮಾಣ್ಯವು ಅಪಲಾಪಾರ್ಹವಾಗದೇ ಇರುವದೇ ಕಾರಣವೆಂದು ಹೇಳಬೇಕು. ಈ ಷಟ್‌ದರ್ಶನಕಾರರಲ್ಲಿ ಅಪ್ರಾಮಾಣ್ಯವನ್ನು ಹೇಳತಕ್ಕವರು ಇಬ್ಬರೇ, ಪ್ರಾಮಾಣ್ಯವನ್ನು ಹೇಳತಕ್ಕವರು ನಾಲ್ಕು ಜನ, ಈ ಕಾರಣದಿಂದ ವೇದದ ಪ್ರಾಮಾಣ್ಯವು ನಿರ್ಣಯಿಸಲ್ಪಡುತ್ತದೆ. ಈಗಿನ ಕಾಲದ ಜನರು ಬಹುಮತಕ್ಕೆ ಮಹತ್ವವಾದಿಗಳು. ಈಗಿನ ರಾಜ್ಯಸೂತ್ರವು ಬಹುಮತದಂತೆ ನಡಿಯುತ್ತದೆ. ಇಂತಹ ಜನರು ಬಹುಮತದಿಂದ ಸಿದ್ಧವಾಗುವ ವೇದಪ್ರಾಮಾಣ್ಯವನ್ನು ಒಪ್ಪಲೇಬೇಕು. ಇಂತಹ ಶ್ರೇಷ್ಠಯುಕ್ತಿಯನ್ನು 'ವೇದೋ ನ ಮಾನಮಿತಿ ತು ದ್ವೌ ಚತ್ವಾರೋಽಸ್ಯ ಮಾನತಾಂ | ಮನ್ವತೇ ತದ್ಬಹೋರೇವ ತನ್ವತೇನುಗ್ರಹಂ ಬುಧಾಃ || ' ಎಂಬ ಶ್ಲೋಕದಿಂದ ಈ ಗ್ರಂಥದಲ್ಲಿ ಹೇಳಿದ್ದಾರೆ.

ಈ ಯುಕ್ತಿಮಲ್ಲಿಕೆಯಲ್ಲಿ ಪಂಚಸೌರಭಗಳು ಇವೆ. ಪ್ರಥಮವಾದ ಗುಣಸೌರಭದಲ್ಲಿ ವೇದಾಪೌರುಷೇಯತ್ವ, ಪ್ರಾಮಾಣ್ಯಸ್ವತಸ್ತ್ವ, ವಿಷ್ಣುಸರ್ವೋತ್ತಮತ್ವ, ಗುಣಪೂರ್ಣತ್ವಗಳನ್ನು ಸಮರ್ಥಿಸಿ, ದ್ವಿತೀಯಸೌರಭದಲ್ಲಿ ಪರಮಾತ್ಮನ ನಿರ್ದೋಷತ್ವವನ್ನು ಸಿದ್ಧಮಾಡಲಾಗಿದೆ. ತೃತೀಯಸೌರಭದಲ್ಲಿ ಪಂಚಭೇದ ಸತ್ಯತ್ವಸಮರ್ಥನೆ, ನಾಲ್ಕನೇ ಸೌರಭದಲ್ಲಿ ವಿಶ್ವಸತ್ಯತ್ವಸಮರ್ಥನೆ, ಪಂಚಮ ಸೌರಭದಲ್ಲಿ ಮೋಕ್ಷಸ್ವರೂಪಸಮರ್ಥನೆ, ಶ್ರೀ ಮಧ್ವಗುರುಗಳಿಗೆ ಜೀವೋತ್ತಮ ಮುಖ್ಯಪ್ರಾಣಾವತಾರತ್ವಸಮರ್ಥನೆಗಳು ಇವೆ. ಈ ಐದು ಸೌರಭಗಳು ಅತ್ಯುತ್ತಮ ವಿಚಾರಸರಣಿಯುಳ್ಳ ಅತಿಚಮತ್ಕೃತಿಯುಕ್ತ ಶ್ಲೋಕಗಳಿಂದ ಶೋಭಿಸುತ್ತಿವೆ. ಸಕಲಶಾಸ್ತ್ರವೇತ್ತರಿಗೆ ಮಾತ್ರ ಈ ಗ್ರಂಥದ ಅರ್ಥವನ್ನು ತಿಳಿಯಲು

ಸಾಧ್ಯ. ಅಷ್ಟು ಗಂಭೀರವಾಗಿದೆ ಈ ಗ್ರಂಥ. ಇದಕ್ಕೆ ಶ್ರೀ ವಾದಿರಾಜಗುರು ಸಾರ್ವಭೌಮರೇ ತಮ್ಮ ಸಹೋದರರಾದ ಶ್ರೀ ಸುರೋತ್ತಮತೀರ್ಥರಿಂದ ವ್ಯಾಖ್ಯಾನವನ್ನು ಬರೆಸಿದ್ದಾರೆ. ಆದರೂ ಈಗಿನ ಜನತೆಯ ಮಂದಬುದ್ಧಿಗೆ ಈ ಸಂಕ್ಷಿಪ್ತ ವ್ಯಾಖ್ಯಾನವು ಸಾಲದು. ವಿಸ್ತಾರವಾದ ವ್ಯಾಖ್ಯಾನವನ್ನು ಮಾಡುವ ಅರ್ಹತೆಯುಳ್ಳ ವ್ಯಕ್ತಿಗಳು ಈ ಕಾಲದಲ್ಲಿ ದುರ್ಲಭರಾಗಿದ್ದಾರೆ. ಕೇವಲ ಶಾಸ್ತ್ರೀಯ ವಿಚಾರಗಳಿಂದಲೇ ಕೂಡಿದ ಈ ಗ್ರಂಥವನ್ನು ಕನ್ನಡದಲ್ಲಿ ಭಾಷಾಂತರಮಾಡುವ ದಂತೂ ಬಹು ಕಷ್ಟಸಾಧ್ಯ. ಆದರೆ ಕನ್ನಡದಲ್ಲಿ ಭಾಷಾಂತರಮಾಡುವದು ಅತ್ಯಾವಶ್ಯಕ. ಈ ಮಹಾಕಾರ್ಯದಲ್ಲಿ ಶ್ರೀ ಹರಿಗುರುಭಕ್ತರಾದ ಭೀಮರಾಯರು ಪ್ರವೃತ್ತಿಮಾಡಿದ್ದು ಬಹಳ ಅಭಿನಂದನೀಯ. ಮಾಧ್ವಜನತೆಗೆ ಈ ಪ್ರವೃತ್ತಿ ಯಿಂದ ಅವಿಸ್ಮರಣೀಯ ಪರಮೋಪಕಾರ ಮಾಡಿದಂತೆ ಆಗುತ್ತದೆ. ಶ್ರೀಯುತ ಭೀಮರಾಯರಲ್ಲಿ ಪ್ರಾತಃಸ್ಮರಣೀಯರಾದ ನಮ್ಮ ವಿದ್ಯಾಗುರುಗಳಾದ ಶ್ರೀ ಸತ್ಯಧ್ಯಾನತೀರ್ಥರ ಪರಿಪೂರ್ಣ ಅನುಗ್ರಹವು ಇತ್ತು. ಆ ಪರಮಾನುಗ್ರಹವು ಇವರಿಂದ ಇಂತಹ ಮಹಾಕಾರ್ಯವು ಆಗಲಿಕ್ಕೆ ಕಾರಣ. ಅಂತಹ ದೊಡ್ಡವರ ಅನುಗ್ರಹವಿಶೇಷವಿಲ್ಲದೆ ಇಂತಹ ಮಹಾಕಾರ್ಯವು ಸಾಧ್ಯವಾಗತಕ್ಕದ್ದಲ್ಲ. ಶ್ರೀಯುತ ಭೀಮರಾಯರು ಇಂತಹ ಅನೇಕ ಕೃತಿಗಳನ್ನು ಉತ್ತಮರೀತಿಯಲ್ಲಿ ಅನುವಾದಿಸಿದ್ದಾರೆ. ಅದು ಎಲ್ಲರಿಗೂ ಗೊತ್ತಿದೆ. ಇವರು ಶಾಸ್ತ್ರದ ವಿಷಯ ವನ್ನು ಹೇಗೆ ಅನುವಾದಮಾಡಿದರೆ ಜನರಿಗೆ ತಿಳಿದೀತು ಎಂಬುದನ್ನು ಸರಿಯಾಗಿ ತಿಳಿದಿದ್ದಾರೆ. ಲೌಕಿಕ ವೈದಿಕ ಉಭಯವಿದ್ಯಾವಿಶಾರದರು ಇವರು. ಈ ೨೦ನೇ ಶತಮಾನದಲ್ಲಿ ಬೆಂಗಳೂರು ಶ್ರೀ ಬಿ. ವೆಂಕಟೇಶಾಚಾರ್ಯರು, ದಾವಣಗೆರೆ ಶ್ರೀ ಭೀಮರಾಯರು ಇವರು ಇಬ್ಬರೇ ಲೌಕಿಕವೈದಿಕಪ್ರವೀಣರಾಗಿ ಸತತವಾದ ಪ್ರವಚನನಿರತರಾಗಿ ಅನೇಕ ಅನುವಾದರೂಪ ಕೃತಿಗಳನ್ನು ರಚಿಸಿ ಮಾಧ್ವಜನತೆಗೆ ಪರಮೋಪಕಾರಮಾಡಿದವರು ಎಂದು ಪ್ರಸಿದ್ಧರಾಗಿದ್ದಾರೆ. ಇವರು ಆರಂಭಿಸಿದ ಈ ಮಹಾಕಾರ್ಯವು ಬೇಗನೇ ಪರಿಪೂರ್ಣವಾಗಿ ಹಾಗೆಯೇ ಪ್ರಕಾಶಿತವಾಗಿ ಎಲ್ಲರಿಗೂ ಇದರ ಲಾಭವಾಗಲಿ ಎಂದು ನಾವು ದೇವರನ್ನು ಪ್ರಾರ್ಥಿಸುವೆವು.

**ಶ್ರೀ ವಿದ್ಯಾಮಾನ್ಯತೀರ್ಥಶ್ರೀಪಾದರು**
ಶ್ರೀ ಉಡುಪಿ ಪಲಿಮಾರು ಭಂಡಾರಕೇರಿ ಉಭಯಮಠಾಧೀಶರು

ವ್ಯಾಸಾಯ ಭವನಾಶಾಯ ಶ್ರೀಶಾಯ ಗುಣರಾಶಯೇ |
ಹೃದ್ಯಾಯ ಶುದ್ಧವಿದ್ಯಾಯ ಮಧ್ವಾಯ ಚ ನಮೋ ನಮಃ ||
ತಪೋವಿದ್ಯಾವಿರಕ್ತ್ಯಾದಿಸದ್ಗುಣೌಘಾಕರಾನಹಂ |
ವಾದಿರಾಜಗುರೂನ್ ವಂದೇ ಹಯಗ್ರೀವದಯಾಶ್ರಯಾನ್ ||

ಗುರುಸಾರ್ವಭೌಮರಾದ ಶ್ರೀ ವಾದಿರಾಜ ಯತಿವರ್ಯರ ಕೃತಿಗಳಲ್ಲಿ ಈ ಯುಕ್ತಿಮಲ್ಲಿಕಾ ಗ್ರಂಥವು ಅತ್ಯಂತ ಮಹತ್ತ್ವವಿರುವ ಮಧ್ವಸಿದ್ಧಾಂತದ ಅನುಪಮ ಗ್ರಂಥವೆಂದು ಸರ್ವಸಾಮಾನ್ಯವಾಗಿ ಪಂಡಿತರೆಲ್ಲರೂ ತಿಳಿದ ವಿಷಯ ವಾಗಿದೆ. ಆದರೆ ಇದು ಜಿಜ್ಞಾಸುಗಳಿಗೆ ಮಧ್ವತತ್ತ್ವದ ಶ್ರವಣೋಪಯುಕ್ತವಾದ ಒಂದು ಪ್ರಕರಣ ಗ್ರಂಥವಾಗಿರದೆ ಯುಕ್ತ್ಯನುಸಂಧಾನಾತ್ಮಕ ಮನನೋಪ ಯುಕ್ತವಾದ ಪ್ರೌಢಶಾಸ್ತ್ರ ಗ್ರಂಥವಾಗಿರುತ್ತದೆ. ಮತ್ತು ಶಾಸ್ತ್ರೀಯ ಹಾಗೂ ಲೌಕಿಕಯುಕ್ತಿಗಳೆಂಬ ಮಲ್ಲಿಗೆ ಹೂಗಳಿಂದ ತುಂಬಿರುವ ಈ ಗ್ರಂಥಲತೆಯು 'ಯುಕ್ತಿಮಲ್ಲಿಕಾ' ಎಂಬ ಅನ್ವರ್ಥನಾಮದಿಂದ ಅಂಕಿತವಾಗಿದೆ.

ಈಗಿನ ಬಾಲವಿದ್ಯಾರ್ಥಿಗಳು ಪ್ರಾಯಃ ಶ್ರವಣಾಧಿಕಾರಿಗಳು ಮಾತ್ರವಾಗಿ ರುವುದರಿಂದ ಮನನೋಪಯುಕ್ತವಾದ ಈ ಮಹಾಗ್ರಂಥವನ್ನು ಪರಿಶೀಲಿಸಲು ಅಸಮರ್ಥರಾಗಿರುತ್ತಾರೆ. ಸಾಮರ್ಥ್ಯ ಉಳ್ಳವರು ಕೂಡ ಈ ಬೃಹದ್ಗ್ರಂಥಕ್ಕೆ ತಕ್ಕ ವಿಸ್ತೃತವಾದ ವ್ಯಾಖ್ಯಾನವಿಲ್ಲದಿರುವುದರಿಂದ ಬಹುವಿಷಯ ರತ್ನಗರ್ಭಿತ ವಾದ ಈ ಗ್ರಂಥಸಮುದ್ರದಲ್ಲಿ ಅವಗಾಹನೆಮಾಡಲು ಭೀತರಾಗುತ್ತಾರೆ. ಹೀಗೆ ದುರವಗಾಹವಾದ ಈ ಸ್ವರಸಗ್ರಂಥದ ಪ್ರಕಾಶನದಿಂದ ಅದರಲ್ಲಿರುವ ಸ್ವಾರಸ್ಯ ವನ್ನು ಕುತೂಹಲಿಗಳಾದ ಸಜ್ಜನರೆಲ್ಲರೂ ಸುಲಭವಾಗಿ ಹೊಂದಲೆಂದು ದಾವಣ ಗೆರೆಯ ಶ್ರೀ ಸರ್ವಜ್ಞಾಚಾರ್ಯ ಸೇವಾಸಂಘದವರು ಈ ಯುಕ್ತಿಮಲ್ಲಿಕಾ ಗ್ರಂಥ ವನ್ನು ಮಾಧ್ವಜನತೆಗೆ ಒದಗಿಸುವ ಮಹಾಕಾರ್ಯವನ್ನು ಉಪಕ್ರಮಿಸಿದುದು ಅತ್ಯಂತ ಪ್ರಿಯವಾದ ಮತ್ತು ಅಷ್ಟೇ ಉಪಯುಕ್ತ ಕಾರ್ಯವಾಗಿದೆ.

ಈ ಯುಕ್ತಿಮಲ್ಲಿಕಾ ಗ್ರಂಥದ ಮಹತ್ತ್ವವನ್ನು, ಅದನ್ನು ಕನ್ನಡಕ್ಕೆ ಭಾಷಾಂತರಿಸುವ ಅವಶ್ಯಕತೆಯನ್ನು ಶ್ರೀ ಸರ್ವಜ್ಞಾಚಾರ್ಯ ಸೇವಾಸಂಘದವರು ಪ್ರಕಟಪಡಿಸಿದಂತೆ ಯುಕ್ತಿಮಲ್ಲಿಕಾ ಗ್ರಂಥವು ಸಂಸ್ಕೃತ ಭಾಷೆಯಲ್ಲಿದ್ದು ಇದರ ವ್ಯಾಖ್ಯಾನವು ಸಂಸ್ಕೃತದಲ್ಲೇ ಇರುವುದರಿಂದ ಅದನ್ನು ಅಭ್ಯಾಸಮಾಡುವ ಮತ್ತು

ಪಾಠ ಹೇಳುವವರೂ ದುರ್ಲಭರಾಗಿರುವುದರಿಂದ ಅದನ್ನೋದಿ ಸಾರವನ್ನರಿತವರು ಬಹಳ ಮಂದಿ ಇಲ್ಲದಿದ್ದರೂ ಅದು ಆಕರ್ಷಕವಾದ ತನ್ನ ಹೆಸರಿನಿಂದಲೇ ಪ್ರಸಿದ್ಧ ವಾಗಿದೆ. ಯುಕ್ತಿಪ್ರಚುರವಾದ ಈ ಗ್ರಂಥವನ್ನು ಅನುಸರಿಸಲು ತರ್ಕಶಾಸ್ತ್ರ ರೀತ್ಯಾ ಅನುಮಾನ ಪ್ರಯೋಗ ಪರಿಜ್ಞಾನ ಮತ್ತು ಹೇತುದೋಷಜ್ಞಾನವೂ ಸರಿಯಾಗಿರಬೇಕು. ಇದರಲ್ಲಿಯ ಯುಕ್ತಿಗಳು ಬಲವತ್ಪ್ರಮಾಣ ಸಹಕೃತ ವಾಗಿರುವುವು. ಇಂತಹ ವಿಚಾರಗಳನ್ನೊಳಗೊಂಡಿರುವ ಈ ಉದ್ಗ್ರಂಥವನ್ನು ಭಾಷಾಂತರಿಸಿ ಮೂಲಶ್ಲೋಕಪೂರ್ವಕ ಕನ್ನಡದಲ್ಲಿ ಮುದ್ರಿಸಿ ಪ್ರಚುರಮಾಡು ವುದರಿಂದ ಬಡಜನರಿಗೆ ಉಪಯೋಗವಾದಂತಾಗುವುದು ; ಮತ್ತು ಈ ತತ್ತ್ವ ಜ್ಞಾನ ಭಂಡಾರವನ್ನು ಬಹುಕಾಲ ರಕ್ಷಿಸಿದಂತಾಗುವುದು. ಮುಂದಿನ ಕಾಲಗತಿ ಯಲ್ಲಿ ದಿನೇದಿನೇ ಅಭಿವೃದ್ಧಿಹೊಂದುವ ನಾಸ್ತಿಕ ಭಾವನೆಗಳನ್ನು ತೊಡೆದು ಹಾಕಲು ಅನುಕೂಲಿಸಿದಂತಾಗುವುದು.

ಶ್ರೀವಾದಿರಾಜಯತಿರಾಜಕೃತಪ್ರಬಂಧವ್ಯಾಖ್ಯಾನಕರ್ಮಣಿ ಸುರೋತ್ತಮ ಯೋಗಿವರ್ಯಾಃ | ದಕ್ಷಾ ವಯಂ ತು ತದುದೀರಣಶಿಕ್ಷಿತಾರ್ಥಾಸ್ತಚ್ಛ್ಲೋಕ್ಯ ವಾಕ್ಯಚಯಲೇಖನತಃ ಕೃತಾರ್ಥಾಃ || ಎಂಬ ಸುರೋತ್ತಮತೀರ್ಥರ ಮಾತಿನಂತೆ ಭಾವಿಸಮೀರರಾದ ಶ್ರೀ ವಾದಿರಾಜಗುರುವರ್ಯರ ಕೃತಿಯು ಸರ್ವಜ್ಞಾಚಾರ್ಯರ ಭಾಷ್ಯದಂತೆ ಅತ್ಯಂತ ವಿಸ್ತೃತವಾದ ಅರ್ಥ ಉಳ್ಳದ್ದಾಗಿ ಬಹುಜ್ಞರಾದ ದೇವಾಂಶ ರಿಂದ ಮಾತ್ರ ಯಥಾವತ್ ವ್ಯಾಖ್ಯಾನಾರ್ಹವಾಗಿದ್ದು ಈ ಮನುಷ್ಯಲೋಕದಲ್ಲಿರುವ ಸಂಸ್ಕೃತಾಭಿಜ್ಞರಾದ ಪಂಡಿತೋತ್ತಮರಿಗೂ ಸಂಪೂರ್ಣ ತಿಳಿಯಲು ಅಸಾಧ್ಯವೇ ಆಗಿರುತ್ತದೆ. ಉದ್ಯೋಗಕ್ಕಾಗಿ ಬಾಲ್ಯದಲ್ಲಿ ಲೌಕಿಕವಿದ್ಯಾಭ್ಯಾಸದಲ್ಲಿಯೇ ನಿರತ ರಾಗಿದ್ದು ಸಂಸ್ಕೃತಮಯವಾದ ಗಹನವಾದ ಶಾಸ್ತ್ರದಲ್ಲಿ ಕೂಲಂಕಷವಾಗಿ ಪ್ರವೇಶ ವಿಲ್ಲದ ಸಾತ್ತ್ವಿಕಜನರು ಸಂಸ್ಕೃತಗ್ರಂಥದಿಂದ ಜ್ಞಾನಸಂಪಾದನೆಯನ್ನು ಮಾಡಿ ಕೊಳ್ಳಲಾರದೆ ಚಿಂತಾಕ್ರಾಂತರಾಗಿರುವಾಗ ಭಾಷಾಮಯವಾದ ಅನುವಾದಗ್ರಂಥ ಗಳು ಅಂತಹವರಿಗೆ ತತ್ತ್ವಜ್ಞಾನಸಂಪಾದನೆಗೆ ಸಾಧನಗಳಾಗಿರುವುದರಿಂದ ಇತ್ತೀಚೆಗೆ ಬಹುಮುಖವಾಗಿ ಭಾಷಾಗ್ರಂಥಗಳು ಶ್ರೀಮದಾಚಾರ್ಯರ ಶಾಸ್ತ್ರಗ್ರಂಥ ಗಳಿಗೆ ಅನುವಾದಕಗಳಾಗಿರುವುವು. ಅದರಂತೆ ಮಹತ್ತ್ವಪೂರ್ಣವಾದ ಈ ಯುಕ್ತಿಮಲ್ಲಿಕಾ ಗ್ರಂಥದ ಪ್ರಕಾಶನವು ಶ್ರೀಹರಿಗುರುಗಳ ಪ್ರಸಾದಸಂಪಾದನೆಯ ಮಾರ್ಗವೇ ಆಗಿರುವುದಲ್ಲದೆ ಅನೇಕ ಪಾಮರಜನರ ಉದ್ಧಾರಕಾರ್ಯವೂ ಆಗಿರುವುದು.

ಇದರ ಯಥೋಚಿತ ಪದಾರ್ಥ ಮತ್ತು ತಾತ್ಪರ್ಯಾರ್ಥವನ್ನು ಬರೆಯಲು ಮಾಧ್ವಭೂಷಣ ಶ್ರೀ ಭೀಮರಾಯರು ಅರ್ಹರು ಮತ್ತು ಸಮರ್ಥರು. ಇವರು ಬಹುಕಾಲದಿಂದ ಮಾಧ್ವಗ್ರಂಥಗಳ ಪರಿಶೀಲನೆಯನ್ನು ಮಾಡಿ ಅನೇಕ ಕನ್ನಡ ಅನುವಾದಗ್ರಂಥಗಳನ್ನು ಬರೆದು ಪ್ರಕಾಶಪಡಿಸಿ ಜನರ ಮೆಚ್ಚುಗೆಗೆ ಪಾತ್ರರಾದವರು. ನಾವು ಈ ಮೊದಲೇ ಶ್ರೀ ಭೀಮರಾಯರಿಗೆ ಕೈಗೊಂಡ ಈ ಕಾರ್ಯದಲ್ಲಿ ಯಶಸ್ವಿಯಾಗಿ ಮುಂದುವರಿಯುವಂತೆ ಪತ್ರ ಬರೆದಿರುತ್ತೇವೆ. ಮತ್ತು ಮುಖತಃ ಅವರ ಮಾಧ್ವವಾಙ್ಮಯಸೇವೆಯನ್ನು ಶ್ಲಾಘಿಸಿ ಅಭಿನಂದಿಸಿದ್ದೇವೆ. ಇನ್ನೂ ಅನೇಕ ಪೀಠಾಧಿಪತಿಗಳು, ಮಹನೀಯರು 'ಈ ಮಹಾಕಾರ್ಯವನ್ನು ಪೂರೈಸುವಿರಿ' ಎಂದು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಶ್ರೀ ಭೀಮರಾಯರಿಗೆ ಆಶ್ವಾಸನೆಗಳನ್ನು ಕೊಟ್ಟು ಆಶೀರ್ವದಿಸಿದ್ದಾರೆ. ಆದುದರಿಂದ ಈ ಕಾರ್ಯವು ನಿರ್ವಿಘ್ನವಾಗಿ ಕೊನೆಗೊಂಡು ಮಾಧ್ವಜನಾಂಗಕ್ಕೆ ಮಹೋಪಕಾರವಾಗಲಿ.

ಶ್ರೀ ವಾದಿರಾಜಗುರುವರೇಣ್ಯರು ತಮ್ಮ ಈ ಯುಕ್ತಿಮಲ್ಲಿಕಾ ಗ್ರಂಥರತ್ನದ ಕುರಿತು ಒಂದೆಡೆ ತಾವು ಸ್ವತಃ ಹೇಳಿರುವ ಹೃದಯಸ್ಪರ್ಶಿಯಾದ ಮಾತು ಇಲ್ಲಿ ಉಲ್ಲೇಖನೀಯವಾಗಿದೆ.

ಸುತ ಸುಸೂಕ್ಷ್ಮಮತಿಮನ್ ಕೃತಕೃತ್ಯಸ್ತ್ವಂ ಸಮಸ್ತಯತಿಷೂತ್ತಮಕೀರ್ತೇ |
ಮತ್ಕೃತಿಂ ವಿತತಯುಕ್ತಿಸತ್ಕೃತಂ ಸತ್ಸು ವ್ಯಾಕುರು ಚ ತತ್ರ ಕೀರ್ತಯ ||
ಪುತ್ರ ಮತ್ಪುತ್ರಿಕಾಂ ಯುಕ್ತಿಮಲ್ಲಿಕಾಖ್ಯಾಂ ತವಾನುಜಾಂ |
ಕುರು ಸತ್ಪಾತ್ರದಾನಂ ತೇ ಕನ್ಯಾದಾನಫಲಂ ಲಭೇತ್ ||
ಮದ್ಯುಕ್ತಿಭೂಷಣೈರ್ಭಾತಿ ತ್ವದ್ವ್ಯಾಖ್ಯಾನಸುವಾಸಿನೀ |
ನಾನಾಪುಷ್ಪಲಸತ್ಕೇಶಬಂಧಿನೀ ಭಾವಗಂಧಿನೀ ||
ವೇದವೇದ್ಯ ದ್ರೌಪದೀವ ಭಾತ್ಯನೇಕವರಾಪ್ಯಹೋ |
ತಸ್ಮಾದ್ವ್ಯಾಖ್ಯಾನಸನ್ಮಂತ್ರೈಃ ದಾನಂ ಕುರುವರೇಷು ತಾಂ ||
ತ್ವಮೇವ ತತ್ಪಿತಾ ಮಾತಾ ಪಿತೃಹೀನಾಂ ತು ಮಾ ಕುರು |
ಅತೋ ಮಮಾತ್ಮಜಾ ಯುಕ್ತಿಮಲ್ಲಿಕೇತಿ ಮಮಾತ್ಮಜಂ ||
ಪವ್ರೇ ತೀವ್ರೇಣ ಭಾವೇನಾಪ್ಯಗ್ರಜಂ ವ್ಯಗ್ರಗಾಮಿನಿ |....

ಇದು ತನ್ನ ಪ್ರಿಯಶಿಷ್ಯರಾದ ವೇದವೇದ್ಯರನ್ನು ಕುರಿತು ವೃಂದಾವನಾಖ್ಯಾನದಲ್ಲಿ ಶ್ರೀ ವಾದಿರಾಜಗುರುಗಳ ಉಪದೇಶವು. ಎಲೈ ಸೂಕ್ಷ್ಮಬುದ್ಧಿಯುಳ್ಳ

ಯತಿಶ್ರೇಷ್ಠನಾದ ಪುತ್ರನೆ! ಸುವ್ಯಕ್ತಯುಕ್ತಿಸಂತತಿಗಳಿಂದ ಸತ್ಕರಿಸಲ್ಪಟ್ಟ ನನ್ನ ಯುಕ್ತಿಮಲ್ಲಿಕೆ ಎಂಬ ಸತ್ಕೃತಿಯನ್ನು ಲೋಕದಲ್ಲಿ ಪ್ರಖ್ಯಾತಿಗಾಗಿ ವ್ಯಾಖ್ಯಾನ ಮಾಡು. ಈ ಯುಕ್ತಿಮಲ್ಲಿಕೆ, ಎಂಬ ನನ್ನ ಪುತ್ರಿಯು ನಿನ್ನ ಅನುಜೆಯು. ಆದುದರಿಂದ ಅವಳನ್ನು ಸಜ್ಜನರೆಂಬ ಸತ್ಪಾತ್ರದಲ್ಲಿ ದಾನಮಾಡು. ಕನ್ಯಾದಾನ ಮಾಡಿದ ಫಲವುಂಟಾಗುತ್ತದೆ. ಮತ್ತು ಆ ಯುಕ್ತಿಮಲ್ಲಿಕೆ, ಎಂಬ ಕುವರಿಯು ನಾನು ತೊಡಿಸಿದ ಯುಕ್ತಿಗಳೆಂಬ ಆಭರಣಗಳಿಂದಲೂ, ನಾನಾವಿಧ ಶಬ್ದಾಲಂಕಾರಾದಿ ಪುಷ್ಪಗಳಿಂದ ಶೋಭಿತವಾದ ಕೇಶಬಂಧದಿಂದಲೂ, ಭಾವಗಂಧದಿಂದಲೂ ಪೂರ್ಣವಾಗಿದ್ದು ನಿನ್ನ ವ್ಯಾಖ್ಯಾನದಿಂದ ಸುವಾಸಿನಿಯಾಗಿ ಶೋಭಿಸುತ್ತಾಳೆ. ಮತ್ತು ಅನೇಕ ದೇವತಾಸ್ತ್ರೀಯರ ಅಂಶಗಳಿಂದ ಕೂಡಿದ್ದ ಭಾರತೀದೇವಿಯಾದ ದ್ರೌಪದಿಯಂತೆ ಅನೇಕ ಅಪರವಿದ್ಯಾಭಾಗಗಳಿಂದ ಕೂಡಿದ ಪರವಿದ್ಯಾರೂಪವಾದ ಯುಕ್ತಿಮಲ್ಲಿಕೆಯನ್ನು ಸಜ್ಜನರೆಲ್ಲರೂ ತಮ್ಮ ತಮ್ಮ ಯೋಗ್ಯತಾನುಗುಣವಾಗಿ ಪರಿಗ್ರಹಿಸಲು ಅರ್ಹರಾಗಿರುವ ಕಾರಣ ಅಂತಹ ಯೋಗ್ಯವರರಿಗೆ ನೀನು ವ್ಯಾಖ್ಯಾನ ಮಾತ್ರ ಪೂರ್ವಕವಾಗಿ ದಾನಮಾಡುವಲ್ಲಿ ಅದು ಶೋಭಿಸುತ್ತದೆ.... ನೀನೇ ಆ ಕೃತಿಕುಮಾರಿಗೆ ತಾಯಿ ಮತ್ತು ತಂದೆ, ಆದ್ದರಿಂದ ನನ್ನ ಅಂತರ್ಧಾನದ ನಂತರ ಅವಳನ್ನು ತಂದೆ ಇಲ್ಲದವಳನ್ನಾಗಿ ಮಾಡಬೇಡ. ವೇದವೇದ್ಯನೆ! ನನ್ನಿಂದ ನಿನಗೆ ಸನ್ಯಾಸವೆಂಬ ತೃತೀಯಜನ್ಮವಾದ ನಂತರದಲ್ಲಿ ನನ್ನಿಂದ ಈ ಯುಕ್ತಿಮಲ್ಲಿಕಾ, ಕೃತಿಕುಮಾರಿಯು ಉದಯವಾದುದರಿಂದ ಅಗ್ರಜನಾದ ನಿನ್ನನ್ನು ಆದರದಿಂದ ಆಶ್ರಯಿಸಿದ್ದಾಳೆ....ಈ ರೀತಿ ಶ್ರೀ ಗುರುರಾಜರು ತನ್ನ ಯುಕ್ತಿಮಲ್ಲಿಕಾ ಗ್ರಂಥವನ್ನು ತನ್ನ ಪುತ್ರಿಯಂತೆ ಭಾವಿಸುತ್ತಿದ್ದಾರೆಂದು, ಆ ಗ್ರಂಥವು ನಮಗೆಲ್ಲರಿಗೂ ಜ್ಞಾನದಾನದಲ್ಲಿ ಮಾತೃಸ್ಥಾನೀಯವಾಗಿದ್ದು ಅದರ ರಕ್ಷಣೆಯು ನಮಗೆ ಅತ್ಯವಶ್ಯವಾಗಿರುತ್ತದೆ.

ಲೋಕದಲ್ಲಿ ಆಭಾಸಪಂಡಿತರಿಂದ ರಚಿತಗಳಾದ ಇತರ ಗ್ರಂಥಗಳಂತೆ ಈ ಯುಕ್ತಿಮಲ್ಲಿಕಾ ಗ್ರಂಥವಲ್ಲವೆಂದು ಶ್ರೀ ಗುರುರಾಜರು ದೃಷ್ಟಾಂತದಿಂದ ವಿವರಿಸುತ್ತಾರೆ.

ತುಲಯಾ ಮಲಯಾದ್ರ್ಯುತ್ಥಚಂದನೇನೇಂಧನಂ ಖಲಃ |
ಸಮಂ ಸಮಂತಾತ್ ಕುರುತಾತ್ ಗ್ರಂಥೌ ಗಂಧಂ ಕರೋತಿ ಕಃ ||

ಮಲಯಪರ್ವತದಲ್ಲಿ ಹುಟ್ಟಿದ ಗಂಧದ ಮರಗಳನ್ನು ಕಟ್ಟಿಗೆಗಾಗುವ ಬೇರೆ ಮರಗಳೊಡನೆ ಕಡಿದು ಕಟ್ಟಿಗೆಮಾಡಿ ತಕ್ಕಡಿಯಲ್ಲಿ ತೂಗುವಾಗ 'ಸರಿಯಾಗಿದೆ' ಎಂದು ಖಲರು ತಿಳಿದರೂ, ಮಲಯಪರ್ವತದಲ್ಲಿರುವ ಚಂದನವೃಕ್ಷದಲ್ಲಿರುವಂತೆ ಬೇರೆ ಕಟ್ಟಿಗೆಗಳಲ್ಲಿ ಗಂಧವನ್ನುಂಟುಮಾಡಲು ಸಾಧ್ಯವೇ ? ಅಸಾಧ್ಯವಷ್ಟೆ ! ಹಾಗೆ ವಾಕ್ಯರಚನಾ ಶ್ಲೋಕರಚನಾರೂಪವಾಗಿರುವ ಗ್ರಂಥಗಳೆಲ್ಲ ಒಂದೇ ರೀತಿಯೆಂದು ಅಜ್ಞನು ತಿಳಿದರೂ ಯುಕ್ತಿಮಲ್ಲಿಕಾ ಗ್ರಂಥದ ಸ್ವಾರಸ್ಯರೂಪವಾದ ಗಂಧವು ಇತರ ಗ್ರಂಥಗಳಿಗೆ ಹೇಗೆ ಬರಬೇಕು ? ನಿರ್ವಿಕಾರಬುದ್ಧಿಯ ಜಿಜ್ಞಾಸುಗಳು ಇತರ ಅನೇಕ ಗ್ರಂಥಗಳೊಡನೆ ಈ ಯುಕ್ತಿಮಲ್ಲಿಕೆಯನ್ನು ಹೋಲಿಸಿ ನೋಡಿದರೆ ಶ್ರೀ ಗುರುರಾಜರ ಈ 'ಇಂಧನಚಂದನ'ಗಳ ದೃಷ್ಟಾಂತದ ಉಕ್ತಿಯಲ್ಲಿ ಅತಿಶಯೋಕ್ತಿಯ ಲೇಶವೂ ಇಲ್ಲವೆಂಬುದು ಸುಸ್ಪಷ್ಟವಾಗುತ್ತದೆ.

ಈ ಗ್ರಂಥದ ಅಂತರಾಳದಲ್ಲಿ ತುಂಬಿರುವ ಅಸಂಖ್ಯ ಯುಕ್ತಿರತ್ನಗಳಲ್ಲಿ ಒಂದೊಂದನ್ನು ಎತ್ತಿ ಪರೀಕ್ಷಿಸಿದರೂ ಅದು ಅನನ್ಯಸಾಧಾರಣವೂ, ಅನರ್ಘ್ಯವೂ, ಅಪೂರ್ವಗುಣವುಳ್ಳದ್ದಾಗಿಯೂ ಕಾಣುತ್ತದೆ. ವಾದಿಗಳು ತಮ್ಮ ತಮ್ಮ ಮತಾಭಿಮತ ಪ್ರಮೇಯಗಳ ಸಿದ್ಧಿಗೋಸ್ಕರ ಪ್ರಮಾಣವಾಗಿ ಪರಿಗ್ರಹಿಸಿದ ವೇದವಾಕ್ಯಗಳಲ್ಲಿ ವಿರೋಧವಿರಲು ತಮಗೆ ಅನುಕೂಲವಾದ ವಾಕ್ಯಗಳು ತತ್ತ್ವಾವೇದಕಗಳೆಂದೂ, ಪ್ರತಿಕೂಲವಾದ ವಾಕ್ಯಗಳು ಅತತ್ತ್ವಾವೇದಕಗಳೆಂದೂ ವಿಭಾಗಿಸುವ ರೀತಿಯನ್ನು ಸರಿಯಲ್ಲವೆಂದು ದೃಷ್ಟಾಂತಪೂರ್ವಕವಾಗಿ ವಿವರಿಸುವ ಒಂದು ಉದಾಹರಣೆಯ ಕೌಶಲವನ್ನು ನೋಡಬಹುದು.

ಗೃಷ್ಟ್ಯೋರ್ಮಿಥೋ ವಿರೋಧೇ ಹಿ ಹತ್ವೈಕಾಮಪರಾಙ್ಮುಖೀಂ |
ವಿರೋಧಶಾಂತಿಂ ಕಃ ಕುರ್ಯಾದ್ವಿನಾ ಮ್ಲೇಂಛಕುಮಾರಕಾನ್ ||
ತೃಣಪಿಣ್ಯಾಕದಾನೇನ ಕೃತ್ವಾರ್ಥಾಂತರಲಾಲಸಾಂ |
ತತಃ ಪ್ರಚ್ಯಾವಯೇದೇಕಾಂ ಕ್ರುದ್ಧಾಪ್ಯನ್ಯಾಧ್ವನಾ ವ್ರಜೇತ್ ||
ಏವಂ ಶ್ರುತ್ಯೋರ್ವಿರೋಧೇಪಿ ಯಾ ವಾಗನ್ಯಾರ್ಥವರ್ತಿನೀ |
ತಾಂ ತದರ್ಥಪರಾಂ ಕೃತ್ವಾ ಮೋಚಯೇತ್ ಕಲಹಂ ತಯೋಃ ||
ಅತತ್ತ್ವಾವೇದಿಕಾತ್ವೇಕಾ ತತ್ತ್ವಸ್ಯಾವೇದಿಕಾ ಪರಾ |
ಇತ್ಯಾದ್ಯುಕ್ತಿಸ್ತ್ವಮಾನತ್ವಪ್ರಾಪ್ತ್ಯಾಸುತ್ಯಾಜನಂ ಶ್ರುತೇಃ || ....

ಎರಡು ದನಗಳು ಜಗಳಾಡುತ್ತಿರುವಾಗ ಒಂದನ್ನು ಕೊಂದು ಜಗಳ ನಿಲ್ಲಿಸುವುದನ್ನು ಮ್ಲೇಂಛರಲ್ಲದೆ ಮತ್ತಾರು ಮಾಡಿಯಾರು ! ಸಜ್ಜನರು ಒಂದಕ್ಕೆ ಹುಲ್ಲನ್ನೋ ಹಿಂಡಿಯನ್ನೋ ಕೊಟ್ಟು ಆ ಹಸುಗಳ ಜಗಳವನ್ನು ನಿವಾರಿಸುವರು. ಹಾಗೆಯೇ ವೇದವಾಕ್ಯಗಳಲ್ಲಿ ಭೇದವಾಕ್ಯ ಮತ್ತು ಐಕ್ಯವಾಕ್ಯಗಳಿಗೆ ಪರಸ್ಪರ ವಿರೋಧ ವಿರುವಾಗ ಭೇದವಾಕ್ಯವನ್ನು ಅತತ್ತ್ವಾವೇದಕವೆಂದು ಅದರ ಪ್ರಾಮಾಣ್ಯವೆಂಬ ಜೀವವನ್ನು ನಾಶಪಡಿಸದೆ ಅಭೇದವಾಕ್ಯಕ್ಕೆ ಸ್ಥಾನೈಕ್ಯ – ಮತ್ಯೈಕ್ಯಾದಿರೂಪ ದಿಂದ ಅರ್ಥಾಂತರವನ್ನು ಕೊಟ್ಟು ವಿರೋಧ ಪರಿಹರಿಸುವುದು ನ್ಯಾಯವು. ಅಮುಖ್ಯಾರ್ಥಗಳು ಸಾದೃಶ್ಯೈಕ್ಯ, ಸ್ಥಾನೈಕ್ಯ, ಮತ್ಯೈಕ್ಯ, ಸ್ವಾತಂತ್ರ್ಯೈಕ್ಯ, ವೈಶಿಷ್ಟ್ಯೈಕ್ಯ ಮತ್ತು ವ್ಯಾಪ್ತ್ಯೈಕ್ಯ ಇವು ಆರು ವಿಧ, ಅಮುಖ್ಯೈಕ್ಯಗಳಿಂದ ಐಕ್ಯ ವಾಕ್ಯವು ಸಾವಕಾಶವಾಗುವುದು.

ಮಹಾಮಹಿಮರಾದ ಶ್ರೀ ವಾದಿರಾಜ ಗುರುವರೇಣ್ಯರು ವೇದಾಂತದ ಸಕಲ ತಾತ್ತ್ವಿಕ ಪ್ರಮೇಯಗಳನ್ನು ತಮ್ಮ ಯುಕ್ತಿ ಚಮತ್ಕಾರಪೂರ್ಣವಾದ ಸಿದ್ಧ ಶೈಲಿಯಲ್ಲಿ ಪಂಡಿತರಿಗೆ, ಮನರಂಜನೆಯನ್ನು ಪಾಮರರಿಗೆ ಮನಸ್ಸಿಗೆ ನಾಟುವ ರೀತಿಯಲ್ಲಿ ಪ್ರತಿಪಾದಿಸಿ, ರಚಿಸಿರುವ ಈ ಯುಕ್ತಿಮಲ್ಲಿಕಾ ಗ್ರಂಥರತ್ನವು ಸಕಲ ಮಾಧ್ವಸಜ್ಜನರಿಗೆ ಆದರಣೀಯವೆಂಬುವುದರಲ್ಲಿ ಎರಡಭಿಪ್ರಾಯವಿಲ್ಲ. ಕನ್ನಡದಲ್ಲಿ ಹಲವಾರು ವೇದಾಂತಗ್ರಂಥಗಳನ್ನು ಭಾಷಾಂತರಿಸಿ ಈಗಾಗಲೇ ಜನಪ್ರಿಯ ರಾಗಿರುವ ಮಾಧ್ವಭೂಷಣ ಶ್ರೀ ಭೀಮರಾಯರು ಈಗ ಕರ್ನಾಟಕದ ಮಾಧ್ವ ಸಜ್ಜನರಿಗೆ ಈ ಯುಕ್ತಿಮಲ್ಲಿಕೆಯ ಸೌರಭವನ್ನು ಆಸ್ವಾದಿಸಲು ಅನುಕೂಲ ವಾಗುವಂತೆ ಈ ಅನುವಾದವನ್ನು ಬಿಡುಗಡೆಗೊಳಿಸಿದ್ದಾರೆ. ಈ ಮಹಾಕಾರ್ಯ ದಲ್ಲಿ ಅವರು ಯಶಸ್ವಿಯಾಗಿ ವಿಜಯಿಗಳಾಗಲೆಂದು ಹಾರೈಸುವದರೊಂದಿಗೆ ಈ ಪುಸ್ತಕದ ಲೇಖಕ – ಪ್ರಕಾಶಕರ ಆಯುರಾರೋಗ್ಯಾದ್ಯಭಿವೃದ್ಧಿಯನ್ನು ನಾವು ನಮ್ಮ ಆರಾಧ್ಯದೇವರಲ್ಲಿ ಪ್ರಾರ್ಥಿಸುತ್ತೇವೆ.

**ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರು**
ಸೋದೆ ವಾದಿರಾಜಮಠ, ಉಡುಪಿ

# INTRODUCTION

व्यासाय भवनाशाय श्रीशाय गुणराशये।
हृद्याय शुद्धविद्याय मध्वाय च नमो नमः ॥

I am happy to associate myself, by way of this small introduction, with the publication of the Kannada translation of Yuktimallika prepared by the elderly scholar Sri B. Bhima Rao of Davanagere. Normally one who writes an introduction is expected to be a senior scholar compared with the author of a learned work. In the present case, the position is reverse. I have been observing, right from my student days, the scholarly contributions of Sri B. Bhima Rao to Dvaita Vedanta, with admiration. He has been a pioneer in producing Dvaita literature in Kannada through the translation of important Dvaita works and preparations of treatises in Kannada. However, I accepted the suggestion to write this introduction, because it gives me an opportunity to give a brief outline of the great work i.e. Yuktimallika.

## I

Sri Vadirajatirtha the author of Yuktimallika is one of the great names in the field of Dvaita Vedanta. He was the sixteenth pontifical head of Sode Mutt—one of the eight Mutts established at Udupi by Sri Madhvacharya. He had a long life of 120 years and flourished between 1480 A.D. and 1600 A.D. He was a poet, a philosopher, a social organiser, a great debater, a

prolific writer, and to crown all this a saint of great mystic eminence. He hailed from the village Huvinakere near Kumbhasi in the Kundapur taluk of the South Kanara district in Karnataka. He was the son of Ramacharya and Gauri. His Purvasrama name was Varahacharya. He was born with the blessings of Sri Vagishatirtha and was ordained to Sanyasa by him at the age of eight. He studied under Vagishatirtha and Vidyanidhi tirtha a disciple of Vagishatirtha. According to one tradition he studied under the great Sri Vyasaraja also for some time. He travelled all over India and composed a poem Tirtha-prabandha that gives an account of the sacred places visited by him. The Nayakas of Keladi, the Jain Chieftans of Mudbidre and Karkal had great regard for him and made Grants to his Mutt. Arasappa Nayaka of Sode was his devotee and granted the village of Sode to his Mutt. Since then Sode in the North Kanara district near Sirsi has been the second head-quarter of this Mutt. Sri Vadiraja has established the Trivikrama temple at Sode which is reported to have been brought by him from North India being carried by his disciple Bhutaraja or Narayana Bhuta. The Tapovana area on the bank of river Shalmali near Sode has charming natural surroundings quite congenial for penance.

Sri Vadiraja tirtha admitted koteswara brahmins to Dvaita faith. He also accepted the goldsmiths of South Kanara as his disciples. He established a Sivalinga i.e. Manjunatha at Dharmasthala, and a thousand Sivalingas at Kumaradhara. At the Krishna Mutt at Udupi he introduced several measures of organisational improvements. It was he who fixed the duration of paryaya as two years. Formerly it was one and half

months for each Mutt and all eight mutts used to have a turn every year. Hayagriva form of Lord Vishnu was the upasyadevata of Sri Vadiraja. Lord Hayagriva used to receive naivedya from him personally everyday. On two occasions this was revealed to some deserving souls. A learned brahmin who had the misfortune of becoming a bhuta or goblin was brought under his control by Sri Vadiraja. He served Sri Vadiraja faithfully and got out of that unfortunate state. The ancestor of the writer of this introduction Sri Anandabhattaraka Pandurangi was especially blessed by Sri Vadiraja tirtha by deputing him to debate with an advaita scholar. He blessed him to get a scholarly son who was named as Gururaja as a mark of respect to Sri Vadirajatirtha. A full account of the great deeds of Sri Vadiraja is found in two biographical poems i e. Sri Vadiraja Charitamrita and Sri Vadiraja vritta Sangraha. Svapna vrindavanakhyana gives the information regarding his being a member of Rijuguna i.e. latavya who would attain Vayupadavi next to the present Vayu.

## II

Sri Vadiraja is a prolific writer. He has nearly sixty Sanskrit works to his credit. Under Sutra-prasthana he has two commentaries i.e. one on Tatvaprakasika another on Sudha ; both are called Gurvarthadipika.

---

पांडुरङ्ग्यन्वयोद्भूतमानन्दाख्यं द्विजोत्तमम् ।
न्ययूयुजत्तज्जयाय ददौ मन्त्राक्षतान् गुरुः ।
गुरूत्तमानुग्रहेण पुत्रं प्राप्य कृती मुदा ।
गुरुराजाभिधानं तं चकारानन्दभट्टकः ॥

Vadirajacharitamrita(V.25,28)

There is a short commentary on Ishavasyopanishad. A commentary on Gita Bhashya is also reported. His Vivaranavrana is a criticism of Panchapadika vivarana of Prakashatman. His commentaries on Khandanatraya are known as Upanyasaratnamala. Pashandamatakhandana is a criticism of Jainism and Buddhism. Yuktimallika is his magnum opus. The contents and the importance of this work will be fully discussed below. Nyayaratnavali and Madhvavagvajravalli are the two treatises that critically review the advaita doctrines. Lakshalankara or Lakshabharana is a unique commentary on Mahabharata. It is so called because it is a commentary upon a work i.e. Mahabharata that has a lakh of verses. This commentary though very brief, interprets such key words and key verses that have a philosophical significance. The portions on Sanatsujatiya and Vishnusahasranama are in detail. Bhavaprakasika is a commentary on Mahabharatatatparyanirnaya. Many crucial points made in Tatparyanirnaya are clarified in this commentary. In his work Srutitatvaprakasika he discusses the interpretations of Panchamahavakyas or five great sruti-passages that are supposed to support advaita, and points out how the contention of advaitins is baseless. In a small theological work chakramimansa the practice of taptamudra is defended. He mentions that it is not only practised by the followers of Madhvamata but also by the followers of Ramanuja, Nimbarka, Vishnu Swamin and even a section of Advaitins. (Probably Bhagavata-Sampradaya section) Haribhaktikalpalata discusses vedapaurusheyatva. Upanyasaratnamala different from the one mentioned above deals with the gradation of souls. Rukminishavijaya is a Mahakavya dealing with the same theme as of

Shishupalavadha of Magha. This was composed when Sri Vadiraja camped at Poona. On seeing this poem the Peshwas of Poona honoured Sri Vadiraja for composing a poem that excelled Magha's poem. Tirthaprabandha is already mentioned. Sarasabharathi vilasa is a short poem describing parasuklatraya. Sri Vadiraja has composed a large number of stotras in Sanskrit. Among these Dashavatarastotra in Asvadhati metre is very popular.

Apart from his Sanskrit works he has composed devaranamas in Kannada with the ankita of Hayavadana. Vaikunthavarnane, Haribhaktisara, Svapnapada, Gundakriya, Keechakavadha etc., are some of his devaranama collections. Besides there are good many individual devaranamas. He has rendered Bhagavadgita, select episodes of Mahabharata, Ramayana and Bhagavata into Kannada. Thus he has enriched Dvaita literature both in Sanskrit and Kannada. He has written both for scholars as well as common man. His works have scholastic appeal as well as devotional appeal. We find in him a scholar, a poet, and a great saint of mystic eminence.

## III

We will now proceed to give a brief outline of Yuktimallika.

Yuktimallika is a large work of 5379 verses arranged in five chapters called Saurabhas. These chapters are named as Guna, Shuddhi, Bheda, Visva and Phala respectively. The first chapter Guna Saurabha describes the Gunaparipurnatva of Paramatma. The second describes nirdoshatva. The third establishes Panchabhedas. The fourth gives an exposition of

Jagatsatyatva. The fifth chapter i.e. Phalasaurbha deals with Sadhana and Phala. Thus the plan of the work is same as that of Brahmasutras. The four chapters of Brahmasutras deal with Guna-paripurnatva, Nirdoshatva, Sadhana and Phala respectively and the same plan is followed here in chapters 1, 2 and 5. The third and fourth chapters re-enforce the two important doctrines i.e. Bheda and Jagatsatyatva that are also discussed in Several sutras. Thus Yuktimallika is an exposition of Brahmasutras following Bhashya, Anuvyakhyana, Tatvaprakasika and Sudha. The major points made in these source-books are presented in Yuktimallika in a discourse form with very convincing and appealing illustrations. In the course of this exposition, the major Upanishadic passages dealing with Vishnusarvottamatva, Jagat-satyatva, Bheda, Jivasvarupa, Moksha-svarupa etc. are quoted and their purport is explained following Upanishad-Bhashya, Tatvanirnaya and Teekacharya's exposition of these passages in several places. Thus Yuktimallika also contains illuminating discourses on Upanishads. An exposition of all major Upanishadic passages is deliberately incorporated in Yuktimallika so as to give a correct picture of the purport of Upanishads. Key passages of Bhagavata and other Puranas that require special treatment are also included in Yuktimallika. Dialectical discussions on certain concepts such as Ajnana, Bheda etc., are presented with skilful illustrations. Vedapaurusheyatva, Svatahpramanya etc. problems connected with epistemology have found their due place. Jivasvarupa, Jivataratamya, Muktasvarupa, etc. theological matters are elaborated. The doctrines of other Darsana such as Charvaka, Jaina, Buddha etc. are critically reviewed. The relative

position of Brahma, Vishnu and Mahesvara is made clear and the arrangement of Puranas as sattvika, rajasa and tamasa is pointed out. Vishnusarvottamatva and Nirdoshatva are explained by clarifying certain apparent drawbacks mentioned with reference to the avataras of Vishnu in Puranas. Thus, no area of philosophy and religion is left untouched. In a way Yuktimallika is an encyclopedia of Dvaita Philosophy and religion. It is a critical digest of the entire sacred literature and presents a comprehensive picture of the doctrines of Dvaita Philosophy and religion as detailed in the works of Sri Madhvacharya and Teekacharya in the form of discourses with effective arguments and illustrations. The sharpness of the logic of Sri Vadiraja tirtha pierces the heart while the poetry of his illustrations moves the head in delight.

Right at the commencement of his Yuktimallika he points out how Sarvajivaikyavada, Nirakaravada, Nirgunavada, Sarvamithyatvavada etc., are unhelpful for the uplift of mankind. Such views are continuously circulated and it is sickening the mankind, and therefore, he says, he has resorted to the exposition of Tatvavada. He makes it clear that his approach is not dogmatic or prejudiced. He has no likes or dislikes in the matter and he will be purely guided by the reasons in the course of his exposition in Yuktimallika.

Before he proceeds to elaborate Gunaparipurnatva of Paramatman which is the main theme of the first chapter, he takes up the question of Vedapaurusheyatva. Before one elaborates Prameyas, one has to naturally

---

न स्नेहान्न च विस्नेहाद्युक्त्याकृष्टेन केवलम् ।
यतः कृतासि तत्तर्करसिकानां मुदे भव ॥

settle the nature and scope of Pramanas. Among the Pramanas Vedas constitute the most important so far as the atindriya matters are concerned. Therefore, infallibility of Vedas has to be established. This depends upon two factors i.e Vedas being apaurusheya and Svatahpramana. Therefore, these two aspects are fully discussed and established. According to Dvaita tradition Vedas are revealed by Lord Hayagriva. These are recited by Durga at the commencement of first creation. Lord Hayagriva teaches Chaturmuka Brahma first and then the tradition of transmitting Vedas is continued. The Vedas are revealed exactly in the same order in which these are found now. The sequence is the sequence of revelation but not of any arrangement caused by anyone. The Mimamsakas also consider Vedas as eternal. But there is one important difference. They have no Isvara to reveal while it is revealed by the Lord according to Dvaita stand.

After discussing vedapaurusheyatva, the doctrines of Charvakas, Jains, and Buddhists are criticised. Charvakas oppose the very concept of self or atman. The question of the efforts for the uplift or liberation of atman will arise only if there is an atman. Therefore, Charvaka's views have to be examined before one undertakes any philosophical enquiry. The two major

---

यस्यास्ति पुस्तकं हस्ते हयास्यस्य विधेर्गुरोः ।
स च वक्ता (1.56)
आदिसर्गेऽप्युपाध्यायः पुत्रेऽध्येतरि केशवः ।
न कर्ता (1.53)
दुर्गाऽऽस्याद् प्राग्विनिर्गता (1.55)

contentions of Charvaka viz., there is no other pramana other than pratyaksha, and there is no self beyond body are rebutted by pointing out that in so far as Charvaka also employs words to communicate his theories, and advances arguments to establish them he has to accept shabda and anumana as Pramanas; No consciousness can arise by mere combination of different elements prithvi etc., into an organic system since no constituent member has consciousness as its property. Therefore his contention that consciousness is also a property of the body is not tenable.

After rebutting Charvakas, Sri Vadiraja gives an exposition of the nature of Jiva. Jiva is of the nature of Sukha and Jnana. He is sakara and nitya. He possesses Sakshindriyas; he also possesses hands, feet etc., limbs that are jyotirupa or chidrupa. He has kartritva and bhoktritva. In short whatever apparatus is observed at sthula sarira they are all found in chidrupa as a part of Jiva-svarupa. This enables Jiva to function in mukti and enjoy the bliss of liberated state. This digression on the discussion of the nature of Jiva while criticising charvaka's views, Sri Vadiraja

---

(i) त्वद्वाक्यार्थोऽस्ति चेन्मानमागमोऽपि बलाद् भवेत् । (1.137)

प्रत्यक्षस्यैव मानत्वे युक्तिश्चेत् कथ्यते त्वया ।
अनुमानं तदा मानं (1.144)

(ii) ज्ञानं तु पञ्चभूतात्म जडवर्गे न कुत्रचित् ।
अतो जडस्वभावो न तद्योगेऽपि जडे कथम् ॥ (1.162)

(iii) सुखरूपाश्च ते सर्वे ज्ञानरूपाश्च सर्वदा ।
अनादिनित्याः सत्याश्च चिद्रूपावयवा यतः ॥ (1.174)

D

defends, with an apt illustration. Just as overflowing of milk while it is being heated is spontaneous, similarly spontaneous expression of thoughts on a connected subject is natural in a discourse. It need not be taken as digression.

Just as charvakas question the very concept of atman and obstruct philosophical enquiry, the Jains by their excessive and mechanical emphasis on ahimsa ridicule the very basis of the institution of Sacrifice and rituals. They go to the extent of rediculing the use of shankha, krishnajina etc. This may raise doubts in the minds of the pious people using these sacred articles. Therefore, Sri Vadiraja points out the impracticability of mechanical observation of ahimsa by quoting their own practices such as using peacock feathers, undertaking constructions of Jain temples involving the killing of underground creatures etc. This is not so much intended to ridicule their religious practices but it is intended to show that the religious practices should not be looked from an ordinary point of view. Short-sighted religious leaders have always tried to pick holes in other religions and no devotee of any religion should be misled by such criticism.

Sri Vadiraja, then examines the Svabhavavada of Buddhists. According to this view, no God is necessary to create, sustain, and regulate this world. Things

---

(i) क्षीरस्योत्सेचनं को वा निरुणद्ध्याज्ञया जनः । (1.210)

(ii) हिंसादोषेण योक्तस्य यज्ञावज्ञा च ते कथम् ।
जिनमन्दिरनिर्माणे तद्यात्रायां च कोटिशः ।
भूशोधनाद्यैः पादघातैः हिंसास्ते मखवन्न किम् । (1.241)
बर्हहस्तस्य या शङ्खे गर्हा सापि न शोभते । (1.242)

ಶಬ್ದಸ್ತು—ಶಬ್ದವಾದರೂ, ವ್ಯವಧಾನಸ್ಯ—(ಮನಸ್ಸಿನ) ಅನ್ಯಚಿಂತನೆಯ, ಉಚ್ಛಿತ್ತ್ಯೈಕರ್ಣೇ—ಪರಿಹಾರವೆಂಬ (ಉಚ್ಛಿತ್ತಿ—ನಾಶ, ಪರಿಹಾರ) ಒಂದೇ ಖಣ ದಲ್ಲಿ, ನಿಪಾತಿತಃ—ಹಾಕಲ್ಪಟ್ಟಿತು. (ಈ ಒಂದು ಸಹಾಯ ಮಾತ್ರ ಅದರಿಂದ ಆಯಿತು – ವಸ್ತುದರ್ಶನವಲ್ಲ) ; ಕರಣಸಾಮರ್ಥ್ಯಾತ್ – ಸಹಾಯ ಸಾಮರ್ಥ್ಯ ವುಳ್ಳದ್ದರಿಂದ, ಶಾಬ್ದೀಂ – ಶಬ್ದರೂಪದ, ತ್ವಮಾಕಾರಾಂ ಧಿಯಂ – ನೀನೆಂಬ ಆಕಾರದ (ರೂಪದ) ಮನಸ್ಸನ್ನು, ದಿಶೇತ್—ತೋರಿಸುತ್ತದೆ ; ತತಃ—ಆದ್ದರಿಂದ, ಸಮಾಹಿತಮನಾಃ—ಸಾವಧಾನಮನಸ್ಸುಳ್ಳವನು, ಸ್ವಯಂ—ತನ್ನನ್ನು, ಅಹಂ ಇತಿ ಪಶ್ಯೇತ್—ನಾನೆಂದು ತಿಳಿಯುತ್ತಾನೆ ; ಅಹಂತ್ವೋಲ್ಲೇಖಿನೀ—ನಾನೆಂದು ನಿರೂಪಿ ಸುವ, ಧೀಃ—ಜ್ಞಾನವು, ಶಬ್ದಾಭಾವೇ – ಅಹಂ ಎಂಬ ಶಬ್ದವಿಲ್ಲದಿರುವಾಗ, ಮನಸಾ ಏವ—ಮನಸ್ಸಿನಿಂದಲೇ, ಹಿ—ಎಂಬುದು ಸ್ಪಷ್ಟವು ; ನಿಮಿತ್ತಾಂತರತಃ— ಬೇರೆ ಕಾರಣದಿಂದ, ಪ್ರತಿಬಂಧನಿರಾಸೇ ಕೃತೇ ಹಿ—(ದಾಹಕಾರ್ಯದ) ಪ್ರತಿಬಂಧವು (ಅಡ್ಡಿಯು) ಪರಿಹರಿಸಲ್ಪಡುತ್ತಿರಲು (ಪ್ರತಿಬಂಧವಿಲ್ಲದಿದ್ದರಷ್ಟೆ), ದಹನಾತ್— ಅಗ್ನಿಯಿಂದ, ದಾಹ್ಯಸ್ಯ—ಕಾಷ್ಠಾದಿ ದಹಿಸಲ್ಪಡುವ ವಸ್ತುವಿನ, ದಾಹಃ— ದಹನವು (ಸುಡುವಿಕೆಯು), ಸ್ಯಾತ್—ಆಗುತ್ತದೆ, ಅನ್ಯತಃ—ಬೇರೆ ಯಾವುದರಿಂದ, ಕ್ವಚಿತ್ ನ—ಎಲ್ಲಿಯೂ ಆಗುವುದಿಲ್ಲ.

---

ಬಾಹ್ಯೇಂದ್ರಿಯಗಳು ಉಪರತವಾಗಿರುವಾಗ (ಅಸಂಪ್ರಜ್ಞಾತ ಸಮಾಧಿಯಲ್ಲಿರುವ ಯೋಗಿಗೆ) ಶಬ್ದಶ್ರವಣಕ್ಕೆ ಅವಕಾಶವೇ ಇಲ್ಲವಷ್ಟೆ (೩೭). ಶಬ್ದ ಶ್ರವಣವು ಮನಸ್ಸಿನ ವಿಚ್ಛಿತ್ತಿಯನ್ನು ಕಿತ್ತೊಗೆಯುವ (ಪರಿಹರಿಸುವ) ಏಕಮಾತ್ರ ಕಾರ್ಯ ವುಳ್ಳದ್ದು; ಕಾರ್ಯಸಾಧನ ಶಕ್ತಿಯುಳ್ಳದ್ದಾದುದರಿಂದ, ಶಾಬ್ದಜ್ಞಾನವು 'ನೀನೆಂಬ ಆಕಾರದ ಜ್ಞಾನ'ವನ್ನುಂಟುಮಾಡುತ್ತದೆ ; ಆಗ ಸಮಾಹಿತಮನಸ್ಕುಳ್ಳವನಾಗಿ, 'ನೀನೆಂಬ' ಶಬ್ದದಿಂದ ಚಿತ್ರಿಸಲ್ಪಡುವುದಕ್ಕೆ ಅವಶ್ಯವೆಂಬ ಶಬ್ದಪ್ರಯೋಗವಿಲ್ಲ ದಿದ್ದರೂ ಮನಸ್ಸಿನಿಂದಲೇ (ತದಭಿಮುಖವಾದ ಸಾಕ್ಷಿಯಿಂದ) 'ನಾನೇ ದಶಮ' ನೆಂದು ತಿಳಿಯುತ್ತಾನೆ ; ಈ ಜ್ಞಾನವನ್ನು ಪ್ರತಿಬಂಧಿಸುವ ಚಿತ್ತವಿಕ್ಷೇಪವು ಅನ್ಯ ನಿಮಿತ್ತದಿಂದ (ಶಬ್ದ ಶ್ರವಣದಿಂದ) ಪರಿಹೃತವಾಗಿ, ಜ್ಞಾನವು ಲಭಿಸುತ್ತದೆ ; ನಿಮಿತ್ತಾಂತರದಿಂದ ದಹನಶಕ್ತಿಯ (ಅಗ್ನಿಯ ದಾಹಕಶಕ್ತಿಯ) ಪ್ರತಿಬಂಧವು ಪರಿಹೃತವಾದರೆ ಮಾತ್ರ, ದಾಹ್ಯವಾದ ಪದಾರ್ಥದ ದಹನವು ಸಂಭವಿಸುತ್ತದೆ. ಪ್ರತಿಬಂಧವಿರುವ ಮತ್ತೆಲ್ಲಿಯೂ ದಹನಕಾರ್ಯವು ನಡೆಯುವುದಿಲ್ಲವಷ್ಟೆ (೩೮–೪೦)

**ಪ್ರತಿಬಂಧನಿರಾಸೇನ ತಸ್ಯ ಸ್ಯಾಚ್ಚರಿತಾರ್ಥತಾ ।**
**ಸಹಕಾರೀ ಭವೇದ್ವಾಸೌ ಸ ಏವ ನ ಹಿ ದಾಹಕಃ ॥ ೪೧ ॥**

ಪ್ರತಿಬಂಧನಿರಾಸೇನ – ಪ್ರತಿಬಂಧವನ್ನು (ಅಡ್ಡಿಯನ್ನು) ತೆಗೆದುಹಾಕು (ಪರಿಹರಿಸು) ವುದರಿಂದಲೇ, ತಸ್ಯ – ಆ ನಿಮಿತ್ತದ, ಚರಿತಾರ್ಥತಾ–ಮುಖ್ಯ ಪ್ರಯೋಜನವು, ಸ್ಯಾತ್–ಆಗಿರುತ್ತದೆ; ವಾ–ಅಥವಾ, ಅಸೌ–ಈ ಪ್ರತಿಬಂಧ ನಿವರ್ತಕಕಾರಣವಾದುದು, ಸಹಕಾರೀ–(ದಹನ) ಸಹಕಾರಿಯು, ಭವೇತ್–ಆಗುತ್ತದೆ; ಸ ಏವ–ಅದೇ, ದಾಹಕಃ–ದಾಹಕವು (ದಹಿಸುವುದು), ನ ಹಿ–ಅಲ್ಲವಷ್ಟೆ (ಅಗ್ನಿಯೇ ದಾಹಕವು).

**ಅಹಂ ಶಬ್ದಾಪ್ರಯೋಗೇಽಪಿ ಹ್ಯಹಮಾಕಾರಧೀತ್ವತಃ ।**
**ದಶಮೋಽಹಮಿತಿ ಜ್ಞಾನಂ ನ ಶಾಬ್ದಂ ಸ್ವಸ್ಥಧೀರ್ಯಥಾ ।**
**ಪರಾಕರೋತಿ ತೇ ಪಕ್ಷಮನುಮಾ ನ ಮಯೀದೃಶಂ ॥ ೪೨ ॥**

ಪರನ ದೃಷ್ಟಾಂತದಲ್ಲಿ ಸಹ ಶಬ್ದಶ್ರವಣವು ಜ್ಞಾನಕರಣವಲ್ಲೆಂಬಲ್ಲಿ ಅನುಮಾನವನ್ನು ಹೇಳುತ್ತಾರೆ:—

ಅಹಂಶಬ್ದಾಪ್ರಯೋಗೇಽಪಿ – ಅಹಂಶಬ್ದದ ಪ್ರಯೋಗವಿಲ್ಲದಿದ್ದರೂ, ಹಿ–ಯಾವ ಕಾರಣದಿಂದ, ಅಹಮಾಕಾರಧೀತ್ವತಃ–(ಅಹಂ) ನಾನೆಂಬ ಆಕಾರದ ಜ್ಞಾನವಿರುವುದರಿಂದ, ದಶಮೋಽಹಂ–ನಾನು ಹತ್ತನೆಯವನು, ಇತಿ ಜ್ಞಾನಂ–ಎಂಬ ಜ್ಞಾನವು, ಶಾಬ್ದಂ ನ – ಶಬ್ದಜನ್ಯವಾದುದಲ್ಲ; ಯಥಾ – ಹೇಗೆಂದರೆ, ಸ್ವಸ್ಥಧೀಃ–ಸ್ವಸ್ಥಚಿತ್ತನಂತೆ (ಚಿತ್ತವಿಕ್ಷೇಪವಿಲ್ಲದ ಸಮಾಹಿತನಂತೆ); (ಎಂಬ) ಅನುಮಾ – ಅನುಮಾನವು; ತೇ–ನಿನ್ನ, ಪಕ್ಷಂ – ಪಕ್ಷವನ್ನು (ವಾದವನ್ನು), ಪರಾಕರೋತಿ – ನಿರಾಕರಿಸುತ್ತದೆ; ಮಯಿ – ನನ್ನಲ್ಲಿ (ನನ್ನ ವಾದದಲ್ಲಿ), ಈದೃಶಂ ನ–ಹೀಗಿರುವುದಿಲ್ಲ ('ಅಹಂ ದಶಮಃ' ಎಂಬ ಜ್ಞಾನವು, ಶಬ್ದಶ್ರವಣ

---

ಪ್ರತಿಬಂಧಕ ನಿವರ್ತಕವಾದ ನಿಮಿತ್ತ ಚರಿತಾರ್ಥವು (ಮುಖ್ಯ ಪ್ರಯೋಜನವು) ಪ್ರತಿಬಂಧಕ ಪರಿಹಾರವೇ ಆಗಿದೆ; ಅಥವಾ ಆ ನಿಮಿತ್ತವು ಮುಖ್ಯ ಕಾರ್ಯದ ಸಹಕಾರಿಯಾಗುತ್ತದೆ; ಅದೇ ದಾಹಕವಲ್ಲ—ಅಗ್ನಿಯೇ ದಾಹಕವು (೪೧). ಅಹಂಶಬ್ದದ ಪ್ರಯೋಗವಿಲ್ಲದಿದ್ದರೂ, ಅಹಮಾಕಾರದ ಜ್ಞಾನವು ಇದ್ದೇ ಇರುತ್ತದೆ; ದಶಮನು ನಾನೇ ಎಂಬ ಜ್ಞಾನವು, ಶಬ್ದದಿಂದ (ದಶಮಸ್ತ್ವಮಸಿ

ಜನ್ಯವಲ್ಲವೆಂಬ ವಾದವನ್ನು ನಿರಾಕರಿಸುವ ಅನುಮಾನವನ್ನು ಹೇಳಲು ಬರುವುದಿಲ್ಲ).

**ದೃಷ್ಟಿಯೋಗ್ಯೇ ಪ್ರಯುಕ್ತೋಽಪಿ ಶಬ್ದೋ ಯದ್ಯಪರೋಕ್ಷಕೃತ್ ।**
**ಗೃಹೇ ಘಟೋಽಸ್ತೀತ್ಯುಕ್ತೇಽಪಿ ತರ್ಹಿ ಸ್ಯಾದಪರೋಕ್ಷಧೀಃ ॥ ೪೩ ॥**

ದೃಷ್ಟಿಯೋಗ್ಯವಸ್ತುವಿನಲ್ಲಿ, ಶಬ್ದಪ್ರಯೋಗಮಾತ್ರದಿಂದ, ವಸ್ತುಪ್ರತ್ಯಕ್ಷ ವಾಗುವುದಿಲ್ಲವೆಂಬಲ್ಲಿ ಬೇರೆ ದೃಷ್ಟಾಂತವನ್ನು ಹೇಳುತ್ತಾರೆ:—

ದೃಷ್ಟಿಯೋಗ್ಯೇ – ದೃಷ್ಟಿಯೋಗ್ಯವಾದ (ಕಾಣಲ್ಪಡಲು ಅರ್ಹವಾದ) ವಸ್ತುವಿನಲ್ಲಿ, ಪ್ರಯುಕ್ತಃ ಅಪಿ – ಪ್ರಯೋಗಿಸಲ್ಪಟ್ಟರೂ, ಶಬ್ದಃ – ಶಬ್ದವು, ಯದಿ – ಒಂದುಪಕ್ಷ, ಅಪರೋಕ್ಷಕೃತ್ – ಪ್ರತ್ಯಕ್ಷವನ್ನುಂಟುಮಾಡುವುದೆಂದರೆ (ವಸ್ತುದರ್ಶನವನ್ನು ದೊರಕಿಸುತ್ತದೆಂದರೆ), ತರ್ಹಿ–ಆಗ, ಗೃಹೇ–ಮನೆಯಲ್ಲಿ, ಘಟಃ–ಘಟವು, ಅಸ್ತಿ–ಇರುತ್ತದೆ, ಇತಿ ಉಕ್ತೇ ಅಪಿ–ಎಂದು ಹೇಳಿದರೂ, ಅಪರೋಕ್ಷಧೀಃ–(ಘಟದ) ಸಾಕ್ಷಾದ್ದರ್ಶನವು (ಪ್ರತ್ಯಕ್ಷಜ್ಞಾನವು), ಸ್ಯಾತ್–ಉಂಟಾಗಲಿ (ಹಾಗೆಲ್ಲಿಯೂ ಕಂಡಿಲ್ಲ); (ಆದ್ದರಿಂದ ದೃಷ್ಟಿಯೋಗ್ಯವೆಂಬ ಕಾರಣ ದಿಂದ, ಒಂದು ವಸ್ತುವಿನಲ್ಲಿ ಪ್ರಯೋಗಿಸಲಾದ ಶಬ್ದಶ್ರವಣವು, ವಸ್ತುವಿನ ಪ್ರತ್ಯಕ್ಷಜ್ಞಾನವನ್ನು ಉಂಟುಮಾಡುವುದಿಲ್ಲ).

**ದೃಶ್ಯಮಾನೇ ಪ್ರಯುಕ್ತಸ್ತು ಶಬ್ದೋ ಯದ್ಯಪರೋಕ್ಷಕೃತ್ ।**
**ಅಸಮಾಹಿತಚಿತ್ತಸ್ಯ ಕಥಂ ತರ್ಹ್ಯಪರೋಕ್ಷಧೀಃ ॥ ೪೪ ॥**

---

ಎಂಬುದರ ಶ್ರವಣದಿಂದ) ಹುಟ್ಟಿದುದಲ್ಲ; ಸಮಾಹಿತ ಮನಸ್ಕನಂತೆ, ಎಂಬ ದೃಷ್ಟಾಂತ ಈ ಅನುಮಾನ ಸಾಧಕವಾಗುತ್ತದೆ; ಆದ್ದರಿಂದ ಎಂಬ ಜ್ಞಾನವು ಶಬ್ದಶ್ರವಣ ಜನ್ಯವೆಂಬ ನಿನ್ನ ವಾದವು ನಿರಾಕೃತವಾಗುತ್ತದೆ; ನನ್ನ ವಾದವನ್ನು (ಶಬ್ದಶ್ರವಣವಲ್ಲೆಂಬ ವಾದವನ್ನು ನಿರಾಕರಿಸುವ ಅನುಮಾನವನ್ನು ಹೇಳಲು, ಬರುವುದಿಲ್ಲ (೪೨). ಶಬ್ದಶ್ರವಣ ಮಾತ್ರವು ವಸ್ತುದರ್ಶನ (ಸಾಕ್ಷಾತ್ಕಾರ) ಸಾಧನವಲ್ಲ; ವಸ್ತುವು, ಯದ್ಯಪಿ ದೃಷ್ಟಿಗೋಚರವಾಗುವ ಯೋಗ್ಯತೆ (ಅರ್ಹತೆ) ಯುಳ್ಳದ್ದಾಗಿರಬಹುದು; ಮನೆಯಲ್ಲಿ ಘಟವಿದೆ ಎಂದ ಮಾತನ್ನು ಕೇಳಿ, ಘಟ ಪ್ರತ್ಯಕ್ಷವಾಗುವುದುಂಟೇ? (ಇಲ್ಲ) (೪೩). ದೃಶ್ಯಮಾನ ವಸ್ತುವಿನಲ್ಲಿ

**ನ ಹ್ಯಸೌ ವಿಸ್ಮೃತಸ್ವಾತ್ಮಾ ಪುರಾ ಶಬ್ದಪ್ರಯೋಗತಃ ।**
**ಆತ್ಮಾನಂ ಮನಸಾ ಪಶ್ಯೇದ್ವ್ಯಾಕ್ಷೇಪಾಕ್ಷಿಪ್ತಚೇತನಃ ॥ ೪೫ ॥**

ದೃಶ್ಯಮಾನೇ – ದೃಷ್ಟಿಯೋಗ್ಯಪದಾರ್ಥದಲ್ಲಿ, ಪ್ರಯುಕ್ತಃ–ಪ್ರಯೋಗಿಸಲಾದ, ಶಬ್ದಃ ತು–ಶಬ್ದವೇ, ಯದಿ ಅಪರೋಕ್ಷಕೃತ್–ಸಾಕ್ಷಾತ್ಕಾರ (ಜ್ಞಾನ) ವನ್ನುಂಟುಮಾಡುವುದಾದರೆ, ತರ್ಹಿ–ಆಗ, ಅಸಮಾಹಿತ ಚಿತ್ತಸ್ಯ–ಚಿತ್ತವಿಕ್ಷೇಪವುಳ್ಳವನಿಗೆ, ಕಥಂ–ಹೇಗೆ, ಅಪರೋಕ್ಷಧೀಃ–ಪ್ರತ್ಯಕ್ಷಜ್ಞಾನವು (ಉಂಟಾಗುತ್ತದೆ?-ಶಕ್ಯವಿಲ್ಲ); ಅಸೌ–ಈತನು, ಪುರಾ–ಎದುರಿನಲ್ಲಿಯೇ, ಶಬ್ದಪ್ರಯೋಗತಃ–ಶಬ್ದವನ್ನು ಪ್ರಯೋಗಿಸುವುದರಿಂದ, ವಿಸ್ಮೃತಸ್ವಾತ್ಮಾ– ವಿಸ್ಮರಣೆಯ ಮನಸ್ಸಿನವನು (ಮರೆಯುವ ಚಿತ್ತವುಳ್ಳವನು), ನ ಹಿ–ಅಲ್ಲವಷ್ಟೆ (ಶಬ್ದಶ್ರವಣವಾದರೂ, ವಸ್ತುಪ್ರತ್ಯಕ್ಷವಾಗುವುದಿಲ್ಲ); ವ್ಯಾಕ್ಷೇಪಾಕ್ಷಿಪ್ತ ಚೇತನಃ–(ಆಕ್ಷಿಪ್ತ-ನಿರಸ್ತವಾದ) ಸಮಾಹಿತವಾದ ಚಿತ್ತವುಳ್ಳವನು (ವಿಕ್ಷಿಪ್ತವಾದ ಮನೋವ್ಯಾಪಾರವಿಲ್ಲದವನು), ಆತ್ಮಾನಂ–ಪರಮಾತ್ಮನನ್ನು ಮನಸಾ–ಮನಸ್ಸಿನಿಂದಲೇ, ಪಶ್ಯೇತ್–ಕಾಣುತ್ತಾನೆ (ವಸ್ತುದರ್ಶನವನ್ನು ಹೊಂದುತ್ತಾನೆ) (ಈ ವಿಧಪುರುಷನಿಗೆ 'ದಶಮಸ್ತ್ವಮಸಿ' ಎಂಬ ವಾಕ್ಯವೂ, ದೃಶ್ಯಮಾನವಸ್ತುವಿನಲ್ಲಿ ಪ್ರಯೋಗಿಸಲ್ಪಟ್ಟ ವಾಕ್ಯವಲ್ಲವಾದ್ದರಿಂದ, ಪರನ್ಯಾಯದಂತೆಯೇ ವಸ್ತುದರ್ಶನ ಜನಕವಲ್ಲ; ಹಿಂದೆ ದಾರ್ಷ್ಟಾಂತಿಕದಲ್ಲಿ ಶಬ್ದಪ್ರಯೋಗಮಾಡುವಾಗ ದೃಶ್ಯಮಾನತ್ವದ ಅಭಾವವು ಹೇಳಲಾಗಿತ್ತು; ಈಗ ದೃಷ್ಟಾಂತದಲ್ಲಿ ಸಹ ಶಬ್ದಪ್ರಯೋಗವು ಸಾಕ್ಷಾತ್ಕಾರಜನಕವಲ್ಲೆಂದು ಉಕ್ತವಾಯಿತು).

---

ಪ್ರಯೋಗಿಸಲ್ಪಟ್ಟ ಶಬ್ದಶ್ರವಣದಿಂದ ವಸ್ತುದರ್ಶನವಾಗುವುದಾಗಿದ್ದರೆ, ಅನ್ಯಾಸಕ್ತವಾದ ಚಿತ್ತವುಳ್ಳವನಿಗೆ, ಆ ಶಬ್ದಶ್ರವಣದಿಂದ ವಸ್ತುದರ್ಶನವು ಏಕಾಗುವುದಿಲ್ಲ? ಆ ಪುರುಷನು (ಶಬ್ದಶ್ರವಣ ಮಾಡುವವನು), ಮರೆಯುವ ಸ್ವಭಾವದವನಲ್ಲದೇ, ಅವನ ಎದುರಿನಲ್ಲಿರುವ ವಸ್ತುವಿಷಯಕವಾಗಿಯೇ ಆ ಶಬ್ದಗಳು ಪ್ರಯೋಗಿಸಲ್ಪಟ್ಟರೂ ಅನ್ಯತ್ರ ಆಸಕ್ತವಾದ ಮನಸ್ಸುಳ್ಳವನಿಗೆ, ವಸ್ತು ದರ್ಶನವಾಗುವುದಿಲ್ಲ; ಸಮಾಹಿತ ಚಿತ್ತನಾದ ಯೋಗಿಯು, ಮನಸ್ಸಿನಿಂದಲೇ ಪರಮಾತ್ಮನನ್ನು ನೋಡುತ್ತಾನೆ—ಅಲ್ಲಿ ಶಬ್ದಶ್ರವಣ ಸಾಧನವಿಲ್ಲ; ಆದ್ದರಿಂದ ವಸ್ತುವು ದೃಷ್ಟಿಯೋಗ್ಯವಾದರೂ, ಅದರ ಪ್ರತ್ಯಕ್ಷದರ್ಶನಕ್ಕೆ ಶಬ್ದಶ್ರವಣದ ಅವಶ್ಯಕತೆ ಇಲ್ಲವೆಂದು

**ದೃಶ್ಯಮಾನೇಪಿ ಶಬ್ದೇನ ಸಾಕ್ಷಾತ್ಕಾರಾಂತರಪ್ರಮಾ ।**
**ಅನಾನುಭವಿಕತ್ವೇನ ವೈಯ್ಯರ್ಥ್ಯಾಚ್ಚ ನ ಶೋಭತೇ ।**
**ಸೈವ ಚೇತ್ತರ್ಹಿ ಶಬ್ದೋತ್ಥಾ ಸಾಕ್ಷಾತ್ಕಾರಪ್ರಮಾ ಕ್ವ ತೇ ॥ ೪೬ ॥**

ದೃಶ್ಯಮಾನವಸ್ತುವಿನಲ್ಲಿ ಪ್ರಯುಕ್ತವಾದ ಶಬ್ದವು ಅನ್ಯದರ್ಶನವನ್ನು ಸಾಧಿಸುತ್ತದೆಯೋ ಅಥವಾ ಅದೇ ವಸ್ತುವನ್ನೇ ಎಂದು ವಿಕಲ್ಪಿಸಿ, ಮೊದಲಿನ ಪಕ್ಷವನ್ನು ದೂಷಿಸುತ್ತಾರೆ :—

ದೃಶ್ಯಮಾನೇಪಿ–ದೃಷ್ಟಿಯೋಗ್ಯವಸ್ತುವಿನಲ್ಲಿ ಪ್ರಯುಕ್ತವಾದ, ಶಬ್ದೇನ–ಶಬ್ದದಿಂದ, ಸಾಕ್ಷಾತ್ಕಾರಾಂತರಪ್ರಮಾ–ಅನ್ಯವಸ್ತುವಿನ ದರ್ಶನವು ದೊರೆಯುತ್ತದೆಂಬುದು, ಅನನುಭವಿಕತ್ವೇನ–ಅನುಭವವು ಹಾಗಿಲ್ಲವೆಂಬುದರಿಂದ, ಚ–ಮತ್ತು, ವೈಯ್ಯರ್ಥ್ಯಾತ್–ಅಪ್ರಯೋಜಕವಾದ್ದರಿಂದ (ಉಪಯೋಗಿಸುವ ಶಬ್ದವು ಘಟವಾದರೆ, ಪಟದರ್ಶನಕ್ಕೆ ಅದು ಸಾಧನವೆಂದರೆ, ಶಬ್ದಪ್ರಯೋಗವು ವ್ಯರ್ಥವೆಂದಾಗುತ್ತದೆ; ಪ್ರಯೋಗಿಸುವಾತನು ಅವ್ಯುತ್ಪನ್ನನೆಂದೂ ಪ್ರಾಪ್ತವಾಗುತ್ತದೆ); ನ ಶೋಭತೇ–(ಮೊದಲ ವಿಕಲ್ಪವು) ಶೋಭಿಸುವುದಿಲ್ಲ; (ಎರಡನೆ ಕಲ್ಪವನ್ನು ದೂಷಿಸುತ್ತಾರೆ); ಸೈವ ಚೇತ್–ಅದೇ ವಸ್ತುವಿನ ದರ್ಶನವೆಂದರೆ, ತರ್ಹಿ–ಆಗ, ಶಬ್ದೋತ್ಥಾ – ಶಬ್ದಜನಿತ, ಸಾಕ್ಷಾತ್ಕಾರ ಪ್ರಮಾ – ಆ ಪ್ರಮೆಯು ವಸ್ತುವಿನ (ಸಾಕ್ಷಾತ್ಕಾರವು ಮೊದಲೇ ಇಂದ್ರಿಯದಿಂದ ಆಗಿರುವುದರಿಂದ), ತೇ–ನಿನ್ನಂತೆ, ಕ್ವ–ಎಲ್ಲಿ ಬಂತು ? (ಶಬ್ದಜನ್ಯಜ್ಞಾನಕ್ಕಿಂತ ಮೊದಲು, ವಸ್ತುದರ್ಶನವೇ ಆಗಿರುವುದರಿಂದ, ಅದನ್ನು ತೋರಿಸಿದೆಯಷ್ಟೆ, ಘಟಾದಿ ಶಬ್ದವನ್ನು ಪ್ರಯೋಗಿಸುವುದು? ಆದ್ದರಿಂದ ಘಟಜ್ಞಾನವು ಶಬ್ದದಿಂದ ಆದುದಲ್ಲ).

---

ಸಿದ್ಧವಾಗುತ್ತದೆ–ಅಲ್ಲಿ ಮನಸ್ಸೇ ಸಾಧನವು (೪೪–೪೫). ದೃಶ್ಯಮಾನವಾದ ವಸ್ತುವಿನಲ್ಲಿ ಪ್ರಯೋಗಿಸಲಾದ ಶಬ್ದದಿಂದ ಅನ್ಯ (ವಸ್ತು)ಜ್ಞಾನವಾಗುತ್ತದೆಂಬುದು ಅನುಭವದಿಂದ ಸಿದ್ಧವಾಗುವುದಿಲ್ಲ; ಮತ್ತು ಶಬ್ದವು ತನ್ನಿಂದ ಬೋಧ್ಯವಾದ ವಸ್ತುದರ್ಶನಕ್ಕೆ ಸಾಧನವಲ್ಲದುದಾದರೆ, ಆ ಶಬ್ದಪ್ರಯೋಗವು ವ್ಯರ್ಥವೇ ಸರಿ (ಪ್ರಯೋಜನ ಶೂನ್ಯವಾದುದು) ; ಘಟವನ್ನು ತೋರಿಸಿ, ಅದೇ ಘಟವೆಂದು ಹೇಳಿದರೆ, ಶಬ್ದಜನ್ಯ ಜ್ಞಾನಕ್ಕಿಂತ ಮೊದಲು ಘಟಪ್ರತ್ಯಕ್ಷ ದರ್ಶನವಾಗಿರುವುದರಿಂದ, ದರ್ಶನವು, ಶಬ್ದದಿಂದ ಹುಟ್ಟಿದ್ದೆಂಬ ವಾದವು ಹೇಗೆ ಯುಕ್ತ

**ಕರಣಸ್ಯ ಬಲಾಚ್ಚೇದ್ಧೀಸ್ತರ್ಹಿ ಶಾಬ್ದ್ಯೇವ ಸಾ ಭವೇತ್ ।**
**ದೃಷ್ಟೇಽರ್ಥೇ ತರ್ಕರಸಿಕಸ್ಯಾನುಮಾನಾದ್ಯಥಾನುಮಾ ॥ ೪೭ ॥**

ಬೇರೊಂದು ಪಕ್ಷವನ್ನು ಶಂಕಿಸಿ ದೂಷಿಸುತ್ತಾರೆ :—

ಕರಣಸ್ಯ—ಇಂದ್ರಿಯದ, ಬಲಾತ್—ಸಾಮರ್ಥ್ಯದಿಂದ, ಧೀಃ ಚೇತ್ — ಜ್ಞಾನವೆಂದರೆ, ತರ್ಹಿ—ಆಗ, ಸಾ—ಅದು (ಆ ಜ್ಞಾನವು), ಶಾಬ್ದ್ಯೇವ—ಶಬ್ದಕ್ಕೆ ಅಲ್ಲಿಯೇ ಶಕ್ತಿಯಿರುವುದರಿಂದ, ಭವೇತ್—ಆಗಿರುತ್ತದೆ ; ದೃಷ್ಟೇಽರ್ಥೇ—ಕಂಡ ವಸ್ತುವಿನಲ್ಲಿ, ತರ್ಕರಸಿಕಸ್ಯ — ತರ್ಕನಿಪುಣನ, (ಆತನು ಪ್ರಯೋಗಿಸುವ), ಅನುಮಾನಾತ್—ಅನುಮಾನದಿಂದ, ಯಥಾ—ಹೇಗೆ, ಅನುಮಾ—ಊಹಿಸಲ್ಪಡು ವುದೋ (ವಸ್ತುವು ಊಹೆಯಿಂದ ತಿಳಿಯಲ್ಪಡುವುದೋ ಹಾಗೆ ಶಬ್ದ ಶಕ್ತಿಯಿಂದ ವಸ್ತುಜ್ಞಾನವು).

**ತಸ್ಮಾದ್ದರ್ಶನಮುದ್ದಿಶ್ಯ ತಾದರ್ಥ್ಯೇನಾಸ್ಯ ಕೀರ್ತನಾತ್ ।**
**ಕರಣತ್ವಂ ಶ್ರುತಿಬಲಾದ್ವಾಚ್ಯಂ ನಾನ್ಯಾಸ್ತಿ ತೇ ಗತಿಃ ॥ ೪೮ ॥**

ತಸ್ಮಾತ್ — ಆದ್ದರಿಂದ (ಶಬ್ದಶ್ರವಣದಿಂದ ಎಲ್ಲಿಯೂ ವಸ್ತು ಸಾಕ್ಷಾತ್ಕಾರ ಜ್ಞಾನವು ಹುಟ್ಟುವುದು ಕಂಡಿಲ್ಲವಾದ್ದರಿಂದ), ತದ್ದರ್ಶನಂ ಉದ್ದಿಶ್ಯ—ಅದರ (ಆ ವಸ್ತುವಿನ) ದರ್ಶನವನ್ನು ಉದ್ದೇಶಿಸಿ, ತಾದರ್ಥ್ಯೇನ—ಅದಕ್ಕಾಗಿಯೇ, ಅಸ್ಯ— ಶ್ರವಣಾದಿಯ, ಕೀರ್ತನಾತ್—ಕೀರ್ತನವಿರುವುದರಿಂದ (ಕಂಡ ವಸ್ತುವಿನ ಪ್ರಶಂಸೆ ಗಾಗಿಯೇ ಶಬ್ದ ಪ್ರಯೋಗವೂ ಅದರ ಶ್ರವಣವೂ ನಡೆಯುವುದರಿಂದ), ಕರಣತ್ವಂ—(ವಸ್ತುವನ್ನು ನೋಡುವ ಇಂದ್ರಿಯದ ಕರಣತ್ವವು) ಸಾಧನತ್ವವು,

---

ವಾದೀತು ? (೪೬). ಪ್ರಯೋಗಿಸಲಾದ ಶಬ್ದಕ್ಕೆ ದೃಶ್ಯಮಾನ ವಸ್ತುವಿನಲ್ಲಿಯೇ ಶಕ್ತಿ ಇದ್ದರೂ, ಇಂದ್ರಿಯದಿಂದ ದರ್ಶನವಾದರೂ, ಅದು ಶಬ್ದದಿಂದಲೇ ಎಂದು ವ್ಯವಹಾರವಿರುತ್ತದೆ ; ಪ್ರತ್ಯಕ್ಷವಾಗಿ ಕಂಡ ವಸ್ತುವಿನಲ್ಲಿ, ತರ್ಕನಿಪುಣನು ಅನುಮಾನವನ್ನು ಪ್ರಯೋಗಿಸುವುದರಿಂದಲೂ ಆ ವಸ್ತುಜ್ಞಾನವು ಸಿದ್ಧವಾಗು ವಂತೆ, ಇಂದ್ರಿಯಜನ್ಯ ದರ್ಶನದ ಸಮರ್ಥನೆ ರೂಪವಾದುದು ಮಾತ್ರವಾಗಿರು ತ್ತದೆ (೪೭). ಉದ್ದಿಷ್ಟ ವಸ್ತುವಿನ ದರ್ಶನಕ್ಕಾಗಿಯೇ ಶ್ರವಣಾದಿಯ ಪ್ರಶಂಸೆ ಇರುವುದರಿಂದ ಶ್ರುತಿಬಲದಿಂದಲೇ ಶ್ರವಣಾದಿಗೆ ಪರಮಾತ್ಮಸಾಕ್ಷಾತ್ಕಾರದಲ್ಲಿ ಸಾಧನತ್ವವನ್ನು ತಿಳಿಯಬೇಕಲ್ಲದೇ, ನಿನಗೆ ಅನ್ಯಮಾರ್ಗವೇ ಇಲ್ಲ (೪೮).

ಶ್ರುತಿಬಲಾತ್–ಶ್ರವಣ ಬಲದಿಂದಲೇ, ವಾಚ್ಯಂ–ಹೇಳಲ್ಪಡಬೇಕು; ತೇ–ನಿನಗೆ, ಅನ್ಯಾ ಗತಿಃ–ಬೇರೆ ಮಾರ್ಗವು, ನ ಅಸ್ತಿ–ಇರುವುದಿಲ್ಲ.

**ಶ್ರುತಿಸ್ತು ಶ್ರವಣಂ ವಕ್ತಿ ಮನನಂ ಧ್ಯಾನಮಂತತಃ ।**
**ಪಾರಂಪರ್ಯಾತ್ತು ತತ್ರಾದ್ಯೇ ಹೇತುರ್ಧ್ಯಾನಂ ತು ಮುಖ್ಯತಃ ॥೪೯॥**
**ನ ಚೇತ್ಕರ್ಮೈವ ಹೇತುಃ ಸ್ಯಾದಂಗಂ ಸ್ಯಾಚ್ಛ್ರವಣಾದ್ಯಪಿ ।**
**ಕರ್ಮಣಾ ಜ್ಞಾನಮಿತ್ಯಾಹ ಯತಃ ಶ್ರುತಿರಚಂಚಲಾ ॥ ೫೦ ॥**

ಶ್ರುತಿಸ್ತು – ಶ್ರುತಿಯಾದರೂ (ವೇದವು), ಶ್ರವಣಂ – ಶ್ರವಣವನ್ನು, ಮನನಂ–ಮನನವನ್ನು, ಅಂತತಃ–ಕೊನೆಗೆ, ಧ್ಯಾನಂ–ಧ್ಯಾನವನ್ನು, ವಕ್ತಿ–ಹೇಳುತ್ತದೆ; ಪಾರಂಪರ್ಯಾತ್–ಪರಂಪರೆಯಿಂದ ಒಂದರ ಮೇಲೊಂದರಂತೆಯೂ ತತ್ರ–ಶ್ರವಣ ಮನನ ನಿದಿಧ್ಯಾಸನವೆಂಬ ಮೂರರಲ್ಲಿ,ಆದ್ಯೇ–ಶ್ರವಣಮನನಗಳನ್ನು ಮುಖ್ಯತಃ–ಪ್ರಧಾನವಾಗಿ (ಸಾಕ್ಷಾತ್–ದ್ವಾರಾಂತರವಿಲ್ಲದೇ) ಧ್ಯಾನಂತು–ಧ್ಯಾನವನ್ನೇ (ವಕ್ತಿ–ಧ್ಯಾನವನ್ನೆ ಅಪರೋಕ್ಷದರ್ಶನ ಹೇತುವೆಂದು ಹೇಳುತ್ತದೆ), (ಮನಸ್ಸೇಕರಣವಾಗಿವುಳ್ಳ ದರ್ಶನಕ್ಕೆ ಧ್ಯಾನವೇ ಉಪಯೋಗಿ ಎಂದು ಹೇಳುತ್ತದೆ) ನ ಚೇತ್–ಹಾಗಲ್ಲದ್ದರೆ, ಕರ್ಮಏವ–ವಿಧ್ಯುಕ್ತ ಕರ್ಮಾಚರಣೆಯೇ, ಹೇತುಃ–(ದರ್ಶನ) ಕಾರಣವು, ಸ್ಯಾತ್ – ಆಗಲಿ ; ಶ್ರವಣಾದ್ಯಪಿ – ಶ್ರವಣಾದಿಗಳು, ಅಂಗಂ–ಸಹಕಾರಿಗಳು, ಸ್ಯಾತ್ – ಆಗಲಿ ; ಯತಃ – ಯಾವ ಕಾರಣದಿಂದ, ಅಚಂಚಲಾಶ್ರುತಿಃ–ದೃಢವಾದ ಶ್ರುತಿಯು, (ನಿತ್ಯವಾದ ವೇದವು), ಕರ್ಮಣಾ–ಕರ್ಮದಿಂದ, ಜ್ಞಾನಂ–ಜ್ಞಾನವನ್ನು , ಆಹ–ಕರ್ಮಣಾ ಜ್ಞಾನಮಾಪ್ನೋತಿ ಎಂದು ಹೇಳಿರುತ್ತದೆಯೋ (ಅದರಿಂದ ಭಗವದ್ದರ್ಶನಕ್ಕೆ ಕರ್ಮವೇ ಸಾಕು–ಶ್ರವಣಾದಿಗಳು ಅವಶ್ಯಕವಿಲ್ಲವೆಂದು ಪ್ರಾಪ್ತವಾಗುತ್ತದೆ).

---

ಶ್ರುತಿಯು, ಶ್ರವಣವನ್ನು, ಮನನವನ್ನು, ಕಡೆಗೆ ಧ್ಯಾನವನ್ನು, ಪರಂಪರೆಯಿಂದ ಬ್ರಹ್ಮದರ್ಶನಕ್ಕೆ ಹೇತುಗಳೆಂದು, ಹೇಳಿದರೂ, ಅನ್ಯದ್ವಾರರಹಿತವಾದ ಮುಖ್ಯ ಹೇತುವನ್ನಾಗಿ, ಧ್ಯಾನವನ್ನೇ ಹೇಳುತ್ತದೆ; ಈ ಮೂರು ಹೇತುಗಳೇ ಅಲ್ಲದಿದ್ದರೆ, ಬ್ರಹ್ಮಸಾಕ್ಷಾತ್ಕಾರಕ್ಕೆ ಕರ್ಮಾಚರಣವೇ ಹೇತುವಾಗಬೇಕು–ಶ್ರವಣಾದಿಗಳು ಅಂಗ (ಸಹಕಾರಿ) ಗಳು ಆಗಬೇಕು ; ಕರ್ಮಣಾ ಜ್ಞಾನಮಾಪ್ನೋತಿ 'ಎಂದು ಶ್ರುತಿಯೇ ಹೇಳಿರುತ್ತದೆಯಷ್ಟೆ ; ಇದರಿಂದ ಭಗವದ್ದರ್ಶನಕ್ಕೆ ಕರ್ಮವೇ ಸಾಕು, ಶ್ರವಣಾದಿಗಳು ಅನವಶ್ಯಕವೆಂದು ಏರ್ಪಡುವುದಿಲ್ಲ (೪೯–೫೦).

**ತಸ್ಮಾತ್ ಕ್ರಮಿಕವೇದೋಕ್ತಕಾರಣೇಷು ಯದುತ್ತರಂ ।**
**ಜ್ಞಾನಾದನ್ಯವಧಾನೇನ ಪೂರ್ವಂ ಚ ತತ ಏವ ತತ್ ॥ ೫೧ ॥**

ತಸ್ಮಾತ್ – ಆದ್ದರಿಂದ (ಸಾಧನಗಳೆಂಬ ಮೂರರಲ್ಲಿ ಮೊದಲನೆಯದೆಂಬ ಕಾರಣದಿಂದ ಶ್ರವಣವೇ ಮುಖ್ಯ ಸಾಧನವೆಂದರೆ, ಅದಕ್ಕೂ ಮೊದಲಿನ ಕರ್ಮವೇ ಬ್ರಹ್ಮದರ್ಶನಕ್ಕೆ ಮುಖ್ಯ ಸಾಧನವೆಂದು ಪ್ರಾಪ್ತವಾಗುವ ಪ್ರಸಂಗವಿರುವುದರಿಂದ) ಕ್ರಮಿಕವೇದೋಕ್ತ ಕಾರಣೇಷು–ಕ್ರಮವಾಗಿ ವೇದದಲ್ಲಿ ಹೇಳಲ್ಪಟ್ಟ ಕಾರಣಗಳಲ್ಲಿ, ಯತ್ – ಯಾವುದು, ಉತ್ತರಂ – ಕಡೆಯದೋ, ಜ್ಞಾನಾತ್ – ದರ್ಶನದಿಂದ, ಅವ್ಯವಧಾನೇನ ಪೂರ್ವಂ ಚ–ಅಂತರವಿಲ್ಲದ (ಮಧ್ಯೆ ಬೇರೊಂದಿಲ್ಲದ) ಹಿಂದಿನದೋ, ತತಃ ಏವ–ಅದರಿಂದಲೇ (ನಿದಿಧ್ಯಾಸನದಿಂದಲೇ), ತತ್–ಅಪರೋಕ್ಷ ಜ್ಞಾನವು (ಲಭಿಸುತ್ತದೆ).

**ಯದಿ ಶ್ರವಣಮಾತ್ರೇಽಪಿ ಸರ್ವೇಷಾಂ ಬ್ರಹ್ಮದರ್ಶನಂ ।**
**ಜೀವನ್ಮುಕ್ತಾಃ ಕುತಸ್ತರ್ಹಿ ಶುಕಾದ್ಯಾ ಏವ ಯೋಗಿನಃ ॥ ೫೨ ॥**

ಶ್ರವಣದಿಂದಲೇ ಬ್ರಹ್ಮದರ್ಶನವನ್ನು ಅಂಗೀಕರಿಸಿದರೆ ಬಾಧಕವನ್ನು ಹೇಳುತ್ತಾರೆ :—

ಸರ್ವೇಷಾಂ – ಸರ್ವರಿಗೂ, ಶ್ರವಣಮಾತ್ರೇಽಪಿ – ಶ್ರವಣದಿಂದ ಮಾತ್ರ, ಯದಿ ಬ್ರಹ್ಮದರ್ಶನಂ–ಬ್ರಹ್ಮದರ್ಶನವಾಗುವುದಾದರೆ, ತರ್ಹಿ–ಆಗ (ಮುಂದರಿಗೂ ಬ್ರಹ್ಮದರ್ಶನವು ದೊರೆಯಬೇಕಾಗುವುದರಿಂದ), ಕುತಃ – ಯಾವ ಕಾರಣದಿಂದ, ಜೀವನ್ಮುಕ್ತಾಃ – ಜೀವನ್ಮುಕ್ತರೆಂಬುವರು (ದೇಹದಲ್ಲಿದ್ದು ಅಪರೋಕ್ಷ ದರ್ಶನ ಪಡೆದವರು), ಶುಕಾದ್ಯಾಃ–ಶುಕಾಚಾರ್ಯರೇ ಮೊದಲಾದ, ಯೋಗಿನಃ ಏವ–ಯೋಗಿಗಳೇ ಧ್ಯಾನವುಳ್ಳವರು ಮಾತ್ರ (ಜೀವನ್ಮುಕ್ತರು) ? (ಕಾರಣವಿಲ್ಲ).

---

ಆದ್ದರಿಂದ, ವೇದೋಕ್ತ ಕ್ರಮದಲ್ಲಿ ದರ್ಶನ ಸಾಧನಗಳಾದ ಮೂರರಲ್ಲಿ, ಯಾವುದು ಕಡೆಯದೂ, ಮತ್ತು ಅವ್ಯವಧಾನ ಪೂರ್ವವಾದ (ದರ್ಶನಕ್ಕೂ ತನಗೂ ಮಧ್ಯೆ ಬೇರೆ ಸಾಧನವೆಂಬುದಿಲ್ಲದುದೂ ಆದ) ನಿಧಿಧ್ಯಾಸನವೇ, ದರ್ಶನಕ್ಕೆ ಪ್ರಧಾನ ಸಾಧನವು ; ಅದರಿಂದ ಅಪರೋಕ್ಷ ದರ್ಶನವು (೫೧). ಶ್ರವಣಮಾತ್ರದಿಂದ

**ಅನಾನುಭವಿಕಂ ಚೇದಂ ಶ್ರುತಿಕಾಲೇಪಿ ದರ್ಶನಂ ।**
**ಅಶ್ನತಃ ಶೃಣ್ವತಶ್ಚಾನ್ನಂ ಕಿಂ ನಾಸ್ತಿ ಮಹದಂತರಂ ॥ ೫೩ ॥**

ಶ್ರವಣ ದರ್ಶನಗಳ ಅತ್ಯಂತ ವೈಲಕ್ಷಣ್ಯವು ಸರ್ವಾನುಭವ ಸಿದ್ಧವೆಂಬಲ್ಲಿ ದೃಷ್ಟಾಂತವನ್ನು ಹೇಳುತ್ತಾರೆ :—

ಶ್ರುತಿಕಾಲೇ ಅಪಿ–ಶ್ರವಣ ಕಾಲದಲ್ಲಿಯೇ, ದರ್ಶನಂ–ದರ್ಶನವು, ಇದಂ–ಎಂಬಿದು, ಅನಾನುಭವಿಕಂ – ಯಾರ ಅನುಭವದಲ್ಲಿಯೂ ಇಲ್ಲ; ಅನ್ನಂ – ಅನ್ನವನ್ನು, ಶೃಣ್ವತಃ–ಕೇಳುವವನಿಗೂ, ಚ–ಮತ್ತು, ಅಶ್ನತಃ–ಉಣ್ಣುವವನಿಗೂ, ಮಹದಂತರಂ–ಅತ್ಯಂತ ವಿಲಕ್ಷಣತ್ವವು (ಪ್ರತ್ಯೇಕತೆಯು), ನಾಸ್ತಿ ಕಿಂ–ಇರುವುದಿಲ್ಲವೇನು ? (ಇದ್ದೇ ಇದೆ; ಉಂಡಲ್ಲಿ ತೃಪ್ತಿ ಇದೆ–ಶ್ರವಣದಲ್ಲಿ ಅದಿಲ್ಲ).

**ತಚ್ಛಬ್ದಾನ್ನಾಪರೋಕ್ಷಂ ಸ್ಯಾನ್ನ ತರಾನ್ನಿರ್ವಿಕಲ್ಪಕಂ ।**
**ಯತಸ್ತ್ವದುಕ್ತವಾಕ್ಯೇಪಿ ದಶಮತ್ವವಿಶಿಷ್ಟಧೀಃ ॥ ೫೪ ॥**

ತತ್ (ತಸ್ಮಾತ್)–ಆದ್ದರಿಂದ, ಶಬ್ದಾತ್–ಶಬ್ದದಿಂದ, ಅಪರೋಕ್ಷಂ ನ–ಸಾಕ್ಷಾತ್ಕಾರವಿಲ್ಲ; ನಿರ್ವಿಕಲ್ಪಕಂ – ವಿಕಲ್ಪ ರಹಿತವಾದ ಬ್ರಹ್ಮನ ದರ್ಶನವು (ನಿರ್ವಿಶೇಷನಾದ ಬ್ರಹ್ಮನ ಸಾಕ್ಷಾತ್ಕಾರವು), ನ ತರಾಂ–ದೊರೆಯುವುದೇ ಇಲ್ಲ; ಯತಃ–ಏಕೆಂದರೆ, ತ್ವದುಕ್ತವಾಕ್ಯೇ ಅಪಿ–ನೀನು ದೃಷ್ಟಾಂತವಾಗಿ ಹೇಳಿರುವ ವಾಕ್ಯದಲ್ಲಿ ಸಹ, ದಶಮತ್ವ ವಿಶಿಷ್ಟಧೀಃ–ದಶಮವೆಂಬ ವಿಶೇಷವುಳ್ಳ ಜ್ಞಾನವು

---

ಸರ್ವರಿಗೂ ಬ್ರಹ್ಮಸಾಕ್ಷಾತ್ಕಾರವಾಗುವುದಾದರೆ, ಶುಕಾದಿಯೋಗಿಗಳೇ ಜೀವನ್ಮುಕ್ತರೆಂಬುದು ಏಕೆ? ಯಾವ ಕಾರಣದಿಂದ? (ಸರ್ವರೂ ಜೀವನ್ಮುಕ್ತರೇ ಆಗುವರು) (೫೨). ಶ್ರವಣ ಕಾಲದಲ್ಲಿಯೇ ಬ್ರಹ್ಮದರ್ಶನವೆಂಬುದು ಯಾರ ಅನುಭವದಲ್ಲಿ ಎಲ್ಲಿಯೂ(ಸಾಧಕರಲ್ಲಿ)ಕಂಡಿಲ್ಲ; ಅನ್ನವನ್ನು ಶ್ರವಣಮಾಡುವವನಿಗೂ ಉಂಡು ತೃಪ್ತಿಯನ್ನು ಪಡೆಯುವವನಿಗೂ ಮಹದಂತರವಿಲ್ಲವೇನು ? (ಹೀಗೆಯೇ ಶ್ರವಣ ದರ್ಶನಗಳಲ್ಲಿ ಅತ್ಯಂತ ವೈಲಕ್ಷಣ್ಯವು ಅನುಭವಸಿದ್ಧವಾಗಿದೆ) (೫೩). ಶಬ್ದ ಶ್ರವಣದಿಂದ ಅಪರೋಕ್ಷವೆಂಬುದಿಲ್ಲ; ಆದ್ದರಿಂದ ನಿರ್ವಿಶೇಷ ಬ್ರಹ್ಮನ ಸಾಕ್ಷಾತ್ಕಾರವು ಸುತರಾಂ ಸಾಧಿಸುವುದಿಲ್ಲ; 'ದಶಮೋಹಂ' ಎಂದು ದೃಷ್ಟಾಂತವಾಗಿ ನೀನೇ ಹೇಳಿರುವ ವಾಕ್ಯದಲ್ಲಿ ಸಹ 'ದಶಮ' ಎಂಬ ವಿಶೇಷಣವಿದೆ; ಸವಿಶೇಷ

(ಹೇಳಲಾಗಿದೆ) (ವಿಶೇಷವಸ್ತು ಜ್ಞಾನವೇ ಶಬ್ದಶ್ರವಣದಿಂದ ಆಗುವುದಿಲ್ಲವೆಂದ ಮೇಲೆ, ನಿನ್ನ ನಿರ್ವಿಶೇಷ ಬ್ರಹ್ಮಸಾಕ್ಷಾತ್ಕಾರವು ಶ್ರವಣ ಸಾಧ್ಯವಲ್ಲೆಂದೇ ಸಿದ್ಧ ವಾಗುತ್ತದೆಯಷ್ಟೆ).

**ಅನ್ವಿತಾರ್ಥಾಭಿಧಾಯಿತ್ವಾದನ್ಯೋನ್ಯಾನ್ವಯಮಿಶ್ರಿತಂ ।**
**ಸ್ವಾರ್ಥಂ ಮುಖ್ಯಮಮುಖ್ಯಂ ವಾ ಪದಂ ವಕ್ತೀತಿ ತೇ ಮತಂ ।**
**ತಚ್ಛಬ್ದಾನ್ನಿರ್ವಿಕಲ್ಪಾಧೀರಿತಿ ರಿಕ್ತಂ ವಚಸ್ತವ ॥ ೫೫ ॥**

ನಿರ್ವಿಕಲ್ಪ ಬ್ರಹ್ಮಸಾಕ್ಷಾತ್ಕಾರವು ಶ್ರವಣದಿಂದ ದುಃಸಾಧ್ಯವೆಂದು ಬೇರೆ ಪರಪ್ರಕ್ರಿಯೆಯಿಂದಲೇ ತೋರಿಸುತ್ತಾರೆ :—

ತೇ–ನಿನ್ನ, ಮತಂ–ಮತವು (ಮತದಲ್ಲಿ), ಪದಂ–ಶಬ್ದವು, ಸ್ವಾರ್ಥಂ– ತನ್ನಿಂದ ಬೋಧ್ಯವಾದ ಅರ್ಥವನ್ನು, ಮುಖ್ಯಂ – ಮುಖ್ಯವಾಗಿಯೋ, ವಾ– ಅಥವಾ, ಅಮುಖ್ಯಂ – ಅಮುಖ್ಯವಾಗಿಯೋ, ವಕ್ತಿ – ಹೇಳುತ್ತದೆ. (ವಿಕಲ್ಪ ಮಾಡಿ ಮುಖ್ಯವಾಗಿ ಎಂದರೆ ಉತ್ತರಿಸುತ್ತಾರೆ); ಅನ್ವಿತಾರ್ಥಾಭಿಧಾಯಿತ್ವಾತ್– ಶಬ್ದವು (ಅನ್ವಿತಾರ್ಥವನ್ನು) ತನಗೆ ಸಂಬಂಧಿಸಿದ (ಅಸಂಬದ್ಧವಾದುದನ್ನಲ್ಲ) ಅರ್ಥವನ್ನು ಮಾತ್ರ ಹೇಳುತ್ತದೆಯಾದ್ದರಿಂದ, ಅನ್ಯೋನ್ಯಾನ್ವಯಮಿಶ್ರಿತಂ – ಶಬ್ದ ಮತ್ತು ಅರ್ಥಗಳು ಪರಸ್ಪರ ಮಿಶ್ರಿತವಾಗಿವೆ (ಶಬ್ದದಲ್ಲಿ ಎರಡೂ ಇವೆ) ; ತತ್–ಆದ್ದರಿಂದ (ಅನ್ವಿತಾರ್ಥವನ್ನು ಹೇಳುವುದರಿಂದ), ಶಬ್ದಾತ್ – ಶಬ್ದದಿಂದ, ನಿರ್ವಿಕಲ್ಪಾ ಧೀಃ–ನಿರ್ವಿಶೇಷ ಜ್ಞಾನವು, ಇತಿ–ಎಂಬ, ತವ–ನಿನ್ನ, ವಚಃ– ನುಡಿಯು, ರಿಕ್ತಂ–ಶುಷ್ಕವಾದುದು (ರಸವಿಲ್ಲದ್ದು–ಅರ್ಥರಹಿತವು) (ಆಗಿರುತ್ತದೆ).

---

ವಸ್ತುಜ್ಞಾನವೇ ಶಬ್ದಶ್ರವಣದಿಂದ ಆಗುವುದಿಲ್ಲವೆಂದಮೇಲೆ ನಿರ್ವಿಶೇಷ ಬ್ರಹ್ಮ ಸಾಕ್ಷಾತ್ಕಾರವು ಶ್ರವಣ ಸಾಧ್ಯವಲ್ಲವೆಂದೇ ಸಿದ್ಧವಾಗುತ್ತದೆ (೫೪). ಶಬ್ದಗಳು ಅನ್ವಿತಾರ್ಥವನ್ನು ಮಾತ್ರ ಹೇಳುತ್ತವೆ ; ಅವು ಪರಸ್ಪರ ಸಂಬಂಧವುಳ್ಳವುಗಳಾಗಿವೆ (ಶಬ್ದ ಮತ್ತು ಅದರ ಯೋಗ್ಯವಾದ ಅರ್ಥಗಳು ಪ್ರತಿ ಶಬ್ದದಲ್ಲಿ ಮಿಶ್ರವಾಗಿಯೇ ಇರುತ್ತವೆ) ; ಶಬ್ದವು ತನ್ನಿಂದ ಬೋಧ್ಯವಾದ ಅರ್ಥವನ್ನು ಮುಖ್ಯವಾಗಿ ಅಥವಾ ಅಮುಖ್ಯವಾಗಿ ಹೇಳುತ್ತದೆಂದಷ್ಟೇ, ನಿನ್ನ ಮತವು? ಮುಖ್ಯವಾದ ಅನ್ವಿತಾರ್ಥ ವನ್ನು ಹೇಳುತ್ತದೆಂದರೆ, ಶಬ್ದದಿಂದ ನಿರ್ವಿಶೇಷ ಜ್ಞಾನವೆಂಬ ನಿನ್ನ ವಾದವು

*

**ಯೌಗಪದ್ಯೇನ ತದ್ಯೋಗ್ಯಗುಣಾನುಸ್ಮರಣಂ ಹರೇಃ ।**
**ಅಚ್ಛಿನ್ನತೈಲಧಾರಾವದಾರಾತ್ತಂ ದರ್ಶಯೇದ್ಧೃದಿ ॥ ೫೬ ॥**

ಉಪಸಂಹರಿಸುತ್ತಾರೆ :—

ತತ್ (ತಸ್ಮಾತ್) – ಆದ್ದರಿಂದ (ಶ್ರವಣಕ್ಕೆ ದರ್ಶನ ಹೇತುತ್ವವು ಕೂಡುವುದಿಲ್ಲವಾದ್ದರಿಂದ), ಹರೇಃ–ಶ್ರೀಹರಿಯ, ಯೋಗ್ಯತಾನುಸ್ಮರಣಂ – ಸ್ವಯೋಗ್ಯ ಗುಣಸ್ಮರಣವು, ಅಚ್ಛಿನ್ನತೈಲಧಾರಾವತ್ – ವಿಚ್ಛಿನ್ನವಾಗದ ತೈಲಧಾರೆಯಂತೆ, ಯೌಗಪದ್ಯೇನ–ಏಕದಾ (ಒಂದೇ ಕಾಲದಲ್ಲಿ) ನಡೆದರೆ, ಅದರಿಂದ, ಆರಾತ್–ಸಮೀಪದಲ್ಲಿ (ಬೇಗ), ಹೃದಿ–ಸ್ವಹೃದಯದಲ್ಲಿ, ದರ್ಶಯೇತ್–ನೋಡುತ್ತಾನೆ.

**ಧ್ಯಾನಂ ಚ ಮನಸಾ ತಸ್ಮಾದ್ಧ್ಯಾತೃಚಿತ್ತಂ ಹರೀಚ್ಛಯಾ ।**
**ತದ್ಗಂ ತನೋನೇಂದ್ರಿಯತ್ವಾತ್ಪಶ್ಯತೀತ್ಯತಿಮಂಗಲಂ ॥ ೫೭ ॥**

ಸಾಕ್ಷಾತ್ಕಾರವು ಇಂದ್ರಿಯಜನ್ಯವಾಗಿರಲು, ಶ್ರುತಿಯು, 'ಮನಸೈವೇನಂ ಪಶ್ಯತಿ' ಎಂದು ಧ್ಯಾನದಿಂದ ಮನಸ್ಸಿನಿಂದ ದರ್ಶನವು ಹೇಗೆ ಸಂಭವಿಸುತ್ತದೆಂಬುದು ವಿಶದವಾಗಿ ನಿರೂಪಿಸುತ್ತಾರೆ :—

ತಸ್ಮಾತ್–ಆದ್ದರಿಂದ, ಮನಸಾ–ಮನಸ್ಸಿನಿಂದ, ಧ್ಯಾನಂ ಚ – ಧ್ಯಾನವಾದರೋ, ಹರೀಚ್ಛಯಾ – ಶ್ರೀಹರಿಯ ಇಚ್ಛೆಯಿಂದ (ಧ್ಯಾನ ಪ್ರಸನ್ನನಾದ ಭಗವದನುಗ್ರಹಕ್ಕೆ ಪಾತ್ರವಾದ), ಧ್ಯಾತೃಚಿತ್ತಂ – ಧ್ಯಾನಿಸುವವನ ಮನಸ್ಸು, (ಸಾಕ್ಷಾತ್ಕಾರ ಕಾರಣವಾದ ಇಂದ್ರಿಯ ಸಾಮರ್ಥ್ಯವನ್ನು ಹೊಂದಿ), ತದ್ಗಂ –

---

ಶುಷ್ಕವಾಗುತ್ತದೆ ; ಅರ್ಥರಹಿತವಾಗುತ್ತದೆ ; (ಶಬ್ದವು ತನ್ನಲ್ಲಿ ಅಡಕವಾಗಿರುವ ಅರ್ಥವಿಶೇಷವನ್ನೇ ಹೇಳಬೇಕಾಗುತ್ತದೆ—ವಸ್ತು ವಿಶೇಷವನ್ನು ತಿಳಿಸುವುದೆಂಬ ಶಬ್ದವು ನಿರ್ವಿಕಲ್ಪ ವಸ್ತುವನ್ನು ತಿಳಿಸುತ್ತದೆಂಬುದು ವಿರುದ್ಧವಾಗುತ್ತದೆ); (೫೫). ಶ್ರವಣಕ್ಕೆ ದರ್ಶನ ಕಾರಣತ್ವವು ಯುಕ್ತವಾಗುವುದಿಲ್ಲವಾದ್ದರಿಂದ, ಸ್ವಯೋಗ್ಯ ಗುಣಧ್ಯಾನವು (ನಿರಂತರ ಸ್ಮರಣವು) ತೈಲಧಾರೆಯಂತೆ ಏಕಕಾಲದಲ್ಲಿ ನಡೆದರೆ, ಅದರಿಂದ ಶೀಘ್ರವಾಗಿ (ಸಮೀಪ ಕಾಲದಲ್ಲಿ,) ತನ್ನ ಹೃದಯದಲ್ಲಿ ಶ್ರೀಹರಿ ದರ್ಶನವಾಗುತ್ತದೆ (೫೬). ಧ್ಯಾನವಾದರೋ, ಧ್ಯಾನದಿಂದ ಪ್ರಸನ್ನನಾದ ಶ್ರೀಹರೀಚ್ಛೆಯಿಂದ, ಧ್ಯಾನಿಸುವ ಅಧಿಕಾರಿಯ ಮನಸ್ಸನ್ನು ಶುದ್ಧಗೊಳಿಸಿ,

(ಧ್ಯೇಯ ಮಾನಸ ಪ್ರತಿಮಾಂತರ್ಗತವಾದ) ಮಾನಸ ಪ್ರತಿಮೆಯಲ್ಲಿರುವ, ತಂ– (ಧ್ಯೇಯವಾದ ಗುಣಗಳುಳ್ಳ) ಭಗವಂತನನ್ನು, ಇಂದ್ರಿಯತ್ವಾತ್ – ಮನಸ್ಸೇ ಇಂದ್ರಿಯವಾದ್ದರಿಂದ, ಪಶ್ಯತಿ – ನೋಡುತ್ತದೆ (ತೋರಿಸುತ್ತದೆ, ಕರಣದಲ್ಲಿ ಕರ್ತೃತ್ವೋಪಚಾರವು); ಇತಿ – ಹೀಗೆ, ಅತಿಮಂಗಲಂ – (ಈ ಪ್ರಕ್ರಿಯೆಯು) ಅತಿಶಯ ಶುಭವಾಗಿ ವಿರಾಜಿಸುತ್ತದೆ.

**ಯದಂಘ್ರ್ಯಭಿಧ್ಯಾನಸಮಾಧಿಧೌತಸುಧಿಯಾತ್ಮನಃ ।**
**ಅನುಪಶ್ಯಂತಿ ತತ್ತ್ವಮಿತ್ಯಾಹ ಭಗವಾನ್ ಶುಕಃ ॥ ೫೮ ॥**

ಉಕ್ತಾರ್ಥವನ್ನು ಪ್ರಮಾಣೀಕರಿಸುವ ಭಾಗವತ ಶ್ಲೋಕವನ್ನು ಸಂಗ್ರಹಿಸುತ್ತಾರೆ :—[1]

---

ಸಾಕ್ಷಾತ್ಕಾರ ಕಾರಣವಾದ ಕರಣತ್ವವನ್ನು (ಇಂದ್ರಿಯತ್ವವನ್ನು) ಹೊಂದಿಸುತ್ತದೆ; ಧ್ಯೇಯವಾದ ಮಾನಸಪ್ರತಿಮಾಂತರ್ಗತನಾದ, ಧ್ಯಾನಿಸಲ್ಪಟ್ಟ ಗುಣಸ್ವರೂಪನಾದ (ಮನಸ್ಸಿಗೆ ಇಂದ್ರಿಯತ್ವವು ಪ್ರಾಪ್ತವಾಗಿರುವುದರಿಂದ) ಭಗವಂತನನ್ನು ನೋಡುತ್ತದೆ; ಹೀಗೆಂಬ ಪ್ರಕ್ರಿಯೆಯು ಅತಿಮಂಗಲಕರವಾಗಿ ವಿರಾಜಿಸುತ್ತದೆ (೫೭). ಭಗವಂತ ಪಾದ ಪದ್ಮಗಳ ನಿರಂತರ ಧ್ಯಾನದಿಂದ ಪರಿಶುದ್ಧವಾದ

1 'ಯದಂಘ್ರ್ಯಭಿಧ್ಯಾನಸಮಾಧಿಧೌತಯಾ ಧಿಯಾನುಪಶ್ಯಂತಿ ಹಿ ತತ್ತ್ವಮಾತ್ಮನಃ। ವದಂತಿ ಚೈತತ್ಕವಯೋ ಯಥಾತಥಂ ಸ ಮೇ ಮುಕುಂದೋ ಭಗವಾನ್ ಪ್ರಸೀದತಾಂ ॥' ಎಂಬ ಭಾಗವತ ಶ್ಲೋಕಾರ್ಥವನ್ನೆ ಪ್ರಕೃತಶ್ಲೋಕವು ಪ್ರತಿಪಾದಿಸುತ್ತದೆ; ಇದರ ಅರ್ಥವು ಮುಂದಿನಂತಿದೆ :—

ಯದಂಘ್ರ್ಯಭಿಧ್ಯಾನಸಮಾಧಿಧೌತಯಾ–ಭಗವಂತನ (ಯಾರ) ಪಾದಗಳ ನಿರಂತರ ಧ್ಯಾನ ಲಭ್ಯವಾದ ಸಮಾಧಿಯಿಂದ (ನಿರಂತರ ಧ್ಯಾನ ಸಿದ್ಧವಾದ ಏಕಾಗ್ರವಾದ ಮನಸ್ಸಿನ ಸ್ಥಿತಿವಿಶೇಷವು ಸಮಾಧಿಯು — ಮನಸ್ಸು ಧ್ಯೇಯವಾದ ಭಗವತ್ಪಾದವನ್ನು ಬಿಟ್ಟು, ಅನ್ಯೇಂದ್ರಿಯದ್ವಾರಾ, ಅನ್ಯ ವಿಷಯಗಳಲ್ಲಿ ಪ್ರವಹಿಸದಿರುವುದು), ಕ್ಷಾಲಿತವಾದ, ಧಿಯಾ-ಮಲರಹಿತವಾದ ಬುದ್ಧಿಯಿಂದ (ಮನಸ್ಸಿನಿಂದ), ಆತ್ಮನಃ ತತ್ತ್ವಂ–ಭಗವತ್ತತ್ತ್ವವನ್ನು, ಅನುಪಶ್ಯಂತಿ–ಕಾಣುತ್ತಾರೆ; ಕವಯಃ–ಜ್ಞಾನಿಗಳು, ಏತತ್–ಇದನ್ನು, ಯಥಾತಥಂ–ಸತ್ಯವೆಂದೂ, ವದಂತಿ–ಹೇಳುತ್ತಾರೆ; ಸಃ ಭಗವಾನ್ ಮುಕುಂದಃ–ಹೀಗೆ ಪ್ರತ್ಯಕ್ಷನಾಗುವ ಮೋಕ್ಷಪ್ರದನಾದ ಭಗವಂತನು, ಮೇ – ನನಗೆ, ಪ್ರಸೀದತಾಂ–ಪ್ರಸನ್ನನಾಗಲಿ. ಈ ತಾತ್ಪರ್ಯವನ್ನು ಮುಂದಿನ (೫೯) ನೇ ಶ್ಲೋಕವೂ ವಿವರಿಸುತ್ತದೆ.

ಯದಂಘ್ರ್ಯಭಿಧ್ಯಾನ ಸಮಾಧಿ ಧೌತ ಸುಧಿಯಾತ್ಮನಃ – ಭಗವಂತನ ಪಾದಗಳ ನಿರಂತರ ಧ್ಯಾನದಿಂದ (ಸಮಾಧಿಯಲ್ಲಿ ಮನಸ್ಸಿನಲ್ಲಿ ನಿಲ್ಲಿಸಿಕೊಳ್ಳುವುದರಿಂದ), ತೊಳೆಯಲ್ಪಟ್ಟ ಸದ್ಬುದ್ಧಿಯುಳ್ಳವರು, ತತ್ತ್ವಂ – ಭಗವತ್ತತ್ವವನ್ನು, ಅನುಪಶ್ಯಂತಿ–ಕಾಣುತ್ತಾರೆ; ಇತಿ–ಎಂದು, ಭಗವಾನ್ ಶುಕಃ–ಜ್ಞಾನಿಗಳಾದ ಶುಕಾಚಾರ್ಯರು,· ಆಹ–(ಭಾಗವತದಲ್ಲಿ) ಹೇಳಿರುವರು.

**ಧ್ಯಾನಮೇವ ಪ್ರಧಾನಾಂಗಂ ತೇನ ಚಾಜ್ಞಾನಧೀಮಲಂ ।**
**ಕ್ಷಾಲ್ಯತೇ ಧೌತಧೀರೇವ ದರ್ಶನೇ ಕಾರಣಂ ಕಿಲ ॥ ೫೯ ॥**

ಭಾಗವತ ಶ್ಲೋಕದ ತಾತ್ಪರ್ಯವನ್ನು ವಿಶದಪಡಿಸುತ್ತಾರೆ:—

ಧ್ಯಾನಂ ಏವ–ಧ್ಯಾನವೇ, ಪ್ರಧಾನಾಂಗಂ–ಪ್ರಧಾನ ಸಾಧನವು; (ಶ್ರವಣ ಮನನಗಳನ್ನು ಬಿಟ್ಟು ಧ್ಯಾನವನ್ನೇ ಅಸಾಧಾರಣವಾಗಿ ಹೇಳಿರುವುದರಿಂದ) ತೇನ ಚ–ಧ್ಯಾನದಿಂದಲೇ (ಧ್ಯಾನರೂಪ ಸಮಾಧಿಯಿಂದಲೇ), ಅಜ್ಞಾನ ಧೀಮಲಂ–ಅಜ್ಞಾನವೆಂಬ ಮನಸ್ಸಿನ ಮಲವನ್ನು, ಕ್ಷಾಲ್ಯತೇ–ತೊಳೆಯುತ್ತದೆ: ಧೌತಧೀಃ ಏವ–ಹೀಗೆ ಶುದ್ಧವಾದ ಮನಸ್ಸೇ, ದರ್ಶನೇ–ಬ್ರಹ್ಮಸಾಕ್ಷಾತ್ಕಾರದಲ್ಲಿ ಕಾರಣಂ ಕಿಲ–ಕಾರಣವಾಗುತ್ತದೆಂಬುದು ಸ್ಪಷ್ಟವಿದೆ.

**ಧೀಶಬ್ದೋಕ್ತಂ ಮನಃ ಸಾಕ್ಷಾತ್ಕಾರಸ್ಯ ಕರಣಂ ಕಿಲ ।**
**ಅಂಗಾಂಗಂ ಶ್ರವಣಂ ದೃಷ್ಟಿಕಾರಣಂ ನ ತರಾಂ ಕಿಲ ॥ ೬೦ ॥**

'ಧೀ' ಶಬ್ದಾರ್ಥವನ್ನು ಹೇಳಿ, 'ತೇನ' ಎಂಬ ತೃತೀಯಾ ಪ್ರಯೋಗ ಬಲದಿಂದ ಮನಸ್ಸಿನ ಕರಣತ್ವವು ಸಿದ್ಧವಾಗುತ್ತದೆನ್ನುತ್ತಾರೆ:—

---

ಮನಸ್ಸುಳ್ಳ ಅಧಿಕಾರಿಗಳು, ಭಗವತ್ತತ್ವವನ್ನು ಮನಸ್ಸಿನಲ್ಲಿಯೇ ಕಾಣುವರೆಂದು ಶ್ರೀ ಶುಕರು ಭಾಗವತದಲ್ಲಿಯೂ ಹೇಳಿರುವರು (೫೮). ಆದ್ದರಿಂದ ದರ್ಶನಕ್ಕೆ ಧ್ಯಾನವೇ ಪ್ರಧಾನಾಂಗವೆಂದೂ, ಅದೇ ಅವಿದ್ಯೆಯೆಂಬ ಮನಸ್ಸಿನ ಮಲವನ್ನು ತೊಳೆದು, ಶುದ್ಧಗೊಳಿಸುತ್ತದೆಂದೂ ಸಿದ್ಧವಾಗುತ್ತದೆ; ಹೀಗೆ ಪರಿಶುದ್ಧವಾದ ಮನಸ್ಸೇ ಬ್ರಹ್ಮದರ್ಶನದಲ್ಲಿ ಕಾರಣವಾಗುತ್ತದೆ (೫೯). 'ಧೀ' ಶಬ್ದೋಕ್ತವಾದ

ಧೀಶಬ್ದೋಕ್ತಂ – ಧೀ ಶಬ್ದದಿಂದ ಹೇಳಲಾಗುವ, ಮನಃ – ಮನಸ್ಸೇ, ಸಾಕ್ಷಾತ್ಕಾರಸ್ಯ – ಪ್ರತ್ಯಕ್ಷ ದರ್ಶನದ, ಕರಣಂ ಕಿಲ – ಸಾಧನವು (ಇಂದ್ರಿಯ) ಎಂಬುದು ಸ್ಪಷ್ಟವಾಗುತ್ತದೆ, ಶ್ರವಣಂ – ಶ್ರವಣವು, ಅಂಗಾಂಗಂ–ಈ ಸಾಧನದ ಸಹಕಾರಿಯು, ದೃಷ್ಟಿಕಾರಣಂ – ದರ್ಶನದ ಕಾರಣವು, ನ ತರಾಂ ಕಿಲ–ಬೇರೆ ಯಾವುದೂ ಅಲ್ಲವೆಂಬುದೂ ಸ್ಪಷ್ಟವೇ.

**ಏವಂ ಚಾರ್ಥದ್ವಯಂ ಸಿದ್ಧಂ ಯದಸ್ಮಾಭಿರುದೀರಿತಂ ।**
**ಪರೋದೀರಿತಮಾರ್ಗೌ ಯೌ ಕುಮಾರ್ಗೌ ತೌ ಬಹಿರ್ಗತೌ ॥೬೧॥**

ಏವಂ–ಹೀಗೆ, ಅರ್ಥದ್ವಯಂಚ–ಧ್ಯಾನದ ಪ್ರಧಾನಾಂಗತ್ವ ಮತ್ತು ಮನಸ್ಸು ಇಂದ್ರಿಯತ್ವಗಳೆಂಬ ಎರಡು ಅರ್ಥಗಳೂ, ಯದಸ್ಮಾಭಿಃ–ಯಾವುವು ನಮ್ಮಿಂದ, ಉದೀರಿತಂ–ಹೇಳಲಾದವೋ, (ಅವು) ಸಿದ್ಧಂ–(ಉದಾಹೃತ ಭಾಗವತ ಶ್ಲೋಕ ದಿಂದ) ಸಿದ್ಧವಾದವು; ಪರೋದೀರಿತ ಮಾರ್ಗೌ–ಪರನಿಂದ ಹೇಳಲಾದ ಶ್ರವಣದ ಅಂಗಿತ್ವವೂ (ಪ್ರಧಾನ ಸಾಧನವೆಂಬುದೂ), ಮನನ ನಿದಿಧ್ಯಾಸನಗಳ ಅಂಗತ್ವವೆಂಬ (ಜ್ಞಾನೋತ್ತರ ಕಾಲದ ಸಾಧನಗಳೆಂಬ) ಎರಡು ಮಾರ್ಗಗಳೂ, ಯೌ–ಯಾವುವೋ, ತೌ–ಅವು, ಕುಮಾರ್ಗೌ–ದುಷ್ಟ ಪ್ರಕ್ರಿಯೆಗಳು, ಬಹಿರ್ಗತೌ–ಶಾಸ್ತ್ರದಿಂದ ಹೊರಗಿರುವುವು (ಹೊರದೂಡಲ್ಪಟ್ಟಿವೆ).

---

ಮನಸ್ಸು ಬ್ರಹ್ಮಸಾಕ್ಷಾತ್ಕಾರದ (ದರ್ಶನದ) ಕರಣವು –ಇಂದ್ರಿಯವೆಂದು ಈ ಭಾಗವತ ಶ್ಲೋಕದಿಂದ ಸಿದ್ಧವಾಗುತ್ತದೆ; ಶ್ರವಣವು ಮನಸ್ಸಿನ ಇಂದ್ರಿಯತ್ವ ಸಾಧನೆಯಲ್ಲಿ ಸಹಕಾರಿಯು ; ಪರಂಪರೆಯಿಂದ ದರ್ಶನ ಕಾರಣವಾಗುತ್ತದೆ– ಶ್ರವಣಕ್ಕೆ ಅದಕ್ಕಿಂತ ಅಧಿಕವಾದ ಸ್ಥಾನವಿಲ್ಲ (೬೦). ದರ್ಶನಕ್ಕೆ ಧ್ಯಾನವು ಪ್ರಧಾನಾಂಗವೆಂದೂ, ಮನಸ್ಸೇ ನೋಡುವ ಇಂದ್ರಿಯವೆಂದೂ, ಉಕ್ತಭಾಗವತ ಶ್ಲೋಕದಿಂದ ಸಿದ್ಧವಾಗುತ್ತದೆ; ನಮ್ಮಂತೆ ಈ ಉಭಯಾರ್ಥಗಳೂ ಸಿದ್ಧವಾದರೆ, ಪರನು ಹೇಳುವ, ಶ್ರವಣ ದರ್ಶನಕ್ಕೆ ಪ್ರಧಾನ ಸಾಧನವೆಂಬುದೂ, ಮನನ ನಿದಿಧ್ಯಾಸನಗಳು ಜ್ಞಾನೋತ್ತರಕಾಲದ ಸಾಧನಗಳೆಂದೂ ಹೇಳುವ ಉಭಯವೂ ದುಷ್ಟ ಪ್ರಕ್ರಿಯೆಗಳೆಂದೂ, ಶಾಸ್ತ್ರದಿಂದ ಹೊರಗಿರುವುದೆಂದೂ (ಶಾಸ್ತ್ರಬಹಿಷ್ಕೃತ

**ಪರೋಕ್ಷಜ್ಞಾನಕರಣಂ ಸಾಕ್ಷಾತ್ಕಾರಾಯ ಕೋ ವದೇತ್ ।**
**ಕೋ ವಾ ಶ್ರವಣಮಾತ್ರೇಣ ತಂ ಪಶ್ಯತಿ ಮಹಾಪ್ರಭುಂ ।**
**ಅಜ್ಞೈಶ್ಚ ಶಬ್ದಮಾತ್ರೇಣ ದೃಷ್ಟಶ್ಚೇತ್ಕಲಹಃ ಕುತಃ ॥ ೬೨ ॥**

ಪರೋಕ್ಷಜ್ಞಾನ ಕರಣಂ – ಪರೋಕ್ಷಜ್ಞಾನ ಸಾಧನವಾದ (ಚಕ್ಷುರಾದಿ ಇಂದ್ರಿಯವನ್ನು) ಕರಣವನ್ನು, ಸಾಕ್ಷಾತ್ಕಾರಾಯ–ಭಗವಂತ ಸಾಕ್ಷಾತ್ಕಾರಕ್ಕೆಂದು (ಬ್ರಹ್ಮದರ್ಶನ ಸಾಧನವೆಂದು), ಕಃ ವದೇತ್ – ಯಾವನು (ಮೂರ್ಖನು) ಹೇಳುತ್ತಾನೆ? ಕೋ ವಾ–ಯಾರೊಬ್ಬನು, ಶ್ರವಣಮಾತ್ರೇಣ–(ಶಬ್ದ) ಶ್ರವಣ ಮಾತ್ರದಿಂದ, ತಂ ಮಹಾಪ್ರಭುಂ–ಆ ಮಹಾಸ್ವಾಮಿಯಾದ ಭಗವಂತನನ್ನು, ಪಶ್ಯತಿ–ಕಾಣುತ್ತಾನೆ? (ಮೂರ್ಖನು ಮಾತ್ರ ಹಾಗೆ ಹೇಳುತ್ತಾನೆ); ಶಬ್ದ-ಮಾತ್ರೇಣ ಚ-ಶಬ್ದ ಮಾತ್ರದಿಂದಲೇ, ಅಜ್ಞೈಃ-ಅಜ್ಞಾನಿಗಳಿಂದ, ದೃಷ್ಟಃ ಚೇತ್–ಕಾಣಲ್ಪಡುವನಾದರೆ, ಕುತಃ–ಯಾವ ಕಾರಣದಿಂದ, ಕಲಹಂ–ಕಲಹವು (ವಾದಿ ಪ್ರತಿವಾದಿಗಳ ವಿವಾದವು ಸಂಭವಿಸುತ್ತದೆ?)

**ತೈಲಧಾರಾವದಚ್ಛಿನ್ನಗುಣಸಂಧಾನರೂಪಯಾ ।**
**ಮನೋಧಾರಣಯಾ ಯೋಗೀ ಪಶ್ಯೇಚ್ಚೇದುಚಿತಂ ಹಿ ತತ್ ॥೬೩॥**

ಧ್ಯಾನ ಸ್ವರೂಪವನ್ನು ನಿರೂಪಿಸಿ, ಅದೇ ಪ್ರಧಾನಾಂಗವೆಂದು ಹೇಳುತ್ತಾರೆ:—

ತೈಲಧಾರಾವತ್ – ತೈಲಧಾರೆಯಂತೆ (ಜಲಧಾರೆಯು ಮಧ್ಯೆ ವಿಚ್ಛಿನ್ನವಾಗಿರುತ್ತವೆ – ತೈಲಧಾರೆಯಲ್ಲಿ ಹಾಗಿರುವುದಿಲ್ಲ), ಅಚ್ಛಿನ್ನಗುಣಸಂಧಾನ

---

ವೆಂದೂ) ಸಹ ಸಿದ್ಧವಾಯಿತು (೬೧). ಪರೋಕ್ಷಜ್ಞಾನ ಸಾಧನಗಳಾದ ಚರ್ಮ ಚಕ್ಷು ಮೊದಲಾದ ಕರಣಗಳನ್ನು ಬ್ರಹ್ಮಸಾಕ್ಷಾತ್ಕಾರ ಸಾಧನವೆಂದು ಯಾವನು ಹೇಳುತ್ತಾನೆ? ; ಮತ್ತು ಶಬ್ದ ಶ್ರವಣಮಾತ್ರದಿಂದ ಆ ಮಹಾಸ್ವಾಮಿಯ ದರ್ಶನವಾಗುವುದೇ? ಹಾಗಿದ್ದರೆ ವಾದಿ ಪ್ರತಿವಾದಿಗಳಲ್ಲಿ ಈ ವಿಷಯಕ್ಕೆ ವಿವಾದವೇ ಇರುತ್ತಿರಲಿಲ್ಲ (೬೨). ತೈಲಧಾರೆಯಂತಿರುವ, ಭಗವದ್ಗುಣ ಚಿಂತನರೂಪದ, ಸಮಾಧಿಯಿಂದ, ಯೋಗಿಯು, ಬ್ರಹ್ಮದರ್ಶನವನ್ನು ಪಡೆಯುವನೆಂಬುದು

ರೂಪಯಾ – ವಿಚ್ಛೇದವಿಲ್ಲದ (ನಿರಂತರವಾದ) ಭಗವದ್ಗುಣ ಚಿಂತನ ರೂಪದ, ಮನೋಧಾರಣಯಾ – ಮನಸ್ಸನ್ನು (ಧರಿಸುವುದರಿಂದ, ಸಮಾಧಿಯಲ್ಲಿಡುವುದ ರಿಂದ); ಯೋಗೀ–ಯೋಗಿಯು, ಪಶ್ಯೇತ್ ಚೇತ್–ಕಾಣುತ್ತಾನೆಂದರೆ, ತತ್ ಉಚಿತಂ ಹಿ–ಅದು ಯೋಗ್ಯವೆನಿಸುತ್ತದೆಯಷ್ಟೆ.

**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಂ ।**
**ಇತಿ ಗೀತಾಸು ಹರಿಣಾ ನಿರಣಾಯಿ ಮತಂ ಮಮ ॥ ೬೪ ॥**

ಧ್ಯಾನದಿಂದ ಪ್ರಸನ್ನನಾದ ಭಗವಂತನಿಂದ ದತ್ತವಾದ ಕಣ್ಣಿಂದಲೇ ಭಗವದ್ದರ್ಶನವು; ಶಬ್ದ ಮಾತ್ರದಿಂದಲ್ಲ, ಎಂಬಲ್ಲಿ ಗೀತಾವಾಕ್ಯವನ್ನು ಆಧಾರ ವಾಗಿ ಉದಹರಿಸುತ್ತಾರೆ :—

ದಿವ್ಯಂ ಚಕ್ಷುಃ – ದಿವ್ಯವಾದ (ಅಲೌಕಿಕವಾದ – ಲೋಕವಿಲಕ್ಷಣವಾದ) ಕಣ್ಣನ್ನು, ತೇ – ನಿನಗೆ, ದದಾಮಿ – ಕೊಡುತ್ತೇನೆ, ಮೇ – ನನ್ನ, ಐಶ್ವರಂ– ಭಗವತ್ಸಂಬಂಧವಾದ, ಯೋಗಂ –(ಅನುಗ್ರಹ) ಸಾಮರ್ಥ್ಯವನ್ನು, ಪಶ್ಯ– ತಿಳಿಯುವನಾಗು; ಇತಿ–ಹೀಗೆ, ಗೀತಾಸು–ಗೀತೆಯಲ್ಲಿ, ಹರಿಣಾ–ಶ್ರೀಕೃಷ್ಣ ನಿಂದ, ಮಮ ಮತಂ–ನನ್ನ ಅಭಿಪ್ರಾಯವೇ, ನಿರಣಾಯಿ–ನಿರ್ಣಯಿಸಲ್ಪಟ್ಟಿದೆ.

**ಅವಿದ್ಯಾಂ ಕಿಲ ವಿದ್ರಾವ್ಯ ದಿವ್ಯಂ ಚಕ್ಷುರ್ದೃಶೇ ದಿಶೇತ್ ।**
**ಸಾಕ್ಷಾದ್ಧೀಕರಣಾದೇವ ಸಾಕ್ಷಾದ್ಧೀಃ ಸಂಸ್ಕೃತಾದಪಿ ।**
**ನಾನ್ಯಸ್ಮಾದ್ಯದ್ದದೌ ದಿವ್ಯಂ ಚಕ್ಷುರೇವ ನಿರೀಕ್ಷಿತುಂ ॥ ೬೫ ॥**

ಈ ಶ್ಲೋಕದ (ಗೀತೆಯ) ತಾತ್ಪರ್ಯವನ್ನು ಹೇಳುತ್ತಾರೆ :—

---

ಪರಮಯೋಗ್ಯವಾಗುತ್ತದೆ; ಆದ್ದರಿಂದ, ಧ್ಯಾನವೇ ದರ್ಶನಕ್ಕೆ ಪ್ರಧಾನಾಂಗವು (ಸಾಧನವು) (೬೩). ಈ ನನ್ನ ಮತ ಪ್ರಕ್ರಿಯೆಯನ್ನು, ಗೀತೆಯಲ್ಲಿ ಶ್ರೀಕೃಷ್ಣನೇ ನಿರ್ಣಯಿಸಿ ಹೇಳಿರುವನು; 'ದಿವ್ಯಂ ದದಾಮಿ ತೇ ಚಕ್ಷುಃ' ಎಂದು, ವಿಲಕ್ಷಣ ದರ್ಶನ ಶಕ್ತಿಯನ್ನು ಕೊಡುವದಾಗಿಯೂ, ತನ್ನ ಅನುಗ್ರಹ ಸಾಮರ್ಥ್ಯವನ್ನು ತಿಳಿಯೆಂದು ಹೇಳಿರುವುದೂ ಇದನ್ನೇ ಸಾಧಿಸುತ್ತದೆ (೬೪). ಮನಸ್ಸಿನಿಂದ ಅವಿದ್ಯೆಯನ್ನು ತೊಲಗಿಸಿ, ಶ್ರೀ ಕೃಷ್ಣಾನುಗ್ರಹವೆಂಬ ಸಂಸ್ಕಾರದಿಂದ ಮನಸ್ಸಿಗೆ ದರ್ಶನ ಶಕ್ತಿಯನ್ನು (ಕರಣತ್ವವನ್ನು– ಇಂದ್ರಿಯತ್ವ, ಚಕ್ಷುತ್ವವನ್ನೇ) ಕರುಣಿಸಿ,

(ವಿಶ್ವರೂಪವನ್ನು ನೋಡಲು ಅರ್ಜುನನ ಕಣ್ಣಿಗೆ ಶಕ್ತಿಯಿಲ್ಲದ್ದರಿಂದ, ಆ ಸಾಮರ್ಥ್ಯ ಪ್ರತಿಬಂಧಕವಾದ ಅವಿದ್ಯೆಯನ್ನು ಮನಸ್ಸಿನಿಂದ ತೆಗೆದುಹಾಕಲು) ಅವಿದ್ಯಾಂ ವಿದ್ರಾವ್ಯ–ಅವಿದ್ಯೆಯನ್ನು ಓಡಿಸಿ, ಯತ್–ಯಾವ ಕಾರಣದಿಂದ, ದೃಶೇ–(ವಿಶ್ವರೂಪವನ್ನು) ನೋಡುವುದಕ್ಕೆ, ದಿವ್ಯಂ ಚಕ್ಷುಃ–ವಿಲಕ್ಷಣವಾದ ನೋಡುವಶಕ್ತಿಯನ್ನು (ಚಕ್ಷುವನ್ನು), ದಿಶೇತ್–ಕೊಟ್ಟನೋ (ಕೊಡುವನೋ), ಸಂಸ್ಕೃತಾತ್–(ಭಗವದನುಗ್ರಹವೆಂಬ) ಸಂಸ್ಕಾರದಿಂದ, ಸಾಕ್ಷಾದ್ಧೀಕರಣಾತ್ ಏವ – ಸ್ವಯಂ ಮನಸ್ಸನ್ನೇ ಕರಣವನ್ನಾಗಿ ಮಾಡಿದ್ದರಿಂದಲೇ, ಸಾಕ್ಷಾದ್ಧೀಃ– ಸಾಕ್ಷಾದ್ದರ್ಶನವು; ನಾನ್ಯಸ್ಮಾತ್ – ಬೇರಾವ ಕಾರಣದಿಂದಲೂ ಅಲ್ಲ (ಶಬ್ದ ಮಾತ್ರದಿಂದ ಅಲ್ಲವೇ ಅಲ್ಲ); ನಿರೀಕ್ಷಿತುಂ–ಭಗವಂತನನ್ನು ನೋಡಲು, ದಿವ್ಯಂ ಚಕ್ಷುರೇವ ದದೌ–ವಿಲಕ್ಷಣವಾದ ದರ್ಶನಶಕ್ತಿಯನ್ನೇ (ಮನಸ್ಸಿಗೆ) ಕೊಟ್ಟನು (ಮನಸ್ಸೇ ಚಕ್ಷುವಿನ ವ್ಯಾಪಾರವನ್ನು ಮಾಡಿತು).

**ಚಷ್ಟೇಽನೇನೇತಿ ತಚ್ಚಕ್ಷುರ್ಮನೋ ವಾ ಬಾಹ್ಯಮೇವ ವಾ ।**
**ಚಕ್ಷುಃ ಸಹಾಯೇನ ಮನೋ ಯತಃ ಪಶ್ಯತಿ ತಂ ಬಹಿಃ ॥ ೬೬ ॥**

ಮನಸ್ಸಿನ ಕರಣತ್ವವನ್ನು (ಇಂದ್ರಿಯತ್ವವನ್ನು) ವಿಶದಗೊಳಿಸುತ್ತಾರೆ :—

ಚಷ್ಟೇ ಅನೇನ ಇತಿ–ಇದರಿಂದ ನೋಡುತ್ತಾನೆ, ಎಂಬುದರಿಂದ, (ಈ ವ್ಯುತ್ಪತ್ತಿಯಿಂದ), ತಚ್ಚಕ್ಷುಃ–(ಗೀತೋಕ್ತ) ಚಕ್ಷುವು (ಬಹಿಸ್ಥಿತವನ್ನು ಕಾಣು ವಾಗಲೂ ಮನಸ್ಸಿಗೇ ಪ್ರಾಧಾನ್ಯವು); ಮನೋವಾ–ಮನಸ್ಸಾಗಲಿ, ಬಾಹ್ಯಂ

---

ವಿಶ್ವರೂಪವನ್ನು ಕಾಣುವ ಶಕ್ತಿಯನ್ನಿತ್ತನು—ಬೇರಾವ ಸಾಧನದಿಂದಲೂ ಅಲ್ಲ; ಶಬ್ದಮಾತ್ರದಿಂದ ಅಲ್ಲವೇ ಅಲ್ಲ; ಮನಸ್ಸೇ ಚಕ್ಷುರಿಂದ್ರಿಯದ ವ್ಯಾಪಾರವನ್ನು ಮಾಡಿತು–ಅದೇ ದಿವ್ಯ ಚಕ್ಷುವೆಂದು ಉಕ್ತಶ್ಲೋಕದ ತಾತ್ಪರ್ಯವಾಗಿದೆ (೬೫). 'ಚಷ್ಟೇ ಅನೇನ ಇತಿ'–ಇದರಿಂದ ನೋಡುತ್ತಾನೆ, ಎಂಬ ವ್ಯುತ್ಪತ್ತಿಯಿಂದ, ಮನಸ್ಸಾಗಲಿ, ಬಾಹ್ಯ ಚಕ್ಷುವಾಗಲಿ, ಚಕ್ಷುಃ ಶಬ್ದವಾಚ್ಯವಾಗುತ್ತದೆ; ಅರ್ಜುನನು ಹೊರಗಿರುವ ಶ್ರೀಕೃಷ್ಣನ ವಿಶ್ವರೂಪವನ್ನು ದಿವ್ಯಶಕ್ತಿಯುತವಾದ ಮನಸ್ಸಿನಿಂದ, ಬಾಹ್ಯ ಚಕ್ಷುವಿನ ದ್ವಾರಾ (ಸಹಾಯದಿಂದ) ಕಂಡನು; ಗೀತೋಕ್ತ ಚಕ್ಷು ಶಬ್ದವು, ಮನಸ್ಸು ಮತ್ತು ಚಕ್ಷುಗಳೆರಡನ್ನೂ ಸಂಗ್ರಹಿಸುತ್ತದೆ; ಪ್ರಧಾನ

ಏವ ವಾ–ಹೊರಗೆ ತೋರುವುದಾಗಲಿ (ಚಕ್ಷುವೆನಿಸುತ್ತದೆ) ; ಯತಃ–ಏಕೆಂದರೆ, ಚಕ್ಷುಃ ಸಹಾಯೇನ–ಚಕ್ಷುವಿನ ಸಹಾಯದಿಂದ, ಮನಃ–ಮನಸ್ಸು, ಪಶ್ಯತಿ–ನೋಡುತ್ತದೆ.[1]

**ಕಿಂಚ ದಕ್ಷಶಿರಶ್ಛಿಂದನ್ನಚ್ಛೇದೇ ಕಾರಣಂ ಪುರಾ ।**
**ಅಪಶ್ಯತ್ಕಿಲ ತದ್ದೃಷ್ಟ್ಯೈ ದಧ್ಯೌ ಪಶುಪತಿಶ್ಚಿರಂ ॥ ೬೭ ॥**
**ಇತಿ ಭಾಗವತೇ ಧ್ಯಾನಾತ್ ಪೂರ್ವಂ ದೃಷ್ಟೇರಭಾವತಃ ।**
**ತದಭಾವೇಽಭಾವರೂಪಂ ವ್ಯತಿರೇಕಮುದರ್ಶಯತ್ ॥ ೬೮ ॥**

ಧ್ಯಾನವೇ ಪ್ರಧಾನಾಂಗವು ; ಶ್ರವಣವಲ್ಲ, ಎಂಬಲ್ಲಿ ಭಾಗವತ ಕಥಾಂತರ ಸಮ್ಮತಿಯನ್ನು ತೋರಿಸುತ್ತಾರೆ :—

ಕಿಂಚ – ಮತ್ತೂ ಏನೆಂದರೆ, ದಕ್ಷಶಿರಃ – ದಕ್ಷಶಿರವನ್ನೂ, ಛಿಂದನ್–ಕತ್ತರಿಸುವ ರುದ್ರದೇವನು (ವೀರಭದ್ರರೂಪನು), ಅಚ್ಛೇದೇ–ಕತ್ತರಿಸದಿರುವುದರಲ್ಲಿ, ಕಾರಣಂ–ಕಾರಣವನ್ನು, ಪುರಾ–ಮೊದಲು, ನ ಅಪಶ್ಯತ್ ಕಿಲ–ತಿಳಿದಿರಲಿಲ್ಲವಷ್ಟೆ ; ತದ್ದೃಷ್ಟ್ಯೈ – ಅದನ್ನು ತಿಳಿಯಲು, ಪಶುಪತಿಃ – ರುದ್ರನು, ಚಿರಂ–

---

ಸಾಧನವು ಮನಸ್ಸೇ ಆಗಿದೆ (೬೬). ಭಾಗವತದಲ್ಲಿ, ರುದ್ರನು ದಕ್ಷನ ಶಿರಸ್ಸನ್ನು ಕತ್ತರಿಸಲು, ಅಭಿಮಂತ್ರಿತವಾದ (ಶಸ್ತ್ರಾಸ್ತ್ರ) ಆಯುಧಗಳನ್ನು ಪ್ರಯೋಗಿಸಿದರೂ ಆತನ ದೇಹದ ಚರ್ಮ ಸಹ ಕತ್ತರಿಸದಿರುವುದನ್ನು ಕಂಡು ಆಶ್ಚರ್ಯಚಕಿತನಾಗಿ, ಅದರ ಕಾರಣವನ್ನು ತಿಳಿಯಲು ಚಿರಕಾಲ ಧ್ಯಾನಮಗ್ನನಾಗಿ, ಧ್ಯಾನದಿಂದ ಆ ಜ್ಞಾನವನ್ನುಪಡೆದು ಮುಂದೆ ಕಾರ್ಯಪ್ರವೃತ್ತನಾದನೆಂದೂ, ಹೇಳಲಾಗಿದೆ ; ಅಜ್ಞಾತವಾದ ಕಾರಣವನ್ನು ತಿಳಿಯಲು ಸಹ ಧ್ಯಾನವು ಅವಶ್ಯಕವಾಗಿರಲು, ಬ್ರಹ್ಮಸಾಕ್ಷಾತ್ಕಾರವು ಶ್ರವಣಮಾತ್ರದಿಂದಾಗುವುದೇ ? ಶಕ್ಯವಿಲ್ಲೆಂದು, ಈ ಭಾಗವತೋಕ್ತಿಯು ಸಾಧಿಸುತ್ತದೆ ; ಹಾಗೆಯೇ ಧ್ಯಾನವಿಲ್ಲದೇ ದರ್ಶನವಿಲ್ಲೆಂಬ

---

1 'ಚಕ್ಷುಷಾ ಪಶ್ಯತಿ, ಮನಸಾ ಪಶ್ಯತಿ, ಸುಖಂ ಪಶ್ಯತಿ', ಎಂದು ಶ್ರುತಿಸ್ಮೃತಿಗಳ ಸಂಮತವಾದ ಪ್ರಯೋಗವೂ ಇದೆ ; ಗೀತೋಕ್ತ ಚಕ್ಷುಶಬ್ದವು, ಮನಸ್ಸು ಮತ್ತು ಚಕ್ಷುಗಳೆರಡನ್ನೂ ಸಂಗ್ರಹಿಸುತ್ತದೆ—ಅದರಲ್ಲಿ ಪ್ರಧಾನವಾದುದು ಮನಸ್ಸೇ ಎಂದು ತಿಳಿಯಬೇಕು.

ಬಹುಕಾಲ (ದೀರ್ಘವಾಗಿ), ದಧ್ಯೌ–ಧ್ಯಾನಿಸಿದನು; ಇತಿ–ಎಂದು, ಭಾಗವತೇ–ಭಾಗವತದಲ್ಲಿ, ಪೂರ್ವಂ–ಮೊದಲು, ದೃಷ್ಟೇಃ–ಜ್ಞಾನದ, ಅಭಾವತಃ–ಅಭಾವವಿದ್ದ ಕಾರಣದಿಂದ, ಧ್ಯಾನಾತ್ – ಧ್ಯಾನವು ಉಕ್ತವಾಗಿರುವುದರಿಂದ, ತದಭಾವೇ–ಧ್ಯಾನದ ಅಭಾವದಲ್ಲಿ (ಧ್ಯಾನಿಸದಿದ್ದರೆ), ಅಭಾವರೂಪಂ–(ಜ್ಞಾನದ) ಅಭಾವವನ್ನೇ (ರಾಹಿತ್ಯವೆಂಬ), ವ್ಯತಿರೇಕಂ–(ಧ್ಯಾನವಿಲ್ಲದೇ ಜ್ಞಾನವಿಲ್ಲವೆಂಬ) ವ್ಯತಿರೇಕ ವ್ಯಾಪ್ತಿಯನ್ನು, ಅದರ್ಶಯತ್–ತೋರಿಸಿತು (ಈ ಭಾಗವತ ವಾಕ್ಯವು).[1]

**ದೃಷ್ಟ್ವಾ ಸಂಜ್ಞಪನೇ ಯೋಗಮಿತಿ ಧ್ಯಾನೋತ್ತರಕ್ಷಣೇ ।**
**ದೃಷ್ಟಂ ಬ್ರವೀತಿ ಯತ್ತೇನ ತತ್ಸತೇತ್ತ್ವ ಸತ್ತ್ವರೂಪಿಣಂ ।**
**ಅನ್ವನುಂಸ್ತಾನ್ವಯಂ ಧ್ಯಾನಾದದೃಶ್ಯಾರ್ಥಸ್ಯ ದರ್ಶನೇ ॥ ೭೯ ॥**

ಸಂಜ್ಞಪನೇ – ಪಶುಹಿಂಸೆಯಲ್ಲಿ, ಧ್ಯಾನೋತ್ತರಕ್ಷಣೇ – ಧ್ಯಾನಮಾಡಿದ ಮರುಕ್ಷಣದಲ್ಲಿ, ಯೋಗಂ – ಉಪಾಯುವನ್ನು, ದೃಷ್ಟ್ವಾ–ತಿಳಿದು, ದೃಷ್ಟಂ –

---

ವ್ಯತಿರೇಕ ವ್ಯಾಪ್ತಿಯನ್ನು ಇಲ್ಲಿಯೇ ಸಾಧಿಸಲಾಗಿದೆ (೬೭-೬೮). ಧ್ಯಾನೋತ್ತರಕ್ಷಣದಲ್ಲಿ ಪಶುಪತಿಯು, ದಕ್ಷಶಿರಚ್ಛೇದದ ಉಪಾಯುವನ್ನು ಕಂಡನು (ಜ್ಞಾನವನ್ನು ಪಡೆದನು) ; ಯಜ್ಞದ ಯಜಮಾನನಾದ ದಕ್ಷನನ್ನೇ ಪಶುವನ್ನಾಗಿ, ಶ್ರೀಹರಿಗೆ ಅಗ್ನಿದ್ವಾರಾ ಅರ್ಪಿಸುವೆನೆಂದು ಸಂಕಲ್ಪಿಸಿ, ಶ್ರೀಹರಿಯ ಅನುಗ್ರಹದಿಂದ, ಮೊದಲು ದಕ್ಷ ಶಿರವು ಅಚ್ಛೇದ್ಯವಾಗಿದ್ದುದರ ನಿಜವಾದ ಕಾರಣವನ್ನು ತಿಳಿದನು

---

[1] 'ಶಸ್ತ್ರೈರಸ್ತ್ರಾನ್ವಿತೈರೇನಮನಿರ್ಭಿನ್ನತ್ವಚಂ ಹರಃ । ವಿಸ್ಮಯಂ ಪರಮಾಪನ್ನೋ-ದಧ್ಯೌ ಪಶುಪತಿಶ್ಚಿರಂ' ಎಂಬುದು ಪ್ರಸಕ್ತವಾದ ಭಾಗವತ ಶ್ಲೋಕವು ; ಇದರ ಅರ್ಥವೇನೆಂದರೆ :—

ಹರಃ – ರುದ್ರನು, ಅಸ್ತ್ರಾನ್ವಿತೈಃ ಶಸ್ತ್ರೈಃ – ಅಸ್ತ್ರಸಹಿತವಾದ ಶಸ್ತ್ರಗಳಿಂದ (ಅಭಿಮಂತ್ರಿತವಾದ ಆಯುಧಗಳಿಂದಲೂ), ಏನಂ–ಈ ದಕ್ಷನನ್ನು, ಅನಿರ್ಭಿನ್ನತ್ವಚಂ–ಚರ್ಮವೂ ಸೀಳದಿರುವವನನ್ನು (ಕಂಡು), ಪರಂ ವಿಸ್ಮಯಂ–ಅತ್ಯಂತವಾಗಿ ಆಶ್ಚರ್ಯವನ್ನು, ಆಪನ್ನಃ–ಹೊಂದಿ, ಪಶುಪತಿಃ–ರುದ್ರದೇವನು, ಚಿರಂ–ಬಹಳ ಹೊತ್ತು, ದಧ್ಯೌ–ಧ್ಯಾನಿಸಿದನು, ಅದೃಷ್ಟವಾದ ಕಾರಣವನ್ನು ತಿಳಿಯಲು, ಧ್ಯಾನದ ಅವಶ್ಯಕತೆ ಇರುವಾಗ, ಭಗವಂತನ ಅಪರೋಕ್ಷ ದರ್ಶನಕ್ಕೆ ಧ್ಯಾನದ ಅವಶ್ಯಕತೆ ಇಲ್ಲವೇ? ಶ್ರವಣವೇ ದರ್ಶನವನ್ನು ದೊರಕಿಸಬಹುದೇ ? (ಶಕ್ಯವಿಲ್ಲ).

ತಿಳಿದುದನ್ನೇ, ಯತ್–ಯಾವ ಕಾರಣದಿಂದ, ಬ್ರವೀತಿ–(ರುದ್ರನು) ಹೇಳುವನೋ ತೇನ–ಆ ಕಾರಣದಿಂದ, ತತ್ಸತ್ತ್ವೇ – (ಧ್ಯಾನವು) ಅದು ಇರುತ್ತಿರಲು, ಅದೃಶ್ಯಾರ್ಥಸ್ಯ–ತಿಳಿಯದ ವಿಷಯದ, ದರ್ಶನೇ–ಜ್ಞಾನದಲ್ಲಿ, ಧ್ಯಾನಾತ್–ಧ್ಯಾನದಿಂದ, ಅನ್ವಯಂ–ಅನ್ವಯಾನುಮಾನದಿಂದ (ಧ್ಯಾನವಿದ್ದಲ್ಲಿ ಜ್ಞಾನವೆಂಬ ಅನ್ವಯವನ್ನು) ಸತ್ತ್ವರೂಪಿಣಂ–ಸತ್ತ್ವ ಸ್ವರೂಪನಾದ ಭಗವಂತನನ್ನು; ಅನ್ವಮಂಸ್ತ–ಕಾರಣನನ್ನಾಗಿ (ಶಸ್ತ್ರಾಸ್ತ್ರಗಳಿಂದ ಶಿರಚ್ಛಿನ್ನವಾಗದಿರಲು ಕಾರಣನನ್ನಾಗಿ) ತಿಳಿದನು.[1]

**ರೌದ್ರೀ ವಿದ್ಯಾಽನವದ್ಯೇತ್ಥಂ ಧ್ಯಾನಸ್ಯ ದೃಶಿಹೇತುತಾಂ ।**
**ಅನ್ವಯವ್ಯತಿರೇಕಾಭ್ಯಾಂ ನಿರ್ಣಿನಾಯೇತಿ ಮೇ ಮತಿಃ ॥ ೭೦ ॥**

ಅನವದ್ಯಾ – ದೋಷರಹಿತವಾದ, ರೌದ್ರೀವಿದ್ಯಾ – ರುದ್ರಕೃತವಾದ ಧ್ಯಾನವು, ಇತ್ಥಂ – ಹೀಗೆ, ಅನ್ವಯವ್ಯತಿರೇಕಾಭ್ಯಾಂ – ಅನ್ವಯ ಮತ್ತು ವ್ಯತಿರೇಕಗಳೆಂಬ ಅನುಮಾನಗಳಿಂದ, ಧ್ಯಾನಸ್ಯ–ಧ್ಯಾನಕ್ಕೆ, ದೃಶಿಹೇತುತಾಂ–ಜ್ಞಾನಸಾಧನತ್ವವನ್ನು, ನಿರ್ಣಿನಾಯ–ನಿಶ್ಚಯಿಸಿತು, ಇತಿ–ಎಂದು, ಮೇ–ನನ್ನ, ಮತಿಃ–ನಿಶ್ಚಯವು.

---

(ಯಜ್ಞ ಭಂಗದಿಂದ ಕುಪಿತನಾದ ಶ್ರೀಹರಿಯ ವ್ಯಾಪಾರವೆಂದು ತಿಳಿದನು); ಇದರಿಂದ ಧ್ಯಾನದಿಂದ, ಜ್ಞಾನವೆಂಬ ಅನ್ವಯಾನುಮಾನವೂ ಸಿದ್ಧವಾಯಿತು (೬೯). ನಿರ್ದುಷ್ಟವಾದ ಭಾಗವತೋಕ್ತ ರುದ್ರಸಂಬಂಧವಾದ ಈ ವಿದ್ಯೆಯು (ಧ್ಯಾನವು,) ಅನ್ವಯ ವ್ಯತಿರೇಕಗಳೆಂಬ ಉಭಯ ಅನುಮಾನಗಳಿಂದಲೂ, ಧ್ಯಾನವು ಜ್ಞಾನಸಾಧನವೆಂದು ನಿರ್ಣಯಿಸುತ್ತದೆಂದು ನನ್ನ ನಿಶ್ಚಿತಾಭಿಪ್ರಾಯ

1. ಸ್ವಯಜ್ಞಭಂಗದಿಂದ ಕುಪಿತನಾದ ಶ್ರೀಹರಿಯೇ ಶಿರಚ್ಛೇದಕ್ಕೆ ಅವಕಾಶ ಕೊಡುತ್ತಿಲ್ಲವೆಂದು ತಿಳಿದು, ಯಜಮಾನನಾದ ದಕ್ಷನನ್ನೇ ಪಶುವನ್ನಾಗಿ ಮಾಡಿ ಅಗ್ನಿಯಲ್ಲಿ ಭಗವಂತನಿಗೆ ಆಹುತಿಯಾಗಿ ಅರ್ಪಿಸುತ್ತೇನೆಂದು ಸಂಕಲ್ಪಿಸಿ, ಶಿರಚ್ಛೇದದ ಉಪಾಯವನ್ನು ಕಂಡುಕೊಂಡನು–ಶಿವನು; ಇದನ್ನೇ ಭಾಗವತದಲ್ಲಿ, 'ದೃಷ್ಟ್ವಾ ಸಂಜ್ಞಪನೇ ಯೋಗಂ ಪಶೂನಾಂ ಸಪತಿರ್ಮಖೇ । ಯಜಮಾನಪಶೋಸ್ತಸ್ಯ ಕಾಯಾತ್ತೇನಾಹರಚ್ಛಿರಃ' ಎಂಬ ವಾಕ್ಯದಿಂದ ಹೇಳಲಾಗಿದೆ, ತಾತ್ಪರ್ಯಾರ್ಥವು ಹಿಂದಿನ ವಿವರಣೆಯಿಂದ ಸ್ಪಷ್ಟವೇ ಇದೆ.

**ರುದ್ರೋಽಪ್ಯದ್ರಾವಯದ್ಯಸ್ಯಾಃ ಕ್ಷುದ್ರೋಪದ್ರವಹೃದ್ರುಜಂ ।**
**ಹೃದ್ಯಾ ಮಧ್ವಸ್ಯ ಶುದ್ಧಾ ಸಾ ವಿದ್ಯಾ ವಿದ್ಯೋತತೇ ತರಾಂ ॥ ೭೧ ॥**

ಭಾಗವತ ಭಾರತಾದಿ ರಹಸ್ಯಾನುಕೂಲವಾದ ಶ್ರೀಮಧ್ವರ ವಿದ್ಯೆಯನ್ನು ಸ್ತುತಿಸುತ್ತಾರೆ :—

ರುದ್ರಃ ಅಪಿ—ರುದ್ರದೇವನೂ ಸಹ, ಯಸ್ಯಾಃ—ಯಾವ ತನ್ನ ಜ್ಞಾನದ, ಕ್ಷುದ್ರೋಪದ್ರವಹೃದ್ರುಜಂ—ಅಲ್ಪವಾದ ಪೀಡಾರೂಪದ ಮನೋರೋಗವನ್ನು (ಶ್ರವಣದಿಂದ ಅಪರೋಕ್ಷವು ; ನಿದಿಧ್ಯಾಸನಸಹಕೃತವಾದ ಮನಸ್ಸಿನಿಂದಲ್ಲವೆಂಬ ವಿಪರೀತಜ್ಞಾನರೂಪದ ರೋಗವನ್ನು ), (ಪರನ ಇಷ್ಟದೇವತೆಯಾದ—ಪರಸಮ್ಮತನಾದ ಶಿವನಿಂದಲೇ ತಿರಸ್ಕೃತವಾದ್ದರಿಂದ, ಈ ಶಂಕೆಯು ಕ್ಷುದ್ರವು), ದ್ರಾವಯತ್—ತೊಲಗಿಸಿದನೋ, ಸಾ—ಆ, ಶುದ್ಧಾ—ಶುದ್ಧವಾದ (ದುಷ್ಟಶಂಕಾಸರ್ವಸ್ವಪರಿಹಾರಕವಾದ), ಮಧ್ವಸ್ಯ—ಶ್ರೀಮದಾಚಾರ್ಯರ, ಹೃದ್ಯಾ—ಮನೋಹರವಾದ, ವಿದ್ಯಾ—ವಿದ್ಯೆಯು, ತರಾಂ—ಅತಿಶಯವಾಗಿ (ಇತರೋಪದೇಶಗಳಿಂದ ಅಧಿಕವಾಗಿ), ವಿದ್ಯೋತತೇ—ಪ್ರಕಾಶಿಸುತ್ತದೆ (ವಿರಾಜಿಸುತ್ತದೆ).

**ಇದಂ ತ್ರಯಂ ಪ್ರಧಾನಾಂಗಂ ಮನಃ ಕರಣಮುಚ್ಯತೇ ।**
**ಪ್ರತಿಬಂಧೇ ನ ತತ್ಪಶ್ಯೇತ್ತದಪಾಯೇ ತು ಪಶ್ಯತಿ ॥ ೭೨ ॥**

ಇದಂ ತ್ರಯಂ—ಶ್ರವಣಾದಿ ಈ ಮೂರೂ, ಪ್ರಧಾನಾಂಗಂ—(ಕರ್ಮಾದಿ ಅನ್ಯಸಾಧನೆಗಳಕ್ಕಿಂತ) ಮುಖ್ಯವಾದ ದರ್ಶನಸಾಧನಗಳು ; (ಹಿಂದೆ ಹೇಳಿದಂತೆ

---

ವಾಗಿದೆ (೭೦). ರುದ್ರನೂ ಸಹ, ಜ್ಞಾನಾಭಾವರೂಪದ ಅಲ್ಪಮನೋರೋಗವನ್ನು ಧ್ಯಾನದಿಂದ, ಪರಿಹರಿಸಿಕೊಂಡು (ತತ್ಕಾಲದಲ್ಲಿ ದಕ್ಷ ಶಿರಸ್ಸು ಶಸ್ತ್ರಾಸ್ತ್ರಗಳಿಂದ ಸಹ ಅಚ್ಛೇದ್ಯನಾಗಿರುವ ಕಾರಣವನ್ನು ತಿಳಿದು, ಅಜ್ಞಾನ ಪರಿಹಾರಕವಾದ ಜ್ಞಾನವನ್ನು) ಹೊಂದಿದನು ; ಈ ಭಾಗವತ ವೃತ್ತಾಂತವು, ನಿದಿಧ್ಯಾಸನ ಸಹಕೃತವಾದ ಮನಸ್ಸಿನಿಂದ ಜ್ಞಾನಲಾಭವೆಂದೂ, ಕೇವಲ ಶ್ರವಣವು ಯಥಾರ್ಥ ಜ್ಞಾನ ಪ್ರಾಪಕವಲ್ಲೆಂದೂ, ಸಾಧಿಸುತ್ತದೆ ; ಈ ಮೊದಲಾದ ಶ್ರೀಮಧ್ವರ ಮನೋಹರವಾದ ಸಿದ್ಧಾಂತವನ್ನೊಳಗೊಂಡ, ನಿರ್ದುಷ್ಟವಾದುದು ; ಸರ್ವ ಶಂಕಾ ನಿವರ್ತಕವು, ಸರ್ವವಿದ್ಯೆಗಳ ಮಧ್ಯೆ, ಅತಿಶಯ ಆಕರ್ಷಕವಾಗಿ ವಿರಾಜಿಸುತ್ತದೆ (೭೧). ಶ್ರವಣಾದಿ ತ್ರಯವು (ಶ್ರವಣ, ಮನನ, ನಿದಿಧ್ಯಾಸನವೆಂಬ

ಇವುಗಳ ಮಧ್ಯೆ ನಿದಿಧ್ಯಾಸನವು ಪ್ರಧಾನವೆಂಬುದನ್ನು ಗಮನಿಸಬೇಕು); ಮನಃ–ಮನಸ್ಸು, ಕರಣಂ–ಕರಣವೆಂದು (ದರ್ಶನಮಾಡುವ ಇಂದ್ರಿಯವೆಂದು), ಉಚ್ಯತೇ – ಹೇಳಲಾಗುತ್ತದೆ; ಪ್ರತಿಬಂಧೇ – (ಮನಸ್ಸಿಗೆ ಅವಿದ್ಯಾರೂಪದ) ಪ್ರತಿಬಂಧವಿದ್ದಲ್ಲಿ, ತತ್–ಬ್ರಹ್ಮನನ್ನು, ನ ಪಶ್ಯೇತ್–ಕಾಣುವುದಿಲ್ಲ; ತದಪಾಯೇ–ಅದರ ಪ್ರತಿಬಂಧವು ನಷ್ಟವಾಗಲು, ಪಶ್ಯತಿ ತು–ನಿಯಮೇನ ಕಾಣುತ್ತದೆ.

**ಪ್ರತಿಬಂಧನಿವೃತ್ತ್ಯರ್ಥಂ ಶ್ರವಣಾದ್ಯಪಿ ಮೃಗ್ಯತೇ ।**
**ಅತಃ ಶ್ರುತಿಃ ಶ್ರವಣತೋ ಮುಕ್ತಿರಿತ್ಯಪಿ ಸಾ ಜಗೌ ।**
**ಏವಂ ಚ ಮನಸೈವೇತಿ ಶ್ರೌತಾವಧೃತಿರಪ್ಯಭೂತ್ ॥ ೭೩ ॥**

ಪ್ರತಿಬಂಧನಿವೃತ್ತ್ಯರ್ಥಂ – ಪ್ರತಿಬಂಧದ (ಅವಿದ್ಯೆಯ) ನಿವೃತ್ತಿಗಾಗಿ, ಶ್ರವಣಾದ್ಯಪಿ–ಶ್ರವಣಮನನಗಳನ್ನು (ಕರ್ಮಾದಿಗಳನ್ನು ), ಮೃಗ್ಯತೇ–(ಮನಸ್ಸಿನಿಂದ) ಹುಡುಕುತ್ತಾನೆ (ಅಧಿಕಾರಿಯು); ಅತಃ ಈ ಕಾರಣದಿಂದ, ಶ್ರುತಿಃ–ಶ್ರುತಿಯು, ಶ್ರವಣತಃ–ಶ್ರವಣದಿಂದ, ಮುಕ್ತಿಃ–ಮೋಕ್ಷವು, ಇತ್ಯಪಿ–ಎಂದೂ ('ಶ್ರುತ್ವೈವ ಮೋಕ್ಷಮಾಪ್ನೋತಿ' ಇತ್ಯಾದಿಯಾಗಿ), ಜಗೌ–ಹೇಳಿತು (ಹೇಳುತ್ತದೆ); ಏವಂ ಚ–ಹೀಗೆ (ಪೂರ್ವದಲ್ಲಿ ಹೇಳಿದಂತೆ ಮನಸ್ಸೇ ದರ್ಶನಕರಣ–ಸಾಧನ ಸಾಮಗ್ರಿಯಾದ್ದರಿಂದ), ಮನಸೈವೇತಿ ಶ್ರೌತೌ–'ಮನಸೇವೈನಂ ಪಶ್ಯತಿ' ಇತ್ಯಾದಿ

---

ಮೂರೂ) ಭಗವದ್ದರ್ಶನಕ್ಕೆ ಮುಖ್ಯ ಸಾಧನಗಳು; ಅವುಗಳ ಮಧ್ಯೆ ನಿದಿಧ್ಯಾಸನವೇ ಹಿಂದೆ ಹೇಳಿದಂತೆ ಪ್ರಧಾನವು; ದರ್ಶನದ ಕರಣವು (ಇಂದ್ರಿಯವು) ಮನಸ್ಸು; ಅದು ಪ್ರತಿಬಂಧವಾದ ಪ್ರಕೃತ್ಯಂಶವಾದ ಅವಿದ್ಯೆಯು ಇದ್ದಲ್ಲಿ ಭಗವಂತನನ್ನು ನೋಡುವುದಿಲ್ಲ–ಅದರ ನಿವೃತ್ತಿಯ ನಂತರ ಕಾಣುತ್ತದೆ (೭೨). ಪ್ರತಿಬಂಧನಿವೃತ್ತಿಗಾಗಿ, ಅಧಿಕಾರಿಯ ಮನಸ್ಸು, ಶ್ರವಣಾದಿ ಸಾಧನಗಳನ್ನು ಅರಸುತ್ತದೆ; ಈ ಕಾರಣದಿಂದ 'ಶ್ರುತ್ವೈವ ಮೋಕ್ಷಮಾಪ್ನೋತಿ' ಇತ್ಯಾದಿಯಾಗಿ ಹೇಳುತ್ತದೆ; ಶ್ರವಣಮಾತ್ರದಿಂದಲ್ಲ; ಶ್ರವಣಾದಿಯಿಂದ ಪ್ರತಿಬಂಧಕವಾದ ಅವಿದ್ಯೆಯು ನಿವೃತ್ತವಾದನಂತರವೇ ಭಗವಂತನನ್ನು ಕಾಣುತ್ತದೆ; 'ಮನಸೈವೇನಂ ಪಶ್ಯತಿ' ಎಂಬ ಶ್ರುತಿಯು 'ಮನಸಾ ಏವ' ಮನಸ್ಸಿನಿಂದಲೇ ನೋಡುತ್ತಾನೆಂದು, ಮನಸ್ಸಿನ ದರ್ಶನ ಕರಣತ್ವವನ್ನು, ಏವಕಾರದಿಂದ ನಿರ್ಧರಿಸಿ

ಶ್ರುತಿಯಲ್ಲಿ, ಅವಧೃತಿರಪಿ–ಏವಕಾರವೂ (ಮನಸ್ಸಿನಿಂದಲೇ ನೋಡುವನೆಂದು), ಆಭೂತ್–ಇರುತ್ತದೆ ಆಗಿದೆ.

**ಹರ್ಯನುಗ್ರಹ ಏವೈಭ್ಯಃ ಸರ್ವೇಭ್ಯೋ ಬಲವತ್ತರಃ ।**
**ವ್ಯರ್ಥೀಕೃತ್ಯ ಪ್ರವಚನಂ ಸುಮೇಧಾಂ ಚ ಬಹುಶ್ರುತಂ ।**
**ಯಮೇವೈಷ ಇತಿ ಶ್ರುತ್ಯಾ ಪ್ರಸಾದಸ್ಯೈವ ಕೀರ್ತನಾತ್ ॥ ೭೪ ॥**

ಅಸ್ವಂತ್ರವಾದ ಜಡ ಮನಸ್ಸಿನಿಂದ ಅಸಾಧ್ಯವಾದ ದರ್ಶನ ಕ್ರಿಯೆಯು, ಪ್ರಕೃತ್ಯಂಶವಾದ ಪ್ರತಿಬಂಧ ನಿವೃತ್ತಿಯುಳ್ಳದ್ದಾದರೂ, ಪ್ರಸನ್ನನಾದ ಭಗವಂತನಿಂದ ಮಾತ್ರವೇ ಸಾಧ್ಯವಾದ್ದರಿಂದ, ಭಗವದ್ದರ್ಶನದಲ್ಲಿಯೂ, ಮೋಕ್ಷಪ್ರಾಪ್ತಿಯಲ್ಲಿಯೂ, ಭಗವತ್ಪ್ರಸಾದವೇ, ಸರ್ವಸಾಧನಗಳಲ್ಲಿ ಅತಿಶಯುವಾಧ ಹೇತುವೆಂದು, 'ಯಮೇವೈಷ' ಎಂಬ ಶ್ರುತಿಯಿಂದ ಸಹ ಸಿದ್ಧವೆಂದು ತೋರಿಸುತ್ತಾರೆ :—

ಏಭ್ಯಃ ಸರ್ವೇಭ್ಯಃ–ಈ ಶ್ರವಣಾದಿ ಸರ್ವಸಾಧನೆಗಳ ದೆಶೆಯಿಂದ, ಬಲವತ್ತರಃ–ಅತಿಶಯ ಪ್ರಬಲವಾದುದು, ಹರ್ಯನುಗ್ರಹ ಏವ–ಶ್ರೀಹರಿ ಪ್ರಸಾದವೇ (ಎಂದು ಶ್ರುತಿ ಸಿದ್ಧವು) ; ಪ್ರವಚನಂ–ಪ್ರವಚನವನ್ನು (ಶಾಸ್ತ್ರಾಭ್ಯಾಸವನ್ನು), ಸುಮೇಧಾಂ ಚ–ಸುಜ್ಞಾನವನ್ನೂ, ಬಹುಶ್ರುತಂ ಚ–ಬಹುಶ್ರವಣವನ್ನು, ವ್ಯರ್ಥೀಕೃತ್ಯ–ವ್ಯರ್ಥಗೊಳಿಸಿ (ಅವುಗಳಿಂದ ದರ್ಶನ ಮೋಕ್ಷಗಳನ್ನು ನಿರಾಕರಿಸಿ), ಯಮೇವೈಷ ಇತಿ–(ಯಮೇವೈಷ ವೃಣುತೇ ತೇನ ಲಭ್ಯಃ। ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ' ಎಂಬ ಶ್ರುತಿಯು) ಯಾರನ್ನು ಭಗವಂತನು ತನ್ನವನೆಂದು ಅಂಗೀಕರಿಸುವನೋ ಆತನಿಂದಲೇ ಭಗವಂತನು ಲಭ್ಯನು–ಆತನಿಗೇ ತನ್ನ

---

ಹೇಳುತ್ತದೆ (೭೩). ಎಲ್ಲ ಶ್ರವಣಾದಿ ಸಾಧನಗಳ ಮಧ್ಯದಲ್ಲಿ, (ನೋಡುವ ಕರಣವಾದ ಮನಸ್ಸಿಗಿಂತ) ಪ್ರಬಲವಾದ ದರ್ಶನ ಹೇತುವು ಭಗವಂತನ ಪ್ರಸಾದವು ; ಶಾಸ್ತ್ರ ಪ್ರವಚನ, ಸುಜ್ಞಾನ, ಬಹುಶ್ರವಣಾದಿಗಳೆಲ್ಲವೂ ಮುಖ್ಯ ಪ್ರಯೋಜನವಾದ ದರ್ಶನ ಸಾಧಕಗಳಲ್ಲವೆಂದು ತಿರಸ್ಕರಿಸಿ, 'ಯಮೇವೈಷ ವೃಣುತೇ ತೇನ ಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ' ಎಂಬ ಶ್ರುತಿಯು, ಭಗವಂತನು ತನ್ನ ಭಕ್ತನೆಂದು ಯಾವ ಜೀವನನ್ನು ಅಂಗೀಕರಿಸುವನೋ, ಆತನಿಗೆ ಮಾತ್ರ ಲಭ್ಯನೆಂದೂ, ಅವ್ಯಕ್ತ ಸ್ವಭಾವದವನಾದರೂ ತನ್ನ

(ಅವ್ಯಕ್ತಸ್ವಭಾವದವನಾದ ತನ್ನ) ರೂಪವನ್ನು ತೋರಗೊಡುತ್ತಾನೆಂಬ, ಶ್ರುತ್ಯಾ – ಶ್ರುತಿಯಿಂದ, ಪ್ರಸಾದಸ್ಯ ಏವ – ಪ್ರಸಾದದಿಂದಲೇ (ಅಪರೋಕ್ಷ ದರ್ಶನವೇ ಆತನ ಪ್ರಾಪ್ತಿಯೆಂಬುದನ್ನು 'ಆತ್ಮಾ' ಶಬ್ದವು ಹೇಳುತ್ತದೆ). ಕೀರ್ತನಾತ್ – ಸುಸ್ಪಷ್ಟವಾಗಿ ಪ್ರಶಂಸಿರುವುದರಿಂದ (ಪ್ರಸಾದವೇ – ಹರ್ಯನು-ಗ್ರಹವೇ ಶ್ರೇಷ್ಠಸಾಧನವೆಂದು ಸಿದ್ಧವಾಗುತ್ತದೆ.

**ತನುಶಬ್ದ ಬಲಾತ್ಸಿದ್ಧಂ ಸಾಕಾರಸ್ಯೈವ ದರ್ಶನಂ ।**
**ಅತೋ ನಿರಾಕಾರವಸ್ತುನಿರ್ವಿಕಲ್ಪಕದರ್ಶನಂ ॥ ೭೫ ॥**

**ನಿರಸ್ತಂ ಸಾ ತನುಶ್ಚಾ ಭೂತ್ ಸ್ವಾಮಿತ್ಯುಕ್ತೇಃ ಸ್ವರೂಪಿಣೀ ।**
**ಪ್ರಾಗಾವೃತಾಯಾ ವಿವೃತೇರೇವೋಕ್ತೇರ್ನಿತ್ಯಸಿದ್ಧತಾ ॥ ೭೬ ॥**

**ಅತಶ್ಚಿದಾನಂದರೂಪಶಿರಃಪಾಣ್ಯಾದಿಮಾನ್ ಹರಿಃ ।**
**ಮುಕ್ತಾಶ್ಚ ತಾದೃಶಾಕಾರಾ ಇತಿ ಶ್ರೌತನುತಸ್ಥಿತಿಃ ॥ ೭೭ ॥**

ತನುಶಬ್ದಬಲಾತ್ – 'ಯಮೇವೈಷ ವೃಣುತೇ' ಶ್ರುತಿಯಲ್ಲಿರುವ 'ತನೂಂ ಸ್ವಾಂ ವಿವೃಣುತೇ' ಎಂಬ 'ತನು' ಶಬ್ದಬಲದಿಂದ, ಸಾಕಾರಸ್ಯೈವ – ಶಿರಃ ಪಾಣ್ಯಾದಿ (ತಲೆ, ಕೈಕಾಲು ಮುಂತಾದ ಅವಯವ) ಯುಕ್ತವಾದ ರೂಪದ, ದರ್ಶನಂ ಏವ – ದರ್ಶನವೇ, ಸಿದ್ಧಂ – ಸಿದ್ಧವಾಗುತ್ತದೆ; ಅತಃ – ಆದ್ದರಿಂದ, ನಿರಾಕಾರವಸ್ತುನಿರ್ವಿಕಲ್ಪಕ ದರ್ಶನಂ – ಆಕಾರ (ರೂಪ) ರಹಿತವಾದ ನಿರ್ವಿಶೇಷ ವಸ್ತುದರ್ಶನವು, ನಿರಸ್ತಂ-ನಿರಾಕೃತವಾಯಿತು; ಸಾ ತನುಶ್ಚ-ಆ ರೂಪವಾದರೋ, ಸ್ವಾಂ ಇತ್ಯುಕ್ತೇಃ–'ಸ್ವಾಂ' ಎಂದು ಹೇಳಿರುವುದರಿಂದ, ಸ್ವರೂಪಿಣೀ – ಸ್ವರೂಪ

---

ಸ್ವರೂಪವನ್ನು ತೋರಗೊಡುತ್ತಾನೆಂದೂ, ಸ್ಪಷ್ಟವಾಗಿ ಭಗತ್ಪ್ರಸಾದವೇ ಅಪರೋಕ್ಷ ದರ್ಶನದ ಪರಮ ಮುಖ್ಯಸಾಧನ (ಹೇತು)ವೆಂದೂ ಘೋಷಿಸುತ್ತದೆ (೭೪). ಈ ಶ್ರುತಿಯಲ್ಲಿರುವ ತನುಶಬ್ದದ ಬಲದಿಂದ ಆಕಾರವುಳ್ಳ ಭಗವಂತನ ರೂಪದರ್ಶನವೆಂದೂ, ಆದ್ದರಿಂದ, ನಿರಾಕಾರವೂ ನಿರ್ವಿಶೇಷವೂ ಎಂಬ ಬ್ರಹ್ಮನ ದರ್ಶನವು ನಿರಾಕೃತವಾಗುವುದೆಂದೂ, ಸಿದ್ಧವಾಗುತ್ತದೆ; 'ಸ್ವಾಂ ತನೂಂ' ಎಂದು ಹೇಳಿದ್ದರಿಂದ, ಆ ತನುವು ಸ್ವರೂಪ ಭೂತವಾದುದೆಂದೂ, ಮೊದಲು ಆಚ್ಛಾದಿತ

ಸಿದ್ಧವಾದುದೇ, ಅಭೂತ್–(ಎಂದೂ) ಸಿದ್ಧವಾಯಿತು; ಪ್ರಾಗ್–(ರೂಪವನ್ನು ಜೀವನಿಗೆ ತೋರಗೊಡುವ) ಪೂರ್ವದಲ್ಲಿ, ಆವೃತಾಯಾಃ–ಆವೃತವಾದ್ದರ (ಆಚ್ಛಾದಿತವಾದರ), ವಿವೃತೇಃ ಏವ–ತೋರುವಿಕೆಯುದೇ ಆದ, ಉಕ್ತೇಃ – ಉಕ್ತಿಯು, (ಶ್ರುತಿಯು) ಹೇಳುವುದರಿಂದ, ನಿತ್ಯಸಿದ್ಧತಾ–(ಆ ರೂಪದ) ನಿತ್ಯಸಿದ್ಧವೆಂಬುದೂ (ಅಭೂತ್–ಎಂದಾಯಿತು); ಅತಃ–ಆದ್ದರಿಂದ, ಹರಿಃ–ಶ್ರೀಹರಿಯು, ಚಿದಾನಂದ–ರೂಪಶಿರಃಪಾಣ್ಯಾದಿಮಾನ್ – ಜ್ಞಾನಾನಂದರೂಪದ (ಅವೇ ಮೂರ್ತಿವೆತ್ತಿದ) ಶಿರ, ಪಾಣಿ ಮೊದಲಾದ ಅವಯವಗಳುಳ್ಳವನೆಂದೂ, ಮುಕ್ತಾಶ್ಚ – ಮುಕ್ತಜೀವರೂ (ಚೇತನರೂ), ತಾದೃಶಾಕಾರಾಃ – ಸದೃಶವಾದ (ಚಿದಾನಂದಾತ್ಮಕ) ರೂಪವುಳ್ಳವರು, ಇತಿ – ಎಂದೂ[1], ಶ್ರೌತಮತಸ್ಥಿತಿಃ – ಶ್ರುತಿಮತದ ಸಿದ್ಧಾಂತವೆಂದೂ (ಸಿದ್ಧವಾಯಿತು).

---

ವಾದುದನ್ನು ತೋರಿಸುತ್ತಾನೆಂಬುದರಿಂದ, ಆ ರೂಪದ ನಿತ್ಯತ್ವವು ಸಿದ್ಧವಾಗುತ್ತದೆಂದೂ, ಆದ್ದರಿಂದ ಶ್ರೀಹರಿಯ ಸ್ವರೂಪವು, ಜ್ಞಾನಾನಂದಗಳಿಂದ ರೂಪಿತವೆಂದೂ (ಚಿದಾನಂದರೂಪದ) ಶಿರ, ಪಾಣಿ ಮುಂತಾದ ಅವಯವಗಳುಳ್ಳ

---

1 'ಸ್ವಾಂ ತನೂಂ' ಎಂಬುದರ ಸ್ವೀಯವಾದ ಶರೀರವೆಂಬರ್ಥವು ಜಡ ಶರೀರಕ್ಕೂ ಅನ್ವಯಿಸುತ್ತದೆ, ಭಗವಂತನಿಗೆ ಜಡ ಶರೀರವಿಲ್ಲದ್ದರಿಂದಲೂ ಜಡ ದೇಹ ದರ್ಶನವು ಪ್ರಸಾದದ ಫಲವೂ ಆಗುವುದಿಲ್ಲವಾದ್ದರಿಂದಲೂ, ಭಗವಂತ ಚಿದಾನಂದಾತ್ಮಕ ದೇಹವನ್ನೇ ಇಟ್ಟುಕೊಳ್ಳಬೇಕು ; 'ಸ್ವಾಂ ತನೂಂ ವಿವೃಣುತೇ' ಎಂಬುದರಿಂದ ಜೀವಸ್ವರೂಪದ ಅಪರೋಕ್ಷಜ್ಞಾನವನ್ನು ಗ್ರಹಿಸಬಹುದು, ಮುಕ್ತಿಯಲ್ಲಿ ಸ್ವರೂಪಾನಂದಾನುಭವವು ಅಪೇಕ್ಷಿತವಾದ್ದರಿಂದ 'ತಾದೃಶಾಕಾರ' ಎಂಬುದರಿಂದ, ಮುಕ್ತಜೀವನು ಚಿದಾನಂದಸ್ವರೂಪನೆಂದೇ ಸಿದ್ಧವಾಗುತ್ತದೆ; 'ಸ್ವಾಂ' ಎಂಬುದು ('ಭಗವಾನ್ ಮತ್ತು ಜೀವ' ಹೀಗೆ) ಉಭಯವಾಚಕವು; 'ಆತ್ಮಾವಾ ಅರೇ ದ್ರಷ್ಟವ್ಯಃ' ಎಂಬ ಶ್ರುತಿಯಿಂದ, ಆತ್ಮನ (ಭಗವಂತನ) ದರ್ಶನಕ್ಕಾಗಿಯೇ ಶ್ರವಣಾದಿ ಸಾಧನಗಳೆಂದು ಸಿದ್ಧವಾಗುತ್ತದೆ. 'ಆತ್ಮ' ಶಬ್ದದಿಂದ ವ್ಯಾಪ್ತವಾದ ದೇಹವುಳ್ಳ ಪರಮಾತ್ಮನೇ ವಿವಕ್ಷಿತನು ; ವಿವೃಣುತೇ–ಆಚ್ಛಾದನೆಯನ್ನು ತೆಗೆದು ತೋರಿಸುತ್ತಾನೆಂದು ಹೇಳಿದ್ದರಿಂದ, ಆತ್ಮಸ್ವರೂಪಕ್ಕೆ ನಿತ್ಯತ್ವವನ್ನೂ ಸಾಧಿಸುತ್ತದೆ ; ವ್ಯಾಪ್ತವಾದ ದೇಹವೇ 'ತನು' ಶಬ್ದದ ('ತನು ವಿಸ್ತಾರೇ' ಎಂಬುದರಿಂದ) ಮುಖ್ಯಾರ್ಥವು ; ಚಕ್ಷುವಿನ ಪ್ರತಿಬಂಧವನ್ನು ನಿವೃತ್ತಿಗೊಳಿಸಿ, ತೋರಿಸುತ್ತಾನೆಂಬುದರಿಂದ ಅರ್ಥಾತ್ (ತಾತ್ಪರ್ಯದಿಂದ), ಜೀವಸ್ವರೂಪ ದರ್ಶನವೂ ಆಗುತ್ತದೆಂಬ ಅರ್ಥವೂ ಲಭಿಸುತ್ತದೆ; ಜೀವಸ್ವರೂಪವೂ ಆಕಾರವುಳ್ಳದ್ದೆಂಬ ಪ್ರಮೇಯವೂ ಭಗವಂತನ ಪ್ರತಿಬಿಂಬನೆಂಬುದರಿಂದ ಸಿದ್ಧವಾಗುತ್ತದೆ ; ಇದೇ ಶ್ರುತಿಮತವು—ಸಿದ್ಧಾಂತವು–ಇದೇ ಶ್ರೀಮನ್ಮಧ್ವಮತ ಸಿದ್ಧಾಂತವೂ ಆಗಿದೆ.

ಗೋಪ್ಯಃ ಕಾಮಾದ್ಭಯಾತ್ಕಂಸೋ ದ್ವೇಷಾಚ್ಚೈದ್ಯಾದಯೋ
ನೃಪಾಃ ।
ಸಂಬಂಧಾದ್ವೃಷ್ಣಯಃ ಸ್ನೇಹಾದ್ಯೂಯಂ ಭಕ್ತ್ಯಾ ವಯಂ ಪ್ರಭೋ ।
ಇತಿ ಭಾಗವತೇ ಪ್ರೋಕ್ತಂ ಕಾಮದ್ವೇಷಾದಿಸಾಧನಂ ॥ ೭೮ ॥
ದ್ವಾರಿ ದ್ವಾರಿ ಹರೇರ್ಲೋಕೇ ಸದಾ ಸರ್ವತ್ರ ಸೇವಿಷು ।
ಅನಾದ್ಯನಂತಕಾಲೇಷ್ವಪ್ಯೇವಂ ಕೈಂಕರ್ಯಕರ್ಮಸು ॥ ೭೯ ॥
ನಿಬಿಡಜ್ಞಾನವೈರಾಗ್ಯಭಕ್ತ್ಯಾದಿಗುಣಸಂಪದಾ ।
ಶಾಪಾದ್ಯುಪಾಧಿಮೂಲೋಽಸಾವೀಷದ್ದ್ವೇಷೋ ಜಯಾದಿಷು ॥೮೦॥
ಅಸ್ವಾಭಾವಿಕದೋಷತ್ವಾನ್ನೈವ ಮೋಕ್ಷನಿರೋಧಕೃತ್ ।
ಇತ್ಯೇವ ಮುಕ್ತಿದತ್ವೇನ ಕೀರ್ತ್ಯತೇ ನಾರದಾದಿಭಿಃ ॥ ೮೧ ॥
ಭೃತ್ಯಾಪಹಾರಸಹನಶೀಲತ್ವಸ್ತುತಯೋ ಹರೇಃ ।
ಕೇವಲದ್ವೇಷತೋ ಮೋಕ್ಷ ಇತಿ ಸರ್ವೇರ್ಮನೋಗತಂ ॥ ೮೨ ॥

ಶ್ರವಣಾದಿಜನಿತ ಭಗವದಪರೋಕ್ಷ ಜ್ಞಾನದಿಂದಲೇ ಮೋಕ್ಷವೆಂದು ಹೇಳಲಾಯಿತಷ್ಟೆ; ಕಾಮಕ್ರೋಧಾದಿಗಳೂ, ಮೋಕ್ಷದಾಯಕಗಳೆಂದೂ ಹೇಳುವ ಭಾಗವತವಾಕ್ಯಗಳ ಗತಿ ಏನೆಂದರೆ, ಹೇಳುತ್ತಾರೆ:—[1]

---

ದ್ದೆಂದೂ, ಮುಕ್ತರೂಪಸದೃಶವಾದ (ಚಿದಾನಂದಾತ್ಮಕ) ರೂಪವುಳ್ಳವರೆಂದೂ, ಸಿದ್ಧವಾಗುತ್ತದೆ; ಇದೇ ಶ್ರುತಿಸಿದ್ಧಾಂತವು (೭೫-೭೭). ಗೋಪಿಯರು ಕಾಮದಿಂದ, ಕಂಸನು ಭಯದಿಂದ, ಶಿಶುಪಾಲಾದಿರಾಜರು ದ್ವೇಷದಿಂದಲೂ,

---

[1] ಅಲ್ಲಿಯೇ (ಭಾಗವತದಲ್ಲಿ) 'ಕಾಮಂ ದಹಂತಿ ಕೃತಿನಃ' ಇತ್ಯಾದಿಯಾಗಿ, ಕಾಮಾದಿಗಳಿಗೆ ದೋಷತ್ವವನ್ನು ಹೇಳಲಾಗಿದೆ. ಹರಿಭಕ್ತ್ಯಾದಿಗಳಲ್ಲಿ ವೇದ ಪುರಾಣಾದಿಗಳಲ್ಲಿ ಎಲ್ಲಿಯೂ ದೋಷವೆಂದು ಹೇಳಿಲ್ಲ; ಲೋಕದಲ್ಲಿ ಸಹ ಕಾಮಕ್ರೋಧಾದಿಗಳು ದೋಷಗಳೆಂದು ಪರಿಗಣಿತವಾಗಿವೆ; ಲೌಕಿಕ ಕಾಮಾದಿಗಳು ದೋಷವು-ಭಗವದ್ವಿಷಯಕ ಕಾಮವು ದೋಷವಲ್ಲವೆಂಬ ವಾದವೂ ಯುಕ್ತವಲ್ಲ; ಶೂರ್ಪಣಖಿಯು ಶ್ರೀರಾಮನನ್ನು ಕಾಮಿಸಿ ಬಂದಳು; ಕಿವಿ ಮೂಗುಗಳನ್ನು ಕತ್ತರಿಸಿ ಶಿಕ್ಷಿಸಿದನು; ಕೇವಲ ದೋಷರೂಪವಾದ ಕಾಮವೂ ಶಿಕ್ಷಾರ್ಹವೇ ಆಗುತ್ತದೆ; ಶ್ರೀರಾಮನು ಏಕಪತ್ನೀವ್ರತಸ್ಥನಾದ್ದರಿಂದ ಶೂರ್ಪಣಖಿಯನ್ನು

*

ಕಾಮಾತ್-ಕಾಮನಿಮಿತ್ತವಾದ ಭಕ್ತಿಯಿಂದ, ಗೋಪ್ಯಃ-ಗೋಪಿಯರೂ, ಭಯಾತ್-ಭಯಯುಕ್ತ ಭಕ್ತಿಯಿಂದ, ಕಂಸಃ – ಕಂಸನೂ, ಚೈದ್ಯಾದಯಃ- ಶಿಶುಪಾಲಾದಿ, ನೃಪಾಃ-ರಾಜರು, ದ್ವೇಷಾತ್-ದ್ವೇಷಯುಕ್ತ ಭಕ್ತಿಯಿಂದಲೂ, ಸಂಬಂಧಾತ್ – ಬಂಧುತ್ವಸಹಿತ ಭಕ್ತಿಯಿಂದ, ವೃಷ್ಣಯಃ – ಯಾದವರೂ, ಸ್ನೇಹಾತ್ – ಸ್ನೇಹಯುಕ್ತ ಭಕ್ತಿಯಿಂದ, ಯೂಯಂ – ನೀವು (ಪಾಂಡವರು), ಪ್ರಭೋ-ಹೇ ಧರ್ಮರಾಜ! ಭಕ್ತ್ಯಾ-ಕೇವಲ ಭಕ್ತಿಯಿಂದ, ವಯಂ – ನಾವು (ನಾರದಾದಿಗಳು), (ಸ್ವಗತಿಗಳನ್ನು ಹೊಂದುವರು); ಇತಿ-ಹೀಗೆಂದು, ಭಾಗ- ವತೇ – ಭಾಗವತದಲ್ಲಿ, ಕಾಮದ್ವೇಷಾದಿ ಸಾಧನಂ – ಕಾಮ, ದ್ವೇಷಾದಿಗಳೂ ಸಾಧನವೆಂದು, ಪ್ರೋಕ್ತಂ – ಹೇಳಲಾಗಿದೆ. ದ್ವಾರಿ ದ್ವಾರಿ – ಪ್ರತಿದ್ವಾರದಲ್ಲಿ, ಹರೇಃ-ವೈಕುಂಠಾದಿ ಶ್ರೀಹರಿಯ, ಲೋಕೇ-ಲೋಕದಲ್ಲಿ, ಸದಾ-ಸರ್ವದಾ, ಸರ್ವತ್ರ-ಎಲ್ಲೆಲ್ಲಿಯೂ, ಸೇವಿಷು-ಸೇವಿಸುವವರಲ್ಲಿ, ಅನಾದ್ಯನಂತಕಾಲೇಷ್ವಪಿ- ಅನಾದಿಕಾಲಗಳಲ್ಲಿಯೂ, ಏವಂ-ಹೀಗೆ, ಕೈಂಕರ್ಯ ಕರ್ಮಸು-ಭಗವತ್ಸೇವೆ ಕರ್ಮಗಳಲ್ಲಿರುವವರಲ್ಲಿ, ನಿಬಿಡಜ್ಞಾನವೈರಾಗ್ಯಭಕ್ತ್ಯಾದಿಗುಣಸಂಪದಾ-ನಿರಂತರ ವಾದ (ನಿಬಿಡ) ಜ್ಞಾನ, ವೈರಾಗ್ಯ, ಭಕ್ತ್ಯಾದಿ ಸದ್ಗುಣ ಸಂಪತ್ತಿರುವುದರಿಂದ,

---

ಯಾದವರು ಬಂಧುಭಾವದಿಂದಲೂ, ನೀವು (ಪಾಂಡವರು) ಸ್ನೇಹದಿಂದಲೂ, ನಾವು (ನಾರದಾದಿಗಳು) ಕೇವಲ ಭಕ್ತಿಯಿಂದಲೂ, ಭಗವಂತನನ್ನು ಹೊಂದುತ್ತೇವೆ; ಹೀಗೆಂದು, ಭಗವಂತನ ಪ್ರಾಪ್ತಿಗೆ, ಕಾಮದ್ವೇಷಾದಿಗಳು ಸಾಧನವೆಂದು ಹೇಳಲಾಗಿದೆ; ಶಿಶುಪಾಲಾದಿರಾಜರು, ಸ್ವಸ್ವರೂಪದಿಂದ ಅನಾದಿಕಾಲದ ಭಗವದ್ಭಕ್ತರು; ಭಗವಂತ ಸೇವಕರು; ಶ್ರೀಹರಿಲೋಕಗಳಲ್ಲಿ, ದ್ವಾರಪಾಲಕರಾಗಿ ಸದಾ ಸೇವಿಸುವವರು; ಅನಾದಿಕಾಲದಿಂದ ಭಗವಂತನ ಕಿಂಕರರಾಗಿದ್ದು ಆ

---

ತಿರಸ್ಕರಿಸಿದನು—ಶ್ರೀಕೃಷ್ಣನು ಹದಿನಾರು ಸಾವಿರ ಪತ್ನಿಯುಳ್ಳವನು, ಎಂಬ ರಾಮಕೃಷ್ಣರಲ್ಲಿ ಕಂಡುಬರುವ ವೈಲಕ್ಷಣ್ಯವೂ ಯಾವುದಕ್ಕೂ ಕಾರಣವಾಗುವುದಿಲ್ಲ; ದೋಷಕ್ಕೆ ಗುಣತ್ವ ಪ್ರತಿಪಾದಕತ್ವ ಹೇಳುವುದೂ ಯುಕ್ತವಲ್ಲ; ಪುಣ್ಯ ಪಾಪ ಕರ್ಮಗಳು ಒಂದರ ಸ್ವರೂಪವು ಮತ್ತೊಂದಕ್ಕೆ ಬರಲಾರದು; 'ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಂ' ಎಂಬ ಶ್ರುತಿಯು, ದೋಷದಿಂದ ಭಗವತ್ಪ್ರೀತಿಯನ್ನಾಗಲಿ, ಅನುಗ್ರಹವನ್ನಾಗಲಿ, ದೊರಕಿಸಬಹುದೆಂಬ ತತ್ವವನ್ನು ವಿರೋಧಿಸುತ್ತದೆ; ಹಾಗೆ ಹೇಳುತ್ತವೆಂಬ ನಿನ್ನ ಪ್ರಮಾಣ ವಾಕ್ಯಗಳಿಗೆ ಅರ್ಥಾಂತರವನ್ನು ಕಲ್ಪಿಸುವುದೇ ಉಚಿತವು.

ಜಯಾದಿಷು–ಜಯಾದಿ ಭಕ್ತರಲ್ಲಿ, ಶಾಪಾದ್ಯುಪಾಧಿ ಮೂಲಃ–ಶಾಪವೇ ಮೊದಲಾದ ನಿಮಿತ್ತವೇ ಕಾರಣವಾಗಿವುಳ್ಳ, ಅಸೌ – ಈ, ಈಷತ್‌ದ್ವೇಷಃ – ಅಲ್ಪ ಭಗವದ್ದ್ವೇಷಯುಕ್ತವಾದ ಜನ್ಮವು, ಅಸ್ವಾಭಾವಿಕದೋಷತ್ವಾತ್ – ಸ್ವಭಾವ ವಿರುದ್ಧವಾದ ದೋಷವಾದ್ದರಿಂದ, ಮೋಕ್ಷನಿರೋಧಕೃತ್ – ಮೋಕ್ಷವನ್ನು ತಡೆಗಟ್ಟುವುದು (ಅನ್ಯಗತಿಗೆ ಕಾರಣವಾಗುವುದು), ನೈವ–ನಿಶ್ಚಯವಾಗಿಯೂ ಅಲ್ಲ; ಇತ್ಯೇವ – ಹೀಗೆಂದೇ, ಮುಕ್ತಿದತ್ವೇನ – ಮುಕ್ತಿಪ್ರದವೆಂದೇ, ನಾರದಾದಿಭಿಃ – ನಾರದಾದಿಗಳಿಂದ, ಕೀರ್ತ್ಯತೇ–ಹೇಳಲ್ಪಡುತ್ತದೆ; ಹರೇಃ–ಶ್ರೀಹರಿಯ, ಭೃತ್ಯಾಪರಾಧಸಹನಶೀಲತ್ವಸ್ತುತಯೇ–ಭಕ್ತರ ಅಪರಾಧ ಸಹನ ಸ್ವಭಾವದ ಪ್ರಶಂಸೆಗಾಗಿ (ದ್ವೇಷಾದಿಗಳು ಹೇಳಲಾಗಿವೆಯಲ್ಲದೆ), ಕೇವಲ ದ್ವೇಷತಃ–ದ್ವೇಷಮಾತ್ರದಿಂದ, ಮೋಕ್ಷಃ ಇತಿ – ಮೋಕ್ಷವೆಂಬುದು, ಋಷೇಃ – ನಾರದರ, ಮನೋಗತಂ ನ–ತಾತ್ಪರ್ಯವಲ್ಲ.

**ಕತಮೋಽಪಿ ನ ವೇನಸ್ಯಪಂಚಾನಾಂ ಪುರುಷಂ ಪ್ರತಿ ।**
**ಇತ್ಯುತ್ತರಶ್ಲೋಕ ಏವ ವೇನೇ ಸಾಧನಪಂಚಕಂ ।**
**ಯನ್ನೇತ್ಯಾಹ ತತೋ ದ್ವೇಷೋ ದ್ವೇಷಮಾತ್ರಂ ಕಥಂ ಭವೇತ್**
॥ ೮೩ ॥

---

ಕರ್ಮಗಳಲ್ಲಿದ್ದರೂ, ನಿರಂತರವಾದ (ಸಿಬಿಡವಾದ) ಜ್ಞಾನ, ಭಕ್ತಿ, ವೈರಾಗ್ಯಾದಿ ಸದ್ಗುಣ ಸಂಪನ್ನರು; ಇದರಿಂದ ತಪ್ಪದೇ ಭಗವಂತನನ್ನು ಹೊಂದುತ್ತಾರೆ; ಶಾಪಾದಿನಿಮಿತ್ತದಿಂದ, ಕಾಲವಿಶೇಷದಲ್ಲಿ ಅಲ್ಪ (ಅಸುರಾವೇಶ ನಿಮಿತ್ತವಾಗಿ) ದ್ವೇಷವುಳ್ಳವರಾಗುತ್ತಾರೆ; ಇವರ ದ್ವೇಷವು ಅಸ್ವಾಭಾವಿಕವಾದ್ದರಿಂದ ದೊರೆಯಬೇಕಾದ ಸಹಜವಾದ ಮೋಕ್ಷವನ್ನು ವಿರೋಧಿಸುವುದಿಲ್ಲ; ನಾರದಾದಿಜ್ಞಾನಿಗಳು ಈ ಕಾರಣದಿಂದ, ಇವರ ದ್ವೇಷಾದಿಗಳಿಗೆ ಮೋಕ್ಷದತ್ವಾದಿಗಳನ್ನು ಹೇಳುತ್ತಾರೆ; ಇದರಿಂದ ಭಕ್ತಾಪರಾಧವನ್ನು ಸಹಿಸುವ, ಭಗವಂತನ ಸ್ವಭಾವವು, ಈ ನಿಮಿತ್ತವಾಗಿ ಸ್ತುತಿಸಲ್ಪಡುತ್ತದೆ; ಕೇವಲ ದ್ವೇಷವು ಮೋಕ್ಷಪ್ರದವೆಂದು ಆ ಜ್ಞಾನಿಗಳ ಅಭಿಪ್ರಾಯವಲ್ಲ; ದ್ವೇಷವು ದೋಷರೂಪವು–ಮಹಾಪರಾಧವು; ಅದರಿಂದ ತಮಸ್ಸೇ ಮೊದಲಾದ ಶಿಕ್ಷಾರೂಪದ, ದುರ್ಗತಿಗಳೇ ಲಭಿಸುತ್ತವೆಯಲ್ಲದೆ, ಸುಖರೂಪದ ಸನ್ಮೋಕ್ಷವಲ್ಲ (೭೮–೮೨). ಕೇವಲ ದ್ವೇಷದಿಂದ ಮೋಕ್ಷವಿಲ್ಲೆಂದು, ಭಾಗವತದಲ್ಲಿಯೇ ಮುಂದಿನ ಶ್ಲೋಕದಿಂದ, ವೇನರಾಜನ ದೃಷ್ಟಾಂತದಿಂದ

ಕತಮಃ ಅಪಿ–ಯಾವ ಪ್ರಕಾರದ (ಕಾಮದ್ವೇಷಾದಿಯುಕ್ತ) ಭಕ್ತಿಯೂ, ವೇನಸ್ಯ–ವೇನರಾಜನಿಗೆ, ಪಂಚಾನಾಂ ಪುರುಷಂಪ್ರತಿ–(ಕಾಮ, ಭಯ, ದ್ವೇಷ, ಸ್ನೇಹ, ಭಕ್ತಿಗಳೆಂಬ) ಐದು ವಿಧದಿಂದ ಶ್ರೀಹರಿಯಲ್ಲಿ ತಮ್ಮ ಭಕ್ತಿಯನ್ನು ಅರ್ಪಿಸುವ, ಪುರುಷರ ಮಧ್ಯದಲ್ಲಿ, ನ–ಇರುವುದಿಲ್ಲ (ವೇನನಿಗೆ ಭಕ್ತಿಲೇಶವೂ ಇಲ್ಲ);[1] ಇತಿ–ಹೀಗೆಂದು, ಉತ್ತರಶ್ಲೋಕೇ ಏವ – (ಮುಂದಿನ ಭಾಗವತ) ಶ್ಲೋಕದಲ್ಲಿಯೇ, ವೇನೇ–ವೇನರಾಜನಲ್ಲಿ, ಯತ್–ಯಾವ ಕಾರಣದಿಂದ,

---

ನಿರೂಪಿಸಲಾಗಿದೆ; ವೇನನು ತಮೋಯೋಗ್ಯ ಸ್ವರೂಪದ ದುಷ್ಟಜೀವನು; ಅವನಲ್ಲಿ ಕಾಮ, ಭಯ, ದ್ವೇಷ, ಬಂಧುಸ್ನೇಹಾದಿ ಯಾವ ಭಾವ ಮಿಶ್ರಿತ (ತನ್ನಿಮಿತ್ತವಾದ) ಭಕ್ತಿಯು ಇರಲೇ ಇಲ್ಲ ; ಆದ್ದರಿಂದ ಭಕ್ತಿಯುತವಲ್ಲ, ಕೇವಲ ದ್ವೇಷಾದಿಗಳು ಮೋಕ್ಷಸಾಧನವಲ್ಲ; ಕೇವಲ ಭಕ್ತಿಯಿಂದಲೇ ಭಗವತ್ಪ್ರಾಪ್ತಿಯು (೮೩).

---

1 ವೇದದ್ವೇಷಿಯಾದ ದುಷ್ಟಶಿಶುಪಾಲನಿಗೆ, ಶ್ರೀಕೃಷ್ಣನ ಚಕ್ರದಿಂದ ಹತನಾದೊಡನೆ, ಶ್ರೀಕೃಷ್ಣಪಾದಮೂಲದಲ್ಲಿ ಆಶ್ರಯ ದೊರೆತದ್ದನ್ನು ಕಂಡ ಯುಧಿಷ್ಠಿರನು, ನಾರದರನ್ನು ಕುರಿತು, ಆಶ್ಚರ್ಯಚಕಿತನಾಗಿ, ಸ್ವಭಾವವಿರುದ್ಧವಾದ ಗತಿವಿಷಯಕ ಸಂಶಯವನ್ನು ಮುಂದಿಟ್ಟು, ಪ್ರಶ್ನೆಮಾಡುತ್ತಾನೆ ; ಆಗ ನಾರದರು ಹೇಳುವ ಸಮಾಧಾನಕರವಾದ ಮಾತುಗಳನ್ನು (೭೮–೮೩) ನೇ ಶ್ಲೋಕಗಳು ನಿರೂಪಿಸುತ್ತವೆ. ಶಿಶುಪಾಲನ ಗತಿಯನ್ನು ಕುರಿತು ಪ್ರಶ್ನೆಯು ಉದ್ಭವಿಸಿದ್ದರಿಂದ (೮೦–೮೧) ಶ್ಲೋಕಗಳಲ್ಲಿ ಜಯ-ವಿಜಯರ ಶಾಪದಿಂದ ಬಂದ ಜನ್ಮ ಮತ್ತು ಅವರಿಂದ ಕೃತವಾದ ದ್ವೇಷ, ಇವುಗಳನ್ನು ವಿವರಿಸುತ್ತವೆ ಮತ್ತು ಸಂಶಯ ಪರಿಹಾರವನ್ನು ಹೇಳುತ್ತವೆ; ಭಯ ಕಾಮಾದಿ ಅನ್ಯನಿಮಿತ್ತಗಳಿಂದ ಭಗವಂತನ ಪ್ರಾಪ್ತಿಯು ಹೇಗೆಂಬ ಸಂಶಯವನ್ನು, ವೇನನಲ್ಲಿ ಭಕ್ತಿಯ ಲೇಶವೂ ಇರಲಿಲ್ಲವೆಂಬುದರಿಂದ, ಭಯದ್ವೇಷಾದಿಗಳುಳ್ಳವರಲ್ಲಿ ಭಕ್ತಿಯೂ ಇತ್ತೆಂದೂ, ಸೂಚಿಸಿ ಪರಿಹರಿಸುತ್ತಾರೆ ; ಕಂಸಾದಿಗಳಲ್ಲಿ ಜೀವದ್ವಯಾವೇಶವನ್ನು ಸೂಚಿಸಿರುತ್ತಾರೆ.

ಈ ಪ್ರಮೇಯವನ್ನು, ವೇನರಾಜನಿಗೆ ತಮಃಪ್ರಾಪ್ತಿ ಕಾರಣವನ್ನು ನಾರದರು ನಿರೂಪಿಸುತ್ತ, ಸ್ವರೂಪಾನುಗುಣವಾದ ಫಲವೇ ದೊರೆಯುವುದೆಂದು ದೃಢಪಡಿಸುತ್ತಾರೆ ; ಶ್ರೀಮದಾಚಾರ್ಯರು ಭಾಗವತತಾತ್ಪರ್ಯನಿರ್ಣಯದಲ್ಲಿ ಪ್ರಮಾಣಗಳ ಉದಾಹರಣಪೂರ್ವಕ, ಕಾಮ, ಭಯ, ದ್ವೇಷಾದಿಗಳು ಭಕ್ತಿಸಹಿತವಾಗಿದ್ದುದರಿಂದಲೇ, ಆಯಾ ಗತಿಗಳು ಆ ಜೀವರಿಗೆ ದೊರೆತವೆಂದು, ಸ್ಪಷ್ಟಪಡಿಸಿದ್ದಾರೆ ; 'ಗೋಪ್ಯಃ ಕಾಮಯುತಾ ಭಕ್ತಾಃ ಕಂಸಾವಿಷ್ಟಃ ಸ್ವಯಂ ಭೃಗುಃ |' ಇತ್ಯಾದಿಯಾಗಿ ಪ್ರಮಾಣಗಳಿಂದ ಆ ಎಲ್ಲರೂ ಭಕ್ತರೆಂದೂ ಭಕ್ತಿಯಿಂದಲೇ ಕೃಷ್ಣಾನುಗ್ರಹವನ್ನು ಹೊಂದಿದರೆಂದೂ ನಿರ್ಣಯಿಸಿರುತ್ತಾರೆ.

ಸಾಧನಪಂಚಕಂ–(ಉಕ್ತ) ಐದು ವಿಧ ಸಾಧನದಲ್ಲಿ, ನ ಇತ್ಯಾಹ–(ಒಂದೂ) ಇಲ್ಲವೆಂದು ಹೇಳಲಾಗಿದೆಯೋ, ತತಃ–ಆ ಕಾರಣದಿಂದ, ದ್ವೇಷಃ–(ಶಿಶುಪಾಲಾದಿಗಳ) ದ್ವೇಷವು, ದ್ವೇಷಮಾತ್ರಂ – ದ್ವೇಷಮಾತ್ರವು (ಭಕ್ತಿಯುಕ್ತವಲ್ಲದ ಕೇವಲ ದ್ವೇಷವು), ಕಥಂ–ಹೇಗೆ, ಭವೇತ್–(ಮೋಕ್ಷಕಾರಣವು) ಆಗುತ್ತದೆ? (ಶಕ್ಯವಿಲ್ಲ).

**ಪೂರ್ಣೋ ಹಿ ಭಗವದ್ದ್ವೇಷೋ ವೇನೇ ತೇನೈವ ಕೀರ್ತಿತಃ ।**
**ಕಥಂ ಪುನರ್ನಿಷೇಧೋ ಹಿ ತಸ್ಯೈವ ಸ್ಯಾದ್ವಿದೋ ಮುನೇಃ ॥ ೬೪ ॥**

ವೇನೇ–ವೇನರಾಜನಲ್ಲಿ, ಭಗವದ್ದ್ವೇಷಃ–ಶ್ರೀಹರಿದ್ವೇಷವು, ಪೂರ್ಣಃ ಹಿ–ಪೂರ್ಣವಾಗಿತ್ತು (ಕೇವಲ ದ್ವೇಷವಾಗಿತ್ತು–ಭಕ್ತಿ ಮುಂತಾದ ಅನ್ಯ ಯಾವ ಭಾವನೆಯ ಎಷ್ಟಂಶವೂ ಇರಲಿಲ್ಲ); ತೇನ ಏವ–ನಾರದನಿಂದಲೇ, ಕೀರ್ತಿತಃ–(ಹೀಗೆಂದು) ಹೇಳಲ್ಪಟ್ಟಿದೆ; ಪುನಃ–ತಿರಿಗಿ (ಮತ್ತೆ), ವಿದಃ–ಜ್ಞಾನಿಯಾದ, ಮುನೇಃ–ಋಷಿಗೆ, ತಸ್ಯ–(ತನ್ನಿಂದಲೇ ಹೇಳಲ್ಪಟ್ಟ) ದ್ವೇಷದ, ನಿಷೇಧಃ–ಅಭಾವವು, ಕಥಂ ಸ್ಯಾತ್–ಹೇಗೆ ಸಂಭವಿಸುತ್ತದೆ; ಹಿ–ಸ್ಪಷ್ಟವಷ್ಟೆ.

**ಭಗವನ್ನಿಂದಯಾ ವೇನೋ ದ್ವಿಜೈಸ್ತಮಸಿ ಪಾತಿತಃ ।**
**ಇತಿ ನಿಂದಾಖ್ಯವಿದ್ವೇಷಸ್ತಮೋಹೇತುರುದೀರಿತಃ ॥ ೬೫ ॥**

ಆ ಭಾಗವತ ವಾಕ್ಯವನ್ನೇ ಉದಹರಿಸುತ್ತಾರೆ :—

ವೇನಃ – ವೇನನು, ಭಗವನ್ನಿಂದಯಾ – ಭಗವಂತನ ನಿಂದೆಗಾಗಿಯೇ, ದ್ವಿಜೈಃ–ಬ್ರಾಹ್ಮಣರಿಂದ (ಕುಪಿತರಾದ ಋಷಿಗಳಿಂದ), ತಮಸಿ–ತಮಸ್ಸಿನಲ್ಲಿ

---

ಭಗವಂತನಲ್ಲಿ ದ್ವೇಷವು ವೇನರಾಜನಿಗೆ, ಪೂರ್ಣವಾಗಿತ್ತೆಂದು (ಭಕ್ತ್ಯಂಶವು ಎಷ್ಟುಮಾತ್ರವೂ ಇರಲಿಲ್ಲವೆಂದು) ಮೊದಲು ಹೇಳಿದ, ಜ್ಞಾನಿಗಳಾದ ನಾರದರು, ಪುನಃ ಅದಕ್ಕೆ ವಿರೋಧವಾಗಿ ವೇನನಲ್ಲಿ, ಭಗವದ್ದ್ವೇಷವನ್ನು ಹೇಗೆ ನಿಷೇಧಿಸುತ್ತಾರೆ? (ಇಲ್ಲವೆನ್ನುತ್ತಾರೆ? ಶಕ್ಯವಿಲ್ಲ) (೬೪). 'ಭಗವನ್ನಿಂದಯಾ ವೇನೋ ದ್ವಿಜೈಸ್ತಮಸಿ ಪಾತಿತಃ' ಎಂದು, ಭಗವನ್ನಿಂದೆಯೆಂಬ ವಿದ್ವೇಷವೇ, ಋಷಿಗಳು (ಹುಂಕಾರದಿಂದ) ವೇನರಾಜನನ್ನು ತಮಸ್ಸಿನಲ್ಲಿ ನೂಕಲು ಕಾರಣವಾಯಿತೆಂದು, ನಾರದರೇ ಹೇಳಿದ್ದಾರೆ; ಭಗವನ್ನಿಂದೆಯೇ ಮಹಾದ್ವೇಷವು; ಅದೇ

(ನರಕದಲ್ಲಿ), ಪಾತಿತಃ–ತಳ್ಳಲ್ಪಟ್ಟನು ; ಇತಿ–ಎಂಬ ವಾಕ್ಯದಲ್ಲಿ (ಭಾಗವತದಲ್ಲಿ), ನಿಂದಾಖ್ಯವಿದ್ವೇಷಃ–ನಿಂದಾರೂಪದ ಭಗವಂತನ ವಿದ್ವೇಷವು, ತಮೋಹೇತುಃ–ತಮಸ್ಸಿಗೆ ಕಾರಣವು, ಇತಿ ಉದೀರಿತಃ–ಎಂದು ಹೇಳಲಾಗಿದೆ.

**ಇದಾನೀಂ ಮೋಕ್ಷದತ್ವಂ ಚ ಕಥಂ ತಸ್ಯೈವ ಕೀರ್ತಯೇತ್ ||**
**ತ್ರಿಕಾಲದರ್ಶೀ ಸ ಮುನಿಃ ಕಿಂ ತಾತ್ಕಾಲಿಕದೃಕ್ಚ ನ || ೮೬ ||**

ಇದಾನೀಂ–ಈಗ, ಕಥಂ–ಹೇಗೆ, ಮೋಕ್ಷದತ್ವಂ ಚ–(ದ್ವೇಷವು) ಮೋಕ್ಷಪ್ರದವೆಂದೇ, ತಸ್ಯ ಏವ–ಆ ದ್ವೇಷಕ್ಕೇ, ಕೀರ್ತಯೇತ್–ಹೇಳುವರು ? (ಹಿಂದೆ ಹೇಳಿದ್ದರ ಅಭಾವವನ್ನು–ತಮಃ ಪ್ರಾಪ್ತಿಯ ಅಭಾವವನ್ನು ಹೇಳುವರು ?) ; ಸಃ ಮುನಿಃ–ಆ ಜ್ಞಾನಿಗಳಾದ ನಾರದರು, ತ್ರಿಕಾಲದರ್ಶೀ–ತ್ರಿಕಾಲಜ್ಞಾನಿಗಳು, ತಾತ್ಕಾಲಿಕ ದೃಕ್ ಚ–ತಾತ್ಕಾಲಿಕವಾದ (ಆಗಮಾತ್ರದ) ಜ್ಞಾನವುಳ್ಳವರೇ, ಕಿಂ–ಏನು ? ನ–ಅಲ್ಲ (ಅವರು ಹಿಂದೆ ಹೇಳಿದ್ದಕ್ಕೆ ವಿರುದ್ಧವಾಗಿ, ದ್ವೇಷವು ಮೋಕ್ಷಪ್ರದವೆಂದು ಎಂದೂ ಹೇಳುವವರಲ್ಲ).

**ಅತೋ ಗ್ರಾಂಥಿಕಮುದ್ರಾಜ್ಞೋ ನೈವಂ ವ್ಯಾಖ್ಯಾತುಮರ್ಹತಿ |**
**ತದೀಷದ್ದ್ವೇಷ ಏವಾಸೌ ಸುಗುಣಸ್ತೋಮಮಧ್ಯಗಃ || ೮೭ ||**
**ಹಿರಣ್ಯಕಶಿಪುಶ್ಚಾಪಿ ಭಗವನ್ನಿಂದಯಾ ತಮಃ |**
**ವಿವಿಕ್ಷುರತ್ಯಗಾತ್ ಸೂನೋಃ ಪ್ರಹ್ಲಾದಸ್ಯಾನುಭಾವತಃ || ೮೮ ||**

ಅತಃ–ಆದ್ದರಿಂದ, ಗ್ರಾಂಥಿಕ ಮುದ್ರಾಜ್ಞಃ–ಗ್ರಂಥರಚನ ಪರಿಪಾಠವನ್ನು (ಕ್ರಮವನ್ನು–ಲಕ್ಷಣವನ್ನು) ತಿಳಿಯದ ಅಜ್ಞನು, ಏವಂ–ಹೀಗೆ (ಆಪಾತಾರ್ಥ

---

ತಮೋಹೇತುವು (೮೫). ಹೀಗೆ ಹೇಳಿದ ತ್ರಿಕಾಲಜ್ಞಾನಿಗಳಾದ ನಾರದರು, ಈಗ ಆ ದ್ವೇಷಕ್ಕೇನೆ (ವೇನನ ದ್ವೇಷಕ್ಕೆ) ಮೋಕ್ಷಪ್ರದತ್ವವನ್ನು ಹೇಳುವರೇನು ? ಅವರು ತಾತ್ಕಾಲಿಕ ಜ್ಞಾನವುಳ್ಳವರು ಮಾತ್ರ ಅಲ್ಲ ; (ಆಗ ಹಾಗೆ ಹೇಳಿ ಈಗ ಬೇರೆ ಹೇಳಲು ತತ್ಕಾಲದ ಜ್ಞಾನಮಾತ್ರವುಳ್ಳವರಾದರೆ, ಶಕ್ಯ) (೮೬). ಆದ್ದರಿಂದ ಗ್ರಂಥರಚನಾ ಮುದ್ರೆಯನ್ನು ತಿಳಿದವನು ಯಾರೂ, ಆಪಾತಾರ್ಥವನ್ನು ಗ್ರಹಿಸಿ, ದ್ವೇಷದಿಂದ ಮೋಕ್ಷಪ್ರಾಪ್ತಿಯೆಂದು, ಹೇಳಲು ಸಾಧ್ಯವಿಲ್ಲ

ವನ್ನು ಪ್ರತಿಪಾದಿಸುತ್ತದೆಂದು-ದ್ವೇಷದಿಂದ ಭಗವತ್ಪ್ರಾಪ್ತಿಯನ್ನು ಹೇಳುತ್ತದೆಂದು), ವ್ಯಾಖ್ಯಾತುಂ-ಅರ್ಥವನ್ನು ತಿಳಿಯಲು (ಹೇಳಲು) ನ ಅರ್ಹತಿ-ಯೋಗ್ಯನಾಗುವುದಿಲ್ಲ (ಹಾಗೆ ತಿಳಿಯಲು ಶಕ್ಯವಿಲ್ಲ); ತತ್-ಆದ್ದರಿಂದ, ಸ ಗುಣಸ್ತೋಮಮಧ್ಯಗಃ - ಬಹು ಸದ್ಗುಣ ಮಧ್ಯದಲ್ಲಿರುವ, ಅಸೌ - ಇದು ('ದ್ವೇಷಾಚ್ಚೈದ್ಯಾದಯಃ' ಎಂದು ಹೇಳಿದುದು), ಈಷತ್-ಅಲ್ಪವಾದ (ಅಸುರಾವೇಶ ನಿಮಿತ್ತಕವಾದ), ದ್ವೇಷ ಏವ-ದ್ವೇಷವೇ (ಭಗವನ್ನಿಂದೆಯೇ) ಆಗಿರುತ್ತದೆ; ಹಿರಣ್ಯಕಶಿಪುಶ್ಚ ಅಪಿ - ಹಿರಣ್ಯಕಶಿಪು ಸಹ, ಭಗವನ್ನಿಂದಯಾ-ಭಗವನ್ನಿಂದೆಯಿಂದ (ದ್ವೇಷದಿಂದ), ತಮಃ-ತಮಸ್ಸನ್ನು (ನರಕವನ್ನು), ವಿವಿಕ್ಷುಃ-ಪ್ರವೇಶ ಮಾಡಲಿದ್ದವನು, ಸೂನೋಃ - ಪುತ್ರನಾದ, ಪ್ರಹ್ಲಾದಸ್ಯ - ಪ್ರಹ್ಲಾದನ, ಅನುಭಾವತಃ-ಭಕ್ತಿಯ ಫಲವಾಗಿ (ಪ್ರಭಾವದಿಂದ), ಅತ್ಯಗಾತ್-ದಾಟಿದನು.

**ಯದನಿಂದತ್ಪಿತಾ ಮಹ್ಯಂ ತ್ವದ್ಭಕ್ತೇ ಮಯಿ ಚಾಘವಾನ್ ।**
**ತಸ್ಮಾತ್ಪಿತಾ ಮೇ ಪೂಯೇತ ದುರಂತಾದ್ದುಸ್ತರಾದಘಾತ್ ॥ ೮೯ ॥**

ಮಹ್ಯಂ - ನನ್ನ, ಪಿತಾ - ತಂದೆಯು (ಹಿರಣ್ಯಕಶಿಪು), ಅನಿಂದತ್- (ಭಗವಂತನನ್ನು) ನಿಂದಿಸಿದನು, (ಇತಿ) ಯತ್-ಎಂಬುದೂ ಯಾವುದೋ,

---

(ಹಾಗೆ ವ್ಯಾಖ್ಯಾನಿಸಲು ಯೋಗ್ಯನಾಗುವುದಿಲ್ಲ); ಆದ್ದರಿಂದ 'ದ್ವೇಷಾಚ್ಚೈದ್ಯಾದಯಃ' ಎಂಬಲ್ಲಿ ಉಕ್ತವಾದ ದ್ವೇಷವು, ಅಲ್ಪವಾದ (ಬಿಂದುಮಾತ್ರ ದ್ವೇಷವೆಂದೂ) ಅದು ಭಕ್ತ್ಯಾದಿ ಬಹುಗುಣ ಮಧ್ಯದಲ್ಲಿ ಅಸುರಾವೇಶ ನಿಮಿತ್ತವಾಗಿ ಬಂದುದೆಂದೇ ತಿಳಿಯುತ್ತಾನೆ; (ಭಗವನ್ನಿಂದೆಯು ಆ ಕಾರಣದಿಂದ ಆದುದು) ಹಿರಣ್ಯಕಶಿಪು ಸಹ ಹರಿದ್ವೇಷದಿಂದ ತಮಸ್ಸನು ಪ್ರವೇಶಿಸಲು ಸಿದ್ಧನಾಗಿದ್ದವನು, ಭಕ್ತಾಗ್ರಣಿಯಾದ ಪ್ರಹ್ಲಾದನ ಭಕ್ತಿಪ್ರಭಾವದಿಂದ ತಪ್ಪಿಸಿಕೊಂಡನು; (೮೭-೮೮). ಪ್ರಹ್ಲಾದನು ಹಿರಣ್ಯಕಶಿಪುವಿನ ಪ್ರಾಪ್ತವ್ಯವಾದ ತಮಸ್ಸನ್ನು ಪರಿಹರಿಸಲು, ಹೇಗೆ ಕಾರಣನಾದನೆಂಬುದನ್ನು, ಭಾಗವತದಲ್ಲಿ ಹೇಳಲಾದ ಅವನ ಮಾತಿನಿಂದಲೇ ನಿರೂಪಿಸಲಾಗಿದೆ; ನನ್ನ ತಂದೆಯು ನಿನ್ನನ್ನು ನಿಂದಿಸಿ ಮಹಾಪರಾಧಿಯಾಗಿದ್ದಾನೆ; ನಿನ್ನ ಭಕ್ತನಾದ ನನ್ನಲ್ಲಿ ಸಹ ನಾನಾ ಅಪರಾಧಗಳನ್ನೆಸಗಿದ್ದಾನೆ; ಈ ಉಭಯ ಅಪರಾಧಗಳ ಫಲವೂ ತಮಸ್ಸೇ ಆದರೂ ದಾಟಲು ಶಕ್ಯವಲ್ಲದ, ದುರಂತವಾದ (ನಿನ್ನ ಕೃಪೆಯಿಲ್ಲದೇ ಅನ್ಯಕಾರಣಗಳಿಂದ

ತ್ವದ್ಭಕ್ತೇ–ನಿನ್ನ (ಹೇ ನೃಸಿಂಹ!) ಭಕ್ತನಾದ, ಮಯಿ ಚ–ನನ್ನಲ್ಲಿ ಸಹ, ಅಘವಾನ್–ಅಪರಾಧ ಮಾಡಿದವನು (ಇತಿಯತ್) ಆದನೆಂಬುದು ಯಾವುದೋ, ತಸ್ಮಾತ್–(ಆ ಪಾಪದಿಂದ) ಅದರಿಂದ, ದುಸ್ತರಾತ್ – ಮೀರಲಶಕ್ಯವೂ, ದುರಂತವೂ – ನಷ್ಟವಾಗದಿರುವುದೂ, ಆದ, ಅಘಾತ್ – ಮಹಾಪಾಪದಿಂದ, ಮೇ ಪಿತಾ–ನನ್ನ ತಂದೆಯು, ಪೂಯೇತ–ಶುದ್ಧನಾಗಲಿ (ಹೀಗೆ ಅನುಗ್ರಹಿಸು).

ಭಗವದ್ಭಕ್ತನೇ ತಮೋಹೇತುವಾದ ಭಗವದ್ದ್ವೇಷಫಲವನ್ನು ದಾಟುವ ನೆಂದು ಬಹುಸ್ಥಲಗಳಲ್ಲಿ ನಿರ್ಣಯಿಸಲ್ಪಟ್ಟಿರುವುದರಿಂದಲೂ, ಸೂತ್ರಕಾರರೂ 'ವಿದ್ಯೈವ ತು ನಿರ್ಧಾರಣಾತ್' ಎಂಬಲ್ಲಿ ಭಗವದ್ಗುಣ ಜ್ಞಾನವೇ ಮೋಕ್ಷ ಹೇತುವೆಂದು ನಿರ್ಧರಿಸಿರುವುದರಿಂದಲೂ, ಅಲ್ಪದ್ವೇಷವೆಂಬುದು, ಭಕ್ತ್ಯಾದಿ ಸಾಧನ ಸಮುದ್ರದಲ್ಲಿ ಬಿಂದುಮಾತ್ರವೆಂದೂ, ಅದು ಅಲ್ಲಿ ಲೀನವಾದುದೇ ಆಗಿರುವುದೆಂದು ಹಿಂದಿನ ಶ್ಲೋಕದಿಂದ ಹೇಳಿ, ಪುತ್ರನಾದ ಪ್ರಹ್ಲಾದನ ಭಕ್ತಿಯು ಹಿರಣ್ಯಕಶಿಪುಗೆ ಹೇಗೆ ತಮಸ್ಸನ್ನು ದಾಟಲು ಕಾರಣವಾಯಿತೆಂಬುದನ್ನು, ವಿಶದ ಗೊಳಿಸುತ್ತಾರೆ :—

**ನಿಂದಾಂ ಭಗವತಃ ಶೃಣ್ವಂಸ್ತತ್ಪರಸ್ಯ ಜನಸ್ಯ ವಾ ।**
**ತತೋ ನಾಪೈತಿ ಯಃ ಸೋಽಪಿ ಯಾತ್ಯಧಃ ಸುಕೃತಾಚ್ಚ್ಯುತಃ** ॥ ೯೦ ॥

**ಇತ್ಯಾದಿ ವಾಕ್ಯಸಂದರ್ಭೈಸ್ತಮೋಹೇತುರ್ಯತಃ ಸ್ಫುಟಂ ।**
**ನಿರ್ಣೀತೋ ಭಗವದ್ದ್ವೇಷಸ್ತತೋಽಪ್ಯುಕ್ತೋಽರ್ಥ ಏವ ಹಿ** ॥ ೯೧ ॥

ಇತ್ಯಾದಿ – ಈ ಮುಂತಾದ, ವಾಕ್ಯಸಂದರ್ಭೈಃ – (ಭಾಗವತ) ವಾಕ್ಯ ಸಂದರ್ಭಗಳಿಂದ, ಸ್ಫುಟಂ–ಸ್ಪಷ್ಟವಾಗಿ, ಭಗವದ್ದ್ವೇಷಃ–ಭಗವಂತನಲ್ಲಿ ಮಾಡುವ ದ್ವೇಷವು, ತಮೋಹೇತುಃ – ತಮಸ್ಸಿಗೆ ಕಾರಣವಾಗಿ, ನಿರ್ಣೀತಃ–ನಿಶ್ಚಯಿಸ

---

ನಷ್ಟವಾಗದ) ಈ ಮಹಾ ಪಾಪದಿಂದ ಶುದ್ಧನನ್ನಾಗಿ ಮಾಡುವ ಅನುಗ್ರಹವನ್ನು ಮಾಡುವ ಕೃಪೆದೋರು(೮೯). ಭಗವಂತನ ನಿಂದೆಯನ್ನು ಶ್ರವಣಮಾಡುವವನೂ, ಆತನ ಭಕ್ತರ (ಸರ್ವೋತ್ತಮತ್ವಾದಿ ಮಾಹಾತ್ಮ್ಯಜ್ಞಾನಪೂರ್ವಕವಾದ ಸ್ನೇಹ ವುಳ್ಳವರ) ನಿಂದೆಯನ್ನು ಶ್ರವಣಮಾಡುವವನಿಗೂ, ತಮಸ್ಸು ತಪ್ಪಿದ್ದಲ್ಲ; ಆ ತಮಸ್ಸಿನಿಂದ ಅವರ ಉತ್ಥಾನವಿಲ್ಲ; ಹೀಗೆ ಹೇಳುವ ವಾಕ್ಯ ಸಂದರ್ಭಗಳಿಂದ

ಲ್ಪಟ್ಟಿದೆ; ತತಃ ಅಪಿ–(ಅಷ್ಟೇ ಅಲ್ಲ) ಆದಕ್ಕಿಂತ ಅಧಿಕವಾಗಿ, ಸುಕೃತಾತ್–ಪುಣ್ಯದಿಂದ, ಚ್ಯುತಃ–ಬಿದ್ದು (ಕಳೆದುಕೊಂಡು), ಅಧಃ–ಅಂಧ ತಮಸ್ಸನ್ನು (ತಮಸ್ಸಿನ ತಳವನ್ನು), ಯಾತಿ–ಹೊಂದುತ್ತಾನೆ; ಯಃ ಸಃ–ಯಾರು (ಈ ತಮಸ್ಸನ್ನು) ಹೊಂದುವವನೋ, ಆತನು, ತತಃ–ಆ ಸ್ಥಲದಿಂದ, ನ ಅಪ್ಯೈತಿ–ಬಿಡುಗಡೆ ಹೊಂದುವುದಿಲ್ಲ (ತಿರಿಗಿಬರುವುದಿಲ್ಲ–ಅದು ನಿತ್ಯತಮಸ್ಸು); ಭಗವತಃ–ಪರಮಾತ್ಮನ, ನಿಂದಾ–ನಿಂದೆಯನ್ನು, ವಾ–ಅಥವಾ, ತತ್ಪರಸ್ಯ ಜನಸ್ಯ–ಆತನೇ ಸರ್ವೋತ್ತಮನೆಂದು ತಿಳಿದ ಭಕ್ತರ ನಿಂದೆಯನ್ನು, ಶೃಣ್ವನ್–ಕೇಳಿದವನಾಗುವನೋ (ಸಃ ಅಪಿ–ಅವನೂ ಸಹ) (ಅಧಃ ಯಾತಿ–ಅಂಧ ತಮಸ್ಸನ್ನು ಹೊಂದುವನು), ಯತಃ–(ಎಂದು) ಯಾವ ಕಾರಣದಿಂದ (ತಮೋಹೇತುಃ – ತಮೋಹೇತುವೆಂದು, ನಿರ್ಣೀತಃ–ನಿರ್ಣಯಿಸಲಾಗಿದೆಯೋ), ತತಃ ಅಪಿ–ಆ ಕಾರಣದಿಂದಲೂ, ಉಕ್ತೋಽರ್ಥಃ ಏವ ಹಿ–ಹೇಳಿದ ಅರ್ಥವೇ ಸರಿಯಾದುದು (ದ್ವೇಷದಿಂದ ತಮಸ್ಸು, ಅದು ಸರ್ವಥಾ ಮೋಕ್ಷಪ್ರದವಲ್ಲೆಂದು ಹೇಳಿದ ಅರ್ಥವೇ ಸರಿ).

**ಸೂತ್ರಕೃಚ್ಚಾಹ ಯದ್ವಿದ್ಯೈವ ತು ನಿರ್ಧಾರಣಾದಿತಿ ।**
**ನಾನ್ಯಃ ಪಂಥಾ ಇತಿ ಸ್ಪಷ್ಟೋ ವೇದಸ್ತು ಕೋಽನುಲಂಘಯೇತ್**
॥ ೯೨ ॥

ಯತ್ – ಯಾವ ಕಾರಣದಿಂದ, ಸೂತ್ರಕೃತ್ ಚ – ಸೂತ್ರಕರ್ತರಾದ ಶ್ರೀ ವೇದವ್ಯಾಸರೂ, ವಿದ್ಯೈವ ತು ನಿರ್ಧಾರಣಾತ್–(ಭಗವಂತನ ಸರ್ವೋತ್ತಮತ್ವಾದಿ ಮಹತ್ತ್ವವನ್ನು ಭಕ್ತಿಪೂರ್ವಕ ತಿಳಿದವನೇ) ಅಪರೋಕ್ಷ ಜ್ಞಾನದಿಂದಲೇ, ಮೋಕ್ಷಪ್ರಾಪ್ತಿಯೆಂದು ನಿಶ್ಚಯಿಸಿರುವುದರಿಂದ, ಇತಿ–ಎಂದೂ, ನಾನ್ಯಃ ಪಂಥಾ (ಅಯನಾಯ ವಿದ್ಯತೇ) – ಭಗವತ್ಪ್ರಾಪ್ತಿಗೆ, ಅನ್ಯಮಾರ್ಗವಿಲ್ಲವೆಂದು, ವೇದಃ–

---

ತಮಸ್ಸಿಗೆ ಹೇತುವಾವುದೆಂಬುದು ಸಿದ್ಧವಾಗುತ್ತದೆ. ಆದ್ದರಿಂದ ದ್ವೇಷದಿಂದ ಭಗವತ್ಪ್ರಾಪ್ತಿಯೆಂಬ ಮಾತುಗಳಿಗೆ ಈ ಹಿಂದೆ ಹೇಳಲಾದ ಅರ್ಥವಿವರಣೆಯೇ ಯೋಗ್ಯವಾದುದು (೯೦–೯೧). ಸೂತ್ರಕಾರರೂ (ಶ್ರೀವೇದವ್ಯಾಸರೂ) 'ವಿದ್ಯೈವ ತು ನಿರ್ಧಾರಣಾತ್' ಎಂಬ ಸೂತ್ರದಿಂದ ಜ್ಞಾನಪೂರ್ವಕವಾದ ಭಕ್ತಿಯಿಂದಲೇ ಮೋಕ್ಷವೆಂದು ನಿರ್ಣಯಿಸಿದ್ದಾರೆ; 'ನಾನ್ಯಃ ಪಂಥಾ' ಎಂಬ ಶ್ರುತಿಯೂ ಇದನ್ನೇ ಹೇಳುತ್ತದೆ–ಮೋಕ್ಷಪ್ರಾಪ್ತಿಗೆ ಅನ್ಯಮಾರ್ಗವಿಲ್ಲೆಂದು ಘೋಷಿಸುತ್ತದೆ; ಶ್ರುತಿ ಮತ್ತು ಸೂತ್ರಗಳನ್ನು ಯಾವ ವಿವೇಕಿಯು ಅತಿಕ್ರಮಿಸುತ್ತಾನೆ? (೯೨).

ವೇದವೂ, ಸ್ಪಷ್ಟಃ–(ಸಂಶಯಕ್ಕೆ ಅವಕಾಶವಿಲ್ಲದಂತೆ) ಸುಸ್ಪಷ್ಟವಾಗಿದೆಯೋ, ತೌ – ಈ ಎರಡನ್ನು ಸೂತ್ರ ಮತ್ತು ವೇದಗಳನ್ನು, ಕಃ ನು – ಯಾರು ತಾನೇ, ಲಂಘಯೇತ್–ಅತಿಕ್ರಮಿಸಬಹುದು ? (ಶಕ್ಯವಿಲ್ಲ).

**ಶ್ರವಣಂ ಮನನಂ ತಸ್ಮಾತ್ ಧ್ಯಾನಂ ಸಾಕ್ಷಾತ್ಕೃತಿರ್ಹರೇಃ ।**
**ಭಕ್ತಿಃ ಪ್ರಸಾದ ಇತ್ಯೇತೇ ಮುಕ್ತೇಃ ಸೋಪಾನಪಂಕ್ತಯಃ ॥೯೩॥**

ಸಾಕ್ಷಾತ್ತಾಗಿ ಮತ್ತು ಉಪಲಕ್ಷಣದಿಂದ ಸೂಚಿತವಾದ ಸಾಧನಗಳನ್ನು ಕ್ರಮವಾಗಿ ಸಂಗ್ರಹಿಸುತ್ತಾರೆ :—

ತಸ್ಮಾತ್ – ಆದ್ದರಿಂದ (ಉಕ್ತಶ್ರುತಿ ಸ್ಮೃತಿ ಯುಕ್ತಿಗಳೆಂಬ ಪ್ರಮಾಣ ಸಮುದಾಯದಿಂದ), ಶ್ರವಣಂ – ಶ್ರವಣವೂ, ಮನನಂ–ಮನನವೂ, ಧ್ಯಾನಂ–ನಿದಿಧ್ಯಾಸನವೂ, ಭಕ್ತಿಃ – ಭಕ್ತಿಯೂ, ಹರೇಃ–ಶ್ರೀಹರಿಯ[1], ಸಾಕ್ಷಾತ್ಕೃತಿಃ–

---

ಈವರೆಗೆ ಶ್ರುತಿ, ಸ್ಮೃತಿ, ಯುಕ್ತಿಗಳೆಂಬ ಪ್ರಮಾಣ ಸಮುದಾಯದಿಂದ, ಶ್ರವಣ, ಮನನ, ಧ್ಯಾನ, ಅಪರೋಕ್ಷದರ್ಶನ, ಭಕ್ತಿ, ಮತ್ತು ಭಗವತ್ಪ್ರಸಾದಗಳೆಂಬ

---

[1] ಶ್ರೀಹರಿಯ 'ಹರೇಃ' ಎಂಬ ಪದವು, ಸಾಧನಷಟ್ಕಕ್ಕೂ (ಆರು ಸಾಧನೆಗಳಿಗೂ ಅನ್ವಯಿಸುತ್ತದೆ ; ಇವು ಯಾವ ಕ್ರಮದಲ್ಲಿ ಮೋಕ್ಷಸಾಧನವಾಗುತ್ತವೆಂದರೆ :—

(ಜೀವಯೋಗ್ಯತೆ ಮತ್ತು ಸಾಧನ ಪರಿಪಾಕ ನಿಬಂಧನದಿಂದ) ಶ್ರೀಹರಿಯು, ಈತ ನನ್ನು ಉದ್ಧರಿಸುತ್ತೇನೆಂಬ ನಿಮಿತ್ತ ರೂಪದ ಕೃಪೆಯು ಮೊದಲಿನದು (ಅದಿಲ್ಲದೇ ಮುಕ್ತಿಯಿಲ್ಲ); ಪ್ರಸಾದವು, ಅನುಗ್ರಹರೂಪದ ಶ್ರೀಹರಿಯ ಪ್ರಸಾದವು; ಅದರಿಂದ (ಆ ಪ್ರಸಾದ ಲಭ್ಯವಾದ) ಭಕ್ತಿ ವಿರಕ್ತಿಗಳು ; ಅದರಿಂದ ಶಾಸ್ತ್ರ ನಿಶ್ಚಯ ಸಾಧಕವಾದ ಮನನವು ; (ಇದಕ್ಕೆ ಶ್ರವಣಕ್ಕಿಂತ ಅಧಿಕವಾದ ಪ್ರಸಾರವು) ; ಅದಕ್ಕಿಂತ ಅಧಿಕ ಪ್ರಸಾರ ಲಭ್ಯವಾದ ನಿರಂತರ ಧ್ಯಾನವೆಂಬ ನಿದಿಧ್ಯಾಸನವು ; (ಅದರಿಂದ ಅಭಿವೃದ್ಧವಾದ ವಿರಕ್ತಿ ಭಕ್ತಿಗಳೂ, ಅಧಿಕ ಪ್ರಸಾರವೂ) ಇವುಗಳಗಿಂತ, ಭಗವಂತನೇ ಪ್ರತಿಬಂಧಕವಾದ ಅವಿದ್ಯೆಯನ್ನು ಪರಿಹರಿಸಿ, ಅಪರೋಕ್ಷ ದರ್ಶನವು; (ಅದರಿಂದ ಸ್ವಯೋಗ್ಯ ಪರಿಪೂರ್ಣ ವಿರಕ್ತಿ ಭಕ್ತಿಗಳು); ಮುಂದೆ ಅದರಿಂದ, ಆತ್ಯಂತಿಕ ದುಃಖನಿವೃತ್ತಿ ರೂಪದ ಪರಮಾನಂದಾವಾಪ್ತಿ ಲಕ್ಷಣದ ಮೋಕ್ಷವು ; ಹೀಗೆ ಮುಕ್ತಿಯ ಸೋಪಾನಗಳನ್ನು ಕ್ರಮವಾಗಿ ತಿಳಿಯಬೇಕು ; ಎಲ್ಲ ಮೆಟ್ಟಿಲುಗಳಲ್ಲಿಯೂ ಶ್ರೀ ಹರಿಭಕ್ತಿ ವಿರಕ್ತಿಗಳು ಯಥಾ ಯಥಾ-ಆಯಾ ಅವಸ್ಥೆಗೆ ಅನುಗುಣವಾಗಿ ಅವಶ್ಯವೆಂಬುದನ್ನು ಮರೆಯಲಾಗದು; ಮಹಾಭಕ್ತಿ, ಮಹಾಪ್ರಸಾದವೆಂದು ಹೇಳದೇ ಭಕ್ತಿ, ಪ್ರಸಾದಗಳನ್ನು ಸಾಮಾನ್ಯವಾಗಿ ಸಾಧನ ಷಟ್ಕದಲ್ಲಿ ಹೇಳಿರುವುದರ ಉದ್ದೇಶವ್ಕೇ ಹೀಗಿದೆ.

ಸಾಕ್ಷಾತ್ಕಾರವೂ (ಪ್ರತ್ಯಕ್ಷ ದರ್ಶನವೂ – ಅಪರೋಕ್ಷ ದರ್ಶನವೂ), ಪ್ರಸಾದಃ– ಪ್ರಸಾದವೂ, ಇತಿ ಏತೇ–ಎಂಬ ಈ ಆರು (ಕ್ರಮದಿಂದ), ಮುಕ್ತೇಃ–ಮೋಕ್ಷದ, ಸೋಪಾನ ಪಂಙ್ಕ್ತಯಃ–ಮೆಟ್ಟಲಿನ ಸಾಲುಗಳು (ಆಗಿವೆ).

**ರುಗ್ಮವರ್ಣಂ ಚ ಕರ್ತಾರಮೀಶಂ ಪುರುಷರೂಪಿಣಂ ।**
**ಬ್ರಹ್ಮತಾತಂ ಮಹಾತ್ಮಾನಂ ಪದ್ಮನಾಭಂ ಪರಾತ್ಪರಂ ॥ ೯೪ ॥**

**ಯದಾ ಪಶ್ಯತಿ ಜೀವೋಽಯಂ ತದಾ ಕರ್ಮ ದ್ವಿರೂಪಕಂ ।**
**ಹಿತ್ವಾ ನಿರ್ದುಃಖತ್ವಪೂರ್ವೈಃ ಪರಂ ಸಾಮ್ಯಮುಪೈತಿ ಸಃ ॥ ೯೫ ॥**

**ಇತಿ ಶ್ರುತೌ ಮೋಕ್ಷಹೇತುಜ್ಞಾನಸ್ಯೇತ್ಥಂ ವಿನಿರ್ಣಯಾತ್ ।**
**ಜ್ಞಾನಂ ಸರೂಪಸಾಕಾರಸಗುಣೇಶ್ವರಗೋಚರಂ ।**
**ಸಾಧ್ಯಂ ಮೋಕ್ಷಾರ್ಥಿಭಿರ್ಭಕ್ತೈರ್ನಾನ್ಯಚ್ಛ್ರುತಿವಿರೋಧತಃ ॥೯೬॥**

'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ । ತದಾ ವಿದ್ವಾನ್ ಪುಣ್ಯ ಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ' ಎಂಬ ಶ್ರುತಿಯನ್ನು ಅರ್ಥಪೂರ್ವಕ ಸಂಗ್ರಹಿಸಿ, ಸಗುಣ ಸರ್ವೇಶ್ವರತ್ವಾದಿ ವಿಶಿಷ್ಟ ಭಗವಂತ ಸಾಕ್ಷಾತ್ಕಾರವೇ ಮೋಕ್ಷಸಾಧನವೆಂದೂ, ಪರನು ಹೇಳುವ ನಿರ್ವಿಕಲ್ಪಕವೆಂಬ ಐಕ್ಯಜ್ಞಾನದಿಂದ ಅಲ್ಲವೆಂದು ತೋರಿಸುತ್ತಾರೆ.

ಅಯಂ–ಈ (ಮುಕ್ತಿಯೋಗ್ಯ), ಜೀವಃ–ಜೀವನು,[1] ರುಗ್ಮವರ್ಣಂ– ಸುವರ್ಣಜ್ಯೋತಿಯುಳ್ಳವನೂ, ಕರ್ತಾರಂ–ಸ್ವತಂತ್ರ ಸರ್ವಕರ್ತನೂ, ಈಶಂ–

---

ಈ ಆರು ಮೋಕ್ಷಪ್ರಾಪ್ತಿಗೆ ಕ್ರಮವಾಗಿ ಸಾಧನಗಳೆಂದು, ಸಿದ್ಧವಾಗುತ್ತದೆ; ಮುಕ್ತಿಯ ಆರು ಸೋಪಾನಗಳಿವು (೯೩). 'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ' ಇತ್ಯಾದಿ ಶ್ರುತಿಯು, ಸುವರ್ಣಜ್ಯೋತಿಯೂ, ಸ್ವತಂತ್ರ ಸರ್ವಕರ್ತನೂ ನಿಯಾಮಕನೂ, ಬ್ರಹ್ಮೋತ್ಪಾದಕನೂ, ಪುರುಷಾಕಾರನೂ ಲಕ್ಷ್ಮೀಪತಿಯೂ, ಆದ ಮಹಾಮಹಿಮನಾದ ಪದ್ಮನಾಭನನ್ನು ಅಧಿಕಾರಿ ಜೀವನು, ಸಾಕ್ಷಾತ್ತಾಗಿ

1 'ಯದಾ ಪಶ್ಯಃ' ಎಂಬಲ್ಲಿರುವ ಪಶ್ಯಶಬ್ದಾರ್ಥವು, ಜೀವನು, ಎಂದಾಗಿರುತ್ತದೆ.

ಸರ್ವನಿಯಾಮಕನೂ, ಪುರುಷರೂಪಿಣಂ–ಪುರುಷಾಕಾರ (ಕರಚರಣಾದಿ ಆಕಾರ) ವುಳ್ಳವನೂ, ಬ್ರಹ್ಮತಾತಂ–ಬ್ರಹ್ಮಪಿತನೂ, ಮಹಾತ್ಮಾನಂ–ಮಹಾಮಹಿಮೆಗಳೇ ಸ್ವರೂಪವಾಗುಳ್ಳವನೂ, ಪದ್ಮನಾಭಂ–(ಬ್ರಹ್ಮಪಿತೃತ್ವವು ಪದ್ಮನಾಭರೂಪಕ್ಕೆ ಸಂಭವವಾದ್ದರಿಂದ) ಪದ್ಮನಾಭರೂಪಿಯೂ, ಪರಾತ್ಪರಂ – ಸರ್ವೋತ್ತಮನೂ (ಲಕ್ಷ್ಮೀಪತಿಯೂ) (ಆದ ಭಗವಂತನನ್ನು), ಯದಾ ಪಶ್ಯತಿ–ಯಾವಾಗ ಸಾಕ್ಷಾತ್ತಾಗಿ ಕಾಣುವನೋ, ತದಾ – ಆಗ, ದ್ವಿರೂಪಕಂ ಕರ್ಮ – ಪುಣ್ಯ ಪಾಪರೂಪದ ಕರ್ಮಬಂಧವನ್ನು, ಹಿತ್ವಾ–ತೊರೆದು, ನಿರ್ದುಃಖ ಪೂರ್ವೈಃ– ನಿರ್ದುಃಖತ್ವ (ನಿತ್ಯಸುಖತ್ವ, ನಿತ್ಯದೇಹತ್ವ) ಮೊದಲಾದವುಗಳಿಂದ, ಪರಂ ಸಾಮ್ಯಂ – ಪರಮಾತ್ಮನ (ಅಲ್ಪವೇ ಆದರೂ, ಸ್ವಯೋಗ್ಯಪೂರ್ಣವಾದ) ಸಾದೃಶ್ಯವನ್ನು, ಸಃ–ಆತನು (ಆ ಅಧಿಕಾರಿಯು), ಉಪೈತಿ–ಹೊಂದುತ್ತಾನೆ; ಇತಿ – ಎಂದು, ಶ್ರುತೌ–ಶ್ರುತಿಯಲ್ಲಿ, ಮೋಕ್ಷಹೇತು ಜ್ಞಾನಸ್ಯ – ಮೋಕ್ಷಕ್ಕೆ ಕಾರಣವಾದ ಜ್ಞಾನದ, ಇತ್ಥಂ–ಪ್ರಕಾರತ್ವವು (ಹೀಗೆಂದು), ವಿನಿರ್ಣಯಾತ್– ವಿಶೇಷವಾಗಿ ನಿರ್ಣಯಿಸಿರುವುದರಿಂದ, ಮೋಕ್ಷಾರ್ಥಿಭಿಃ–ಮೋಕ್ಷಾಪೇಕ್ಷಿಗಳಾದ, ಭಕ್ತೈಃ – ಭಗವದ್ಭಕ್ತರಿಂದ (ಭಕ್ತರೇ ಮುಕ್ತಿಯೋಗ್ಯರು), ಸರೂಪಸಾಕಾರ ಸಗುಣೇಶ್ವರಗೋಚರಂ – ಸದೃಶನೂ, ಸಾಕಾರನೂ, ಗುಣಪೂರ್ಣನೂ ಆದ ಪರಮಸ್ವಾಮಿಯ (ಭಗವಂತನ) ಅಪರೋಕ್ಷವನ್ನು ದೊರಕಿಸುವ, ಜ್ಞಾನಂ– (ಯಥಾರ್ಥ) ಜ್ಞಾನವು, ಸಾಧ್ಯಂ–ಸಾಧಿಸಲ್ಪಡಬೇಕು; ಶ್ರುತಿವಿರೋಧತಃ– ಶ್ರುತಿವಿರೋಧವಿರುವುದರಿಂದ, ಅನ್ಯತ್–ಅನ್ಯವಾದ (ನಿರ್ಗುಣತ್ವಾದಿ) ಜ್ಞಾನವು, ನ–ಅಲ್ಲ (ಅದಕ್ಕಾಗಿ ಯತ್ನವು ಯೋಗ್ಯವಲ್ಲ).

---

ಕಂಡಾಗ (ಬ್ರಹ್ಮದರ್ಶನವನ್ನು ಹೊಂದಿದಾಗ), ಪುಣ್ಯಪಾಪ ರೂಪದ ಉಭಯ ವಿಧ ಕರ್ಮವನ್ನು ತೊರೆದು, ನಿರ್ದುಃಖನೂ, ನಿತ್ಯಸುಖನೂ, ನಿತ್ಯನೂ ಎಂಬ ಧರ್ಮಗಳಿಂದ, ಸ್ವಯೋಗ್ಯವಾದ ಪರಮಾತ್ಮನ ಅಲ್ಪ ಸಾದೃಶ್ಯವನ್ನು ಹೊಂದಿ ಮುಕ್ತನಾಗುವನೆಂದು, ಮೋಕ್ಷ ಹೇತುವಾದ ಜ್ಞಾನ ಪ್ರಕಾರವನ್ನು ನಿರ್ಣಯಿಸಿ ಹೇಳಿರುತ್ತದೆ; ಆದ್ದರಿಂದ ಸದೃಶರೂಪವುಳ್ಳವನೂ, ಸಮಾನವಾದ ಶಿರಃಪಾಣ್ಯಾದಿ ಆಕಾರ ವಿಶಿಷ್ಟನೂ, ಗುಣಪೂರ್ಣನೂ ಆದ ಭಗವಂತನ ಅಪರೋಕ್ಷ ಸಾಧಕ ಜ್ಞಾನವನ್ನು ಸಾಧಿಸಬೇಕು; ನಿರ್ಗುಣ ನಿರಾಕಾರನೆಂಬ ಜ್ಞಾನಕ್ಕಾಗಿ ಯತ್ನಿಸ

**ಯಃ ಸ್ವತಃ ಪರತೋ ವೇಷದ್ವಿರಕ್ತೋ ವಿಷ್ಣುಭಕ್ತಿಮಾನ್ ।**
**ಸಾರಾಸಾರವಿವೇಕಜ್ಞೋ ಮುಮುಕ್ಷುಶ್ಚ ಸ ಮುಕ್ತಯೇ ।**
**ಅಧ್ಯಾಯದ್ವಯರೂಪಸ್ಯ ಶಾಸ್ತ್ರಸ್ಯ ಶ್ರವಣಂ ಚರೇತ್ ॥ ೯೭ ॥**

ಯಃ–ಯಾರು, ಸ್ವತಃ–(ಇಹಜನ್ಮದಲ್ಲಿ ಶಾಸ್ತ್ರಾಭ್ಯಾಸದ ಸಹಾಯವಿಲ್ಲದೇ) ಪರಿಪಕ್ವವಾದ ಯೋಗ್ಯತೆಯಿಂದ (ಅಥವಾ ಸರ್ವಪ್ರೇರಕನಾದ ಸ್ವಶಬ್ದವಾಚ್ಯ ಪರಮಾತ್ಮನಿಂದ), ಪರತಃ ವಾ – ಪರರಿಂದ ಆಗಲಿ (ಮಹತ್ಸಮಾಗಮ ಬಲ ದಿಂದಾಗಲಿ), ಈಷದ್ವಿರಕ್ತಃ–ಸ್ವಲ್ಪ ವೈರಾಗ್ಯವುಳ್ಳವನಾಗಿ, ವಿಷ್ಣುಭಕ್ತಿಮಾನ್– ವಿಷ್ಣುಭಕ್ತಿಯುಳ್ಳವನಾಗಿ, ಸಾರಾಸಾರವಿವೇಕಜ್ಞಃ–ಸಾರ ಅಸಾರಗಳ ವಿವೇಕ ವನ್ನು ತಿಳಿದ, ಮುಮುಕ್ಷುಃ – ಮೋಕ್ಷಾಪೇಕ್ಷಿಯಾದವನೋ, ಸಃ–ಆತನು, ಮುಕ್ತಯೇ – ಮೋಕ್ಷಕ್ಕಾಗಿ, ಅಧ್ಯಾಯದ್ವಯರೂಪಸ್ಯ – ಒಂದು, ಎರಡನೇ ಅಧ್ಯಾಯಗಳಾದ (ಗುಣಪೂರ್ಣತ್ವ, ನಿರ್ದೋಷತ್ವನಿಶ್ಚಯ ಜ್ಞಾನಸಾಧಕವಾದ– ಭಗವತ್ಸ್ವರೂಪ ನಿರ್ಣಯರೂಪವಾದ), ಶಾಸ್ತ್ರಸ್ಯ–ಸೂತ್ರಗಳ (ಬ್ರಹ್ಮಸೂತ್ರದ ೧, ೨ನೇ ಅಧ್ಯಾಯಗಳ), ಶ್ರವಣಂ–(ಗುರೂಪದಿಷ್ಟಮಾರ್ಗದಿಂದ) ಶ್ರವಣ ವನ್ನು, ಚರೇತ್–ಆಚರಿಸಬೇಕು (ಅವಶ್ಯವಾಗಿ ಮಾಡತಕ್ಕದ್ದು).[1]

---

ತಕ್ಕದ್ದಲ್ಲ (೯೪–೯೬). ಜನ್ಮಾಂತರ ಪುಣ್ಯ ಪರಿಪಾಕದಿಂದ, ಅಥವಾ ಶ್ರೀಹರಿಯ ಅನುಗ್ರಹದಿಂದಾಗಲಿ, ಮಹತ್ಸಮಾಗಮಾದಿ ಅನ್ಯಕಾರಣದಿಂದಾಗಲಿ, ವೈರಾಗ್ಯವನ್ನು ಹೊಂದಿದ ವಿಷ್ಣುಭಕ್ತಿಯುಳ್ಳ ಪುರುಷನು, ಸಾರಾಸಾರವಿವೇಕ ಜ್ಞಾನವುಳ್ಳವನೂ, ಮೋಕ್ಷಾಪೇಕ್ಷಿಯೂ ಆಗಿ, ಅದಕ್ಕಾಗಿ, ಬ್ರಹ್ಮಸ್ವರೂಪವನ್ನು ನಿಶ್ಚಯಿಸಿ ನಿರೂಪಿಸುವ (ಗುಣಪೂರ್ಣತ್ವವನ್ನು ನಿರ್ದೋಷತ್ವವನ್ನು ನಿರ್ಣಯಿ ಸುವ) ಬ್ರಹ್ಮಸೂತ್ರಗಳ ೧–೨ ನೇ ಅಧ್ಯಾಯಗಳ ಶ್ರವಣವನ್ನು ಅವಶ್ಯಕವಾಗಿ

---

[1] ಈ ಶ್ಲೋಕದಲ್ಲಿ ಅಡಕವಾದ ಪ್ರಮೇಯ ಮತ್ತು ವಿಶೇಷಾರ್ಥಗಳ ಸಂಗ್ರಹವಾದ ನಿರೂಪಣೆಯು, ಈ ಮುಂದಿನಂತೆ ಇದೆ:—

'ಈಷದ್ವಿರಕ್ತಃ' ಎಂಬಲ್ಲಿರುವ 'ಈಷತ್' (ಸ್ವಲ್ಪ)ವೆಂಬ ಪದವೂ ಶ್ಲೋಕದಲ್ಲಿ ಹೇಳ ಲಾದ ಸರ್ವಸಾಧನಗಳಿಗೂ ಸಂಬಂಧವಾಗುತ್ತದೆ, 'ಅಥಾತೋ ಬ್ರಹ್ಮ ಜಿಜ್ಞಾಸಾ' ಎಂಬ ಪ್ರಥಮ ಸೂತ್ರದಲ್ಲಿರುವ 'ಅಥ' ಶಬ್ದವು, ವೈರಾಗ್ಯಾದಿ ಸಂಪನ್ನನಾದ ನಂತರ ಎಂಬುದಾಗಿ ಸಾಮಾನ್ಯವಾಗಿ ಹೇಳುತ್ತದೆ ; ಅದನ್ನು (ಆ ಸಂಪದಗಳನ್ನು) ಈ ಶ್ಲೋಕವು ಸಂಗ್ರಹಿಸು

**ವಿಷಯಸ್ಯೈವ ಶಾಸ್ತ್ರತ್ವಾನ್ಮುಖ್ಯಂ ಶಾಸ್ತ್ರಮಿದಂ ಕಿಲ ।**
**ತದಗಂ ಶಾಸ್ತ್ರಮಿತರತ್ಫಲಸಾಧನಬೋಧಕಂ ।**
**ಪ್ರವರ್ತಕಸ್ಯ ಚರ್ಚಾತ್ರ ಸಾ ಸಾಕ್ಷಾದ್ವಿಷಯಸ್ಯ ಯತ್ ॥ ೯೮ ॥**

ನಾಲ್ಕು ಅಧ್ಯಾಯಗಳುಳ್ಳ ಬ್ರಹ್ಮಮೀಮಾಂಸಾಶಾಸ್ತ್ರದ ಶಾಸ್ತ್ರತ್ವವು; ಅವಾಂತರ ವಿಭಾಗಗಳಿಂದ ಬಹುಪ್ರಕಾರವೆಂದು ಹೇಳುತ್ತಾರೆ:—

---

ಮಾಡತಕ್ಕದ್ದು (೯೭). ಶಾಸ್ತ್ರ ವಿಷಯನಾದ (ವಸ್ತುವಾದ) ಬ್ರಹ್ಮನನ್ನು ಪ್ರತಿಪಾದಿಸುವುದರಿಂದ, ಈ ಎರಡು ಅಧ್ಯಾಯಗಳು ಮುಖ್ಯವಾದ ಶಾಸ್ತ್ರವೆನಿಸಿವೆ;

---

ತ್ತದೆ; ಸೂತ್ರಗತವಾದ ಮುಂದಿನ 'ಅತಃ' ಶಬ್ದವು ಮೋಕ್ಷಸಾಧಕ ಬ್ರಹ್ಮಜ್ಞಾನದ ವಿಷಯ, ಸಾಧನ, ಫಲಗಳಲ್ಲಿ ಅತಿಶಯವಾದ ಆಸಕ್ತಿಯನ್ನುಂಟುಮಾಡಲು ಅವುಗಳನ್ನು (ಮುಖ್ಯವಾಗಿ ಮೋಕ್ಷಾಖ್ಯ ಫಲವನ್ನು) ನಿರೂಪಿಸುತ್ತದೆ; ಫಲಪ್ರಾಪ್ತಿಯಲ್ಲಿ ಆದರವುಳ್ಳ ಮುಮುಕ್ಷು ಜೀವನು, 'ಬ್ರಹ್ಮಜಿಜ್ಞಾಸಾ' ಪದದಿಂದ ಹೇಳಲಾಗುವ, ಬ್ರಹ್ಮಸ್ವರೂಪವನ್ನು ನಿರೂಪಿಸಲು ೧–೨ ನೇ ಅಧ್ಯಾಯಗಳು ಪ್ರವೃತ್ತವಾಗಿವೆ; ಈ ಅಧ್ಯಾಯಗಳ ಶ್ರವಣವನ್ನು ಮಾಡತಕ್ಕದ್ದು; ಶ್ರವಣಾನಂತರ ಉತ್ಕಂಠಿತನಾಗಿ ೪ನೇ ಅಧ್ಯಾಯೋಕ್ತ ಫಲವನ್ನು, ೩ನೇ ಸಾಧನಾಧ್ಯಾಯದಲ್ಲಿ ಉಕ್ತವಾದ ಮನನ, ನಿದಿಧ್ಯಾಸನಗಳನ್ನು ಸ್ವರೂಪವನ್ನು ತಿಳಿದು, (ಶಿಷ್ಯನಾದ) ಮುಮುಕ್ಷುವು, ಗುಣಪೂರ್ಣತ್ವ ಮತ್ತು ನಿರ್ದೋಷತ್ವವೆಂಬ ೧–೨ ನೇ ಅಧ್ಯಾಯಗಳ ಮನನವನ್ನು, ನಿದಿಧ್ಯಾಸನವನ್ನು ಮಾಡಬೇಕು; ಭಗವಂತನಲ್ಲಿ ಮನಸ್ಸನ್ನು ನಿರಂತರವಾಗಿ ನಿಲ್ಲಿಸಲು, ವೈರಾಗ್ಯ ಭಕ್ತಿಗಳ ಉತ್ಪಾದಕ ಸಾಧನಾಧ್ಯಾಯದ ೨ ಪಾದಗಳನ್ನು, ವಿಶೇಷವಾಗಿ ಅಧ್ಯಯನಾದಿಗಳಿಂದ ಸೇವಿಸಿ, ಪುನಃ ಅತಃಪದೋಕ್ತ ಮೋಕ್ಷಕ್ಕಾಗಿ, ಮನನ ಧ್ಯಾನಗಳೆಂಬ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು; ಧ್ಯಾನವು ಸಾಧ್ಯವಾಗುವ ಪರ್ಯಂತ ಮನನವು ನಡೆಯಬೇಕು; ವೈರಾಗ್ಯವನ್ನು ಆರಂಭಿಸಿ ಬಂಧಧ್ವಂಸವೆಂಬ ಮುಕ್ತಿಪರ್ಯಂತವಾದ, ಸಕಲ ವ್ಯಾಪಾರಗಳೂ, ಜಡವಾದ್ದರಿಂದ, ಫಲದಾನದಲ್ಲಿ ಅಸ್ವತಂತ್ರಗಳಾದ್ದರಿಂದಲೂ, ಅವಾಂತರ ಕರ್ತನಾದ ಜೀವನೂ ಅಸ್ವತಂತ್ರನಾದ್ದರಿಂದಲೂ ಮುಮುಕ್ಷುವಾದ ಸ್ವಭಕ್ತನ ಈ ಅಭೀಷ್ಟವಾದ ಸರ್ವವ್ಯಾಪಾರಗಳ ಸಿದ್ಧಿಗೆ (ಆಯಾ ಕಾಲ ಯೋಗ್ಯಫಲಪ್ರಧಾನದಲ್ಲಿ) ಮತ್ತು ಫಲಾಂತರದ ಇಚ್ಛೆಯೇ ಹುಟ್ಟದಂತಿರಲು ಸ್ವತಂತ್ರ ಸರ್ವಕರ್ತನಾದ ಭಗವಂತನ ಪ್ರಸಾದವೇ ಅಪೇಕ್ಷಣೀಯವಾದುದೆಂಬುದನ್ನು ಮನಗಂಡು, ಅದಕ್ಕಾಗಿ ಪ್ರಾರ್ಥಿಸುತ್ತಲೇ ಇರಬೇಕು—ಮನನ ಧ್ಯಾನಾದಿ ವ್ಯಾಪಾರಗಳನ್ನು ಆವೃತ್ತಿ ಮಾಡುತ್ತಿರಬೇಕು; ರಾಜಪ್ರಸಾದದಿಂದ ಭೃತ್ಯನ ಅಭೀಷ್ಟವು ಪೂರ್ಣವಾಗುವಂತೆ, ಭಗವಂತನ ಪ್ರಸಾದವೇ ಮುಖ್ಯವಾಗಿ ಅರ್ಥನೀಯವಾದುದು; ರಾಜ ಪ್ರಸಾದವು ಈತನೇ ನನ್ನ ಸ್ವಾಮಿಯೆಂಬ ನಿರ್ವಂಚನ ಬುದ್ಧಿಯಿಂದ, ಆತನಲ್ಲಿ ಮಾಡುವ ಸ್ನೇಹದಿಂದಲೇ

ವಿಷಯಸ್ಯ ಏವ–ವಿಷಯನಾದ ಬ್ರಹ್ಮನ, ಶಾಸ್ತ್ರತ್ವಾತ್–ಪ್ರತಿಪಾದಕವಾದ್ದರಿಂದ (ಬ್ರಹ್ಮಸ್ವರೂಪವನ್ನು ನಿರೂಪಿಸುವುದರಿಂದ), ಇದಂ–ಈ ಎರಡು ಅಧ್ಯಾಯಗಳು, ಮುಖ್ಯಂ–ಮುಖ್ಯವಾದ, ಶಾಸ್ತ್ರಂ ಕಿಲ–ಶಾಸ್ತ್ರವೆನಿಸಿದೆಯಷ್ಟೆ ; ಇತರತ್–ಉಳಿದ ಎರಡು ಅಧ್ಯಾಯಗಳು, ಫಲಸಾಧನಬೋಧಕಂ–ಮೋಕ್ಷವೆಂಬ ಫಲ ಮತ್ತು ಅದಕ್ಕೆ ಸಾಧನನಿರೂಪಕವಾದ್ದರಿಂದ, ತದಂಗಂ – ೧ – ೨ನೇ

---

ಬ್ರಹ್ಮಸೂತ್ರಗಳ ಉಳಿದ ಎರಡು ಅಧ್ಯಾಯಗಳು, ಮುಖ್ಯ ವಿಷಯನಾದ ಬ್ರಹ್ಮಪ್ರಾಪ್ತಿಗಾಗಿ ಪ್ರವರ್ತಿಸುವ ಅಧಿಕಾರಿಗೆ ಅವಶ್ಯವಾದ ಚರ್ಚೆಯನ್ನು ಒಳಗೊಂಡಿರು

---

ಲಭ್ಯವು ; ಸ್ನೇಹವು ತನ್ನ ಉಪಕಾರಕನಲ್ಲಿರುವುದು ಕಂಡಿದೆ ; ಮತ್ತು ಅಧಿಕೋಪಕಾರಿಯಲ್ಲಿ ಅಧಿಕ ಸ್ನೇಹವೂ ಕಂಡಿದೆ ; ಪ್ರಸಾದವೂ ಮಹಾತ್ಮ್ಯಜ್ಞಾನ ಪೂರ್ವಕವಾದ ಸ್ನೇಹದಿಂದಲೇ (ಅದೇ ಭಕ್ತಿಯು) ಲಭ್ಯವು ; ಪುಣ್ಯಪರಿಪಾಕವುಳ್ಳ ಯಾವನೊಬ್ಬ ಪುರುಷನಲ್ಲಿ, 'ಏನಂ ಉದ್ಧರಾಮಿ' ಎಂದಾಗ ಉಂಟಾಗುವ ಭಗವದಿಚ್ಛೆಯೇ ಪ್ರಸಾದರೂಪವಾದುದು ; ಪುಣ್ಯಪರಿಪಾಕವೆಂಬ ನಿಮಿತ್ತಾಂತರದ ಅವಶ್ಯಕತೆಯೂ ಇಲ್ಲದ ಶ್ರೀಹರಿ ಪ್ರಸಾದವೇ ಕಾರಣವೆಂದೂ ತಿಳಿಯಬೇಕು ; ಉತ್ತರೋತ್ತರ ಪ್ರಚುರತರ ಶ್ರವಣಾದಿ ರೂಪದ ತನ್ನ ವ್ಯಾಪಾರಗಳಲ್ಲಿ ಸಹ ಅನ್ಯನಿಮಿತ್ತಾದಿ ಬಂಧನ ಶೂನ್ಯನಾಗಿ ಪ್ರಸಾದವನ್ನು ಮಾಡುವನೆಂದು ತಿಳಿದೇ ಶ್ರೀಹರಿಯಲ್ಲಿ ಅತಿಶಯ ಭಕ್ತಿಯನ್ನು ಮಾಡಬೇಕು ; ಅದರಿಂದ ಲಭಿಸುವ ಪ್ರಸಾದವೂ, ನಿಮಿತ್ತಶೂನ್ಯವಾದುದೇ ಎಂದು ತಿಳಿಯತಕ್ಕದ್ದು ; ಏವಂಚ, ಪ್ರಾಥಮಿಕ ಪ್ರಸಾದವನ್ನು ಆರಂಭಿಸಿ, ಕ್ರಮದಿಂದ ಅಭಿವೃದ್ಧವಾಗುವ ಚರಮ ಮಹಾಪ್ರಸಾದದ ಪರ್ಯಂತದ, ಪ್ರಸಾದ ಪರಂಪರೆಗೆ, ಪ್ರಾಥಮಿಕದಿಂದ ಚರಮ ಪ್ರಸಾದದವರೆಗಿನ, (ಅಪರೋಕ್ಷ ದರ್ಶನ ಪರ್ಯಂತ) ಪ್ರಸಾದ ಹೇತುವು, ಭಕ್ತಿ ಪರಂಪರೆಯೇ (ಅಧಿಕಾಧಿಕ ಭಕ್ತಿ ಪರಂಪರೆಯೇ) ಎಂದೂ (ಪ್ರಾಥಮಿಕ ಪ್ರಸಾದವು, ಅದರ ಮುಂದಿನ ಭಕ್ತಿಗೂ, ಆ ಪ್ರಸಾದವು ತನ್ನ ಮುಂದಿನ ಭಕ್ತಿಗೂ ಕಾರಣವೆಂದೂ), ಸೂತ್ರಕಾರರ ಅಭಿಪ್ರಾಯವಾಗಿದೆ ; ಈ ಅಭಿಪ್ರಾಯವು ಆಚಾರ್ಯರಿಂದಲೂ, ಟೀಕಾಕಾರರಿಂದಲೂ ವಿಶದಗೊಳಿಸಲ್ಪಟ್ಟಿದೆ ; ಅದನ್ನೇ ನಾವಾದರೂ ಸಂಗ್ರಹಿಸಿ, ಭಾಷ್ಯಕಾರರಿಂದಲೇ ಪ್ರೇರಿತನಾಗಿ, ಸ್ವಲ್ಪಮಟ್ಟಿಗೆ ವಿವರಿಸಿದ್ದೇವೆ ; ವೀಣಾವಾದನ ಪ್ರವೀಣರಾದ ಪೂರ್ಣಪ್ರಮತಿಗಳ ಕೃತಿಯೇ ಇದು–ನಾನಾದರೂ, ವೀಣೆಯಂತೆ ನಿಮಿತ್ತಮಾತ್ರನು–ಅವರು ಹೇಳದ ಯಾವುದನ್ನೂ ನಾನು ಹೇಳಿಲ್ಲ; ಅರ್ಜುನನ ಪ್ರತಿಜ್ಞೆಯನ್ನು ಪೂರ್ಣಗೊಳಿಸಿದ ಶ್ರೀಕೃಷ್ಣನ ಕೃತಿಯಂತೆ, ನಾನಾದರೂ, ಶ್ರೀಕೃಷ್ಣ ಮತ್ತು ಪೂರ್ಣಪ್ರಮತಿಗಳ (ಭೀಮಸೇನನ) ಕೃತಿಯೆಂದೇ ತಿಳಿದಿರುವ ಅಲ್ಪನೂ ಅನಧಿಕಾರಿಯೂ, ಪೂರ್ಣ ಅಸ್ವತಂತ್ರನೂ ಆಗಿರುವೆನು, ಎಂದು ಆತ್ಯಂತಿಕವಾದ ಜೀವಾಸ್ವತಂತ್ರತ್ವವನ್ನು ಸೂಚಿಸಿದ್ದಾರೆ—ಶ್ರೀವಾದಿರಾಜರು.

ಅಧ್ಯಾಯಗಳ ಅಂಗವಾದ (ಸಹಾಯಕ), ಶಾಸ್ತ್ರಂ – ಶಾಸ್ತ್ರವು (ವಿಷಯ ಪ್ರತಿಪಾದಕವು), ಪ್ರವರ್ತಕಸ್ಯ–(ಸ್ವಯೋಗ್ಯಸಾಧನದಿಂದ ಫಲಪ್ರಾಪ್ತಿಯನ್ನು ಉದ್ದೇಶಿಸಿ ಪ್ರವರ್ತಿಸುವ) ಪ್ರವರ್ತಕನಿಗೆ, ಯತ್ – ಯಾವ ಕಾರಣದಿಂದ, ಸಾಕ್ಷಾದ್ವಿಷಯಸ್ಯ–ಸಾಕ್ಷಾತ್ ಬ್ರಹ್ಮನ, ಸಾ ಚರ್ಚಾ ಅತ್ರ–ಅಲ್ಲಿ ಪ್ರಸಕ್ತವಾದ ಚರ್ಚೆಯೋ (ಅದರಿಂದಲೇ ಶಾಸ್ತ್ರತ್ವವು).

**ವೈರಾಗ್ಯಭಕ್ತಿಪಾದೌ ಚ ಶ್ರುತ್ವಾಧ್ಯಾಯದ್ವಯಶ್ರುತೇಃ ।**
**ಸಮ್ಯಕ್ಸಾರಾಸಾರವೇದೀ ಭಕ್ತಿವೈರಾಗ್ಯದಾರ್ಢ್ಯವಾನ್ ॥ ೯೯ ॥**

**ಸಾರ್ಧಾಧ್ಯಾಯದ್ವಯೋಕ್ತಾರ್ಥಸಂಪನ್ನೋಽಥ ವಿಮುಕ್ತಯೇ ।**
**ತದ್ಧೇತುದೃಷ್ಟ್ಯೈ ಚ ಪುನಃ ಶಾಸ್ತ್ರಾಭ್ಯಾಸಸ್ವರೂಪಿಣೀಂ ।**
**ಮನನಾಖ್ಯಾಂ ಧ್ಯಾನರೂಪಾಂ ಜಿಜ್ಞಾಸಾಂ ಚಾಚರೇತ್ಕಿಲ ॥ ೧೦೦ ॥**

**ಧ್ಯಾನಸ್ಯ ಪರಿಪಾಕೇ ತು ತಂ ದೃಷ್ಟ್ವಾ ಮುಚ್ಯತೇ ಕಿಲ ॥ ೧೦೧ ॥**

ವೈರಾಗ್ಯಭಕ್ತಿಪಾದೌ ಚ – (೩ನೇ ಅಧ್ಯಾಯದ) ವೈರಾಗ್ಯ ಮತ್ತು ಭಕ್ತಿಪಾದಗಳನ್ನು (೧–೨ನೇ ಪಾದಗಳನ್ನೂ), ಶ್ರುತ್ವಾ – ಶ್ರವಣಮಾಡಿ, ಅಧ್ಯಾಯದ್ವಯ ಶ್ರುತೇಃ–ಈ ಎರಡೂ ಅಧ್ಯಾಯಗಳ ಶ್ರವಣದಿಂದ, ಸಮ್ಯಕ್– ಸ್ವಯೋಗ್ಯತೆಯಂತೆ ಪೂರ್ಣವಾದ, ಸಾರಾಸಾರವೇದೀ–ಸಾರ, ಅಸಾರ ವಿವೇಕ ಜ್ಞಾನಿಯಾಗಿ, ಭಕ್ತಿವೈರಾಗ್ಯದಾರ್ಢ್ಯವಾನ್–ಭಕ್ತಿವೈರಾಗ್ಯಗಳ ದಾರ್ಢ್ಯವನ್ನು

---

ವುದರಿಂದ, ಸಾಧನ ಮತ್ತು ಫಲವನ್ನು ಬೋಧಿಸುವುದಾಗಿ ಅಂಗ ಭೂತವಾದ ಶಾಸ್ತ್ರವಾಗಿದೆ (೯೮). ಬ್ರಹ್ಮಸ್ವರೂಪ ಪ್ರತಿಪಾದಕವಾದ ೧–೨ ನೇ ಅಧ್ಯಾಯಗಳ ಶ್ರವಣದಿಂದ ಸಾರಾಸಾರ ವಿವೇಕ ಜ್ಞಾನಿಯಾಗಿ, ೩ನೇ ಅಧ್ಯಾಯದ ೧–೨ನೇ ಪಾದಗಳನ್ನು ಶ್ರವಣಮಾಡಿ, ಭಕ್ತಿ ವೈರಾಗ್ಯಗಳ ದಾರ್ಢ್ಯವನ್ನು ಹೊಂದಿ, ೧–೨ನೇ ಅಧ್ಯಾಯ ಮತ್ತು ವೈರಾಗ್ಯ ಭಕ್ತಿಪಾದಗಳೆಂಬ ೩ನೇ ಅಧ್ಯಾಯದ ಅರ್ಧಭಾಗದ ಅರ್ಥನಿಶ್ಚಯವನ್ನೂ ತಿಳಿದು ಪುನಃ ಮೋಕ್ಷ ಹೇತುವಾದ ಬ್ರಹ್ಮ ದರ್ಶನವನ್ನು ಪಡೆಯಲಿಕ್ಕೆ ಶಾಸ್ತ್ರಾಭ್ಯಾಸರೂಪದ ಮನನ ಧ್ಯಾನಗಳೆಂಬ ಜಿಜ್ಞಾಸೆಯನ್ನು (ಉಪಾಸನೆಯನ್ನು) ಆಚರಿಸುತ್ತಾನೆ ; ಧ್ಯಾನವು ಪಕ್ವವಾಗಲು

(ಸ್ಥಿರತ್ವವನ್ನು ) ಹೊಂದಿದವನಾಗಿ, ಸಾರ್ಧಾರ್ಧಾಧ್ಯಾಯದ್ವಯೋಕ್ತಾರ್ಥಸಂಪನ್ನಃ– ೩ನೇ ಅಧ್ಯಾಯದ ೧–೨ನೇ ಪಾದಗಳೆಂಬ ಅರ್ಧಾಧ್ಯಾಯಸಹಿತವಾದ ೧–೨ನೇ ಅಧ್ಯಾಯಗಳ ಅರ್ಥನಿಶ್ಚಯವನ್ನೂ ಪೂರ್ಣವಾಗಿ ಹೊಂದಿ, ಅಥ–ಅನಂತರ, ವಿಮುಕ್ತಯೇ – ಮೋಕ್ಷಪ್ರಾಪ್ತಿಗಾಗಿ, ತದ್ಧೇತುದೃಷ್ಟ್ಯೈ – ಅದಕ್ಕೆ ಪ್ರಧಾನ ಹೇತುವಾದ (ಸಾಧನವಾದ) ಅಪರೋಕ್ಷದರ್ಶನಕ್ಕಾಗಿ, ಪುನಃ–ಶಾಸ್ತ್ರಾಭ್ಯಾಸ ಸ್ವರೂಪಿಣೀಂ–ಶಾಸ್ತ್ರಾಭ್ಯಾಸರೂಪದ, ಮನನಾಖ್ಯಾಂ ಧ್ಯಾನರೂಪಾಂ–ಮನನ ವೆಂಬ ಧ್ಯಾನರೂಪದ (ಉಪಾಸನೆಯೆಂಬ), ಜಿಜ್ಞಾಸಾಂ – ಜಿಜ್ಞಾಸೆಯನ್ನು (ಶ್ರವಣಾದಿಯನ್ನು ), ಆಚರೇತ್ ಚ – ಬಿಡದೇ ಆಚರಿಸುತ್ತಾನೆ, ಕಿಲ–ಇದು ಸತ್ಯವು ; ಧ್ಯಾನಸ್ಯ–ಧ್ಯಾನದ, ಪರಿಪಾಕೇ ತು–ಪಕ್ವಸ್ಥಿತಿಯು (ಸಮಾಧಿಯುಂಟಾ ಗುತ್ತಿರಲಾಗಿ, ತಂ–ಭಗವಂತನನ್ನು, ದೃಷ್ಟ್ವಾ–ಕಂಡು (ಸಾಕ್ಷಾತ್ಕರಿಸಿಕೊಂಡು), ಮುಚ್ಯತೇ ಕಿಲ–ಜೀವನ್ಮುಕ್ತನಾಗುತ್ತಾನೆಂಬುದು ಸಿದ್ಧ (ಸತ್ಯವೇ ಆಗಿದೆ).

**ಅತಃ ಶ್ರವಣವೈರಾಗ್ಯಭಕ್ತಿಶಾಸ್ತ್ರವಿಚಾರಣಾಃ ।**
**ಧ್ಯಾನಂ ಚ ಭಗವದ್ದೃಷ್ಟಿಸ್ತದ್ಭಕ್ತಿಸ್ತದನುಗ್ರಹಃ ॥ ೧೦೨ ॥**
**ಇಮಾನಿ ಸಾಧನಾನ್ಯಂತೇ ಫಲಾಧ್ಯಾಯೋದಿತಂ ಫಲಂ ।**
**ಇತ್ಯಾದಿ ಸೂತ್ರೇ ಸರ್ವೋऽಪಿ ಶಾಸ್ತ್ರಾರ್ಥಃ ಕಥಿತಃ ಕಿಲ ॥ ೧೦೩ ॥**

ಅತಃ–('ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಪ್ರಥಮ ಸೂತ್ರದಲ್ಲಿ) ಎಲ್ಲಾ ಸೂತ್ರಗಳ ಅರ್ಥ ವಿಶೇಷವೂ ಸೂಚಿಸಲ್ಪಟ್ಟಿರುವ ಕಾರಣದಿಂದ, ಶ್ರವಣ ವೈರಾಗ್ಯ ಭಕ್ತಿ ಶಾಸ್ತ್ರ ವಿಚಾರಣಾಃ–ಶ್ರವಣದಿಂದ (೧–೨ ನೇ ಅಧ್ಯಾಯ ಶ್ರವಣದಿಂದಲೂ)

---

(ಸಮಾಧಿಯು ಸಾಧಿಸಲು) ಭಗವಂತನನ್ನು ಕಂಡು ಜೀವನ್ಮುಕ್ತನಾಗುತ್ತಾನೆ (೯೯–೧೦೧). 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಪ್ರಥಮ ಸೂತ್ರದಲ್ಲಿ ಸೂಚಿಸಿರುವ, ಸಮಗ್ರ ಬ್ರಹ್ಮಮೀಮಾಂಸಾ ಶಾಸ್ತ್ರದ ಶ್ರವಣವನ್ನು ಮಾಡಿ, ವಿರಕ್ತಿ ಭಕ್ತಿ ಸಂಪನ್ನರಾಗಿ, ಶಾಸ್ತ್ರವಿಚಾರಪರರಾಗುವರು ; ಧ್ಯಾನವನ್ನೂ, ಸಮಾಧಿಯಲ್ಲಿ ಭಗವದ್ದರ್ಶನವನ್ನೂ, ಅದರಿಂದ ಸ್ವಪೂರ್ಣ ಭಕ್ತಿಯನ್ನು, ಭಗವದನುಗ್ರಹವೇ ಆದಿಯಾಗಿ ಈ ಎಲ್ಲ ಸಾಧನಗಳನ್ನು, ಕಡೆಗೆ ಫಲಾಧ್ಯಾಯ ದಲ್ಲಿ ಹೇಳಲಾಗುವ ಫಲವನ್ನು, ಇತ್ಯಾದಿ ಸಕಲ ಶಾಸ್ತ್ರಾರ್ಥಗಳನ್ನು ಬ್ರಹ್ಮ

*

ವೈರಾಗ್ಯ ಭಕ್ತಿಗಳಿಂದಲೂ (೩ನೇ ಅಧ್ಯಾಯದ ೧-೨ನೇ ಪಾದಶ್ರವಣದಿಂದಲೂ) ಬ್ರಹ್ಮಮೀಮಾಂಸಾಶಾಸ್ತ್ರಾಭ್ಯಾಸ ಸ್ವರೂಪದ ಜಿಜ್ಞಾಸಾಪರರಾದ ಮುಮುಕ್ಷುಗಳು ಧ್ಯಾನಂ ಚ-ಧ್ಯಾನವೂ, ಭಗವದ್ದೃಷ್ಟಿಃ-ಭಗವದ್ದರ್ಶನ, ತದ್ಭಕ್ತಿಃ-(ಅದರ ಫಲವಾಗಿ) ಸ್ವಯೋಗ್ಯ ಪೂರ್ಣ ಭಕ್ತಿ, ತದನುಗ್ರಹಃ - ಭಗವಂತನ ಅನುಗ್ರಹ, (ಪ್ರಸಾದ), ಇಮಾನಿ ಸಾಧನಾನಿ-ಈ ಸಾಧನಗಳೂ, ಅಂತೇ-ಕಡೆಗೆ, ಫಲಾ-ಧ್ಯಾಯೋದಿತಂ - ಫಲಾಧ್ಯಾಯದಲ್ಲಿ (೪ನೇ ಅಧ್ಯಾಯದಲ್ಲಿ ಹೇಳಲಾಗುವ), ಫಲಂ-(ಕರ್ಮಕ್ಷಯ,[1] ಉತ್ಕ್ರಾಂತಿ, ಮಾರ್ಗ, ಭೋಗಗಳೆಂಬ, ಅಪರೋಕ್ಷ ದರ್ಶನದ) ಫಲವೂ, ಇತ್ಯಾದಿ - ಈ ಮುಂತಾದ, ಸರ್ವಃ ಅಪಿ ಶಾಸ್ತ್ರಾರ್ಥಃ - ಸಮಸ್ತ ಶಾಸ್ತ್ರಾರ್ಥವೂ, ಸೂತ್ರೇ-ಬ್ರಹ್ಮಸೂತ್ರದಲ್ಲಿ, ಕಥಿತಃ - ಹೇಳಲಾಗಿದೆ, ಕಿಲ-(ಎಂಬುದು) ಪ್ರಸಿದ್ಧವು (ಸ್ಪಷ್ಟವೂ ಆಗಿದೆ).

**ಉತ್ಕ್ರಾಂತಿಮಾರ್ಗಗಮ್ಯಾಪ್ತಿಭೋಗರೂಪಂ ಫಲಂ ಸತಾಂ ।**
**ಫಲಾಧ್ಯಾಯೇ ತು ಕಥಿತಂ ಬುದ್ಧಿಶುದ್ಧ್ಯೈ ವಿಚಾರ್ಯತೇ ॥೧೦॥**

ಸಾಧನವನ್ನು ನಿರೂಪಿಸಿ, ಫಲವನ್ನು ಸಂಗ್ರಹವಾಗಿ ವಿವೇಚಿಸುತ್ತಾರೆ:—

ಬುದ್ಧಿಶುದ್ಧ್ಯೈ - (ನಮ್ಮ) ಮನಃ ಶುದ್ಧಿಗಾಗಿ, ಸತಾಂ - ಸಜ್ಜನರಿಗೆ, (ಮುಕ್ತಿಯೋಗ್ಯರಿಗೆ), ಉತ್ಕ್ರಾಂತಿಮಾರ್ಗಗಮ್ಯಾಪ್ತಿಭೋಗರೂಪಂ-ಚರಮ ದೇಹದಿಂದ ಜೀವನು ಹೊರಡುವುದು, ಮಾರ್ಗದಲ್ಲಿ (ಅಂತ್ಯ ಸ್ಥಾನವನ್ನು ಸೇರುವದರೊಳಗೆ) ದೊರೆಯುವ ಮಧ್ಯದ ಲೋಕಗಳು, (ಗಮ್ಯಾಪ್ತಿ) ಹೊಂದುವ ಸ್ಥಲದ ಪ್ರಾಪ್ತಿ ಮತ್ತು (ಮುಕ್ತಿಯಲ್ಲಿ) ದೊರೆಯುವ ಸುಖಭೋಗಗಳನ್ನು ರೂಪಿಸುವ ಫಲಾಧ್ಯಾಯೇ-(೪ನೇ) ಫಲಾಧ್ಯಾಯದಲ್ಲಿ, ಕಥಿತಂ - ಹೇಳಲಾದುದನ್ನು, ವಿಚಾರ್ಯತೇ-ವಿವೇಚಿಸಲಾಗುತ್ತದೆ (ಫಲವು ವಿವೇಚಿಸಲ್ಪಡುತ್ತದೆ).

---

ಸೂತ್ರವು (ವೇದಾಂತ ಸೂತ್ರಗಳು) ನಿರೂಪಿಸುತ್ತವೆ. (೧೦೨-೧೦೩). ಫಲಾಧ್ಯಾಯದಲ್ಲಿ ಮುಕ್ತಿಯೋಗ್ಯರಿಗೆ ಅಪರೋಕ್ಷ ದರ್ಶನದಿಂದ ಲಭಿಸುವ, ಉತ್ಕ್ರಾಂತಿ, ಮಾರ್ಗ, ಭೋಗಗಳೆಂಬ ಮುಖ್ಯ ಫಲವನ್ನೂ, ಅಂತಕರಣ

---

1 ಅಪರೋಕ್ಷದರ್ಶನದಿಂದ ಆಗ ಫಲ ಕೊಡಲು ಆರಂಭವಾದ್ದರ (ಪ್ರಾರಬ್ಧ ಕರ್ಮದ) ವಿನಹ, ಸರ್ವಕರ್ಮಗಳ ಪರಿಕ್ಷಯುವಾಗುತ್ತದೆ—ಇದೂ ಅಪರೋಕ್ಷದ ಫಲವೇ - ಅನ್ಯತ್ರ ಪ್ರಸಕ್ತವಾಗುತ್ತದೆ.

**ಜ್ಞಾನೀ ಜ್ಞಾನೋದಯೇ ಜಾತೇ ಬ್ರಹ್ಮನಾಡ್ಯಾ ವಿನಿರ್ಗತಃ ।**
**ಅರ್ಚಿರಾದ್ಯಧ್ವನಾ ಪ್ರಾಪ್ಯ ಬ್ರಹ್ಮಲೋಕೇ ಚಿರಂ ವಸೇತ್ ।**
**ಜೀವನ್ಮುಕ್ತಿದಶಾ ಸೈವ ಜ್ಞಾನಿನಾಂ ಕೀರ್ತ್ಯತೇ ಬುಧೈಃ ॥ ೧೦೫ ॥**

ಜ್ಞಾನೀ–ಜ್ಞಾನಿಯು, ಜ್ಞಾನೋದಯೇ ಜಾತೇ – ಅಪರೋಕ್ಷ ದರ್ಶನಾನಂತರ, ಬ್ರಹ್ಮನಾಡ್ಯಾ – ಬ್ರಹ್ಮನಾಡಿಯಿಂದ, (ಸುಷುಮ್ನಾದಿ ಸ್ವಯೋಗ್ಯ ನಾಡಿದ್ವಾರಾ), ವಿನಿರ್ಗತಃ–ದೇಹವನ್ನು ಬಿಟ್ಟು ಹೊರಟು, ಅರ್ಚಿರಾದ್ಯಧ್ವನಾ–ಅರ್ಚಿರಾದಿ ಮಾರ್ಗದಿಂದ, ಪ್ರಾಪ್ಯ–ಹೊಂದಿ, ಬ್ರಹ್ಮಲೋಕೇ–ಬ್ರಹ್ಮ(ಸತ್ಯಾದಿ) ಲೋಕದಲ್ಲಿ, ಚಿರಂ–ಬ್ರಹ್ಮನ ಮುಕ್ತಿಕಾಲದವರೆಗೆ, ವಸೇತ್–ವಾಸಮಾಡುತ್ತಾನೆ; ಜ್ಞಾನಿನಾಂ – ಜ್ಞಾನಿಗಳಿಗೆ, ಸಾ ಏವ – ಅದೇ (ಬ್ರಹ್ಮದರ್ಶನಾನಂತರ ವಾಸ ಮಾಡುವ ಆ ಅವಸ್ಥೆಯೇ), ಜೀವನ್ಮುಕ್ತಿದಶಾ – ಜೀವನ್ಮುಕ್ತ್ಯವಸ್ಥೆಯೆಂದು, ಬುಧೈಃ–ಜ್ಞಾನಿಗಳಿಂದ, ಕೀರ್ತ್ಯತೇ–ಹೇಳಲ್ಪಡುತ್ತದೆ.

**ದ್ವಿಪರಾರ್ಧಾತ್ಮಕಃ ಕಾಲಃ ಪರ ಇತ್ಯೇವ ಕಥ್ಯತೇ ।**
**ಪರಸ್ಯಾರ್ಧಂ ಪರಾರ್ಧಂ ಯತ್ಪ್ರಾಹುಃ ಶಬ್ದವಿಚಕ್ಷಣಾಃ ॥ ೧೦೬ ॥**

**ಬ್ರಹ್ಮಣಃ ಶತವರ್ಷಾತ್ಮಾ ಕಾಲಸ್ತಸ್ಮಾತ್ಪರಾಭಿದಃ ।**
**ತದಂತೇ ಕಿಲ ಸರ್ವೇಷಾಂ ಪ್ರಾಕ್ ಜ್ಞಾತಪರಮಾತ್ಮನಾಂ ।**
**ತೇನೈವ ಬ್ರಹ್ಮಣಾ ಸಾಕಂ ಮಹಾಮೋಕ್ಷೋ ಭವಿಷ್ಯತಿ ॥ ೧೦೭ ॥**

ದ್ವಿಪರಾರ್ಧಾತ್ಮಕಃ ಕಾಲಃ–ದ್ವಿಪರಾರ್ಧರೂಪದ ಕಾಲವು, ಪರಃ ಇತ್ಯೇವ–ಕಥ್ಯತೇ – ಪರವೆಂದೇ ಕರೆಯಲ್ಪಡುತ್ತದೆ; ಶಬ್ದವಿಚಕ್ಷಣಾಃ – ಶಬ್ದ ಕುಶಲರು,

---

ಶುದ್ಧಿಗಾಗಿ ವಿವೇಚಿಸಲಾಗಿದೆ (೧೦೪). ಅಧಿಕಾರಿಯು ಬ್ರಹ್ಮದರ್ಶನವಾದ ನಂತರ, ಚರಮ ದೇಹದಿಂದ ಬ್ರಹ್ಮನಾಡಿಯ ದ್ವಾರಾ ಹೊರಟು, ಅರ್ಚಿರಾದಿ ಮಾರ್ಗವನ್ನು ಹೊಂದಿ, ಕ್ರಮವಾಗಿ ಪ್ರಾಪ್ಯವಾದ ಬ್ರಹ್ಮಲೋಕವನ್ನು ಸೇರಿ, ಬ್ರಹ್ಮನ ಮುಕ್ತಿಪರ್ಯಂತವಾಗಿ ಅಲ್ಲಿಯೇ ವಾಸಿಸುತ್ತಾನೆ; ಜ್ಞಾನಿಗಳು ಇದನ್ನೇ ಮುಕ್ತಿಯೋಗ್ಯಜೀವರ ಜೀವನ್ಮುಕ್ತ್ಯವಸ್ಥೆಯೆಂದು ಕರೆಯುತ್ತಾರೆ; (೧೦೫). ದ್ವಿಪರಾರ್ಧವೆಂಬ ಕಾಲಾವಧಿಯು, 'ಪರ' ಎಂದು ಹೇಳಲ್ಪಡುತ್ತದೆ; ಪರಕಾಲದ

ಪರಸ್ಯಾರ್ಧಂ — ಪರದ (ಪರವೆಂಬ ಕಾಲದ) ಅರ್ಧಭಾಗದ ಕಾಲವನ್ನು, ಯತ್— ಯಾವ ಕಾರಣದಿಂದ, ಪರಾರ್ಧಂ—ಪರಾರ್ಧವೆಂದು, ಪ್ರಾಹುಃ—ಹೇಳುವರೋ, ತಸ್ಮಾತ್—ಆ ಕಾರಣದಿಂದ, ಬ್ರಹ್ಮಣಃ—ಬ್ರಹ್ಮದೇವನ, ಶತವರ್ಷಾತ್ಮಾ ಕಾಲಃ— ನೂರು ವರ್ಷವೆಂಬ ಕಾಲಾವಧಿಯು, ಪರಾಭಿದಃ — ಪರನಾಮಕವಾದುದು ; ತದಂತೇ—ಪರಾಂತ್ಯದಲ್ಲಿ, ಪ್ರಾಕ್ — ಮೊದಲೇ, ಜ್ಞಾತ ಪರಮಾತ್ಮನಾಂ—ಬ್ರಹ್ಮ ದರ್ಶನವನ್ನು ಪಡೆದ (ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿದ), ಸರ್ವೇಷಾಂ — ಎಲ್ಲರಿಗೂ, ತೇನೈವ ಬ್ರಹ್ಮಣಾ ಸಾಕಂ—ಆ ಬ್ರಹ್ಮನಿಂದ ಕೂಡಿಯೇ (ಬ್ರಹ್ಮನೊಂದಿಗೇ), ಮಹಾಮೋಕ್ಷಃ — ಪ್ರಧಾನ ಮೋಕ್ಷವು (ಮುಖ್ಯ ಮುಕ್ತಿಯು), ಭವಿಷ್ಯತಿ— ಉಂಟಾಗುತ್ತದೆ.

**ವೇದಾಂತಜ್ಞಾನತಃ ಸನ್ನ್ಯಜ್ನಿಶ್ಚಿತಾರ್ಥಾ ವಿರಾಗಿಣಃ ।**
**ಯತಯಃ ಶುದ್ಧ ಸತ್ತ್ವಾಸ್ತೇ ಬ್ರಹ್ಮಲೋಕೇ ವಸಂತಿ ಹಿ ॥ ೧೦೮ ॥**
**ಸರ್ವೇ ಪರಾಂತಕಾಲೇ ತು ಪರಾಮೃತಪದೋದಿತಾತ್ ।**
**ನಾರಾಯಣಾನ್ನಿತ್ಯಮುಕ್ತಾತ್ಪರಿಮುಚ್ಯಂತಿ ಸಂಸೃತೇಃ ॥ ೧೦೯ ॥**
**ಲ್ಯಬ್ಲೋಪೇ ಪಂಚಮೀ ಚೇಯಂ ಭವೇಚ್ಛಬ್ದಜ್ಞಸಂವಿದಾ ।**
**ಪರಾಮೃತಂ ಪ್ರಾಪ್ಯ ಮುಕ್ತಾ ಇತ್ಯಪ್ಯರ್ಥಃ ಶ್ರುತೇಸ್ತದಾ ॥೧೧೦॥**

ಹೇಳಲಾದ ಅರ್ಥ ವಿಶೇಷವನ್ನು ಪ್ರತಿಪಾದಿಸುವ, ಶ್ರುತಿಯನ್ನು (ಅರ್ಥತಃ) ಸಂಗ್ರಹಿಸುತ್ತಾರೆ ; 'ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ಸನ್ನ್ಯಾಸಯೋಗಾದ್ಯತಯಃ ಶುದ್ಧಸತ್ವಾಃ । ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ಪರಿಮುಚ್ಯಂತಿ ಸರ್ವೇ' ಎಂಬುದೇ ಆ ಶ್ರುತಿಯು :—

---

ಅರ್ಧವು, 'ಪರಾರ್ಧ'ವೆಂದು ಶಬ್ದಕುಶಲರು ಹೇಳುವರು ; ಬ್ರಹ್ಮದೇವನ ಶತವರ್ಷಾವಧಿಕಾಲವು ಪರನಾಮಕವಾದುದು ; ಪರನಾಮಕ ಕಾಲವು ಮುಗಿಯುತ್ತಿರಲು, ಪರಮಾತ್ಮನ ಸಾಕ್ಷಾತ್ಕಾರವನ್ನು ಮೊದಲೇ ಹೊಂದಿರುವ ಸರ್ವರಿಗೂ, ಬ್ರಹ್ಮನೊಂದಿಗೆ ಮಹಾ ಮೋಕ್ಷವು (ಮುಖ್ಯಮುಕ್ತಿಯು) ಲಭಿಸುತ್ತದೆ (೧೦೬—೧೦೭). ಬ್ರಹ್ಮಸೂತ್ರ ಜ್ಞಾನದಿಂದ, ವೇದಾರ್ಥ ನಿಶ್ಚಯುವನ್ನು ಹೊಂದಿ, ವಿರಕ್ತರಾದ ಸಂನ್ಯಾಸಿಗಳೂ, ಮಹಾ ವಿರಕ್ತರಾದ ಶುದ್ಧ ಸ್ವರೂಪದ

ವೇದಾಂತ ಜ್ಞಾನತಃ–ವೇದಾಂತ ಜ್ಞಾನದಿಂದ (ಬ್ರಹ್ಮಸೂತ್ರಗಳ ಜ್ಞಾನದಿಂದ), ಸುನಿಶ್ಚಿತಾರ್ಥಾಃ – ದೃಢವಾಗಿ ನಿಶ್ಚಯಿಸಲಾದ ವೇದಾರ್ಥವುಳ್ಳವರೂ, ವಿರಾಗಿಣಃ – ವಿರಕ್ತರೂ, (ಆದ) ಯತಯಃ–ಸನ್ಯಾಸಿಗಳು (ಮಹಾವಿರಕ್ತರಾದವರು), ಶುದ್ಧ ಸತ್ವಾಃ–ಶುದ್ಧ ಸ್ವಭಾವದ (ಸ್ವರೂಪದ) ಮುಕ್ತಿಯೋಗ್ಯ ಜೀವರು, ತೇ–ಎಲ್ಲರೂ, ಬ್ರಹ್ಮಲೋಕೇ–ಬ್ರಹ್ಮದೇವನ (ಸತ್ಯ) ಲೋಕದಲ್ಲಿ, ವಸಂತಿ ಹಿ–ವಾಸಮಾಡಿಕೊಂಡಿರುವರಷ್ಟೆ; ಸರ್ವೇ–ಆ ಎಲ್ಲರೂ, ಪರಾಂತಕಾಲೇ ತು–ಬ್ರಹ್ಮದೇವ ಪರನಾಮಕ (ಆತನ ೧೦೦ ವರ್ಷಗಳ) ಕಾಲವು ಮುಗಿಯುತ್ತಿರಲು, (ಆ ವರೆಗೆ ಅಲ್ಲಿದ್ದು), ಪರಾಮೃತ ಪದೋದಿತಾತ್–ಪರಾಮೃತ ನಾಮಕನಾದ, ನಿತ್ಯಮುಕ್ತಾತ್ – ನಿತ್ಯ ಮುಕ್ತನಾದ, ನಾರಾಯಣಾತ್ – ನಾರಾಯಣನಿಂದ, ಸಂಸೃತೇಃ–ಸಂಸಾರ ಬಂಧದಿಂದ (ಪ್ರಾಕೃತ ಬಂಧದಿಂದ), ಮುಚ್ಯಂತಿ–ಬಿಡುಗಡೆಯನ್ನು ಹೊಂದುತ್ತಾರೆ (ಮುಕ್ತರಾಗುತ್ತಾರೆ); ಪರಾಮೃತಂ–ಪರಾಮೃತನನ್ನು, ಪ್ರಾಪ್ಯ – ಹೊಂದಿ, ಮುಕ್ತಾಃ – ಮುಕ್ತರಾದವರು, ಇತ್ಯಪಿ ಅರ್ಥಃ–ಹೀಗೆಂಬ ಅರ್ಥವೇ, ತದಾ–ಆಗ (ಪಂಚಮೀ ವಿಭಕ್ತಿ ಪ್ರಯೋಗ ವಿಶೇಷವನ್ನು ತಿಳಿದಾಗ), ಶ್ರುತೇಃ–ಉಕ್ತ ಶ್ರುತಿಗೆ (ಲಭಿಸುತ್ತದೆ); ಶಬ್ದಜ್ಞಸಂವಿದಾ–ವ್ಯಾಕರಣಜ್ಞರ ಜ್ಞಾನದಿಂದ, ಇಯಂ – 'ಪರಾಮೃತಾತ್' ಎಂಬ ಶಬ್ದಪ್ರಯೋಗವು, ಲ್ಯಬ್ಲೋಪೇ ಪಂಚಮೀ ಚ–ಲ್ಯಪ್ ಪ್ರತ್ಯಯ ಲೋಪವುಳ್ಳ ಪಂಚಮೀ ವಿಭಕ್ತಿಯು, ಭವೇತ್–ಆಗುತ್ತದೆ (ಆದ್ದರಿಂದ ಉಕ್ತಾರ್ಥವು ಸಿದ್ಧವಾಗುತ್ತದೆ).

**ಅತಃ ಪರಮಮೋಕ್ಷೋಽಯಂ ನಾನ್ಯೋಽಸ್ತ್ಯಾವಸ್ತಿ ಜಾನತಾಂ ।**
**ಇತ್ಯಾಹ ವೈದಿಕೀ ವಾಣೀ ವಿಶದಾ ಸರ್ವಸಂಮತಾ ॥ ೧೧೧ ॥**

---

ಜೀವರೂ (ಮುಕ್ತಿ ಯೋಗ್ಯರೂ) ಆದ ಜೀವರೆಲ್ಲರೂ ಜೀವನ್ಮುಕ್ತ್ಯವಸ್ಥೆಯಲ್ಲಿ ಬ್ರಹ್ಮಲೋಕದಲ್ಲಿರುವರಷ್ಟೆ; ಆ ಎಲ್ಲರೂ, ಪರಾಂತಕಾಲದಲ್ಲಿ, ಪರಾಮೃತ ನಾಮಕನೂ ನಿತ್ಯಮುಕ್ತನೂ ಆದ ನಾರಾಯಣನಿಂದ ಮುಕ್ತಿಯನ್ನು ಹೊಂದುತ್ತಾರೆ; ಸಂಸಾರಬಂಧದಿಂದ ಪೂರ್ಣಮುಕ್ತರಾಗಿ, ಪ್ರಾಕೃತಸಂಬಂಧರಹಿತರಾಗುತ್ತಾರೆ; ಲ್ಯಪ್‌ಲೋಪೇ ಪಂಚಮೀ ವಿಭಕ್ತಿಯೆಂಬ ವ್ಯಾಕರಣಜ್ಞರ ಜ್ಞಾನದಿಂದ ಪರಾಮೃತಾತ್, ಪರಾಮೃತವನ್ನು ಹೊಂದಿ ಮುಕ್ತರೆಂಬ ಅರ್ಥವು ಸಿದ್ಧವಾಗುತ್ತದೆ (೧೦೮–೧೧೦). 'ವೇದಾಂತ ವಿಜ್ಞಾನ–' ಎಂಬ ವೇದವಾಣಿಯು,

ಅತಃ—ಆದ್ದರಿಂದ (ವೇದಾಂತ ವಿಜ್ಞಾನ ಸುನಿಶ್ಚಿತಾರ್ಥವುಳ್ಳವರು ಹೊಂದಲರ್ಹವಾದ್ದರಿಂದ), ಅಯಂ – ಪರಾಂತಕಾಲದ ಇದು (ಮೋಕ್ಷವು), ಪರಮಮೋಕ್ಷಃ—ಪ್ರಧಾನ ಮೋಕ್ಷವು; ಜಾನತಾಂ ಅನ್ಯಃ ನ ಅಸ್ತಿ—ಜ್ಞಾನಿಗಳಿಗೆ ಬ್ರಹ್ಮಪ್ರಲಯ ಕಾಲದಿಂದ ಅನ್ಯಕಾಲೀನವಾದ ಮೋಕ್ಷವು ಇರುವುದಿಲ್ಲ; ಇತಿ—ಎಂದು ವೈದಿಕೀ ವಾಣೀ—'ವೇದಾಂತ ವಿಜ್ಞಾನ....' ಎಂಬ ವೇದ ವಾಣಿಯು, ವಿಶದಾ—ಸ್ಪಷ್ಟವಾದುದೇ, ಆಹ – ಹೇಳಿರುತ್ತದೆ; ಸರ್ವಸಂಮತಾ – ಸರ್ವರಿಗೆ ಒಪ್ಪಿಗೆಯಾದುದನ್ನೇ (ಹೇಳಿದೆ).

**ಅತೋ ವಿಮುಕ್ತಿಕಾಲೋಽಯಂ ಶ್ರೌತತ್ವಾನ್ನಾಪರೋ ಶ್ರುತೇಃ ।**
**ಪರಾಂತಕಾಲಮೇವೇಯಂ ಮುಕ್ತಿಕಾಲಂ ಯತೋಽಬ್ರವೀತ್ ।**
**ಪರಾಂತಕಾಲಃ ಸ ಕಿಲ ಮಹತ್ತತ್ವಲಯೋ ಯದಾ ॥ ೧೧೨ ॥**

ಅತಃ – ಈ ಕಾರಣದಿಂದ, ಅಯಂ – ಇದೇ (ಬ್ರಹ್ಮಪ್ರಲಯ ಕಾಲವೇ), ವಿಮುಕ್ತಿಕಾಲಃ – ವಿಶೇಷವಾದ (ಆತ್ಯಂತಿಕ) ಮೋಕ್ಷ ಕಾಲವು, ಶ್ರೌತತ್ವಾತ್—ಶ್ರುತಿಯು ಹಾಗೆ ಹೇಳುವುದರಿಂದ, ಅಪರಃ ನ—ಬೇರೆಯಿಲ್ಲ; ಯತಃ—ಯಾವ ಕಾರಣದಿಂದ, ಇಯಂ—ಈ ಶ್ರುತಿಯು, ಪರಾಂತಕಾಲಂ—ಪರಾಂತ ಕಾಲವನ್ನೇ, ಮುಕ್ತಿಕಾಲಂ-ಮುಕ್ತಿಕಾಲವನ್ನಾಗಿ, ಅಬ್ರವೀತ್—ಹೇಳಿರುವುದೋ, (ಆದ್ದರಿಂದ), ಶ್ರುತೇಃ – ಶ್ರುತಿಸಮ್ಮತವಾದ್ದರಿಂದ, ಪರಾಂತಕಾಲ—ಪರಾಂತಕಾಲವು, ಯದಾ—ಯಾವ ಕಾಲದಲ್ಲಿ, ಮಹತ್ತತ್ವಲಯಃ—ಮಹತ್ತತ್ವದ ಲಯವೋ, ಸಃ ಕಿಲ—ಅದೇ ಎಂಬುದು ಪ್ರಸಿದ್ಧವು; (ಬ್ರಹ್ಮದೇವನ ದೇಹವು ಮಹತ್ತತ್ವದಿಂದಾದುದು—ಅದರ ಲಯವೇ ಬ್ರಹ್ಮ ಲಯವು – ಆಗ ಅದರ ವಿಕಾರತತ್ತ್ವಗಳಾದ ಅಹಂಕಾರಾದಿ ತತ್ತ್ವಗಳು ಮತ್ತು ತನ್ನಿರ್ಮಿತ ಬ್ರಹ್ಮಾಂಡವೂ ಲಯಗೊಳ್ಳುತ್ತದೆ).

---

ಪರಾಂತಕಾಲದ ಮೋಕ್ಷವನ್ನೇ ಮಹಾಮೋಕ್ಷವೆಂದು (ಮುಖ್ಯಮೋಕ್ಷವೆಂದು) ಹೇಳುತ್ತದೆ; ಜ್ಞಾನಿಗಳಿಗೆ ಅನ್ಯಕಾಲೀನವಾದ ಅವಾಂತರಮೋಕ್ಷವೆಂಬುದು, ಬೇರಾವುದೂ ಇರುವುದಿಲ್ಲ; ಈ ಸ್ಪಷ್ಟವಾದ ವೇದೋಕ್ತಿಯು ಸರ್ವಸಮ್ಮತವೂ ಆಗಿದೆ (ಆಗಲರ್ಹವೂ ಆಗಿದೆ) (೧೧೧). ಆದ್ದರಿಂದ ಇದೇ ವಿಮುಕ್ತಿಕಾಲವು; ಶ್ರುತಿಯೇ ಪರಾಂತಕಾಲವನ್ನೇ ಮುಕ್ತಿಕಾಲವನ್ನಾಗಿ ಹೇಳುತ್ತದೆಯಾದ್ದರಿಂದ,

**ಉದರೇ ವಾಸುದೇವಸ್ಯ ಜೀವಾನ್ ಸರ್ವಾನ್ ವಿಧಿಸ್ತದಾ ।**
**ನಿವೇಶ್ಯ ಸರ್ವಮುಕ್ತ್ಯರ್ಹಾನ್ ಜೀವಾನಾದಾಯ ಸತ್ವರಃ ॥ ೧೧೩ ॥**

**ವೈಕುಂಠಾಂತಃಪುರಸ್ಥೇ ತು ವಿರಜಾಖ್ಯೇ ಸರಿದ್ವರೇ ।**
**ನಿತ್ಯೇ ಚಿದ್ರೂಪಸಲಿಲೇ ರಜಃಶಬ್ದೋಪಲಕ್ಷಿತೈಃ ॥ ೧೧೪ ॥**

**ತ್ರಿಗುಣೈರ್ವರ್ಜಿತೇ ತೇಷಾಂ ಭರ್ಜನೇಽತಿಪಟೀಯಸಿ ।**
**ಸ್ನಾತ್ವಾ ಭೂತೇಂದ್ರಿಯಮನೋಮಾತ್ರಂ ತ್ರಿಗುಣರೂಪಿಣಂ ॥೧೧೫॥**

**ಲಿಂಗದೇಹಂ ವಿನಿರ್ಭಿದ್ಯ ಪ್ರಾಜ್ಞಮುಕ್ತೈಶ್ಚ ತ್ರಿಧಾಮುಗೈಃ ।**
**ಸಹ ಮುಕ್ತೈಶ್ಚ ಸಹಿತೋ ವಾಸುದೇವೋದರಂ ವಿಶೇತ್ ॥ ೧೧೬ ॥**

ಯೋಗ್ಯಾಯೋಗ್ಯ ಜೀವರೊಡನೆ, ಮಹತ್ತತ್ವಾತ್ಮನಾ (ಆ ರೂಪದಿಂದ) ಭಗವಂತನಿಗೆ ಮಹಾಪ್ರಲಯ ಕಾಲದಲ್ಲಿ ಗ್ರಾಸಭೂತನಾದ ಬ್ರಹ್ಮನ ಲಿಂಗ ಭಂಗವನ್ನು, ತನ್ನೊಡನೆ ಮುಕ್ತರಾಗುವ ಸುಜೀವರ ಲಿಂಗ ದೇಹ ಭಂಗ ಪ್ರಕಾರವನ್ನು ವಿಸ್ತಾರವಾಗಿ ಪ್ರದರ್ಶಿಸುತ್ತಾರೆ :—

ವಾಸುದೇವಸ್ಯ – ಮಹತ್ತತ್ವವನ್ನು ಗ್ರಾಸಮಾಡುವ ವಾಸುದೇವನ, ಉದರೇ–ಉದರದಲ್ಲಿ, ಜೀವಾನ್ ಸರ್ವಾನ್–ತ್ರಿವಿಧ ಜೀವರೆಲ್ಲರನ್ನೂ, ತದಾ–ಆಗ, ವಿಧಿಃ–ಬ್ರಹ್ಮದೇವನು, ನಿವೇಶ್ಯ–ಪ್ರವೇಶಗೊಳಿಸಿ, ಸತ್ವರಃ–ಶೀಘ್ರವಾಗಿ,

---

ಅದೇ ಕಾಲವೇ ಮುಕ್ತಿಕಾಲವೆಂಬುದು ಶ್ರುತಿಗೆ ಅಭಿಮತವಾದುದು ; ಪರಾಂತ ಕಾಲದಲ್ಲಿಯೇ ಮಹತ್ತತ್ವದ ಲಯವೂ ಸಂಭವಿಸುತ್ತದೆ ; (೧೧೨). ಪರಾಂತ ಕಾಲದಲ್ಲಿ ಸಂಭವಿಸುವ ಮಹತ್ತತ್ವ ಲಯಕಾಲದಲ್ಲಿ, ತ್ರಿವಿಧರಾದ ಸರ್ವಜೀವರನ್ನು ತನ್ನೊಳಗಿಟ್ಟುಕೊಂಡು, ಪರಮಾತ್ಮನ ಗ್ರಾಸ (ತುತ್ತು ಆಹಾರ) ವಾಗುತ್ತಾನೆ ; ನಂತರ ಶೀಘ್ರವಾಗಿ, ಮುಕ್ತಿಯೋಗ್ಯರಾಗಿ ಸಾಧನ ಪರಿಪೂರ್ತಿಯಾಗಿ, ತನ್ನೊಂದಿಗೆ ಮುಕ್ತರಾಗಲು ಅರ್ಹರಾದ ಜೀವರನ್ನು ಕರೆದುಕೊಂಡು, ಅವರ ಸಹಿತವಾಗಿ ಲಕ್ಷ್ಮ್ಯಾತ್ಮಕವಾದ ವಿರಜಾನದಿಯಲ್ಲಿ ಸ್ನಾನಮಾಡುತ್ತಾನೆ ; ವೈಕುಂಠನಾಮಕ ವೈಕುಂಠ ಲೋಕದಲ್ಲಿರುವ ಶ್ರೀಹರಿಯ ನಗರದ (ಮುಕ್ತವಾಸ ಸ್ಥಾನದ) ಸುತ್ತಲಿರುವುದು ವಿರಜಾನದಿಯು; ಮಹಾ ಪ್ರಲಯಕಾಲದಲ್ಲಿ ಪ್ರಕೃತಿಯ

ಸರ್ವಮುಕ್ತ್ಯರ್ಹ ಜೀವಾನ್ — ಸಕಲ ಮುಕ್ತಿಯೋಗ್ಯ ಜೀವರನ್ನು, ಆದಾಯ— ಕರೆದುಕೊಂಡು, ವೈಕುಂಠಾಂತಃಪುರಸ್ಥೇ ತು—('ಪ್ರಧಾನ ಪರಮವ್ಯೋಮ್ನೋ- ರಂತರಾ ವಿರಜಾನದೀ' ಎಂಬ ಪುರಾಣ ವಾಕ್ಯದಂತೆ), ಪರಮವ್ಯೋಮವೆಂಬ ಮುಕ್ತವಾಸಸ್ಥಾನವಾದ ವೈಕುಂಠ ನಗರಿಯಲ್ಲಿರುವ (ಅಮುಕ್ತ ಪ್ರವೇಶವನ್ನು ಪ್ರತಿಬಂಧಿಸುವಂತಿರುವ, ಮುಕ್ತ ನಗರಿಯ ನಾಲ್ಕು ದಿಕ್ಕುಗಳಲ್ಲಿ ಸುತ್ತುಗಟ್ಟಿರುವ ಮುಕ್ತ ನಗರಿಯ ನಾಲ್ಕು ಮಹಾದ್ವಾರ ಪರ್ಯಂತ ವಿಸ್ತರಿಸಿರುವ ಪ್ರಕೃತಿಯ ಮತ್ತು ಅವ್ಯಾಕೃತಾಕಾಶಗಳ ಮಧ್ಯಪ್ರದೇಶದಲ್ಲಿರುವ), ವಿರಜಾಖ್ಯೇ — ವಿರಜಾ ನಾಮಕವಾದ, ಸರಿದ್ವರೇ—ಶ್ರೇಷ್ಠ ನದಿಯಲ್ಲಿ, ನಿತ್ಯೇ—ನಿತ್ಯವಾದ, ಚಿದ್ರೂಪ- ಸಲಿಲೇ — ಲಕ್ಷ್ಮ್ಯಾತ್ಮಕ (ಲಕ್ಷ್ಮೀ ಸ್ವರೂಪದ) ಜಲದಲ್ಲಿ, ರಜಃಶಬ್ದೋಪಲಕ್ಷಿತೈಃ— 'ರಜಃ' ಎಂಬ ಪದದಿಂದ ತಿಳಿಸಲ್ಪಡುವ (ಉಪಲಕ್ಷಿತವಾದ), (ಸೂಕ್ಷ್ಮ ಪಂಚ ಭೂತಗಳು, ದಶೇಂದ್ರಿಯಗಳು ಮತ್ತು ಮನಸ್ಸುಗಳೆಂಬ (೧೬) ಷೋಡಶ ಕಲಾತ್ಮಕವಾದ), ತ್ರಿಗುಣೈಃ—ತ್ರಿಗುಣಗಳಿಂದ, ವರ್ಜಿತೇ—(ಇಲ್ಲದ)ರಹಿತವಾದ, ತೇಷಾಂ — ತ್ರಿಗುಣಗಳ, ಭರ್ಜನೇ — ನಿರ್ವೀರ್ಯಗೊಳಿಸುವ (ನಾಶಮಾಡುವ) ಕಾರ್ಯದಲ್ಲಿ, ಅತಿಪಟೀಯಸಿ—ಅತಿಶಯದಕ್ಷವಾದ (ಅತ್ಯಧಿಕ ಸಾಮರ್ಥ್ಯವುಳ್ಳ) ಜಲದಲ್ಲಿ, ಸ್ನಾತ್ವಾ—ಸ್ನಾನಮಾಡಿ, ಭೂತೇಂದ್ರಿಯಮನೋಮಾತ್ರಂ — ಕೇವಲ ಷೋಡಶ ಕಲಾತ್ಮಕವೂ, ತ್ರಿಗುಣ ರೂಪಿಣಂ — ತ್ರಿಗುಣ (ಸತ್ವ, ರಜ, ತಮೋ) ರೂಪದ, (ಅದರಿಂದ ಆದ) (ಉಪಾದಾನವಾಗಿವುಳ್ಳ), ಲಿಂಗದೇಹಂ—ಲಿಂಗದೇಹ ವನ್ನು, ವಿನಿರ್ಭಿದ್ಯ — ಕಳಚಿ ಹಾಕಿ (ಬಿಟ್ಟು ಹೊರಬಂದು), ಪ್ರಾಙ್ಮುಕ್ತೈಃ— ಹಿಂದೆ ಮುಕ್ತರಾದ, ತ್ರಿಧಾಮಗೈಃ—ವೈಕುಂಠ, ಶ್ವೇತದ್ವೀಪ, ಅನಂತಾಸನಗಳಲ್ಲಿ

---

ಮತ್ತು ಅವ್ಯಾಕೃತಾಕಾಶದ ಅಂತರದಲ್ಲಿ (ಮಧ್ಯದಲ್ಲಿ), ಪರಮವ್ಯೋಮನಾಮಕ ಮುಕ್ತವಾಸಸ್ಥಾನದ ಸುತ್ತಲೂ ಇರುತ್ತದೆ; ಅದರಲ್ಲಿ ರಜಶಬ್ದದಿಂದ ಹೇಳಲಾಗುವ ತ್ರಿಗುಣ ಸಂಬಂಧವಿಲ್ಲ; ತ್ರಿಗುಣಗಳನ್ನು ನಾಶಮಾಡುವ (ನಿರ್ವೀರ್ಯಗೊಳಿಸುವ) ಕಾರ್ಯದಲ್ಲಿ ಅಧಿಕ ಸಾಮರ್ಥ್ಯವುಳ್ಳ ಜಲದಲ್ಲಿ ಸ್ನಾನಮಾಡಿ, ಸೂಕ್ಷ್ಮ ಪಂಚ ಭೂತಗಳು, ದಶೇಂದ್ರಿಯಗಳು ಮತ್ತು ಮನಸ್ಸುಗಳೆಂಬ ಷೋಡಶ ಕಲೆಗಳುಳ್ಳ, ಲಿಂಗದೇಹವನ್ನು ಕಳಚಿಹಾಕಿ (ತೊರೆದು) ಹೊರಗೆಬಂದು, ಹಿಂದೆ ಮುಕ್ತರಾದ ವೈಕುಂಠ, ಶ್ವೇತದ್ವೀಪ, ಅನಂತಾಸನಗಳಲ್ಲಿದ್ದ ಮುಕ್ತಜೀವದಿಂದಲೂ, ತನ್ನೊಡನೆ ಮುಕ್ತರಾಗುವ ಜೀವರಿಂದಲೂ ಸಹಿತನಾಗಿ ವಾಸುದೇವನ ಉದರವನ್ನು ಪ್ರವೇಶ

ರುವವರಿಂದಲೂ, ಸಹಮುಕ್ತೈಶ್ಚ ಸಹಿತಃ – ತನ್ನೊಂದಿಗೆ ಮುಕ್ತರಾದವರಿಂದ ಕೂಡಿಕೊಂಡು, ವಾಸುದೇವೋದರಂ – ವಾಸುದೇವನ ಉದರವನ್ನು, ವಿಶೇತ್– ಪ್ರವೇಶಿಸುತ್ತಾನೆ.[1]

**ಏವಂ ಪರಾಂತಕಾಲೇಽಸ್ಮಿನ್ ಮುಚ್ಯಂತೇ ಬ್ರಹ್ಮಣಾ ಸಹ ।**
**ಇತ್ಯಾಹೋಪನಿಷತ್ಸೈಷಾ ತತ್ತತ್ತ್ವಮಿದಮೇವ ಹಿ ॥ ೧೧೭ ॥**

ಏವಂ–ಹೀಗೆ, ಪರಾಂತಕಾಲೇ – ಪರನಾಮಕ ಬ್ರಹ್ಮನ ಕಾಲವು ಮುಗಿಯಲು, ಅಸ್ಮಿನ್–ಆ ಕಾಲದಲ್ಲಿ, ಬ್ರಹ್ಮಣಾ ಸಹ–ಬ್ರಹ್ಮನೊಡನೆ, ಮುಚ್ಯಂತೇ– ಮುಕ್ತರಾಗುತ್ತಾರೆ; ಇತಿ–ಎಂದು, ಸಾ ಏಷಾ ಉಪನಿಷತ್ – ಆ ('ವೇದಾಂತ ವಿಜ್ಞಾನ'ವೆಂಬ) ಉಪನಿಷತ್ತು, ಆಹ–ಹೇಳಿರುತ್ತದೆ; ತತ್–ಆದ್ದರಿಂದ (ಸ್ಪಷ್ಟವಾಗಿ ಶ್ರುತಿಯಲ್ಲಿ ಉಕ್ತವಾದ್ದರಿಂದ), ಇದಂ ಏವ–ಇದೇ (ಹೀಗೆ ಮುಕ್ತರಾಗುವರೆಂಬುದೇ), ತತ್ತ್ವಂ ಹಿ–ಸತ್ಯವೆಂಬುದು ಸಿದ್ಧ.

**ತತಶ್ಚ ಚಿದ್ರೂಪಸಲಿಲಸಂಪ್ಲವೇ ಸತಿ ಕೇಶವಃ ।**
**ವಟಪತ್ರಪುಟೇ ಶೇತೇ ಲಕ್ಷ್ಮ್ಯಾ ಸಹ ಕಿಲ ಪ್ರಭುಃ ॥ ೧೧೮ ॥**

ತತಃ – ಅನಂತರ (ಬ್ರಹ್ಮಲಿಂಗದೇಹ ನಾಶಾನಂತರ), ಚಿದ್ರೂಪಸಲಿಲ ಸಂಪ್ಲವೇ ಸತಿ–ಮಹಾಲಕ್ಷ್ಮ್ಯಾತ್ಮಕ ಜಲಸಮುದಾಯವಿರುತ್ತಿರಲು(ಪ್ರಲಯೋದಕ

---

ಮಾಡುತ್ತಾನೆ (೧೧೩–೧೧೬). ಮುಕ್ತಿಗೆ ಅರ್ಹರಾದ ಜೀವರು, ಹೀಗೆ ಈ ಪರಾಂತಕಾಲದಲ್ಲಿ, ಬ್ರಹ್ಮನೊಂದಿಗೆ ಮೋಕ್ಷವನ್ನು ಹೊಂದುವರೆಂದು, 'ವೇದಾಂತ ವಿಜ್ಞಾನ–' ಎಂಬ ಇದೇ ಉಪನಿಷದ್ವಾಕ್ಯವು ಹೇಳಿರುವುದರಿಂದ, ಇದೇ ಸತ್ಯವೆಂಬುದೇ ನಿಶ್ಚಯವು (೧೧೭). ಬ್ರಹ್ಮನ ಲಿಂಗದೇಹ ನಾಶಾನಂತರ, ಕಲ್ಪಾಂತ್ಯದಲ್ಲಿ (ಬ್ರಹ್ಮಕಲ್ಪವು ಮುಗಿಯುತ್ತಿರಲು), ಪ್ರಲಯ ಜಲವು ತುಂಬಿಕೊಳ್ಳುತ್ತಿರಲಾಗಿ, ಕೇಶವನು (ಬ್ರಹ್ಮನು) ವಟಪತ್ರದಲ್ಲಿ ಲಕ್ಷ್ಮೀಸಮೇತನಾಗಿ ಶಯನಮಾಡುತ್ತಾನೆ;

---

1 ತನ್ನೊಂದಿಗೆ ಮುಕ್ತರಾದ ಅನ್ಯಸುಜೀವರೊಂದಿಗೆ ಬ್ರಹ್ಮದೇವನು ಲಿಂಗಭಂಗಾನಂತರದಲ್ಲಿ ಶ್ರೀ ವಾಸುದೇವನ ಉದರವನ್ನು ಪ್ರವೇಶಿಸುವನೆಂಬ ಪ್ರಮೇಯವು ಬ್ರಹ್ಮ ಸೂತ್ರ ಭಾಷ್ಯಾದಿಗಳಲ್ಲಿ ನಿರೂಪಿತವಾಗಿ ಪ್ರಸಿದ್ಧವಾಗಿರುತ್ತದೆ.

ದಲ್ಲಿ), ಕೇಶವಃ–ಭಗವಂತನು, ವಟಪತ್ರಪುಟೇ–ವಟಪತ್ರದ ಮೇಲೆ, ಲಕ್ಷ್ಮ್ಯಾ–ಸಹ–ಲಕ್ಷ್ಮೀ ಸಹಿತನಾಗಿ, ಪ್ರಭುಃ–ಮಹಾಸ್ವಾಮಿಯು, ಶೇತೇ ಕಿಲ–ಮಲಗುತ್ತಾನಷ್ಟೆ.

**ಅತಃ ಪರಮಮೋಕ್ಷಸ್ಯ ಕಾಲೋಽಯಂ ನಾತ್ರ ಸಂಶಯಃ ।**
**ತಸ್ಮಾದ್ಬ್ರಹ್ಮಲಯಃ ಸೋಽಯಂ ಮಹಾಪ್ರಲಯ ಏವ ಹಿ ॥ ೧೧೯ ॥**

ಅತಃ – ಆದ್ದರಿಂದ, ಅಯಂ – ಪರಾಂತವೆಂಬುದು, ಪರಮಮೋಕ್ಷಸ್ಯ–ಮಹಾಮೋಕ್ಷದ (ಅವಾಂತರ ಮೋಕ್ಷವಲ್ಲದ), ಕಾಲಃ–ಕಾಲವು ; ಅತ್ರ–ಈ ವಿಷಯದಲ್ಲಿ ಸಂಶಯಃ ನ–ಸಂಶಯವಿಲ್ಲ ; ತಸ್ಮಾತ್–ಆದ್ದರಿಂದ, ಸಃ ಅಯಂ–ಉಕ್ತವಾದ ಈ ಬ್ರಹ್ಮಲಯಃ–ಬ್ರಹ್ಮಲಯವೇ, ಮಹಾಪ್ರಲಯಃ ಏವ–ಮಹಾಪ್ರಲಯವೆಂಬುದು, ಹಿ–ಎಂದು ಪ್ರಸಿದ್ಧವಾಗಿದೆ.

**ಸೋಽಯಂ ಲಯಶ್ಚ ಕಲ್ಪಾಂತೇ ಸಂಕರ್ಷಣಮುಖಾಗ್ನಿನಾ ।**
**ಪ್ರಲಯಾರ್ಕೇಣ ಚ ಜಗದ್ದಾಹೇ ಸಾಂವರ್ತಕೋದಕೈಃ ।**
**ವಿಲೋಡಿತಂ ಚ ತದ್ಭಸ್ಮ ಸರ್ವಂ ಜಲಮಯಂ ಭವೇತ್ ॥ ೧೨೦ ॥**

ಸೂಕ್ಷ್ಮಲಿಂಗದೇಹಲಯಪ್ರಕಾರವನ್ನು ಹೇಳಿ, ಸ್ಥೂಲ ಜಗತ್ತಿನ ಲಯಪ್ರಕಾರವನ್ನು ಹೇಳುತ್ತಾರೆ :—

ಸೋಽಯಂ–ಲಯಶ್ಚ–(ನಿರೂಪಿಸಲಾಗುವ, ಸ್ಥೂಲಜಗಲ್ಲಯವು, ಲಿಂಗದೇಹ ಲಯಕ್ಕಿಂತ ಮೊದಲೇ ಸಂಭವಿಸುವ) ಜಗಲ್ಲಯವಾದರೂ, ಕಲ್ಪಾಂತೇ–ಬ್ರಹ್ಮಕಲ್ಪದ ಅಂತ್ಯಭಾಗದ ಕಾಲದಲ್ಲಿ, ಸಂಕರ್ಷಣಮುಖಾಗ್ನಿನಾ–ಶೇಷದೇವನ

---

ಈ ಮಹಾ ಪ್ರಭುವಿನ ಲೀಲೆಯು ಅತಿವಿಚಿತ್ರವು ! (೧೧೮). ಆದ್ದರಿಂದ, ಇದೇ ಪರಮಮೋಕ್ಷ ಕಾಲವು–ಸಂಶಯವಿಲ್ಲ ; ಉಕ್ತವಾದ ಬ್ರಹ್ಮಲಯವೇ ಮಹಾಪ್ರಲಯವು (೧೧೯). ಕಲ್ಪಾಂತ್ಯದ ಈ ಲಯದಲ್ಲಿ, ಶೇಷದೇವನ (ಅಂತರ್ಯಾಮಿ ಸಂಕರ್ಷಣನ) ಮುಖದಿಂದ ಹೊರಟ ಅಗ್ನಿಯು ಮತ್ತು ಪ್ರಲಯಕಾಲ ಸೂರ್ಯನೂ, ಸ್ಥೂಲಜಗತ್ತನ್ನು ದಹಿಸಿ ಭಸ್ಮಗೊಳಿಸುತ್ತಾರೆ; ಸಾಂವರ್ತಕ ಮೇಘಗಳಿಂದ ಸುರಿಯುವ ಜಲಧಾರೆಯು, ವಿಶ್ವವನ್ನು ವ್ಯಾಪಿಸಿ ತುಂಬಿಕೊಳ್ಳುತ್ತದೆ;

(ಅಂತರ್ಯಾಮಿ ಭಗವಾನ್ ಸಂಕರ್ಷಣನ) ಮುಖದಿಂದ ಹೊರಟ ಅಗ್ನಿಯಿಂದ, ಪ್ರಲಯಾರ್ಕೇಣ ಚ–ಪ್ರಲಯಕಾಲದ ಸೂರ್ಯನಿಂದಲೂ, ಜಗದ್ದಾಹೇ–ಜಗತ್ತು ದಹಿಸಲ್ಪಡುತ್ತಿರಲು, ಸಾಂವರ್ತಕೋದಕೈಃ – ಪ್ರಲಯಕಾಲದ (ಸಾಂವರ್ತಕ ಮೇಘಗಳಿಂದ ನಿರಂತರವಾಗಿ ಸುರಿಯುವ) ಜಲಧಾರೆಗಳಿಂದ, ವಿಲೋಡಿತಂ ಚ–ಮಿಶ್ರಗೊಳಿಸಲ್ಪಡುವ, ತದ್ಭಸ್ಮ–ಆ ಭಸ್ಮವು (ದಹಿಸಲ್ಪಟ್ಟ ಜಗತ್ತಿನ ಬೂದಿಯು), ಸರ್ವಂ–ಎಲ್ಲವೂ, ಜಲಮಯಂ–ಪ್ರಲಯಜಲಮಯ ವಾಗಿ (ಜಲರೂಪವೇ), ಭವೇತ್–ಆಗುತ್ತದೆ.

**ಜಲಂ ಚ ತೇಜಸಾ ಶುಷ್ಯೇತ್ತಚ್ಚ ವಾಯೌ ಪ್ರಶಾಮ್ಯತಿ ।**
**ವಾಯುಶ್ಚ ಗಗನೇ ಲೀನೋ ಲಯಸ್ತಸ್ಯಾಪ್ಯಹಂಕೃತೌ ।**
**ಅಹಂಕಾರಸ್ಯ ಮಹತಿ ತಸ್ಯ ಸ್ಯಾತ್ ಪ್ರಕೃತೌ ಲಯಃ ॥ ೧೨೧ ॥**

**ಪ್ರಕೃತಿಶ್ಚ ಸ್ವಭಾವಸ್ಥಾ ಸ್ವಭಾವಂ ಪ್ರಕೃತಿಂ ವಿದುಃ ।**
**ಅತಸ್ತಸ್ಯಾಸ್ತು ನ ಲಯಃ ಸಾ ನಿತ್ಯೈವ ಪರಾತ್ಮವತ್ ॥ ೧೨೨ ॥**

ಜಲಂ – ಜಲವು, ತೇಜಸಾ ಚ – ಬಾಹ್ಯಾವರಣಭೂತವಾದ ತೇಜಸ್ಸಿನಿಂದಲೇ, ಶುಷ್ಯೇತ್–ನಷ್ಟವಾಗುತ್ತದೆ (ಲಯಹೊಂದುತ್ತದೆ; ತಚ್ಚ–ಆ ತೇಜಸ್ಸು, ವಾಯೌ–ವಾಯುವಿನಲ್ಲಿ, ಪ್ರಶಾಮ್ಯತಿ–ಲಯಹೊಂದುತ್ತದೆ ; ವಾಯುಶ್ಚ–ವಾಯುವಾದರೂ, ಗಗನೇ–ಆಕಾಶದಲ್ಲಿ, ಲೀನಃ–ಲಯಗೊಳ್ಳುತ್ತದೆ (ಅಡಗುತ್ತದೆ); ತಸ್ಯಾಪಿ–ಆ ಗಗನದ, ಲಯಃ–ಲಯವು, ಅಹಂಕೃತೌ–ಅಹಂಕಾರದಲ್ಲಿಯೂ, ಅಹಂಕಾರಸ್ಯ–ಅಹಂಕಾರಕ್ಕೆ, ಮಹತಿ–ಮಹತ್ತತ್ವದಲ್ಲಿಯೂ, ತಸ್ಯ–

---

ಭಸ್ಮಗೊಳಿಸಲಾದ ಜಗತ್ತು ಜಲಮಯವಾಗುತ್ತದೆ–ಜಲದಲ್ಲಿ ಸೇರಿಹೋಗುತ್ತದೆ (೧೨೦). ಜಲವು, ಬ್ರಹ್ಮಾಂಡದ ಬಹಿರಾವರಣ ಭೂತ ತೇಜಸ್ಸಿನಲ್ಲಿಯೂ, ತೇಜಸ್ಸು ವಾಯುವಿನಲ್ಲಿಯೂ, ವಾಯುವು ಆಕಾಶದಲ್ಲಿಯೂ, ಲಯಹೊಂದುತ್ತವೆ; ಆಕಾಶವು ಅಹಂಕಾರತತ್ವದಲ್ಲಿಯೂ, ಅದು ಮಹತ್ತತ್ವದಲ್ಲಿಯೂ, ಅದು ಪ್ರಕೃತಿಯಲ್ಲಿಯೂ ಲಯಗೊಳ್ಳುತ್ತವೆ; ಪ್ರಕೃತಿಯು ತನ್ನ ಸಹಜ ಸ್ವರೂಪದಲ್ಲಿಯೇ ಸ್ಥಿತವಾಗುತ್ತದೆ; ಆದ್ದರಿಂದ ಅದಕ್ಕೆ ಸ್ವಭಾವವೆಂದೇ ಹೆಸರು–ಸ್ವಭಾವವೆಂದರೆ ಪ್ರಕೃತಿಯೆಂದು ಜ್ಞಾನಿಗಳು ತಿಳಿಯುತ್ತಾರೆ ; ಈ ಕಾರಣದಿಂದ,

ಆದಕ್ಕೆ, ಪ್ರಕೃತೌ–ಪ್ರಕೃತಿಯಲ್ಲಿಯೂ, ಲಯಃ–ಲಯವೂ, ಸ್ಯಾತ್–ಸಂಭವಿಸುತ್ತದೆ; ಪ್ರಕೃತಿಶ್ಚ–ಪ್ರಕೃತಿಯಾದರೂ, ಸ್ವಭಾವಸ್ಥಾ–(ತನ್ನ) ಸ್ವಭಾವದಲ್ಲಿಯೇ ನಿಲ್ಲುವುದು (ಆಗುತ್ತದೆ); (ಆದ್ದರಿಂದ) ಸ್ವಭಾವಂ–ಸ್ವಭಾವವನ್ನೇ, ಪ್ರಕೃತಿಂ–ಪ್ರಕೃತಿಯೆಂದು; ವಿದುಃ–ಜ್ಞಾನಿಗಳು ತಿಳಿಯುವರು; ಅತಃ–ಈ ಕಾರಣದಿಂದ; ತಸ್ಯಾಃ ತು–ಆ ಪ್ರಕೃತಿಗಾದರೂ, ನ ಲಯಃ–ಲಯವಿಲ್ಲ; ಸಾ–ಅದು, ಪರಾತ್ಮವತ್–ಪರಮಾತ್ಮನಂತೆ, ನಿತ್ಯಾ ಏವ–ನಿತ್ಯವಾದುದೇ ಆಗಿರುವುದು.

**ಇತಿ ಶ್ರುತಿಪುರಾಣಾದೌ ತತ್ರ ತತ್ರ ಪ್ರದೃಶ್ಯತೇ ।**
**ಏವಂ ಚ ಜ್ಞಾನಬಲತಃ ಕಸ್ಯ ನಾಶೋ ಭವೇದ್ವದ ॥ ೧೨೩ ॥**

ಇತಿ–ಈ ಪ್ರಕಾರದಿಂದ ಸ್ಥೂಲಜಗತ್ತಿನ ಲಯವೆಂದು, ಶ್ರುತಿ ಪುರಾಣಾದೌ–ವೇದ ಪುರಾಣಾದಿಗಳಲ್ಲಿ, ತತ್ರ ತತ್ರ–ಅಲ್ಲಲ್ಲಿ (ಲಯವಿಷಯವು ಪ್ರಸಕ್ತವಾದ ಸ್ಥಲದಲ್ಲೆಲ್ಲ), ಪ್ರದೃಶ್ಯತೇ–ಕಂಡುಬರುತ್ತದೆ; ಏವಂ ಚ–ಹೀಗಿರಲು, ಜ್ಞಾನಬಲತಃ–ಜ್ಞಾನದ ಬಲದಿಂದ, ಕಸ್ಯ–ಯಾವುದರ, ನಾಶಃ–ನಾಶವು (ಬಾಧವು), ಭವೇತ್–ಉಂಟಾಗುತ್ತದೆ? ವದ–ಹೇಳು.

**ಜ್ಞಾನೇನೈವ ಚ ನಾಸ್ತಿತ್ವಂ ಕಸ್ಯ ವಿಶ್ವಸ್ಯ ಜಾಯತೇ ।**
**ಪ್ರಲಯೇ ನಾಸ್ತಿತಾಯಾ ತು ಸಾಧ್ವಂಸಾದೇವ ಕೇವಲಂ ॥ ೧೨೪ ॥**

ಯದ್ಯಪಿ ಜ್ಞಾನದಿಂದ ನಾಶವೆಂಬ ಬಾಧವಿಲ್ಲ; ತಥಾಪಿ ನಾಸ್ತಿತ್ವಬೋಧವೆಂಬ (ಅಭಾವ) ಬೋಧವು ಇರುತ್ತದೆ; ಎಂದರೆ, ಅದೂ ಇಲ್ಲವೆನ್ನುತ್ತಾರೆ:—

---

ಪ್ರಕೃತಿಗೆ ಲಯವಿಲ್ಲ—ಅದೂ ಪರಮಾತ್ಮನಂತೆ ನಿತ್ಯವಾದುದೇ ಆಗಿದೆ (೧೨೧–೧೨೨). ಸ್ಥೂಲಜಗನ್ನಾಶ ಪ್ರಕಾರವು ಹೀಗೆ ಶ್ರುತಿಪುರಾಣಾದಿಗಳಲ್ಲಿ ಪ್ರಸಕ್ತಿ ಬಂದಾಗಲೆಲ್ಲ, ಅಲ್ಲಲ್ಲಿ ಹೇಳಿರುವುದು ಕಂಡುಬರುತ್ತದೆ; ಜ್ಞಾನಬಲದಿಂದ ಯಾವ ಜಗತ್ತಿನ ನಾಶವು (ಅಭಾವವು–ಬಾಧವು) ಜ್ಞಾನದಿಂದ ಯಾರಿಗೆ ಸಾಧಿಸುತ್ತದೆ? ನೀನೇ ಹೇಳು (೧೨೩). ಯಾವ ಜಗತ್ತಿನ ಅಭಾವವು (ಬಾಧವು) ಜ್ಞಾನಮಾತ್ರದಿಂದ, ಉಂಟಾಗುತ್ತದೆ? ಪ್ರಲಯದಲ್ಲಿ ಸಂಭವಿಸುವ ಜಗತ್ತಿನ ಅಭಾವವು (ನಾಸ್ತಿತ್ವವು), ವಸ್ತುನಾಶದಿಂದ ಮಾತ್ರವೇ ಸಂಭವಿಸುತ್ತದೆ (ಜ್ಞಾನ

ಜ್ಞಾನೇನ ಏವ – ಜ್ಞಾನದಿಂದಲೇ, ಕಸ್ಯ ವಿಶ್ವಸ್ಯ ನಾಸ್ತಿತ್ವಂಚ – ಯಾವ ಜಗತ್ತಿನ ನಾಸ್ತಿತ್ವ ಜ್ಞಾನವಾದರೂ, ಜಾಯತೇ–ಉಂಟಾಗುತ್ತದೆ ?(ಶಕ್ಯವಿಲ್ಲ) ; ಪ್ರಲಯೇ–ಪ್ರಲಯದಲ್ಲಿ, ಯಾ ನಾಸ್ತಿತಾ ತು–ಯಾವ ಅಭಾವದ ಜ್ಞಾನವಾದರೂ, ಸಾ–ಅದು, ಕೇವಲಂ ಧ್ವಂಸಾದೇವ–ವಸ್ತು (ಜಗತ್ತಿನ) ನಾಶದಿಂದಲೇ (ಆಗಿರುತ್ತದೆ ; ನಿನಗೆ ಅಪೇಕ್ಷಿತವಾದ ತ್ರಿಕಾಲನಾಸ್ತಿತ್ವ ರೂಪದ ಬಾಧಕ್ಕೆ ಅವಕಾಶವೇ ಇಲ್ಲ).

**ಕಿಮನ್ಯನ್ನಾಶಯೇಜ್ಜ್ಞಾನೀ ಕಸ್ಯ ವಾ ನಾಸ್ತಿತಾಂ ದಿಶೇತ್ ।**
**ಸ್ವದೇಹಸ್ಯಾಪಿ ಯದ್ದಾಹಾನ್ನಾಸ್ತಿತಾ ನ ಸ್ವಸಂವಿದಾ ॥ ೧೨೫ ॥**

ಜ್ಞಾನೀ–ಜ್ಞಾನವುಳ್ಳವನು (ಜ್ಞಾನಿಯು), ಅನ್ಯತ್–(ಉಕ್ತ ರೀತಿಯಿಂದ ನಾಶವಾದ ಜಗತ್ತಿನಿಂದ) ಭಿನ್ನವಾದುದನ್ನು, ಕಿಂ ನಾಶಯೇತ್–ನಾಶಮಾಡುವನೇನು ? ಕಸ್ಯ ವಾ–ಯಾರೊಬ್ಬನಿಗೆ, ನಾಸ್ತಿತಾಂ–ಅಭಾವವನ್ನು, ದಿಶೇತ್–ತಿಳಿಸಿಕೊಡುವನು ? (ಯಾವ ಜ್ಞಾನಿಯೂ, ಬೇರಾವ ವಸ್ತುವನ್ನೂ ಇಲ್ಲದಂತೆ ಮಾಡಲಾರನು) ; ಸ್ವದೇಹಸ್ಯ ಅಪಿ–ತನ್ನ ದೇಹಕ್ಕಾದರೂ, ನಾಸ್ತಿತಾ–ನಾಸ್ತಿತ್ವವು (ನಾಶವು), ಯತ್ ದಾಹಾತ್–ಯಾವ ಅಗ್ನಿಯಿಂದಲೋ (ತಾನು ಜಗತ್ತಿನ ಏಕದೇಶವೇ ಆದ್ದರಿಂದ, ಸಂಕರ್ಷಣಮುಖಾಗ್ನಿಯಿಂದ ದಹಿಸಲ್ಪಡುವುದರಿಂದಲೋ), ಸ್ವಸಂವಿದಾ – ತನ್ನ ಜ್ಞಾನದಿಂದ, ನ–ಅಲ್ಲವೋ (ಆದ್ದರಿಂದ ವಸ್ತುವಿನ ಅಭಾವವು ಅಗ್ನ್ಯಾದಿ ಕಾರಣದಿಂದಾಗುವ ನಾಶದಿಂದಲ್ಲದೇ, ಜ್ಞಾನದಿಂದಲ್ಲ).

---

ದಿಂದಲ್ಲ) (೧೨೪). ಬ್ರಹ್ಮಜ್ಞಾನವುಳ್ಳವನು (ಅಪರೋಕ್ಷ ದರ್ಶನವನ್ನು ಹೊಂದಿದವನೂ) ಪ್ರಲಯದಲ್ಲಿ ಉಕ್ತರೀತಿಯಲ್ಲಿ ನಾಶವಾಗುವ ಜಗತ್ತನ್ನುಳಿದ ಬೇರಾವ ಜಗತ್ತಿನ ನಾಶವನ್ನು ಸಾಧಿಸುವನು ? ಬೇರಾವನಿಗೆ ಜಗತ್ತಿನ ಅಭಾವವನ್ನು ತಿಳಿಸಿ ಕೊಡುವನು ? ತನ್ನ ದೇಹವಾದರೂ ಅಗ್ನಿಯಿಂದ (ಪ್ರಲಯಕಾಲದಲ್ಲಿ ಸಂಕರ್ಷಣ ಮುಖಾಗ್ನಿಯಿಂದ)ದಹಿಸಲ್ಪಟ್ಟು ನಾಶವಾಗುತ್ತದೆಯಲ್ಲದೇ ಆತನ ಜ್ಞಾನದಿಂದಲ್ಲ; ಆದ್ದರಿಂದ ಅಗ್ನ್ಯಾದಿ ಕಾರಣದಿಂದ ವಸ್ತುವಿನ ಅಭಾವವು ಸಾಧಿಸುತ್ತದೆಯಲ್ಲದೆ ಜ್ಞಾನದಿಂದಲ್ಲ ; ವ್ಯಾವಹಾರಿಕವೆಂಬ ಜಗತ್ತು ಜ್ಞಾನಬಾಧ್ಯವೆಂಬುದು ಯುಕ್ತ

**ಅತೋ ಜಗದ್ಬಾಧಕಥಾ ಸ್ವಾಬೋಧಾದೇವ ಕೇವಲಂ ।**
**ಉಚ್ಚೈರ್ನ ವಾಚ್ಯಾ ವಿದ್ವತ್ಸು ಮಹಾಹಾಸ್ಯಾಸ್ಪದಾ ಹಿ ಸಾ ॥ ೧೨೬ ॥**

ಅತಃ–(ದೃಷ್ಟವಾದ ಜಗತ್ತಿನ ಅಭಾವವು ಉಕ್ತರೀತಿಯಿಂದ ಸಂಭವಿಸುವುದರಿಂದಲೂ, ಅನ್ಯ ಜಗತ್ತು ಇಲ್ಲದ್ದರಿಂದಲೂ) ಈ ಕಾರಣದಿಂದ, ಜಗದ್ಬಾಧ-ಕಥಾ – ಜಗತ್ತಿನ ಬಾಧ (ಅಭಾವ) ಕಥೆಯು, (ವಾದವು), (ಜ್ಞಾನದಿಂದ ನಾಶವೆಂಬ ಕಥೆಯು), ಸ್ವಾಬೋಧಾತ್ ಏವ ಕೇವಲಂ – ತನ್ನ ಅಜ್ಞಾನ ಮಾತ್ರದಿಂದಲೇ (ಜ್ಞಾನದಿಂದಲ್ಲ) ; ವಿದ್ವತ್ಸು–ಜ್ಞಾನಿ ಜನರ ಮಧ್ಯದಲ್ಲಿ, ಉಚ್ಚೈಃ–ಗಟ್ಟಿಯಾಗಿ, ನ ವಾಚ್ಯಾ – ಆಡಿಕೊಳ್ಳಲು ಯೋಗ್ಯವಲ್ಲ ; ಸಾ–ಅದು (ಜ್ಞಾನದಿಂದ ಜಗತ್ತು ಬಾಧ್ಯವೆಂಬ ವಾದವು), ಮಹಾ ಹಾಸ್ಯಾಸ್ಪದಾ ಹಿ – ಮಹಾ ಹಾಸ್ಯಕ್ಕೆ ಅವಕಾಶವನ್ನುಂಟುಮಾಡುವುದೇ ಆಗಿರುತ್ತದೆ, ಎಂಬುದು ಅತಿ ಸ್ಪಷ್ಟವು.

**ಇತೋಽನ್ಯಃ ಸರ್ವಸಂಹಾರೋ ನ ಶ್ರೌತೋ ನಾಪಿ ಯೌಕ್ತಿಕಃ ।**
**ಘಟಾದಿಸರ್ವನಾಶೋ ಹಿ ಸ್ವಸ್ವಕಾರಣಶೇಷವಾನ್ ॥ ೧೨೭ ॥**

ಇತಃ–ಇದರಿಂದ (ಬ್ರಹ್ಮಪ್ರಲಯದಿಂದ), ಅನ್ಯಃ – ಬೇರೆಯಾದ, ಸರ್ವಸಂಹಾರಃ–ವಿಷ್ಣು ವ್ಯತಿರಿಕ್ತವಾದ, ಪ್ರಕೃತಿ ಪ್ರಾಕೃತವೆಂಬ ಸಕಲ ಜಗತ್ಸಂಹಾರವು ಶ್ರೌತಃ–ಶ್ರುತಿಪ್ರತಿಪಾದ್ಯವು, ನ–ಅಲ್ಲ ; ಯೌಕ್ತಿಕಃ–ಯುಕ್ತಿ ಸಿದ್ಧವಾಗುವುದು, ಅಪಿ ನ–ಸಹ ಅಲ್ಲ; ಘಟಾದಿ ಸರ್ವನಾಶಃ–ಘಟಾದಿ ಸಕಲ ವಸ್ತು ನಾಶವೂ, ಸ್ವಸ್ವಕಾರಣ ಶೇಷವಾನ್–ಸ್ವಕಾರಣವಾದ ವಸ್ತುವು ಉಳಿಯುವುದೇ ಆಗಿರುತ್ತದೆ (ಸರ್ವ ನಾಶವಿಲ್ಲ–ಘಟ ನಾಶವಾದರೆ, ಮೃತ್ತಿಕೆ ಉಳಿಯುತ್ತದೆ, ಇತ್ಯಾದಿ ಸರ್ವ ನಾಶವೂ ಸಶೇಷವೇ–ನಿಶ್ಶೇಷನಾಶವೆಂಬುದಿಲ್ಲ).

---

ವಲ್ಲ; (೧೨೫). ಆದ್ದರಿಂದ ಜಗತ್ತು ಬಾಧ್ಯವೆಂಬ ವಾದವು ಕೇವಲ ತನ್ನ ಜ್ಞಾನಾಭಾವದಿಂದ ; ವಿದ್ವತ್ಸಭೆಯಲ್ಲಿ ಗಟ್ಟಿಯಾಗಿ ಉಚ್ಚರಿಸುವುದೂ ಮಹಾ ಹಾಸ್ಯಾಸ್ಪದವೇ ಸರಿ (೧೨೬). ಬ್ರಹ್ಮಲಯಕಾಲದ ಜಗನ್ನಾಶವಲ್ಲದ ಪ್ರಕೃತಿ ಪ್ರಾಕೃತ ಜಗತ್ತಿನ ನಾಶವು ಶ್ರುತ್ಯುಕ್ತವಲ್ಲ–ಯುಕ್ತಿಯಿಂದ ಸಿದ್ಧವೂ ಅಲ್ಲ ; ಘಟಾದಿ ಸರ್ವವಸ್ತುಗಳ ನಾಶವು, ಸ್ವಕಾರಣವಾದ ಪದಾರ್ಥದ ಅವಶೇಷ

**ದಾಹೇನ ಕಾರ್ಯನಾಶೇಪಿ ಭಸ್ಮಶೇಷಃ ಪ್ರದೃಶ್ಯತೇ ।**
**ಸ್ವಸ್ವಾವಯವನಾಶೇಪಿ ಸೂಕ್ಷ್ಮಸೂಕ್ಷ್ಮತದಂಶಕಾ ।**
**ಶಿಷ್ಟಾ ಭವಂತಿ ತದ್ವಸ್ತು ಕಥಂ ಸ್ಯಾದಸದೇವ ಹಿ ॥ ೧೨೮ ॥**
**ಅತೋ ಯಾ ಯಾ ತ್ವಯೋಚ್ಯೇತೇ ಸಾ ಸಾ ನಾಶಪರಂಪರಾ ।**
**ಕಥಂ ಮುಂಚೇದುಪಾದಾನಸೂಕ್ಷ್ಮಾಂಶಾಂಶಪರಂಪರಾಂ ॥ ೧೨೯ ॥**

ಕಾರ್ಯನಾಶೇಪಿ – ಕಾರಣಜನ್ಯ ಕಾರ್ಯನಾಶದಲ್ಲಿ ಸಹ, ಧಾಹೇನ– ದಹಿಸುವುದರಿಂದಲೂ, ಭಸ್ಮಶೇಷಃ – ಬೂದಿಯ ಅವಶೇಷವು, ಪ್ರದೃಶ್ಯತೇ– ಕಾಣಲ್ಪಡುತ್ತದೆ ; ಸ್ವಸ್ವಾವಯವನಾಶೇಪಿ – ತಂತಮ್ಮ ಅವಯವಗಳು ನಷ್ಟ ವಾದರೂ, ಸೂಕ್ಷ್ಮ ಸೂಕ್ಷ್ಮತದಂಶಕಾಃ–ವಸ್ತುವಿನ ಅತ್ಯಂತ ಸೂಕ್ಷ್ಮಾಂಶಗಳು ಶಿಷ್ಟಾಃ ಭವಂತಿ–ಉಳಿಯುವುದಾಗುತ್ತವೆ ; ತದ್ವಸ್ತು–ಆ ಪದಾರ್ಥವು, ಅಸತ್ ಏವ–ಅಸತ್ತೇ (ಎಂದೂ ಇಲ್ಲದ ಶಶವಿಷಾಣದಂತೆ ಅಸತ್ತಾದುದು, ಕಥಂ ಸ್ಯಾತ್– ಹೇಗೆ ಆಗುತ್ತದೆ ? ಹಿ – (ಅಸತ್ತೆಂದು ಭಾವಿಸುವುದು) ಆಶ್ಚರ್ಯವು ; ಅತಃ– ಆದ್ದರಿಂದ, ತ್ವಯಾ – ನಿನ್ನಿಂದ, ಯಾ ಯಾ – ಯಾವ ಯಾವ (ನಾಶವು), ಉಚ್ಯೇತೇ–ಹೇಳಲ್ಪಡುವುದೋ, ಸಾ ಸಾ–ಅದೆಲ್ಲವೂ (ಆ ನಾಶವೆಲ್ಲವೂ), ನಾಶ– ಪರಂಪರಾ–ನಾಶ ಪರಂಪರೆಯೂ, ಉಪಾದಾನ ಸೂಕ್ಷ್ಮಾಂಶ ಪರಂಪರಾಂ–ಉಪಾ ದಾನದ (ವಸ್ತುರಚನೆಗೆ ಕಾರಣವಾದ್ದರ) ಸೂಕ್ಷ್ಮಾಂಶ ಪರಂಪರೆಯನ್ನು, ಕಥಂ– ಹೇಗೆ, ಮುಂಚೇತ್–ಬಿಡುತ್ತದೆ (ಸೂಕ್ಷ್ಮಾಂಶಪರಂಪರೆಯು ನಿಂತೇ ನಿಲ್ಲುತ್ತದೆ).

---

ವುಳ್ಳದ್ದಾಗಿರುತ್ತದೆ ; (೧೨೭). ದಾಹದಿಂದ ಕಾರ್ಯ (ವಸ್ತು) ನಾಶವಾದರೆ, ಭಸ್ಮಶೇಷವು ಉಳಿಯುವುದು ಎಲ್ಲರಿಗೂ ಕಂಡಿದೆ ; ವಸ್ತುವಿನ ಅವಯವಗಳು (ಭಾಗಗಳು) ನಾಶವಾದರೂ, ಅದರ ಅತ್ಯಂತ ಸೂಕ್ಷ್ಮವಾದ ಅಂಶಗಳು ಉಳಿದೇ ಇರುತ್ತವೆ ; ಹೀಗಿರುವ ಅವಶಿಷ್ಟಾಂಶಗಳುಳ್ಳ ವಸ್ತುವು ಅಸದ್ವಸ್ತು (ಶಶವಿಷಾಣ ದಂತೆ ಅತ್ಯಂತಾಭಾವರೂಪವುಳ್ಳದ್ದು) ಹೇಗಾಗುತ್ತದೆ ? (ಸದ್ವಸ್ತುವೇ ಆಗುತ್ತದೆ); ಯಾವ ಯಾವ ವಸ್ತುವಿನ ನಾಶವನ್ನು ನೀನು ಹೇಳಿದರೂ (ಘಟದಿಂದ ಪ್ರಕೃತಿ ಪರ್ಯಂತದ ವಸ್ತುನಾಶ ಪರಂಪರೆಯು) ಅದು (ಅದು–ಪ್ರತಿಯೊಂದೂ) ವಸ್ತು ರಚನೆಯ ಪದಾರ್ಥದ (ಉಪಾದಾನದ) ಸೂಕ್ಷ್ಮಾಂಶ ಪರಂಪರೆಯನ್ನು ಹೇಗೆ ಬಿಡುತ್ತದೆ (ಸೂಕ್ಷ್ಮಾಂಶ ಪರಂಪರೆಯು ನಿಂತೇ ನಿಲ್ಲುತ್ತದೆ) (೧೨೮–೧೨೯).

**ಪರಂಪರಾ ದ್ವಿರೂಪೇಯಂ ಪ್ರಕೃತೌ ಪರ್ಯವಸ್ಯತಿ ।**
**ಸರ್ವಸ್ಯಾಂತೇ ಯತಃ ಸೈವ ಶಿಷ್ಟಾ ನಷ್ಟಾ ಚ ನೈವ ಸಾ ॥ ೧೩೦ ॥**

ದ್ವಿರೂಪಾ–ಕಾರಣ ಕಾರ್ಯನಾಶವೆಂಬ, ಇಯಂ–(ಘಟದಿಂದ ಆರಂಭಿಸಿ ಪ್ರಕೃತಿ ಪರ್ಯಂತವಾದ) ಈ, ಪರಂಪರಾ–(ನಾಶ) ಪರಂಪರೆಯು, ಪ್ರಕೃತೌ–ಪ್ರಕೃತಿಯಲ್ಲಿ, ಪರ್ಯವಸ್ಯತಿ–ಪರ್ಯವಸಾನಗೊಳ್ಳುತ್ತದೆ (ಕೊನೆಗಾಣುತ್ತದೆ); ಸರ್ವಸ್ಯ ಅಂತೇ–ಸರ್ವವಸ್ತು ನಾಶವಾಗುತ್ತಿರಲು, ಯತಃ–ಯಾವ ಕಾರಣದಿಂದ ಸಾ ಏವ – ಪ್ರಕೃತಿಯೇ, ಶಿಷ್ಟಾ–ಉಳಿಯುವುದೋ (ಆದ್ದರಿಂದ ಅಲ್ಲಿಗೇ ಪರ್ಯವಸಾನವು); ಸಾ–ಪ್ರಕೃತಿಯು, ನಷ್ಟಾ–ನಾಶ ಹೊಂದುವುದು, ನೈವ ಚ–ಅಲ್ಲವೇ ಅಲ್ಲ.

**ನಾಶತ್ವಾದ್ವಿಮತೋ ನಾಶಃ ಸ್ಯಾದ್ಭಾವಾಂತರಶೇಷವಾನ್ ।**
**ಘಟನಾಶವದಿತ್ಯೇಷಾ ವಿದೋಷಾ ಯುಕ್ತಿರಸ್ತಿ ಹಿ ॥ ೧೩೧ ॥**

ನಿರೂಪಿತವಾದ ಪ್ರಮೇಯದಿಂದ ಸಿದ್ಧವಾಗುವ ಅನುಮಾನವನ್ನು ಹೇಳುತ್ತಾರೆ :—

ವಿಮತಃ ನಾಶಃ–ವಿವಾದ ವಿಷಯವಾದ (ಪರನು ಹೇಳುವ ಸರ್ವನಾಶವು) ನಾಶವೆಂಬುದು, ಭಾವಾಂತರ ಶೇಷವಾನ್ – ಅನ್ಯಪದಾರ್ಥಶೇಷವುಳ್ಳದ್ದು, ಸ್ಯಾತ್–ಆಗುತ್ತದೆ, ನಾಶತ್ವಾತ್–ನಾಶವುಳ್ಳದ್ದಾದ್ದರಿಂದ, ಘಟನಾಶವತ್–ಘಟನಾಶದಂತೆ; ಏಷಾ–ಈ, ವಿದೋಷಾಯುಕ್ತಿಃ–ನಿರ್ದುಷ್ಟವಾದ ಅನುಮಾನವು, ಅಸ್ತಿ ಹಿ–(ಸ್ಪಷ್ಟವಾಗಿ) ಇರುತ್ತದೆ.

---

ಪ್ರಕೃತಿ ಪರ್ಯಂತವಾದ ಜಗದ್ವಸ್ತುಗಳ ದ್ವಿಪ್ರಕಾರದ (ಕಾರಣ ಕಾರ್ಯದ) ನಾಶಪರಂಪರೆಯು, ಪ್ರಕೃತಿಯಲ್ಲಿ ಪರ್ಯವಸಾನಗೊಳ್ಳುತ್ತದೆ; ಸಕಲವಸ್ತು ನಾಶವಾಗುತ್ತಿರಲು ಪ್ರಕೃತಿಯೇ ಉಳಿಯುತ್ತದೆ; ಅದು ನಾಶಹೊಂದುವುದೇ ಇಲ್ಲ (೧೩೦). ಪರನು ಹೇಳುವ ಸರ್ವನಾಶವೆಂಬುದು ಅನ್ಯಭಾವವಸ್ತು ಶೇಷವುಳ್ಳದ್ದೇ ಆಗಿದೆ; ನಾಶವುಳ್ಳದ್ದಾದ್ದರಿಂದ, ಘಟನಾಶದಂತೆ, ಎಂಬ ನಿರ್ದುಷ್ಟವಾದ ಯುಕ್ತಿಯೂ, ಇದನ್ನೇ ಸಾಧಿಸುತ್ತದೆ; ಭಾವಪದಾರ್ಥ ಶೇಷವು ಸರ್ವನಾಶದಲ್ಲಿ

**ನಿಃಶೇಷವಸ್ತುನಾಶಸ್ಯ ನಾಶಮಾತ್ರೇಽಪ್ಯದರ್ಶನಾತ್ ।**
**ವಕ್ತ್ರಾಭಾಸೋಕ್ತಿಮಾತ್ರೇಣ ನೈವ ಸ್ಯಾದ್ಧಿ ಸ ಯೌಕ್ತಿಕಃ ॥ ೧೩೨ ॥**

ನಾಶಮಾತ್ರೇಽಪಿ – ನಾಶಮಾತ್ರವಿದ್ದರೂ ಸಹ, ನಿಃಶೇಷವಸ್ತುನಾಶಸ್ಯ – ನಿಶ್ಶೇಷವಸ್ತುನಾಶದ, ಅದರ್ಶನಾತ್–ಅದರ್ಶನದಿಂದ (ನಿಶ್ಶೇಷವಸ್ತುನಾಶವು ಕಂಡಿಲ್ಲವಾದ್ದರಿಂದ), ವಕ್ತ್ರಾ–ಮುಖದಿಂದ, ಆಭಾಸೋಕ್ತಿಮಾತ್ರೇಣ–ಆಭಾಸಕ (ಅರ್ಥರಹಿತ) ಮಾತಿನಿಂದ ಮಾತ್ರ, ಸಃ–ಆ ಮಾತು, ಯೌಕ್ತಿಕಃ–ಯುಕ್ತಿ ಸಿದ್ಧವೆಂದು, ನೈವ ಸ್ಯಾತ್ ಹಿ–ಆಗುವುದಿಲ್ಲವೆಂಬುದೂ ಸಿದ್ಧವೇ.

**ಅದೃಷ್ಟಕಲ್ಪನಾದೋಷೋ ಯತಃ ಸರ್ವತ್ರ ಸಂಚರೇತ್ ।**
**ಶ್ರುತಯಶ್ಚ ಪುರಾಣಾನಿ ಮನ್ಮತಸ್ಯೈವ ಸಾಕ್ಷಿಣಃ ॥ ೧೩೩ ॥**

ಏಕೆ ಯೌಕ್ತಿಕವಲ್ಲೆಂದರೆ ಹೇಳುತ್ತಾರೆ :—

ಯತಃ–ಏಕೆಂದರೆ (ಯಾವ ಕಾರಣವೆಂದರೆ), ಅದೃಷ್ಟಕಲ್ಪನಾದೋಷಃ–ಅದೃಷ್ಟ (ಎಲ್ಲಿಯೂ ಕಾಣದ್ದರ) ಕಲ್ಪನೆಯೆಂಬ ದೋಷವು, ಸರ್ವತ್ರ-(ಪರನ) ಎಲ್ಲ ಮಾತುಗಳಲ್ಲಿ, ಸಂಚರೇತ್-ಇರುತ್ತದೆ; ಶ್ರುತಯಃ-ಶ್ರುತಿಗಳೂ, ಪುರಾಣಾನಿ ಚ–ಪುರಾಣಗಳೂ, ಮನ್ಮತಸ್ಯ ಏವ–ನನ್ನ ನಿಶ್ಚಯಕ್ಕೇ (ಸಿದ್ಧಾಂತಕ್ಕೇ), ಸಾಕ್ಷಿಣಃ–ಸಾಕ್ಷಿಯಾಗಿವೆ (ಸಾಧಿಸುತ್ತವೆ).

**ಕಿಂ ಚ ಸರ್ವವಿನಾಶೋ ನ ನಾಶಸ್ಯಾಸ್ಯಾವಿನಾಶನಾತ್ ।**
**ನಾಪಿ ಭಾವಸ್ಯ ಸರ್ವಸ್ಯ ನಾಶೋ ಬ್ರಹ್ಮಾವಿನಾಶನಾತ್ ॥ ೧೩೪ ॥**

---

ಉಳಿಯುವುದರಿಂದ, ಪರನು ಹೇಳುವ ಸರ್ವನಾಶವೆಂಬುದಿಲ್ಲ (೧೩೧). ನಾಶ ವಿದ್ದರೂ, ನಿಶ್ಶೇಷನಾಶವೆಂಬುದು ಕಂಡಿಲ್ಲವಾದ್ದರಿಂದ ಕೇವಲ ವಸ್ತುನಾಶವನ್ನು ಹೇಳುವ ಉಕ್ತಿಯು, ಆಭಾಸಮಾತ್ರವು ; ಅರ್ಥವಿಲ್ಲದುದು ; ಯುಕ್ತಿಸಿದ್ಧವೂ ಅಲ್ಲ (೧೩೨). ಸರ್ವನಾಶವನ್ನು ಸಾಧಿಸುವ ಸರ್ವ ಅನುಮಾನಗಳೂ (ಯುಕ್ತಿಗಳೂ) ಅದೃಷ್ಟ ಕಲ್ಪನೆಯೆಂಬ ದೋಷವುಳ್ಳವೇ ಆಗುತ್ತವೆ ; ಶ್ರುತಿಗಳೂ ಪುರಾಣಾದಿಗಳೂ (ನಿರ್ದುಷ್ಟ ಯುಕ್ತಿಗಳೂ) ನನ್ನ (ತತ್ವವಾದಿಯ) ಸಿದ್ಧಾಂತಕ್ಕೇ ಸಾಕ್ಷಿಯಾಗಿರುತ್ತವೆ (ನನ್ನ ಸಿದ್ಧಾಂತವನ್ನೇ ಸಾಧಿಸುತ್ತವೆ) (೧೩೩). ಸರ್ವನಾಶ ವಿಲ್ಲೆಂಬಲ್ಲಿ ಬೇರೆ ಯುಕ್ತಿಯೂ ಸಹಾಯಕವಾಗುತ್ತದೆ ; ಸರ್ವನಾಶದ

*

ಜಗನ್ನಾಶವೂ ಶೇಷವುಳ್ಳದ್ದೇ ಆಗಿರುವುದರಿಂದ, ಯಾವ ಯುಕ್ತಿಯಿಂದ ಸರ್ವನಾಶವನ್ನು ಸಾಧಿಸುತ್ತೇನೆಂದು ಪರನು ಹೇಳಿದರೂ, ಆ ಪ್ರತಿಜ್ಞೆಯೇ ವ್ಯಾಹತಭಾಷಣವಾಗುತ್ತದೆನ್ನುತ್ತಾರೆ :—

ಕಿಂ ಚ–ಮತ್ತೂ ಏನೆಂದರೆ, ಸರ್ವವಿನಾಶಃ – ಸರ್ವವಿನಾಶವೆಂಬುದು, ನ – ಇಲ್ಲ ; ಅಸ್ಯ ನಾಶಸ್ಯ–(ಸಾಧ್ಯವೆಂಬ) ಸರ್ವನಾಶದ, ಅವಿನಾಶನಾತ್–ನಾಶವಿಲ್ಲದ್ದರಿಂದ (ಅದೂ ನಾಶವಾದರೆ, ಪುನಃ ಜಗತ್ತಿನ ಉತ್ಪತ್ತಿಯ ಪ್ರಸಂಗ ವುಂಟಾಗುವುದರಿಂದ) ; (ಸರ್ವಭಾವವಸ್ತುವಿನ ನಾಶವೆಂದಾಗಲಿ – ಅಭಾವದ, ನಾಶದ ನಾಶವು ಬೇಡ, ಎಂದರೆ), ಸರ್ವಸ್ಯ ಭಾವಸ್ಯ – ಸರ್ವಭಾವವಸ್ತುಗಳ, ನಾಶಃ ಅಪಿ ನ–ನಾಶವೂ ಇಲ್ಲ (ಏಕೆಂದರೆ), ಬ್ರಹ್ಮ–ಬ್ರಹ್ಮನು, ಅವಿನಾಶನಾತ್–ನಾಶರಹಿತನಾದ್ದರಿಂದ.

**ಬ್ರಹ್ಮಭಿನ್ನಸ್ಯ ಭಾವಸ್ಯ ನಾಶೇ ಜೀವೋಽಪಿ ನಂಕ್ಷ್ಯತಿ ।**
**ಮಿಥ್ಯಾಭೂತೋಽಸ್ತಿ ತದ್ಭೇದಃ ಪರಮಾರ್ಥೋ ನ ಕುತ್ರಚಿತ್** ॥ ೧೩೫ ॥

ಬ್ರಹ್ಮಭಿನ್ನವಾದ ಸಕಲಭಾವವಸ್ತುವಿನ ನಾಶವೇ ಇರಲಿ, ಎಂದರೆ ಹೇಳುತ್ತಾರೆ :—

ಬ್ರಹ್ಮಭಿನ್ನಸ್ಯ – ಬ್ರಹ್ಮನಿಂದ ಭಿನ್ನವಾದ, ಭಾವಸ್ಯ – ಭಾವವಸ್ತುವಿಗೆ, ನಾಶೇ–ನಾಶವಾಗಲಿ ಎಂದರೆ (ನಾಶವಾಗುತ್ತಿರಲು), ಜೀವಃ ಅಪಿ–(ಬ್ರಹ್ಮ ಭಿನ್ನನಾದ) ಜೀವನೂ, ನಂಕ್ಷ್ಯತಿ–(ಸ್ವರೂಪದಿಂದ ಸಹ) ನಾಶಹೊಂದುತ್ತಾನೆಂದು (ಪ್ರಾಪ್ತವಾಗುತ್ತದೆ) ; ತದ್ಭೇದಃ – ಜೀವಬ್ರಹ್ಮರ ಭೇದವು, ಮಿಥ್ಯಾಭೂತಃ–

---

ನಾಶವಿಲ್ಲವೆಂದರೆ (ನಾಶವೂ ಸರ್ವನಾಶದಲ್ಲಿ ಸೇರಿದರೆ, ಪುನಃ ಜಗತ್ತಿನ ಉತ್ಪತ್ತಿ ಪ್ರಸಂಗ ಬರುತ್ತದೆ) ; ಸರ್ವಭಾವ ವಸ್ತುಗಳ ನಾಶವೆನ್ನುವುದೂ ಯುಕ್ತ ವಾಗುವುದಿಲ್ಲ ; ಏಕೆಂದರೆ ಬ್ರಹ್ಮನು ಅವಿನಾಶಿ (ನಾಶರಹಿತನು) ಅಷ್ಟೆ (೧೩೪). ಬ್ರಹ್ಮಭಿನ್ನ ಸರ್ವಭಾವವಸ್ತುಗಳ ನಾಶವೂ ಯುಕ್ತವಾಗುವುದಿಲ್ಲ ; ಜೀವನೂ ಸಹ ಸ್ವರೂಪದಿಂದ ನಾಶಹೊಂದುವನೆಂದು ಪ್ರಾಪ್ತವಾಗುತ್ತದೆ ; ನಿನ್ನ ಮತದಂತೆ, ಜೀವಬ್ರಹ್ಮರ ಭೇದವೂ ಮಿಥ್ಯೆಯಾದ್ದರಿಂದ, (ಪಾರಮಾರ್ಥಿಕವಲ್ಲದ್ದ ರಿಂದ), ಬ್ರಹ್ಮವಸ್ತು ಭಿನ್ನಭಾವ ಪದಾರ್ಥವೇ ಇಲ್ಲದಂತಾಗಿ ಜಗತ್ತು ಮತ್ತು

ಮಿಥ್ಯೆಯಾದುದು, ಅಸ್ತಿ–ಆಗಿರುತ್ತದೆ; ಕುತ್ರಚಿತ್–ಎಲ್ಲಿಯೂ, ಪರಮಾರ್ಥಃ ನ ಪಾರಮಾರ್ಥಿಕವಲ್ಲ (ಪರನಂತೆ ಬ್ರಹ್ಮಭಿನ್ನವಾದ ಜಗತ್ತು ಸಹ ಅಪಾರಮಾರ್ಥಿಕ ವಾದ್ದರಿಂದ ಜಗತ್ತಿನ ನಾಶವೂ ಇಲ್ಲ–ಹಾಗೆಯೇ ಜೀವನಾಶವೂ ಇಲ್ಲವೆಂದೇ ಪ್ರಾಪ್ತವಾಗುತ್ತದೆ; ಮಿಥ್ಯೆಯಾದುದು ಭಾವವಸ್ತುವೇ ಅಲ್ಲವಷ್ಟೆ).

**ಭಾವಕಾರ್ಯಸ್ಯ ಸರ್ವಸ್ಯ ನಾಶ ಆಶಾಸ್ಯತೇ ಯದಿ ।**
**ಜೀವಸ್ಯ ಜೀವಧರ್ಮಾಣಾಂ ಕಾಲಾದೇರ್ಗಗನಸ್ಯ ಚ ।**
**ವಿನಾಶೋಽನಾದಿಭಾವಾನಾಂ ಭವೇದಾಕಸ್ಮಿಕಸ್ತದಾ ॥ ೧೩೬ ॥**

ಬೇರೊಂದು ವಾದವನ್ನು ಆಶಂಕಿಸಿ ದೂಷಿಸುತ್ತಾರೆ:—

ಭಾವಕಾರ್ಯಸ್ಯ – ಭಾವಕಾರ್ಯವೆಂಬ, ಸರ್ವಸ್ಯ–ಸರ್ವಕ್ಕೆ, ನಾಶಃ– ನಾಶವು, ಯದಿ ಆಶಾಸ್ಯತೇ–ನಿನ್ನ ಇಚ್ಛಿತವಾಗುವ ಪಕ್ಷದಲ್ಲಿ, ಜೀವಸ್ಯ–ಜೀವನ (ಜೀವೋಪಾಧಿ ಲಿಂಗದೇಹದ–ಅಥವಾ ಲಿಂಗದೇಹದಲ್ಲಿ ಉಪಹಿತನಾದ ಜೀವನ), ಜೀವಧರ್ಮಾಣಾಂ – ಅಲ್ಪಜ್ಞತ್ವಾದಿ ಜೀವಧರ್ಮಗಳ, ಕಾಲಾದೇಃ – ಕಾಲ ಮೊದಲಾದವುಗಳ, ಗಗನಸ್ಯ ಚ–ಹಾಗೂ ಆಕಾಶದ, ವಿನಾಶಃ–ವಿನಾಶವು (ಎಂದು ನಿನ್ನ ಇಚ್ಛಿತವಾದರೆ), ತದಾ–ಆಗ, ಅನಾದಿಭಾವಾನಾಂ–ಅನಾದಿ ಗಳಾದ ಭಾವಪದಾರ್ಥಗಳ (ವಿನಾಶಃ–ವಿನಾಶವು), ಆಕಸ್ಮಿಕಃ–ಅಕಸ್ಮಾತ್ತಾಗಿ ಸಂಭವಿಸುವುದು, ಭವೇತ್–ಆಗುತ್ತದೆ.

**ಬ್ರಹ್ಮಾನ್ಯಾನಾದಿನಾಶೇ ತು ನಶ್ಯೇದ್ಬ್ರಹ್ಮಾಪಿ ತಾದೃಶಂ ।**
**ಅತಃ ಸರ್ವವಿನಾಶೋಽಯಂ ವಿದ್ವದಗ್ರೇ ನ ಶೋಭತೇ ॥ ೧೩೭ ॥**

ಬ್ರಹ್ಮಭಿನ್ನ ಜಡಭೂತ ಸಕಲಭಾವಗಳ ನಾಶವೇ ಸರ್ವನಾಶವೆಂದು ಅಂಗೀಕರಿಸಿದರೆ, ಅನಾದಿಗಳೆಂದು ಅಂಗೀಕೃತವಾದ ಗಗನಾದಿಗಳ ನಾಶದ

---

ಜೀವರೂ ನಾಶರಹಿತರೆಂದೇ ಪ್ರಾಪ್ತವಾಗುತ್ತದೆ – ಮಿಥ್ಯೆಯೇ ಆದ್ದರಿಂದ ಅದಕ್ಕೆ ನಾಶವಿಲ್ಲ (೧೩೫). ಇದೂ ಅಲ್ಲದೇ ಸರ್ವಭಾವ ಕಾರ್ಯದ ನಾಶವೆಂಬುದು ನಿನಗೆ ಅಪೇಕ್ಷಿತವೆಂದರೆ, ಜೀವರು, ಜೀವಧರ್ಮಗಳು, ಕಾಲ, ಆಕಾಶಾದಿ ಭಾವ ವಸ್ತುಗಳ ನಾಶವು, ಅಕಸ್ಮಾತ್ತಾಗಿ (ಅನಾದಿ ವಸ್ತುಗಳು ನಿತ್ಯವಾದ್ದರಿಂದ) ಸಂಭವಿಸುತ್ತದೆಂದು ಹೇಳಬೇಕಾಗಿ ಬರುತ್ತದೆ (೧೩೬). ಬ್ರಹ್ಮಭಿನ್ನವಾದ ಅನಾದಿ

ಪ್ರಸಂಗವುಂಟಾಗುತ್ತದೆ; ಹಾಗೂ ಆಗಲಿ, ಎಂದರೆ, ದೋಷವನ್ನು ಹೇಳು ತ್ತಾರೆ:—

ಬ್ರಹ್ಮಾನ್ಯಾನಾದಿನಾಶೇ ತು–ಬ್ರಹ್ಮಭಿನ್ನಗಳಾದ ಅನಾದಿಯಾದ ಗಗನಾದಿಗಳು (ಆಕಾಶ, ಕಾಲಾದಿಗಳು) ಜಡವರ್ಗಪ್ರವೇಶಮಾತ್ರದಿಂದ ಅವಿನಾಶಿಗಳಾದವುಗಳೂ ನಾಶವುಳ್ಳವಾಗುತ್ತವೆಂದರೆ, ತಾದೃಶಂ – ಹಾಗೆಯೇ ಅನಾದಿ ಭಾವರೂಪನಾದ, ಬ್ರಹ್ಮಾಪಿ–ಬ್ರಹ್ಮನೂ ನಶ್ಯೇತ್–ನಾಶಹೊಂದುವನಾಗಲಿ;[1] ಅತಃ–ಆದ್ದರಿಂದ, (ಈವಿಧ ನಿನಗೆ ಇಷ್ಟವಲ್ಲದ ಪ್ರಸಂಗಗಳು ಪ್ರಾಪ್ತವಾಗುವುದರಿಂದ), ಅಯಂ–ಈ (ಪರನಿಂದ ಉಕ್ತವಾದ), ಸರ್ವವಿನಾಶಃ–ಸರ್ವವಿನಾಶವು (ನಿತ್ಯತ್ವಪ್ರತಿಪಾದಕ ಶ್ರುತಿಬಲದಿಂದ ಬ್ರಹ್ಮನಿಗೆ ನಾಶವಿಲ್ಲೆಂದರೆ, ಶ್ರುತಿಬಲದಿಂದಲೇ ಗಗನಾದಿಗಳಿಗೂ ನಾಶವಿಲ್ಲೆಂದು ತಿಳಿದು ಸಂತುಷ್ಟರಾಗಬೇಕು) ವಿದ್ವದಗ್ರೇ – ವಿದ್ವಾಂಸರ ಎದುರಿನಲ್ಲಿ (ಜ್ಞಾನಿಸಭೆಯಲ್ಲಿ), ನ ಶೋಭತೇ– ಶೋಭಿಸುವುದಿಲ್ಲ.[2]

---

ವಸ್ತುಗಳಿಗೂ ನಾಶವನ್ನು ಹೇಳಿದರೆ, ಅನಾದಿಯಾದ ಬ್ರಹ್ಮನಿಗೂ ನಾಶವಿರಬೇಕೆಂದು ಪ್ರಾಪ್ತವಾಗಿ ಈ ಸರ್ವವಿನಾಶವು ವಿದ್ವಜ್ಜನರ ಎದುರಿನಲ್ಲಿ ಶೋಭಿಸುವುದಿಲ್ಲ; ಶ್ರುತಿಬಲದಿಂದ ಬ್ರಹ್ಮನಿಗೆ ನಾಶವಿಲ್ಲವೆಂದರೆ, ನಿತ್ಯತ್ವ ಪ್ರತಿಪಾದಕ ಶ್ರುತಿ

---

1 ಅನ್ಯೋನ್ಯಾಭಾವರೂಪದ ಜೀವಬ್ರಹ್ಮಭೇದಕ್ಕೂ ನಾಶವಿಲ್ಲದಿದ್ದರೆ, ನಿನ್ನ ಅಭೀಷ್ಟವು ಸಿದ್ಧವಾಗುವುದಿಲ್ಲ; ಬ್ರಹ್ಮಧರ್ಮತ್ವೇನ ಪ್ರತೀಯಮಾನವಾದ ಜಡಭೂತವಾದ ಐಕ್ಯವು, ನಷ್ಟವಾದರೂ ನಿನ್ನ ಇಷ್ಟ ಹಾನಿಯಾಗುತ್ತದೆ; ಅನ್ಯೋನ್ಯಾಭಾವರೂಪದ ಭೇದವೂ, ಜೀವಬ್ರಹ್ಮರ ಐಕ್ಯವೂ, ಜಡವೇ ಆಗಿ ಬ್ರಹ್ಮಭಿನ್ನ ಜಡಗಳೊಂದಿಗೆ ನಾಶವಾಗುವುದಾದರೆ (ಆಗಲೂ), ನಿನ್ನ ಇಷ್ಟಹಾನಿಯೇ ಸಾಧಿಸುತ್ತದೆಂಬ ದೋಷವೂ ಉಕ್ತವಾಯಿತು.

2 'ಆಕಾಶವತ್ ಸರ್ವಗತಶ್ಚ ನಿತ್ಯಃ' ಎಂಬ ಶ್ರುತಿಯು, ಬ್ರಹ್ಮನಿಗೆ, ಆಕಾಶದ ದೃಷ್ಟಾಂತವನ್ನು ಹೇಳಿ, ಸರ್ವಗತತ್ವ (ವ್ಯಾಪ್ತಿ) ಮತ್ತು ನಿತ್ಯತ್ವಗಳನ್ನು ಶ್ರುತಿಯು ಸಾಧಿಸುತ್ತದೆ; ಆದ್ದರಿಂದ ಸರ್ವಗತತ್ವ ನಿತ್ಯತ್ವಗಳು, ಔಪಚಾರಿಕವಲ್ಲ—ಸತ್ಯವೇ; ಶ್ರುತಿ ಸಿದ್ಧ ನಿತ್ಯತ್ವವುಳ್ಳ ಅನಾದಿವಸ್ತುಗಳಿಗೆ ನಾಶವು ಕೂಡುವುದಿಲ್ಲ; ಈಗ ಅವುಗಳಿಗೆ ನಾಶವಿಲ್ಲವೆಂದು, ಕಾಲಾಂತರದಲ್ಲಿ ನಾಶವು ಸಂಭವಿಸುತ್ತದೆಂದರೆ, ಕಾಲನಿತ್ಯತ್ವವನ್ನಾದರೂ ಅವಶ್ಯವಾಗಿ ಅಂಗೀಕರಿಸಬೇಕಾಗುತ್ತದೆ; ಏವಂ ಚ–ಪರನ ಸರ್ವನಾಶವು ಸಂಭಾವ್ಯವೇ ಅಲ್ಲ.

**ಅಣುತ್ವೇಶವಶತ್ವಾದೇರನಾದೇರವಿನಾಶನಾತ್ ।**
**ಜೀವಬ್ರಹ್ಮೈಕತಾಶಾ ಚ ದುರಾಶೈವಾಭವತ್ತವ ॥ ೧೩೮ ॥**

ಸರ್ವನಾಶವನ್ನು ಹೇಳಿ, ಅಂಗೀಕರಿಸುವುದು, ಜೀವಬ್ರಹ್ಮೈಕ್ಯ ರಕ್ಷಣೆಗಾಗಿಯಷ್ಟೆ; ಬ್ರಹ್ಮಾತಿರಿಕ್ತ ಸರ್ವಭಾವರೂಪ ಜಡನಾಶವನ್ನು ಅಂಗೀಕರಿಸಿದರೂ, ಐಕ್ಯದ ರಕ್ಷಣೆಯಾಗುವುದಿಲ್ಲ; 'ಅವಿನಾಶೀ ವಾ ಅರೇಯಮಾತ್ಮಾನುಚ್ಛಿತ್ತಿಧರ್ಮಾ' ಎಂಬ ಶ್ರುತಿಯಲ್ಲಿ 'ಅನುಚ್ಛಿತ್ತಿಧರ್ಮಾ', ಎಂಬುದಕ್ಕೆ 'ನ ವಿದ್ಯತೇ ಉಚ್ಛಿತ್ತಿಃ ಯೇಷಾಂ ತೇ ಧರ್ಮಾಃ ಯಸ್ಯ' ಎಂಬ ಸಮಾಸವನ್ನು ಸೂಚಿಸಿ, ನಿತ್ಯಗಳೆಂದು ಪ್ರಮಾಣದಿಂದ ಸಿದ್ಧವಾಗುವ ಚೇತನಧರ್ಮಗಳಿಗೆ ಮತ್ತು ಧರ್ಮಿಯಿಂದ ಅಭಿನ್ನಗಳಾದ ಚೇತನರಿಗೆ ನಾಶಪ್ರಸಕ್ತಿಯೇ ಇರುವುದಿಲ್ಲವೆಂದು ಹೇಳಿರುವುದರಿಂದ, ಐಕ್ಯಚಿಂತನೆಗೆ ಅವಕಾಶವೇ ಇಲ್ಲವೆನ್ನುತ್ತಾರೆ:—

ಅಣುತ್ವೇಶವಶತ್ವಾದೇಃ – ಅಣುತ್ವ, ಈಶತ್ವ, ವಶತ್ವ ಮುಂತಾದ ಭಗವದ್ಧರ್ಮಗಳಿಗೆ (ಆದಿಪದದಿಂದ, 'ನಿತ್ಯಾನಂದೋ ನಿತ್ಯಜ್ಞಾನೋ ನಿತ್ಯಬಲಃ ಪರಮಾತ್ಮಾ' । 'ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ', ಇತ್ಯಾದಿ ಶ್ರುತಿಗಳು ಹೇಳುವ ನಿತ್ಯಭಗವದ್ಧರ್ಮಗಳನ್ನು ಗ್ರಹಿಸಬೇಕು), [1] ಅನಾದೇಃ – ಅನಾದಿ

---

ಬಲದಿಂದಲೇ ಗಗನಾದಿಗಳೂ ನಾಶವಿಲ್ಲದ ನಿತ್ಯವಸ್ತುಗಳೆಂದು ಸಿದ್ಧವಾಗುತ್ತದೆ (೧೩೭). ಅಣುತ್ವ, ಈಶತ್ವ, ವಶತ್ವ ಮುಂತಾದ ಭಗವದ್ಧರ್ಮಗಳಿಗೆ, ಮತ್ತು ಪರಮ ಚೇತನನಾದ ಪರಮಾತ್ಮನಿಗೆ, ಹಾಗೂ 'ಅವಿನಾಶೀ ವಾ ಅರೇಯ-

---

[1] ಬ್ರಹ್ಮನಿಗೆ ಚಿನ್ಮಾತ್ರತ್ವವನ್ನು ಮಾತ್ರ ಅಂಗೀಕರಿಸಿ, ಶ್ರುತಿಗಳನ್ನು ಅನಾದರಿಸಿ, ಭಾವರೂಪಭಗವದ್ಧರ್ಮಗಳಿಗೂ, ಸಮಸ್ತಭಾವರೂಪ ಜಗತ್ತಿಗೂ ನಾಶವನ್ನು ಅಂಗೀಕರಿಸಿದರೆ, ಆಗ ಐಕ್ಯವೇ ನಷ್ಟವಾಗಿ, ಐಕ್ಯದ ಅಭಾವವೇ ಅವಶಿಷ್ಟವಾಗುವುದರಿಂದ, ಪರನ ಅನಿಷ್ಟಕ್ಕೆ ಪರಿಹಾರವೇ ಉಳಿಯುವುದಿಲ್ಲ. ಧರ್ಮಧರ್ಮಿಗಳ ಅಭೇದವನ್ನು ಅಂಗೀಕರಿಸಿ, ಐಕ್ಯವನ್ನು ರಕ್ಷಿಸಿಕೊಳ್ಳುವುದೂ ಶಕ್ಯವಿಲ್ಲ; ಹಾಗೆ ಅಭೇದವನ್ನು ಅಂಗೀಕರಿಸಿದರೆ, ಅದು ಮೃತಸಂಜೀವಿನಿಯಿಂದ ಎಂಬಂತೆ, ಭಗವದ್ಧರ್ಮಗಳು ಮತ್ತು ಅಲ್ಪಜ್ಞತ್ವಾದಿ ಜೀವಧರ್ಮಗಳೂ ಪುನರುಜ್ಜೀವನಗೊಳ್ಳುತ್ತವೆ; ರಾಮಭೃತ್ಯರು ರಾಕ್ಷಸರನ್ನೆಂಬಂತೆ, ಈ ಅಭೇದದ ಅಂಗೀಕಾರವು ಐಕ್ಯವನ್ನೇ ನಾಶಮಾಡುತ್ತದೆ; ಹೀಗೆ, ಜಗನ್ನಾಶಕ್ಕಾಗಿ ಯತ್ನಮಾಡಿದ ತನ್ನ (ಪರನ) ನಾಶವೇ ಸಂಭವಿಸುತ್ತದೆ; ಪರಕೀಯನ ಈ ಆಶೆಯು ದುರಾಶೆಯೆಂದೇ ಸಿದ್ಧವಾಗುತ್ತದೆ.

ಯಾದ್ದರಿಂದ, ಅವಿನಾಶಿತ್ವಾತ್–ನಾಶರಹಿತವಾದ್ದರಿಂದಲೂ (ಭಗವದ್ಧರ್ಮಗಳು ನಿತ್ಯವಾದ್ದರಿಂದ – ತದ್ವಿರುದ್ಧಧರ್ಮಗಳುಳ್ಳ ಜೀವನಿಂದ ಭಿನ್ನನಾದ್ದರಿಂದಲೂ), ಜೀವಬ್ರಹ್ಮೈಕತಾಶಾ–ಜೀವಬ್ರಹ್ಮೈಕ್ಯವೆಂಬ (ಪರನ) ಆಶೆಯು, ತವ–ನಿನಗೆ (ನಿನ್ನಂತೆಯೇ), ದುರಾಶಾ ಏವ–ದುಷ್ಟವಾದ (ದುಸ್ಸಾಧ್ಯವಾದ) ಆಶೆಯೇ, ಅಭವತ್–ಆಯಿತು.

**ಅನಾದಿಭಾವಭೂತಾನಾಮೇತೇಷಾಂ ಪರಮಾತ್ಮವತ್ ।**
**ಅಜ್ಞಾನೋಪಾದಾನತಾ ತೇ ನ ಮಿಥ್ಯಾತ್ವಂ ಚ ಯುಕ್ತಿಮತ್ ॥೧೩೯॥**

ಪರಮಾತ್ಮವತ್ – ಬ್ರಹ್ಮನಂತೆ, ಅನಾದಿಭಾವಭೂತಾನಾಂ – ಅನಾದಿ ಭಾವವಸ್ತುಗಳಾದ, ಏತೇಷಾಂ–ಇವುಗಳಿಗೆ (ಜಗದಾದಿ ಭಾವಪದಾರ್ಥಗಳಿಗೆ), ತೇ–ನಿನ್ನ ಮತದಲ್ಲಿ, ಅಜ್ಞಾನೋಪಾದಾನತಾ – ಅಜ್ಞಾನವೇ ಉಪಾದಾನ ವೆಂಬುದೂ, ಮಿಥ್ಯಾತ್ವಂ ಚ-(ಆ ಕಾರಣದಿಂದ) ಮಿಥ್ಯಾತ್ವವೂ, ನ ಯುಕ್ತಿಮತ್– ಯುಕ್ತಿಯುಕ್ತವಾಗುವುದಿಲ್ಲ.

**ಸಾದೇರನಾದೇಃ ಸರ್ವಸ್ಯ ಬ್ರಹ್ಮಣೋನ್ಯಸ್ಯ ವೈ ಕ್ಷಯಃ ।**
**ಉಕ್ತರೀತ್ಯಾ ಸ ನೈವಾಭೂದ್ಯೋ ಮಾಯಾವಾದಿನಾಂ ಮತಃ ॥೧೪೦॥**

ಬ್ರಹ್ಮಣಃ – ಬ್ರಹ್ಮನಿಂದ, ಅನ್ಯಸ್ಯ – ಭಿನ್ನವಾದ, ಸರ್ವಸ್ಯ – ಸಮಸ್ತ, ಸಾದೇಃ–ಸಾದಿಯಾದ (ಉತ್ಪತ್ತಿಯುಳ್ಳ), ಅನಾದೇಃ–ಅನಾದಿಯಾದ ವಸ್ತು

---

ಮಾತ್ರಾನುಚ್ಛಿತ್ತಿಧರ್ಮಾ' ಎಂಬ ಶ್ರುತಿಯಂತೆ, ಜೀವಧರ್ಮಗಳು ಮತ್ತು ಜೀವ ಚೇತನರಿಗೆ ಸಹ ನಾಶವಿಲ್ಲ; ಹೀಗಿರುವಾಗ ಜೀವಬ್ರಹ್ಮೈಕ್ಯದ ನಿನ್ನ ಆಶೆಯು, ದುರಾಶೆಯೇ ಆಗುತ್ತದೆ ; ಈ ಆಶೆಯು ಐಕ್ಯ ಸಾಧನೆಯ ಆಶೆಯು, ದುಷ್ಟವೂ (ಅನರ್ಥ ಪ್ರಾಪಕವೂ) ದುಃಸಾಧ್ಯವೂ, ಎಂದು ಸಿದ್ಧವಾಗುತ್ತದೆ (೧೩೮). ಆದ್ದರಿಂದ ಅನಾದಿಗಳಾದ ಕಾಲ, ಆಕಾಶಾದಿಗಳಿಗೆ (ಭಾವಪದಾರ್ಥಗಳಾದ) ಮತ್ತು ಜಗದಾದಿವಸ್ತುಗಳಿಗೆ, (ಪ್ರಕೃತಿ ಪ್ರಾಕೃತವಾದ್ದರಿಂದ ಮೂಲರೂಪದಿಂದ ಅವೂ ಅನಾದಿಯೇ ಸರಿ), ಪರಮಾತ್ಮನಂತೆ ಸತ್ಯತ್ವವಿರುವುದರಿಂದ, ಅಜ್ಞಾನವೇ ಉಪಾದಾನವೆಂಬುದೂ, ಅತಏವ ಆ ಎಲ್ಲವೂ ಮಿಥ್ಯೆಯೆಂಬುದೂ ಯುಕ್ತಿ ಸಮ್ಮತವಾಗುವುದಿಲ್ಲ (೧೩೯). ಮಾಯಾವಾದಿಗಳ ಸಿದ್ಧಾಂತದಂತೆ, ಸಾದಿ (ಉತ್ಪತ್ತಿಯುಳ್ಳ) ಮತ್ತು ಅನಾದಿಯಾದ ಬ್ರಹ್ಮನಿಂದ ಭಿನ್ನವಾದ ಸರ್ವಕ್ಕೂ

ಗಳಿಗೆ, ಕ್ಷಯಃ—ನಾಶವು, ಯಃ—ಯಾವ, ಮಾಯಾವಾದಿನಾಂ—ಮಾಯಾವಾದಿಗಳ, ಮತಃ—ತಾತ್ಪರ್ಯವೋ, ಸಃ—ಅದು (ಸರ್ವನಾಶವು), ಉಕ್ತರೀತ್ಯಾ—(ಸಂಕರ್ಷಣ ಮುಖಾಗ್ನಿಯಿಂದ ಇತ್ಯಾದಿ ಹೇಳಿದ ರೀತಿಯಿಂದ), ನೈವಾಭೂತ್—ಸಂಭವಿಸುವುದೇ ಇಲ್ಲ (ಆಗಲೇ ಇಲ್ಲ).

**ಸಾದ್ಯದೃಷ್ಟೈಃ ಸಹಾನ್ಯಸ್ಯ ಕಾರ್ಯಮಾತ್ರಸ್ಯ ಚ ಕ್ಷಯೇ ।**
**ಯಃ ಪುನಃ ಕಾರಣಾಭಾವಾತ್ ಸೃಷ್ಟ್ಯಭಾವಸ್ತು ಕಥ್ಯತೇ ।**
**ಚಿತ್ರಂ ಸ ತಾರ್ಕಿಕೋಕ್ತ್ಯೋಽಪಿ ಪ್ರತಿತರ್ಕಹತೋ ಭವೇತ್ ॥೧೪೧॥**

ಬ್ರಹ್ಮವ್ಯತಿರಿಕ್ತ ಸಾದ್ಯನಾದಿ ಸರ್ವಜಗನ್ನಾಶವೆಂಬ ಮಾಯಾವಾದಿಗೆ ಅಭಿಮತವಾದ ಪ್ರಕ್ರಿಯೆಯನ್ನು ದೂಷಿಸಿ, ಅದೃಷ್ಟಸಹಿತವಾಗಿ ಉತ್ಪನ್ನವಾದ ಸರ್ವಜಗತ್ತಿನ ನಾಶವನ್ನೂ, ಪುನಃ ಕಾರ್ಯಮಾತ್ರದ ಉತ್ಪತ್ತಿಯನ್ನೂ ಸರ್ವಥಾ ನಿರಾಕರಿಸುವ ತಾರ್ಕಿಕನ ಸರ್ವನಾಶಪ್ರಕ್ರಿಯೆಯನ್ನೂ ಈಗ ದೂಷಿಸುತ್ತಾರೆ:—

ಸಾದ್ಯದೃಷ್ಟೈಃ ಸಹ—ಅದೃಷ್ಟಸಹಿತವಾದ ಉತ್ಪತ್ತಿಯುಳ್ಳ ಜಗತ್ತಿನ, ಅನ್ಯಸ್ಯ ಕಾರ್ಯಮಾತ್ರಸ್ಯ—ಇತರಗಳಾದ ಮಹೀಪರ್ವತಾದಿಕಾರ್ಯಮಾತ್ರದ, ಕ್ಷಯೇ ಚ — ನಾಶವಾದಲ್ಲಿ, ಕಾರಣಾಭಾವಾತ್ — ಕಾರ್ಯೋತ್ಪತ್ತಿಗೆ ಕಾರಣೀಭೂತವಾದ ಅದೃಷ್ಟವೇ ಇಲ್ಲದ್ದರಿಂದ, ಸೃಷ್ಟ್ಯಭಾವಸ್ತು—ಸೃಷ್ಟಿಯ ಅಭಾವವನ್ನೇ, ಯಃ—ಯಾವನು (ತಾರ್ಕಿಕನು), ಕಥ್ಯತೇ—ಹೇಳುವನೋ, ಸಃ—ಅದು (ಸೃಷ್ಟಿಯ ಅಭಾವವು), ಚಿತ್ರಂ—ಆಶ್ಚರ್ಯವು, ತಾರ್ಕಿಕೋಕ್ತಃ ಅಪಿ—ತಾರ್ಕಿಕನಿಂದ ಹೇಳಲ್ಪಟ್ಟರೂ (ಹೇಳುವವನು ತಾರ್ಕಿಕನೇ ಆದರೂ—ಸಾಮಾನ್ಯವಾಗಿ

---

ನಾಶವಿದೆ; ಜಗನ್ನಾಶದ ಪ್ರಕಾರವನ್ನು ಈ ಹಿಂದೆ ನಿರೂಪಿಸಿದಂತೆ (ಸಂಕರ್ಷಣ ಮುಖಾಗ್ನಿಯಿಂದ ಇತ್ಯಾದಿ) ಅಭಿಪ್ರೇತವಾದ ಸರ್ವನಾಶವು ಸಿದ್ಧವಾಗಲೇ ಇಲ್ಲ (ಆಗುವುದಿಲ್ಲ) (೧೪೦). ಪ್ರಲಯದಿಂದ ಅದೃಷ್ಟ ಸಹಿತವಾದ ಸರ್ವಜಗತ್ತಿನ ನಾಶವನ್ನು ಹೇಳುವ (ಅದೃಷ್ಟ ಸಹಿತವಾದ ಸರ್ವಕಾರ್ಯಮಾತ್ರ ನಾಶವನ್ನು ಹೇಳುವ, ಪುನಃ ಕಾರ್ಯೋತ್ಪತ್ತಿಯನ್ನು ನಿರಾಕರಿಸುವ ತಾರ್ಕಿಕನ ಯುಕ್ತಿಯೂ ಗ್ರಾಹ್ಯವಲ್ಲ; ಪುನಃ ಸೃಷ್ಟಿಯ ಅಭಾವವನ್ನೇ ಹೇಳುವ ಆತನ ಯುಕ್ತಿಯೂ,

ತರ್ಕಬದ್ಧವಾಗಿಯೇ ನುಡಿಯುವನೆಂಬ ಪ್ರತೀತಿಯಿದ್ದರೂ), ಪ್ರತಿತರ್ಕಹತಃ– ಪ್ರತಿತರ್ಕದಿಂದ (ವಿರೋಧಿಸುವ ತರ್ಕದಿಂದ) ಭಗ್ನಗೊಳ್ಳುವುದು, ಭವೇತ್– ಆಗುತ್ತದೆ.

**ಬ್ರಹ್ಮಣಃ ಶತವರ್ಷಾಖ್ಯಪರಾಂತೇ ಯೋ ಮಹಾಲಯಃ ।**
**ಸರ್ವಕಾರ್ಯಕರಂಡಸ್ಯ ಬ್ರಹ್ಮಾಂಡಸ್ಯಾಸ್ಯ ಸಪ್ತಭಿಃ ॥ ೧೪೨ ॥**

**ಯುಕ್ತಸ್ಯಾವರಣೈರಸ್ಮಿನ್ ಜಾಯಮಾನೇ ಪುನಃ ಪುನಃ ।**
**ಅನಾದಿತೋಽನುವೃತ್ತೇ ಚ ಸ್ಪಷ್ಟಂ ಸೃಷ್ಟ್ಯಂತರಾನ್ವಿತೇ ॥ ೧೪೩ ॥**

**ಕಾರ್ಯಮಾತ್ರಲಯೋ ತಾವತ್ ಕಾರ್ಯಾದೃಷ್ಟಸ್ಯ ಸರ್ವಥಾ ।**
**ಲಯೋ ನಾಜಾಯತ ಕಿಲ ಕಥಂ ಸೋಂತೇ ಭವಿಷ್ಯತಿ ॥ ೧೪೪ ॥**

ಬ್ರಹ್ಮಣಃ–ಬ್ರಹ್ಮದೇವನ, ಶತವರ್ಷಾಖ್ಯಪರಾಂತಃ–ನೂರುವರ್ಷಗಳೆಂಬ ಪರಾಂತಕಾಲವೆಂಬ, ಯಃ ಮಹಾಲಯಃ – ಯಾವ ಮಹಾಪ್ರಲಯವೋ, ಸರ್ವಕಾರ್ಯಕರಂಡಸ್ಯ – ಸಮಸ್ತಕಾರ್ಯಗಳ (ಕರಂಡ) ಪಾತ್ರೆಯಂತಿರುವ, ಬ್ರಹ್ಮಾಂಡಸ್ಯ–ಬ್ರಹ್ಮಾಂಡದ, (ಮತ್ತು) ಸಪ್ತಭಿಃ–ಏಳು, ಆವರಣೈಃ–ಬಹಿರಾವರಣಗಳಿಂದ, ಯುಕ್ತಸ್ಯ ಅಸ್ಯ – ಕೂಡಿರುವ ಈ ಬ್ರಹ್ಮಾಂಡದ (ಲಯವು) ಅಸ್ಮಿನ್–ಮಹಾಪ್ರಲಯದಲ್ಲಿ, ಜಾಯಮಾನೇ–ಆಗುತ್ತಿರಲು, ಪುನಃ ಪುನಃ–

---

ಪ್ರತಿತರ್ಕದಿಂದ ಭಗ್ನವಾಗುತ್ತದೆ (ಹತವಾಗುತ್ತದೆ); ತಾರ್ಕಿಕನ ಮತವು ಇದರಿಂದಾಗಿ ಅತಿ ವಿಚಿತ್ರವೇ ಸರಿ (೧೪೧). ಬ್ರಹ್ಮದೇವನ ನೂರುವರ್ಷಕಾಲವೆಂಬ ಪರಾಂತ್ಯ ಸಮಯದಲ್ಲಿ. ಸಂಭವಿಸುವ ಪ್ರಲಯದಲ್ಲಿ, ಸಮಸ್ತ ಕಾರ್ಯಗಳ ಕರಂಡದಂತಿರುವ (ಸಕಲ ಕಾರ್ಯಗಳ ಅವಸ್ಥಿತಿಗೆ ಪಾತ್ರವಾದ,) ಸಪ್ತಬಹಿರಾವರಣ ಸಹಿತವಾದ ಬ್ರಹ್ಮಾಂಡವು, ನಾಶಹೊಂದುತ್ತದೆ; ಹೀಗೆ ನಷ್ಟವಾದ ಬ್ರಹ್ಮಾಂಡವು ಪುನಃ ಪುನಃ (ಪ್ರತಿಮಹಾಪ್ರಲಯದ ನಂತರದ ಕಾಲದಲ್ಲಿ) ಸೃಷ್ಟವಾಗುತ್ತದೆ; ಹೀಗೆಯೇ ಸೃಷ್ಟಿವಿನಾಶಗಳು ಅನಾದಿಕಾಲದಿಂದ ನಡೆದಿರುತ್ತವೆ (ಹೀಗೆಂಬುದು ಶ್ರುತಿಸಿದ್ಧವೂ ಆಗಿದೆ); ಪುನಃ ಸೃಷ್ಟಿರೂಪದ ಕಾರ್ಯಕ್ಕೆ ಕಾರಣವಾದ ಅದೃಷ್ಟವು ಸರ್ವಾತ್ಮನಾ ನಾಶವಾಗುವುದಿಲ್ಲ–ಕಾರ್ಯಮಾತ್ರವು ನಷ್ಟಹೊಂದುತ್ತದೆ; ಹಾಗಲ್ಲದಿದ್ದರೆ (ಅದೃಷ್ಟವೂ ಲಯಹೊಂದಿದರೆ) ಪುನಃ

ಮತ್ತೆ ಮತ್ತೆ, ಸ್ಪಷ್ಟಂ–ಸಂಶಯಕ್ಕೆಡೆಯಿಲ್ಲದೇ, ಸೃಷ್ಟ್ಯಂತರಾನ್ವಿತೇ–ಅನ್ಯಸೃಷ್ಟಿಯಿಂದ ಯುಕ್ತವಾಗಿದ್ದು, ಅನಾದಿತಃ–ಅನಾದಿಕಾಲದಿಂದ (ಪ್ರತಿಮಹಾಪ್ರಲಯಾನಂತರ), ಅನುವೃತ್ತೇ–ನಡೆದುಬರುತ್ತಿರಲು, ಕಾರ್ಯಮಾತ್ರಲಯೇ–ಕಾರ್ಯಮಾತ್ರವು ಲಯವಾಗುತ್ತಿರಲು, ತಾವತ್ – ಅಷ್ಟುಮಾತ್ರದಿಂದ, ಕಾರ್ಯಾದೃಷ್ಟಸ್ಯ – ಕಾರ್ಯಕಾರಣವಾದ ಅದೃಷ್ಟದ, ಲಯಃ – ಲಯವು, ಸರ್ವಥಾ – ಸರ್ವಾತ್ಮನಾ (ಸರ್ವಪ್ರಕಾರದಿಂದ), ನ ಅಜಾಯತ ಕಿಲ – ಉಂಟಾಗಲಿಲ್ಲವೆಂಬುದು, ಸ್ಪಷ್ಟವು (ಅನ್ಯಥಾ ಪುನಃ ಸೃಷ್ಟಿಯು ಹೇಗೆ ಸಂಭವಿಸುತ್ತದೆ?); ಸಃ–ಅದು (ಸರ್ವ ಅದೃಷ್ಟಲಯವು), ಅಂತೇ–ಬ್ರಹ್ಮಲಯದಲ್ಲಿ, ಕಥಂ ಭವಿಷ್ಯತಿ–ಹೇಗೆ ಉಂಟಾಗುತ್ತದೆ? (ಶಕ್ಯವಿಲ್ಲ).

**ನ ಹ್ಯೇತೇಭ್ಯೋ ಲಯೇಭ್ಯಶ್ಚ ಸ್ಯಾದನ್ಯೋಽಭ್ಯಧಿಕೋ ಲಯಃ ।**
**ಯೇಭ್ಯೋ ಬ್ರಹ್ಮಾದಿದೇವೇಭ್ಯೋ ಜ್ಞಾನೀ ಕೋಽಭ್ಯಧಿಕೋ ವದ ॥ ೧೪೫ ॥**

ಏತೇಭ್ಯಃ – ಈ, ಲಯೇಭ್ಯಃ – ಮಹಾಪ್ರಲಯಗಳಿಂದ, ಅಭ್ಯಧಿಕಃ – ಅಧಿಕವಾದ, ಅನ್ಯಃ–ಬೇರೆ, ಲಯಃ–ಪ್ರಲಯವು, ನ ಸ್ಯಾತ್–ಇರುವುದಿಲ್ಲ, ಹಿ–ಶ್ರುತಿಸಿದ್ಧವು; ಯೇಭ್ಯಃ – (ಅನಾದಿಕಾಲದಿಂದ ಈಗಿನ ಬ್ರಹ್ಮನ ವರೆಗೆ) ಅನುಭವಸಿದ್ಧರಾದ, ಬ್ರಹ್ಮಾದಿದೇವೇಭ್ಯಃ–ಬ್ರಹ್ಮಾದಿದೇವತೆಗಳಿಂದ, ಅಭ್ಯಧಿಕಃ–ಅಧಿಕನಾದ, ಜ್ಞಾನೀ–ಜ್ಞಾನಿಯು, ಕಃ–ಯಾವನು, ವದ–ಹೇಳು.

**ಕಾಲಸ್ಯಾಂತ್ಯಸ್ಯ ಶೃಂಗಂ ನ ನಾಪಿ ತದ್ಗಲಯಸ್ಯ ಚ ।**
**ಅದೃಷ್ಟಕಲ್ಪನಾದೋಷೋ ಹ್ಯದೃಷ್ಟಂ ಕಲ್ಪಯತ್ಯಹೋ ॥ ೧೪೬ ॥**

ಅಂತ್ಯಸ್ಯ–ಅಂತ್ಯವೆಂಬ, ಕಾಲಸ್ಯ– ಕಾಲಕ್ಕೆ, ಶೃಂಗಂ ನ – ಕೋಡಿಲ್ಲ (ಕೊನೆಯಿಲ್ಲ–ಯಾವ ವಿಶೇಷವೂ ಇಲ್ಲ); ಚ–ಹಾಗೂ, ತದ್ಗಲಯಸ್ಯ ಚ–

---

ಸೃಷ್ಟಿಯು ಹೇಗೆ ಸಂಭವಿಸುತ್ತದೆ? ಪ್ರಲಯದಲ್ಲಿ, ಅದೃಷ್ಟದ ಲಯವು ಹೇಗಾಗುತ್ತದೆ? (೧೪೨–೧೪೫). ಅಂತ್ಯವೆಂಬ ಕಾಲಕ್ಕೆ ಕೊನೆಯಿಲ್ಲ; ಹಾಗೂ ಆಗ ಸಂಭವಿಸುವ ಪ್ರಲಯಕ್ಕೂ ಕೊನೆಯಿಲ್ಲ; ಅದೃಷ್ಟವನ್ನು ಕಲ್ಪಿಸುವುದೆಂಬುದು ದೋಷವಾದರೆ, ಅನ್ಯಜಗತ್ತಿನ ಸೃಷ್ಟಿಹೇತುವಾದ ಅದೃಷ್ಟವನ್ನು, ಅದೇ

ಆಗ ಸಂಭವಿಸುವ ಪ್ರಲಯಕ್ಕೂ (ಯಾವ ವಿಶೇಷವೂ) ಇಲ್ಲ; ಅದೃಷ್ಟಕಲ್ಪನಾ ದೋಷಃ–(ಸೃಷ್ಟಿಗೆ ಅವಶ್ಯವೆಂಬ) ಅದೃಷ್ಟವನ್ನು ಕಲ್ಪಿಸುವುದೆಂಬ ದೋಷವು, ಅದೃಷ್ಟಂ–(ಮತ್ತೊಂದು ಜಗತ್ತಿನ ಸೃಷ್ಟಿಜನಕವಾದ) ಅದೃಷ್ಟಂ–ಅದೃಷ್ಟವನ್ನು, ಕಲ್ಪಯತಿ – ಕಲ್ಪಿಸುತ್ತದೆ (ಕಲ್ಪನೆಯಲ್ಲಿ ಹೇತುವಾಗುತ್ತದೆ); ಅಹೋ – ಆಶ್ಚರ್ಯವು.

**ವಿಮತಃ ಪ್ರಲಯೋಽದೃಷ್ಟಶೇಷವಾನ್ ಪ್ರಲಯತ್ವತಃ ।**
**ಯಥಾಯಂ ಪ್ರಲಯಶ್ಚೇತಿ ಯುಕ್ತಿಂ ಕೋಽತ್ಯೇತಿ ತತ್ಸತಾಂ ॥೧೪೭॥**

ಅನುಮಾನರಚನೆಯಿಂದ, ಕಲ್ಪನಾಪ್ರಕಾರವನ್ನು ನಿರೂಪಿಸುತ್ತಾರೆ:—

ವಿಮತಃ–ವಿವಾದ ವಿಷಯವಾದ, ಪ್ರಲಯಃ – ಪ್ರಲಯವು, ಅದೃಷ್ಟ ಶೇಷವಾನ್–(ಅನ್ಯಜಗತ್ಸೃಷ್ಟಿಗೆ ಕಾರಣವಾಗುವ ಅದೃಷ್ಟಶೇಷವುಳ್ಳದ್ದೇ ಆಗಿರುವುದು); ಪ್ರಲಯತ್ವತಃ – ಪ್ರಲಯತ್ವವೆಂಬ ಕಾರಣದಿಂದ (ಹೇತುವಿನಿಂದ), ಯಥಾ–ಹೇಗೆ, ಅಯಂ–ಈ, ಪ್ರಲಯಶ್ಚ–ಪ್ರಲಯದಂತೆಯೇ (ಹಿಂದಿನ ಪ್ರಲಯದಂತೆ–ಅದರ ನಂತರ ಈ ಸೃಷ್ಟಿಯು ಆಗಿರುವುದರಿಂದ), ಇತಿ ಸತಾಂ ಯುಕ್ತಿಂ–ಹೀಗೆಂಬ ಸಜ್ಜನರ ಯುಕ್ತಿಯನ್ನು, ತತ್–ಆದ್ದರಿಂದ, ಕಃ–ಯಾರು, ಅತ್ಯೇತಿ–ಅತಿಕ್ರಮಿಸುವನು? (ಈ ಯುಕ್ತಿಯನ್ನು ಮೀರಲಾಗುವುದಿಲ್ಲ).

---

ಕಲ್ಪಿಸುತ್ತದೆ (ಆ ದೋಷವೇ ಅದೃಷ್ಟ ಕಲ್ಪನೆಗೆ ಕಾರಣವಾಗುತ್ತದೆ, ಆಶ್ಚರ್ಯವು (೧೪೬). ಅದೃಷ್ಟ ಕಲ್ಪನೆಯು ಸಯುಕ್ತಿಕವೇ ಆಗಿದೆ; (ಪ್ರಲಯದಲ್ಲಿ ಅದೃಷ್ಟ ಶೇಷವಿರುತ್ತದೆಯೋ ಇಲ್ಲವೋ ಎಂಬ) ವಿವಾದಕ್ಕೆ ವಿಷಯವಾದ ಪ್ರಲಯವು, ಅದೃಷ್ಟಶೇಷವುಳ್ಳದ್ದು;[1] ಅದು ಪ್ರಲಯತ್ವವುಳ್ಳದ್ದಾದ್ದರಿಂದ, ಈ ಹಿಂದಿನ

---

[1] ಬ್ರಹ್ಮನು ತನ್ನ ಅದೃಷ್ಟ ವಿಶೇಷದಿಂದ ಸೃಷ್ಟಿಯಲ್ಲಿ ಪ್ರವೃತ್ತನಾಗಿ ಭಗವದಧೀನನಾಗಿ ಸೃಷ್ಟಿಮಾಡಿ, ಸೃಷ್ಟಿಕರ್ತನೆಂದು ಪ್ರಸಿದ್ಧನಾಗುವನು; ಹೀಗೆಯೇ ಇತರ ದೇವತೆಗಳೂ ತಂತಮ್ಮ ಕಾರ್ಯಗಳಲ್ಲಿ ತಮ್ಮ ಅದೃಷ್ಟಕ್ಕನುಸರಿಸಿಯೇ ಪ್ರವೃತ್ತರಾಗುತ್ತಾರೆ; ಸರ್ವ ಜೀವರೂ ಭೌತಿಕ ದೇಹವನ್ನು ಹೊಂದಿ, ಈ ಸೃಷ್ಟಿಯಲ್ಲಿ ಹುಟ್ಟಿಬಂದು, ಯಥಾಯೋಗ್ಯವಾದ ಕಾರ್ಯಗಳಲ್ಲಿ ತೊಡಗುವುದೂ ಅವರವರ ಪೂರ್ವಾದೃಷ್ಟಾನುಸಾರವಾಗಿಯೇ ಆಗಿರುತ್ತದೆ; ಸರ್ವಚೇತನರ ಅದೃಷ್ಟವೂ ನಷ್ಟವಾದರೆ ಪ್ರಲಯ ನಂತರ ಪುನಃ ಸೃಷ್ಟಿಗೆ ಕಾರಣವೇ ಇಲ್ಲದಂತಾಗುತ್ತದೆ.

**ಕಿಂ ಚಾಂತ್ಯಾ ಸಾಪಿ ಸೃಷ್ಟಿಸ್ತೇ ಸರ್ವಸೃಷ್ಟ್ಯುಪಮಾ ಭವೇತ್ ।**
**ಜ್ಞಾನಿಮಾತ್ರಾವೃತಾ ಸಾ ನ ಪಶುಪಕ್ಷ್ಯಾದಿಸಂವೃತಾ ।**
**ತಸ್ಯಾಂ ಚ ಜ್ಞಾನಿಮಾತ್ರಸ್ಯಾದೃಷ್ಟನಾಶಸ್ತು ಪೂರ್ವವತ್ ॥ ೧೪೬ ॥**

ಬೇರೆ ಯುಕ್ತಿಯಿಂದಲೂ ತಾರ್ಕಿಕನ ಸರ್ವನಾಶವನ್ನು ದೂಷಿಸುತ್ತಾರೆ :—

ಕಿಂ ಚ–ಮತ್ತೇನೆಂದರೆ, ಸಾ ಅಂತ್ಯಾ–ಆ ಕಡೆಯ, ಸೃಷ್ಟಿಃ ಅಪಿ–ಸೃಷ್ಟಿಯೂ ಸಹ, ತೇ–ನಿನ್ನಂತೆಯೇ, ಸರ್ವಸೃಷ್ಟ್ಯುಪಮಾ–ಎಲ್ಲ ಸೃಷ್ಟಿಗಳ ಸದೃಶವು, ಭವೇತ್–ಆಗಿರುತ್ತದೆ; ಸಾ–ಆ ಕಡೆಯ ಸೃಷ್ಟಿಯು (ಯಾವುದರ ಪ್ರಲಯದಲ್ಲಿ ಅದೃಷ್ಟವೂ ನಷ್ಟವಾಗಿ ಸೃಷ್ಟಿಕಾರಣವೇ ಉಳಿಯುವುದಿಲ್ಲವೋ ಆ ಸೃಷ್ಟಿಯು), ಜ್ಞಾನಿಮಾತ್ರಾವೃತಾ ನ–ಜ್ಞಾನಿಗಳನ್ನು ಮಾತ್ರ ಒಳಗೊಂಡದ್ದು ಅಲ್ಲ, ಪಶುಪಕ್ಷ್ಯಾದಿ ಸಂವೃತಾ–ಪಶುಪಕ್ಷಿ ಮೊದಲಾದ ಅಜ್ಞಪ್ರಾಣಿಗಳನ್ನುಳ್ಳದೂ ಆಗಿದೆ; ತಸ್ಯಾಂ–(ನಿನಗೆ ಅಭಿಮತವಾದ ಸರ್ವನಾಶದ ಪೂರ್ವದ) ಸೃಷ್ಟಿಯಲ್ಲಿ, ಜ್ಞಾನಿಮಾತ್ರಸ್ಯ – (ಸಕಲ) ಅಪರೋಕ್ಷಜ್ಞಾನಿ ಸಮುದಾಯದ, ಅದೃಷ್ಟನಾಶಸ್ತು – ಅದೃಷ್ಟನಾಶವಾದರೂ, ಪೂರ್ವವತ್ – ಹಿಂದಿನ ಸೃಷ್ಟಿಯಂತೆ ಮಾತ್ರವಾಗಿರುತ್ತದೆ (ಹಿಂದಿನ ಪ್ರಲಯದಂತೆ ಜ್ಞಾನಿಗಳ ಅದೃಷ್ಟಮಾತ್ರಕ್ಕೆ ನಾಶವುಂಟು).

---

ಪ್ರಲಯದಂತೆ, ಎಂಬ ಅನುಮಾನವನ್ನು (ಸಜ್ಜನ ಸಮ್ಮತವಾದ ಯುಕ್ತಿಯನ್ನು) ಯಾವನು ಅತಿಕ್ರಮಿಸುವುದಕ್ಕೆ (ಪ್ರತಿ ಹೇಳಲು) ಶಕ್ತನಾಗುತ್ತಾನೆ? (ಯಾರೂ ಇಲ್ಲ) (೧೪೭). ನಿನ್ನಂತೆ ಕಡೆಯ ಸೃಷ್ಟಿಯಾದುದು, ಸರ್ವ ಇತರ ಸೃಷ್ಟಿಗಳಿಗೆ ಉಪಮಾನವೇ ಉದಾಹರಣೆಯೇ ಆಗುತ್ತದೆ; ಪ್ರಲಯದಲ್ಲಿ ನಷ್ಟಹೊಂದುವ ಆ ಸೃಷ್ಟಿಯು, ಅಪರೋಕ್ಷಜ್ಞಾನಿಗಳನ್ನು ಮಾತ್ರವುಳ್ಳದ್ದಲ್ಲ—ಪಶುಪಕ್ಷ್ಯಾದಿ ಅಜ್ಞಾನಿ ಚೇತನರೂ ಹೇರಳವಾಗಿರುತ್ತಾರೆ; ಆ ಸೃಷ್ಟಿಯ ಪ್ರಲಯದಲ್ಲಿ ಅಪರೋಕ್ಷ ಜ್ಞಾನಿಗಳ ಅದೃಷ್ಟವು ಮಾತ್ರ ನಾಶವಾಗುತ್ತದೆ; ಹಿಂದಿನ ಪ್ರಲಯ

**ಸರ್ವಾದೃಷ್ಟವಿನಾಶಸ್ತು ಹೇತ್ವಭಾವಾನ್ನ ಯೌಕ್ತಿಕಃ ।**
**ತಸ್ಮಾದ್ವೈದಿಕತರ್ಕಾಗ್ರೇ ಶುಷ್ಕತರ್ಕೋ ನ ಶೋಭತೇ ॥ ೧೪೯ ॥**

ಸರ್ವಾದೃಷ್ಟವಿನಾಶಃ ತು–ಸರ್ವರ ಸರ್ವಅದೃಷ್ಟದ ನಾಶವಾಗುವುದೆಂದರೆ, ಹೇತ್ವಭಾವಾತ್–ಪುನಃ ಸೃಷ್ಟಿಗೆ ಹೇತುವಿಲ್ಲದಂತಾಗುವುದರಿಂದ, ನ ಯೌಕ್ತಿಕಃ–ಯುಕ್ತಿಸಮ್ಮತ (ಸಿದ್ಧ) ವಲ್ಲ; ತಸ್ಮಾತ್ – ಆದ್ದರಿಂದ, ವೈದಿಕತರ್ಕಾಗ್ರೇ – ವೇದಾನುಕೂಲಯುಕ್ತಿಯ ಮುಂದೆ, ಶುಷ್ಕತರ್ಕಃ–(ಅದಿಲ್ಲದ) ಕೇವಲ ತರ್ಕವು, ನ ಶೋಭತೇ–ಶೋಭಿಸುವುದಿಲ್ಲ.

**ಸೂರ್ಯಾಚಂದ್ರಮಸೌ ಧಾತಾ ಯಥಾ ಪೂರ್ವಮಕಲ್ಪಯತ್ ।**
**ಇತಿ ಶ್ರುತಿರನಾದ್ಯಂತಕಾಲೀನಾನ್ವಗ್ರಹೀದ್ಧಿ ನಃ ॥ ೧೫೦ ॥**

ಸೂರ್ಯಾಚಂದ್ರಮಸೌ – ಸೂರ್ಯಚಂದ್ರರನ್ನು (ಈ ಮೊದಲಾದ ಜಗತ್ತನ್ನು), ಧಾತಾ–ಸೃಷ್ಟಿಕರ್ತನೂ (ಪೋಷಕನೂ) ಆದ ಭಗವಂತನು, ಯಥಾಪೂರ್ವಂ–ಹಿಂದಿನಂತೆ (ಹಿಂದಿನ ಕಲ್ಪದಂತೆ), ಅಕಲ್ಪಯತ್–ಸೃಷ್ಟಿಸಿದನು; ಇತಿ ಶ್ರುತಿಃ–ಹೀಗೆಂದು ಹೇಳುವ ಶ್ರುತಿಯು, ನಃ–ನಮ್ಮನ್ನು (ಸಿದ್ಧಾಂತವನ್ನು), ಅನಾದ್ಯನಂತಕಾಲೀನಾನ್ – ಅನಾದ್ಯನಂತಕಾಲದ ಸೃಷ್ಟ್ಯಾದಿಗಳನ್ನು (ಸರ್ವಕಾಲೀನವಾದ ಸೃಷ್ಟ್ಯಾದಿ ಪ್ರವಾಹವನ್ನು), ಅನ್ವಗ್ರಹೀತ್–ಅನುಗ್ರಹವನ್ನು ಮಾಡಿರುತ್ತದೆ (ಸಮರ್ಥಿಸುತ್ತದೆ–ಪ್ರಮಾಣೀಕರಿಸುತ್ತದೆ).

---

ಗಳಲ್ಲಿಯೂ ಹೀಗೆಯೇ ಸಂಭವಿಸಿರುತ್ತದೆ (೧೪೮). ಆದ್ದರಿಂದ, ಸರ್ವರ ಸರ್ವ ಅದೃಷ್ಟವೂ ನಾಶವಾಗುವುದೆಂದರೆ, ಪ್ರಲಯಾನಂತರದ ಸೃಷ್ಟಿಗೆ ಕಾರಣವಿಲ್ಲದಂತಾಗಿ ಯುಕ್ತಿಸಮ್ಮತವಾಗುವುದಿಲ್ಲ; ವೇದಾನುಕೂಲವುಳ್ಳ ತರ್ಕದ ಮುಂದೆ, ಶುಷ್ಕತರ್ಕವು ಶೋಭಿಸುವುದಿಲ್ಲ (೧೪೯). ಸೂರ್ಯಚಂದ್ರಾದಿ ಜಗತ್ತನ್ನು, ಭಗವಂತನು, ಪೂರ್ವ ಕಲ್ಪದಂತೆಯೇ, ಸೃಷ್ಟಿಸಿ, ರಕ್ಷಿಸುವನೆಂದು, ಶ್ರುತಿಯು ಅನಾದ್ಯನಂತ ಕಾಲದಿಂದಲೂ ಸೃಷ್ಟಿಯು ಹೀಗೆಯೇ ನಡೆಯುತ್ತಿರುವುದೆಂದು ಹೇಳುತ್ತದೆ; ಹೀಗೆ ಹೇಳಿ ಶ್ರುತಿಯು, ನನ್ನ ಸಿದ್ಧಾಂತವನ್ನೇ ಅನುಗ್ರಹಿಸುತ್ತದೆ

**ತತೋ ವೈಕುಂಠಮುಗಮುದ್ಭಾಸ್ವರಂ ತಮಸಃ ಪರಂ ।**
**ಯತ್ರ ನಾರಾಯಣಃ ಸಾಕ್ಷಾನ್ನ್ಯಾಸಿನಾಂ ಪರಮಾ ಗತಿಃ ॥ ೧೫೦ ॥**
**ಶಾಂತಾನಾಂ ನ್ಯಸ್ತದಂಡಾನಾಂ ಯತೋ ನಾವರ್ತತೇ ಯತಿಃ ।**
**ಇತಿ ಭಾಗವತೇ ವೈಕುಂಠಾಖ್ಯಾ ಭಗವತಃ ಪುರೀ ॥ ೧೫೨ ॥**

ವೈಕುಂಠಪ್ರಾಪ್ತಿಯಿಂದ ಭಿನ್ನವಾದ ಮೋಕ್ಷವಿಲ್ಲೆಂದು ಪ್ರಮಾಣವಚನದಿಂದ ಉಪಪಾದಿಸುತ್ತಾರೆ :—

ತತಃ – ಆನಂತರ (ಲಿಂಗದೇಹದ ವಿಸರ್ಜನೆಯನಂತರ, ವಾಸುದೇವನ ಉದರಪ್ರವೇಶಮಾಡಿ, ಧ್ಯಾನಾನಂದದಲ್ಲಿದ್ದು, ಪುನಃ ಸೃಷ್ಟಿಕಾಲಪ್ರಾಪ್ತವಾಗಲು), ವೈಕುಂಠಂ—ವೈಕುಂಠವನ್ನು, ತಮಸಃ ಪರಂ—ಅಪ್ರಾಕೃತವಾದ (ಲಕ್ಷ್ಮ್ಯಾತ್ಮಕವಾದ), ಭಾಸ್ವರಂ—ಸದಾ ಪ್ರಕಾಶಿತವಾದ (ಕತ್ತಲಿಲ್ಲದ) ಮುಕ್ತಸ್ಥಾನವನ್ನು, ಅಗಮತ್ – (ಮುಕ್ತಸಮುದಾಯವು) ಹೊಂದಿತು ; ಯತ್ರ – ಎಲ್ಲಿ (ಯಾವ ವೈಕುಂಠಾದಿ ಮುಕ್ತಲೋಕದಲ್ಲಿ), ನ್ಯಾಸಿನಾಂ—ಜ್ಞಾನಿಗಳ, ಪರಮಾ ಗತಿಃ—ಪರಮಪ್ರಾಪ್ಯನಾದ (ಗಮ್ಯಶ್ರೇಷ್ಠನಾದ), ಸಾಕ್ಷಾನ್ನಾರಾಯಣಃ – ಸ್ವಯಂ ನಾರಾಯಣನು (ಸದಾ ಪ್ರತ್ಯಕ್ಷನಾಗಿ ತೋರುವನೋ) ; ನ್ಯಸ್ತದಂಡಾನಾಂ—ಅಹಿಂಸೆಯೇ ಪರಮಧರ್ಮವಾಗಿವುಳ್ಳ, ಶಾಂತಾನಾಂ—ಸದಾ ಭಗವನ್ನಿಷ್ಠರಾದ ಮುಕ್ತರಿಗೆ (ಪರಮಾ ಗತಿಃ – ಗಮ್ಯಶ್ರೇಷ್ಠನೋ), (ಮತ್ತು) ಯತಃ—ಯಾವ ಲೋಕದಿಂದ, ಯತಿಃ—ಸ್ವಸ್ವರೂಪದ ಆವಿರ್ಭಾವವನ್ನು ಹೊಂದಿದ ಜ್ಞಾನಿಯು, (ಸಮರ್ಥಿಸುತ್ತದೆ) (೧೫೦). ಸೃಷ್ಟಿಕಾಲದಲ್ಲಿ ಪೂರ್ವದಂತೆ ಪ್ರಕಟವಾದ, ಪ್ರಕಾಶಮಾನವಾದ, ತಮೋವಿದೂರವಾದ, ವೈಕುಂಠವನ್ನು ಮುಕ್ತರು ಹೊಂದಿ ಅಲ್ಲಿ ಆನಂದ ವಿಶೇಷಗಳನ್ನು ಅನುಭವಿಸುವರು ; ಅಲ್ಲಿ ಜ್ಞಾನಿಗಳಿಂದ ಗಮ್ಯಶ್ರೇಷ್ಠನಾದ ಶ್ರೀ ನಾರಾಯಣನು ಮುಕ್ತರಿಗೆ ಪ್ರತ್ಯಕ್ಷನಾಗಿ ಸರ್ವದಾ ಇರುತ್ತಿರುವನು ; ಅಹಿಂಸೆಯೇ ಪರಮ ಧರ್ಮವಾಗಿವುಳ್ಳ ಭಗವನ್ನಿಷ್ಠ ಚಿತ್ತರಾದ ಸನ್ಯಾಸಿಗಳೂ (ಯತಿಗಳೂ) ಅಲ್ಲಿರುವರು ; ಮುಕ್ತರು ಯಾರೂ ವೈಕುಂಠದಿಂದ ತಿರಿಗಿ ಸಂಸಾರಕ್ಕೆ ಬರುವುದಿಲ್ಲ ; ಹೀಗೆ ಪರಮಮೋಕ್ಷ ಸ್ಥಾನವಾದ ವೈಕುಂಠ ನಾಮಕವಾದ ಭಗವತ್ಪುರಿಯು ಭಾಗವತದಲ್ಲಿ ವರ್ಣಿತವಾಗಿದೆ (೧೫೧–೧೫೨).

ಆವರ್ತತೇ ನ–ಹಿಂದಿರುಗುವುದಿಲ್ಲವೋ (ಆ ಲೋಕವನ್ನು ಹೊಂದುವವರು); ಇತಿ–ಎಂಬುದಾಗಿ, ಭಾಗವತೇ–ಭಾಗವತದಲ್ಲಿ, ವೈಕುಂಠಾಖ್ಯಾ–ವೈಕುಂಠವೆಂಬ, ಭಗವತಃ ಪುರೀ – ಭಗವಂತನ (ವೈಕುಂಠನಾಮಕ ಶ್ರೀಹರಿಯ) ಪಟ್ಟಣವು (ಉದಹರಿಸಲ್ಪಟ್ಟಿದೆ).

**ತಮಃಶಬ್ದೋದಿತಾಜ್ಞಾನಾದ್ಬಹಿರ್ಭೂತಾತಿಭಾಸ್ವರಾ ।**
**ಪುನರಾವೃತ್ತಿತಃ ಶೂನ್ಯಾ ಗತಿಶ್ಚ ಪರಮೋಚ್ಯತೇ ।**
**ಇತೋಽತಿರಿಕ್ತಃ ಪರಮೋ ಮೋಕ್ಷಃ ಕಃ ಸ್ಯಾದ್ವಿವೇಕಿನಾಂ ॥ ೧೫೩ ॥**

ತಮಃಶಬ್ದೋದಿತಾಜ್ಞಾನಾತ್ – ತಮಃ ಶಬ್ದದಿಂದ ಹೇಳಲಾಗುವ ಅಜ್ಞಾನದಿಂದ, ಬಹಿರ್ಭೂತಾ–ಹೊರತಾದ (ಅಜ್ಞಾನಸ್ಪರ್ಶವಿಲ್ಲದ), ಅತಿ ಭಾಸ್ವರಾ–ಸದಾ ಅತಿಶಯವಾಗಿ ಪ್ರಕಾಶಮಾನವಾದ, ಪುನರಾವೃತ್ತಿತಃ–ಪುನರಾ ವೃತ್ತಿಯಿಂದ, ಶೂನ್ಯಾ–ರಹಿತವಾದ (ಸಂಸಾರಕ್ಕೆ ಹಿಂದಿರುಗುವುದೆಂಬುದು, ಎಂದಿಗೂ ಇಲ್ಲದ), ಪರಮಾ ಗತಿಶ್ಚ–ಪರಮಪ್ರಾಪ್ಯಸ್ಥಾನವೆಂದೂ, ಉಚ್ಯತೇ–(ಭಾಗವತದಲ್ಲಿ) ಹೇಳಲ್ಪಟ್ಟಿರುತ್ತದೆ; ಇತಃ–ಇದರಿಂದ (ಅಜ್ಞಾನನಿವೃತ್ತವಾದ, ಪುನರಾವೃತ್ತಿಯಿಲ್ಲದುದೂ ಆದ ಸ್ಥಲದಿಂದ), ಅತಿರಿಕ್ತಃ–ಬೇರೆಯಾದ (ಭಿನ್ನ ವಾದ), ಕಃ–ಯಾವ, ಪರಮಃ ಮೋಕ್ಷಃ–ಪರಮಮೋಕ್ಷವು, ವಿವೇಕಿನಾಂ– ವಿವೇಕಿಗಳಿಗೆ, ಸ್ಯಾತ್ – ಆಗುತ್ತದೆ? (ವಿವೇಕಿಗಳಿಗೆ, ಅವಾಂತರಮೋಕ್ಷ ಭಿನ್ನವೆಂಬ ಪರಮಮೋಕ್ಷವು, ಇದಲ್ಲದೇ ಬೇರೆ ಇಲ್ಲ).

**ಮರ್ತ್ಯೋ ಮೃತ್ಯುವ್ಯಾಲಭೀತೋ ಲೋಕಾನ್ ಸರ್ವಾಂಶ್ಚ**
**ನಿರ್ಭಯಾನ್ ।**
**ನಾದ್ರಾಕ್ಷೀತ್ಕಿಲ ಪಾದಾಬ್ಜಂ ಪ್ರಾಪ್ಯ ವಿಷ್ಣೋರ್ಯದಿಚ್ಛಯಾ ।**
**ಸ್ವಸ್ಥಃ ಶೇತೇ ಮೃತ್ಯುರಸ್ಮಾದಪೈತೀತ್ಯಾಹ ದೇವಕೀ ॥ ೧೫೪ ॥**

---

ವೈಕುಂಠವು ತಮಃ ಶಬ್ದದಿಂದ ಹೇಳಲ್ಪಡುವ ಅಜ್ಞಾನ ಸ್ಪರ್ಶವಿಲ್ಲದ್ದು; ಅತ್ಯಂತ ಪ್ರಕಾಶಪೂರ್ಣವಾದುದು–ಕತ್ತಲೆಯೆಂಬುದಿಲ್ಲ (ಅನಂತ ಸೂರ್ಯಪ್ರಕಾಶನಾದ ಭಗವಂತನು ಸದಾ ಪ್ರಕಟನಾಗಿರುವ ಲೋಕದಲ್ಲಿ ಅಂಧಕಾರಕ್ಕೆ ಎಡೆ ಇರುವು ದುಂಟೇ?) ಪುನರಾವೃತ್ತಿ ರಹಿತವಾದ ಅತಿಶ್ರೇಷ್ಠಲೋಕವು; ವೈಕುಂಠ ಪ್ರಾಪ್ತಿಯೇ ಪರಮಮೋಕ್ಷವು; ಇದರಿಂದ ಭಿನ್ನವಾದ ಪರಮಮೋಕ್ಷವೆಂಬು ದುಂಟೆಂದು ಯಾವ ವಿವೇಕಿಯು ತಿಳಿಯುವುದಿಲ್ಲ (೧೫೩). ಮನುಷ್ಯನು,

**ಇತೋಽಪಿ ಕೃಷ್ಣಚರಣಪ್ರಾಪ್ತಿರೇವಾಮೃತಂ ಸತಾಂ ।**
**ಜೀವನ್ಮುಕ್ತೌ ಚ ಯನ್ಮೃತ್ಯುಃ ತತೋ ಮುಕ್ತಿರಯಂ ಪರಾ ॥ ೧೫೫ ॥**

ಭಾಗವತದಲ್ಲಿರುವ ದೇವಕೀದೇವಿಯ ವಾಕ್ಯವನ್ನು ಅರ್ಥತಃ ಉದಾಹರಿಸಿ,[1] ವೈಕುಂಠವೇ ಮೃತ್ಯುವಿದೂರವಾದ ಸ್ಥಾನವೆಂಬುದನ್ನು ಸಾಧಿಸುತ್ತಾರೆ :—

ಮೃತ್ಯುವ್ಯಾಲಭೀತಃ—ಮೃತ್ಯುವೆಂಬ ಸರ್ಪದಿಂದ ಭೀತನಾದ, ಮರ್ತ್ಯಃ—ಮನುಷ್ಯನು (ವ್ಯಕ್ತಿಯು), ಸರ್ವಾನ್‌ಲೋಕಾನ್ – ಎಲ್ಲ ಲೋಕಗಳನ್ನು, ನಿರ್ಭಯಾನ್ – ಭಯರಹಿತವಾದುದನ್ನಾಗಿ, ನಾದ್ರಾಕ್ಷೀತ್ ಕಿಲ – ಕಾಣಲಿಲ್ಲವೆಂಬುದು ಸ್ಪಷ್ಟವಿದೆ; ಯದೃಚ್ಛಯಾ – ಭಗವದಿಚ್ಛೆಯಿಂದ, ವಿಷ್ಣೋಃ – ಶ್ರೀವಿಷ್ಣುವಿನ, ಪಾದಾಬ್ಜಂ—ಪಾದಕಮಲವನ್ನು, ಪ್ರಾಪ್ಯ—ಹೊಂದಿ, ಸ್ವಸ್ಥಃ—ಸ್ವಸ್ಥಚಿತ್ತನಾಗಿ, ಶೇತೇ—ವಿಶ್ರಮಿಸುತ್ತಾನೆ; ಅಸ್ಮಾತ್—ಈತನಿಂದ, ಮೃತ್ಯುಃ—

(ಸಂಸಾರಿಜೀವನು) ಮೃತ್ಯುವೆಂಬ ಸರ್ಪದಿಂದ ಭೀತನಾಗಿ, ಪಲಾಯನಮಾಡಿ, ಬಹುಲೋಕಗಳನ್ನು ಸುತ್ತಿದರೂ, ನಿರ್ಭಯ ಸ್ಥಾನವನ್ನು ಕಾಣದೇ, ಭಗವದಿಚ್ಛೆಯಂತೆ ವಿಷ್ಣುಪಾದಾಬ್ಜವನ್ನು ಸೇರಿ ಸ್ವಸ್ಥ ಚಿತ್ತನಾಗಿ ವಿಶ್ರಮಿಸುತ್ತಾನೆ, ಮೃತ್ಯುವೂ ದೂರ ತೊಲಗುತ್ತದೆ; ಹೀಗೆ ಭಾಗವತದಲ್ಲಿನ ದೇವಕೀ ದೇವಿಯ ವಾಕ್ಯವಿದೆ; ವಿಷ್ಣುವಿನಿಂದ ಅಭಿನ್ನನಾದ ಶ್ರೀಕೃಷ್ಣ ಚರಣಗಳ ಪ್ರಾಪ್ತಿಯೇ ಸಜ್ಜನರಿಗೆ ಮೋಕ್ಷವು ; (ಅಮೃತವು, ನಿತ್ಯಾನಂದಪ್ರದವು) ; ಜೀವನ್ಮುಕ್ತಿದಶಾದಲ್ಲಿಯೂ ಹುಟ್ಟುಸಾವುಗಳಿರುವುವು ; ಶುಕ ವಾಮದೇವಾದಿ ಅಪರೋಕ್ಷಿಗಳಿಗೂ ತಪ್ಪಿದ್ದಲ್ಲ; ಆದ್ದರಿಂದ ಇದೇ ಪರಮಮುಕ್ತಿಯು (೧೫೪–೧೫೫).

---

1 'ಮರ್ತ್ಯೋ ಮೃತ್ಯುವ್ಯಾಲಭೀತಃ ಪಲಾಯನ್ಲೋಕಾನ್ ಸರ್ವಾನ್ನಿರ್ಭಯಾನ್ನಾಧ್ಯಗಚ್ಛತ್ । ತ್ವತ್ಪಾದಾಬ್ಜಂ ಪ್ರಾಪ್ಯ ಯದೃಚ್ಛಯಾಽಂತೇ ಸ್ವಸ್ಥಃ ಶೇತೇ ಮೃತ್ಯುರಸ್ಮಾದಪೈತಿ' ಎಂಬುದು ಪ್ರಸಕ್ತವಾದ ಭಾಗವತ ಶ್ಲೋಕವು; ಅದರ ತಾತ್ಪರ್ಯವೇನೆಂದರೆ—ಮೃತ್ಯುವೆಂಬ ಸರ್ಪಭೀತನಾದ ಮನುಷ್ಯನು, ಓಡಿಹೋಗಿ ಸಕಲಲೋಕಗಳನ್ನು ಸುತ್ತಿದರೂ, ನಿರ್ಭಯವಾದ ಸ್ಥಾನವನ್ನು ಹೊಂದುವುದಿಲ್ಲ ; ನಿನ್ನ ಸಂಕಲ್ಪದಂತೆ, ಕಡೆಯಲ್ಲಿ, ನಿನ್ನ ಪಾದಾಬ್ಜವನ್ನು (ಸಾಕ್ಷಾದ್ದರ್ಶನವು ಸದಾ ಇರುವ) ವೈಕುಂಠ ಲೋಕವನ್ನು ಹೊಂದಿ, ಯಾವ ಭಯವೂ ಇಲ್ಲದೇ (ಸ್ವಸ್ಥ ಚಿತ್ತನಾಗಿ) ಮಲಗುತ್ತಾನೆ (ಪರಮ ವಿಶ್ರಾಂತಿಯನ್ನು ಹೊಂದುತ್ತಾನೆ) ; ಮೃತ್ಯುವು ದೂರವೇ ಉಳಿಯುತ್ತದೆ—ಸಮೀಪಿಸುವುದೇ ಇಲ್ಲ.

ಮೃತ್ಯುವು (ಜನನ ಮರಣವು), ಅಪ್ಯೈತಿ–ತೊಲಗುತ್ತದೆ ; ಇತಿ–ಹೀಗೆ, ದೇವಕೀ–ದೇವಕೀದೇವಿಯು (ವಿಷ್ಣುವೇ ಆದ ಶ್ರೀಕೃಷ್ಣನ ಸ್ತುತಿಯಲ್ಲಿ), ಆಹ–ಹೇಳಿರುವಳು ; ಇತಃ ಅಪಿ–ಇದರಿಂದ ಸಹ, ಕೃಷ್ಣಚರಣಪ್ರಾಪ್ತಿಃ ಏವ–ಶ್ರೀಕೃಷ್ಣಚರಣಪ್ರಾಪ್ತಿಯೇ, ಸತಾಂ–ಸಜ್ಜನರಿಗೆ, ಅಮೃತಂ–ಮೋಕ್ಷವು ; ಯತ್–ಯಾವ ಕಾರಣದಿಂದ, ಜೀವನ್ಮುಕ್ತೌ ಚ–ಜೀವನ್ಮುಕ್ತ್ಯವಸ್ಥೆಯಲ್ಲಿ ಸಹ (ಸತ್ಯಲೋಕಾದಿ ಸ್ಥಾನಗಳಲ್ಲಿರುವಾಗಲೂ, ಶುಕ, ವಾಮದೇವಾದಿ ಜ್ಞಾನಿಗಳಿಗೂ), ಮೃತ್ಯುಃ–ಮರಣವು (ದೇಹತ್ಯಾಗವು) ಇರುವುದೋ, ತತಃ–ಆ ಕಾರಣದಿಂದ, ಇಯಂ–ಇದೇ (ಶ್ರೀಕೃಷ್ಣಪ್ರಾಪ್ತಿಯೇ), ಪರಾ ಮುಕ್ತಿಃ–ಪರಮಮೋಕ್ಷವು.

**ಆಬ್ರಹ್ಮಭವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥ ೧೫೬ ॥**

**ಇತಿ ಗೀತೋದಿತಾಂ ವಾಣೀಮನುಸ್ಮರ ನ ವಿಸ್ಮರ ।**
**ಜೀವನ್ಮುಕ್ತೌ ತು ಯಜ್ಜನ್ಮ ತತೋ ಮುಕ್ತಿರಿಯಂ ಪರಾ ॥ ೧೫೭ ॥**

ಗೀತಾವಾಕ್ಯದಲ್ಲಿ ಸಹ ಸಂಸಾರವನ್ನು ತೊಲಗಿಸುವುದು ಶ್ರೀಕೃಷ್ಣ ಸಮೀಪದಲ್ಲಿ ಸದಾ ಇರುವುದೇ ಆಗಿರುತ್ತದೆಂದು ಹೇಳಿರುವುದರಿಂದ ಅದೇ ಪರಮ ಮುಕ್ತಿಯು ಎನ್ನುತ್ತಾರೆ :—

ಅರ್ಜುನ–ಹೇ ಅರ್ಜುನ ! ಆಬ್ರಹ್ಮಭವನಾತ್ – ಬ್ರಹ್ಮಲೋಕದಿಂದ (ಮೇರುಸ್ಥಿತ ಬ್ರಹ್ಮಸದನದಿಂದ ಮತ್ತು ಸತ್ಯಲೋಕದಿಂದ) ಆರಂಭಿಸಿ, ಲೋಕಾಃ–ಅಂತರಿಕ್ಷ ಸ್ವರ್ಗಾದಿ ಲೋಕಗಳೂ ಸಹ, ಪುನರಾವರ್ತಿನಃ–ಪುನರಾವೃತ್ತಿಯುಳ್ಳ ಪ್ರಜಾಯುಕ್ತವಾದವುಗಳೇ ; ಮಾಂ–ನನ್ನನ್ನು, ಉಪೇತ್ಯ ತು – ಹೊಂದಿಯೇ

---

ಬ್ರಹ್ಮಲೋಕದಿಂದ ಆರಂಭಿಸಿ, ಸ್ವರ್ಗಾದಿ ಸಕಲ ಲೋಕಗಳು, ಪುನರಾವೃತ್ತಿಯುಳ್ಳ ಪ್ರಜೆಗಳಿಂದ ತುಂಬಿವೆ ; ನನ್ನನ್ನು ಹೊಂದಿದವರಿಗೆ ಮಾತ್ರ ಪುನರ್ಜನನವೆಂಬುದಿಲ್ಲ ; ಎಂಬ ಗೀತೋಕ್ತವಾದ ಶ್ರೀಕೃಷ್ಣನ ವಾಣಿಯನ್ನು ಸ್ಮರಿಸುತ್ತಿರಲು–ಮರೆಯಬೇಡ ; ಜೀವನ್ಮುಕ್ತಿಯಲ್ಲಿ ಸಹ ಭೌತಿಕ ದೇಹಪ್ರಾಪ್ತಿ ರೂಪದ ಜನನವುಂಟು ; ಪುನರ್ಜನ್ಮವೇ ಇಲ್ಲದ ಶ್ರೀಕೃಷ್ಣಸ್ವರೂಪ ಪ್ರಾಪ್ತಿಯೇ ಪರಮ

(ಸ್ವಲೋಕ ಗಮನದಿಂದಲೇ),[1] ಕೌಂತೇಯ–ಹೇ ಪಾರ್ಥ! ಪುನರ್ಜನ್ಮ–ಪುನಃ ಸಂಸಾರದಲ್ಲಿ ಬರುವುದು, ನ ವಿದ್ಯತೇ – ಇರುವುದಿಲ್ಲ; ಇತಿ – ಹೀಗೆಂಬ, ಗೀತೋದಿತಾಂ–ಗೀತೋಕ್ತವಾದ, ವಾಣೀಂ–ನುಡಿಯನ್ನು (ಶ್ರೀಕೃಷ್ಣನ ವಾಕ್ಯವನ್ನು), ಅನುಸ್ಮರ–ತಪ್ಪದೇ ಸ್ಮರಿಸು, ನ ವಿಸ್ಮರ–ಮರೆಯಬೇಡ; ಯತ್–ಯಾವ ಕಾರಣದಿಂದ, ಜೀವನ್ಮುಕ್ತೌ ತು–ಜೀವನ್ಮುಕ್ತಿ ದಶಾದಲ್ಲಿಯೂ, ಜನ್ಮ–ಪುನಃ ಹುಟ್ಟುವುದೆಂಬುದು (ಇರುತ್ತದೆಯೋ),[2] ತತಃ–ಆ ಕಾರಣದಿಂದ, ಇಯಂ–ಇದೇ, ಪರಾ ಮುಕ್ತಿಃ–ಪರಮಮೋಕ್ಷವು.

**ಸಾ ಚ ವಿಷ್ಣೋಃ ಸಮೀಪಾಪ್ತಿಃ ತದಂಘ್ರಿಪ್ರಾಪ್ತಿರೇವ ವಾ ।**
**ತಲ್ಲೋಕೇಷು ಸ್ಥಿತಿರ್ವಾಭೂತ್ತೇನೈಕ್ಯಂ ತ್ವಷ್ಟಮೋ ರಸಃ ॥ ೧೫೮ ॥**

ಉಕ್ತವಾಕ್ಯಗಳಿಂದ ಶ್ರೀಹರಿಗೂ ಜೀವರಿಗೂ ಭೇದವೇ ಸಿದ್ಧವಾಗುತ್ತದೆನ್ನುತ್ತಾರೆ:—

ಸಾ ಚ – ಆ ಪರಮಮುಕ್ತಿಯಾದರೂ, ವಿಷ್ಣೋಃ – ಶ್ರೀವಿಷ್ಣುವಿನ, ಸಮೀಪಾಪ್ತಿಃ–ಸಮೀಪದಲ್ಲಿರುವುದು, ವಾ–ಅಥವಾ, ತದಂಘ್ರಿಪ್ರಾಪ್ತಿಃ ಏವ–ಆತನ ಚರಣಪ್ರಾಪ್ತಿಯೇ; ವಾ–ಅಥವಾ, ತಲ್ಲೋಕೇಷು–ಆತನ ಲೋಕಗಳಲ್ಲಿ (ವೈಕುಂಠಾದಿಗಳಲ್ಲಿ), ಸ್ಥಿತಿಃ – ವಾಸವು, ಅಭೂತ್ – ಎಂದಾಯಿತು; ತೇನ–ಇದರಿಂದ (ಪ್ರಾಪ್ತಪ್ರಾಪ್ಯಭಾವವು ಸಿದ್ಧವಾಗುವುದರಿಂದ), ಐಕ್ಯಂ–

ಮುಕ್ತಿಯು (೧೫೬–೧೫೭). ಪರಮ ಮುಕ್ತಿಯೆಂಬುದು, ವಿಷ್ಣುಸಮೀಪ ಪ್ರಾಪ್ತಿ, ವಿಷ್ಣುಪದ ಪ್ರಾಪ್ತಿ, ಅಥವಾ ವಿಷ್ಣುಲೋಕಗಳಲ್ಲಿ ವಾಸವೆಂದೇ ಆ ವಾಕ್ಯಗಳಿಂದ ಸಿದ್ಧವಾಗುತ್ತದೆ; ಜೀವಬ್ರಹ್ಮೈಕ್ಯವೆಂಬುದು ಅಷ್ಟಮರಸವು;

[1] ವೈಕುಂಠಲೋಕದಂತೆ, ಶ್ವೇತದ್ವೀಪ, ಅನಂತಾಸನಗಳಲ್ಲಿ ಸಹ, ಸದಾ ಶ್ರೀಹರಿಯ ಸಮೀಪದಲ್ಲಿಯೇ ಮುಕ್ತರು ವಾಸಿಸುತ್ತಾರೆ; ಇಚ್ಛಿತವಾದಾಗಲೆಲ್ಲ ಶ್ರೀಹರಿದರ್ಶನವನ್ನು ಹೊಂದುವರು; ಮಾಂ ಉಪೇತ್ಯ ಎಂಬುದರಿಂದ ಈ ಮೂರೂ ಮುಕ್ತಲೋಕಗಳನ್ನು ಗ್ರಹಿಸಬೇಕು.

[2] ೧೫೫ ನೇ ಶ್ಲೋಕದಲ್ಲಿ ಮರಣಾಭಾವದಿಂದ ಮೋಕ್ಷಕ್ಕೆ ಅತಿಶಯವನ್ನು ಹೇಳಿ, ಈಗ ಜನನಾಭಾವದಿಂದಲೂ ಅದರ ಆಧಿಕ್ಯವನ್ನೇ ಸಾಧಿಸಿರುವರು; ಆದ್ದರಿಂದ ಪುನರುಕ್ತಿಯಿಲ್ಲ.

*

ಜೀವಬ್ರಹ್ಮೈಕ್ಯವು, ಅಷ್ಟಮಃ-ಎಂಟನೆಯ, ರಸಃ ತು-ರಸವೇ ಸರಿ (ಷಡ್ರಸಗಳಿರುತ್ತವೆಂದು ಪ್ರಸಿದ್ಧಿ-ಏಳನೆಯ ರಸವೇ ಇಲ್ಲದಿರಲು, ಎಂಟನೆ ರಸವು ಸುತರಾಂ ಇಲ್ಲದಿರುವಂತೆ, ಐಕ್ಯವು ಯಾರೂ ಎಂದೂ ಕೇಳದ ವಿರುದ್ಧ ನುಡಿಯೇ ಸರಿ).

**ಅಸ್ಪಷ್ಟವಚನಸ್ಯಾರ್ಥಂ ಸ್ಪಷ್ಟೋಕ್ತೇರನುಸಾರತಃ ।**
**ಪ್ರಾಹುಃ ಸರ್ವೇ ಯತಃ ಪೂರ್ವೇ ತನ್ಮಾಕುರ್ವೇಕತಾಭ್ರಮಂ ॥ ೧೫೯ ॥**

ಐಕ್ಯವು ನಿನಗೂ ಅಸ್ಪಷ್ಟವೇ ಆದರೂ, ಅಭಿಲಷಿತವಾದುದು, ಶ್ರೀಹರಿ ಮತ್ತು ಮುಕ್ತಚೇತನರ ಐಕ್ಯಪರವೆಂಬ ನುಡಿಗಳಿಲ್ಲ-ಉದಾಹೃತ ವಾಕ್ಯಗಳು ಭೇದಪರವೇ ಆಗಿವೆ; ಎನ್ನುತ್ತಾರೆ :—

ಅಸ್ಪಷ್ಟವಚನಸ್ಯ-ಅಸ್ಪಷ್ಟವಾಕ್ಯದ, ಅರ್ಥಂ-ಅರ್ಥವನ್ನು (ಭಾವವನ್ನು), ಸ್ಪಷ್ಟೋಕ್ತೇಃ - ಸ್ಪಷ್ಟವಾಕ್ಯದ, ಅನುಸಾರತಃ - ಅನುಸಾರವಾಗಿ (ತಿಳಿಯ ತಕ್ಕದ್ದೆಂದು), ಸರ್ವೇ ಪೂರ್ವೇ-ಹಿಂದಿನವರೆಲ್ಲರೂ (ಪ್ರಾಚೀನಜ್ಞಾನಿಗಳು), ಯತಃ-ಯಾವ ಕಾರಣದಿಂದ, ಪ್ರಾಹುಃ-ಹೇಳುವರೋ, ತತ್-ಆದ್ದರಿಂದ, ಏಕತಾಭ್ರಮಂ-ಐಕ್ಯದ ಮೋಹವನ್ನು (ಭ್ರಮೆಯನ್ನು), ಮಾ ಕುರು-ಮಾಡಬೇಡ (ಹೊಂದಬೇಡ).

**ಅನಂತಾಸನವೈಕುಂಠಶ್ವೇತದ್ವೀಪಾಭಿದಾಸ್ತ್ರಯಃ ।**
**ಜ್ಯೋತಿಷ್ಮಂತೋ ಯತ್ರ ಲೋಕಾಸ್ತತ್ರ ಮಾಮಮೃತಂ ಕೃಧಿ ॥ ೧೬೦ ॥**
**ಇತಿ ಶ್ರುತೌ ಯತೋ ವಿಷ್ಣೋರ್ಲೋಕೇಷ್ವಮೃತತೋದಿತಾ ।**
**ತತಸ್ತಲ್ಲೋಕಗಮನಂ ಮಹಾಮೋಕ್ಷೋ ಭವೇದ್ಧ್ರುವಂ ॥ ೧೬೧ ॥**

ಶ್ರುತಿಯಿಂದಲೂ ವೈಕುಂಠಾದಿಲೋಕಪ್ರಾಪ್ತಿಯೇ ಪರಮಮೋಕ್ಷವೆಂದು ಸಾಧಿಸುತ್ತಾರೆ :—

---

ಕೇಳಲು ಅರ್ಹವಲ್ಲದ ನುಡಿಯು (೧೫೮). ಅಸ್ಪಷ್ಟವಾಕ್ಯಗಳ (ಶ್ರುತ್ಯಾದಿ ಆಗಮಗಳ) ಅರ್ಥವನ್ನು, ಸ್ಪಷ್ಟವಾಕ್ಯಾನುಸಾರವಾಗಿ ತಿಳಿಯಬೇಕೆಂದು, ಪ್ರಾಚೀನ ಜ್ಞಾನಿಗಳೆಲ್ಲರೂ ಹೇಳುವರು; ಆದ್ದರಿಂದ (ನಿರವಕಾಶವಾದ-ಸ್ಪಷ್ಟವಾದ) ಶ್ರುತಿವಾಕ್ಯಗಳಂತೆ ಜೀವಬ್ರಹ್ಮರ ಭೇದವನ್ನೇ ತಿಳಿ-ಏಕತ್ವ (ಐಕ್ಯ) ಭ್ರಮೆಯನ್ನು ತ್ಯಜಿಸು (೧೫೯) ಅನಂತಾಸನ, ವೈಕುಂಠ, ಶ್ವೇತದ್ವೀಪಗಳೆಂಬ

ಅನಂತಾಸನ ವೈಕುಂಠಶ್ವೇತದ್ವೀಪಾಭಿದಾಃ – ಅನಂತಾಸನ, ವೈಕುಂಠ ಮತ್ತು ಶ್ವೇತದ್ವೀಪಗಳೆಂಬ ನಾಮವುಳ್ಳ, ತ್ರಯಃ–ಮೂರುಲೋಕಗಳು, ಯತ್ರ–ಯಾವ ಪ್ರದೇಶದಲ್ಲಿ, ಜ್ಯೋತಿಷ್ಮಂತಃ – (ಸೂರ್ಯಾದಿಗಳ ಪ್ರಕಾಶವಿಲ್ಲದೇ) ನಿರಂತರ ಪ್ರಕಾಶವುಳ್ಳ, ಲೋಕಾಃ–ಲೋಕಗಳೋ (ಇರುವುವೋ), ತತ್ರ–ಆ ಲೋಕದಲ್ಲಿ, ಮಾಂ–ನನ್ನನ್ನು, ಅಮೃತಂ–ಮರಣರಹಿತನನ್ನಾಗಿ (ಮುಕ್ತನನ್ನಾಗಿ), ಕೃಧಿ–ಮಾಡು (ಎಂಬರ್ಥದ ಶ್ರುತಿಯು ಈ ಮೂರು ಲೋಕಗಳ ಪ್ರಾಪ್ತಿಯೇ ಮುಕ್ತಿಯೆಂದು ಹೇಳುತ್ತದೆ); ಇತಿ ಶ್ರುತೌ–ಎಂಬ ಶ್ರುತಿಯಲ್ಲಿ, ವಿಷ್ಣೋಃ–ಶ್ರೀವಿಷ್ಣುವಿನ, ಲೋಕೇಷು–ಲೋಕಗಳಲ್ಲಿ, ಯತಃ–ಯಾವ ಕಾರಣದಿಂದ, ಅಮೃತತಾ–ಅಮೃತತ್ವವು (ಮುಕ್ತಿಯು), ಉದಿತಾ–ಹೇಳಲಾಗಿದೆಯೋ, ತತಃ – ಆದ್ದರಿಂದ, ತಲ್ಲೋಕಗಮನಂ – ಆ ಲೋಕವನ್ನು (ಪ್ರದೇಶವನ್ನು) ಹೊಂದುವುದು, ಧ್ರುವಂ–ನಿಸ್ಸಂಶಯವಾಗಿ, ಮಹಾಮೋಕ್ಷಃ–ಮಹಾಮೋಕ್ಷವು, ಭವೇತ್–ಆಗುತ್ತದೆ.

**ಯತೋಽತ್ರೈವ ಶ್ರುತಿಃ ಸ್ಪಷ್ಟಂ ವಿಷ್ಣೋರ್ಲೋಕೇ ಮಹೀಯತೇ ।**
**ಇತ್ಯಾಹ ತದಿಮೇ ಲೋಕಾಸ್ತಸ್ಯೈವ ಸ್ಯುರ್ನಸಂಶಯಃ ॥ ೧೬೨ ॥**

ಅತ್ರೈವ – ಈ ಸೂಕ್ತದಲ್ಲಿ, ಶ್ರುತಿಃ – ಶ್ರುತಿಯು, ಸ್ಪಷ್ಟಂ – ಸ್ಪಷ್ಟವಾಗಿ ('ಯತ್ರ ತತ್ಪರಮಂ ಪದಂ ವಿಷ್ಣೋರ್ಲೋಕೇ ಮಹೀಯತೇ' ಎಂಬ ಶ್ರುತಿಯು), ವಿಷ್ಣೋಃ ಲೋಕೇ – ವಿಷ್ಣುಲೋಕದಲ್ಲಿ, ಮಹೀಯತೇ – ಪೂಜ್ಯನಾಗುತ್ತಾನೆ,

---

ಮೂರುಲೋಕಗಳು, ಸೂರ್ಯಾದಿಗಳಿಲ್ಲದೇ ಪ್ರಕಾಶಿಸುತ್ತವೆ; 'ಅಲ್ಲಿ ನನ್ನನ್ನಿಟ್ಟು, ಮುಕ್ತನನ್ನಾಗಿ ಮಾಡು' ಎಂಬ ಪ್ರಾರ್ಥನೆಯು ಶ್ರುತ್ಯುಕ್ತವಾಗಿದ್ದು, ಅಲ್ಲಿನ (ವಿಷ್ಣುಲೋಕದ) ವಾಸವೇ ನಿತ್ಯವಾದ ಮೋಕ್ಷವೆಂದೂ ಅದೇ ಮಹಾಮೋಕ್ಷವೆಂದೂ, ಅವಾಂತರ ಮೋಕ್ಷವಲ್ಲೆಂದೂ ಸಿದ್ಧವಾಗುತ್ತದೆ; (೧೬೦–೧೬೧). 'ಯತ್ರ ತತ್ಪರಮಂ ಪದಂ । ವಿಷ್ಣೋರ್ಲೋಕೇ ಮಹೀಯತೇ' ಎಂಬ ಶ್ರುತಿಯು, (ಮೋಕ್ಷ ನಿರೂಪಣ ಸೂಕ್ತದಲ್ಲಿಯೇ), ಸ್ಪಷ್ಟವಾಗಿ, ವಿಷ್ಣುಲೋಕದಲ್ಲಿ ಪೂಜ್ಯನಾಗಿ ವಾಸಿಸುವನೆಂದು ಹೇಳುತ್ತದೆ; ಆದ್ದರಿಂದ ಇಲ್ಲಿ ಹೇಳಲಾದ, ವೈಕುಂಠ, ಅನಂತಾಸನ, ಶ್ವೇತದ್ವೀಪಗಳೆಂಬುವು, ವಿಷ್ಣುಲೋಕಗಳೇ ಎಂದು, ಸಿದ್ಧವಾಗುತ್ತದೆ; 'ಇಮೇ ಲೋಕಾಃ' ಎಂಬ ಈ ಎರಡು ಶಬ್ದಗಳ, ಜ್ಯೋತಿಷ್ಮಂತಃ

ಇತ್ಯಾಹ–ಎಂದು ಹೇಳುತ್ತದೆ; ತತ್ – ಆದ್ದರಿಂದ, ಇಮೇ ಲೋಕಾಃ–ಈ ವೈಕುಂಠಾದಿ ಲೋಕಗಳು, ತಸ್ಯ ಏವ ಸ್ಯುಃ–ವಿಷ್ಣುಲೋಕಗಳೇ ಆಗಿರುತ್ತವೆ, ನ ಸಂಶಯಃ–ಸಂಶಯವಿಲ್ಲ ('ಇಮೇ' ಎಂಬುದರಿಂದ 'ಜ್ಯೋತಿಷ್ಮಂತಃ' ಎಂದು ಹೇಳಲಾದ ವಿಷ್ಣುಲೋಕಗಳೆಂದು ಸಿದ್ಧವಾಗುತ್ತದೆ; 'ಲೋಕಾಃ' ಎಂಬ ಬಹುವಚನವು ಮೂರು ಲೋಕಗಳನ್ನು ಸಾಧಿಸುತ್ತದೆ).

**ಉಕ್ತಸ್ಮೃತೇಶ್ಚ ಸಂಮತ್ಯಾ ಲೋಕೋಽಯಂ ವೈಷ್ಣವೋ ಭವೇತ್ ।**
**ಅತಃ ಸಲೋಕತಾಂ ಮೋಕ್ಷೋ ಸಾಲೋಕ್ಯಂ ಚ ಶ್ರುತಿರ್ಜಗೌ ॥ ೧೬೩ ॥**

ಉಕ್ತಸ್ಮೃತೇಃ–('ತತೋ ವೈಕುಂಠ—' ಎಂಬ, ೧೫೧ನೇ ಶ್ಲೋಕವನ್ನು ನೋಡಿರಿ, ಸ್ಮೃತಿಯು–ಭಾಗವತವು) ಉಕ್ತಸ್ಮೃತಿಯ, ಸಂಮತ್ಯಾ–ಸಂವಾದದಿಂದ (ಸಮಾಖ್ಯೆಯಿಂದ), ಅಯಂ ಲೋಕಃ – ಪ್ರಾಪ್ಯವಾದ ಈ ಲೋಕವು, ವೈಷ್ಣವಃ – ವಿಷ್ಣುಸಂಬಂಧವಾದ (ಶ್ರೀವಿಷ್ಣುವಿನ ಲೋಕವೇ), ಭವೇತ್ – ಆಗುತ್ತದೆ (ಸಿದ್ಧವಾಗುತ್ತದೆ); ಅತಃ–ಆದ್ದರಿಂದ (ಲೋಕಕ್ಕೆ ಮೋಕ್ಷಸ್ಥಾನತ್ವವಿರುವುದರಿಂದ), ಸಲೋಕತಾಂ – ಸಮಾನಲೋಕತ್ವವನ್ನು (ಲೋಕಪ್ರಾಪ್ತಿಯನ್ನು), ಸಾಲೋಕ್ಯಂ–ಸಾಲೋಕ್ಯವೆಂಬ, ಮೋಕ್ಷಃ–ಮೋಕ್ಷವೆಂದು, ಶ್ರುತಿಃ–ಶ್ರುತಿಯು ('ಗಚ್ಛೇದ್ಬ್ರಹ್ಮ ಸಲೋಕತಾಂ', ಎಂದು), ಜಗೌ ಚ–ಹೇಳಿಯೇ ಬಿಟ್ಟಿತು (ಮೋಕ್ಷಕ್ಕೆ ಲೋಕತ್ವವಿಲ್ಲದಿದ್ದರೆ, ಸಾಲೋಕ್ಯವೆಂಬ ವ್ಯವಹಾರವೂ ಯುಕ್ತವಾಗುತ್ತಿರಲಿಲ್ಲ).

**ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಇತ್ಯುಕ್ತೇಃ ಸ ಚ ಲೋಕೋಽಯಂ ವಿಷ್ಣೋರ್ಲೋಕೋ ನ ಸಂಶಯಃ ॥ ೧೬೪ ॥**

---

ಎಂದು ಹೇಳಲಾದ ಲೋಕಗಳನ್ನು, ಬಹುವಚನವು ವಿಷ್ಣುವಿನ ತ್ರಿಧಾಮಗಳನ್ನು ಸೂಚಿಸುತ್ತವೆ (೧೬೨). 'ತತೋ ವೈಕುಂಠಮಗಮದ್ಭಾಸ್ವಂತಮಸಃ ಪರಂ' ಎಂಬ ಸ್ಮೃತಿಯ (ಭಾಗವತದ) ಸಮಾಖ್ಯೆಯಿಂದಲೂ, ವೈಕುಂಠವೇ ವಿಷ್ಣುಲೋಕವೆಂದು ಸಿದ್ಧವಾಗುತ್ತದೆ; (ವಿಷ್ಣುವಿನಿಂದ ಕೂಡಿ ಅವನ ಸಮೀಪದಲ್ಲಿಯೇ) ಅದೇ ಲೋಕದಲ್ಲಿಯೇ ಮುಕ್ತನು ವಾಸಮಾಡುವುದರಿಂದ, ಆ ಪ್ರಕಾರದ ಮುಕ್ತಿಯನ್ನು 'ಸಾಲೋಕ್ಯ'ವೆಂದೂ ಶ್ರುತಿಯು ಹೇಳುತ್ತದೆ. (೧೬೩). 'ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ', ಎಂಬ ಗೀತೋಕ್ತಿಯು,

ಅರ್ಜುನ – ಹೇ ಅರ್ಜುನ, ಆಬ್ರಹ್ಮಭುವನಾತ್ – ಬ್ರಹ್ಮಲೋಕದಿಂದ ಆರಂಭಿಸಿ, ಲೋಕಾಃ–ಎಲ್ಲ ಲೋಕಗಳೂ, ಪುನರಾವರ್ತಿನಃ–ಸಂಸಾರಕ್ಕೆ ತಿರುಗಿ ಬರುವ ಪ್ರಜೆಗಳುಳ್ಳವೇ ಆಗಿವೆ; ಇತ್ಯುಕ್ತೇಃ-('ಸಲೋಕತಾಂ' ಎಂದು ಶ್ರುತಿಯು ಹೇಳಿದ ಲೋಕವು) ಶ್ರುತಿಯು ಹೇಳಿರುವುದರಿಂದ, ಸ ಚ ಅಯಂ ಲೋಕಃ– ಆ ಪುನರಾವರ್ತಿರಹಿತವಾದ ಲೋಕವು, ವಿಷ್ಣೋಃ–ಶ್ರೀವಿಷ್ಣುವಿನ, ಲೋಕಃ– ಲೋಕವೇ, ನ ಸಂಶಯಃ–ನಿಶ್ಚಯವು (ಉಪಲಕ್ಷಣದಿಂದ 'ವಿಷ್ಣೋರ್ಲೋಕೇ ಮಹೀಯತೇ' ಎಂಬ ಶ್ರುತಿ ಸಮಾಖ್ಯೆಯನ್ನು ಗ್ರಹಿಸಬೇಕು).

**ಸರ್ವಲೋಕಕ್ಷಯೇ ಯಸ್ತು ಮೋಕ್ಷೋಽಸೌ ನೇಕ್ಷ್ಯತೇ ಕ್ವಚಿತ್**
**॥ ೧೬೫ ॥**

ವಿಷ್ಣುಲೋಕವು ಮೋಕ್ಷಸ್ಥಾನವೆಂಬುದನ್ನು ಬೇರೆ ಯುಕ್ತಿಯಿಂದಲೂ ಸಾಧಿಸುತ್ತಾರೆ :—

ಸರ್ವಲೋಕಕ್ಷಯೇ–ಸಮಸ್ತಲೋಕಗಳ ನಾಶದಲ್ಲಿ[1] (ಉಪಲಕ್ಷಣದಿಂದ ಅವುಗಳ ಸೃಷ್ಟಿಯನ್ನು ಹಿಡಿಯಬೇಕು), ಯಸ್ತು ಅಸೌ ಮೋಕ್ಷಃ–ಯಾವ ಈ

---

ಬ್ರಹ್ಮಲೋಕದಿಂದ ಕೆಳಗಿನ ಲೋಕಗಳೆಲ್ಲವೂ (ಸ್ವರ್ಗ, ಅಂತರಿಕ್ಷಾದಿಗಳೆಲ್ಲವೂ) ಪುನರಾವರ್ತಿಯುಳ್ಳ (ಭೌತಿಕ ದೇಹಪ್ರಾಪ್ತಿಯುಳ್ಳ) ಸಂಸಾರದಲ್ಲಿ ಹುಟ್ಟು ಸಾವುಗಳುಳ್ಳವೆಂದು, ಹೇಳಲ್ಪಡುತ್ತವೆ, ಎಂದು ಶ್ರೀಕೃಷ್ಣನು ಅರ್ಜುನನಿಗೆ, ಹೇಳಿರುವುದರಿಂದ, ಪುನರಾವರ್ತಿರಹಿತವೆಂದು ಇಲ್ಲಿ ಉಕ್ತವಾದ ಈ ಲೋಕವು ವಿಷ್ಣುಲೋಕವೆಂದು ನಿಶ್ಚಯ ; ಸಂಶಯವಿಲ್ಲ (೧೬೪). ಸರ್ವಲೋಕಗಳ ಸೃಷ್ಟಿ

[1] ಸರ್ವಲೋಕಗಳ ಸೃಷ್ಟಿಲಯಗಳನ್ನು ಪ್ರತಿಪಾದಿಸುವ ವಾಕ್ಯದಲ್ಲಿ ವೈಕುಂಠವು ಕೇಳಿಬರುವುದಿಲ್ಲವಾದ್ದರಿಂದ, ವೈಕುಂಠಲೋಕವು ಉತ್ಪತ್ತಿನಾಶರಹಿತವಾದ ನಿತ್ಯಲೋಕ ವೆಂದು ಸಿದ್ಧವಾಗುತ್ತದೆ; ಕೆಳಗಿರುವ ಬ್ರಹ್ಮಲೋಕಾದಿಗಳನ್ನು ಹೇಳಿ, ಅವುಗಳ ಸೃಷ್ಟಿ ಲಯಗಳನ್ನು ಸ್ಪಷ್ಟವಾಗಿ ಹೇಳಿ, ಉಭಯಕೋಟಿಯಲ್ಲಿ ವೈಕುಂಠವನ್ನು ಹೇಳಿಲ್ಲವಾದ್ದರಿಂದ, ಅದೇ ನಿತ್ಯವಾದ ಮುಕ್ತಲೋಕವೆಂದು ಸಿದ್ಧವಾಗುತ್ತದೆ ; ಇಲ್ಲಿ ಪ್ರಸಕ್ತವಾದ ಪ್ರಮಾಣ ವಾಕ್ಯಗಳಾವುವೆಂದರೆ:—'ಸ್ಥಾನಂ ಮದೀಯಂ ಸಹ ವಿಶ್ವಮೇತತ್ ಕ್ರೀಡಾವಸಾನೇ ದ್ವಿಪರಾರ್ಧಸಂಜ್ಞೇ । ಭ್ರೂಭಂಗಮಾತ್ರೇಣ ಹಿ ಸಂದಿಧಕ್ಷೋಃ ಕಾಲಾತ್ಮನಃ ಪಶ್ಯತಿ ಕೋ ಭವಿಷ್ಯತ್'—ಇತ್ಯಾದಿ ಪ್ರಲಯವಾಕ್ಯವೂ (ಭಾವಾರ್ಥವೇನೆಂದರೆ, ಕಾಲವಿಶೇಷ

ಮೋಕ್ಷವೆಂಬುದು (ಮುಕ್ತಲೋಕವು), ಕ್ವಚಿತ್–ಎಲ್ಲಿಯೂ, ನ ಈಕ್ಷ್ಯತೇ–ಕಂಡುಬರುವುದಿಲ್ಲವೋ (ಅದೇ ಮುಕ್ತಲೋಕವೆಂಬ ವಿಷ್ಣುಲೋಕವು).

**ಪವಮಾನೋತ್ರ ಯತ್ಪ್ರಾರ್ಥ್ಯೋ ವಾಯೋಶ್ಚ ತದನುಜ್ಞಯಾ ।**
**ತಲ್ಲೋಕಪ್ರಾಪಕತ್ವಂ ತತ್ಸಿದ್ಧಂ ಗುರುಶಿರೋಮಣೇಃ ॥ ೧೬೬ ॥**

ಅತ್ರ–ವರ್ಗತ್ರಯಾತ್ಮಕವಾದ ಈ ಸೂಕ್ತದಲ್ಲಿ, ಯತ್–ಯಾವ ಕಾರಣದಿಂದ, ಪವಮಾನಃ–ಪವಮಾನನು (ಮುಖ್ಯದೇವನು), ಪ್ರಾರ್ಥ್ಯಃ–ಪ್ರಾರ್ಥಿಸಲ್ಪಡುವನೋ, ತದನುಜ್ಞಯಾ–ಶ್ರೀಹರಿಯ ಅನುಜ್ಞೆಯಿಂದ, ವಾಯೋಶ್ಚ–ವಾಯುವಿನಿಂದಲೇ, ತಲ್ಲೋಕಪ್ರಾಪಕತ್ವಂ – ವಿಷ್ಣುಲೋಕವನ್ನು ಹೊಂದಿಸುವಿಕೆಯು, ಸಿದ್ಧಂ–ಸಿದ್ಧವಾಗುವುದೋ, ತತ್–ಆದ್ದರಿಂದ, ಗುರುಶಿರೋಮಣೇಃ–ಗುರುಶ್ರೇಷ್ಠರಿಂದಲೇ (ಲಭ್ಯವಾದುದು–ಅವರಿಂದ ಲಭ್ಯವಾದ್ದರಿಂದ ಅವರದ್ದೇ ಆ ಫಲ).

**ಅಂತೇ ಜ್ಞಾನಾದ್ಬ್ರಹ್ಮಲೋಕಮಭಿಸಂಪದ್ಯತೇ ಕಿಲ ।**
**ಆವರ್ತತೇ ನ ಸ ಪುನಃ ಪುನರಾವರ್ತತೇ ನ ಸಃ ।**
**ದ್ವಿರುಕ್ತ್ಯೇತ್ಥಂ ನಿರಣಯತ್ಪುನರಾವೃತ್ತಿಶೂನ್ಯತಾಂ ॥ ೧೬೭ ॥**

---

ಮತ್ತು ಲಯಗಳನ್ನು ನಿರೂಪಿಸುವ ಸ್ಮೃತಿ (ಭಾಗವತವಾಕ್ಯ) ಪ್ರಮಾಣಗಳಲ್ಲಿ ಎಲ್ಲಿಯೂ, ಮುಕ್ತಲೋಕವು, ಕಂಡುಬರುವುದಿಲ್ಲ; ಆದ್ದರಿಂದ ಸಹ ಉತ್ಪತ್ತಿನಾಶಗಳಿಲ್ಲದ ನಿತ್ಯ ವಿಷ್ಣುಲೋಕಗಳು ವೈಕುಂಠಾದಿಗಳು (೧೬೫). ಮೂರು ವರ್ಗಗಳುಳ್ಳ (ಪವಮಾನ ಸೂಕ್ತದಲ್ಲಿ) ವಿಷ್ಣುಲೋಕ ಪ್ರಾಪ್ತಿಗಾಗಿ, ಪ್ರಾರ್ಥಿತನಾದ ವಾಯುದೇವನಿಂದಲೇ, ಶ್ರೀಹರಿಯ ಅನುಜ್ಞೆಯಿಂದ ಆ ಲೋಕವು ದೊರೆಯುವುದೆಂದು ಹೇಳಲಾಗಿದೆ; ಆದ್ದರಿಂದ ಲೋಕಗುರುವಾದ ವಾಯುದೇವನಿಂದಲೇ ಲಭ್ಯವಾದುದು, ವಿಷ್ಣುಲೋಕವು (೧೬೬). ಸಾಧನ ಪೂರ್ತಿಯ ನಂತರ

---

ಗಳಲ್ಲಿ ಸಂಭವಿಸುವ ನನ್ನ ಅವತಾರಗಳ ಕ್ರೀಡಾರಂಗವಾದ ಸಕಲವಿಶ್ವವನ್ನು, ಭ್ರೂಭಂಗಮಾತ್ರದಿಂದ ದ್ವಿಪರಾರ್ಧಕಾಲದನಂತರ ಲಯಗೊಳಿಸುವ ಕಾಲನಾಮಕ ಶ್ರೀಹರಿ ಮಹಿಮೆಯನ್ನು ಯಾರು ತಿಳಿಯುವನು); 'ಭೂರ್ಲೋಕಃ ಕಲ್ಪಿತಃ ಪದ್ಭ್ಯಾಂ ಭುವರ್ಲೋಕಶ್ಚ ನಾಭಿತಃ । ಹೃದಾ ಸ್ವರ್ಲೋಕ ಉರಸಾ ಮಹರ್ಲೋಕೋ ಮಹಾತ್ಮನಃ ।' ಇತ್ಯಾದಿ (ಭೂ, ಭುವಃ, ಸ್ವಃ, ಮಹಃ ಮೊದಲಾದ ಸೃಷ್ಟಿಯನ್ನು ವಿವರಿಸುವ ವಾಕ್ಯಗಳಲ್ಲಿಯೂ) ವೈಕುಂಠವು ಪ್ರಸಕ್ತವಾಗಿರುವುದಿಲ್ಲ.

ಛಾಂದೋಗ್ಯೋಪನಿಷತ್ತಿನ ಅಷ್ಟಮಪ್ರಪಾಠಕದ ಭಾಗದ್ವಯವನ್ನು ಮನಸ್ಸಿನಲ್ಲಿಟ್ಟು, ವೈಕುಂಠಪುರಿಮಾತ್ರ ಪರಮಮುಕ್ತಿಸ್ಥಾನವೆಂಬುದಾಗಿ ವರ್ಣಿಸುತ್ತಾರೆ; 'ಅರ' ಮತ್ತು 'ಣ್ಯ' ಎಂಬ ಸರೋವರಗಳು ಬ್ರಹ್ಮಲೋಕದಲ್ಲಿರುವುದೆಂದೂ (ಇವು ಶ್ವೇತದ್ವೀಪದಲ್ಲಿರುವ ಅಮೃತಸಮುದ್ರಗಳು), ಆಯುಷ್ಯವಿರುವ ಪರ್ಯಂತ ಬ್ರಹ್ಮಲೋಕದಲ್ಲಿದ್ದು 'ನ ಚ ಪುನರಾವರ್ತತೇ' ಎಂಬ ವಾಕ್ಯವೂ ಅಲ್ಲಿ ಪ್ರಯೋಗವಾಗುವುದರಿಂದ ಉಂಟಾಗುವ ಸಂಶಯವನ್ನು ಪರಿಹರಿಸಲು, ವಿವರಿಸುತ್ತಾರೆ :—

ಅಂತೇ–ಕಡೆಯಲ್ಲಿ (ಸಾಧನಪೂರ್ತಿಯಾದನಂತರ). ಜ್ಞಾನಾತ್–(ಬ್ರಹ್ಮದರ್ಶನದಿಂದ) ಬ್ರಹ್ಮಸಾಕ್ಷಾತ್ಕಾರದಿಂದ, ಬ್ರಹ್ಮಲೋಕಂ – ಬ್ರಹ್ಮಲೋಕವನ್ನು (ವೈಕುಂಠವನ್ನು – ವಿಷ್ಣುಲೋಕವನ್ನು), ಅಭಿಸಂಪದ್ಯತೇ ಕಿಲ – ಹೊಂದುತ್ತಾನೆಂಬುದು ನಿಶ್ಚಯವು; ಆವರ್ತತೇ ನ ಸ ಪುನಃ–ಆತನು ತಿರಿಗಿ ಬರುವುದಿಲ್ಲ; ಪುನರಾವರ್ತತೇ ನ ಸಃ–ಹಿಂದಿರುಗಿ ಮತ್ತೆ ಬರುವುದಿಲ್ಲ; ಇತ್ಥಂ – ಹೀಗೆ, ದ್ವಿರುಕ್ತ್ಯಾ–ಎರಡಾವರ್ತಿ ಹೇಳಿ, ಪುನರಾವೃತ್ತಿ ಶೂನ್ಯತಾಂ–ಹಿಂದೆ ಪುನಃ ತಿರುಗಿ ಬರುವುದರ ಅಭಾವವನ್ನು; ನಿರಣಯತ್–('ನ ಖಲ್ವೇವಂ' ಇತ್ಯಾದಿ ವಾಕ್ಯದ ಅರ್ಥವಿದು) ಬ್ರಹ್ಮಲೋಕಪದದಿಂದ ಹೇಳಲಾಗುವ ವೈಕುಂಠದಿಂದ, ಪುನರಾವೃತ್ತಿಯಿಲ್ಲೆಂದು (ಶ್ರುತಿಯು) ನಿಶ್ಚಯಿಸಿರುತ್ತದೆ.

**ಲೋಕೋಽಯಂ ಬ್ರಹ್ಮಣೋ ವಿಷ್ಣೋರಪರಾಜಿತಪೂಃ ಕಿಲ ।**
**ಕುಯುಕ್ತ್ಯಾ ಮೃತ್ಯುನಾ ದೋಷೈಃ ಪರಾಜಿಗ್ಯೇ ಯತೋ ನ ಸಾ**
॥ ೧೬೮ ॥

ಚತುರ್ಮುಖನ (ಬ್ರಹ್ಮ) ಲೋಕಕ್ಕೆ ದ್ವಿಪರಾರ್ಧಕಾಲವು ಮುಗಿಯಲು, ಪ್ರಲಯವು ಶ್ರುತ್ಯುಕ್ತವಾದುದರಿಂದ, ಪುನರಾವೃತ್ತಿ ಇಲ್ಲವೆಂಬುದು, ಆ ಲೋಕಕ್ಕೆ ಕೂಡುವುದಿಲ್ಲ; ಪರಬ್ರಹ್ಮನ ಲೋಕವೇ ನಿಶ್ಚಯವೆಂದು ನಿರೂಪಿಸುತ್ತಾರೆ :—

---

ಬ್ರಹ್ಮದರ್ಶನವಾದ ಮೇಲೆ, ಪ್ರಾಪ್ತವಾಗುವುದೆಂಬ ಬ್ರಹ್ಮಲೋಕವು, ವೈಕುಂಠವೇ ಸರಿ; ಅಲ್ಲಿಂದ 'ತಿರುಗಿ ಬರುವುದಿಲ್ಲ–ತಿರುಗಿಬರುವುದಿಲ್ಲ' ಎಂದು ಎರಡಾವರ್ತಿ ಹೇಳಿ, ಆ ಲೋಕವು ಪುನರಾವೃತ್ತಿ ರಹಿತವಾದುದೆಂದು (ನ ಚ ಪುನರಾವರ್ತತೇ– ನ ಚ ಪುನರಾವರ್ತತೆ') ಎಂದು ಶ್ರುತಿಯು, ಪ್ರಾಪ್ಯವಾದ ಲೋಕವು ನಿತ್ಯವಾದ ವಿಷ್ಣುಲೋಕವೆಂದು ನಿರ್ಣಯಿಸಿರುತ್ತದೆ (೧೬೭). ಛಾಂದೋಗ್ಯೋಪನಿಷತ್ತಿ

ಅಯಂ–ಈ, ಬ್ರಹ್ಮಣಃ–ಬ್ರಹ್ಮನ, ಲೋಕಃ–ಲೋಕವು, ವಿಷ್ಣೋಃ–ಶ್ರೀವಿಷ್ಣುವಿನ (ಲೋಕವೇ), ಕಿಲ–ಎಂಬುದು ಸ್ಪಷ್ಟವು ; ಯತಃ–ಏಕೆಂದರೆ, ಸಾ–ಆ (ವೈಕುಂಠವು), ಅಪರಾಜಿತಪೂಃ–(ಮೃತ್ಯುಮುಂತಾದ ದೋಷಗಳಿಂದ) ಜಯಿಸಲ್ಪಡದ ಕಾರಣ (ಅನ್ವರ್ಥನಾಮವುಳ್ಳ) ಅಪರಾಜಿತಪುರಿಯು (ವೈಕುಂಠಪುರಿಯು), ಕುಯುಕ್ತ್ಯಾ–ದುಷ್ಟೋಪಾಯಗಳುಳ್ಳ, ಮೃತ್ಯುನಾ–ಮೃತ್ಯುವಿನಿಂದ (ಸಂಸಾರದ ಸೆಳವಿನಿಂದ) (' ಮೃತ್ಯುರಸ್ಮಾದಪೈತಿ '; ' ನ ಯತ್ರ ಮಾಯಾ ' ಇತ್ಯಾದಿ ಪ್ರಮಾಣಗಳಿಂದ ಸಿದ್ಧವಾಗುವಂತೆ, ಪ್ರಕೃತಿಸ್ಪರ್ಶವೇ ಇಲ್ಲದ್ದರಿಂದ), ದೋಷೈಃ–(ತತ್ಕೃತ ವಿವಿಧ) ದುಃಖಾದಿದೋಷಗಳಿಂದಲೂ, ನ ಪರಾಜಿಗ್ಯೇ–ಗೆಲ್ಲಲ್ಪಡಲಿಲ್ಲ (ವೈಕುಂಠವನ್ನು ಪ್ರವೇಶಿಸಲು ಅವಕಾಶವಿಲ್ಲದಂತಾಯಿತು) ; ಆದ್ದರಿಂದ ಅಲ್ಲಿ ಉಕ್ತವಾದುದು ವೈಕುಂಠಲೋಕವೇ ಆಗಿದೆ–ಚತುರ್ಮುಖನ (ಸತ್ಯ) ಲೋಕವಲ್ಲ.

**ಸತ್ತ್ವ ಚಿತ್ತ್ವ ವಿಭುತ್ವಾದ್ಯೈಃ ಸತ್ಪ್ರಭೋಃ ಸಂಮಿತಾ ಕಿಲ ।**
**ಹಿರಣ್ಮಯಾಃ ಪುರಸ್ತಸ್ಯಾಃ ಪರಂಬ್ರಹ್ಮ ಪ್ರಭುಃ ಕಿಲ ॥ ೧೬೯ ॥**

ವೈಕುಂಠವು ನಾರಾಯಣ ಸದೃಶವೇ ಆದುದೆಂದೂ ಹೇಳುತ್ತಾರೆ :—

ಸತ್ತ್ವಂ–ಜನನ ಮರಣ ಬಂಧಾದಿದೋಷರಹಿತವೂ, ಚಿತ್ತ್ವಂ–ಚೇತನತ್ವವುಳ್ಳ ಮತ್ತು (ಲಕ್ಷ್ಮ್ಯಾತ್ಮಕವೆಂದೂ ಸೂಚಿತವಾಯಿತು), ವಿಭುತ್ವಾದ್ಯೈಃ–ವ್ಯಾಪ್ತತ್ವಾದಿಗುಣಗಳಿಂದಲೂ, ಸತ್ಪ್ರಭೋಃ–ಸರ್ವಸಜ್ಜನರ ಮಹಾಸ್ವಾಮಿಯಾದ ಶ್ರೀಹರಿಗೆ, ಸಂಮಿತಾ ಕಿಲ–(ವೈಕುಂಠವು) ಸದೃಶವೇ ಸರಿ ; ತಸ್ಯಾಃ–ಆ ಲೋಕದ,

---

ನಲ್ಲಿ ಒಂದೆಡೆ ಪ್ರಸಕ್ತವಾದ ಬ್ರಹ್ಮಲೋಕವು, ಚತುರ್ಮುಖ ಬ್ರಹ್ಮಲೋಕವಲ್ಲ ; ವಿಷ್ಣುಲೋಕವೇ ಅದು ; ಅಪರಾಜಿತಪುರಿ ಎಂದು ಹೇಳಲ್ಪಡುತ್ತದೆ ; ಯಾವ ಉಪಾಯದಿಂದಲೂ, ಮೃತ್ಯುವು ಮತ್ತು ಅದರೊಡನಿರುವ ವಿವಿಧ ದುಃಖಾದಿ ದೋಷಗಳೂ ಆ ಪುರಿಯನ್ನು ಜಯಿಸಲಾರದ ಕಾರಣದಿಂದ 'ಅಪರಾಜಿತ'ವೆಂಬ ಅನ್ವರ್ಥನಾಮವುಳ್ಳದ್ದಾಗಿದೆ (೧೬೮). ವೈಕುಂಠವು ನಾರಾಯಣನ ಸದೃಶವೇ ಆಗಿದೆ; ಅದು, ಶ್ರೀ ನಾರಾಯಣನಂತೆ ಜನನಮರಣ ಬಂಧಾದಿ ದೋಷ ರಹಿತವೂ, ಚೇತನಾತ್ಮಕವೂ ವ್ಯಾಪ್ತತ್ವಾದಿಗುಣಗಳುಳ್ಳದ್ದೂ ಆಗಿದೆ ; ಅಲ್ಲಿರುವ ನಗರಿಗಳೆಲ್ಲವೂ ಹಿರಣ್ಮಯಗಳೇ ಆಗಿವೆ ; ಅನಂತಕಲ್ಯಾಣ ಗುಣಪೂರ್ಣನಾದ

ಪುರಃ–ಪಟ್ಟಣಗಳು, ಹಿರಣ್ಮಯಾಃ–ಸುವರ್ಣಾತ್ಮಕವೇ (ರತ್ನ ನಿರ್ಮಿತಗಳೇ); ಪ್ರಭುಃ – ಅದರ ಪ್ರಭುವು, ಪರಂಬ್ರಹ್ಮ ಕಿಲ – ಪರಬ್ರಹ್ಮನೇ ಅಲ್ಲವೇ? (ಸರ್ವೋತ್ತಮನಾದ ಅನಂತಗುಣಪೂರ್ಣನಾದ ಸರ್ವಸ್ವಾಮಿಯಾದ ಶ್ರೀಹರಿಯೇ ರಾಜಾಧಿರಾಜನಾಗಿರಲು ಏನು ಕೊರತೆ? ಸರ್ವಸಮೃದ್ಧವಾಗಿಯೇ ಇದೆ).

**ಇತಿ ಛಂದೋಗೋಪನಿಷಜ್ಜಗೌ ಯತ್ತಜ್ಜಗತ್ಪ್ರಭೋಃ ।**
**ವೈಕುಂಠಾಖ್ಯೈವ ನಗರೀ ಸಾ ಪುರೀತಿ ಮತಿರ್ಮಮ ॥ ೧೭೦ ॥**

ಯತ್–ಯಾವ ಕಾರಣದಿಂದ, ಇತಿ–ಹೀಗೆ, ಛಂದೋಗೋಪನಿಷತ್–ಛಾಂದೋಗ್ಯೋಪನಿಷತ್ತು (ಶ್ರುತಿಯು), ಜಗೌ–ಕೀರ್ತಿಸಿರುವುದೋ, ತತ್–ಆದ್ದರಿಂದ, ಸಾ ಪುರೀ – ಆ ನಗರವು, ಜಗತ್ಪ್ರಭೋಃ – ಜಗತ್ತಿನ (ವಿಶ್ವದ) ಪ್ರಭುವಾದ ಶ್ರೀಹರಿಯ ವೈಕುಂಠಾಖ್ಯನಗರೀ ಇತಿ–ವೈಕುಂಠವೆಂಬ ನಗರಿಯೆಂದು, ಮಮ–ನನ್ನ, ಮತಿಃ–ನಿಶ್ಚಯವಾಗಿದೆ.

**ಯತ್ರಾಶ್ವತ್ಥೋ ಮೃತಸ್ಯಂದೀ ಯತ್ರಾರಣ್ಯೌ ಸುಧಾರ್ಣವೌ ।**
**ಸಾಶ್ವತ್ಥಪ್ರಿಯದುಗ್ಧಾಬ್ಧಿಶಾಯಿನಃ ಪೂರ್ನ ಸಂಶಯಃ ॥ ೧೭೧ ॥**

ವೈಕುಂಠವೇ ಎಂದು ನಿಶ್ಚಯಿಸಲು ಬೇರೆ ನಿಮಿತ್ತವನ್ನು ಹೇಳುತ್ತಾರೆ:—

ಯತ್ರ–ಎಲ್ಲಿ (ಯಾವ ಪ್ರದೇಶದಲ್ಲಿ), ಅಶ್ವತ್ಥೋಮೃತಸ್ಯಂದಿನೀ–ಅಶ್ವತ್ಥ ವೃಕ್ಷ ಮತ್ತು ಸುಧಾ ಸಮುದ್ರಗಳು ಇರುವುವೋ, ಯತ್ರ–ಎಲ್ಲಿ, ಅರಣ್ಯೌ–[1]

ಪರಂಬ್ರಹ್ಮನೇ ಆ ಲೋಕದ ಮಹಾಪ್ರಭುವಾಗಿದ್ದಾನೆಯಷ್ಟೆ (೧೬೯). ಹೀಗೆಂದು ಬ್ರಹ್ಮಲೋಕವನ್ನು ಛಂದೋಗೋಪನಿಷತ್ತು ಕೀರ್ತಿಸಿರುವುದರಿಂದ, ಅದು, ಜಗದೊಡೆಯನಾದ ಶ್ರೀ ನಾರಾಯಣನ ವೈಕುಂಠ ನಗರಿಯೆಂದೇ ನನ್ನ ನಿಶ್ಚಿತಾಭಿಪ್ರಾಯವಾಗಿದೆ (೧೭೦); ಅಲ್ಲಿ ಹೇಳಲಾಗುವ ಅಶ್ವತ್ಥವೃಕ್ಷವೂ ('ಅಶ್ವತ್ಥಃ ಸರ್ವವೃಕ್ಷಾಣಾಂ'–ಗೀತಾ), ಅಮೃತ ಸರೋವರಗಳೂ (ಅರ ಮತ್ತು ಣ್ಯ, ಎಂಬ

1 'ರುಷದಾಹ ಇತಿ' ಧಾತುವಿನಿಂದ, ದುಃಖವಿರುದ್ಧವಾದ ಸುಖವೆಂಬ ಅರ್ಥವುಳ್ಳ 'ಅರ'ವೂ, 'ಣ' ಪದೋಕ್ತಸುಖರೂಪತ್ವ 'ಯ' ಪದೋಕ್ತಜ್ಞಾನರೂಪತ್ವಗಳಿರುವುದರಿಂದ ಸುಖಜ್ಞಾನಾತ್ಮಕ 'ಣ್ಯ' ಎಂಬುದೂ, ಎರಡು ಮುಕ್ತರ ಕ್ರೀಡಾದಿಗಳಿಗಿರುವ, ಅಮೃತ ಸರೋವರಗಳು ; ಕ್ಷೀರಸಮುದ್ರ ಮಧ್ಯದ ಶ್ವೇತದ್ವೀಪದಲ್ಲಿವೆ.

ಅರ ಣ್ಯಗಳೆಂಬ, ಸುಧಾರ್ಣವೌ-(ಪ್ರಸಿದ್ಧ) ಅಮೃತಸಮುದ್ರಗಳೋ, ಸಾ-ಅದು (ಆ ಲೋಕವು), ಅಶ್ವತ್ಥಪ್ರಿಯ ದುಗ್ಧಾಬ್ಧಿಶಾಯಿನಃ-ಅಶ್ವತ್ಥಪ್ರಿಯನಾದ ಕ್ಷೀರ ಸಾಗರಶಾಯಿಯಾದ (ಶ್ರೀಹರಿಯ) (ಶ್ವೇತದ್ವೀಪಸ್ಥ), ಪೂಃ - ನಗರಿಯು, ಸಂಶಯಃ ನ-ಸಂಶಯವಿಲ್ಲ.

**ಕಿಂ ಚ ಶ್ರುತಿರ್ಯತಃ ಸ್ಪಷ್ಟಮಮೃತೇನಾವೃತಾಂ ಪುರೀಂ ।**
**ಆಹ ತೇನಾಪಿ ಮುಕ್ತಸ್ಯ ಪುರೀ ಸೇಯಂ ನ ಸಂಶಯಃ ॥ ೧೭೨ ॥**

'ಯೋ ವೈ ತಾಂ ಬ್ರಹ್ಮಣೋ ವೇದ ಅಮೃತೇನಾವೃತಾಂ ಪುರೀಂ' ಎಂಬ ಶ್ರುತ್ಯರ್ಥವನ್ನು ಗಮನಿಸಿದರೂ, ಆ ಲೋಕವು ಮುಕ್ತರ ಆವಾಸಭೂತವಾದುದೆಂದೇ ಸಮರ್ಥಿತವಾಗುತ್ತದೆ; ಅದೇ ವೈಕುಂಠನಗರಿಯು (ವೈಕುಂಠನ - ಶ್ರೀಹರಿಯು ಸದಾ ಪ್ರಕಟನಾಗಿರುವ ಪುರಿಯು), ಎಂದು ಹೇಳುತ್ತಾರೆ :—

ಕಿಂಚ-ಮತ್ತೇನೆಂದರೆ, ಯತಃ-ಯಾವ ಕಾರಣದಿಂದ, ಶ್ರುತಿಃ-ಶ್ರುತಿಯು, ಸ್ಪಷ್ಟಂ-ಸ್ಪಷ್ಟವಾಗಿ, ಅಮೃತೇನಾವೃತಾಂ-ಅಮೃತದ ಪೂರ್ಣವಾದ (ತುಂಬಿದ), ಪುರೀಂ-ಪುರಿಯನ್ನು, ಆಹ-ಹೇಳಿರುತ್ತದೆಯೋ, ತೇನ ಅಪಿ-ಆ ಕಾರಣದಿಂದ ಸಹ, ಸಾ-ಆ, ಇಯಂ ಪುರೀ-ಉಕ್ತನಗರಿಯು, ಮುಕ್ತಸ್ಯ-ನಿತ್ಯಮುಕ್ತನಾದ ಶ್ರೀಹರಿಯ (ಮತ್ತು ಮುಕ್ತಜೀವ ಸಮುದಾಯದ) ನಗರವು ; ಸಂಶಯಃ ನ- ಸಂದೇಹವಿಲ್ಲ.

**ಜಾತ್ಯೇಕವಚನಂ ಚೇದಮಾವೃತಾಮಿತಿ ಕೀರ್ತನಾತ್ ।**
**ಅತೋಽಮೃತೈಃ ಪೂರ್ಣಪುರೀ ನಾರಾಯಣಪುರೀ ಧ್ರುವಂ ॥೧೭೩॥**

ಇದಂ - ಅಮೃತವೆಂಬ ಪದವು, ಜಾತ್ಯೇಕವಚನಂ ಚ - ಆ ಜಾತಿಯ (ಗುಂಪಿನ) ಬಹುವಸ್ತುಗಳನ್ನು ತಿಳಿಸುವುದಕ್ಕೆ ಉಪಯೋಗಿಸಿರುವ ಏಕವಚನವೇ

---

ಸಮುದ್ರಗಳೂ) ಇರುವುದು ಶ್ವೇತದ್ವೀಪದಲ್ಲಿ ; ಅದೇ ಕ್ಷೀರಸಾಗರಶಾಯಿಯೂ, ಅಶ್ವತ್ಥಪ್ರಿಯನೂ ಆದ ಶ್ರೀ ನಾರಾಯಣನ ಪುರಿಯೆಂಬುದು ನಿಶ್ಚಯ (೧೭೧). ಇಷ್ಟುಮಾತ್ರವಲ್ಲ ; ಶ್ರುತಿಯು 'ಅಮೃತೇನಾವೃತಾಂ ಪುರೀಂ' ಎಂದು ಸ್ಪಷ್ಟವಾಗಿ, ಶ್ರೀ ನಾರಾಯಣ ಪುರಿಯನ್ನು ವರ್ಣಿಸುವುದರಿಂದ ಸಹ ಅದೇ ನಿತ್ಯಮುಕ್ತನಾದ ನಾರಾಯಣನು ಸದಾ ವಿರಾಜಿಸುವ ನಗರಿಯು ; ಅಲ್ಲಿ ಮುಕ್ತ ಚೇತನರೆಲ್ಲ ವಾಸಿಸುತ್ತಾರೆ ; ಅಲ್ಲಿಯೇ ಅಮೃತ ಸಮುದ್ರಗಳಿರುವುದೆಂದೂ ಶ್ರುತಿಯೂ ಹೇಳಿರುತ್ತದೆ (೧೭೨). ಇದಂ ಈ 'ಅಮೃತ'ವೆಂಬ ಪದವು

(ಆಗಿದೆ); ಆವೃತಾಂ ಇತಿ–ಆವೃತವೆಂದು, ಕೀರ್ತನಾತ್–(ಬಹು ಮುಕ್ತಜನ ಸಾಪೇಕ್ಷವಾದ್ದರಿಂದ) ಹಾಗೆ ಹೇಳಿರುವುದರಿಂದ, ಅತಃ – ಈ ಕಾರಣದಿಂದ, ಅಮೃತೈಃ–ಅಮೃತಗಳಿಂದ (ಸುಧಾದಿ ಬಹುನಿತ್ಯವಸ್ತುಗಳಿಂದ) ಪೂರ್ಣಪುರೀ–ತುಂಬಿದ ನಗರಿಯು, ನಾರಾಯಣಪುರೀ – ನಾರಾಯಣಪುರಿಯು, ಧ್ರುವಂ–(ಎಂಬುದು) ಸಿದ್ಧಯವು.

**ದೇವಾನಾಂ ಪೂರಯೋಧ್ಯೇತಿ ಯದಯೋಧ್ಯಾಭಿದಾಂ ಪುರಃ ।**
**ಪ್ರಾದಾತ್ತಸ್ಯಾಃ ಶ್ರುತಿಃ ಪೂರ್ವಂ ಪೂರ್ವಂ ತದ್ವಿಷ್ಣೋರೇವ**
**ಸಾ ಪುರೀ ॥ ೧೭೪ ॥**

ಶ್ರುತ್ಯುಕ್ತ ಅಮೃತಪುರಿಯೆಂಬುದೇ ವಿಷ್ಣುಪುರಿಯೆಂಬುದರ ಜ್ಞಾಪಕವೆನ್ನುತ್ತಾರೆ :—

ದೇವಾನಾಂ–ಮುಕ್ತದೇವತೆಗಳ, ಪೂಃ–ನಗರಿಯು, ಅಯೋಧ್ಯಾ ಇತಿ–ಅಯೋಧ್ಯೆಯೆಂದು, ಯತ್ – ಯಾವ ಕಾರಣದಿಂದ, ಅಯೋಧ್ಯಾಭಿಧಾಂ–ಅಯೋಧ್ಯೆ ಎಂಬ ನಾಮವನ್ನು, ಪುರಃ–ಪಟ್ಟಣಕ್ಕೆ, ತಸ್ಯಾಃ–ಶ್ರುತ್ಯುಕ್ತವಾದ ಆ ನಗರಿಗೆ, ಶ್ರುತಿಃ–ಶ್ರುತಿಯು ('ಯೋ ವೈ ತಾಂ' ಎಂಬ ಶ್ರುತಿಯು) ಪೂರ್ವಂ–ಮೊದಲೇ, ಪ್ರಾದಾತ್–ಕೊಟ್ಟಿರುತ್ತದೆಯೋ, (ಶ್ರೀರಾಮನ ರಾಜಧಾನಿಯಾದ ಅಯೋಧ್ಯೆಯೆಂಬ ನಾಮವೇ ಜ್ಞಾಪಕವೆಂದೂ ತಿಳಿಯಬಹುದಾಗಿದೆ), ತತ್–ಆ ಕಾರಣದಿಂದ, ಪೂರ್ವಂ–ಅನಾದಿಯಿಂದಲೂ, ಸಾ ಪುರೀ–ಆ ವೈಕುಂಠ ಮಧ್ಯ ನಗರಿಯು, ವಿಷ್ಣೋಃ ಏವ–ಶ್ರೀಮಹಾವಿಷ್ಣುವಿನ ನಗರಿಯೇ ಸರಿ.

---

ಜಾತ್ಯೇಕ ವಚನವು ; ಸುಧಾದಿ ಬಹು ಆನಂದಪ್ರದವೂ ನಿತ್ಯವೂ ಆದ ವಸ್ತುಗಳು ಈ ನಾರಾಯಣ ಪುರಿಯಲ್ಲಿವೆ ; ಇದೇ ಪೂರ್ಣಪುರಿಯು; ಅಮೃತವು, ಅಲ್ಲಿ, 'ಆವೃತಾಂ' ತುಂಬಿದೆ ಎಂದೂ, ಬಹುಮುಕ್ತರಿಂದ ಆಕಾಂಕ್ಷಿಸಿ ಉಪಯೋಗಿಸಲಾಗುವುದೆಂದೂ, ಶ್ರುತಿಯು ಹೇಳುತ್ತದೆ (೧೭೩). ಮುಕ್ತದೇವತೆಗಳಿಂದ ತುಂಬಿರುವ ಆ ಪುರಿಯನ್ನು ಶ್ರುತಿಯೇ ಅಯೋಧ್ಯಾ ಎಂಬ ಹೆಸರಿನಿಂದ ಕರೆಯುತ್ತಿದೆ 'ಯೋ ವೈ ತಾಂ' ಎಂಬ ಶ್ರುತಿಯೇ ಇದನ್ನು ಅನಾದಿಯೆಂದೂ ನಿರೂಪಿಸಿದೆ ; ಶ್ರೀರಾಮರೂಪನಾಗಿ ಶ್ರೀ ನಾರಾಯಣನೇ (ವಿಷ್ಣುವೇ) ಅವತರಿಸಿದಾಗ, ಶ್ರೀರಾಮನ ರಾಜಧಾನಿಯಾದ ಪುರಿಯು, ಅದನ್ನು ವಿಷ್ಣುಪುರವೆಂದೇ

**ನಾನಾಜನಪದಾಕೀರ್ಣಂ ವೈಕುಂಠಂ ತದ್ಧರೇಃ ಪದಂ ।**
**ತನ್ಮಧ್ಯೇ ನಗರೀ ದಿವ್ಯಾ ಸಾಯೋಧ್ಯೇತಿ ಪ್ರಕೀರ್ತಿತಾ ।**
**ಇತಿ ಪಾದ್ಮಸ್ಯ ವಚನಾದ್ಯದಯೋಧ್ಯಾ ಹರೇಃ ಪುರೀ ॥ ೧೭೫ ॥**

ಅಯೋಧ್ಯೆ ಎಂಬುದು ವೈಕುಂಠನಗರಿಯ ನಾಮವೇ, ಎಂಬಲ್ಲಿ ಪ್ರಮಾಣವನ್ನು ಹೇಳುತ್ತಾರೆ :—

ನಾನಾಜನಪದಾಕೀರ್ಣಂ–ವಿವಿಧಮುಕ್ತಜೀವರಿಂದ ತುಂಬಿದ, ವೈಕುಂಠಂ–ವೈಕುಂಠವೆಂಬುದು, ಹರೇಃ ಪದಂ–ಶ್ರೀಹರಿಯ ಲೋಕವು ; ತನ್ಮಧ್ಯೇ–ಅದರ ಮಧ್ಯದಲ್ಲಿ (ಆ ಲೋಕ ಮಧ್ಯದಲ್ಲಿ), ದಿವ್ಯಾನಗರೀ – ದೇವೋತ್ತಮನಿಗೆ ಯೋಗ್ಯವಾದ ನಗರಿಯು (ಇರುತ್ತದೆ), ಸಾ–ಆ ವೈಕುಂಠ ಮಧ್ಯನಗರಿಯು, ಅಯೋಧ್ಯಾ ಇತಿ–ಅಯೋಧ್ಯೆಯೆಂದು, ಪ್ರಕೀರ್ತಿತಾ–ಶ್ರುತಿಪ್ರಸಿದ್ಧವಾಗಿದೆ ; ಇತಿ – ಹೀಗೆಂದು, ಪಾದ್ಮಸ್ಯ – ಪದ್ಮಪುರಾಣದ, ವಚನಾತ್ – ವಾಕ್ಯದಿಂದ, ಯತ್ – ಯಾವ ಕಾರಣದಿಂದ, ಹರೇಃ – ಶ್ರೀಹರಿಯ, ಪುರೀ – ನಗರವು, ಅಯೋಧ್ಯಾ – ವೈಕುಂಠಾಂತಃಪುರವಾಚಕವಾದುದೋ (ಅಂತಃಪುರವು ಅನ್ಯ ಪ್ರವೇಶಕ್ಕೆ ಅವಕಾಶವಿಲ್ಲದುದಷ್ಟೆ) ಆದ್ದರಿಂದಲೇ (ತತ್ಪದವಾಚ್ಯವಾದುದೇ 'ಅಮೃತಾಂ ಪುರೀಂ' ಎಂಬಲ್ಲಿ ಪ್ರಸಕ್ತವಾದ ನಾರಾಯಣಪುರಿಯು).

**ವಿಭ್ರಾಜಮಾನಾಂ ಹರಿಣೀಮಿತಿ ಸೈವ ಶ್ರುತಿಃ ಪುನಃ ।**
**ಹರಿಣೀಮಾಹ ತೇನಾಪಿ ಹರೇರೇವ ಪುರೀ ಭವೇತ್ ॥ ೧೭೬ ॥**

---

ಜ್ಞಾಪಿಸುತ್ತದೆ) ವೈಕುಂಠಲೋಕದ ಮಧ್ಯನಗರಿಯಾದ ವೈಕುಂಠವೇ ಶ್ರೀವಿಷ್ಣುಪುರವು, ಎಂದು ಈ ಶ್ರುತಿಯಿಂದಲೂ ಸಿದ್ಧವಾಗುತ್ತದೆ (೧೭೪). ವಿಶ್ವದ ನಾನಾ ಲೋಕಗಳಿಂದ ಪ್ರಾಪ್ತರಾದ ವಿವಿಧ ಮುಕ್ತಜೀವರು, ವೈಕುಂಠನಾಮಕ ಶ್ರೀಹರಿಯ ಲೋಕದಲ್ಲಿ ತುಂಬಿರುತ್ತಾರೆ ; ಆ ಲೋಕದ ಮಧ್ಯದಲ್ಲಿ ಶ್ರೀಹರಿಯ ದಿವ್ಯವಾದ ನಗರಿ ಇರುತ್ತದೆ ; ಅದು ಅಯೋಧ್ಯಾ ಎಂದು ಶ್ರುತಿ ಪ್ರಸಿದ್ಧವಾಗಿದೆ; ಹೀಗೆಂದು ಪದ್ಮಪುರಾಣದ ವಾಕ್ಯವೂ ಇದೆ ; ವೈಕುಂಠನಾಮಕ ಶ್ರೀಹರಿಯ ಅಂತಃಪುರವು ಅಯೋಧ್ಯೆ ಎಂಬ ಅನ್ವರ್ಥನಾಮವುಳ್ಳದ್ದು–ಸರ್ವದೇವೋತ್ತಮನ ಅದ್ಭುತವಾದ ನಗರಿಯು ; ಅದೇ ಮಹಾ ವಿಷ್ಣುನಗರಿಯು (೧೭೫). 'ಯೋ ವೈ ತಾಂ' ಎಂಬ ಶ್ರುತಿಯು, ಯಜುಃಶಾಖೆಯ ಒಂದು ಭಾಗದಲ್ಲಿ

ಸೈವ ಶ್ರುತಿಃ—ಆ 'ಯೋ ವೈ ತಾಂ' ಎಂಬ ಶ್ರುತಿಯು (ಯಜುಃ ಶಾಖೆಯ ಒಂದು ಭಾಗದಲ್ಲಿ), ವಿಭ್ರಾಜಮಾನಾಂ ಹರಿಣೀಂ ಇತಿ—('ವಿಭ್ರಾಜಮಾನಾಂ ಹರಿಣೀಂ ಯಶಸಾ ಸಂಪರೀವೃತಾಂ' ಎಂದು) ಶ್ರೀಹರಿಕೀರ್ತಿಯೆಂಬ ಪ್ರಕಾಶ ದಿಂದ ಆವೃತವಾದುದನ್ನು ಎಂದು, ಪುನಃ – ತಿರುಗಿ (ಮತ್ತೆ), ಹರಿಣೀಂ– ('ಹರೇಃ ಇಯಂ' ಎಂಬ ವ್ಯುತ್ಪತ್ತಿಯಿಂದ) ಹರಿಣಿಯನ್ನೆಂದು, ಆಹ–ಹೇಳಿತು ; ತೇನಾಪಿ–ಈ ಕಾರಣದಿಂದಲೂ, ಪುರೀ–ವೈಕುಂಠ ನಗರಿಯು, ಹರೇಃ ಏವ– ಶ್ರೀಹರಿಯ ನಗರವೇ, ಭವೇತ್–ಎಂದು ಸಿದ್ಧವಾಗುತ್ತದೆ.

**ಪುರೀಂ ಹಿರಣ್ಮಯೀಂ ಬ್ರಹ್ಮ ವಿವೇಶೇತಿ ಯತಃ ಶ್ರುತಿಃ ।**
**ಬ್ರಹ್ಮಣೋಂತೇ ಪ್ರವೇಶಾರ್ಹಾಮಾಹ ತೇನಾಪಿ ಸಾ ಪುರೀ ॥೧೭೭॥**

ಅಂತೇ – ದ್ವಿಪರಾರ್ಧಕಾಲದನಂತರ, ಹಿರಣ್ಮಯೀಂ – ಸುವರ್ಣಾತ್ಮಕ, ಪುರೀಂ– ನಗರಿಯನ್ನು, ಬ್ರಹ್ಮ – ಚತುರ್ಮುಖನು, ವಿವೇಶ – ಪ್ರವೇಶಿಸಿದನು, ಇತಿ–ಎಂದು, ಯತಃ–ಯಾವ ಕಾರಣದಿಂದ, ಶ್ರುತಿಃ–ಶ್ರುತಿಯು, ಬ್ರಹ್ಮಣಃ– ಚತುರ್ಮುಖನಿಗೆ ಪ್ರವೇಶಾರ್ಹಾಂ – ಮುಕ್ತಬ್ರಹ್ಮಪ್ರವೇಶಯೋಗ್ಯವೆಂದೂ (ಯೋಗ್ಯತ್ವವನ್ನು), ಆಹ–ಹೇಳಿರುವುದೋ, ತೇನಾಪಿ–ಈ ಕಾರಣದಿಂದ ಸಹ, ಸಾ ಪುರೀ–ಆ ವೈಕುಂಠನಗರವು (ವಿಷ್ಣುಪುರವೇ ಸರಿ, ಎಂದು ಮುಂದಿನ ಶ್ಲೋಕ ದಿಂದ ಅನ್ವಯವನ್ನು ತಿಳಿಯಬಹುದು).

**ವಿಷ್ಣೋರೇವ ಪುರೀ ಬ್ರಹ್ಮನಾಮ್ನಸ್ತಸ್ಯೈವ ಪೂಸ್ತ್ವತಃ ।**
**ಕ್ವಚಿದ್ಬ್ರಹ್ಮಪುರೀ ಯುಕ್ತಾ ಸೈವ ಬ್ರಹ್ಮ ವಿಶೇದ್ಧಿ ಯಾಂ ॥ ೧೭೮ ॥**

ಛಾಂದೋಗ್ಯ ಉಪನಿಷತ್ತಿನಲ್ಲಿ ಹೇಳಿದ 'ಬ್ರಹ್ಮಪುರಿ' ಶಬ್ದಾರ್ಥವನ್ನು ಹೇಳುತ್ತಾರೆ :—

---

'ವಿಭ್ರಾಜಮಾನಾಂ ಹರಿಣೀಂ' ಎಂದು, ಆ ಪಟ್ಟಣವನ್ನು ಹರಿಯದೇ ಎಂಬರ್ಥ ವನ್ನು 'ಹರಿಣೀಂ' ಶಬ್ದವನ್ನು ಪ್ರಯೋಗಿಸಿ, ಸಾಧಿಸುತ್ತದೆ ; ಆದ್ದರಿಂದ ವೈಕುಂಠನಗರಿಯೇ ಮಹಾವಿಷ್ಣುಪುರವೆಂದು ಸಿದ್ಧ (೧೭೬). ಬ್ರಹ್ಮನ (ಚತುರ್ಮುಖನ) ದ್ವಿಪರಾರ್ಧಕಾಲಾವಧಿಯು ಪೂರ್ಣಗೊಳ್ಳಲು, ಮುಕ್ತನಾಗಿ ಹಿರಣ್ಮಯವಾದ ಪುರಿಯನ್ನು ಪ್ರವೇಶಿಸುವನೆಂದು, ಹೇಳಿ, ಶ್ರುತಿಯು, ಮುಕ್ತ ಬ್ರಹ್ಮನಿಗೆ ಪ್ರವೇಶ ಯೋಗ್ಯತ್ವವನ್ನು, ಹೇಳಿದ್ದರಿಂದ ಸಹ ಅದು, ಬ್ರಹ್ಮಪುರಿ ಎನಿಸಿದೆ ; (೧೭೭). ಬ್ರಹ್ಮಶಬ್ದದಿಂದ ಪರಬ್ರಹ್ಮ (ವಿಷ್ಣು)ನೂ ವಾಚ್ಯ

ಬ್ರಹ್ಮನಾಮ್ನಃ–'ಬ್ರಹ್ಮ' ಎಂಬ ನಾಮಕ್ಕೆ, ತಸ್ಯ ಏವ–ಆತನದೇ ಆದ, ಪೂಸ್ತ್ವತಃ–ಪುರುಷನೆಂಬರ್ಥವೂ ಇರುವುದರಿಂದ, (ಪರಬ್ರಹ್ಮನೂ ಬ್ರಹ್ಮನೆಂದೇ ಕರೆಯಲ್ಪಡುವುದರಿಂದ), ವಿಷ್ಣೋಃ ಏವ ಪುರೀ–ವಿಷ್ಣುವಿನ ಪುರಿಯೇ, ಕ್ವಚಿತ್–ಕೆಲವುವೇಳೆ, (ಸ್ಥಲವಿಶೇಷದಲ್ಲಿ–ಶ್ರುತಿಯಲ್ಲಿ), ಬ್ರಹ್ಮಪುರೀ–ಬ್ರಹ್ಮಪುರಿಯೆಂದೇ, ಯುಕ್ತಾ – ನಾಮವುಳ್ಳದ್ದೂ ಆಗಿದೆ ('ಯೋ ವೈ ತಾಂ' ಎಂಬ ಶ್ರುತಿಯಲ್ಲಿ ಬ್ರಹ್ಮಪುರೀ ಎಂಬ ಶಬ್ದವೂ ಬರುತ್ತದೆ); ಯಾಂ–ಯಾವುದನ್ನು (ಯಾವ ಪುರಿಯನ್ನು), ಬ್ರಹ್ಮಾ–ಚತುರ್ಮುಖನು, ವಿಶೇತ್–ಪ್ರವೇಶಿಸುವನೋ, ಹಿ–ಎಂಬ ಶ್ರುತಿ ಪ್ರಸಿದ್ಧಿಯೋ, ಸಾ ಏವ–ಅದೇ (ವೈಕುಂಠನಗರಿಯು) ಆಗಿದೆ (ಗಜಪ್ರವೇಶಕ್ಕೆ ಅರ್ಹವಾದ ಶಾಲೆಯು, ಗಜಶಾಲೆ ಎಂದು ಕರೆಯಲ್ಪಡುವಂತೆ, ವೈಕುಂಠನಗರಿಯೂ ಬ್ರಹ್ಮಪುರವೆಂದು ಕರೆಯಲ್ಪಡುತ್ತದೆ).

**ಯೇ ತು ಲೋಕಾಂತರಪ್ರಾಪ್ತಿಮೋಕ್ಷಂ ನಾಚಕ್ಷತೇ ಬುಧಾಃ ।**
**ತೇಷಾಂ ವೃಥಾರ್ಚಿರಾದ್ಯಧ್ವನೋರ್ಧ್ವೋರ್ಧ್ವಗಮನಂ ಭವೇತ್**
॥ ೧೭೯ ॥

ಊರ್ಧ್ವಲೋಕಗಮನವೆಂಬ ಅರ್ಚಿರಾದಿ ಮಾರ್ಗನಿರೂಪಣ ಪ್ರಕ್ರಿಯೆಯಿಂದಲೂ, ವೈಕುಂಠಪುರಿಯೇ ಮುಕ್ತಿಸ್ಥಾನವೆಂದು ಸಿದ್ಧವಾಗುತ್ತದೆನ್ನುತ್ತಾರೆ :—

ಯೇ ತು ಬುಧಾಃ–ಯಾವ ಜ್ಞಾನಿಗಳಾದರೊ (ಅಬುಧಾಃ–ಅಜ್ಞರೋ), ಲೋಕಾಂತರ ಪ್ರಾಪ್ತಿಮೋಕ್ಷಂ–ಲೋಕಾಂತರ(ಬೇರೆ ಲೋಕ)ವನ್ನು ಹೊಂದುವುದೆಂಬ ಮೋಕ್ಷವನ್ನು, ನ ಆಚಕ್ಷತೇ–ಹೇಳುವುದಿಲ್ಲವೋ (ತಿಳಿಯುವುದಿಲ್ಲವೋ), ತೇಷಾಂ – ಅವರಿಗೆ, ಅರ್ಚಿರಾದ್ಯಧ್ವನಃ – ಅರ್ಚಿರಾದಿ ಪರಲೋಕಗಮನ

---

ನಾಗಿರುವುದರಿಂದ, ವೈಕುಂಠ ನಗರವು ಕೆಲವು ಸ್ಥಲಗಳಲ್ಲಿ 'ಬ್ರಹ್ಮಪುರಿ' ಎಂದೂ ಕರೆಯಲ್ಪಟ್ಟಿರುತ್ತದೆ 'ಯೋ ವೈ ತಾಂ' ಶ್ರುತಿಯಲ್ಲಿ ಸಹ ಬ್ರಹ್ಮಪುರೀ ಎಂಬ ಶಬ್ದ ಪ್ರಯೋಗವೇ ಇದೆ; ಚತುರ್ಮುಖ ಬ್ರಹ್ಮನ ಪ್ರವೇಶ ಯೋಗ್ಯವಾದ್ದರಿಂದಲೂ ಬ್ರಹ್ಮಪುರೀ ಎಂಬ ನಾಮವು ಯುಕ್ತಿ ಯುಕ್ತವೇ ಆಗುತ್ತದೆ (೧೭೮). ಲೋಕಾಂತರ ಪ್ರಾಪ್ತಿರೂಪದ ಮೋಕ್ಷವನ್ನು ಒಪ್ಪದ ಅನಧಿಕಾರಿಗಳಿಗೆ, ಅರ್ಚಿರಾದಿ ಪರಲೋಕ ಗಮನದ ಮಾರ್ಗವು ವ್ಯರ್ಥವೇ ಆಗುತ್ತದೆ ; ಅವರಿಗೆ ಸಂತತ

ಮಾರ್ಗವು, ವೃಥಾ—ವ್ಯರ್ಥವೇ; ಉರ್ಧ್ವೋರ್ಧ್ವಗಮನಂ – ಕೇವಲ ಮೇಲೆ ಮೇಲೆ ಹೋಗುವುದು ಮಾತ್ರವೇ, ಭವೇತ್—ಆಗುತ್ತದೆ (ಸತತವಾದ ಊರ್ಧ್ವ ಗಮನವೇ ಮುಕ್ತಿಯೆಂದು ಜೈನಮತವು ತಿಳಿಯುತ್ತದೆ).

**ಬ್ರಹ್ಮಜ್ಞಾನೇನ ಸರ್ವಸ್ಯ ನಾಶೇ ಬ್ರಹ್ಮಾಭವತ್ಸ್ವಯಂ ।**
**ಕ್ವ ಗಚ್ಛೇದಪರಿಚ್ಛಿನ್ನೋ ಮಾರ್ಗಃ ಕಸ್ಯಾಪವರ್ಗದಃ ॥ ೧೮೦ ॥**

ಬ್ರಹ್ಮಜ್ಞಾನೇನ–ಬ್ರಹ್ಮಜ್ಞಾನದಿಂದ, ಸರ್ವಸ್ಯ–(ಬ್ರಹ್ಮಭಿನ್ನ) ಸರ್ವಕ್ಕೂ, ನಾಶೇ – ನಾಶವಾದರೆ, ಸ್ವಯಂ – ತಾನೇ, ಬ್ರಹ್ಮ – ಬ್ರಹ್ಮನು, ಅಭವತ್– (ಇದ್ದಲ್ಲಿಯೇ ಆಗುತ್ತಾನೆ); ಅಪರಿಚ್ಛಿನ್ನಃ–ವ್ಯಾಪ್ತನಾದವನು, ಕ್ವ ಗಚ್ಛೇತ್– ಎಲ್ಲಿ ಹೋಗುವವನು? (ವ್ಯಾಪ್ತವಾದುದಕ್ಕೆ ಸಂಚಾರವು ಯುಕ್ತವಲ್ಲ); ಕಸ್ಯ– ಯಾರಿಗೆ, ಮಾರ್ಗಃ–ಅರ್ಚಿರಾದಿಮಾರ್ಗವು, ಅಪವರ್ಗದಃ–ಸುಖಪ್ರದವಾಗುತ್ತದೆ? (ಶಕ್ಯವಿಲ್ಲ).

**ಅತೋ ವೈಕುಂಠಾದಿಲೋಕಪ್ರಾಪ್ತಿರ್ಮುಕ್ತಿರ್ವಿವೇಕಿನಾಂ ।**
**ಅನ್ಯಾ ತು ಮುಕ್ತಿರಾಮ್ನಾಯನ್ಯಾಯಚ್ಛೇದಾಯ ಕೇವಲಂ ॥೧೮೧॥**

ಅತಃ–ಆದ್ದರಿಂದ (ಅರ್ಚಿರಾದಿಮಾರ್ಗವು ಮೋಕ್ಷಮಾರ್ಗವಾದ್ದರಿಂದ), ವೈಕುಂಠಾದಿಲೋಕ ಪ್ರಾಪ್ತಿಃ–ವೈಕುಂಠಾದಿ ಲೋಕವನ್ನು ಹೊಂದುವುದೇ, ವಿವೇಕಿನಾಂ–ವಿವೇಕಿಗಳಿಗೆ, ಮುಕ್ತಿಃ–ಮುಕ್ತಿಯು; ಅನ್ಯಾ ತು ಮುಕ್ತಿಃ–ಬೇರೆ ಮುಕ್ತಿಯಾದರೋ, ಕೇವಲಂ ಆಮ್ನಾಯನ್ಯಾಯಚ್ಛೇದಾಯ–ಶ್ರುತಿನೀತಿಯನ್ನು ಮೀರಿದಂತೆ ಮಾತ್ರವೇ ಸರಿ (ಅದು ಮುಕ್ತಿಯೇ ಅಲ್ಲ).

---

ಊರ್ಧ್ವ ಗಮನಮಾತ್ರವೇ ಮುಕ್ತಿಯಾಗಬೇಕೆಂದು ಪ್ರಾಪ್ತವಾಗುತ್ತದೆ (೧೭೯). ಬ್ರಹ್ಮಜ್ಞಾನದಿಂದ ಬ್ರಹ್ಮೇತರ ಸರ್ವಜಗತ್ತಿನ ನಾಶ (ಅಭಾವ)ವೇ ಸಾಧಿಸುವುದಾದರೆ, ಇದ್ದಲ್ಲಿಯೇ ತನಗೆ ಬ್ರಹ್ಮತ್ವ ಪ್ರಾಪ್ತವಾಗುತ್ತದೆ (ತಾನೇ ಬ್ರಹ್ಮನಾಗುತ್ತಾನೆ); ವ್ಯಾಪ್ತನಾದ ಬ್ರಹ್ಮನು ಸಂಚರಿಸುವುದು ಹೇಗೆ? ಎಲ್ಲಿಗೆ ಹೋಗುವವನು? ಮಾರ್ಗವಾವುದು? ಮೋಕ್ಷಮಾರ್ಗವೆಂಬುದೇ ಇಲ್ಲ (೧೮೦). ಆದ್ದರಿಂದ, ಅರ್ಚಿರಾದಿ ಮಾರ್ಗವೇ ಮೋಕ್ಷಮಾರ್ಗವು; ವಿವೇಕಿಗಳಿಗೆ,

**ಖಗೇಂದ್ರಧ್ವಜಪಾದಾಬ್ಜಯುಗಮೂಲನಿಷೇವಣಂ ।**
**ಯತೋ ಭಾಗವತೇ ಸ್ಪಷ್ಟಮಪವರ್ಗಾಖ್ಯಮೀರಿತಂ ॥ ೧೮೨ ॥**
**ಅತೋ ವೈಕುಂಠಲೋಕಸ್ಥಮುಕುಂದಪದಸನ್ನಿಧೌ ।**
**ಸ್ಥಿತಿರೇವ ಮುಮುಕ್ಷೂಣಾಂ ಮೋಕ್ಷೋ ವ್ಯಾಸಾನುಶಾಸನಾತ್**
**॥ ೧೮೩ ॥**

'ಸ ವೈ ಮಹಾಭಾಗವತಃ ಪರೀಕ್ಷಿದ್ಯೇನಾಪವರ್ಗಾಖ್ಯಮದಭ್ರಬುದ್ಧಿಃ । ಜ್ಞಾನೇನ ವೈಯಾಸಿಕಿಶಬ್ದಿತೇನ ಭೇಜೇ ಖಗೇಂದ್ರಧ್ವಜಪಾದಮೂಲಂ' ಎಂಬ ಭಾಗವತ ವಾಕ್ಯದಿಂದ[1] ಸಹ, ವೈಕುಂಠಸ್ಥನಾರಾಯಣಚರಣಾರವಿಂದ ಸಮೀಪ ಪ್ರಾಪ್ತಿಯೇ ಮುಕ್ತಿಯೆಂದು ನಿರೂಪಿಸುತ್ತಾರೆ :—

---

ವೈಕುಂಠಾದಿ ಲೋಕಪ್ರಾಪ್ತಿಯೇ ಮುಕ್ತಿಯು ; ಅದನ್ನು ಬೇರೆಯಾಗಿ ತಿಳಿಯುವುದು ಶ್ರುತಿಯನ್ನು ಅತಿಕ್ರಮಿಸಿದಂತೆಯೇ ಸರಿ—ಅದು ಮುಕ್ತಿಯಲ್ಲ (೧೮೧). ಖಗೇಂದ್ರಧ್ವಜ (ಗರುಡಧ್ವಜ—ಶ್ರೀವಿಷ್ಣು)ನ ಪಾದದ್ವಂದ್ವಗಳ ಸ್ಥಾನವನ್ನು ಹೊಂದಿ ಸೇವಿಸಿಕೊಂಡಿರುವುದೇ ಪ್ರಸಿದ್ಧವಾದ ಮೋಕ್ಷವೆಂದು ಶ್ರೀ ಭಾಗವತದಲ್ಲಿ ಶ್ರೀ ಶುಕರು ಹೇಳಿರುವರು : ಆದ್ದರಿಂದ ವೈಕುಂಠಲೋಕದಲ್ಲಿರುವ ಶ್ರೀಮುಕುಂದನ ಸನ್ನಿಧಿಯಲ್ಲಿ ನಿತ್ಯವಾಸವೇ ಮುಮುಕ್ಷುಗಳಿಗೆ ಶ್ರೀ ವೇದವ್ಯಾಸರ

---

[1] ಗರ್ಭದಲ್ಲಿದ್ದ ತನ್ನ ರಕ್ಷಣಾರ್ಥವಾಗಿ ಗರ್ಭವನ್ನು ಸುತ್ತಿ ಅಶ್ವತ್ಥಾಮರ ಬ್ರಹ್ಮಾಸ್ತ್ರದಿಂದ ರಕ್ಷಿಸಿದ ಶ್ರೀಕೃಷ್ಣನನ್ನು ಸುತ್ತಲೂ ಈಕ್ಷಿಸಿದ್ದರಿಂದ, ಜನನ ಸಮಯದಲ್ಲಿಯೇ ಶ್ರೀಕೃಷ್ಣನ ಅಪರೋಕ್ಷಜ್ಞಾನಿಯಾದ 'ಪರೀಕ್ಷಿತ್' ಎಂಬ ಅನ್ವರ್ಥನಾಮವುಳ್ಳ ಜೀವನ್ಮುಕ್ತ ಜೀವನೆಂಬ ಭಾವವನ್ನು ಈ ಶಬ್ದವು ತಿಳಿಸುತ್ತದೆ ; ಬ್ರಹ್ಮದರ್ಶನವನ್ನು ಹೊಂದಿದ ಜೀವನ್ಮುಕ್ತನಿಗೆ ದೊರೆಯುವ ಪರಮಮುಕ್ತಿಯೇ, ಭಾಗವತ ಶ್ರವಣಾಂತ್ಯದಲ್ಲಿ ಲಭಿಸಿತೆಂಬುದನ್ನು ಸೂಚಿಸುತ್ತದೆ ; ವೈಯಾಸಿಕಿ' ಎಂಬುದು ಶ್ರೀಶುಕರಿಗೆ ಸಾಕ್ಷಾನ್ನಾರಾಯಣಾವತಾರರಾದ ಶ್ರೀ ವೇದವ್ಯಾಸರ ಪುತ್ರತ್ವವನ್ನು ಸೂಚಿಸಿ, ಪರಮವೈಷ್ಣವತ್ವವನ್ನೂ ವಕ್ತೃತ್ವ ಪ್ರಸಕ್ತಿಯನ್ನು ಸಾಧಿಸುತ್ತದೆ: ಉಪದೇಶಿಸಿದುದು ವೈಷ್ಣವ ಪುರಾಣವಾದ ಶ್ರೀಮದ್ಭಾಗವತದಿಂದ ವಿಷ್ಣುಸರ್ವೋತ್ತಮರೂಪದ ಮಹಾಪ್ರಮೇಯವು ; ತೇನ—ಎಂದರೆ ಶುಕಮುಖದಿಂದ ಶ್ರೀ ಭಾಗವತ ಶ್ರವಣಮಾಡಿದ್ದರಿಂದ ಲಭಿಸಿದ ಫಲವೇ— ಖಗೇಂದ್ರಧ್ವಜ ಪಾದಮೂಲವು ; ಅದೇ ಮೋಕ್ಷವು ; ಅಪವರ್ಗಶಬ್ದವು ಉಪಚಾರಿಕವಲ್ಲವೆಂಬುದನ್ನು 'ಅಪವರ್ಗಾಖ್ಯ'ವೆಂಬಲ್ಲಿರುವ ಮೋಕ್ಷವು ಮುಖ್ಯವೆಂಬುದನ್ನು ಹೇಳುತ್ತದೆ ; ಖ್ಯಾಪ್ರಕಥನ

ಖಗೇಂದ್ರಧ್ವಜಪಾದಾಬ್ಜಯುಗಮೂಲನಿಷೇವಣಂ – ಗರುಡಧ್ವಜನ (ಶ್ರೀವಿಷ್ಣುವಿನ) ಪಾದಯುಗ್ಮದ (ಪಾದಗಳೆರಡರ) ಮೂಲವನ್ನು (ಆಶ್ರಯ ವನ್ನು) ಹೊಂದಿ ಸೇವಿಸುವುದೇ, ಯತಃ–ಯಾವ ಕಾರಣದಿಂದ, ಭಾಗವತೇ– ಶ್ರೀಭಾಗವತದಲ್ಲಿ, ಸ್ಪಷ್ಟಂ – ಸ್ಪಷ್ಟವಾಗಿ, ಅಪವರ್ಗಾಖ್ಯಂ – ಮೋಕ್ಷವೆಂಬ ಪ್ರಸಿದ್ಧಿಯನ್ನಾಗಿ, ಈರಿತಂ–ಹೇಳಲಾಗಿದೆಯೋ, ಅತಃ–ಆದ್ದರಿಂದ, ವೈಕುಂಠ- ಲೋಕಸ್ಥಮುಕುಂದಪದಸನ್ನಿಧೌ–ವೈಕುಂಠಲೋಕದಲ್ಲಿರುವ ಮುಕುಂದನ ಪಾದ (ಮೋಕ್ಷಪ್ರದನಾದ ಶ್ರೀವಿಷ್ಣುವಿನ ಸ್ಥಾನ) ಸಮೀಪದಲ್ಲಿ, ಸ್ಥಿತಿಃ ಏವ-ನಿಲ್ಲುವುದೇ, ಮುಮುಕ್ಷೂಣಾಂ – ಮೋಕ್ಷಾಪೇಕ್ಷಿಗಳಿಗೆ, ವ್ಯಾಸಾನುಶಾಸನಾತ್–ಶ್ರೀವ್ಯಾಸರ ಉಪದೇಶಾನುಸಾರವಾದ್ದರಿಂದ, ಮೋಕ್ಷಃ–ಮೋಕ್ಷವು.

**ಅತೀತಕಲ್ಪಮುಕ್ತಂ ಚಾಪ್ಯೇಷಾ ವಾಗೇವ ಯದ್ವದೇತ್ ।**
**ಪುರಾಣಸ್ಯ ಸದೇದೃಕ್ತ್ವಾತ್ತ್ವೇನ ಭೇಜ ಇತೀರಿತಂ ॥ ೧೮೪ ॥**

ಉದಾಹೃತಭಾಗವತ ಶ್ಲೋಕಾರ್ಥವನ್ನೇ ಪ್ರದರ್ಶಿಸುತ್ತಾರೆ :—

ಅತೀತ ಕಲ್ಪಮುಕ್ತಂ–ಹಿಂದಿನ ಬ್ರಹ್ಮಕಲ್ಪದಲ್ಲಿ ಮುಕ್ತನಾದವನ ವಿಷಯ ವನ್ನೇ, ಯತ್–ಯಾವ ಕಾರಣದಿಂದ, ಏಷಾ ವಾಕ್ ಅಪಿ–ಈ ವಾಕ್ಯವೇ

---

ಉಪದೇಶಾನುಸಾರವಾಗಿ ಮೋಕ್ಷವು (೧೮೨–೧೮೩). 'ಭೇಜೇ' ಎಂಬ ಭೂತಕಾಲ ಪ್ರಯೋಗವು, ಹಿಂದಿನ ಬ್ರಹ್ಮಕಲ್ಪದಲ್ಲಿ ಮುಕ್ತನಾದ (ಪರೀಕ್ಷಿತನ) ಜೀವನ ವಿಷಯುವನ್ನು ಈ ವಾಕ್ಯವೇ ಹೇಳುತ್ತದೆ; ಆದ್ದರಿಂದ ಪುರಾಣಗಳಿಗೆ ಸದಾ ಈ ಪ್ರಕಾರದ ನಿರ್ಮಾಣವು (ರಚನೆಯೇ) ಪ್ರತಿ ಬ್ರಹ್ಮ

---

ಎಂದು ಧಾತು ವ್ಯಾಖ್ಯಾನವಿದೆ; 'ಭೇಜೇ ಖಗೇಂದ್ರಧ್ವಜಪಾದಮೂಲ'ವೆಂಬ ಶಬ್ದವು, ಮುಕ್ತಿದಶಾದಲ್ಲಿಯೂ ಶ್ರೀಹರಿಗೆ ಸಾಕಾರತ್ವವುಂಟೆಂದೂ, ಸೇವ್ಯಸೇವಕಭಾವದಿಂದ ಸೇವಿಸಲು ಭೇದಸೂಚಕವೂ ಆಗಿದೆ; ಶುದ್ಧ ಜಡಸದ್ಭಾವವೂ ತಾರತಮ್ಯವೂ ಮುಕ್ತಿಯಲ್ಲಿಯೂ ಉಂಟೆಂದೂ ಸೂಚಿಸಲಾಗಿದೆ; ಭೇಜೇ—ಎಂಬ ಭೂತಕಾಲ ಕ್ರಿಯಾಪದ ಪ್ರಯೋಗವು, 'ಏಷ್ಯತ್ತು ನಿಶ್ಚಿತಂ ಯತ್ಸ್ಯಾದತೀತತ್ವೇನ ಭಣ್ಯತೇ' ಎಂಬ ನ್ಯಾಯಾನು ಸಾರವಾಗಿ, ಭವಿಷ್ಯವು ನಿಶ್ಚಿತವೇ ಆಗಿದ್ದರೆ, ಆಗಿಹೋದಂತೆ ಭೂತಕಾಲ ಪ್ರಯೋಗ ಮಾಡುವುದುಂಟು; ಸಂಶಯ ನಿರಾಸಕ್ಕಾಗಿ ಈ ಪ್ರಯೋಗವು; ಅಥವಾ ಹಿಂದಿನ ಕಲ್ಪದಲ್ಲಿ ಮುಕ್ತನಾದ ಪರೀಕ್ಷಿತನ ವಿಷಯವನ್ನು ನಿರೂಪಿಸುತ್ತದೆ.

*

(ಭಾಗವತ ನಿರೂಪಣವು), ವದೇತ್ ಏವ – ಹೇಳಿರುತ್ತದೆ ಮಾತ್ರವೋ, ಪುರಾಣಸ್ಯ – ಪುರಾಣಕ್ಕೆ, ಸದಾ–ಸರ್ವದಾ, ಈದೃಕ್ತ್ವತ್ವಾತ್ – ಹೀಗೆಯೇ ಇರುವುದರಿಂದ (ಪ್ರತಿಕಲ್ಪದಲ್ಲಿಯೂ ಆವೃತ್ತಿಯಾಗುವುದರಿಂದ), ತೇನ–ಈ ಕಾರಣದಿಂದಲೂ, ಭೇಜೇ ಇತಿ ಈರೀತಂ–(ಭೂತಕಾಲದಲ್ಲಿ) ಭೇಜೇ (ಹೊಂದಿಸಿದರು) ಎಂದು ಹೇಳಲಾಗಿದೆ.[1]

**ಆಗಾಮಿನೋಽಪಿ ನಿರ್ಣೀತ್ಯೈ ವಾಗೇವಂ ವರ್ತತೇ ಕಿಲ ।**
**ಅಪವರ್ಗಾಖ್ಯಮಿತ್ಯುಕ್ತೇರಗ್ರೇಽನ್ಯೋಽರ್ಥೋ ನ ಶೋಭತೇ ॥೧೮೫॥**

ಭೂತಕಾಲಪ್ರಯೋಗದ ತಾತ್ಪರ್ಯವನ್ನೇ ವಿಸ್ತಾರವಾಗಿ ಪ್ರದರ್ಶಿಸುತ್ತಾರೆ :—

ಆಗಾಮಿನಃ–ಭವಿಷ್ಯತ್ಕಾಲದಲ್ಲಿ (ಈಗಿನ ಬ್ರಹ್ಮನ ಪರಾಂತದಲ್ಲಿ) ಸಂಭವಿಸುವುದರ, ನಿರ್ಣೀತ್ಯೈ ಅಪಿ – ನಿರ್ಣಯಿಸಲಿಕ್ಕಾಗಿಯೂ, ಏವಂ ವಾಕ್ – ಕಲ್ಪದಲ್ಲಿ ಸಂಭವಿಸುವುದರಿಂದ, ಭೂತಕಾಲದಲ್ಲಿ ಹೇಳಿದುದು ಉಚಿತವಾಗುತ್ತದೆ (೧೮೪). ಭವಿಷ್ಯತ್ಕಾಲದಲ್ಲಿ ಸಂಭವಿಸುವುದೆಂದೂ ಮೋಕ್ಷವನ್ನು ನಿರೂಪಿಸಲು, 'ಭೇಜೇ' ಎಂಬುದಾಗಿರುತ್ತದೆ; 'ಅಪವರ್ಗಾಖ್ಯಂ'–ಮೋಕ್ಷವೆಂದು ಪ್ರಸಿದ್ಧವಾದ, ಎಂಬರ್ಥವುಳ್ಳ ಶಬ್ದದ ಎದುರಿಗೆ, ಬೇರಾವ ಅರ್ಥವೂ ಪ್ರಶಸ್ತವಾಗುವುದಿಲ್ಲ; ಈಗಿನ ಬ್ರಹ್ಮನ ಪರಾಂತಕಾಲದಲ್ಲಿ ತಪ್ಪದೇ ವೈಕುಂಠಪ್ರಾಪ್ತಿ ರೂಪದ ಈ ಮೋಕ್ಷವು ದೊರೆಯುವುದೆಂಬುದನ್ನು ಈ ವಾಕ್ಯವು ನಿರ್ಣಯಿಸುತ್ತದೆ (೧೮೫).

---

[1] ಶೌನಕಾದಿಗಳನ್ನುದ್ದೇಶಿಸಿ, ಭಾಗವತಕಥಾ ನಿರೂಪಣೆ ಮಾಡುವ ಶ್ರೀಸೂತರಿಗೆ, ತಮ್ಮ ವಾಕ್ಯವನ್ನೇ ಅನುವಾದಮಾಡಲು ಅನುಕೂಲವಾಗುವಂತೆ, ವ್ಯಾಸರು, ಶುಕಾಚಾರ್ಯರು ವಿಷ್ಣುಪದವನ್ನು ಹೊಂದಿಸಿದರೆಂದು ಭೂತಕಾಲದಲ್ಲಿ ಹೇಳುವುದು ಉಚಿತವೂ ಆಗುತ್ತದೆ; ವೈಕುಂಠಾಂತಃಪುರಪ್ರವೇಶರೂಪ ಮುಕ್ತಿಯು, ಬ್ರಹ್ಮದೇವನ ಪರಾಂತ್ಯಕಾಲದಲ್ಲಿಯೇ ಆಗುವುದಾದ್ದರಿಂದ, ಈ ಶಂಕೆಯ ಪರಿಹಾರಕವೂ ಆಗಿರುತ್ತದೆಂದೂ ತಿಳಿಯಬಹುದು; 'ಈದೃಕ್ತ್ವಾತ್' ಎಂಬುದರಿಂದ, ಪದಗಳಲ್ಲಿ ಹಿಂದು ಮುಂದೆ ಪ್ರಯೋಗವೆಂಬ ವ್ಯತ್ಯಾಸ ಮಾತ್ರವಿದ್ದರೂ, ನೂತನ ಕಲ್ಪದಲ್ಲಿ ರಚಿತವಾಗುವ ಪುರಾಣವು, ಶಬ್ದಗಳಿಂದ ಮತ್ತು ಅರ್ಥದಿಂದ, ಪೂರ್ವಕಲ್ಪ ಪುರಾಣದಿಂದ ಏಕಪ್ರಕಾರತ್ವವುಳ್ಳದ್ದಾಗಿರುತ್ತದೆ; ಆದ್ದರಿಂದ, ಅದೇ ವಿಷ್ಣುಪದಪ್ರಾಪ್ತಿರೂಪದ ಫಲವನ್ನು ಹೇಳುವ ವಾಕ್ಯವನ್ನು ಉದಾಹರಿಸುವುದು ಅಯುಕ್ತವೇನಲ್ಲ.

ಈ 'ಭೇಜೇ' ಎಂಬ ವಾಕ್ಯವು, ವರ್ತತೇ ಕಿಲ—ಇರುತ್ತದೆಂಬುದು ಸ್ಪಷ್ಟವು (ಜೀವನ್ಮುಕ್ತನಿಗೆ ಶ್ರೀಹರಿ ಚರಣ ಸಾಮೀಪ್ಯವು, ತಪ್ಪದೇ ಪರಾಂತಕಾಲದಲ್ಲಿ ಲಭಿಸುತ್ತದಷ್ಟೆ); ಅಪವರ್ಗಾಖ್ಯಂ — ಮೋಕ್ಷವೆಂದು ಪ್ರಸಿದ್ಧ ಸ್ಥಿತಿಯನ್ನು, ಇತ್ಯುಕ್ತೇಃ — ಎಂದು ಹೇಳಿದ್ದರ, ಅಗ್ರೇ — ಎದುರಿನಲ್ಲಿ, ಅನ್ಯೋಽರ್ಥಃ — ಬೇರೆ ಅರ್ಥವು, ನ ಶೋಭತೇ—ಪ್ರಶಸ್ತವಾಗುವುದಿಲ್ಲ.

**ಜ್ಞಾನಸಾಧ್ಯತ್ವಕಥನಾತ್ ಸಿದ್ಧಾ ಪರಮಮೋಕ್ಷತಾ ॥ ೧೮೬ ॥**
**ಸೇವ್ಯಸೇವಕಭಾವಶ್ಚ ಯತೋ ಭೇಜೇ ಇತೀರ್ಯತೇ ।**
**ಅತೋ ಜೀವೇಶಭೇದಸ್ಯ ಮುಕ್ತಾವಪ್ಯನುವರ್ತನಂ ॥ ೧೮೭ ॥**

ಜ್ಞಾನಸಾಧ್ಯತ್ವ ಕಥನಾತ್—ಅಪರೋಕ್ಷಜ್ಞಾನ ಸಾಧ್ಯವೆಂದು ಹೇಳಿರುವುದರಿಂದ, ಪರಮಮೋಕ್ಷತಾ—ಪರಮೋಕ್ಷತ್ವವು (ಅದರಿಂದ ಲಭ್ಯವೆಂಬುದು), ಸಿದ್ಧಾ—ಸಿದ್ಧವಾಗುತ್ತದೆ, ಯತಃ—ಯಾವ ಕಾರಣದಿಂದ, ಭೇಜೇ ಇತಿ—ಭೇಜೇ ಎಂದು ('ಭಜ ಸೇವಾಯಾಂ' ಎಂಬ ಧಾತುವಿನಿಂದ) ಈರ್ಯತೇ — ಹೇಳಲಾಗುತ್ತದೆಯೋ, ಸೇವ್ಯಸೇವಕಭಾವಶ್ಚ—ಸೇವ್ಯ (ವಿಷ್ಣುಪದವು), ಸೇವಕ (ಜೀವನು), ರೂಪದ ಸಂಬಂಧವೂ, ಅತಃ—ಆದ್ದರಿಂದಲೇ, ಜೀವೇಶ ಭೇದಸ್ಯ—ಜೀವಈಶರೆಂಬ ಭೇದದ, ಅನುವರ್ತನಂ—ಅನುಸರಣೆಯು (ಅಲ್ಲಿಯೂ ಭೇದವಿರುತ್ತದೆಂಬುದು), ಮುಕ್ತಾ ಅಪಿ — ಮುಕ್ತಿಯಲ್ಲಿಯೂ (ಅಸ್ತೀತಿಗಮ್ಯತೇ — ಇರುತ್ತದೆಂದು ತಿಳಿಯುತ್ತದೆ).

---

ಈ ಮೋಕ್ಷವು ಅಪರೋಕ್ಷ ಜ್ಞಾನದಿಂದ ಸಾಧ್ಯವೆಂದು ಹೇಳಿರುವುದರಿಂದಲೂ, ಪರಮಮೋಕ್ಷವೆಂದೇ (ಅವಾಂತರಮೋಕ್ಷ)ವಲ್ಲೆಂದು ಸಿದ್ಧವಾಗುತ್ತದೆ; 'ಭೇಜೇ ಖಗೇಂದ್ರಧ್ವಜಪಾದಮೂಲಂ' ಎಂಬಲ್ಲಿ ಬಳಸಿರುವ ಪದಗಳು ಬಹುಪ್ರಮೇಯಗಳನ್ನು ಸಾಧಿಸುತ್ತವೆ; 'ಭಜ ಸೇವಾಯಾಂ' ಎಂಬ ಧಾತ್ವರ್ಥದಿಂದ, ವಿಷ್ಣುಪದವೂ, ಮುಕ್ತನಾಗುವ ಜೀವನೂ, ಸೇವ್ಯಸೇವಕ ರೂಪದ ಸಂಬಂಧವುಳ್ಳವರೆಂದೂ, ಜೀವೇಶರು ಭಿನ್ನರೆಂದೂ ಅಲ್ಲಿಯೂ ಭೇದವು ಅನುವರ್ತಿಸುವುದೆಂದೂ ಸಿದ್ಧವಾಗುತ್ತದೆ; ವಿಷ್ಣುಪಾದವೆಂದು ಹೇಳಿ, ವಿಷ್ಣುವು ಪಾದಾದಿ ಅವಯವಗಳುಳ್ಳ ಆಕಾರವುಳ್ಳವನೆಂದು (ನಿರಾಕಾರನಲ್ಲವೆಂದೂ), ಗರುಡಧ್ವಜನೆಂದು ರಥವುಳ್ಳವನೆಂದು ಹೇಳಿ, ಸರ್ವಭೋಗ ಸಾಮಗ್ರಿಗಳಿಂದ ಪೂರ್ಣನೆಂಬುದನ್ನು ಸೂಚಿಸ

**ಸಾಕಾರತ್ವಂ ಚ ಪಾದೋಕ್ತ್ಯಾ ರಥೋಕ್ತ್ಯಾ ಭೋಗಸಾಧನಂ ।**
**ತಾರತಮ್ಯಂ ಚ ಜೀವೇಷು ಖಗೇಂದ್ರತ್ವಸ್ಯ ಕೀರ್ತನಾತ್ ।**
**ಖಗಾದಿಜೀವರಾಶಿಶ್ಚ ಮುಕ್ತಾವಸ್ತೀತಿ ಗಮ್ಯತೇ ॥ ೧೮೮ ॥**

ಬೇರೆ ಯುಕ್ತಿಯನ್ನೂ ಹೇಳುತ್ತಾರೆ :—

ಪಾದೋಕ್ತ್ಯಾ – 'ಪಾದಮೂಲಂ' ಎಂದು ಪಾದವನ್ನು ಹೇಳಿದ್ದರಿಂದ, ಸಾಕಾರತ್ವಂ ಚ–ವಿಷ್ಣುವು (ಬ್ರಹ್ಮನು) ಆಕಾರ (ಪಾದಾದಿ ಅವಯುವಯುಕ್ತವಾದ ಆಕಾರ) ವುಳ್ಳವನೆಂಬುದನ್ನು, ರಥೋಕ್ತ್ಯಾ–('ಗರುಡಧ್ವಜಂ' ನೆಂದು ಗರುಡನೇ ಧ್ವಜವಾಗಿವುಳ್ಳ) ರಥವನ್ನು ಹೇಳಿದ್ದರಿಂದ, ಭೋಗಸಾಧನಂ – ಸರ್ವಸುಖ ಭೋಗಗಳುಳ್ಳವನೆಂಬುದೂ (ಸುಖಪೂರ್ಣತ್ವವೂ), ಖಗೇಂದ್ರತ್ವಸ್ಯ–ಗರುಡನ, ಕೀರ್ತನಾತ್–(ಧ್ವಜನೆಂಬುದಾಗಿ) ಗರುಡನೆಂಬ ಚೇತನನನ್ನೇ ನಿರೂಪಿಸಿದ್ದರಿಂದ, ಜೀವೇಷು–ಜೀವರಲ್ಲಿ, ತಾರತಮ್ಯಂ–ತರತಮಭಾವವೂ, ಖಗಾದಿ ಜೀವರಾಶಿಶ್ಚ–ಖಗ (ಹದ್ದು) ಮುಂತಾದ (ಭಿನ್ನ) ಜೀವರಾಶಿಗಳೂ, ಮುಕ್ತೌ ಅಪಿ–ಮೋಕ್ಷಸ್ಥಾನದಲ್ಲಿಯೂ, ಅಸ್ತಿ ಇತಿ–ಇರುತ್ತದೆಂಬುದು, ಗಮ್ಯತೇ–ತಿಳಿದುಬರುತ್ತದೆ.

**ಏತತ್ಸಮಸ್ತಂ ತತ್ರಾಪಿ ಸಿದ್ಧವಾಕ್ಯಾರ್ಥವೇದಿನಾಂ ॥ ೧೮೯ ॥**
**ಮಹಾಭಾಗವತೇಽನಲ್ಪಬುದ್ಧಿಃ ಪಾಂಡವವಂಶಜಃ ।**
**ಅಧಿಕಾರೀ ವ್ಯಾಸಪುತ್ರಃ ಶುಕೋ ಯೋಗೀಶ್ವರೋ ಗುರುಃ ॥೧೯೦॥**

ಸಿದ್ಧವಾಕ್ಯಾರ್ಥವೇದಿನಾಂ – ನಿಶ್ಚಿತವಾದ ವಾಕ್ಯಾರ್ಥಜ್ಞಾನವುಳ್ಳವರಿಗೆ, ತತ್ರಾಪಿ–ಮುಕ್ತಿಯಲ್ಲಿಯೂ, ಏತತ್ಸಮಸ್ತಂ – ಈ ಎಲ್ಲವೂ (ಇದೆ); ಅನಲ್ಪಬುದ್ಧಿಃ–ಮಹಾಪ್ರಾಜ್ಞನಾದ, ಪಾಂಡವವಂಶಜಃ–ಪಾಂಡವವಂಶದಲ್ಲಿ ಹುಟ್ಟಿದ

---

ಲಾಗಿದೆ; ಖಗೇಂದ್ರಶಬ್ದವು, ಅನ್ಯಚೇತನರನ್ನೂ ಅವರಲ್ಲಿ ತರತಮ ಭಾವಗಳನ್ನು ಸೂಚಿಸುತ್ತದೆ ; ಈ ಎಲ್ಲವೂ ಮೋಕ್ಷದಲ್ಲಿರುತ್ತವೆಂಬುದೂ, ಶ್ರೀ ಭಾಗವತವೇ ಹೇಳಿದಂತಾಯಿತು. (೧೮೬–೧೮೮). ನಿಶ್ಚಿತವಾದ ವಾಕ್ಯಾರ್ಥ ಜ್ಞಾನವುಳ್ಳವರಿಗೆ, ಮುಕ್ತಿಯಲ್ಲಿ ಈ ಎಲ್ಲವೂ ಇರುತ್ತದೆಂದು ಸಿದ್ಧವಾಗುತ್ತದೆ ; ಪಾಂಡವವಂಶದಲ್ಲಿ ಹುಟ್ಟಿದ, ಮಹಾ ಪ್ರಾಜ್ಞನಾದ ಪರೀಕ್ಷಿದ್ರಾಜನೇ ಶ್ರೀಮದ್ಭಾಗವತ

ಪರೀಕ್ಷಿತನು, ಮಹಾಭಾಗವತೇ – ಮಹಾಮೋಕ್ಷಸಾಧಕ ಜ್ಞಾನಸಾಧನವಾದ ಶ್ರೀಮಹಾಭಾಗವತದಲ್ಲಿ (ತಿಳಿಯುವುದರಲ್ಲಿ), ಅಧಿಕಾರೀ – ಅಧಿಕಾರಿಯು (ಶುಕಾಚಾರ್ಯರಿಂದ ಶ್ರವಣಮಾಡಿದುದೆಲ್ಲವನ್ನು ಗ್ರಹಿಸುವ ಸಾಧನಸಂಪತ್ತುಳ್ಳವನು); ವ್ಯಾಸಪುತ್ರಃ – ವ್ಯಾಸಪುತ್ರರೂ, ಯೋಗೀಶ್ವರಃ – ಯೋಗಿಶ್ರೇಷ್ಠರೂ (ರುದ್ರಾವತಾರರೂ ಆದ), ಶುಕಃ–ಶ್ರೀಶುಕರು, ಗುರುಃ–(ಮಹಾಭಾಗವತವನ್ನು ಉಪದೇಶಿಸುವವ ಗುರುಗಳು (ಉಕ್ತಾರ್ಥಗಳು ಉಭಯರಿಂದಲೂ ತಿಳಿಯಲ್ಪಟ್ಟು ಸರ್ವಗ್ರಾಹ್ಯವಾಗಿವೆ).

**ತಾದೃಶಾಚಾರ್ಯಸಂಪತ್ತೌ ತಸ್ಯ ಜ್ಞಾನೇನ ಯತ್ಫಲಂ ।**
**ಮಹಾಮೋಕ್ಷಃ ಕಥಂ ನಾಸೌ ಯನ್ಮಾರ್ಗೋಽದ್ಯಾಪಿ ಯೋಗಿನಾಂ**
॥ ೧೯೦ ॥

ಅಪರೋಕ್ಷಜ್ಞಾನಿಯಾದ (ಆದರೂ ಮೋಕ್ಷಫಲವು ಲಭಿಸಿಲ್ಲದ) ಪರೀಕ್ಷಿತನಂಥ ಜ್ಞಾನಿಗೆ, ಶಿವಾವತಾರರಾದ ಶ್ರೀಶುಕರು ಉಪದೇಶಿಸಿದ ಜ್ಞಾನಫಲವು, ಮಹಾಮೋಕ್ಷವಲ್ಲದೇ ಬೇರೆಯಾಗಿರಲು ಶಕ್ಯವೇ ಇಲ್ಲ; ತಾದೃಶಾಚಾರ್ಯಸಂಪತ್ತೌ– ಹೀಗಿರುವ ಮಹಾಜ್ಞಾನಿಗಳೆಂಬ (ಶಿವಾವತಾರರೆಂಬ) ಗುರುಗಳು ದೊರೆತಿರಲು, ತಸ್ಯ–ಆ ಉಪದೇಶದ, ಜ್ಞಾನೇನ–ಜ್ಞಾನದಿಂದ, ಯತ್ ಫಲಂ– ಯಾವುದು ಫಲವೋ, ಅಸೌ–ಇದು (ಆ ಜ್ಞಾನವು), ಯನ್ಮಾರ್ಗಃ–ಯಾವ ಪರೀಕ್ಷಿತನ (ಮೋಕ್ಷ) ಮಾರ್ಗವು, ಅದ್ಯಾಪಿ – ಈಗಲೂ, ಯೋಗಿನಾಂ– (ಮುಮುಕ್ಷುಗಳಿಗೆ) ಯೋಗಿಗಳಿಗೆ ಮಾರ್ಗವಾಗಿದೆಯೋ, ಮಹಾಮೋಕ್ಷಃ ಕಥಂ ನ–ಮಹಾಮೋಕ್ಷವು ಹೇಗೆ ಅಲ್ಲ?

---

ಶ್ರವಣಾಧಿಕಾರಿಯು; ವ್ಯಾಸಪುತ್ರರೂ ಯೋಗೀಶ್ವರರೂ ಆದ ಶ್ರೀ ಶುಕಾಚಾರ್ಯರೆ ಉಪದೇಶಕರು (ವಕ್ತೃಗಳು); ಹೀಗಿರುವ ಈ ಮಹಾಗ್ರಂಥದ ಪ್ರಾಮಾಣ್ಯವು ಯಾರಿಗೆ ಗ್ರಾಹ್ಯವಾಗಲಿಕ್ಕಿಲ್ಲ (೧೮೯–೧೯೦). ಮಾತೃಗರ್ಭದಲ್ಲಿಯೇ ಶ್ರೀಕೃಷ್ಣ ದರ್ಶನಾನುಗ್ರಹಗಳನ್ನು ಪಡೆದ ಅಪರೋಕ್ಷಜ್ಞಾನಿಗೆ ಶ್ರೀ ಶಿವಾವತಾರರಾದ ಶ್ರೀ ಶುಕರು ಉಪದೇಶಿಸಿದ ಮೋಕ್ಷಮಾರ್ಗವು, ಮಹಾಮೋಕ್ಷವೆಂಬ ಫಲವನ್ನು ಹೊಂದಿಸದಿರಬಹುದೇ? (ಶಕ್ಯವಿಲ್ಲ); ಈಗಲೂ

**ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।**
**ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ ೧೯೨ ॥**

**ಇತಿ ಗೀತಾಸು ಕೃಷ್ಣೇನ ಸ್ವಲೋಕಗಮನಸ್ಯ ಯತ್ ।**
**ಪುನರಾವೃತ್ತಿಶೂನ್ಯತ್ವಂ ಪರಮತ್ವಂ ಚ ಕೀರ್ತಿತಂ ।**
**ಅತಸ್ತತ್ಪರಮಂ ಧಾಮ ತದೇವ ಚ ಪರಾತ್ಪರಂ ॥ ೧೯೩ ॥**

ಅನ್ಯಗೀತಾವಾಕ್ಯದಿಂದಲೂ ವೈಕುಂಠದ ಅಪುನರಾವೃತ್ತಿಯನ್ನು (ಹಿಂದಿರುಗಿ ಸಂಸಾರಕ್ಕೆ ಬರುವುದಿಲ್ಲವೆಂಬುದನ್ನು) ಸ್ಪಷ್ಟಗೊಳಿಸುತ್ತಾರೆ:—

ತತ್—ಆ ವೈಕುಂಠವನ್ನು, ಸೂರ್ಯಃ—ಸೂರ್ಯನು, ನ ಭಾಸಯತೇ—ಪ್ರಕಾಶಗೊಳಿಸುವುದಿಲ್ಲ; ಶಶಾಂಕಃ ನ—ಚಂದ್ರನೂ ಪ್ರಕಾಶಿಸುವುದಿಲ್ಲ; ಪಾವಕಃ ನ—ಅಗ್ನಿಯೂ ಇಲ್ಲ; ಯದ್ಗತ್ವಾ—ಎಲ್ಲಿ ಹೋಗಿ ಸೇರಿ (ಯಾವ ಕಾರಣದಿಂದ), ನ ನಿವರ್ತಂತೇ—(ಮುಕ್ತಜೀವರು) ತಿರಿಗಿಬರುವುದಿಲ್ಲವೋ; ತದ್ಧಾಮ—ಆ ವೈಕುಂಠವು (ಆ ಕಾರಣದಿಂದ), ಮಮ—ನನ್ನ (ಶ್ರೀಕೃಷ್ಣನ), ಪರಮಂ—ಸರ್ವೋತ್ಕೃಷ್ಟವಾದ, ಧಾಮ—ಲೋಕವು, ಇತಿ—ಹೀಗೆ, ಗೀತಾಸು—ಗೀತೆಯಲ್ಲಿ (ಗೀತಾ ವಾಕ್ಯಗಳಲ್ಲಿ), ಕೃಷ್ಣೇನ—ಶ್ರೀಕೃಷ್ಣನಿಂದ, ಯತ್—ಯಾವ ಕಾರಣದಿಂದ, ಸ್ವಲೋಕಗಮನಸ್ಯ—ತನ್ನ ಲೋಕವನ್ನು ಹೊಂದಿದವನಿಗೆ (ಹೊಂದುವಿಕೆಗೆ), ಪುನರಾವೃತ್ತಿ ಶೂನ್ಯತ್ವಂ—ಪುನರಾವೃತ್ತಿರಾಹಿತ್ಯವೂ, ಪರಮತ್ವಂ ಚ—ಪರಮತ್ವವೂ (ಅವಾಂತರಗತಿಯೆಂದಲ್ಲ); ಕೀರ್ತಿತಂ—ಹೇಳಲ್ಪಟ್ಟಿದೆಯೋ, ಅತಃ—ಆ ಕಾರಣದಿಂದ, ತತ್—ಅದೇ, ಪರಮಂ ಧಾಮ—ಸರ್ವೋತ್ಕೃಷ್ಟಸ್ಥಾನವು; ತದೇವ ಚ—ಅದೇನೇ (ಮುಕ್ತಲೋಕವೇ), ಪರಾತ್—ಜೀವನ್ಮುಕ್ತಿಗಿಂತಲೂ, ಪರಂ—ಶ್ರೇಷ್ಠವಾದುದು (ಮಹಾಮೋಕ್ಷವು).

---

ಶುಕೋಪದಿಷ್ಟ ಮಾರ್ಗವನ್ನು ಸಕಲಯೋಗಿಗಳೂ ಅನುಸರಿಸುತ್ತಿರುವರಷ್ಟೆ (೧೯೧). ಆತನ ಪರಮಧಾಮವನ್ನು, ಸೂರ್ಯನು ಪ್ರಕಾಶಿಸುವುದಿಲ್ಲ; ಚಂದ್ರನಾಗಲಿ, ಅಗ್ನಿಯಾಗಲಿ ಬೆಳಗುವುದಿಲ್ಲ; ಆ ಸ್ಥಾನವನ್ನು ಹೊಂದಿ, ಯಾರೂ, ಎಂದೂ ಹಿಂದಿರುಗಿ ಬರುವುದಿಲ್ಲ; ಅದೇ ನನ್ನ ಪರಮಸ್ಥಾನವು; ಹೀಗೆಂದು ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಸ್ವಲೋಕವನ್ನು ಪುನರಾವೃತ್ತಿ ಶೂನ್ಯವಾದ

**ಯತ್ರತ್ವಸ್ಯೇತಿ ವಾಕ್ಯಂ ಚ ಸ್ಪಷ್ಟಶ್ರುತ್ಯುಕ್ತಮಾರ್ಗತಃ ।**
**ಆಚಚಕ್ಷೇ ಪರಂ ಮೋಕ್ಷಮಿಮಮೇವ ನ ಚಾಪರಂ ॥ ೧೯೪ ॥**

**ವಾಕ್ಯಾರ್ಥಸ್ಯ ಪ್ರಕಾರಶ್ಚ ಪೂರ್ವಮೇವ ನಿರೂಪಿತಃ ।**
**ತಯೋರ್ನಿರವಕಾಶಸ್ಯ ಪ್ರಾಬಲ್ಯಂ ಸಾವಕಾಶತಃ ॥ ೧೯೫ ॥**

'ಯತ್ರ ತ್ವಸ್ಯ' ಇತಿ ವಾಕ್ಯಂ ಚ–ಈ ಶ್ರುತಿ ವಾಕ್ಯವಾದರೂ, ಸ್ಪಷ್ಟ ಶ್ರುತ್ಯುಕ್ತಮಾರ್ಗತಃ–ಶ್ರುತಿಯು ಹೇಳಿರುವ ಸ್ಪಷ್ಟ (ಶಕ್ಯವಿರುವ ಎಲ್ಲ ಸ್ಪಷ್ಟತೆಯಿಂದ, ಅನ್ಯಾರ್ಥಕ್ಕೆ ಅವಕಾಶವಿಲ್ಲದಂತೆ) ಮಾರ್ಗದಿಂದ, ಪರಂ ಮೋಕ್ಷಂ–ಪರಮಮೋಕ್ಷವನ್ನು, ಇಮಂ ಏವ–ಈ ವೈಕುಂಠಲೋಕವನ್ನೇ, ಆಚಚಕ್ಷೇ–ಹೇಳಿರುತ್ತದೆ; ಅಪರಂ ನ ಚ–ಬೇರೆ ಯಾವುದನ್ನು ಅಲ್ಲ; ವಾಕ್ಯಾರ್ಥಸ್ಯ–ಶ್ರುತಿಯ ಅರ್ಥದ, ಪ್ರಕಾರಶ್ಚ–ಪ್ರಕಾರವೂ, ಪೂರ್ವಂ ಏವ–ಈ ಹಿಂದೆಯೇ, ನಿರೂಪಿತಃ–ಹೇಳಲ್ಪಟ್ಟಿದೆ; ತಯೋಃ–ಆ ಶ್ರುತಿವಾಕ್ಯಗಳಲ್ಲಿ, ಸಾವಕಾಶತಃ–ಅನ್ಯಾರ್ಥಕ್ಕೆ ಅವಕಾಶವಿರುವ ವಾಕ್ಯದ ದೆಶೆಯಿಂದ, ನಿರವಕಾಶಸ್ಯ–ನಿರವಕಾಶ ವಾಕ್ಯದ, ಪ್ರಾಬಲ್ಯಂ–ಪ್ರಬಲತೆಯು (ನಿರೂಪಿತಃ–ಹೇಳಲಾಯಿತು).

**ಅನ್ಯಥಾ ಸುಖಭೋಗಸ್ಯ ಜ್ಞಾನಮಾತ್ರಸ್ಯ ಸರ್ವಥಾ ।**
**ನಿಷೇಧಾತ್ತಾರ್ಕಿಕಸ್ಯೈವ ಮೋಕ್ಷಃ ಸ್ಯಾನ್ನಾವಯೋರ್ಮತೇ ॥೧೯೬॥**

ಅನ್ಯಥಾ–ಹಾಗಲ್ಲದಿದ್ದರೆ ('ಯತ್ರ ತ್ವಸ್ಯ' ಎಂಬ ಶ್ರುತಿಯು ಸುಖರೂಪದ ಮುಕ್ತಿಯನ್ನು ಹೇಳದಿದ್ದರೆ), ಸುಖಭೋಗಸ್ಯ – ಸುಖಾನುಭವದ, ಜ್ಞಾನ–

---

ವೈಕುಂಠವೇ ಎಂದು, ಅದರ ಪರಮತ್ವವನ್ನು (ಸರ್ವೋತ್ಕೃಷ್ಟತ್ವವನ್ನು) ಪ್ರಶಂಸಿಸಿರುವನು; ಅದೇ ಪರಮಮೋಕ್ಷವು; ಜೀವನ್ಮುಕ್ತದಶಾಕ್ಕಿಂತ ಶ್ರೇಷ್ಠವಾದುದು (೧೯೨–೧೯೩). 'ಯತ್ರ ತ್ವಸ್ಯ .. ಮಾಮಮೃತಂ ಕೃಧಿ' ಎಂಬ ವೇದವಾಕ್ಯವು, ಸ್ಪಷ್ಟವಾದ ನಿರವಕಾಶ ಶಬ್ದಗಳಿಂದ, ಮುಕ್ತ ಬ್ರಹ್ಮಾದಿಗಳಿರುವ ಸ್ಥಾನವನ್ನು ಪರಮಮೋಕ್ಷವೆಂದೇ ಹೇಳಿದೆ; ಬೇರೆ ಯಾವ ಸ್ಥಾನವನ್ನು ಅಲ್ಲ; ಈ ಶ್ರುತಿಯ ವಾಕ್ಯಾರ್ಥ ಪ್ರಕಾರವೂ, ಆ ಶ್ರುತಿ ವಾಕ್ಯಗಳಲ್ಲಿ ಸಾವಕಾಶಕ್ಕಿಂತ ನಿರವಕಾಶ ವಾಕ್ಯದ ಪ್ರಾಬಲ್ಯವನ್ನು ಈ ಹಿಂದೆ ಸವಿಸ್ತಾರವಾಗಿ ನಿರೂಪಿಸಲಾಗಿದೆ (೧೯೪–೧೯೫). 'ಯತ್ರ ತ್ವಸ್ಯ....' ಇತ್ಯಾದಿ ಶ್ರುತಿಯು, ಸುಖರೂಪದ ಮುಕ್ತಿಯನ್ನು

ಮಾತ್ರಸ್ಯ–ಕೇವಲ ಜ್ಞಾನದ, ಸರ್ವಥಾ–ಸರ್ವಪ್ರಕಾರದ, ನಿಷೇಧಾತ್–ನಿಷೇಧ ಮಾಡುವುದರಿಂದ (ಮೋಕ್ಷದಲ್ಲಿ ಜ್ಞಾನಾನಂದಗಳೇ ಮುಕ್ತನಿಗಿಲ್ಲವೆಂದು ಹೇಳು ವುದರಿಂದ), ಆವಯೋಃ–ನಮ್ಮ, ಮತೇ–(ಉಭಯರ ಮತದಂತೆ ಮುಕ್ತಿಯಲ್ಲಿ ಜ್ಞಾನಾನಂದಗಳನ್ನು ಅಂಗೀಕರಿಸಿರುವುದರಿಂದ) (ಮೋಕ್ಷಃ – ಮೋಕ್ಷವು, ನ ಸ್ಯಾತ್ – ಇಲ್ಲವೆಂದಾಗಲಿ – ಆಗುತ್ತದೆ), ತಾರ್ಕಿಕಸ್ಯ ಏವ–(ಇಪ್ಪತ್ತೊಂದು ಪ್ರಭೇದಗಳುಳ್ಳ ದುಃಖಧ್ವಂಸವೇ ಮೋಕ್ಷವೆನ್ನುವ) ತಾರ್ಕಿಕನಿಗೇ, ಮೋಕ್ಷಃ ಸ್ಯಾತ್–ಮೋಕ್ಷವೆಂದಾಗಲಿ.[1]

**ಅವಿದ್ಯಾಸ್ತಮಯಾಧಾರೋ ಭಾವಾಂತರವಿಭೇದವಾನ್ ।**
**ಧ್ವಂಸಾಧಾರತ್ವತಃ ಕುಂಭಧ್ವಂಸಾ ಧಾರಕಪಾಲವತ್ ।**
**ಅನುಮೇಯಂ ಮುಕ್ತಿಕಾಲೇ ಭೇದಂ ಸಾಧಯತಿ ಸ್ಫುಟಂ ॥ ೧೯೭ ॥**

---

ಹೇಳದಿದ್ದರೆ, ಸುಖಭೋಗದ ಜ್ಞಾನಮಾತ್ರವೂ ಮುಕ್ತನಿಗೆ ಇಲ್ಲವೆಂದರೆ, ಇಪ್ಪತ್ತೊಂದು ಪ್ರಭೇದಗಳುಳ್ಳದ್ದೆಂಬ ದುಃಖಧ್ವಂಸವೇ (ನಾಶವೇ) ಮೋಕ್ಷ ವೆನ್ನುವ ತಾರ್ಕಿಕನಿಗೇ ಮೋಕ್ಷವೆನ್ನಬೇಕಾದೀತು? ಆದರೆ ಮುಕ್ತನು (ಚೇತನ ಸ್ವರೂಪನು) ಸಚ್ಚಿದಾನಂದ ಸ್ವರೂಪನೆಂಬುದು ನಮ್ಮ ಉಭಯರಿಗೂ ಸಮ್ಮತ ವಷ್ಟೆ! (೧೯೬). ಅವಿದ್ಯೆಯ ಅಭಾವವನ್ನು (ನಾಶವನ್ನು) ಅವಲಂಬಿಸಿ ಬ್ರಹ್ಮ

---

[1] ಪ್ರಸಕ್ತಶ್ರುತಿಯಲ್ಲಿ, 'ಕೇನ ಕಿಂ ಜಿಘ್ರೇತ್' ಇತ್ಯಾದಿಗಳು, ಪ್ರಾಕೃತ ವಿಷಯಾನು ಭವಕ್ಕೆ ಅವಶ್ಯಕವಾದ ಇಂದ್ರಿಯಗಳಿಲ್ಲವೆಂಬುದನ್ನು, ಮುಕ್ತ್ಯವಸ್ಥೆಗೆ ಹೇಳಲು, ಪ್ರವೃತ್ತ ವಾಗಿವೆ; ಇದನ್ನು ತಿಳಿಯದೇ ಘ್ರಾಣಾದಿಗಳಿಂದ ಅಪ್ರಾಕೃತ ವಿಷಯಭೋಗವಿಲ್ಲೆಂದೇ ಭಾವಿಸಿದರೆ, ಕೇವಲ ದುಃಖಾಭಾವವನ್ನು ಹೇಳುವ ತಾರ್ಕಿಕನಿಗೇ ಮೋಕ್ಷವನ್ನು ಹೇಳ ಬೇಕು; ಆದರೆ, ಅದ್ವೈತಿಯೂ, ದ್ವೈತಿಗಳಿಬ್ಬರೂ ಚೇತನನು ಸಚ್ಚಿದಾನಂದ ಸ್ವರೂಪ ನೆಂದು ಅಂಗೀಕರಿಸಿರುತ್ತಾರೆ; ಆದರೆ ಚೇತನವು ಒಂದು ಮಾತ್ರವೋ ಅಥವಾ ಬಹುವೋ ಎಂಬಲ್ಲಿ ವಿರೋಧವಿದೆ—ಅಷ್ಟೆ (ಈ ಹಿಂದೆ ಈ ವಿಷಯಕ ಶ್ರುತಿ, ಯುಕ್ತ್ಯಾದಿಗಳ ವಿವೇಚನೆ ಸುದೀರ್ಘವಾಗಿ ನಡೆದಿರುತ್ತದೆ); ಯದ್ಯಪಿ ಸುಖಭೋಗವೆಂಬುದು ಸುಖಾ- ಪರೋಕ್ಷಜ್ಞಾನವೇ ಆಗಿದೆ; ಆದರೂ ಪ್ರಾಕೃತ ವಿಷಯ ಭೋಗಾಭಾವವನ್ನು ನಿರೂಪಿ ಸಲು, ಪ್ರಸಕ್ತ ಶ್ರುತಿಯು ಈ ವಾಕ್ಯವನ್ನು ಹೇಳಿದೆ. 'ಯತ್ರ ಸರ್ವಂ ಆತ್ಮಾ ಏವ ಅಭೂತ್' ಎಂಬುದು ಮುಕ್ತನಿಗೆ ಇಂದ್ರಿಯಗಳೇ (ಪ್ರಾಕೃತೇಂದ್ರಿಯಗಳು ಮಾತ್ರವಲ್ಲ) ಇಲ್ಲವೆಂಬುದಕ್ಕೆ ಉತ್ತರವನ್ನು ಹೇಳುತ್ತದೆ.

ಮೋಕ್ಷದಲ್ಲಿಯೂ ಭಾವವಸ್ತುವಿರುವುದರಿಂದ, ಬ್ರಹ್ಮನಿಗೆ ಜೀವರಿಂದ ಭೇದವಿರುತ್ತೆಂಬಲ್ಲಿ ಅನುಮಾನವನ್ನು ರಚಿಸುತ್ತಾರೆ :—

ಅವಿದ್ಯಾಸ್ತಮಯಾಧಾರಃ – ಅವಿದ್ಯೆಯ (ಅಭಾವವನ್ನೇ) ನಾಶವನ್ನೇ ಆಶ್ರಯಿಸಿರುವ ಬ್ರಹ್ಮಚೈತನ್ಯವೂ (ಬ್ರಹ್ಮನೆಂದು ಹೇಳುವುದಕ್ಕೆ ಬದಲಾಗಿ ಹೀಗೆ ಹೇಳಿರುವುದು, ಸಗುಣಬ್ರಹ್ಮನೆಂಬ ಅರ್ಥವನ್ನು ಹೆದರಿ ಹೇಳಿದ್ದಾಗಿದೆ) ; ಭಾವಾಂತರ ವಿಭೇದವಾನ್ – ಅನ್ಯಭಾವ ಪದಾರ್ಥದಿಂದ ಭೇದವುಳ್ಳದ್ದು ; (ಹೇಗೆಂದರೆ), ಧ್ವಂಸಾಧಾರತ್ವತಃ–(ಧ್ವಂಸ) ನಾಶವನ್ನು ಆಧರಿಸಿರುವುದರಿಂದ (ಘಟದ ನಾಶದಿಂದ – ಅದು ಭಗ್ನವಾದರೆ ಕಪಾಲವು – ಹೋಳು, ಸಿದ್ಧವಾಗುವುದಷ್ಟೆ), ಕುಂಭಧ್ವಂಸಾಧಾರಕಪಾಲವತ್–ಗಡಿಗೆಯ ಧ್ವಂಸವನ್ನು ಅವಲಂಬಿಸಿದ ಕಪಾಲದಂತೆ (ಎಂಬುದಾಗಿ), ಅನುಮೇಯಂ–ಅನುಮಾನಿಸಬೇಕು ; ಮುಕ್ತಿಕಾಲೇ–ಮುಕ್ತಿದಶಾದಲ್ಲಿ, ಸ್ಫುಟಂ–ಸ್ಪಷ್ಟವಾಗಿ (ಈ ಅನುಮಾನವು), ಭೇದಂ–(ಜೀವಬ್ರಹ್ಮ) ಭೇದವನ್ನು ಸಾಧಯತಿ–ಸಾಧಿಸುತ್ತದೆ.

**ಬ್ರಹ್ಮಾ ತು ಸರ್ವಜೀವಾಂಸ್ತಾಂಸ್ತ್ರಿವಿಧಾನ್ ಸ್ವೋದರಸ್ಥಿತಾನ್ ।**
**ನಿವೇಶ್ಯ ವಿಷ್ಣೋರುದರೇ ಕುಕ್ಷಿಸ್ಥೈರಪರೋಕ್ಷಿಭಿಃ ॥ ೯೮ ॥**

**ಸಾಕಂ ವೈಕುಂಠವಾಹಿನ್ಯಾಂ ಪರಿತೋಽಂತಃಪುರಂ ಹರೇಃ ।**
**ಮುಕ್ತಾಮುಕ್ತಸ್ಥಲೋಪಾಧೌ ಚಿದ್ರೂಪಜಲಸಂಪದಿ ॥ ೯೯ ॥**

---

ಚೈತನ್ಯವಿರುವುದಷ್ಟೆ ; ಬೇರೆ ವಸ್ತುವಿನ ಭೇದವಿರುವ, ಬ್ರಹ್ಮಚೈತನ್ಯವು (ಅವಿದ್ಯೆಯಿಂದ ಭಿನ್ನವಾದ ಬ್ರಹ್ಮನು) ಜೀವಾದಿ ಅನ್ಯಚೇತನ ಭಿನ್ನನೇ ಆಗಿದ್ದಾನೆ ; ಅವಿದ್ಯಾನಾಶವನ್ನು ಅವಲಂಬಿಸಿರುವುದರಿಂದ ; ಘಟನಾಶವನ್ನು (ಭಂಗವನ್ನು) ಅವಲಂಬಿಸಿರುವ ಕಪಾಲದಂತೆ (ಘಟದ ಹೋಳಿನಂತೆ) ; ಎಂಬ ಅನುಮಾನವು, ಮುಕ್ತಿಯಲ್ಲಿ (ಸ್ವರೂಪಸ್ಥಿತಿಯಲ್ಲಿ) ಜೀವಬ್ರಹ್ಮ ಭೇದವನ್ನು ಸಾಧಿಸುತ್ತದೆ ; (೯೭). ಮಹಾ ಪ್ರಲಯಕಾಲದಲ್ಲಿ (ಪರಾಂತಕಾಲದಲ್ಲಿ) ಬ್ರಹ್ಮದೇವನು ತ್ರಿವಿಧರಾದ ಸರ್ವಜೀವರನ್ನು ತನ್ನ ಉದರದಲ್ಲಿಟ್ಟು ಶ್ರೀ ವಿಷ್ಣುವಿಗೆ ಆಹಾರನಾಗಿ ಆತನ ಉದರದಲ್ಲಿ ಪ್ರವೇಶ ಹೊಂದುತ್ತಾನೆ ; ತನ್ನಲ್ಲಿದ್ದ ತ್ರಿವಿಧ ಜೀವರಲ್ಲಿ, ಅಪರೋಕ್ಷಜ್ಞಾನಿಗೆ, ಶೇಷ ಗರುಡ, ಇಂದ್ರಾದಿ ಉತ್ತಮಾಧಿಕಾರಿಗಳೊಡನೆ,

**ವಿರಜಾಯಾಂ ಮಹಾನದ್ಯಾಂ ನಿರ್ದೋಷಾಯಾಂ ಭವಚ್ಛಿದಿ ।**
**ಮಗ್ನೋ ವಿಧ್ವಸ್ತಸಂಸಾರೋ ಲಿಂಗದೇಹಸ್ಯ ಭಂಗತಃ ॥ ೨೦೦ ॥**
**ದಿವ್ಯಸ್ವರೂಪಸಂಪನ್ನಃ ಶೇಷವೀಂದ್ರೇಂದ್ರಪೂರ್ವಕೈಃ ।**
**ಚಿದ್ರೂಪೈಃ ಸನಕಾದ್ಯೈಶ್ಚ ಭೃಗ್ವಾದ್ಯೈಶ್ಚ ಸಮನ್ವಿತಃ ॥ ೨೦೧ ॥**
**ಕುಕ್ಷಿಂ ಪ್ರವಿಶ್ಯ ಸ್ವಪಿತುರುಷಿತ್ವಾ ಶತವತ್ಸರಾನ್ ।**
**ಸೃಷ್ಟಿಕಾಲೇ ಪೂರ್ವಮುಕ್ತಾ ಬ್ರಹ್ಮಾದ್ಯಾ ಯೋಗಿನೋ ಯಥಾ ।**
**ಜಾತಾಃ ಸ್ವಯಂ ಚ ಸ್ವಗಣೈಃ ಸಹ ತದ್ವತ್ಪ್ರಜಾಯತೇ ॥ ೨೦೨ ॥**

ಭಾಗವತ ವಾಕ್ಯಗಳ ಅರ್ಥ ಸಂಗ್ರಹದಿಂದ ಪೂರ್ವೋಕ್ತ ಮುಕ್ತಿಗಮನ ಪ್ರಕಾರವನ್ನೇ ನಿರೂಪಿಸುತ್ತಾರೆ :—

ಬ್ರಹ್ಮಾತು–ಬ್ರಹ್ಮದೇವನಾದರೂ, ಸ್ವೋದರಸ್ಥಿತಾನ್–ತನ್ನ ಉದರದಲ್ಲಿರುವ, ತ್ರಿವಿಧಾನ್–(ಮುಕ್ತಿಯೋಗ್ಯ, ಮಿಶ್ರ ಮತ್ತು ಅಧಮ ಅಥವಾ ತಮೋಯೋಗ್ಯರೆಂದು) ತ್ರಿವಿಧರಾದ, ತಾನ್ ಸರ್ವಜೀವಾನ್–ಆ ಎಲ್ಲ ಜೀವರನ್ನು, ವಿಷ್ಣೋಃ – ವಿಷ್ಣುವಿನ, ಉದರೇ – ಉದರದಲ್ಲಿ, ನಿವೇಶ್ಯ – ಪ್ರವೇಶಗೊಳಿಸಿ, ಕುಕ್ಷಿಸ್ಥೈಃ – ಉದರದಲ್ಲಿರುವ, ಅಪರೋಕ್ಷಿಭಿಃ – ಅಪರೋಕ್ಷಜ್ಞಾನಿಗಳಾದ, (ಶೇಷವೀಂದ್ರೇತ್ಯಾದಿಗಳಿಂದ), ಸಾಕಂ–ಕೂಡಿ, ಹರೇಃ–ಶ್ರೀಹರಿಯ, ಅಂತಃಪುರಂ – ಅಂತಃಪುರವಾದ ವೈಕುಂಠನಗರಿಯ, ಪರಿತಃ – ಸುತ್ತಲೂ ಇರುವ, ವೈಕುಂಠವಾಹಿನ್ಯಾಂ – ವೈಕುಂಠದ ನದಿಯಲ್ಲಿ (ವಿರಜಾನದಿಯಲ್ಲಿ), ಮುಕ್ತಾಮುಕ್ತಸ್ಥಲೋಪಾಧೌ – ಮುಕ್ತ ಮತ್ತು ಅಮುಕ್ತರನ್ನು ಬೇರ್ಪಡಿಸುವುದಕ್ಕೆ ನಿಮಿತ್ತವಾದ, ಚಿದ್ರೂಪಜಲಸಂಪದಿ–ಚೇತನಾತ್ಮಕಜಲಸಂಪದದ (ಜಲಧಾರೆಯಾದ), ವಿರಜಾಯಾಂ–ವಿರಜಾನಾಮಕ, ಮಹಾನದ್ಯಾಂ–ಮಹಾನದಿಯೂ,

---

ವೈಕುಂಠನಗರಿಯ ಅಂತಃಪುರದ ಸುತ್ತಲಿರುವ ಮುಕ್ತಾಮುಕ್ತರನ್ನು ವಿವೇಕಿಸುವಲ್ಲಿ ನಿಮಿತ್ತದಂತಿರುವ (ಅಲ್ಲಿ ಮುಳುಗಿ, ಲಿಂಗದೇಹವನ್ನು ತ್ಯಜಿಸಿ ಮೇಲೆದ್ದವರು ಮೋಕ್ಷಕ್ಕೆ ಹೋಗಲಿರುವವರು) ಲಕ್ಷ್ಮ್ಯಾತ್ಮಕವಾದ ವಿರಜಾನದಿಯಲ್ಲಿ ಸ್ನಾನಮಾಡುತ್ತಾನೆ; ಆ ವಿರಜೆಯು, ದೋಷರಹಿತವಾದ, ಭವಚ್ಛೇದಕರವಾದ ಮಹಾನದಿಯು; ಲಿಂಗದೇಹ ಭಂಗದಿಂದ, ಶೇಷಗರುಡಾದಿ ಎಲ್ಲ ಮುಕ್ತಿಯೋಗ್ಯರೂ,

ನಿರ್ದೋಷಾಯಾಂ–ದೋಷರಹಿತವೂ, ಭವಚ್ಛಿದಿ–ಸಂಸಾರಬಂಧವನ್ನು ಕತ್ತರಿಸಿ ಹಾಕುವ ನದಿಯಲ್ಲಿ, ಮಗ್ನಃ–ಮುಳುಗಿ (ಸ್ನಾನಮಾಡಿ), ವಿಧ್ವಸ್ತಸಂಸಾರಃ–ನಷ್ಟವಾದ ಸಂಸಾರಬಂಧವುಳ್ಳವನಾಗಿ, ಲಿಂಗದೇಹಸ್ಯ–ಲಿಂಗದೇಹದ, ಭಂಗತಃ–ತೊಲಗುವಿಕೆಯಿಂದ (ನಷ್ಟದಿಂದ), ದಿವ್ಯಸ್ವರೂಪಸಂಪನ್ನಃ – ವಿಲಕ್ಷಣವಾದ ಸ್ವಸ್ವರೂಪವನ್ನು ಹೊಂದಿ, ಶೇಷವೀಂದ್ರೇಂದ್ರಪೂರ್ವಕೈಃ – ಶೇಷ, ಗರುಡ, ಇಂದ್ರಾದಿಗಳಿಂದಲೂ, ಚಿದ್ರೂಪೈಃ–ಚೇತನಸ್ವರೂಪರೇ ಆದ, ಸನಕಾದ್ಯೈಃ–ಸನಕಾದಿಗಳಿಂದಲೂ, ಭೃಗ್ವಾದ್ಯೈಶ್ಚ–ಭೃಗು ಮೊದಲಾದ ಋಷಿಗಳಿಂದಲೂ, ಸಮನ್ವಿತಃ–ಕೂಡಿಕೊಂಡು, ಸ್ವಪಿತುಃ–[1] ತನ್ನ ತಂದೆಯ (ಪರಮಾತ್ಮನ), ಕುಕ್ಷಿಂ–ಉದರವನ್ನು, ಪ್ರವಿಶ್ಯ–ಪ್ರವೇಶಮಾಡಿ, ಶತವತ್ಸರಾನ್–(ತನ್ನ ೧೦೦ ವರ್ಷಗಳ ಕಾಲ–ಸೃಷ್ಟಿಕಾಲದಷ್ಟೇ ದೀರ್ಘವಾದುದು ರಾತ್ರಿಯೆಂಬ ಪ್ರಲಯಕಾಲವು)

---

ಸ್ವಸ್ವರೂಪ ಸಂಪನ್ನರಾಗುತ್ತಾರೆ; ಈ ಎಲ್ಲರಿಂದ ಕೂಡಿ, ಚಿದ್ರೂಪರಾದ ಸನಕಾದಿಗಳು, ಭೃಗು ಮೊದಲಾದವರಿಂದ ಸಹ ಸಹಿತನಾಗಿ, ತನ್ನ ತಂದೆಯಾದ ಶ್ರೀಹರಿಯ (ಪರಬ್ರಹ್ಮನ) ಕುಕ್ಷಿಯನ್ನು ಪ್ರವೇಶಿಸುತ್ತಾನೆ; ಅಲ್ಲಿ ಮತ್ತೆ ತನ್ನ ೧೦೦ ವರ್ಷಗಳ ಕಾಲ, ಧ್ಯಾನಾನಂದ ಮಗ್ನನಾಗಿದ್ದು, ಪುನಃ ಸೃಷ್ಟಿಕಾಲ ಪ್ರಾಪ್ತವಾಗಲು, ತನ್ನೊಂದಿಗೆ ಮುಕ್ತರಾದ ಸ್ವಗಣದಿಂದ ಯುಕ್ತನಾಗಿ (ಸೇವಿತನಾಗಿಯೇ), ಹಿಂದೆ ಬ್ರಹ್ಮರಂತೆ, ವೈಕುಂಠಾದಿಗಳಲ್ಲಿ ಪ್ರಕಟನಾಗಿ ಅನಂತ

---

1 ಸಕಲ ಜೀವೋತ್ತಮನಿಗೇ, ಕರ್ತೃತ್ವ, ಪಿತೃತ್ವಾದಿ ಸಗುಣ ಸಹ ಭೋಗಪ್ರದನಾದರೂ ಅಗುಣನೆಂಬರ್ಥದ ವಿವರಣೆಯು; ಪ್ರಳಯಕಾಲವಾದ ಬ್ರಹ್ಮದೇವನ ನೂರು ವರ್ಷಗಳ ಕಾಲ, ಪರಮಾತ್ಮನ ಉದರದಲ್ಲಿ ಧ್ಯಾನಮಗ್ನರಾಗಿ ಆನಂದಿಸುತ್ತಿದ್ದವರೆಲ್ಲರೂ, ಸೃಷ್ಟಿಕಾಲ ಪ್ರಾಪ್ತವಾಗುತ್ತಿರಲು, ವೈಕುಂಠಾದಿ ಮುಕ್ತಲೋಕಗಳು (ಸೃಷ್ಟವಾಗಲು) ಪ್ರಕಟಗೊಳಿಸಲ್ಪಡಲು, ಸ್ವೇಚ್ಛಾ ವಿಹಾರದಲ್ಲಿ ತೊಡಗಿರುತ್ತಾ, ಪುನಃ ಮತ್ತೊಬ್ಬ ಬ್ರಹ್ಮನ ಶತಕಾಲವು ಮುಗಿದು, ಪ್ರಲಯವು ಬರಲು, ಆಗಲೂ ಹೀಗೆಯೇ ಧ್ಯಾನಂಗತರಾಗಿ ಪರಮಾತ್ಮನ ಉದರದಲ್ಲಿದ್ದು, ಪುನಃ ಸೃಷ್ಟಿಯು ಆರಂಭವಾಗಲು, ಪೂರ್ವದಂತೆ (ಆಗ ತಾವೂ ಪೂರ್ವ ಮುಕ್ತರೆನಿಸಿಕೊಂಡು) ಆನಂದಾತಿಶಯಾದಿಗಳನ್ನು ಅನುಭವಿಸುತ್ತಿರುವರೆಂಬ, ಭಾಗವತೋಕ್ತ 'ಕೃತತ್ವಾತ್ಸಗುಣಂ ಬ್ರಹ್ಮ ಪ್ರವಿಶ್ಯ ಪುರುಷರ್ಷಭಂ' ಇತ್ಯಾದಿ ವಾಕ್ಯಗಳ ವಿವರಣರೂಪವಾದುದೇ ಆಗಿದೆ; 'ಸೃಷ್ಟಿಕಾಲೇ ಪೂರ್ವಮುಕ್ತಾ' ಇತ್ಯಾದಿ ಪ್ರಕೃತವಾಕ್ಯವು, 'ಯಥಾಪೂರ್ವಂ ಜಾಯತೇ' ಎಂಬ ಭಾಗವತ ವಾಕ್ಯದ ಅರ್ಥವನ್ನು ಸೂಚಿಸಲು, ಸಂಗ್ರಹಿಸುತ್ತದೆ.

ನೂರುವರ್ಷಗಳ ಕಾಲವನ್ನು, ಉಷಿತ್ವಾ–(ಪರಮಾತ್ಮನ ಉದರದಲ್ಲಿ ವಾಸಿಸುತ್ತ, ಧ್ಯಾನಾನಂದದಲ್ಲಿ ಮಗ್ನನಾಗಿ), ವಾಸಮಾಡಿ, ಸೃಷ್ಟಿಕಾಲೇ–(ಪುನಃ) ಸೃಷ್ಟಿ ಕಾಲವು ಪ್ರಾಪ್ತವಾಗಲು, ಪೂರ್ವಮುಕ್ತಾಃ–ಹಿಂದೆ ಮುಕ್ತರಾದ, ಬ್ರಹ್ಮಾದ್ಯಾಃ ಯೋಗಿನಃ ಯಥಾ–ಬ್ರಹ್ಮಾದಿ ಧ್ಯಾನಯೋಗಿಗಳಂತೆ (ವೈಕುಂಠಾದಿ ಮುಕ್ತ ಲೋಕಗಳಲ್ಲಿ), ಜಾತಾಃ–ಪ್ರಕಟರಾಗಿ, ಸ್ವಗಣ್ಯೈಃ ಸಹ–ತನ್ನೊಂದಿಗೆ ಮುಕ್ತರಾದ ತನ್ನ ಗುಂಪಿನ ಜೀವರಿಂದ ಕೂಡಿ, ಸ್ವಯಂ ಚ–ತಾನೂ ಸಹ, ತದ್ವತ್–ಹಾಗೆಯೇ, ಪ್ರಜಾಯತೇ[1]–ಪ್ರಕಟನಾಗಿ (ಸ್ವೇಚ್ಛಾಮಾತ್ರದ ಅನಂತಭೋಗ ಗಳುಳ್ಳವನಾಗಿ) ವಿಹರಿಸುತ್ತಾನೆ.

**ಶುದ್ಧಪ್ರಕೃತ್ಯಂಶತಃ ಸ್ತ್ರ್ಯಭೂಷಣಾಯುಧರಾಶಯಃ ।**
**ಮುಕ್ತಾನಾಂ ಕಿಲ ಸರ್ವೇಷಾಂ ಲಿಂಗಭಂಗೇ ಹರೀಚ್ಛಯಾ ॥೨೦೩॥**

ಸಾರೂಪ್ಯಮೋಕ್ಷಪ್ರಕಾರವನ್ನು ವರ್ಣಿಸುತ್ತಾರೆ :—

ಮುಕ್ತಾನಾಂ–ಮುಕ್ತರಾದ, ಸರ್ವೇಷಾಂ–ಸರ್ವರಿಗೂ, ಲಿಂಗಭಂಗೇ–ವಿರಜಾಸ್ನಾನದಿಂದ ಲಿಂಗದೇಹನಾಶದ ಮುಂದಿನ ಕ್ಷಣದಿಂದ, ಹರೀಚ್ಛಯಾ–ಶ್ರೀಹರೀಚ್ಛೆಯಿಂದಲೇ, ಶುದ್ಧಪ್ರಕೃತ್ಯಂಶತಃ–ವಿಕಾರವಿಲ್ಲದ ಕೇವಲ ಪ್ರಕೃತಿಯ

---

ಭೋಗಗಳಿಂದ ಆನಂದಾತಿಶಯವನ್ನು ಹೊಂದುತ್ತಾ, ವಿವರಿಸುತ್ತಾನೆ (೧೯೮–೨೦೨) ಮುಕ್ತರಿಗೆ ಶುದ್ಧ ಪ್ರಕೃತ್ಯಂಶಗಳಿಂದ, ಆಭರಣ, ಆಯುಧಾದಿಗಳು ಪ್ರಕಟವಾಗಿರುತ್ತವೆ; ಲಿಂಗಭಂಗದ ಉತ್ತರಕ್ಷಣದಿಂದಲೇ, ಸಕಲ ಮುಕ್ತರಿಗೆ ಶ್ರೀ ಹರೀಚ್ಛೆಯಿಂದಲೇ ಲಭಿಸಿ ಈ ಆಭರಣಾದಿಗಳಿಂದ ವಿರಾಜಿಸುತ್ತಾರೆ (೨೦೩).

---

[1] 'ಪ್ರಜಾಯತೇ' ಎಂಬುದರಿಂದ, ಗುಣಮಿಶ್ರಣವಿಲ್ಲದ ವೈಕುಂಠಾದಿ ಲೋಕತ್ರಯ ದಲ್ಲಿ, 'ಪ್ರಕರ್ಷೇಣ ಆನಂದಾದಿ ಪ್ರಾದುರ್ಭಾವವಾನ್ ಭವತಿ' ಎಂಬುದು ಭಾಗವತ ಮೂಲವನ್ನೇ ಪಠಿಸುತ್ತದೆ, ಪೂರ್ವಮುಕ್ತರಾದ ಬ್ರಹ್ಮಾದಿಗಳೆಲ್ಲರೂ, ಸೃಷ್ಟಿಕಾಲದಲ್ಲಿ ವೈಕುಂಠಾದಿಗಳಲ್ಲಿರುವುದರಿಂದ, ಅಲ್ಲಿಯೇ (ತನ್ನವರೊಂದಿಗೇ) ಬ್ರಹ್ಮನೂ ನಿಲ್ಲುವನೆಂದು 'ಸ್ವಯಂ ಚ' ಎಂದೂ ಹೇಳಲಾಗಿದೆ.

ಅಂಶಗಳಿಂದ, ಭೂಷಣಾಯುಧರಾಶಯಃ – ಆಭರಣ, ಆಯುಧಾದಿರಾಶಿಗಳು, ಸ್ಯುಃ–ಉಂಟಾಗುತ್ತವೆ ; ಕಿಲ–ಎಂಬುದು ಸ್ಪಷ್ಟವಿದೆ.[1]

**ಅತಃ ಸಾರೂಪ್ಯಮೋಕ್ಷೋಽಯಂ ಸರ್ವೇಷಾಮಪಿ ಯೋಗಿನಾಂ ।**
**ಸಾಲೋಕ್ಯಸಾಮೀಪ್ಯಸಾಯುಜ್ಯಾನಿ ಯೋಗ್ಯತಯಾ ಕಿಲ ॥೨೦೪॥**

ಅತಃ – ಆದ್ದರಿಂದ (ಸಾರೂಪ್ಯಮುಕ್ತರಿಗೆಲ್ಲರಿಗೂ ಕಿರೀಟಕುಂಡಲಾದ್ಯ-ಲಂಕಾರಗಳು ಅಪೇಕ್ಷಿತವಾದ್ದರಿಂದ), ಅಯಂ – ಇದೇ, ಸಾರೂಪ್ಯಮೋಕ್ಷಃ–ಸಾರೂಪ್ಯಮೋಕ್ಷವು, ಸರ್ವೇಷಾಂ–ಸಮಸ್ತ, ಯೋಗಿನಾಂ–ಯೋಗಿಗಳಿಗೂ (ಧ್ಯಾನಯೋಗದಿಂದ ಮುಕ್ತರಾಗುವ ಸರ್ವಮುಕ್ತಿಯೋಗ್ಯಜೀವರಿಗೂ ಸಾರೂಪ್ಯಮೋಕ್ಷವುಂಟು); ಯೋಗ್ಯತಯಾ – ಜೀವರ ಯೋಗ್ಯತೆಯಂತೆ (ಉತ್ತಮಾಧಿಕಾರಿಗಳಿಗೆ ಮಾತ್ರ), ಸಾಲೋಕ್ಯಸಾಮೀಪ್ಯಸಾಯುಜ್ಯಾನಿ–ಸಾಲೋಕ್ಯ, ಸಾಮೀಪ್ಯ, ಸಾಯುಜ್ಯಗಳೆಂಬ ಅನ್ಯ ಪ್ರಕಾರದ ಮುಕ್ತಿಗಳು, ಕಿಲ–ಲಭಿಸುತ್ತವೆಯಷ್ಟೆ.[2]

---

ಸಕಲ ಸಾರೂಪ್ಯ ಮುಕ್ತರಿಗೆ ಕಿರೀಟ ಕುಂಡಲಾದ್ಯಲಂಕಾರಗಳು ಅಪೇಕ್ಷಿತವಾದ್ದರಿಂದ, ಈ ಮುಕ್ತರೆಲ್ಲರೂ ಸಾರೂಪ್ಯ ಮುಕ್ತರೇ ಆಗಿದ್ದಾರೆ ; ಸಾಲೋಕ್ಯ, ಸಾಮೀಪ್ಯ, ಸಾಯುಜ್ಯಗಳೆಂಬ ಜೀವಸ್ವರೂಪ ಯೋಗ್ಯತಾನುಸಾರವಾಗಿ,

---

[1] ಸಕ್ಕರೆ ತುಂಡಿಗೆ ಮುತ್ತಿಕೊಂಡ ನೊಣದ ರಾಶಿಯಂತೆ ನಾನಾವರ್ಣದ ಸೂಕ್ಷ್ಮತರ ಭಾಸ್ವರ ಪ್ರಕೃತ್ಯಂಶಗಳು, ಮುಕ್ತರ ಚಿನ್ಮಯಶಿರಃ ಪಾಣ್ಯಾದ್ಯವಯವಗಳಲ್ಲಿ ಕಿರೀಟಾದ್ಯಾಕಾರದಿಂದ ಅಂಟಿಕೊಂಡಿರುತ್ತವೆ ; ಅಥವಾ ಆ ದೇಹದ ಅಂಗಗಳಲ್ಲಿ ಅನಾದಿಕಾಲದಿಂದ ಶ್ರೀ ಹರೀಚ್ಛೆಯಿಂದಲೇ, ಸ್ವರೂಪ ದೇಹಗಳಲ್ಲಿ ಆಭರಣಾದಿಗಳು ಇದ್ದು, ಲಿಂಗ ಭಂಗವಾದಾಗ ವ್ಯಕ್ತವಾಗುತ್ತವೆ ; ಲಿಂಗದೇಹವು ಚಿದ್ರೂಪದೇಹದ ಕಂಚುಕದಂತೆ (ತೊಡಿಸಿದ ಅಂಗಿಯಂತೆ) ಇರುತ್ತದೆ ; ಇದು ತ್ರಿವಿಧ ಜೀವರಿಗೂ ಸಮವೇ ಆದ್ದರಿಂದ ಮೊದಲು ಉಕ್ತವಾದ ಪಕ್ಷವೇ ಅಧಿಕವಾಗಿ ಯುಕ್ತವಾಗುತ್ತದೆ ; ಪ್ರಕೃತಿಯ ಒಂದು ಭಾಗವು ಮಾತ್ರ, ಸೃಷ್ಟಿಯಲ್ಲಿ ಉಪಯೋಗಿಸಲ್ಪಡುತ್ತದೆ ; ಹಾಗೆ ಉಪಯೋಗಿಸಲ್ಪಡದುದು ಶುದ್ಧ ಪ್ರಕೃತಿಯು.

[2] ವಿರಜಾ ಜಲದಿಂದ ಮೇಲೆದ್ದವರ ಲಿಂಗದೇಹವು ಬಿದ್ದುಹೋಗಿ, ಮೊದಲೇ ಇದ್ದ ಸದೃಶಾಕಾರಾದ ಸ್ವರೂಪದೇಹವು, (ಸಾರೂಪ್ಯವು) ವ್ಯಕ್ತವಾದಾಗಿನಿಂದ, ಸಮಸ್ತರೂ ಸಾರೂಪ್ಯ ಮುಕ್ತರೇ ಆದರೂ, ಸಾಲೋಕ್ಯಾದಿ ಬೇರೆ ಪ್ರಕಾರದ ಮುಕ್ತಿಗೆ ಅಧಿಕಾರಿಗಳಾದ

**ಅಸ್ಮದ್ಗುರುರ್ಮುಖ್ಯವಾಯುರ್ಹರೇರ್ನಾಭಿಸರೋರುಹಾತ್ ।**
**ಉತ್ಪದ್ಯ ಚತುರಾಸ್ಯತ್ವಂ ಪ್ರಾಪ್ಯ ಶಾಸ್ತ್ಯಖಿಲಂ ಜಗತ್ ॥ ೨೦೫ ॥**

**ಏವಂ ಚಕ್ರೀ ಜಗಚ್ಚಕ್ರಂ ಸದಾ ವರ್ತಯತಿ ಪ್ರಭುಃ ।**
**ಆದ್ಯಃ ಸ್ಥಿರಚರಾಣಾಂ ಯೋ ವೇದಗರ್ಭಃ ಸಹರ್ಷಿಭಿಃ ॥ ೨೦೬ ॥**

**ಯೋಗೇಶ್ವರೈಃ ಕುಮಾರಾದ್ಯೈಃ ಸಿದ್ಧೈರ್ಯೋಗಪ್ರವರ್ತಕೈಃ ।**
**ಭೇದದೃಷ್ಟ್ಯಾಭಿಮಾನೇನ ನಿಃಸಂಗೇನಾಪಿ ಕರ್ಮಣಾ ॥ ೨೦೭ ॥**

**ಕರ್ತೃತ್ವಾತ್ಸಗುಣಂ ಬ್ರಹ್ಮ ಪುರುಷಂ ಪುರುಷರ್ಷಭಂ ।**
**ಸ ಸಂಗತ್ಯ ಪುನಃ ಕಾಲೇ ಕಾಲೇನೇಶ್ವರಮೂರ್ತಿನಾ ॥ ೨೦೮ ॥**

**ಜಾತೇ ಗುಣವ್ಯತಿಕರೇ ಯಥಾಪೂರ್ವಂ ಪ್ರಜಾಯತೇ ।**
**ಇತಿ ಭಾಗವತೇ ಸ್ಪಷ್ಟಂ ಕಥೇಯಂ ಸಮುದೀರಿತಾ ॥ ೨೦೯ ॥**

**ಸಾಧನಂ ಚಾಸ್ಯ ಜೀವೇಶಭೇದದೃಷ್ಟಿರ್ಹರೌಗುರೌ ।**
**ಅಭಿಮಾನಾಭಿದಾಭಕ್ತಿರ್ನಿವೃತ್ತಂ ಕರ್ಮ ಚೋಚ್ಯತೇ ॥ ೨೧೦ ॥**

ಅಸ್ಮದ್ಗುರುಃ—ನಮ್ಮ ಗುರುಗಳಾದ, ಮುಖ್ಯವಾಯುಃ—ಮುಖ್ಯವಾಯು ದೇವರು, ಹರೇಃ – ಶ್ರೀಹರಿಯ, ನಾಭಿಸರೋರುಹಾಕ್ – ನಾಭಿಕಮಲದಿಂದ,

---

ಪ್ರಕಾರದ ಮುಕ್ತ್ಯವಸ್ಥೆಗಳು ಲಭಿಸುತ್ತವೆ (೨೦೪). ನಮ್ಮ ಗುರುಗಳಾದ ಮುಖ್ಯ ವಾಯುದೇವನಾದರೂ, ಮುಂದಿನ ಸೃಷ್ಟಿಯಲ್ಲಿ ಶ್ರೀಹರಿಯ ನಾಭಿಕಮಲದಿಂದ, ಉತ್ಪನ್ನನಾಗಿ, ಚತುರ್ಮುಖನ ಪದವಿಯನ್ನು ಹೊಂದಿ, ಜಗತ್ತನ್ನು ಶಾಸನ

ಉತ್ತಮ ಜೀವರು, ಪುನಃ ಸೃಷ್ಟಿಕಾಲ ಪ್ರಾಪ್ತವಾಗಲು, ಭಗವದುದರದಿಂದ ಆನಂದಾತಿಶಯ ಭೋಗಕ್ಕಾಗಿ ಹೊರಬರುವ ಕಾಲದಲ್ಲಿ ಉತ್ತಮ ಭೋಗಾಶ್ರಯಗಳಾದ ಆಭರಣಾದಿಗಳಿಂದ ಯುಕ್ತವಾದ ರೂಪಗಳು, ಆಗಲೇ ಪ್ರಕಟವಾಗುತ್ತವೆ ; ಎಲ್ಲ ವಿಧದ ಮೋಕ್ಷಾಧಿಕಾರಿಗಳಿಗೂ ಭಗವದವತಾರಗಳಂತೆ, ಶಕ್ತಿ ವ್ಯಕ್ತ್ಯಾತ್ಮನಾ ಇರುವುದೆಂಬುದಿದೆ ; ಆಯಾ ಅಧಿಕಾರಿಗಳಿಗೆ ಆಯಾ ಕಾಲದಲ್ಲಿ ಆಯಾ ರೂಪಗಳು ವ್ಯಕ್ತವಾಗುತ್ತವೆ—ದೇಹೋತ್ಪತ್ತಿಯೆಂದು ಶಂಕಿಸಬಾರದು.

ಉತ್ಪದ್ಯ–ಹುಟ್ಟಿ, ಚತುರಾಸ್ಯತ್ವಂ–ಚತುರ್ಮುಖಪದವಿಯನ್ನು, ಪ್ರಾಪ್ಯ–ಹೊಂದಿ, ಅಖಿಲಂ ಜಗತ್–ಸಮಸ್ತಜಗತ್ತನ್ನು, ಶಾಸ್ತಿ–ಆಳುತ್ತಾನೆ (ನಿಯಮಿಸುತ್ತಾನೆ); ಏವಂ–ಹೀಗೆ (ಚತುರ್ಮುಖನ ದ್ವಾರಾ), ಚಕ್ರೀ–ಶ್ರೀಕೃಷ್ಣನು (ವಿಷ್ಣುವು), ಜಗಚ್ಚಕ್ರಂ–ಜಗಚ್ಚಕ್ರವನ್ನು, ಪ್ರಭುಃ – ಮಹಾಸ್ವಾಮಿಯಾದ ತಾನು, ಸದಾ–ಸರ್ವದಾ (ಅನಾದ್ಯನಂತ ಕಾಲದಲ್ಲಿ), ವರ್ತಯತಿ–ನಡೆಸುತ್ತಾನೆ; ಯಃ–ಯಾವಾತನು ಸ್ಥಿರಚರಣಾನಾಂ–ಸ್ಥಿರಚರವಸ್ತುಗಳಿಗೆ, ಆದ್ಯಃ–ಮೊದಲು ಜನಿಸಿದವನೋ, ವೇದಗರ್ಭಃ–(ವೇದಾ ಗರ್ಭೇ ಯಸ್ಯ ಸಃ) ಸರ್ವವೇದವನ್ನು ತಿಳಿದ ವೇದಗರ್ಭನೋ, ಸಃ – ಆತನು, ಸಹರ್ಷಿಭಿಃ – ಋಷಿಗಳಿಂದಲೂ (ಮುಂದೆ ಜನಿಸುವ ಋಷಿ, ಯೋಗೇಶ್ವರ, ಸಿದ್ಧಾದಿಗಳಿಂದ) ಯುಕ್ತನಾಗಿ, ಯೋಗೈಶ್ವರ್ಯೈಃ – ಯೋಗನಿಪುಣರಾದ, ಕುಮಾರಾದ್ಯೈಃ – ಕುಮಾರಾದಿಮುನಿಗಳಿಂದಲೂ, ಸಿದ್ಧೈಃ–ಯೋಗ ಸಿದ್ಧರಾದ, ಯೋಗ ಪ್ರವರ್ತಕೈಃ–(ಮುಂದಿನ ಕಲ್ಪದಲ್ಲಿ) ಯೋಗಮಾರ್ಗವನ್ನು ಉಪದೇಶಿಸಿ, ಮುಂದರಿಸುವ ಜ್ಞಾನಿಗಳಿಂದಲೂ, ಭೇದದೃಷ್ಟ್ಯಾ–ಭೇದ ಜ್ಞಾನದಿಂದಲೂ, ಅಭಿಮಾನೇನ–(ಮೂಲ ರೂಪ ಮತ್ತು ಅವತಾರಗಳಲ್ಲಿ ಸಹ ಶ್ರೀಹರಿಯಲ್ಲಿಯೇ ಮಾಡಿದ) ಬಹುಮಾನದಿಂದ, ನಿಸ್ಸಂಗೇನ – ಫಲಾಪೇಕ್ಷೆಯಿಲ್ಲದೇ ಮಾಡಿದ, ಕರ್ಮಣಾಪಿ – ಕರ್ಮದಿಂದಲೂ, ಕರ್ತೃತ್ವಾತ್–ಸರ್ವಕರ್ತನಾದ್ದರಿಂದ, ಸಗುಣಂ ಬ್ರಹ್ಮ–ಜ್ಞಾನಾನಂದಾದಿ ಗುಣಪೂರ್ಣನಾದ, ಪುರುಷಂ–ಪುರುಷನಾಮಕ, ಪುರುಷರ್ಷಭಂ–ಪುರುಷೋತ್ತಮನನ್ನು (ಪರಬ್ರಹ್ಮನನ್ನು), ಸಃ–ಆತನು (ಭಾವಿ ಅಧಿಕಾರಿಗಳಾದ

---

ಮಾಡುತ್ತಾನೆ; ಹದಿನಾಲ್ಕೂ ಲೋಕಗಳನ್ನು ಆಳುವ ಪ್ರಭುವಾಗುತ್ತಾನೆ; ಹೀಗೆ ಶ್ರೀ ವಿಷ್ಣುವು ಜಗತ್ತಿನ ಸೃಷ್ಟಿ ಮತ್ತು ಲಯಕಾರ್ಯಗಳ ಚಕ್ರವನ್ನು, ಸರ್ವದಾ ಪ್ರವರ್ತಿಸುತ್ತಿರುವನು; ಮುಖ್ಯ ವಾಯುದೇವನ ಉತ್ಪತ್ತಿ ಪ್ರಕಾರವು ಶ್ರೀ ಭಾಗವತದಲ್ಲಿ ವಿವರಿಸಲ್ಪಟ್ಟಿದೆ; ಚತುರ್ಮುಖನ ಪದವಿಗೆ ಮುಂದಿನ ಕಲ್ಪದಲ್ಲಿ ಬರುವ ಜೀವರು ಋಜುಗಣವೆಂದು ಕರೆಯಲ್ಪಡುವ ಒಂದು ಗುಂಪಿನ ಜೀವರು; ಈ ಗಣದ ಒಬ್ಬ ಜೀವನು, ತನ್ನ ೯ನೇ ಜನ್ಮದಲ್ಲಿ ಮುಖ್ಯ ವಾಯು ಪದವಿಯಲ್ಲಿದ್ದು, ಪ್ರಲಯಾನಂತರ, ತನ್ನ ಪರ (ಶತವರ್ಷ) ಕಾಲಾವಧಿಯ ರಾತ್ರಿ ಕಾಲವು ಕಳೆದು ಸೃಷ್ಟಿಕಾಲವು ಪ್ರಾಪ್ತವಾಗಲು, ಸ್ಥಾವರ ಜಂಗಮಾತ್ಮಕ ಜಗತ್ತಿನ ಎಲ್ಲಕ್ಕಿಂತ ಮೊದಲು ತಾನೇ ಶ್ರೀಹರಿಯಿಂದ ಜನಿಸುತ್ತಾನೆ; ಈತನು

ಋಷ್ಯಾದಿಗಳಿಂದ ಸಹಿತನಾಗಿ), ಸಂಗತ್ಯ – (ಪ್ರಲಯಕಾಲದಲ್ಲಿ ಪರಬ್ರಹ್ಮನ ಉದರವನ್ನು ಹೊಂದಿ ಅಲ್ಲಿದ್ದು), ಪುನಃ–ಆಮೇಲೆ ಕಾಲೇ ಗುಣವ್ಯತಿಕರೇ– 'ಗುಣವೈಷಮ್ಯ'ವೆಂದು ಕರೆಯಲಾಗುವ ಸೃಷ್ಟಿಕಾಲವು, ಕಾಲೇನ–ಕಾಲನಾಮಕ ನಾದ (ಕಾಲನಿಯಾಮಕನಾದ), ಈಶ್ವರಮೂರ್ತಿನಾ–ಸರ್ವನಿಯಾಮಕ ಶ್ರೀಹರಿ ಯಿಂದ, ಜಾತೇ–ಉಂಟಾಗುತ್ತಿರಲು, ಯಥಾಪೂರ್ವಂ–ಹಿಂದಿನ ಬ್ರಹ್ಮನಂತೆ, ಪ್ರಜಾಯತೇ-(ನಾಭಿಕಮಲದಿಂದ ಮಹತ್ತತ್ವನಿಯಾಮಕನಾಗಿ), ಸ್ಥೂಲಭೌತಿಕ ದೇಹವನ್ನು ಹೊಂದುತ್ತಾನೆ; ಇತಿ-ಹೀಗೆ, ಭಾಗವತೇ[1]–ಭಾಗವತದಲ್ಲಿ, ಸ್ಪಷ್ಟಂ– ಸ್ಪಷ್ಟವಾಗಿ, ಇಯಂ ಕಥಾ – ಈ ಸೃಷ್ಟಿ ಪ್ರಲಯಕಾಲಗಳ ವೃತ್ತಾಂತವು, ಸಮುದೀರಿತಾ – ನಿಶ್ಚಿತವಾಗಿ ನಿರೂಪಿತವಾಗಿದೆ ; ಅಸ್ಯ – ಈ ಬ್ರಹ್ಮಜೀವನಿಗೆ, (ಮುಮುಕ್ಷು ಜೀವಸಮುದಾಯಕ್ಕೆ), ಜೀವೇಶ ಭೇದದೃಷ್ಟಿಃ–ಜೀವ ಬ್ರಹ್ಮರ ಭೇದಜ್ಞಾನವೂ, ಹರೌ ಗುರೌ–ಹರಿಗುರುಗಳಲ್ಲಿ, ಅಭಿಮಾನಾಭಿದಾ ಭಕ್ತಿಃ– ಅಭಿಮಾನ (ಸ್ನೇಹ)ವೆಂಬ ಭಕ್ತಿಯು, ನಿವೃತ್ತಂ ಕರ್ಮ,–ನಿವೃತ್ತ ಕರ್ಮಾ ಚರಣೆಯೂ, ಸಾಧನಂ-(ಮೋಕ್ಷಕ್ಕೆ) ಸಾಧನವೆಂದು, ಉಚ್ಯತೇ-ಹೇಳಲ್ಪಡುತ್ತದೆ.

---

ಸಕಲ ವೇದಜ್ಞಾನಿಯಾದ್ದರಿಂದ, ವೇದಗರ್ಭನೆನಿಸುವನು ; ಈತನು, ಋಷಿಗ ಳಿಂದಲೂ, ಸನತ್ಕುಮಾರಾದಿ ಯೋಗೀಶ್ವರರು, ಸಿದ್ಧರು, ಮುಂದಿನ ಕಲ್ಪದಲ್ಲಿ (ಭಾವಿ) ಯೋಗಪ್ರವರ್ತಕರಾದ ಯೋಗಿಗಳಿಂದ ಸಹಿತನಾಗಿ, ಹಿಂದಿನ ಕಲ್ಪದ ಬ್ರಹ್ಮಾದಿಗಳಂತೆ ತಾನೂ ಜನಿಸುತ್ತಾನೆ; ಜೀವೇಶಭೇದ ಜ್ಞಾನಿಯಾಗಿ, ಈ ವಾಯುದೇವನು, ಶ್ರುತಿ ಪ್ರಸಿದ್ಧಗಳಾದ ತನ್ನ ಅವತಾರಗಳಲ್ಲಿ ಸಹ ಶ್ರೀಹರಿಯ ಮೂಲರೂಪ ಮತ್ತು ಅಸಂಖ್ಯ ಅವತಾರರೂಪಗಳಲ್ಲಿ ಏಕಪ್ರಕಾರವಾದ ಭಕ್ತಿ ಯುತವಾದ ಪೂಜ್ಯ ಬುದ್ಧಿಯುಳ್ಳವನಾಗಿ, ಫಲಾಶಾರಹಿತವಾದ ಕರ್ಮಾನುಷ್ಠಾನ ವುಳ್ಳವನಾಗಿ, ಸರ್ವ ಜೀವಾಂತರ್ಯಾಮಿಯಾಗಿ ಸರ್ವಕರ್ತನಾಗಿದ್ದು, ಜ್ಞಾನಾ ನಂದಾದಿ ಅನಂತಗುಣ ಪೂರ್ಣನೂ, ಪುರುಷನಾಮಕನೂ, ಪುರುಷೋತ್ತಮನೂ ಆದ ಪರಬ್ರಹ್ಮನನ್ನು, ಋಷ್ಯಾದಿ ಸಕಲ ಯೋಗೀಶ್ವರ ಸಹಿತನಾಗಿ, ಪ್ರವೇಶಿಸಿ,

---

[1] 'ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ ವಿರಿಂಚಿತಾಮೇತಿ' ; 'ಯತ್ಪಾದಪದ್ಮ ಪರಿಚರ್ಯಯಾ–' ಇತ್ಯಾದಿ ಭಾಗವತ ಭಾಗಗಳಲ್ಲಿ ಋಜುಜೀವರ ಸಾಧನ, ವಿರಿಂಚಿ ಪದಪ್ರಾಪ್ತಿ ಮುಂತಾದ ವಿಷಯಗಳು ಸ್ಪಷ್ಟವಾಗಿ ಹೇಳಲ್ಪಡುತ್ತದೆ; ಅವುಗಳ ಅರ್ಥವನ್ನು ಇಲ್ಲಿ ಸಂಗ್ರಹಿಸಿದ್ದಾರೆ.

**ಮುಖ್ಯಂ ತದುಭಯಂ ಕರ್ಮ ತ್ವಮುಖ್ಯಂ ತತ್ರ ಸಾಧನಂ ।**
**ಅತಸ್ತೃತೀಯಂ ತತ್ಪ್ರೋಕ್ತಮಪಿಶಬ್ದೋಽಪ್ಯಗರ್ಹಯತ್ ॥ ೨೧೧ ॥**

ತದುಭಯಂ – 'ಭೇದದೃಷ್ಟ್ಯಾಭಿಮಾನೇನ' ಎಂಬಲ್ಲಿ (೨೦೭ನೇ ಶ್ಲೋಕವನ್ನು ನೋಡಿರಿ) ಹೇಳಿದ, ಜೀವೇಶ ಭೇದಜ್ಞಾನ ಮತ್ತು ಭಕ್ತಿಗಳೆಂಬ ಎರಡು, ಮುಖ್ಯಂ–ಪ್ರಧಾನವಾದುವು, ತತ್ರ–ಮೋಕ್ಷಸಾಧನಗಳಲ್ಲಿ, ಕರ್ಮ ತು– ಕರ್ಮವಾದರೋ, ಅಮುಖ್ಯಂ – ಅಮುಖ್ಯವಾದ, ಸಾಧನಂ – ಸಾಧನವು ; ಅತಃ–ಈ ಕಾರಣದಿಂದ, ತತ್ – ಕರ್ಮವು, ತೃತೀಯಂ – ಮೂರನೆಯದಾಗಿ ('ನಿಃಸಂಗೇನಾಪಿ ಕರ್ಮಣಾ' ಎಂದು), ಪ್ರೋಕ್ತಂ–ಹೇಳಲ್ಪಟ್ಟಿತು ; ಅಪಿಶಬ್ದಃ ಅಪಿ–'ನಿಃಸಂಗೇನಾಪಿ' ಎಂಬಲ್ಲಿರುವ 'ಅಪಿ' ಶಬ್ದವಾದರೂ, ಅಗರ್ಹಯತ್– ಕರ್ಮವನ್ನು (ಜ್ಞಾನ ಭಕ್ತಿಗಳಿಗಿಂತ) ಕನಿಷ್ಠಸಾಧನವನ್ನಾಗಿ ಹೇಳಿತು.

**ಸಮುಚ್ಚಯಾರ್ಥಂ ಗರ್ಹಾರ್ಥಮಪಿಶಬ್ದೋಽಯಮೀರಿತಃ ।**
**ನ ಚೇಚ್ಚಶಬ್ದಂ ಪ್ರಬ್ರೂಯಾತ್ಸೋಽಪಿಚ್ಛಂದೋ ಭಿನತ್ತಿ ನ ॥ ೨೧೨ ॥**

ಅಯಂ ಅಪಿಶಬ್ದಃ–ಈ 'ಅಪಿ' ಎಂಬ ಶಬ್ದವು, ಸಮುಚ್ಚಯಾರ್ಥಂ– ಸಮುಚ್ಚಯಾರ್ಥವುಳ್ಳದ್ದೆಂದೂ, ಗರ್ಹಾರ್ಥಂ – ಕನಿಷ್ಠಾರ್ಥವುಳ್ಳದ್ದೆಂದೂ,

---

ಅಲ್ಲಿ ಹಿಂದೆ ಹೇಳಿದಂತೆ ಸ್ವಶತಮಾನಕಾಲ, ಧ್ಯಾನಾನಂದಮಗ್ನನಾಗಿದ್ದು, ಕಾಲ ಪ್ರೇರಕನೂ, ಕಾಲನಾಮಕನೂ ಆದ ಶ್ರೀ ಹರೀಚ್ಛೆಯಿಂದ, ಗುಣವೈಷಮ್ಯ ನಾಮಕ ಜಗತ್ಸೃಷ್ಟಿ ಕಾಲವು ಪ್ರಾಪ್ತವಾಗಲು, ಹಿಂದಿನ ಕಲ್ಪದಂತೆ ನಾಭಿ ಕಮಲದಿಂದ ಮಹತ್ತತ್ವಾಭಿಮಾನಿಯಾಗಿ, ಆದ್ಯನಾಗಿ ಜನಿಸುತ್ತಾನೆ; ಈ ವಾಯುದೇವನೇ ಆದಿಯಾದ ಮುಕ್ತಿಯೋಗ್ಯ ಜೀವರಿಗೆ, ಜೀವೇಶ ಭೇದ ಜ್ಞಾನವೂ, ಹರಿಗುರುಗಳಲ್ಲಿ ಭಕ್ತಿಯೂ, ನಿವೃತ್ತ ಕರ್ಮಾಚರಣೆಯೂ (ಕರ್ಮಫಲೇಚ್ಛಾ ಮತ್ತು ಸ್ವತಂತ್ರ ಕರ್ತೃತ್ವಾಭಿಮಾನಗಳ ತ್ಯಾಗಪೂರ್ವಕ ಕರ್ಮಾನುಷ್ಠಾನ) ಮೋಕ್ಷಕ್ಕೆ ಮುಖ್ಯಸಾಧನವೆಂದು, ಭಾಗವತದಲ್ಲಿ ಉಕ್ತವಾಗಿದೆ (೨೦೫–೨೧೦). ಉಕ್ತಸಾಧನಗಳಲ್ಲಿ ಭೇದಜ್ಞಾನವೂ, ಭಕ್ತಿಯೂ, ಮುಖ್ಯ ವಾದುವುಗಳು ; ಕರ್ಮಾನುಷ್ಠಾನವು ಅಮುಖ್ಯವು ; ಈ ಕಾರಣದಿಂದ, ಕರ್ಮವು, ಮೂರನೆಯದಾಗಿ ಹೇಳಲಾಗಿದೆ ಮತ್ತು 'ನಿಃಸಂಗೇನಾಪಿ ಕರ್ಮಣಾ' ಎಂಬಲ್ಲಿ 'ಅಪಿ' ಶಬ್ದವು, ಆ ಸಾಧನದ ಕನಿಷ್ಠತ್ವವನ್ನು ಸೂಚಿಸುತ್ತದೆ (೨೧೧). ಯದ್ಯಪಿ, 'ಅಪಿ' ಶಬ್ದವು, ಸಮುಚ್ಚಯ (ಸೇರಿಸುವ ಅಥವಾ ಕೂಡಿಸುವ)

ಈರಿತಃ–ಹೇಳಲ್ಪಡುತ್ತದೆ ; ನ ಚೇತ್–ಗರ್ಹಾರ್ಥವು ಇಲ್ಲದಿದ್ದರೆ, ಚ ಶಬ್ದಂ–'ಚ' ಶಬ್ದವನ್ನೇ, ಪ್ರಬ್ರೂಯಾತ್–ಹೇಳಬಹುದಿತ್ತು; ಸೋಪಿ–ಚ ಶಬ್ದವಾದರೂ, ಛಂದಃ–ಛಂದಸ್ಸನ್ನು, ನ ಭಿನತ್ತಿ–ಭಂಗವನ್ನುಂಟುಮಾಡುತ್ತಿರಲಿಲ್ಲ ; (' ನಿಃಸಗೇನ ಚ ಕರ್ಮಣಾ ' ಎಂದು ' ನಿಃಸಂಗೇನಾಪಿ ಕರ್ಮಣಾ ' ಎಂಬುದರ ಸ್ಥಾನದಲ್ಲಿ ಹೇಳಿದ್ದರೆ ಛಂದೋಭಂಗವಾಗುತ್ತಿರಲಿಲ್ಲ).

**ಅಭಿಮಾನೋಪ್ಯುಕ್ತರೀತ್ಯಾ ಭಕ್ತಿರೇವ ಭವೇದಸೌ ।**
**ಮೋಕ್ಷಸಾಧನಪಙ್ಕ್ತ್ಯಾ ಯಃ ಪಠಿತೋ ದಿವ್ಯಯೋಗಿನಾ ॥ ೨೧೩ ॥**

ಅಭಿಮಾನಃ ಅಪಿ–'ಅಭಿಮಾನ' ಶಬ್ದವಾದರೂ, ಅಸೌ–ಅದು, ಉಕ್ತ ರೀತ್ಯಾ – ಹಿಂದೆ ಹೇಳಿದಂತೆ, ಭಕ್ತಿರೇವ – ಭಕ್ತಿಯೇ ಭವೇತ್ – ಆಗುತ್ತದೆ; (ಏಕೆಂದರೆ), ಯಃ–ಯಾವುದು (ಅಭಿಮಾನವು), ದಿವ್ಯಯೋಗಿನಾ–ಶುಕಯೋಗಿಗಳಿಂದ (ದಿವ್ಯ ಜ್ಞಾನಿಗಳಿಂದ), ಮೋಕ್ಷಸಾಧನ ಪಙ್ಕ್ತ್ಯಾ–ಮೋಕ್ಷಸಾಧನ ಪಂಗ್ತಿಯಲ್ಲಿ (ಸಾಧನಗಳ ಸಾಲಿನಲ್ಲಿ), ಪಠಿತಃ – ಹೇಳಲಾಗಿದೆ. ( ನಿವೃತ್ತ ಕರ್ಮವೂ ಮೋಕ್ಷಸಾಧನವೆಂದು ಸರ್ವಸಮ್ಮತವೇ ಆಗಿದೆ).

**ಏವಂ ಪರಾಂತಕಾಲೇ ಸ್ಯಾನ್ಮುಕ್ತತ್ವಂ ಯೋಗ್ಯಯೋಗಿನಾಂ ।**
**ಪರಾಂತಕಾಲೇ ಯನ್ಮುಕ್ತಿಕಾಲಃ ಶ್ರುತಿಷು ಕಥ್ಯತೇ ।**
**ನಿವೃತ್ತಂ ಕರ್ಮ ಯನ್ಮುಕ್ತ್ಯೈ ತತೋನ್ಯೋಽರ್ಥೋ ನ ಶೋಭತೇ ॥ ೨೧೪ ॥**

ಏವಂ–ಹೀಗೆ (ಉಕ್ತರೀತಿಯಲ್ಲಿ), ಪರಾಂತಕಾಲೇ – ಪರಾಂತಕಾಲದಲ್ಲಿ, ಯೋಗ್ಯ ಯೋಗಿನಾಂ–ಯೋಗ್ಯರಾದ (ಮುಕ್ತಿಯೋಗ್ಯರಾದ) ಯೋಗಿಗಳಿಗೆ

---

ಅರ್ಥವುಳ್ಳದ್ದೂ ಗರ್ಹವೆಂಬರ್ಥವುಳ್ಳದ್ದೂ ಆಗಿದೆ; ಇಲ್ಲಿ ಉಪಯೋಗಿಸಿರುವುದು ಗರ್ಹಾರ್ಥವಲ್ಲದಿದ್ದರೆ ಸಮುಚ್ಚಯಕ್ಕಾಗಿ ಆಗಿದ್ದರೆ, 'ಚ'ಕಾರವನ್ನು ಉಪಯೋಗಿಸಬಹುದಿತ್ತು ; ಹಾಗೆ ಮಾಡುವುದರಿಂದ 'ನಿಃಸಂಗೇನ ಚ ಕರ್ಮಣಾ' ಎಂದು ಹೇಳಿದ್ದರೆ ಛಂದಸ್ಸಿನ ಭಂಗವೂ ಆಗುತ್ತಿರಲಿಲ್ಲ (೨೧೨). ಅಲ್ಲಿಯೇ 'ಭೇದ ದೃಷ್ಟ್ಯಾಭಿಮಾನೇನ' ಎಂಬಲ್ಲಿ ದಿವ್ಯಜ್ಞಾನಿಗಳಾದ ಶ್ರೀ ಶುಕರು (ಭಾಗವತದಲ್ಲಿ) ಉಪಯೋಗಿಸಿರುವ 'ಅಭಿಮಾನೇನ' ಎಂಬುದು ಭಕ್ತಿಯನ್ನೇ ಹೇಳುತ್ತದೆ; ಮೋಕ್ಷ ಸಾಧನಗಳ ಸಾಲಿನಲ್ಲಿ ಉಪಯೋಗಿಸಿರುವುದರಿಂದ, ಬೇರೆ ಅರ್ಥವು ಯುಕ್ತವಾಗುವುದಿಲ್ಲ (೨೧೩). ಹೀಗೆ ಪರಾಂತ ಕಾಲದಲ್ಲಿ ಯೋಗ್ಯಜ್ಞಾನಿಗಳಿಗೆ,

(ಸಾಧನವುಳ್ಳವರಿಗೆ), ಮುಕ್ತತ್ವಂ–ಮುಕ್ತತ್ವವು (ಮುಕ್ತ್ಯವಸ್ಥಾಪ್ರಾಪ್ತಿಯು), ಸ್ಯಾತ್ – ಉಂಟಾಗುತ್ತದೆ ; ಯತ್ – ಯಾವ ಕಾರಣದಿಂದ, ಶ್ರುತಿಷು – ('ಪರಾಂತಕಾಲೇ ಪರಿಮುಚ್ಯಂತಿ ಸರ್ವೇ' ಇತ್ಯಾದಿ ಶ್ರುತಿಗಳಲ್ಲಿ, ಪರಾಂತಕಾಲೇ–ಪರಾಂತಕಾಲದಲ್ಲಿ,ಮುಕ್ತಿಕಾಲಃ-ಮೋಕ್ಷಕಾಲವುಕಥ್ಯತೇ-ಹೇಳಲ್ಪಡುತ್ತದೆಯೋ, ತತಃ–ಆ ಕಾರಣದಿಂದ, ಯನ್ಮುಕ್ತ್ಯೈ–ಯಾವ ಮೋಕ್ಷರೂಪ ಫಲಕ್ಕಾಗಿ, ನಿವೃತ್ತಂ ಕರ್ಮ–ನಿವೃತ್ತಕರ್ಮಾನುಷ್ಠಾನವೂ (ಇರುವುದರಿಂದ), ಅನ್ಯೋ ಅರ್ಥಃ–ಬೇರೆ ಅರ್ಥವು (ದೇಹಾದ್ಯಭಿಮಾನದಿಂದ ಪುನಃ ಇಹದಲ್ಲಿಯೇ ಹುಟ್ಟು ವನೆಂಬ ಅರ್ಥವು), ನ ಶೋಭತೇ-ಪ್ರಶಸ್ತವಾಗುವುದಿಲ್ಲ (ಹೊಂದುವುದಿಲ್ಲ-ಮೋಕ್ಷ ವನ್ನೇ ಹೊಂದುವನೆಂದು ಹೇಳಲೇಬೇಕು).[1]

---

ಮುಕ್ತ್ಯವಸ್ಥೆಯು ಲಭಿಸುತ್ತದೆ ; ಹೀಗೆ ಪರಾಂತಕಾಲದಲ್ಲಿ ಮುಕ್ತಿಯ ಪ್ರಾಪ್ತಿ ಯೆಂದು ಶ್ರುತಿಗಳಲ್ಲಿಯೂ ಹೇಳಿರುವುದರಿಂದಲೂ, ಮತ್ತು ನಿವೃತ್ತ ಕರ್ಮವು

[1] ಮುಕ್ತಿಸಾಧನವೆಂದು ಸರ್ವಾಭಿಮತವಾದ ನಿವೃತ್ತಕರ್ಮದೊಂದಿಗೆ ಪಠಿತ ವಾಗಿರುವುದರಿಂದ, ಅಭಿಮಾನಶಬ್ದದಿಂದ ಅನ್ಯಾರ್ಥವನ್ನು ತಿಳಿಯಲಾಗುವುದಿಲ್ಲ ; 'ಭೇದ ದೃಷ್ಟ್ಯಾಭಿಮಾನೇನ' ಎಂಬಲ್ಲಿರುವ ಶಬ್ದಗಳಿಗೆ ವ್ಯಾವಹಾರಿಕ ಭೇದದೃಷ್ಟಿ ಮತ್ತು ದೇಹಾಭಿಮಾನವೆಂಬರ್ಥಗಳು ಯೋಗ್ಯವಲ್ಲ ; ಅವುಗಳಿಂದ ಪುನಃ ಇಲ್ಲಿಯೇ (ಸಂಸಾರ ದಲ್ಲಿಯೇ) ಹುಟ್ಟಬೇಕಾಗುತ್ತದೆ ; ನಿವೃತ್ತಕರ್ಮವು ಪುನರ್ಜನ್ಮ ಕಾರಣವಲ್ಲ ; ಪರಾಂತ ಕಾಲದಲ್ಲಿ ಋಷಿ, ಕುಮಾರಾದಿ ಯೋಗೀಶ್ವರರೇ ಆದಿಯಾದ (ಸಕಲವೇದ ಪ್ರವರ್ತಕ) ಬ್ರಹ್ಮದೇವನಿಗೂ ಸಹ, ದೇಹಾಭಿಮಾನವು ಕಂಡಿಲ್ಲವಾದ್ದರಿಂದಲೂ 'ಪರಾಂತಕಾಲೇ ಪರಿಮುಚ್ಯಂತಿ ಸರ್ವೇ' ಎಂಬ ಶ್ರುತಿ ವಿರೋಧವಿರುವುದರಿಂದಲೂ, ನಾವು ಹೇಳುವ ರೀತಿಯಿಂದ, ಜ್ಞಾನ ಭಕ್ತಿ ವೈರಾಗ್ಯ (ಕರ್ಮಫಲಾಶಾ ರಾಹಿತ್ಯ) ಇವು ಮೂರೇ ಮೋಕ್ಷ ಸಾಧನಗಳೆಂದು ಸಿದ್ಧವಾಗುತ್ತದೆ ; ಪರಾಂತಕಾಲದಲ್ಲಿ ಮೋಕ್ಷವಿಲ್ಲ, ಮತ್ತೇನೆಂದರೆ ಬ್ರಹ್ಮನ ಶತವರ್ಷಗಳ ನಂತರ, ಎಂಬರ್ಥವೂ ಹೊಂದುವುದಿಲ್ಲ ; ಉಕ್ತಶ್ರುತಿಯು, ಪರಾಂತಕಾಲೇ ಎಂದು ಹೇಳುವುದರ ವಿರೋಧವು ತಪ್ಪುವುದಿಲ್ಲ ; 'ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಥ ಸಂಪತ್ಸ್ಯತೇ' ಎಂಬ ಶ್ರುತಿಯು ಹೇಳುವಂತೆ, ಪ್ರಾರಬ್ಧ ಕರ್ಮನಾಶವಾದನಂತರ ಮೋಕ್ಷವಿಲಂಬವು ಕೂಡುವುದಿಲ್ಲ ; ಪ್ರಾರಬ್ಧನಾಶವಾದರೋ 'ವಿರಜಾತರಣಾವಧಿ' ವಿರಜಾನದಿಯನ್ನು ದಾಟಿದ ಮೇಲೆ ಇಲ್ಲವೇ ಇಲ್ಲ' ಮತ್ತು 'ಪಯಾಂತ್ಯತೋನ್ಯೇಪಿ ತಮಾಪ್ಯ ತಸ್ಮಾದ್ಧರಿಂ ಗತಾ ಮುಕ್ತಿಭಾಜಃ ಪರಾಂತೇ' ಎಂಬ ಸ್ಪಷ್ಟವಾಗಿ, ಬ್ರಹ್ಮದೇವನೊಡನೆ ಪರಾಂತಕಾಲದಲ್ಲಿ ಎಲ್ಲ ಮುಕ್ತಿಯೋಗ್ಯರೂ ಶ್ರೀಹರಿ ಯನ್ನು ಹೊಂದುವರೆಂದು, ಹೇಳುವ ಆಚಾರ್ಯರ ವಾಕ್ಯ ವಿರೋಧವೂ ತಪ್ಪುವುದಿಲ್ಲ.

**ಪುಮಾನ್ ವಿರಿಂಚತಾಮೇತಿ ಮಾಮೇವೈತಿ ತತಃ ಪರಂ ।**
**ಇತ್ಯುಕ್ತ್ವಾ ಚ ಪುನರ್ಜನ್ಮ ತಸ್ಯೈವ ಸ್ಯಾತ್ಕಥಂ ವದ ॥ ೨೧೫ ॥**

ಬೇರೊಂದು ಭಾಗವತವಾಕ್ಯ ಸಮಾಖ್ಯೆಯಿಂದ, ಉಕ್ತಾರ್ಥವನ್ನೇ ಸಮರ್ಥಿಸುತ್ತಾರೆ.[1]

ಪುಮಾನ್–ಬ್ರಹ್ಮಪದಯೋಗ್ಯನಾದ ಒಬ್ಬ (ಋಜುಗಣದ) ಪುರುಷನು, (ನೂರು ಜನ್ಮಗಳಲ್ಲಿ ಸ್ವವಿಹಿತಧರ್ಮಗಳನ್ನು ಆಚರಿಸಿ), ವಿರಿಂಚತಾಂ–ಬ್ರಹ್ಮಪದವಿಯನ್ನು (ಚತುರ್ಮುಖನ ಸ್ಥಾನವನ್ನು), ಏತಿ–ಹೊಂದುತ್ತಾನೆ ; ತತಃ ಪರಂ–ಆದಾದನಂತರ, ಮಾಮೇವ ಏತಿ–ನನ್ನನ್ನೇ ಹೊಂದುತ್ತಾನೆ ; ಇತ್ಯುಕ್ತ್ವಾ–ಹೀಗೆ ಹೇಳುವುದರಿಂದ, ತಸ್ಯ ಏವ–ಆ ವಿರಿಂಚನಿಗೇ, ಪುನರ್ಜನ್ಮ–ಪುನರ್ಜನ್ಮವು, ಕಥಂ–ಹೇಗೆ ಸ್ಯಾತ್–ಆಗುತ್ತದೆ ? ವದ–ಹೇಳು.

**ಮಾಂ ಲಕ್ಷ್ಮೀಂ ಸ್ವಾತ್ಮವಾಚಿತ್ವೇ ಯಥಾಹಮಿತಿ ರುದ್ರವಾಕ್ ।**
**ನ ಶೋಭತೇ ನ ಹಿ ಸ್ವಾತ್ಮಪ್ರಾಪ್ತಿಃ ಸ್ವಸ್ಯ ಲಯೇ ಸತಿ ॥ ೨೧೬ ॥**

ಉಕ್ತಶ್ಲೋಕದಲ್ಲಿರುವ ಮಾಂ ಎಂಬುದರ ಅರ್ಥವನ್ನು ಹೇಳುತ್ತಾರೆ :—

---

ಮೋಕ್ಷಸಾಧನವೆಂಬುದು ಸರ್ವಸಮ್ಮತವಾದ್ದರಿಂದಲೂ, ಇದರೊಡನೆ ಪಠಿಸಿರುವ, ಅಭಿಮಾನ ಶಬ್ದವು ಅನ್ಯಾರ್ಥವನ್ನು (ಪುನರ್ಜನ್ಮಾದಿಗಳಿಗೆ ಕಾರಣವಾಗುವ ಅಭಿಮಾನವನ್ನು) ಹೇಳುತ್ತದೆಂದು ಭಾವಿಸುವುದು ಪ್ರಶಸ್ತವಾಗುವುದಿಲ್ಲ (೨೧೪). ಋಜುಗಣದ ಜೀವನೊಬ್ಬನು, ನೂರುವರ್ಷಗಳಲ್ಲಿ ಸ್ವವಿಹಿತ ಧರ್ಮಗಳನ್ನಾಚರಿಸಿ, ಬ್ರಹ್ಮಪದವಿಯನ್ನು ಹೊಂದಿ ನಂತರ ನನ್ನನ್ನೇ ಹೊಂದುತ್ತಾನೆಂದು ಭಾಗವತವು ಸ್ಪಷ್ಟವಾಗಿ ಹೇಳುತ್ತಿರಲು, ಬ್ರಹ್ಮದೇಹದಿಂದ ಮುಂದೆ ಪುನರ್ಜನ್ಮವು, ಬ್ರಹ್ಮನಿಗೆ ಹೇಗೆ ಸಂಭವಿಸಬಹುದು? (ಶಕ್ಯವಿಲ್ಲ) (೨೧೫) ಅಥವಾ 'ಮಾಂ' ಎಂಬುದಕ್ಕೆ ಲಕ್ಷ್ಮೀದೇವಿಯನ್ನು ಎಂಬರ್ಥವನ್ನು ತಿಳಿಯಬಹುದು ; ಸರ್ವಜ್ಞಾನಿಗಳು

---

[1] ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ ವಿರಿಂಚತಾಮೇತಿ ತತಃ ಪರಂ ಹಿ ಮಾಂ। ಅವ್ಯಾಕೃತಂ ಭಾಗವತೋಽಥ ವೈಷ್ಣವಂ ಪದಂ ಯಥಾಹಂ ವಿಬುಧಾಃ ಕಲಾಪ್ತಯೇ '॥ ಎಂಬುದು ಭಾಗವತದ ಸಮಾಖ್ಯಾ ಶ್ಲೋಕವು; ಇದೇ ಅರ್ಥವನ್ನು ಅಲ್ಪ ಶಬ್ದಭೇದದಿಂದ ನಿರೂಪಿಸುವು(೪ ಸ್ಕಂ–೨೪ ಅ–೨೯ ಶ್ಲೋ)ದನ್ನು ನೋಡಬಹುದು.

ಮಾಂ—'ಮಾಂ' ಎಂದರೆ, ಲಕ್ಷ್ಮೀಂ—ಲಕ್ಷ್ಮಿಯನ್ನು, (ಎಂದು ಅರ್ಥ); ಸ್ವಾತ್ಮವಾಚಿತ್ವೇ—'ಮಾಂ' ಎಂಬುದು, 'ನನ್ನನ್ನು' ಎಂದು ತನ್ನನ್ನೇ ಹೇಳಿಕೊಳ್ಳುವುದಾದರೆ, ಯಥಾಹಂ ಇತಿ—ನನ್ನಂತೆ, ಎಂಬ ರುದ್ರವಾಕ್—ರುದ್ರನ ವಾಕ್ಯವು, ನ ಶೋಭತೇ—ಪ್ರಶಸ್ತವಾಗಿ ಹೊಂದುವುದಿಲ್ಲ; ಹಿ—ಏಕೆಂದರೆ, ಸ್ವಸ್ಯ ಲಯೇ ಸತಿ—ತನ್ನ ಲಯವು ಉಂಟಾಗುತ್ತಿರಲು, ಸ್ವಾತ್ಮಪ್ರಾಪ್ತಿಃ—ತನ್ನ ಪ್ರಾಪ್ತಿಯು, ನ—ಇಲ್ಲವಷ್ಟೆ.[1]

**ಪದಂ ವೈಷ್ಣವಮೇತೀತಿ ವೈಕುಂಠಗತಿಕೀರ್ತನಾತ್ ।**
**ಪುನರಾವೃತ್ತಿವಾರ್ತಾಸ್ಯ ನಿವೃತ್ತೌ ವಾ ಭವತ್ತ್ವತ ॥ ೨೧೭ ॥**

ಲಕ್ಷ್ಮೀ ಪ್ರಾಪ್ತಿಯನಂತರ ಭಗವದ್ಭಕ್ತಶಿರೋಮಣಿಯಾದ ಬ್ರಹ್ಮದೇವನು, ವಿಕಾರರಹಿತವಾದ, ವಿಷ್ಣುಲೋಕವನ್ನು (ವೈಕುಂಠವನ್ನು) ಹೊಂದುವನೆಂಬ ಪ್ರಸಕ್ತ ಭಾಗವತಶ್ಲೋಕದ ತಾತ್ಪರ್ಯವನ್ನು ನಿರೂಪಿಸುತ್ತಾರೆ:—

---

ಲಕ್ಷ್ಮೀದ್ವಾರಾ ಭಗವಂತನನ್ನು ಹೊಂದುವರೆಂದು ಶ್ರುತಿ ಪ್ರಸಿದ್ಧವಾಗಿದೆ; 'ಮಾಂ' ಎಂಬುದಕ್ಕೆ ನನ್ನನ್ನು ಎಂಬರ್ಥವು ಯುಕ್ತವಾಗುವುದಿಲ್ಲ; ಉದಾಹೃತ ಭಾಗವತವಾಕ್ಯವು ರುದ್ರದೇವನ ವಾಕ್ಯವು; 'ಯಥಾಹಂ' ಎಂಬುದರಿಂದ, ರುದ್ರನು ತನ್ನನ್ನು ತಾನೇ ಹೊಂದುವುದೆಂಬುದು, ಆತ್ಮಾಶ್ರಯವೆಂಬ ಅನುಪಪತ್ತಿಗೆ ಗುರಿಯಾಗುತ್ತದೆ (೨೧೬). ಬ್ರಹ್ಮನು ಹೊಂದುವ ಸ್ಥಾನವನ್ನು 'ಪರಂ ಪದಂ ವೈಷ್ಣವ-

---

1 ಉದಾಹೃತ ಭಾಗವತ ಶ್ಲೋಕದಲ್ಲಿ (೨೧೫ನೇ ಶ್ಲೋಕದ ಅಡಿ ಟಿಪ್ಪಣಿಯನ್ನು ನೋಡಿರಿ) 'ಯಥಾಹಂ' ಎಂದು (ಈ ಶ್ಲೋಕವು ರುದ್ರನ ವಚನವಾದ್ದರಿಂದ) ರುದ್ರನಿರ್ಯಾಣದಂತೆ ಬ್ರಹ್ಮನಿರ್ಯಾಣವೆಂದು ಹೇಳಲಾಗಿದೆ; ಅದರಿಂದ ಹೇಗೆ ನಾನು, ಲಯದಲ್ಲಿ ನನ್ನಲ್ಲಿಯೇ ಪ್ರವೇಶಿಸುವಂತೆ, ಬ್ರಹ್ಮನೂ ನನ್ನಲ್ಲಿ ಪ್ರವೇಶಿಸುವನೆಂದು ಹೇಳಿದಂತಾಗುತ್ತದೆ: ಆತ್ಮಾಶ್ರಯದಿಂದ (ಇದು) ಹೇಳುವುದು ಪ್ರಶಸ್ತವಾಗುವುದಿಲ್ಲ; ಆದ್ದರಿಂದ 'ಮಾಂ' ಎಂಬುದಕ್ಕೆ ಮಹಾಲಕ್ಷ್ಮಿಯನ್ನು ಪ್ರವೇಶಿಸುತ್ತೇನೆ—ಅದರಂತೆ ಬ್ರಹ್ಮದೇವನೂ ಮಹಾಲಕ್ಷ್ಮಿಯನ್ನು ಪ್ರವೇಶಿಸುವನೆಂಬ ಅರ್ಥವು ಸಿದ್ಧವಾಗುತ್ತದೆ; ಸರ್ವದೇವತೆಗಳಿಗೂ ಲಕ್ಷ್ಮೀದ್ವಾರಾ ವಿಷ್ಣುಪ್ರಾಪ್ತಿ ಎಂಬುದು ಶಾಸ್ತ್ರಸಿದ್ಧವಾದ ಪ್ರಮೇಯವಾಗಿದೆ; ಸತ್ಯಲೋಕದಲ್ಲಿರುವ ಬ್ರಹ್ಮನು ಮೇಲಿನ ವೈಕುಂಠದಲ್ಲಿರುವ ವಿಷ್ಣುಪ್ರಾಪ್ತಿಗಾಗಿ, ಕೆಳಗಿರುವ ಕೈಲಾಸದಲ್ಲಿರುವ ಶಿವಪ್ರವೇಶವು ಲೋಕವಿರುದ್ಧವೂ ಆಗುತ್ತದೆ; 'ಸೋಥ ವಿರಿಂಚಿವೀರ್ಯಃ' ಎಂದು ಭಾಗವತದಲ್ಲಿ ಶಿವನು ಬ್ರಹ್ಮಪುತ್ರನೆಂದು ಹೇಳಲಾಗಿರುವುದರಿಂದಲೂ ಯುಕ್ತವಾಗುವುದಿಲ್ಲ.

ಪದಂ ವೈಷ್ಣವಂ–'ಪರಂ ಪದಂ ವೈಷ್ಣವಮಾಮನಂತಿ' ಎಂಬುದಾಗಿ ವಿಷ್ಣುಸಂಬಂಧವುಳ್ಳ ಸ್ಥಾನವನ್ನು, ಏತಿ–ಹೊಂದುತ್ತಾನೆ, ಇತಿ–ಎಂಬುದರಿಂದ, ವೈಕುಂಠಗತಿಕೀರ್ತನಾತ್–(ಪುನಃ ಹಿಂದಿನಂತೆ ಹುಟ್ಟುವನೆಂದು ಹೇಳದೇ) ವೈಕುಂಠವನ್ನು ಹೊಂದುವನೆಂದು ಹೇಳುವುದರಿಂದ, ಅಸ್ಯ–ಬ್ರಹ್ಮದೇವನಿಗೆ, ನಿವೃತ್ತೌ–ಅಲ್ಲಿಂದ ತಿರುಗಿಬರುವನೆಂಬ ವಿಷಯದಲ್ಲಿ, ತವ–ನಿನ್ನಂತೆ, ಪುನರಾವೃತ್ತಿವಾರ್ತಾ ವಾ–ಹಿಂದಿರುಗುವನೆಂಬ ಕಥೆಯೂ, ಅಭವತ್–ಆದಂತೆ ಆಯಿತು (ಕಥಾ ಮಾತ್ರವಲ್ಲದೇ ಸತ್ಯ ವಿಷಯವಲ್ಲ).

**ಬ್ರಹ್ಮಣಾ ಸಹ ಮುಕ್ತಃ ಸನ್ ಭೋಗಾನ್ ಭುಙ್ಕ್ತೇ ವಿಪಶ್ಚಿತಾ ।**
**ಶ್ರುತಿಶ್ಚೈಷಾ ಬ್ರಹ್ಮಣೋಂತೇ ಮುಕ್ತಿಮಾಹ ನ ಸಂಸೃತಿಂ ॥ ೨೧೮ ॥**

'ಸೋಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ' ಎಂಬ ಶ್ರುತಿಯಿಂದ, ಮುಕ್ತರಿಗೆ ಬ್ರಹ್ಮನಿಂದ ಸಹಿತವಾದ ಮೌಕ್ತಿಕಭೋಗವು ಸಿದ್ಧವಾಗುವುದರಿಂದ, ಮುಕ್ತರಿಗೆ ಪುನರ್ಜನ್ಮವಿಲ್ಲೆಂದು ಹೇಳುತ್ತಾರೆ :—

ಮುಕ್ತಃ ಸನ್–(ಜೀವನು) ಮುಕ್ತನಾಗಿ (ಪರಮಮೋಕ್ಷವನ್ನು ಹೊಂದಿ), ಬ್ರಹ್ಮಣಾ ವಿಪಶ್ಚಿತಾ ಸಹ–ಸರ್ವಜ್ಞನಾದ ಬ್ರಹ್ಮದೇವ (ಚತುರ್ಮುಖ) ನಿಂದ ಸಹಿತನಾಗಿ, ಭೋಗಾನ್–ಮುಕ್ತ ಭೋಗಗಳನ್ನು, ಭುಙ್ಕ್ತೇ–(ಯಥೇಚ್ಛವಾಗಿ) ಭೋಗಿಸುತ್ತಾನೆ ; ಏಷಾ ಶ್ರುತಿಶ್ಚ–ಈ ಪ್ರಸಿದ್ಧ ಶ್ರುತಿಯೇ, ಬ್ರಹ್ಮಣಃ–

---

ಮಾಮನಂತಿ' ಎಂಬುದರಿಂದ ಭಾಗವತವು ವೈಕುಂಠ ಪ್ರಾಪ್ತಿಯನ್ನೇ ಹೇಳುವುದರಿಂದ, ಬ್ರಹ್ಮದೇವನಿಗೆ ಪುನರ್ಜನ್ಮವುಂಟೆಂಬುದು ಕೇವಲ ವಾರ್ತಾ ಮಾತ್ರವಾಯಿತು—ಆ ವಾರ್ತೆಯ ನಿವೃತ್ತಿಯೇ ಸಾಧಿಸುತ್ತದೆ (೨೧೭). 'ಸೋಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ' ಎಂಬ ಶ್ರುತಿಯು, ಮುಕ್ತರೆಲ್ಲರೂ, ಜ್ಞಾನಿಶ್ರೇಷ್ಠನಾದ ಬ್ರಹ್ಮನೊಡನೆ, ವೈಕುಂಠಾದಿ ಲೋಕದಲ್ಲಿ ಇಚ್ಛಿತ ಸರ್ವಭೋಗಗಳನ್ನು ಅನುಭವಿಸುವರೆಂದು ಹೇಳುತ್ತದೆ ; ಬ್ರಹ್ಮನ ವೈಕುಂಠ ಪ್ರವೇಶಕಾಲವು ಪ್ರಾಪ್ತವಾಗಲು (ಆತನ ಸಮೀಪದಲ್ಲಿಯೇ ಅನ್ಯಮುಕ್ತರೂ ಇರುತ್ತ) ಸರ್ವಕಾಮಗಳನ್ನು ಅನುಭವಿಸುವರೆಂದು ಹೇಳುತ್ತಿರಲು, ಬ್ರಹ್ಮನಿಗೆ ಪುನಃ ಸಂಸಾರ ಪ್ರಾಪ್ತಿಯುಂಟೆ ? (ಸರ್ವಥಾ ಇಲ್ಲ) (೨೧೮).

ಬ್ರಹ್ಮದೇವನ, ಅಂತೇ–ಸಮೀಪದಲ್ಲಿ, ಮುಕ್ತಿಂ–ಮುಕ್ತಿಯನ್ನು, ಆಹ–ಹೇಳುತ್ತದೆ, ಸಂಸೃತಿಂ ನ–ಸಂಸಾರವನ್ನಲ್ಲ.

**ದತ್ತಂ ಕಿಲ ಬ್ರಹ್ಮಪದಂ ರಾಮೇಣಾಸ್ಮದ್ಧನೂಮತೇ ।**
**ತಚ್ಚ ನ ಸ್ಯಾದ್ಯದಿ ಬ್ರಹ್ಮಾ ಸ ಏವ ಸ್ಯಾತ್ಪುನಃ ಪುನಃ ॥ ೨೧೯ ॥**

ಇದೇ ಬ್ರಹ್ಮದೇವಗೆ ಪುನರ್ಜನ್ಮವಿಲ್ಲೆಂಬಲ್ಲಿ ಬೇರೆ ಯುಕ್ತಿಯನ್ನು ಹೇಳುತ್ತಾರೆ :—

ರಾಮೇಣ–ಶ್ರೀರಾಮಚಂದ್ರನಿಂದ, ಅಸ್ಮದ್ಧನೂಮತೇ–ನಮ್ಮ ಆಂಜನೇಯನಿಗೆ, ಬ್ರಹ್ಮಪದಂ–ಬ್ರಹ್ಮಪದವಿಯು, ದತ್ತಂ ಕಿಲ–ಕೊಡಲ್ಪಟ್ಟಿತಷ್ಟೆ; ತತ್ ಚ–ಆ ಭವಿಷ್ಯದ್ಬ್ರಹ್ಮಪದವೀದಾನವು, ನ ಸ್ಯಾತ್ ಯದಿ–ದೊರೆಯುವುದಿಲ್ಲವಾದರೆ, ಸ ಏವ–ಈಗಿರುವ ಆ ಬ್ರಹ್ಮನೇ, ಪುನಃ ಪುನಃ–ಮತ್ತೆ ಮತ್ತೆ, ಬ್ರಹ್ಮಾ ಸ್ಯಾತ್–ಬ್ರಹ್ಮಪದವಿಯನ್ನು ಹೊಂದಿದರೆ (ಬ್ರಹ್ಮನಾದರೆ) (ಶ್ರೀರಾಮನ ವರದಾನವೇನಾಯಿತು ?) (ನ ಸ್ಯಾತ್–ಸತ್ಯವಾಗುವುದಿಲ್ಲವಷ್ಟೆ).

**ನ ಚೇಚ್ಛ್ರುತಿಃ ಕಥಂ ಪ್ರಾಹ ಪವಮಾನಃ ಪ್ರಜಾಪತಿಃ ।**
**ಇತ್ಯಾದ್ಯಾ ಪವಮಾನಸ್ಯ ಪ್ರಜಾಪತಿಪದಂ ವದ ॥ ೨೨೦ ॥**

ನ ಚೇತ್–ವಾಯುದೇವನು ಬ್ರಹ್ಮಪದಕ್ಕೆ ಬರದಿದ್ದರೆ, ಪವಮಾನಃ ಪ್ರಜಾಪತಿಃ – ವಾಯುವೇ ಬ್ರಹ್ಮನೆಂದು, ಶ್ರುತಿಃ–ಶ್ರುತಿಯು, ಕಥಂ–ಹೇಗೆ, ಪ್ರಾಹ–ಹೇಳಿತು ? ಪವಮಾನಸ್ಯ–ವಾಯದೇವನಿಗೆ, ಪ್ರಜಾಪತಿಃ ಇತಿ ಪದಂ–ಬ್ರಹ್ಮನೆಂಬ ಪದವು (ಕಥಂ – ಹೇಗೆ) ಇತ್ಯಾದ್ಯಾ– ('ಮಾರುತಸ್ಯ ಭೇದಸ' ಇತ್ಯಾದಿ) ಈ ಮುಂತಾದ ಶ್ರುತಿ ಪದಗಳು (ಹೇಗೆ ಯುಕ್ತವಾಗುತ್ತವೆ ?)

---

ಶ್ರೀರಾಮನು ನಮ್ಮ ಆಂಜನೇಯನಿಗೆ ಬ್ರಹ್ಮಪದವೀದಾನವಮಾಡಿರುವನಷ್ಟೆ ; ಬ್ರಹ್ಮದೇವನು, ಪುನಃ ಪುನಃ ಹುಟ್ಟುತ್ತಲೇ ಬ್ರಹ್ಮನಾಗಿಯೇ ಇರುತ್ತಿದ್ದರೆ, ಆ ಪದವೀದಾನವು ಸತ್ಯವಾಗುವುದೆಂತು ? (೨೧೯). ವಾಯುದೇವನು ಬ್ರಹ್ಮಪದಕ್ಕೆ ಬರದಿದ್ದರೆ, ಪವಮಾನನನ್ನು (ವಾಯುದೇವನನ್ನು) ಪ್ರಜಾಪತಿ (ಬ್ರಹ್ಮ)ನೆಂದು ಶ್ರುತಿಯು, 'ಪವಮಾನಃ ಪ್ರಜಾಪತಿಃ' ಎಂದು ಪವಮಾನನಿಗೆ, ಪ್ರಜಾಪತಿಪದವು

**ತಸ್ಮಾಲ್ಲಯೇ ಹರೇಃ ಕುಕ್ಷಿಂ ಪ್ರವಿಶ್ಯಾಂತೇ ಲಯಸ್ಯ ಸಃ ।**
**ವೈಕುಂಠಾದಿಪುರಸ್ಥಃ ಸ್ಯಾದಿತ್ಯೇವಾರ್ಥಃ ಪುಮರ್ಥಕೃತ್ ॥ ೨೨೧ ॥**

ತಸ್ಮಾತ್ – ಆದ್ದರಿಂದ, ಲಯೇ – ಪ್ರಲಯದಲ್ಲಿ, ಹರೇಃ–ಶ್ರೀಹರಿಯ, ಕುಕ್ಷಿಂ–ಉದರವನ್ನು, ಪ್ರವಿಶ್ಯ – ಪ್ರವೇಶಿಸಿ, ಲಯಸ್ಯ ಅಂತೇ – ಲಯಕಾಲಾವಧಿಯು ಮುಗಿಯಲು, ಸಃ – ಬ್ರಹ್ಮದೇವನು, ವೈಕುಂಠಾದಿ ಪುರಸ್ಥಃ – ವೈಕುಂಠಾದಿ (ನಾರಾಯಣಪುರ, ಅನಂತಾಸನ) ಪುರಗಳಲ್ಲಿರುವವನು, (ಅಲ್ಲಿಗೆ ಹೋಗಿ ಸೇರುವವನು.) ಸ್ಯಾತ್–ಆಗುತ್ತಾನೆ, ಇತ್ಯೇವ ಅರ್ಥಃ–ಹೀಗೆಂಬ ಅರ್ಥವೇ, ಪುಮರ್ಥಕೃತ್–ಬ್ರಹ್ಮನ ಸಾಧನೆಯು ಫಲವುಳ್ಳದ್ದಾಗಲು ಕಾರಣವಾಗುತ್ತದೆ.

**ಪರಾಂತಕಾಲೇ ಸರ್ವೇಽಪಿ ಮುಚ್ಯಂತೇ ಯೋಗಿನಃ ಕಿಲ ।**
**ಬ್ರಹ್ಮೈವಂ ಸತಿ ಯೋಗೀಂದ್ರೋ ಮುಕ್ತಾಗ್ರೇಸರತಾಮಿಯಾತ್ ॥ ೨೨೨ ॥**

ಬ್ರಹ್ಮನೂ ಪ್ರಲಯಾನಂತರ ಮುಕ್ತನಾಗುವನೆಂಬಲ್ಲಿ, ಕೈಮುತ್ಯಸಾಧಕ ಶ್ರುತ್ಯುಕ್ತ ಅನ್ಯಯುಕ್ತಿಯನ್ನು ಹೇಳುತ್ತಾರೆ :—

ಪರಾಂತಕಾಲೇ – ಬ್ರಹ್ಮನ ಪರಾಂತಕಾಲದಲ್ಲಿ, ಸರ್ವೇಽಪಿ ಯೋಗಿನಃ– ಸಮಸ್ತ ಜ್ಞಾನಿಗಳೂ, ಮುಚ್ಯಂತೇ ಕಿಲ – ಮುಕ್ತರಾಗುವರೆಂಬುದು ಸಿದ್ಧ; ('ಪರಾಂತಕಾಲೇ ಪರಿಮುಚ್ಯಂತಿ ಸರ್ವೇ' ಎಂದು ಶ್ರುತಿಯು ಸ್ಪಷ್ಟವಾಗಿ

---

ಹೇಗೆ ಕೂಡುತ್ತದೆ? ನೀನೇ ಹೇಳು (೨೨೦). ಪ್ರಲಯದಲ್ಲಿ ಶ್ರೀಹರಿಯ ಉದರವನ್ನು ಪ್ರವೇಶಿಸಿ, ಲಯಕಾಲವು ಮುಗಿಯಲು ವೈಕುಂಠಾದಿ ಶ್ರೀಹರಿ ಪುರವನ್ನು ಸೇರಿ ಅಲ್ಲಿಯೇ ಸ್ಥಿತನಾಗುವನೆಂಬುದೇ, ಬ್ರಹ್ಮದೇವನ ಸಾಧನೆಯು ಫಲವುಳ್ಳದೆಂದಾಗುತ್ತದೆ ; (೨೨೧). ಕೈಮುತ್ಯ ನ್ಯಾಯವೂ ಸಹ ಪ್ರಲಯ ಕಾಲಾಂತ್ಯದಲ್ಲಿ ಬ್ರಹ್ಮನು ಮುಕ್ತನಾಗುವನೆಂಬುದು ಸಮರ್ಥಿಸುತ್ತದೆ ; 'ಪರಾಂತ ಕಾಲೇ ಪರಿಮುಚ್ಯಂತಿ ಸರ್ವೇ' ಎಂಬ ಶ್ರುತಿಯು ಸಮಸ್ತ ಜ್ಞಾನಿಗಳು ಪರಾಂತ ಕಾಲದಲ್ಲಿ ಮುಕ್ತರಾಗುವರೆಂದು ಹೇಳುತ್ತದೆ; ಯೋಗೀಂದ್ರ (ಜ್ಞಾನಿಶ್ರೇಷ್ಠ)ರಾದ ಬ್ರಹ್ಮದೇವನೇ ಸಕಲ ಮುಕ್ತರ ನಾಯಕನೆಂದೂ ಸಿದ್ಧವಾಗುತ್ತದೆ (೨೨೨).

ಹೇಳುತ್ತದೆ); ಏವಂ ಸತಿ–ಹೀಗಿರಲು (ಅಥವಾ ಅಪರೋಕ್ಷಿಗಳೆಲ್ಲರೂ ಮುಕ್ತರಾಗುತ್ತಿರಲು) ಯೋಗೀಂದ್ರಃ – ಜ್ಞಾನಿಶ್ರೇಷ್ಠನಾದ, ಬ್ರಹ್ಮಾ– ಬ್ರಹ್ಮನು, ಮುಕ್ತಾಗ್ರೇಸರತಾಂ–ಸರ್ವಮುಕ್ತರ ನಾಯಕನೆಂಬುದನ್ನು, ಇಯಾತ್–(ಸಹಜವಾಗಿ) ಹೊಂದುತ್ತಾನೆ (ಆತನು ಮುಕ್ತನಾದ ಮೇಲೆ ಉಳಿದ ಜ್ಞಾನಿಗಳೆಲ್ಲರಿಗೆ ಮುಕ್ತಿಯೆಂದು ಸಿದ್ಧ).

**ಅಸುರಾನ್ ದಮಯನ್ನುಗ್ರಾನ್ ಸುರಾನ್ ಶಾಂತಾಂಸ್ತಥೋನ್ನಯನ್**
**ಪರಾವೃಣಕ್ತಿ ಪೂರ್ವೇಷಾಂ ಸಖ್ಯಾನಿ ತ್ವರಯಾ ಪರೈಃ ॥ ೨೨೩ ॥**

**ಏತೀತಿ ವೇದೇ ತಮಸಿ ದೈತ್ಯಾನಾಂ ಶ್ರೂಯತೇ ವ್ಯಥಾ ।**
**ಯದೃಚ್ಛಾಕೃತತನ್ಮೋಕ್ಷಪ್ರಯತ್ನಚ್ಛೇದ ಏವ ಚ ॥ ೨೨೪ ॥**

**ದೇವಾನಾಮೂರ್ಧ್ವಲೋಕಶ್ಚ ವೀಪ್ಸಯಾ ನಿಯಮೋಽಪಿ ಚ ।**
**ಅತಃ ಸರ್ವವಿಮೋಕ್ಷಶ್ಚ ಸರ್ವೈಕ್ಯಂ ಚ ಕಥಂ ವದ ॥ ೨೨೫ ॥**

ಬೇರೆ ಶ್ರುತಿಯಿಂದ ಸಹ ಸರ್ವರಿಗೆ ಮೋಕ್ಷವಿಲ್ಲೆಂದೂ, ಜೀವಬ್ರಹ್ಮೈಕ್ಯದ ಅಭಾವವನ್ನು ಸಾಧಿಸುತ್ತಾರೆ :—

('ಶೃಣ್ವೇ ವೀರ ಉಗ್ರಮುಗ್ರಂ',[1] ಇತ್ಯಾದಿ ಶ್ರುತ್ಯರ್ಥಗಳಿಂದ ಪ್ರಮೇಯಗಳನ್ನು ನಿರೂಪಿಸುತ್ತಾರೆ); ಉಗ್ರಾನ್ – ಕ್ರೂರಸ್ವಭಾವದ, ಅಸುರಾನ್–

---

'ಶೃಣ್ವೇ ವೀರ ಉಗ್ರಮುಗ್ರಂ....' ಎಂಬ ಶ್ರುತಿವಾಕ್ಯವೂ, ಪರಾ ಪೂರ್ವೇಷಾಂ....' ಎಂಬ ಶ್ರುತಿವಾಕ್ಯವೂ, ಉಗ್ರ ಸ್ವಭಾವದ ಅಸುರರನ್ನು ತಮಸ್ಸಿನಲ್ಲಿ ಹಾಕಿ ದುಃಖಪಡಿಸುವನೆಂದೂ, ಶಾಂತ ಸ್ವಭಾವದ ದೇವಾದಿ ಸಾತ್ವಿಕರನ್ನು ಸಂಸಾರದಿಂದ

---

1 'ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್ನನ್ಯಮನ್ಯಮತಿನೇನೀಯಮಾನಃ । ಏಧಮಾನದ್ವಿಡುಭಯಸ್ಯ ರಾಜಾ ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್' ॥ 'ಪರಾ ಪೂರ್ವೇಷಾಂ ಸಖ್ಯಾ ವೃಣಕ್ತಿ ವಿತರ್ತುರಾಣೋ ಅಪರೇಭಿರೇತಿ । ಅನಾನುಭೂತೀರವಧೂನ್ವಾನಃ ಪೂರ್ವೀರಿಂದ್ರಃ ಶರದಸ್ತರ್ತರೀತಿ ॥', ಎಂಬ ಎರಡು ಶ್ರುತಿವಾಕ್ಯಗಳ ಅರ್ಥವನ್ನು ಸಂಗ್ರಹಿಸಿ ಇಲ್ಲಿ ನಿರೂಪಿಸಿರುವರು; ಈ ಶ್ರುತಿವಾಕ್ಯಗಳ ಅರ್ಥವೇನೆಂದರೆ:– ವೀರಃ—ಪರಾಕ್ರಮಿಯಾದ ಶ್ರೀ ನಾರಾಯಣನು (ಯತ್ನವನ್ನು ಕೊನೆಮುಟ್ಟಿಸುವ ಸಮರ್ಥನು), ಇಂದ್ರಃ—(ಆತನೇ) ಪರಮೈಶ್ವರ್ಯ ಸಂಪನ್ನನಾದ ನಾರಾಯಣನೇ,

ದೈತ್ಯ ಜನ್ಯರನ್ನು (ತಮೋಯೋಗ್ಯ ಚೇತನರನ್ನು), ದಮಯನ್-(ತಮಸ್ಸಿನಲ್ಲಿ ಹಾಕಿ) ನಾನಾ ಶಿಕ್ಷೆಗಳಿಂದ ದುಃಖದಲ್ಲಿಟ್ಟು, ಶಾಂತಾನ್-ಶಾಂತಸ್ವಭಾವದ ಸುರಾನ್ - ದೇವತೆಗಳನ್ನು, ತಥಾ - ಹಾಗೆಯೇ (ಸಂಸಾರದಿಂದ ಬಿಡುಗಡೆ ಹೊಂದಿಸಿಯೇ), ಉನ್ನಯನ್-ಮೇಲೆತ್ತುವನಾಗಿ (ಉತ್ತಮಗತಿಯನ್ನು ಹೊಂದಿಸುವನಾಗಿ, ಪೂರ್ವೇಷಾಂ-ಪೂರ್ವೋಕ್ತ ಅಸುರರಿಗೆ, ಸಖ್ಯಾನಿ-ಸ್ವಪ್ರೀತಿಸಾಧನಗಳಾದ ಯಜನ, ಅಧ್ಯಯನಾದಿ ಶೋಭಕಕರ್ಮಗಳನ್ನು) ಪರಾವೃಣಕ್ತಿ-(ವಿಷ್ಣುವೈಷ್ಣವದ್ರೋಹಾದಿಗಳನ್ನು ಮಾಡಿಸಿ) ರಹಿತರನ್ನಾಗಿ ಮಾಡುತ್ತಾನೆ (ಕತ್ತರಿಸುತ್ತಾನೆ); (ಅದಕ್ಕಾಗಿ) ತ್ವರಯಾ-ಶೀಘ್ರವಾಗಿ, ಪರೈಃ-ಅನ್ಯರಿಂದ, (ಪರಾವೃಣಕ್ತಿ-ದ್ರೋಹ ಕಾರ್ಯಗಳನ್ನು ಮಾಡಿಸಿ, ಕತ್ತರಿಸುತ್ತಾನೆ; ಇದರಿಂದ

---

ಬಿಡಿಸಿ, ವೈಕುಂಠಾದಿ ಊರ್ಧ್ವ ಲೋಕಗಳಲ್ಲಿಟ್ಟು ಸುಖಪಡಿಸುವನೆಂದೂ, ಹೀಗೆ ಸ್ವಯೋಗ್ಯಗತಿಗಳನ್ನು ಹೊಂದಿಸುವುದರಲ್ಲಿ ನಿಯಮಬದ್ಧವಾದ ಕೃತಿಯುಳ್ಳವನೆಂದೂ, ಅಸುರರಿಗೆ ಸ್ವಪ್ರೀತಿ ಸಾಧಕವಾದ ಯಜನ, ಅಧ್ಯಯನಾದಿ ಕರ್ಮಗಳನ್ನು ವಿಷ್ಣುವೈಷ್ಣವ ದ್ರೋಹಾದಿಗಳಿಂದ, ಸಂಭವಿಸದಂತೆ, ಭಂಗಗೊಳಿಸುವನೆಂದೂ, (ಇದರಿಂದ, ಮಹಾ ಪ್ರಯತ್ನದಿಂದ ಸಹ ಅಸುರರಿಗೆ ಊರ್ಧ್ವಗತಿ

---

ಉಗ್ರಂ ಉಗ್ರಂ—ವಿಶ್ವದ್ರೋಹಿಯಾದ ಪ್ರತಿಯೊಬ್ಬ (ಕ್ರೂರಿಯಾದ) ದೈತ್ಯಜನವನ್ನು, ದಮಾಯನ್—ಅಂಧತಮಸ್ಸಿನಲ್ಲಿ ಹಾಕಿ ಪೀಡಿಸಿ (ಅಲ್ಲಿಂದ ಪುನರಾವೃತ್ತಿ ಇಲ್ಲದ್ದರಿಂದ ದಮಯನ್ ಎಂಬುದಕ್ಕೆ ಬದಲಾಗಿ, ದಮಾಯನ್ ಎಂದು ದೀರ್ಘವಿದೆ), ಅನ್ಯಂ ಅನ್ಯಂ—ಪ್ರತಿಯೊಬ್ಬ ಅನ್ಯನನ್ನು (ಶಾಂತ ಸ್ವಭಾವದ) ಮುಕ್ತಿಯೋಗ್ಯ ಜೀವನನ್ನು, ಅತಿ ನೇನೀಯಮಾನಃ—ಸಂಸಾರದಿಂದ ದಾಟಿಸಿ (ಅಪರೋಕ್ಷಜ್ಞಾನ ದಶಾದಿಂದ ಸಹ ದಾಟಿಸಿ), (ಮುಕ್ತಿಯೋಗ್ಯ ಮತ್ತು ತಮೋ ಯೋಗ್ಯರ ಭೇದವನ್ನು 'ಅನ್ಯಂ' ಎಂಬ ಶಬ್ದವು ಸಮರ್ಥಿಸುತ್ತದೆ), ಏಧಮಾನದ್ವಿಟ್—ಸ್ವಸ್ವಯೋಗ್ಯತೆಯನ್ನು ಅತಿಕ್ರಮಿಸಿ, ಪುಣ್ಯವನ್ನು ಮಾಡಿ ವರ್ಧಿಸುವನೋ, ಅವನನ್ನು ಸಹಿಸುವುದಿಲ್ಲ; ಉಭಯಸ್ಯ ರಾಜಾ—ತಮಸ್ಸಿನಲ್ಲಿಯೂ, ಮೋಕ್ಷದಲ್ಲಿಯೂ ಸೇರುವ ಜೀವಸಮುದಾಯಗಳೆರಡರ, ಸ್ವಾಮಿಯು, (ಎಂದೂ ಯಾರಿಂದಲೂ ಐಕ್ಯವುಳ್ಳವನಲ್ಲ), ಶೃಣ್ವೇ-(ಎಂಬುದಾಗಿ ಈವಿಧ ಮಹಿಮೆಯು) ಪುರಾಣಾದಿಗಳಲ್ಲಿ ತಿಳಿಯಬರುತ್ತದೆ (ಶ್ರುತಿಯು, ಅನ್ಯಶ್ರುತಿ ವಾಕ್ಯಗಳನ್ನು, ಸ್ಮೃತಿ ವಾಕ್ಯಗಳನ್ನು ಪ್ರಮಾಣತ್ವೇನ ಇರುತ್ತವೆಂದು ಹೇಳಲು ಹೀಗೆ ಹೇಳುತ್ತದೆ); ಮನುಷ್ಯಾನ್ ವಿಶಃ—ಮಧ್ಯಮಮಾನುಷ ಪ್ರಜೆಗಳನ್ನು (ವಿಶ ಎಂಬುದರಿಂದ ಕದಾಚಿತ್ ನೀಚ ಮಾರ್ಗದಲ್ಲಿಯೂ, ಕದಾಚಿತ್ ಉಚ್ಚಮಾರ್ಗದಲ್ಲಿಯೂ ನಡೆಸುವನೆಂದು ಸೂಚಿಸಲು 'ವಿಶ'

ಮಹಾ ಪ್ರಯತ್ನದಿಂದಲೂ ಅಧಮರಿಗೆ ಊರ್ಧ್ವಗತಿಯಿಲ್ಲವೆಂದು ಸೂಚಿತವಾಗುತ್ತದೆ); ಏತಿ ಇತಿ ವೇದೇ–(' ಅಪರೇಭಿರೇತಿ ', ಎಂಬಲ್ಲಿರುವ) ಏತಿ ಎಂಬ ಶ್ರುತಿಭಾಗದಲ್ಲಿ, ದೈತ್ಯಾನಾಂ – ಅಸುರರಿಗೆ, ತಮಸಿ – ತಮಸ್ಸಿನಲ್ಲಿ, ವ್ಯಥಾ– ದುಃಖವು, ಶ್ರೂಯತೇ – ತಿಳಿದುಬರುತ್ತದೆ; ಚ – ಹಾಗೂ, ಯದೃಚ್ಛಾಕೃತ ತನ್ಮೋಕ್ಷಪ್ರಯತ್ನಚ್ಛೇದಃ ಏವ–ಶ್ರೀನಾರಾಯಣ ಇಚ್ಛೆಯಂತೆ ಅವರ ಮೋಕ್ಷ

---

ದೊರೆಯದಂತೆ ಮಾಡುವನೆಂದೂ, ಹೇಳುತ್ತವೆ; ದೈತ್ಯರಿಗೂ ದೇವಾದಿ ಪ್ರಜರಿಗೂ ಈ ಗತಿಗಳು ನಿಯಮೇನ (ತಪ್ಪದೇ) ಲಭಿಸುತ್ತವೆಂದೂ ದ್ವಿರಾವರ್ತಿ ಶಬ್ದಗಳನ್ನು ಪ್ರಯೋಗಿಸಿ (ವೀಪ್ಸಾದಿಂದ ಸಹ) ಹೇಳುತ್ತವೆ; ಆದ್ದರಿಂದ ಸರ್ವಜೀವ

---

ಎಂಬ ವಿಶೇಷಣವಿದೆ); ಚೋಷ್ಕೂಯತೇ—(ಕರ್ಮಾನುಸಾರವಾಗಿ ಸ್ವದತ್ತ ಫಲಭೋಗಕ್ಕಾಗಿ, ಸ್ವರ್ಗ, ನರಕ ಭೂಮಿಗಳಲ್ಲಿ) ಸುತ್ತಿಸುತ್ತಾನೆ (ಪ್ರವರ್ತಿಸುತ್ತಾನೆ) (' ಚುಕ್ ಪ್ರವರ್ತನೇ' ಎಂಬ ಧಾತ್ವರ್ಥದಿಂದ); (ಲಿಂಗದೇಹ ಭಂಗಾನಂತರದಲ್ಲಿ ಸಹ ಈ ಮಿಶ್ರ ಫಲಭೋಗದಲ್ಲಿ ಪ್ರವರ್ತನೆಯುಂಟು) (ಮುಕ್ತಿಯಲ್ಲಿ ಸಹ ದ್ವೇಷ ಭಕ್ತಿಗಳ ಪರಿಪಾಕ ಮತ್ತು ಮಿಶ್ರಭಾವನೆಗಳಲ್ಲಿ ಪ್ರವರ್ತನೆಯುಂಟು);

ಉಭಯಸ್ಯ ರಾಜಾ ಎಂಬುವಲ್ಲಿ, ಉಭಯಸ್ಯ ಎಂಬುದಕ್ಕೆ ಉಭಯ ಸ್ವಭಾವವುಳ್ಳ (ಮಿಶ್ರ ಸ್ವಭಾವದ) ಜೀವರನ್ನು ಗ್ರಹಿಸಬೇಕು; ಶ್ರೀಹರಿಯು ಸರ್ವಸ್ವಾಮಿಯೇ ಆಗಿದ್ದಾನೆಂದು ತಾತ್ಪರ್ಯ;

ಪೂರ್ವೇಷಾಂ—ಪೂರ್ವೋಕ್ತ ಅಸುರರಿಗೆ, ಸಖ್ಯಾ—ಸ್ವಪ್ರೀತಿಸಾಧನ ಶುಭಕರ್ಮಗಳನ್ನು, ಪರಾವೃಣಕ್ತಿ—(ವಿಷ್ಣು ವೈಷ್ಣವ ದ್ವೇಷಾದಿಗಳನ್ನು ಮಾಡಿಸಿ) ಕತ್ತರಿಸಿ ಬಿಡುತ್ತಾನೆ; ವಿತರ್ತುರಾಣೋ—ವಿಶೇಷತ್ವರೆಮಾಡುವವನಾಗಿ (ದಯೆಯಿಂದಲೇ ತ್ವರಾ—ಆಶೆಯಿಂದಲ್ಲ); ಅಪರೇಭಿಃ—ದೇವತೆಗಳಿಂದ, ಏತಿ—ಸಖ್ಯವನ್ನು ಹೊಂದುತ್ತಾನೆ; (ದೇವತೆಗಳಿಗೆ—ಯೋಗ್ಯಜೀವರಿಗೆ, ಕಲ್ಯಾದಿ ದೈತ್ಯಕೃತ ವಿಘ್ನಗಳಿಂದ ಎಂದೂ ಸ್ವರ್ಗಾದಿ ಫಲಪ್ರತಿಬಂಧಕವಿಲ್ಲವೆಂಬುದು ಸೂಚಿಸುತ್ತದೆ); ಅನಾನುಭೂತೀಃ—ಭಗವದ್ಭಕ್ತಿಯ ಲೇಶವನ್ನು ಎಂದೂ ಅರಿಯದ ರಾಕ್ಷಸರನ್ನು (ಅಸುರರನ್ನು), ಅವಧೂನ್ವಾನಃ—ಕೆಳಗೆ ದೂಡುವನಾಗಿ, (ಧೂನ್ವಾನಃ—ಎಂದು, ಭೀಷಣ ತಾಡನಾದಿಗಳಿಂದ ಕೆಳಗೆ ಬೀಳುವ ಮಾರ್ಗವೂ ಭಯಂಕರವೆಂದೂ, ಇದರ ಭಯದಿಂದ ಹೊರಗೆ ಯೋಗ್ಯಜೀವರ ಪಾದ ಗ್ರಹಣ ಮಾಡುವ ಯತ್ನವನ್ನು ನಿಷೇಧಿಸುವುದೆಂದೂ ಸೂಚಿಸಲಾಗಿದೆ); ಇಂದ್ರಃ—ಪರಮಾತ್ಮನು, ಪೂರ್ವೀಃ—ಅನಾದಿಕಾಲದಿಂದ ಇರುವ, ಶರದಃ—ಸಂವತ್ಸರಗಳನ್ನು, ತರ್ತರೀತಿ—ಅತಿಶಯವಾಗಿ, ದಾಟಿಸುತ್ತಾನೆ; (ಉಭಯರಿಗೂ ಸ್ವಸ್ವಫಲಾನುಭವವು ಶಾಶ್ವತವಾಗಿ ನಡೆಯುವಂತೆ ವ್ಯವಸ್ಥೆಗೊಳಿಸಿರುವನು).

ಪ್ರಯತ್ನವೂ ವ್ಯರ್ಥವೇ ಆಗುತ್ತದೆ; ವೀಪ್ಸಾಯಾಂ–ಪುನರಾವೃತ್ತಿಯಿಂದ (ಮತ್ತೆ ಹೇಳುವುದರಿಂದ), ('ಉಗ್ರಮುಗ್ರಂ', ದಮಯನ್‌ರ ಎಂಬುದರಿಂದ) ನಿಯಮಃ ಅಪಿ ಚ–ಸರ್ವ ಅಸುರರಿಗೂ ಅದು ತಪ್ಪದೇ ಅನ್ವಯಿಸುತ್ತದೆಂದು, ದೇವಾನಾಂ–ದೇವತೆಗಳಿಗೆ, ಊರ್ಧ್ವಲೋಕಶ್ಚ–ಉತ್ತಮಲೋಕ ಪ್ರಾಪ್ತಿಯೂ ('ಅನ್ಯಂ ಅನ್ಯಂ ನೇನೀಯಮಾನಃ'–ಎಂಬ ಪ್ರತಿಯೊಬ್ಬ ಅಸುರಾನ್ಯನನ್ನು ಎಂಬ ವೀಪ್ಸಾದಿಂದ) (ಶ್ರೂಯತೇ–ಶ್ರುತಿಯಿಂದ ಕೇಳಿಬರುತ್ತದೆ–ತಿಳಿದುಬರುತ್ತದೆ); ಅತಃ–ಆದ್ದರಿಂದ (ಶ್ರುತಿ ನಿಯಮವು ಹೀಗಿರುವುದರಿಂದ), ಸರ್ವವಿಮೋಕ್ಷಶ್ಚ–ಸರ್ವರಿಗೆ (ಮೋಕ್ಷವೂ–ಸನ್ಮುಕ್ತಿಯೂ), ಸರ್ವೈಕ್ಯಂಚ–ಸರ್ವರಿಗೆ ಬ್ರಹ್ಮೈಕ್ಯವೂ, ಕಥಂ–ಹೇಗೆ ಸಂಭಾವ್ಯವಾಗುವುದು? ವದ–ಹೇಳು. (ಅಶಕ್ಯವೇ ಸರಿ).

**ಲೋಕಪ್ರಾಪ್ತಿಶ್ಚ ಯೇಷಾಂ ನ ತೇಷಾಮೈಕ್ಯೇ ತು ಕಾ ಕಥಾ ।**
**ರಾಜೋಭಯಸ್ಯ ಸ ಕಿಲ ನೋನ್ನೇತೃೈರಪ್ಯಭೇದವಾನ್ ॥ ೨೨೬ ॥**

ಯೇಷಾಂ–ಯಾರಿಗೆ (ಅಧಮ ಮಧ್ಯಮಜೀವರಿಗೆ), ಲೋಕಪ್ರಾಪ್ತಿಶ್ಚ–ವಿಷ್ಣುಲೋಕಪ್ರಾಪ್ತಿಯೇ, ನ–ಇಲ್ಲವೋ (ಲಭ್ಯವಲ್ಲವೋ), ತೇಷಾಂ–ಅವರಿಗೆ, ಐಕ್ಯೇ ತು–ಐಕ್ಯಪ್ರಾಪ್ತಿ ಇಲ್ಲವೆಂಬಲ್ಲಿ, ಕಾ ಕಥಾ-ಹೇಳಬೇಕಾದ್ದೇನಿದೆ? (ಅವರಿಗೆ ಅದರ ವಾರ್ತೆಯು ಸಹ ಕನಸಿನಲ್ಲಿಯೂ ಇಲ್ಲ); ಸಃ–ಪರಮಾತ್ಮನು, ಉಭಯಸ್ಯ–ಉಭಯರ (ಸರ್ವಜೀವರ), ರಾಜಾ ಕಿಲ–ಸ್ವಾಮಿಯಷ್ಟೆ; ಉನ್ನೇತೃೈಃ ಅಪಿ–ತಾನೇ ಮೇಲಕ್ಕೆ (ವೈಕುಂಠಾದಿಸ್ಥಾನಕ್ಕೆ) ಕರೆದೊಯ್ದುವರಿಂದ, ಅಭೇದವಾನ್–ಐಕ್ಯವುಳ್ಳವನು, ನ–ಅಲ್ಲವು (ಎಂಬುದು ಸಿದ್ಧ).

---

ಸಾಮಾನ್ಯರಿಗೆ ಮೋಕ್ಷವೆಂಬುದಾಗಲಿ, ಸರ್ವರಿಗೆ ಬ್ರಹ್ಮೈಕ್ಯವೆಂಬುದಾಗಲಿ ಯಾವ ರೀತಿಯಿಂದಲೂ, ಯುಕ್ತವಾಗುವುದಿಲ್ಲ; ಶ್ರುತಿಪ್ರಮಾಣವು ವಿರುದ್ಧ ಸ್ವಭಾವದವರಿಗೆ ವಿರುದ್ಧ ಗತಿಗಳನ್ನೇ ಸಮರ್ಥಿಸುತ್ತದೆ (೨೨೪–೨೨೫). ಹೀಗೆ ಸುಖಪ್ರಾಪಕ ಲೋಕಪ್ರಾಪ್ತಿಯೇ ಇಲ್ಲದ ಜೀವರಿಗೆ, ಬ್ರಹ್ಮನಿಂದ ಐಕ್ಯವಿಲ್ಲೆಂದು ಹೇಳಲೇನಿದೆ! ಭಗವಂತನು ಉಭಯರ (ಸರ್ವಜೀವರ) ಸ್ವಾಮಿಯೆಂದು ಶ್ರುತಿಯೇ ಸಾರುತ್ತಿದೆ; ತಾನೇ ಮೇಲೆತ್ತಿ ಒಯ್ದು ವೈಕುಂಠಾದಿ ಉತ್ತಮ ಸ್ಥಾನಗಳನ್ನಿತ್ತವನಿಂದ, ಗತಿ ಹೊಂದಿದವರ ಐಕ್ಯವೇ? (ಶಕ್ಯವಿಲ್ಲ) (೨೨೬).

**ಏಧಮಾನದ್ವಿಡಿತ್ಯುಕ್ತ್ಯಾ ಸ್ವಾತ್ಮಸಾಮ್ಯಂ ಸಹೇತ ನ ।**
**ತಸ್ಮಾದ್ಬ್ರಹ್ಮತ್ವಮೇತೇಷಾಂ ದುರಾಪಮಿತಿ ಮೇ ಮತಿಃ ।**
**ಈಷದ್ವೃದ್ಧಿಂ ಚ ಯೋ ದ್ವೇಷ್ಟಿ ಸ ಕಿಂ ದದ್ಯಾನ್ಮಹೋನ್ನತಿಂ**
॥ ೨೨೭ ॥

**ಅತಃ ಶ್ರುತಿಸತೀಭಾವಸಿದ್ಧಶ್ರೀಶಾನುಭಾವವಿತ್ ।**
**ತದ್ಭಾವಂ ಭಾವಯೇನ್ನೈವ ಯೋಽವಾಗ್ಧೂನ್ವನ್ ದುರಾಶಯಾತ್**
॥ ೨೨೮ ॥

ಏಧಮಾನದ್ವಿಟ್–ಸ್ವಯೋಗ್ಯತೆಗೆ ಅಧಿಕವಾದ ವೃದ್ಧಿಯನ್ನು ಹೊಂದಿದರೆ ಸಹಿಸದವನು, ಇತ್ಯುಕ್ತ್ಯಾ – ಎಂಬ ಶ್ರುತಿಯಿಂದ, ಸ್ವಾತ್ಮಸಾಮ್ಯಂ – ತನ್ನ ಸಮಾನತ್ವವನ್ನು, ನ ಸಹೇತ – ಸಹಿಸುವುದಿಲ್ಲವೆಂದು (ಸಿದ್ಧವಾಗುತ್ತದೆ); ತಸ್ಮಾತ್ – ಆದ್ದರಿಂದ, ಏತೇಷಾಂ – ಈ ಜೀವರಿಗೆ, ಬ್ರಹ್ಮತ್ವಂ – ಬ್ರಹ್ಮತ್ವವು (ಬ್ರಹ್ಮಸ್ವರೂಪವು), ದುರಾಪಂ–ಹೊಂದಲಶಕ್ಯವು, ಇತಿ ಮೇ ಮತಿಃ–ಎಂದು ನನ್ನ ನಿಶ್ಚಯವು; ಈಷತ್ ವೃದ್ಧಿಂ–ಅಲ್ಪವೃದ್ಧಿಯನ್ನು, ಯಃ–ಯಾವನು (ಪರಮಾತ್ಮನು), ದ್ವೇಷ್ಟಿ–ಸಹಿಸನೋ, ಸಃ–ಆತನೂ, ಮಹೋನ್ನತಿಂ–(ಐಕ್ಯ ಸಂಭವಕ್ಕಾಗಿ) ಸ್ವಸದೋನ್ನತಿಯನ್ನು, ದದ್ಯಾತ್ ಕಿಂ – ಕೊಡುವನೇನು?; ಅತಃ–ಆದ್ದರಿಂದ, ಶ್ರುತಿಸತೀಭಾವಸಿದ್ಧಶ್ರೀಶಾನುಭಾವವಿತ್–ಶ್ರುತಿಸತೀಮಣಿಯು ಅರ್ಥದಿಂದ ಸಿದ್ಧವಾಗುವ ಶ್ರೀಶನ ಮಹಿಮೆಯನ್ನು ತಿಳಿದವನು, ತದ್ಭಾವಂ– ಆ ಅರ್ಥವನ್ನು, ಭಾವಯೇತ್ – ಚಿಂತಿಸಿ ಹಿಗ್ಗುವನು (ಆನಂದಿಸುವನು); ಯಃ – ಯಾವನು, ದುರಾಶಯಾತ್ – ದುರ್ಮನಸ್ಕನಾದ್ದರಿಂದ, (ಕಲುಷಿತ

---

ಶ್ರುತಿಯು ಪರಮಾತ್ಮನನ್ನು 'ಏಧಮಾನದ್ವಿಟ್' ಎಂದರೆ ಸ್ವಯೋಗ್ಯತೆಯನ್ನು ಅತಿಕ್ರಮಿಸಿ ವೃದ್ಧಿ ಹೊಂದಿದವನನ್ನು ಸಹಿಸುವುದಿಲ್ಲವೆಂದು ಸಾರುತ್ತದೆ; ಹೀಗಿರಲು, ತನ್ನ ಸಾಮ್ಯಸಾಧಕವಾದ ಮಹೋನ್ನತಿಯನ್ನು ಸಹಿಸುವನೇ? ಅಲ್ಪವೃದ್ಧಿಯನ್ನು ಸಹಿಸದವನು (ತನ್ನ ಐಕ್ಯಕ್ಕೆ ಸಾಧನವೆಂಬ) ಈ ಮಹೋನ್ನತಿಯನ್ನು ಎಂದೂ ಅನುಗ್ರಹಿಸುವುದಿಲ್ಲ; ಈ ವಿಧವಾದ ಮಹೋನ್ನತಿಯುಳ್ಳವನೆಂಬ, ಶ್ರುತಿ ತಾತ್ಪರ್ಯವನ್ನು ಚಿಂತಿಸಿ, ವಿವೇಕಿಯು ಹರ್ಷಿಸುವನು; ಕಲುಷಿತ ಮನಸ್ಸುಳ್ಳ ಅವಿವೇಕಿಯು, ಇದನ್ನು ಗ್ರಹಿಸಲು ಅಸಮರ್ಥನಾಗಿ, ಆ ಮಹಾತ್ಮ್ಯವನ್ನು

ಮನಸ್ಸುಳ್ಳವನಾಗಿ), ಅವಾಗ್ದೃಷ್ಟಿರ್ವಾನ್ – ದೋಷೈಕ ದೃಷ್ಟಿಯುಳ್ಳವನೋ (ಅಧೋದೃಷ್ಟಿಯಿಂದ, ಆ ಮಹಾತ್ಮ್ಯೆಯನ್ನು ಗ್ರಹಿಸುವುದಿಲ್ಲವೋ), ನೈವ– ಹರ್ಷಿಸುವುದೇ ಇಲ್ಲ

**ಆರುರುಕ್ಷಂತಿ ಮಾಯಾಭಿರುತ್ಸಿಸೃಪ್ಸಂತಿ ಯೇ ದಿವಂ ।**
**ತಾನ್ ದಸ್ಯೂನ್ವಿಧುನೋಮ್ಯಜ್ಞ ಪೂರ್ವಸ್ಮಾಚ್ಚ ಪದಾದಧಃ ।**
**ಇತಿ ಭಾಗವತೋಕ್ತ್ಯಾ ಚ ಶ್ರುತ್ಯಾ ಚೈತತ್ಸಮರ್ಥಯ ॥ ೨೨೯ ॥**

ಪುನರಪಿ ಸ್ಮೃತಿಯಿಂದಲೂ ಶ್ರುತಿಯಿಂದಲೂ ಅಧಮರಿಗೆ ಮೋಕ್ಷಾಭಾವವನ್ನೇ ಸಾಧಿಸುತ್ತಾರೆ :—

ಮಾಯಾಭಿಃ–(ಅವಿದ್ಯೆಯನ್ನೇ ಸ್ಪಷ್ಟಗೊಳಿಸುತ್ತ) ಪ್ರವೃತ್ತಶಾಸ್ತ್ರಗಳಿಂದ (ಅವುಗಳಂತೆ ಫಲಾಪೇಕ್ಷೆಯಿಂದ), ದಿವಂ – ಸ್ವರ್ಗವನ್ನು (ಮೋಕ್ಷವನ್ನು), ಉತ್ಸಿಸೃಪ್ಸಂತಿ–ಊರ್ಧ್ವಗಮನವನ್ನು ಇಚ್ಛಿಸುವ, ಯೇ–ಯಾರು, ಆರುರುಕ್ಷಂತಿ– ಉತ್ತಮಗತಿಯನ್ನು (ಏರಲು) ಇಚ್ಛಿಸುವರೋ, ತಾನ್ ದಸ್ಯೂನ್ – ಆ ಚೋರರನ್ನು (ಅಯೋಗ್ಯೇಚ್ಛೆಯುಳ್ಳವರನ್ನು), ಅಜ್ಞ–ಹೇ ಮೂರ್ಖ!, ಪೂರ್ವಸ್ಮಾತ್ ಪದಾತ್ ಚ–ಮೊದಲಿನ ಸ್ಥಾನಕ್ಕಿಂತಲೂ, ಅಧಃ–ಕೆಳಗೆ, ವಿಧುನೋಮಿ – ತಳ್ಳುತ್ತೇನೆ; ಇತಿಭಾಗವತೋಕ್ತ್ಯಾ – ಎಂಬ ಭಾಗವತ ವಾಕ್ಯದಿಂದ, ಶ್ರುತ್ಯಾ ಚ–ಶ್ರುತಿಯಿಂದಲೂ,[1] ಏತತ್–ಈ ಅರ್ಥ ವಿಶೇಷವನ್ನು, ಸಮರ್ಥಯ–ದೃಢಪಡಿಸಿಕೊಳ್ಳುವನಾಗು.

---

ತಿಳಿಯುವುದೇ ಇಲ್ಲ (೨೨೭–೨೨೮). ಪ್ರವೃತ್ತ ಕರ್ಮಗಳನ್ನು ಸ್ವರ್ಗಾದಿ ಊರ್ಧ್ವಗತಿಯನ್ನಪೇಕ್ಷಿಸಿ ಆಚರಿಸುವವರು ಅಯೋಗ್ಯೇಚ್ಛೆಯುಳ್ಳ ಕಳ್ಳರಂತೆ; ಅವರನ್ನು ಆ ಜನರ ಪೂರ್ವಸ್ಥಾನದಿಂದಲೂ ಕೆಳಗೆ ಮಾಡುವೆನೆಂದು, ಹೇಳುವ ಭಾಗವತ ವಾಕ್ಯದಿಂದಲೂ, ವೇದದ್ರಷ್ಟಾರನಾದ ಋಷಿವಾಕ್ಯದಿಂದಲೂ ದೃಢಪಡಿಸಿಕೊಳ್ಳಬೇಕು — ಈ ನಿಶ್ಚಯವಿಲ್ಲದೇ ಮೋಕ್ಷಮಾರ್ಗದಲ್ಲಿ ಮುಂದೆ ಹೆಜ್ಜೆ

1 ಮೊದಲಿನ ಪಾತಾಲಾದಿ ಸ್ಥಾನದಿಂದ, ಅಧೋಗತಿಯಾದೀತೆಂಬುದು ಬಲಿಯನ್ನು ಕುರಿತು ಹೇಳಿದ ಇಂದ್ರನ ವಾಕ್ಯವು; 'ಮಾಯಾಭಿರುತ್ಸಿಸೃಪ್ಸಂತ ಇಂದ್ರ ದ್ಯಾಮಾರುರುಕ್ಷತಃ । ಅವರಸ್ಯೂ॰ರಧೂನುಥಾ' ಎಂಬುದು, ಇಂದ್ರನನ್ನು ಕುರಿತಾದ, ವೇದದ್ರಷ್ಟೃ ಋಷಿವಾಕ್ಯವು.

**ಅಸುರಾಣಾಮೂರ್ಧ್ವಲೋಕಾಪ್ರಾಪ್ತಿಸ್ತಮಸಿ ಚ ಸ್ಥಿತಿಃ ।**
**ನಿಯತಾ ಶ್ರೂಯತೇ ಸರ್ವಮೋಕ್ಷೋ ದುರ್ವಚ ಏವ ತತ್ ॥೨೩೦॥**

ಅಸುರಾಣಾಂ—ದೈತ್ಯರಿಗೆ, ಊರ್ಧ್ವಲೋಕಾಪ್ರಾಪ್ತಿಃ—ವೈಕುಂಠಲೋಕದ ಪ್ರಾಪ್ತಿ ಇಲ್ಲವೆಂದೂ, ಚ—ಹಾಗೂ, ತಮಸಿ—ತಮಸ್ಸಿನಲ್ಲಿ, ಸ್ಥಿತಿಃ—ನಿತ್ಯವಾಸವೂ, ನಿಯತಾ—ನಿಯಮದಿಂದ (ತಪ್ಪದೇ), ಶ್ರೂಯತೇ—ಶ್ರುತಿ ಸ್ಮೃತಿಗಳಿಂದ ತಿಳಿದು ಬರುತ್ತದೆ; ತತ್—ಆದ್ದರಿಂದ, ಸರ್ವಮೋಕ್ಷಃ—ಸಮಸ್ತರಿಗೆ ಮೋಕ್ಷವೆಂಬುದು, ದುರ್ವಚಃ ಏವ ಚ—ಆಡಬಾರದ ಮಾತೇ ಸರಿ (ಹೇಳಲಾಗದ—ನುಡಿಯಲಾಗದ ವಾಕ್ಯವೇ ಆಗಿದೆ) (ಸ್ಮೃತಿ ವಿರೋಧವು ಕಂಡಲ್ಲಿ, ಅನ್ಯಾರ್ಥವನ್ನೇ ತಿಳಿಯ ಬೇಕು).

**ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ।**
**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥ ೨೩೧ ॥**

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।**
**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ**
**॥ ೨೩೨ ॥**

ಗೀತಾವಾಕ್ಯದಿಂದಲೂ ದೈತ್ಯರಿಗೆ ಅಧಮಗತಿನಿಯಮವನ್ನು ಸಮರ್ಥಿಸುತ್ತಾರೆ :—

ಆತ್ಮಪರದೇಹೇಷು—ತನ್ನ ಮತ್ತು ಪರದೇಹಗಳಲ್ಲಿ (ಕೃಷ್ಣ ಮತ್ತು ತದ್ಭಿನ್ನ ನೀಚದೇಹಗಳಲ್ಲಿ), ಮಾಂ—ನನ್ನನ್ನು (ಶ್ರೀಕೃಷ್ಣನನ್ನು), ಪ್ರದ್ವಿಷಂತಃ—ಐಕ್ಯಭಾವ

---

ಇಡಲು ಶಕ್ಯವಿಲ್ಲ (೨೨೯). ಶ್ರುತಿ ಸ್ಮೃತಿಗಳಿಂದ ಅಸುರರಿಗೆ ಊರ್ಧ್ವಲೋಕ ಪ್ರಾಪ್ತಿಯಿಲ್ಲವೆಂದೂ, ತಮಸ್ಸಿನಲ್ಲಿಯೇ ಸ್ಥಿತಿಯೆಂದೂ ತಿಳಿದುಬರುವುದರಿಂದ, ಸರ್ವಮೋಕ್ಷವೆಂಬುದು ನುಡಿಯಲಾಗದ ಅಯುಕ್ತವಾದ ಮಾತೇ ಸರಿ; ಸ್ಮೃತಿ ವಿರೋಧವು ಕಂಡಲ್ಲಿ ಶ್ರುತಿ ವಿರೋಧವಿಲ್ಲದಂತೆ ಅನ್ಯಾರ್ಥವನ್ನೇ ತಿಳಿಯಬೇಕು (೨೩೦). ಸ್ವದೇಹದಲ್ಲಿಯೂ, ಪರದೇಹದಲ್ಲಿಯೂ ಸನ್ನಿಹಿತನಾಗಿರುವ ನನ್ನನ್ನು (ಶ್ರೀಕೃಷ್ಣನನ್ನು) ದ್ವೇಷಿಸುವ, ಎಂದರೆ ನನ್ನ ಸರ್ವೋತ್ತಮತ್ವವನ್ನು ಸಹಿಸದೇ

ವನ್ನು ಹೊಂದಿ, ಅಭ್ಯಸೂಯಕಾಃ—ನನ್ನ ಸರ್ವೋತ್ತಮತ್ವವನ್ನು ಸಹಿಸದ (ಅನ್ಯ ಜೀವರನ್ನು ತರ್ಜನ ತಾಡನಾದಿಗಳನ್ನು ಮಾಡುವ ಮಾತ್ರದಿಂದ ಭಗವದ್ದ್ವೇಷವು ಸಂಭವಿಸುವುದಿಲ್ಲ); ತಾನ್—ಆ ದ್ವೇಷಿಗಳನ್ನು, ದ್ವಿಷತಃ—ದ್ವೇಷಿಸುವ (ಐಕ್ಯ ಚಿಂತನೆಮಾಡುವ), ಕ್ರೂರಾನ್ – ಉಗ್ರರಾದ, ನರಾಧಮಾನ್ – ಮನುಷ್ಯಾಧಮರನ್ನು (ಅವರಿಂದ ಆರಂಭಿಸಿ ಕಲಿಪರ್ಯಂತರಾದ ತಮೋಯೋಗ್ಯ ಜೀವರನ್ನು), ಅಜಸ್ರಂ – ಸತತವಾಗಿ, ಸಂಸಾರೇಷು – ವಿವಿಧ ಯೋನಿಗಳಲ್ಲಿ, ಆಸುರೀಷು ಏವ—ಅಸುರಸಂಬಂಧವಾದ (ಅಜ್ಞಾನವು ಮುಸುಕಿರುವ), ಯೋನಿಷು—ದೇಹಗಳಲ್ಲಿ, ಅಶುಭಾನ್—ಅಮಂಗಲ ಸ್ವರೂಪದ ಜೀವರನ್ನು, ಕ್ಷಿಪಾಮಿ—ಎಸೆಯುತ್ತೇನೆ; (ದೂಡುತ್ತೇನೆ), ಮೂಢಾಃ—ಮೂರ್ಖರಾದ ಈ ಜನರು, ಜನ್ಮನಿ ಜನ್ಮನಿ—ಪ್ರತಿ ಜನ್ಮದಲ್ಲಿಯೂ ತಪ್ಪದೇ, ಆಸುರೀಂ – ಅಸುರಸಂಬಂಧವಾದ, ಯೋನಿಂ—ದೇಹವನ್ನು (ಉತ್ಪತ್ತಿಸ್ಥಾನವನ್ನು), ಆಪನ್ನಾಃ—ಹೊಂದಿದವರಾಗಿ, ಕೌಂತೇಯ—ಹೇ ಅರ್ಜುನ! ಮಾಂ – ನನ್ನನ್ನು, ಅಪ್ರಾಪ್ಯ ಏವ—ಎಂದಿಗೂ ಹೊಂದದೇ, ತತಃ – ಅನಂತರ, ಅಧಮಾಂ ಗತಿಂ – ಅಧೋಗತಿಯನ್ನು (ಅಂಧತಮಸ್ಸನ್ನು), ಯಾಂತಿ—ಹೊಂದುತ್ತಾರೆ.

**ಇತಿ ಕೃಷ್ಣೋಽಪಿ ಗೀತಾಯಾಮಸುರಾಣಾಮಧೋಗತಿಂ ।**
**ಸ್ವಾಪ್ರಾಪ್ತೌ ನಿಯಮಂ ಚಾಹ ದ್ವೇಷಿಣಾಂ ಯತ್ಪದೇ ಪದೇ ।**
**ಅತಃ ಪೂರ್ವೋಕ್ತವಾಕ್ಯಾರ್ಥೇ ಸಮಾಖ್ಯೇಯಂ ಬಲೀಯಸೀ**

॥ ೨೩೩ ॥

ಗೀತಾವಾಕ್ಯವು ಸ್ಪಷ್ಟವೂ ನಿರವಕಾಶಾರ್ಥವುಳ್ಳದ್ದೂ ಆದ್ದರಿಂದ, ಐಕ್ಯವಾದಿಗಳಿಗೆ ತಮಃಪ್ರಾಪ್ತಿಯೆಂಬಲ್ಲಿ ಪ್ರಬಲ ಪ್ರಮಾಣವಾಗಿದೆ ; ಎನ್ನುತ್ತಾರೆ :—

---

ಐಕ್ಯಕ್ಕಾಗಿ ಯತ್ನಿಸುವ, ಉಗ್ರಸ್ವಭಾವದ ಮನುಷ್ಯಾಧಮಾದಿ ತಾಮಸ ಜೀವರನ್ನೂ, ಸಂಸಾರದಲ್ಲಿ ನಾನಾಹೀನ ಯೋನಿಗಳಲ್ಲಿ ಈ ಅಮಂಗಲ ಸ್ವರೂಪದ ಜನರನ್ನೂ, ಪ್ರತಿ ಜನ್ಮದಲ್ಲಿ ಆಸುರೀ ದೇಹಗಳನ್ನೇ ಕೊಟ್ಟು ಸುತ್ತಿಸುತ್ತೇನೆ; ಅವರು ಯಾವ ಜನ್ಮದಲ್ಲಿಯೂ ನನ್ನನ್ನು ಯಾವ ಮಟ್ಟಿಗೂ ಹೊಂದದೇ, ಅಂತ್ಯದಲ್ಲಿ ಅಂಧತಮಸ್ಸನ್ನೇ ಹೊಂದುತ್ತಾರೆ (೨೩೧—೨೩೨). ಹೀಗೆಂದು, ಶ್ರೀಕೃಷ್ಣನೂ ಗೀತೆಯಲ್ಲಿ, ದೈತ್ಯರಿಗೆ ಅಧೋಗತಿಯನ್ನೇ ಅಂತ್ಯಕ್ಕೆ ತಪ್ಪಿದ್ದಲ್ಲವೆಂದು,

ಇತಿ–ಹೀಗೆ, ಕೃಷ್ಣ ಅಪಿ – ಕೃಷ್ಣನೂ, ಗೀತಾಯಾಂ – ಗೀತೆಯಲ್ಲಿ, ಅಸುರಾಣಾಂ–ದೈತ್ಯರಿಗೆ, ಅಧೋಗತಿಂ–ಅಧೋಗತಿಯನ್ನೂ, ಸ್ವಾಪ್ರಾಪ್ತೌ– ತನ್ನ ಪ್ರಾಪ್ತಿಯಿಲ್ಲವೆಂಬ, ನಿಯಮಂ ಚ–ನಿಯಮವನ್ನೂ, ಯತ್ – ಯಾವ ಕಾರಣದಿಂದ, ಪದೇ ಪದೇ–ಮತ್ತೆ ಮತ್ತೆ, ದ್ವೇಷಿಣಾಂ–ಐಕ್ಯಚಿಂತಕರಿಗೆ, ಆಹ– ಹೇಳಿರುವನೋ, ಅತಃ–ಆದ್ದರಿಂದ, ಪೂರ್ವೋಕ್ತ ವಾಕ್ಯಾರ್ಥೇ–ಹಿಂದೆ ಹೇಳಲಾದ ಶ್ರುತ್ಯರ್ಥದಲ್ಲಿ-(ಉಗ್ರಮುಗ್ರಂ ದಮಾಯನ್ ಇತ್ಯಾದಿ), ಇಯಂ–ಇದು (ಈ ಗೀತಾ ಪ್ರಮಾಣವು), ಬಲೀಯಸೀ–ಪ್ರಬಲವಾದ, ಸಮಾಖ್ಯಾ–ಅದೇ ಅರ್ಥ ಪ್ರತಿ ಪಾದಕ ಪ್ರಮಾಣವು (ಆಗಿದೆ).

**ಕ್ವಾಚಿತ್ಕದ್ವೇಷಿಮೋಕ್ಷೋಕ್ತಿರಪಿ ಭಕ್ತಾನ್ ಜಯಾದಿಕಾನ್ ।**
**ಶಾಪಾದಿನಾ ತಥಾಭೂತಾನುದ್ದಿಶ್ಯೈವೇತಿ ಶಂಸತಿ ॥ ೨೩೪ ॥**

ಕ್ವಾಚಿತ್ಕ ದ್ವೇಷಿ ಮೋಕ್ಷೋಕ್ತಿಃ ಅಪಿ–ಒಂದು ಕಾಲದಲ್ಲಿ (ಅಲ್ಪಕಾಲ) ಭಗವಂತನನ್ನುದ್ವೇಷಿಸಿ ಅದರಿಂದ ಮೋಕ್ಷವನ್ನು ಹೊಂದಿದರೆಂಬ ವಾಕ್ಯವಾದರೂ, ಭಕ್ತಾನ್ – ಭಕ್ತರಾದ, ಜಯಾದಿಕಾನ್ – ಜಯಾದಿಗಳನ್ನು, (ವಿಜಯ, ಚಿತ್ರಕೇತು, ಭೃಗು, ಊರ್ವಶ್ಯಾದಿಗಳನ್ನು ಆದಿಪದದಿಂದ ಗ್ರಹಿಸಬೇಕು), ಶಾಪಾದಿನಾ – ಶಾಪ ಮೊದಲಾದ ಕಾರಣಗಳಿಂದ, ತಥಾಭೂತಾನ್ – ಹಾಗೆ ಆಸುರೀಯೋನಿಯಲ್ಲಿ ಜನಿಸಿದವರನ್ನು, ಉದ್ದಿಶ್ಯ ಏವ–ಉದ್ದೇಶಿಸಿಯೇ (ಅಂಥ ವರನ್ನು ಮುಂದಿಟ್ಟುಕೊಂಡೇ), ಇತಿ–ಹೇಳಿದ್ದೆಂಬುದಾಗಿ, ಶಂಸತಿ–ನಿರೂಪಿಸು ತ್ತಾರೆ.

---

ಅರ್ಜುನನಿಗೆ ಉಪದೇಶಿಸಿರುವನು, ಮತ್ತು ತನ್ನ ಪ್ರಾಪ್ತಿಯು ಎಂದಿಗೂ ಇಲ್ಲವೆಂಬ ನಿಯಮವನ್ನು, ತನ್ನ ದ್ವೇಷಿಗಳು ಎಂದೂ ಮೀರಲಾರರೆಂದೂ ಪದೇ ಪದೇ ಘೋಷಿಸಿರುವನು ; ಈ ಹಿಂದೆ ನಿರೂಪಿಸಿದ, ಶ್ರುತ್ಯರ್ಥದಲ್ಲಿ ('ಉಗ್ರಮುಗ್ರಂ ದಮಾಯನ್' ಇತ್ಯಾದಿ ವಾಕ್ಯಾರ್ಥವನ್ನು ತಿಳಿಯುವುದರಲ್ಲಿ), ಶ್ರೀಕೃಷ್ಣನ ಗೀತೋಕ್ತಿಯು, ಬಲವಾದ ಸಮಾಖ್ಯೆಯಾಗುತ್ತದೆ–ಐಕ್ಯವಾದಿಗಳಿಗೆ ತಮಃ ಪ್ರಾಪ್ತಿಯು ತಪ್ಪಿದ್ದಲ್ಲವೆಂಬಲ್ಲಿರುವ ಪ್ರಬಲ (ನಿರವಕಾಶ) ಪ್ರಮಾಣಗಳನ್ನು ದುರ್ಲಕ್ಷಿಸುವುದು ಯೋಗ್ಯವಲ್ಲ–ಉಚಿತವಲ್ಲ–ಸ್ವಾರ್ಥಸಾಧಕವಲ್ಲ (೨೩೩). ಕೆಲವು ಕಾಲ ಭಗವಂತನ ದ್ವೇಷದಿಂದ ಮೋಕ್ಷವನ್ನು ಹೊಂದಿದರೆಂಬ ವಾಕ್ಯವು

*

**ಯದ್ವಾಙ್ನಿರವಕಾಶೇಯಂ ತಸ್ಯಾಶ್ಚೋಕ್ತ್ಯೈವ ತದ್ಗತಿಃ ॥ ೨೩೫ ॥**

ಯತ್ – ಯಾವ ಕಾರಣದಿಂದ, ಇಯಂ ವಾಕ್ – ಈ ಶ್ರುತಿಯು, ನಿರವಕಾಶಾ–ನಿರವಕಾಶವೋ (ಅನ್ಯಾರ್ಥಕ್ಕೆ ಅವಕಾಶವಿಲ್ಲದ್ದರಿಂದ ಪ್ರಬಲವೋ), ತತ್–ಆದ್ದರಿಂದ, ತಸ್ಯಾಃ–ಆ ವಾಕ್ಯದ, ಉಕತ್ತ ಏವ–ಅರ್ಥವೇ (ಉಕ್ತಿಯೇ), ಗತಿಃ–ಅಂತ್ಯಗತಿ ನಿಯಾಮಕವು ; (ಬೇರೆಯಲ್ಲ).

**ಯಜ್ಞೇನ ಯಜ್ಞಮಯಜಂತೇತಿ ವೇದವಚಸ್ಯಪಿ ।**
**ಉಕ್ತೋಯಮರ್ಥೋ ವಿಸ್ಪಷ್ಟಂ ತತೋ ಮುಕ್ತಾಃ ಸಹಸ್ರಶಃ ।**
**ಸಂತಿ ನೈಕತ್ವಮೇತೇಷಾಂ ಯತೋತ್ರಾನೇಕತೋಚ್ಯತೇ ॥ ೨೩೬ ॥**

ಮುಕ್ತರಲ್ಲಿ ಬಹುತ್ವವೂ, ಸ್ವರೂಪತಾರತಮ್ಯವೂ ಉಂಟೆಂದು ಹೇಳುವ ಸ್ಪಷ್ಟ ಶ್ರುತಿಗಳನ್ನು ಹೇಳುತ್ತಾರೆ :—

ಯಜ್ಞೇನ – (ಶ್ರುತ್ಯುಕ್ತ ನಿಷ್ಕಾಮಕರ್ಮಗಳಾದ) ಯಜ್ಞಾದಿ ಕರ್ಮದಿಂದ, ಯಜ್ಞಂ – ಯಜ್ಞನಾಮಕ – ಭಗವಂತನನ್ನು, ಅಯಜಂತ – ಪೂಜಿಸುತ್ತಿರುವರು ; ಇತಿ–ಹೀಗೆಂಬ, ವೇದವಚಸಿ ಅಪಿ–ವೇದವಾಕ್ಯದಲ್ಲಿಯೂ, ಅಯಂ–

---

ಭಗವದ್ಭಕ್ತರಾದ ಜಯವಿಜಯಾದಿ (ಚಿತ್ರಕೇತು, ಭೃಗು, ಊರ್ವಶೀ) ಮೊದಲಾದವರನ್ನು ತಿಳಿಸಲು ಮತ್ತು ಶಾಪಾದಿಗಳಿಂದ, ಆಸುರೀದೇಹಗಳಲ್ಲಿ ಬಂದು, ತನ್ನಿಮಿತ್ತವಾಗಿ ಭಗವಂತನನ್ನು ದ್ವೇಷಿಸಿದರೆಂಬ ಜೀವರ ವಿವಕ್ಷೆಯಿಂದ. ಅಲ್ಲಲ್ಲಿ ಅಂಥವರ ಕಥಾ ನಿರೂಪಣವು ಪ್ರಸಕ್ತವಾಗುತ್ತದೆ ; ಅದರಿಂದ ಭಗವದ್ಭಕ್ತಿ ಮಹಾತ್ಮ್ಯೆಯೇ (ಪ್ರಭಾವವೇ) ಪ್ರಸಿದ್ಧವಾಗುತ್ತದೆ (೨೩೪). 'ಶೃಣ್ವೇ ವೀರಮುಗ್ರಮುಗ್ರಂ' ಎಂಬೀ ಶ್ರುತಿಯು ವಿವಿಧ ಜೀವರ ಅಂತ್ಯಗತಿಗಳನ್ನು ನಿರವಕಾಶದಿಂದ ನಿರೂಪಿಸುತ್ತದೆಯಾದ್ದರಿಂದ, ಬೇರಾವ ಅರ್ಥವನ್ನು ಯಾವ ಕಾರಣದಿಂದಲೂ ತಿಳಿಯಲು ಬರುವುದಿಲ್ಲ (೨೩೫). 'ಯಜ್ಞೇನ ಯಜ್ಞಮಯಜಂತ ದೇವಾಃ'–ಇತ್ಯಾದಿ ಶ್ರುತಿಯು, ಮುಕ್ತದೇವತೆಗಳು ಯಜ್ಞರೂಪದ ಕರ್ಮದಿಂದ ನಿತ್ಯಮುಕ್ತ ಶ್ರೀಹರಿಯನ್ನು ಪೂಜಿಸುವರೆಂದು ಹೇಳುತ್ತದೆ ; ಈ ಶ್ರುತಿಯಿಂದ ಮುಕ್ತರು ಬಹುಸಂಖ್ಯೆಯವರೆಂದೂ, ಅವರ ಸ್ವರೂಪಗಳಲ್ಲಿ ತಾರತಮ್ಯ ಉಂಟೆಂದೂ ಸಿದ್ಧವಾಗುತ್ತದೆ ; ಆದ್ದರಿಂದ ಮುಕ್ತರಲ್ಲಿ ಏಕತ್ವವಿಲ್ಲ–ಬ್ರಹ್ಮೈಕ್ಯ

ಅರ್ಥಃ–ಈ ಅರ್ಥವು, ವಿಸ್ಪಷ್ಟಃ–ಬಹುಸ್ಪಷ್ಟವಾಗಿ, ಉಕ್ತಃ–ಹೇಳಲ್ಪಟ್ಟಿದೆ;[1] ತತಃ – ಆದ್ದರಿಂದ, ಮುಕ್ತಾಃ – ಮುಕ್ತರು, ಸಹಸ್ರಶಃ – ಬಹುಸಂಖ್ಯೆಯುವರು (ಅಸಂಖ್ಯರು) ಸಂತಿ–ಇರುತ್ತಾರೆ; ಯತಃ–ಯಾವ ಕಾರಣದಿಂದ, ಅತ್ರ–ಈ ('ಯಜ್ಞೇನ ಯಜ್ಞಂ' ಎಂಬ) ಶ್ರುತಿಯಲ್ಲಿ ಅನೇಕತಾ–ಅನೇಕತ್ವವು (ಬಹುತ್ವವು), ಉಚ್ಯತೇ – ಹೇಳಲ್ಪಡುತ್ತದೆಯೋ, ಏತೇಷಾಂ – ( ಆದ್ದರಿಂದ ) ಮುಕ್ತರಿಗೆ, ಏಕತ್ವಂ ನ–ಏಕತ್ವವೆಂಬುದಿಲ್ಲ (ಐಕ್ಯವೆಂಬುದಿಲ್ಲ).

**ತೇಷು ಪೂರ್ವೇ ಪೂರ್ವಮುಕ್ತಾಃ ಪಶ್ಚಾನ್ಮುಕ್ತಾಸ್ತಥಾಪರೇ ।**
**ಜ್ಞಾತಯೋಽಜ್ಞಾತಯಶ್ಚೇತಿ ತೇ ಮುಕ್ತಾಃ ಕ್ವಚಿದೀರಿತಾಃ ॥೨೩೭॥**

ತೇಷು – ಮುಕ್ತರಲ್ಲಿ, ಪೂರ್ವಮುಕ್ತಾಃ – ಮೊದಲು (ಹಿಂದೆ) ಮುಕ್ತರಾದವರು, ಪೂರ್ವೇ–ಮೊದಲಿಗರು ('ಪೂರ್ವೇ ಸಂತಿ' ಎಂಬಲ್ಲಿ ಪೂರ್ವಪದದಿಂದ ಹೇಳಲ್ಪಡುವರು); ತಥಾ – ಹಾಗೂ, ಪಶ್ಚಾತ್ ಮುಕ್ತಾಃ – ನಂತರ ಮುಕ್ತರಾದವರು, ಅಪರೇ–ಬೇರೆಯುವರು, ತೇ ಮುಕ್ತಾಃ–(ಹೀಗಿರುವ) ಆ ಮುಕ್ತರು, ಜ್ಞಾತಯಃ–ಜ್ಞಾತಿಗಳು (ಕೂಡಿ–ಒಂದಿಗೇ ಮುಕ್ತರಾದವರು), ಅಜ್ಞಾತಯಃ–ಅಜ್ಞಾತಿಗಳು (ಬೇರೆಯಾಗಿ ಮುಕ್ತರಾದವರು–ಅನ್ಯಕಲ್ಪಗಳಲ್ಲಿ ಮುಕ್ತರಾದವರು), ಇತಿ ಚ–ಎಂದೂ ಸಹ, ಕ್ವಚಿತ್–ಕೆಲವು ಶ್ರುತಿಗಳಲ್ಲಿ, ಈರಿತಾಃ–ಹೇಳಲ್ಪಟ್ಟಿರುವರು.

**ಸಖಾಯಃ ಕಿಲ ತೇ ಸರ್ವೇ ಮುಕ್ತಾವಪಿ ಮನೋಜವೇ ।**
**ಅಸಮಾಃ ಸ್ವಚ್ಛರೂಪತ್ವಾದ್ಧ್ರದಾ ಇವ ಮನೋಹರಾಃ ॥ ೨೩೮ ॥**

---

ವೆಂಬುದಿಲ್ಲ (೨೩೬). ಮುಕ್ತರಲ್ಲಿ ಜ್ಞಾತಿಗಳು, ಮತ್ತು ಅಜ್ಞಾತಿಗಳೆಂಬ ಭೇದವೂ ಉಂಟೆಂದು ಕೆಲವು ಶ್ರುತಿಗಳೂ ಹೇಳುತ್ತವೆ; ಹಿಂದೆ, (ಒಂದೇ ಬ್ರಹ್ಮಕಲ್ಪದಲ್ಲಿ) ಮುಕ್ತರಾದವರೆಲ್ಲ ಜ್ಞಾತಿಗಳೆಂದೂ, ಭಿನ್ನಕಲ್ಪಗಳಲ್ಲಿ ಮುಕ್ತರಾದವರು ಅಜ್ಞಾತಿಗಳೆಂದೂ ತಿಳಿದುಬರುತ್ತಾರೆ; (೨೩೭). ಮುಕ್ತರೆಲ್ಲರೂ ಪರಸ್ಪರ

---

1 'ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ।' ಎಂಬ ಪ್ರಸಿದ್ಧ ಶ್ರುತಿಯಿದು; ಇಲ್ಲಿ ನಾಕಪದವು ಮೋಕ್ಷವನ್ನು ಹೇಳುತ್ತದೆ; 'ಸಾಧ್ಯಾಃ ಸಂತಿ ದೇವಾಃ', ಎಂಬುದು ಮುಕ್ತರಾದ ದೇವತೆಗಳನ್ನು ಹೇಳುತ್ತದೆ; 'ಸಚಂತ' ಎಂಬ ಪದದಿಂದ ಮುಕ್ತಿಯಲ್ಲಿ ಪೂರ್ವಾಪರತ್ವವುಳ್ಳ ಬಹುದೇವತೆಗಳಿರುವರೆಂದೂ ಸಿದ್ಧವಾಗುತ್ತದೆ.

'ಅಕ್ಷಣ್ವಂತಃ ಕರ್ಣವಂತಃ ಸಖಾಯೋ ಮನೋಜವೇಷ್ವಸಮಾ ಬಭೂವುಃ । ಆದಘ್ನಾಸ ಉಪಕಕ್ಷಾಸ ಉ ತ್ವೇ ಹ್ರದಾ ಇವ ಸ್ನಾತ್ವಾ ಉ ತ್ವೇ ದದೃಶ್ರೇ' ಇತಿ (ಎಂಬ) ಶ್ರುತಿಯ ಅಭಿಪ್ರಾಯವನ್ನು ಹೇಳುತ್ತಾರೆ[1] :—

ತೇ ಮುಕ್ತಾಃ—ಆ ಮುಕ್ತರು, ಸರ್ವೇ—ಎಲ್ಲರೂ, ಸಖಾಯಃ—ಪರಸ್ಪರ ಸ್ನೇಹವುಳ್ಳವರು, ಕಿಲ—(ಹೀಗೆಂಬುದು) ಶ್ರುತಿ ಸಿದ್ಧವು ; ಮುಕ್ತಾವಪಿ—ಮುಕ್ತಿಯಲ್ಲಿ ಸಹ, ಮನೋಜವೇ—ಬುದ್ಧಿಶಕ್ತಿಯ ವೇಗದಲ್ಲಿ, ಅಸಮಾಃ—ತರತಮ

---

ಸ್ನೇಹಿತರು ; ಆದರೂ ಬುದ್ಧಿಶಕ್ತಿಯ ವೇಗದಲ್ಲಿ (ಜ್ಞಾನಾದಿಗುಣಗಳಲ್ಲಿ) ಅಸಮರಾಗಿರುವರು, ಎಂದರೆ, ತರತಮ ಭಾವಗಳುಳ್ಳವರಾಗಿರುವರು ; ಶುದ್ಧ ಸ್ವರೂಪರಾದ ಈ ಎಲ್ಲ ಮುಕ್ತರೂ, ಸ್ವಸ್ವರೂಪರಿಂದ ಅತ್ಯಂತ ಅಭಿನ್ನರಾಗಿ,

---

1 ಉದಾಹೃತ ಶ್ರುತ್ಯರ್ಥವು ಹೀಗಿದೆ :—

(ಆ ಮುಕ್ತರು) ತ್ವೇ—ಕೆಲವರು, ಆದಘ್ನಾಸಃ—ಶ್ವೇತದ್ವೀಪದ ಸುತ್ತಲಿರುವ ಕ್ಷೀರ ಸಮುದ್ರದಲ್ಲಿ ಕಂಠಪರ್ಯಂತ (ಯಥೇಚ್ಛವಾಗಿ ಮುಳುಗಿ ಸ್ನಾನಮಾಡಿದವರು), ತ್ವೇ—ಮತ್ತೆ ಕೆಲವರು, ಉಪ—ಸಮೀಪದಲ್ಲಿ, ಕಕ್ಷಾಸಃ—(ಅಶ್ವತ್ಥ)ವನವುಳ್ಳವರು—ಅಲ್ಲಿ ವಿಹರಿಸುವವರು), ತ್ವೇ—ಮತ್ತು ಕೆಲವು ಮುಕ್ತರು, ಹ್ರದಾಃ ಇವ—ಸ್ವಚ್ಛವಾದ ಮಡುವಿನಂತೆ (ಸ್ವಸ್ವರೂಪದಿಂದ ಅಭಿನ್ನರೆಂಬುದನ್ನು ಸ್ಪಷ್ಟವಾಗಿ ಪ್ರಕಾಶಗೊಳಿಸುತ್ತಲೂ), ದದೃಶ್ರೇ—(ದದೃಶಿರೇ) ಕಾಣುತ್ತಿದ್ದರು (ಎಲ್ಲರೂ) ; ಅಕ್ಷಣ್ವಂತಃ—ಕಣ್ಣುಳ್ಳವರು, ಕರ್ಣವಂತಃ—ಕಿವಿಗಳುಳ್ಳವರು (ಮನೋಹರವಾದ ಅತಿಸುಂದರವಾದ, ಕಿವಿ ಮೊದಲಾದ—ಉಪಲಕ್ಷಣದಿಂದ ಕರಣಚರಣಾದಿ ಸರ್ವಾವಯವಗಳುಳ್ಳ) ಆಕಾರವಂತರು, ಸಖಾಯಃ – ಪರಸ್ಪರ ಮೈತ್ರೀಭಾವವುಳ್ಳವರು (ಪ್ರೀತಿಯುಕ್ತರು), ಮನೋಜವೇಷು – ಬುದ್ಧಿವ್ಯಾಪಾರಗಳಲ್ಲಿ, ಅಸಮಾ ಬಭೂವುಃ—ತಾರತಮ್ಯವುಳ್ಳವರು ಆಗಿರುತ್ತಿದ್ದರು; (ಹೀಗೆ ಮುಕ್ತರು ಭಿನ್ನರಾಗಿಯೇ ಅನ್ಯಮುಕ್ತರಿಂದ ಕಾಣಲ್ಪಡುತ್ತಿದ್ದರೆಂದು ಶ್ರುತಿಯು ಹೇಳುತ್ತಿದೆ) ; ಆದಘ್ನಾಸಃ ಎಂಬ ವಿಶೇಷಣದಿಂದ, ಸಾಮೀಪ್ಯ ಮುಕ್ತರನ್ನು, ಉಪಕಕ್ಷಾಸಃ ಎಂಬುದರಿಂದ ಸಾಲೋಕ್ಯ ಮುಕ್ತರನ್ನು, ಹ್ರದಾ ಇವ ಎಂಬುದರಿಂದ, ಗಾಢಮಾದಾತ್ಮ್ಯಯುಳ್ಳ, ಸ್ವಚ್ಛಸ್ವರೂಪರಾಗಿ ಭಗವಂತನ ಕರಣಚರಣಾದಿಗಳನ್ನು ಆಶ್ರಯಿಸಿರುವ ದೇವಾದಿ ಸಾಯುಜ್ಯ ಮುಕ್ತರನ್ನು ಸೂಚಿಸಿದಂತಾಗಿದೆ ; ಸಾರೂಪ್ಯ ಮುಕ್ತಿಯಂತೂ ಸರ್ವಮುಕ್ತರಿಗೆ ಸಿದ್ಧವೇ ಇದೆ ; ನಿರ್ದುಃಖತ್ವ ನಿತ್ಯಜ್ಞಾನತ್ವ ಮುಕ್ತತ್ವಾದಿ ಭಗವಂತನ ಧರ್ಮಗಳ ಸಾಮ್ಯರೂಪದ ಸಾರೂಪ್ಯವು ಎಲ್ಲರಿಗೂ ಇದೆ; ಈ ವಿವಿಧ ವಿಭಾಗಗಳುಳ್ಳ ಮುಕ್ತಿಯನ್ನು 'ವೈಕುಂಠ, ಶ್ವೇತದ್ವೀಪ ಅನಂತಾಸನಗಳಲ್ಲಿ ಯಥಾಯೋಗ್ಯವಾಗಿ, ಗ್ರಹಿಸಬೇಕು ; ಸ್ವರ್ಗಾದಿಗಳ ಸಮೀಪದಲ್ಲಿ ವಿಹಾರಮಾಡುವ ಮುಕ್ತರ ವಿಷಯವು ಮುಂದೆ ಪ್ರಸಕ್ತವಾಗಲಿದೆ.

ಭಾವವುಳ್ಳವರು (ಸಮರಲ್ಲ); ಸ್ವಚ್ಛ ರೂಪತ್ವಾತ್–(ಎಲ್ಲರೂ) ಶುದ್ಧವಾದ ಸ್ವರೂಪವುಳ್ಳವರಾದ್ದರಿಂದ, ಹ್ರದಾ ಇವ–ಆಳವಾದ ತಿಳಿನೀರಿನ ಜಲಾಶಯದಂತೆ, ಮನೋಹರಾಃ–ಮನಸ್ಸಿಗೆ ಆಕರ್ಷಕರಾಗಿರುವರು.

**ಮನೋಜ್ಞಕರ್ಣವಂತಶ್ಚ ಮನೋಜ್ಞಾಕ್ಷ್ಯಾದಿಸುಂದರಾಃ ।**
**ಪ್ರತ್ಯಯೋ ಯತ್ಪ್ರಕೃತ್ಯರ್ಥಪ್ರಾಶಸ್ತ್ಯಂ ಚ ವದೇತ್ಕಿಲ ॥ ೨೩೯ ॥**

**ಪ್ರಶಸ್ತತಾ ಚ ಕರ್ಣಾದೇರ್ಜ್ಞಾನಾನಂದಾತ್ಮತೈವ ಹಿ ।**
**ಅತೋ ನಿರಾಕಾರತೈಷಾಂ ನೈವ ವಾಚ್ಯಾ ಕದಾಚನ ।**
**ಶ್ರೋತ್ರನೇತ್ರಫಲಸ್ಯಾಪ್ತೇರಪಿ ತೇ ತತ್ಪದೋದಿತಾಃ ॥ ೨೪೦ ॥**

**ಸ್ಪಷ್ಟೈತದ್ವಾಕ್ಯಬಲತೋ ಯತ್ರತ್ವಸ್ಯೇತಿ ವಾಗಪಿ ।**
**ಉಕ್ತರೀತ್ಯಾ ತರ್ಕಮುದ್ರಾಮಾಶ್ರಿತ್ಯೈವೇತಿ ಗಮ್ಯತೇ ॥ ೨೪೧ ॥**

ಮನೋಜ್ಞಕರ್ಣವಂತಃ – (ಶ್ರುತಿಗತವಾದ ಅಕ್ಷಣ್ವಂತಃ ಇತ್ಯಾದಿಗಳ ಭಾವಾರ್ಥವನ್ನು ವಿವರಿಸುತ್ತಾ) ಮನೋಹರವಾದ ಕಿವಿಗಳುಳ್ಳವರೂ, ಮನೋಜ್ಞಾಕ್ಷ್ಯಾದಿಸುಂದರಾಃ–ಮನೋಹರವಾದ ಕಣ್ಣು (ಕರಚರಣಾದಿ)ಗಳಿಂದ ದಿವ್ಯ ಸುಂದರರೂ (ಮುಕ್ತರೇ ಆಗಿರುವರು) ಯತ್–ಏಕೆಂದರೆ, ಪ್ರತ್ಯಯಃ–'ಮತು' ಪ್ರತ್ಯಯವು, ಪ್ರಕೃತ್ಯರ್ಥಪ್ರಾಶಸ್ತ್ಯಂ ಚ–ಪ್ರಕೃತಿಶಬ್ದದ ಉತ್ತಮತ್ವವನ್ನೂ,

---

ಆಳವಾದ ತಿಳಿನೀರಿನ ಮಡುವಿನಂತೆ, ಸರ್ವರಿಗೆ ಆಕರ್ಷಕರಾಗಿರುವರು— ಸರ್ವರೂ ಮನೋಹರ ಸ್ವರೂಪರೇ ಆಗಿರುವರು (೨೩೮). ಸರ್ವಮುಕ್ತರೂ, ಮನೋಹರವಾದ ಕಿವಿಗಳುಳ್ಳವರೂ, ಮನೋಹರವಾದ ಕಣ್ಣು ಮೊದಲಾದ ಅವಯವಗಳುಳ್ಳವರೂ (ಕರಚರಣಾದಿಗಳಿಂದ ದಿವ್ಯಸುಂದರ ರೂಪವುಳ್ಳವರು) ಆಗಿರುವರು; 'ಮತು' ಪ್ರತ್ಯಯವು, ಮೂಲಶಬ್ದದ (ಪ್ರಕೃತಿಯ) ಪ್ರಾಶಸ್ತ್ಯವನ್ನು ಹೇಳುತ್ತದೆಂಬ ನಿಯಮದಿಂದ, ಪ್ರಶಸ್ತವಾದ ಕರ್ಣ, ಅಕ್ಷಿಗಳನ್ನುಳ್ಳವರೆಂದು ಸಿದ್ಧವಾಗುತ್ತದೆ; ದೇಹದ ಅವಯವಗಳಿಗೆ ಪ್ರಾಶಸ್ತ್ಯವೆಂಬುದು, ಅವೆಲ್ಲವೂ ಜ್ಞಾನಾನಂದ ಸ್ವರೂಪದವುಗಳೆಂಬುದೇ ಆಗಿದೆ; ಆದ್ದರಿಂದ ಮುಕ್ತರಿಗೆ ನಿರಾಕಾರತ್ವವನ್ನು, ಎಂದಿಗೂ ಹೇಳತಕ್ಕದ್ದಲ್ಲ—ಅವರೆಲ್ಲರೂ ದಿವ್ಯಸುಂದರ

(ಕಣ್ಣು, ಕಿವಿ ಮೊದಲಾದವುಗಳ ಶ್ರೇಷ್ಠತೆಯನ್ನು) ವದೇತ್ ಕಿಲ–ಹೇಳುವುದಷ್ಟೆ (ತಿಳಿಸುವುದೆಂಬ ನಿಯಮವಿರುತ್ತದೆಯಲ್ಲವೇ?) ಕರ್ಣಾದೇಃ–ಕಿವಿ ಮುಂತಾದ ಅಂಗಗಳ, ಪ್ರಶಸ್ತತಾ ಚ–ಪ್ರಶಸ್ತತೆಯಾದರೋ (ಶ್ರೇಷ್ಠತೆಯಾದರೂ), ಹಿ–ಯಾವ ಕಾರಣದಿಂದ, ಜ್ಞಾನಾನಂದಾತ್ಮತಾ ಏವ–(ಅವೆಲ್ಲವೂ) ಜ್ಞಾನಾನಂದ ಸ್ವರೂಪಗಳೇ ಆಗಿರುವುದೇ ಆಗಿದೆಯೋ, ಅತಃ–ಆದ್ದರಿಂದ, ಏಷಾಂ–ಮುಕ್ತರ, ನಿರಾಕಾರತಾ – ನಿರಾಕಾರತ್ವವು (ಮುಕ್ತರು ಆಕಾರ ಶೂನ್ಯರೆಂಬುದು), ಕದಾಚನ–ಎಂದಿಗೂ, ನೈವ ವಾಚ್ಯಾ–ಹೇಳತಕ್ಕ ನುಡಿಯಲ್ಲ; ಶ್ರೋತ್ರ ನೇತ್ರ ಫಲಸ್ಯ ಆಪ್ತೇಃ–ಕಿವಿಕಣ್ಣುಗಳ ಮುಖ್ಯಫಲದ ಪ್ರಾಪ್ತಿಯಿರುವುದರಿಂದ, ಅಪಿ–ಸಹ, ತೇ – ಮುಕ್ತರ ಶ್ರೋತ್ರನೇತ್ರಗಳು, ತತ್ಪದೋದಿತಾಃ–ಆ ಶಬ್ದಗಳಿಂದ ವಾಚ್ಯಗಳಾಗಿವೆ. ಏತದ್ವಾಕ್ಯಬಲತಃ–ಈ ('ಅಕ್ಷಣ್ವಂತಃ'–ಇತ್ಯಾದಿ) ಶ್ರುತಿ ವಾಕ್ಯಬಲದಿಂದ, ಯತ್ರತ್ವಸ್ಯೇತಿವಾಕ್ ಅಪಿ–('ಯತ್ರತು.... ತತ್ರ ಮಾಮ-ಮೃತಂ ಕೃಧಿ' ಎಂಬ) 'ಯತ್ರ ತು' ಎಂಬ ಶ್ರುತಿಯೂ, ಸ್ಪಷ್ಟಾ–ಸ್ಪಷ್ಟವಾಗಿ (ಮುಕ್ತರ ಆಕಾರ, ವ್ಯಾಪಾರ, ವಿಹಾರಾದಿಗಳನ್ನು), ಉಕ್ತರೀತ್ಯಾ–ಈ ಹಿಂದೆ ಹೇಳಿದಂತೆ, ತರ್ಕಮುದ್ರಾಂ–ತರ್ಕ ಪರಿಯನ್ನು, ಆಶ್ರಿತ್ಯ ಏವ–ಆಶ್ರಯಿಸಿಯೇ (ಹೇಳುತ್ತದೆಂದು), ಇತಿ–ಎಂದು, ಗಮ್ಯತೇ–ತಿಳಿದುಬರುತ್ತದೆ.

**ಮುಕ್ತಿಕಾಲೇ ಯತಸ್ತೇಷಾಂ ಮಹಿಮಾನ ಇತಿ ಶ್ರುತೌ ।**
**ಮಹಿಮೋಕ್ತಿಃ ಶೂನ್ಯಭಾವೋ ಮುಕ್ತಾನಾಮುಚಿತೋ ನ ತತ್**

॥ ೨೪೨ ॥

ಯತಃ–ಯಾವ ಕಾರಣದಿಂದ, ಮಹಿಮಾನ ಇತಿ ಶ್ರುತೌ–'ತೇಹ ನಾಕಂ ಮಹಿಮಾನ' ಎಂಬ ಶ್ರುತಿಯಲ್ಲಿ, ತೇಷಾಂ – ಮುಕ್ತರಿಗೆ, ಮುಕ್ತಿಕಾಲೇ–

---

ದೇಹಗಳುಳ್ಳವರೇ ಆಗಿರುವರು; ಕಿವಿ ಕಣ್ಣುಗಳ ಮುಖ್ಯ ಫಲವುಳ್ಳವರಾದ್ದರಿಂದ, ಅವರೇ ಕಿವಿ ಕಣ್ಣುಳ್ಳವರೆಂದು ಹೇಳಲ್ಪಡುವರು ಮತ್ತು ಅವರ ಕಿವಿಕಣ್ಣುಗಳೇ ಕಿವಿಕಣ್ಣುಗಳೆನಿಸುತ್ತವೆ; 'ಯತ್ರ ತ್ವಸ್ಯ' ಎಂಬ ಶ್ರುತಿಯೂ, ಇದನ್ನೇ ಸ್ಪಷ್ಟವಾಗಿ ತರ್ಕರೀತಿಯನ್ನು ಬಳಸಿ, ನಿರೂಪಿಸುತ್ತದೆ; ಮುಕ್ತರ, ಆಕಾರ, ವ್ಯಾಪಾರ, ವಿಹಾರಾದಿಗಳೆಲ್ಲವೂ ತರ್ಕಬದ್ಧವಾಗಿಯೇ ಅಲ್ಲಿ ನಿರೂಪಿಸಲ್ಪಡುತ್ತವೆ (೨೩೯–೨೪೧). 'ತೇ ಹ ನಾಕಂ ಮಹಿಮಾನಃ' ಎಂಬ ಶ್ರುತಿಯು,

ಮುಕ್ತಿಕಾಲದಲ್ಲಿ, ಮಹಿಮಾ ಉಕ್ತಃ – ಮಹಿಮೆಯು (ಅಧಿಕವಾದ ಗುಣಗಳು) ಹೇಳಲಾಗಿದೆಯೋ, ತತ್–ಆದ್ದರಿಂದ (ಆ ಕಾರಣದಿಂದಲೇ), ಮುಕ್ತಾನಾಂ–ಮುಕ್ತರಿಗೆ, ಶೂನ್ಯಭಾವಃ–ಗುಣಾಭಾವವು (ಶೂನ್ಯಭಾವವು), ಉಚಿತಃ ನ–ಉಚಿತವಲ್ಲ (ಹೇಳಲು ಯೋಗ್ಯವಲ್ಲ).

**ನಂದಂತಿ ಕಿಲ ತೇ ಸರ್ವೇ ಕ್ಲೇಶಲೇಶಶ್ಚ ತೇಷು ನ ।**
**ಅತೋ ಮುಕ್ತಕಥೈವೇಯಂ ತತ್ಪೂರ್ವಾ ವಾಕ್ಚ ಮೌಕ್ತಿಕಾ** ॥ ೨೪೩ ॥

ಉತ್ತರ ವಾಕ್ಯಗಳ ಬಲದಿಂದ, ಶ್ರುತಿಯ ಈ ಪ್ರಕರಣವು ಮುಕ್ತ ಪ್ರಕರಣವೆಂದು ಸ್ಪಷ್ಟವಾಗುತ್ತದೆನ್ನುತ್ತಾರೆ :—

ತೇ ಸರ್ವೇ–ಆ ಎಲ್ಲರೂ, ನಂದಂತಿ ಕಿಲ–ನಲಿಯುತ್ತಿರುವರಷ್ಟೆ; ತೇಷು–ಅದರಲ್ಲಿ, ಕ್ಲೇಶಲೇಶಶ್ಚ-ಅಲ್ಪದುಃಖವಾದರೂ (ಮನೋವ್ಯಥೆಯ ಲೇಶವಾದರೂ), ನ–ಇರುವುದಿಲ್ಲ; (ಮುಕ್ತರಲ್ಲದ ಬೇರೆ ಸರ್ವರೂ ಹೀಗಿರುವುದು ಶಕ್ಯವೇ ಇಲ್ಲ);[1] ಅತಃ-ಈ ಕಾರಣದಿಂದ, ಇಯಂ–ಇದು, ಮುಕ್ತಕಥಾ ಏವ-ಮುಕ್ತರ ವಿಷಯವೇ (ಆಗಿದೆ); ತತ್–ಆದ್ದರಿಂದ, ಪೂರ್ವಾ ವಾಕ್–'ಅಕ್ಷಣ್ವಂತಃ' ಇತ್ಯಾದಿ ಹಿಂದಿನ ವಾಕ್ಯವು, ಮೌಕ್ತಿಕಾ ವಾಕ್ ಚ–ಮುಕ್ತ ವಿಷಯಕ ವಾಕ್ಯವೇ ಆಗಿದೆ.

**ಪರಂಜ್ಯೋತಿರುಪಪ್ರಾಪ್ಯ ನಿಷ್ಪನ್ನನಿಜರೂಪವಾನ್ ।**
**ಪರ್ಯೇತಿ ಮುಕ್ತಿಸ್ಥಾನೇಷು ಸ್ತ್ರೀಭಿರ್ಯಾನೈಶ್ಚ ಸಂಯುತಃ** ॥ ೨೪೪ ॥

---

ಮುಕ್ತಿದಶಾದಲ್ಲಿ ಮುಕ್ತಜೀವರ ಮಹಿಮೆಯನ್ನು ಹೇಳುವುದರಿಂದ, ಮುಕ್ತರಿಗೆ ಗುಣಶೂನ್ಯತ್ವವು (ಗುಣಾಭಾವವು) ಯೋಗ್ಯವಲ್ಲ (ಹೇಳುವುದು ಉಚಿತವಾಗುವುದಿಲ್ಲ) (೨೪೨). ಮುಕ್ತರೆಲ್ಲರೂ ನಲಿಯುತ್ತಿರುವರೆಂದೂ, ಅವರಲ್ಲಿ ದುಃಖಲೇಶವೂ ಇರುವುದಿಲ್ಲವೆಂದೂ ಹೇಳಿರುವುದರಿಂದ, ಇದು ಮುಕ್ತರ ವೃತ್ತಾಂತವೇ ಆಗಿದೆ; ಹಿಂದಿನ 'ಅಕ್ಷಣ್ವಂತಃ' ಇತ್ಯಾದಿ ವಾಕ್ಯವೂ ಮುಕ್ತರ ವಿಷಯವಾದುದೇ ಆಗಿದೆ-ಸಂಶಯವಿಲ್ಲ (೨೪೩). 'ಪರಂಜ್ಯೋತಿರುಪಸಂಪದ್ಯ'

---

1 'ಸಖಾಯಃ' ಎಂದು ಸರ್ವರೂ ಸಖರೆಂದೂ ಹೇಳಲಾಗಿದೆ; 'ಋಚಾಂ ತ್ವಃ ಪೋಷಮಾಸ್ತೇ' ಇತ್ಯಾದಿ ಶ್ರುತಿಯು ಹೇಳುವ, ವೇದಬಾಹುಲ್ಯವಂತನೆಂಬ ಲಕ್ಷಣವು, ಮುಕ್ತಾನ್ಯರಲ್ಲಿ ಕೂಡುವುದಿಲ್ಲ; ಆದ್ದರಿಂದ ಇಲ್ಲಿ ಹೇಳುವುದೆಲ್ಲವೂ ಮುಕ್ತವೃತ್ತಾಂತವೇ ಆಗಿದೆ.

**ರಮಮಾಣೋ ಹಸನ್ ಕ್ರೀಡನ್ ಜ್ಞಾತ್ಯಜ್ಞಾತಿಜನೈಃ ಸಹ ।**
**ಇತಿ ಮುಕ್ತಸ್ಯ ಸೌಭಾಗ್ಯಂ ಶ್ರುತಿರಾಹ ಪದೇಪದೇ ॥ ೨೪೫ ॥**

**ಅತೋ ದ್ವಿತೀಯಶೂನ್ಯತ್ವಮದ್ರಷ್ಟೃತ್ವಮವಕ್ತೃತಾಂ ।**
**ಅಶ್ರೋತೃತ್ವಂ ಶ್ರುತಿಪ್ರೋಕ್ತಚಿತ್ರಭೋಗೇಷ್ವಭೋಕ್ತೃತಾಂ॥೨೪೬॥**

ಅತಃ–(ಮುಕ್ತವಿಹಾರವು ಹೀಗೆ ವರ್ಣಿತವಾಗಿರುವುದರಿಂದ) ಈ ಕಾರಣ ದಿಂದ, ದ್ವಿತೀಯ ಶೂನ್ಯತ್ವಂ–ಅದ್ವಿತೀಯವೆಂದೂ (ಅಸಂಖ್ಯ ಮುಕ್ತರಿರುವಾಗ ಏಕತ್ವವನ್ನೂ), ಅದ್ರಷ್ಟೃತ್ವಂ – ಕಣ್ಣಿಲ್ಲದಿರುವಿಕೆಯನ್ನೂ, ಅವಕ್ತೃತಾಂ – ಮೂಕತ್ವವನ್ನೂ, ಅಶ್ರೋತೃತ್ವಂ – ಕಿವುಡುತನವನ್ನೂ, ಶ್ರುತಿಪ್ರೋಕ್ತಚಿತ್ರ-ಭೋಗೇಷು (ಸತ್ಸು)–ಶ್ರುತಿಯು ಹೇಳುವ ವಿಚಿತ್ರಭೋಗಗಳು ಇರುತ್ತಿರುವಲ್ಲಿ, ಅಭೋಕ್ತೃತಾಂ – ಭೋಗಶೂನ್ಯತ್ವವನ್ನೂ, (ಮುಕ್ತಿಂ ಕೋ ನಾಮ ವೈದಿಕಃ ಬ್ರೂಯಾತ್–ವೈದಿಕನೆಂಬುವ ಯಾವನು ಹೇಳಬಹುದು? ಎಂದು ಮುಂದಿನ ಶ್ಲೋಕದಿಂದ ಅನ್ವಯವನ್ನು ತಿಳಿಯಬೇಕು.)

'ಪರಂಜ್ಯೋತಿರೂಪಸಂಪದ್ಯ' ಎಂಬ ಶ್ರುತಿಯಿಂದಲೂ ಮುಕ್ತರ ಸೌಭಾಗ್ಯ ವನ್ನು ಪ್ರದರ್ಶಿಸಿ, ಈ ಮುಂತಾದ ಬಹುತರವಾಕ್ಯಗಳು ನಿರವಕಾಶಾರ್ಥವನ್ನು ಹೇಳುವುವೆಂದೂ, ಬಾಧಿಗಳೆಂಬರ್ಥವನ್ನಲ್ಲವೆಂದೂ ನಿರೂಪಿಸುತ್ತಾರೆ :—

---

ಎಂಬ ಶ್ರುತಿಯು, ಜೀವನು ಪರಂಜ್ಯೋತಿ ಸ್ವರೂಪನಾದ ಪರಬ್ರಹ್ಮನನ್ನು ಸಮೀಪದಲ್ಲಿ ಹೊಂದಿ, ಸ್ವಸ್ವರೂಪದ ಆವಿರ್ಭಾವವುಳ್ಳವನಾಗಿ (ಪ್ರಕಟವಾದ ಸ್ವರೂಪವುಳ್ಳವನಾಗಿ), ಮುಕ್ತವಿಹಾರ ಸ್ಥಾನಗಳಲ್ಲಿ, ವಾಹನಗಳಿಂದಲೂ, ಸ್ತ್ರೀಯರಿಂದಲೂ, ಸಹಿತನಾಗಿ, ಸುತ್ತುತ್ತ, ಇಚ್ಛಾನುಸಾರವಾದ ಭೋಗ ವುಳ್ಳವನಾಗಿ ಸದಾ ಹಸನ್ಮುಖಿಯಾಗಿಯೇ ಇರುತ್ತಾ, ಜ್ಞಾತಿಗಳಿಂದಲೂ, ಅಜ್ಞಾತಿಗಳಿಂದಲೂ (ಜ್ಞಾತಿಗಳಿಲ್ಲದ ಮುಕ್ತರಿಂದಲೂ) ಕೂಡಿಕೊಂಡು, ಸ್ವೇಚ್ಛೆ ಯಿಂದ ಕ್ರೀಡಿಸುತ್ತಾನೆ; ಹೀಗೆಂದು ಮುಕ್ತನ ಸೌಭಾಗ್ಯವನ್ನು ಶ್ರುತಿಯು ಮೇಲಿಂದ ಮೇಲೆ ವರ್ಣಿಸುತ್ತದೆ; ಆದ್ದರಿಂದ, ಮುಕ್ತನು ಅದ್ವಿತೀಯನೆಂಬುದೂ (ಮುಕ್ತನ ಐಕ್ಯವೂ), ನೋಡದವನು, ಮಾತಾಡದವನು, ಕೇಳದವನು ಎಂದು ಮುಂತಾಗಿ, ಶ್ರುತ್ಯುಕ್ತ ವಿವಿಧ ಭೋಗಗಳುಳ್ಳ ಮುಕ್ತನಿಗೆ ಭೋಗರಾಹಿತ್ಯವನ್ನು ಹೇಳುವುದು, ಶೂನ್ಯವಾದಿಯ ಮೋಕ್ಷ ಸದೃಶವೆಂದೇ ಆಗುತ್ತದೆ (೨೪೪–೨೪೬).

ಪರಂಜ್ಯೋತಿಃ–ಶ್ರೀಹರಿಯನ್ನು (ಪರಂಜ್ಯೋತಿಯನ್ನು), ಉಪಪ್ರಾಪ್ಯ–ಸಮೀಪದಲ್ಲಿ ಹೊಂದಿ, ನಿಷ್ಪನ್ನ ನಿಜರೂಪವಾನ್–ಪ್ರಕಟವಾದ ಸ್ವಸ್ವರೂಪವುಳ್ಳವನಾಗಿ, ಮುಕ್ತಿ ಸ್ಥಾನೇಷು–ಮುಕ್ತ ವಿಹಾರ ಸ್ಥಾನಗಳಲ್ಲಿ, ಸ್ತ್ರೀಭಿಃ–ಸ್ತ್ರೀಯರಿಂದಲೂ, ಯಾನೈಶ್ಚ – ವಾಹನಗಳಿಂದಲೂ ಸಂಯುತಃ – ಕೂಡಿ. ಪರ್ಯೇತಿ–ಸುತ್ತುವನು ; ಜ್ಞಾತ್ಯಜ್ಞಾತಿಜನೈಃ ಸಹ–ಜ್ಞಾತಿ, ಅಜ್ಞಾತಿಗಳಾದ, ಮುಕ್ತ ಪ್ರಜೆಗಳಿಂದ ಸಹಿತನಾಗಿ, ಹಸನ್–ನಗುತ್ತ, ಕ್ರೀಡನ್–ಕ್ರೀಡಿಸುತ್ತ, ರಮಮಾಣಃ–ಆನಂದಿಸುವನಾಗುತ್ತಾನೆ ; . ಇತಿ–ಎಂದು, ಮುಕ್ತಸ್ಯ – ಮುಕ್ತನ (ಮೋಕ್ಷದಲ್ಲಿರುವ ಜೀವನ), ಸೌಭಾಗ್ಯಂ–ಸುಖವಿಶೇಷವನ್ನು, ಶ್ರುತಿಃ–ವೇದವು, ಪದೇ ಪದೇ–ಪುನಃ ಪುನಃ, ಆಹ–ಹೇಳುತ್ತದೆ.

**ಶೂನ್ಯವಾದ್ಯುಕ್ತಮೋಕ್ಷಾಭಾಂ ಮುಕ್ತಿಂ ಕೋ ನಾಮ ವೈದಿಕಃ ।**
**ಬ್ರೂಯಾಚ್ಛ್ರುತಿಂ ಬಾಧಿತಾರ್ಥಾಂ ಸ್ಪಷ್ಟಶ್ರುತಿಸಮಾಖ್ಯಯಾ ।**
**ಯೋಗ್ಯಾರ್ಥೇ ಪ್ರಣಯೇನ್ನೋ ಚೇನ್ಮೀಮಾಂಸಾ ಕಿಂ ನಿಬಂಧನಾ ॥ ೨೪೭ ॥**

**ಅತಶ್ಛಂದಸಿ ಮರ್ಯಾದಾಮೇವಮೇವೇತಿ ಶಾಬ್ದಿಕಾಃ ।**
**ನೈವಾಹ ಶಬ್ದವ್ಯತ್ಯಾಸಂ ವಿಭಕ್ತಿಪ್ರತ್ಯಯಾದಿ ಚ ।**
**ಅಬಾಧಿತಾರ್ಥಲಾಭಾರ್ಥಮೇವ ಪ್ರಾಹ ಪದೇ ಪದೇ ॥ ೨೪೮ ॥**

ಮುಕ್ತಿಂ – ಮುಕ್ತಿಯನ್ನು, ಶೂನ್ಯವಾದ್ಯುಕ್ತಮೋಕ್ಷಾಭಾಂ – ಶೂನ್ಯವಾದಿಯು ಹೇಳುವ ಮುಕ್ತಿ ಸದೃಶವಾದುದೆಂದು, ಕೋ ನಾಮ–ಯಾವನೊಬ್ಬ,

---

ಶೂನ್ಯವಾದಿ ಸದೃಶ ಮೋಕ್ಷವನ್ನು ಯಾವನೊಬ್ಬ ವೇದಜ್ಞಾನಿಯು ಹೇಳಬಹುದು ? (ಯಾವ ವಿವೇಕಿಯೂ ಹೇಳುವುದಿಲ್ಲ) ; ನಿರವಕಾಶ ಶ್ರುತಿಸಮಾಖ್ಯೆಯಿಂದ, ಬಾಧಿತವಾದ ಅರ್ಥವನ್ನು ಹೇಳುವಂತೆ ತೋರುವುದನ್ನು ಯೋಗ್ಯಾರ್ಥದಲ್ಲಿ ಯೋಜನೆ ಮಾಡಿಕೊಳ್ಳಬೇಕು ; ಹಾಗಲ್ಲದೇ ಆಪಾತತಃ ತೋರುವ ಅರ್ಥವನ್ನೇ ತಿಳಿದರೆ, ವೇದಮೀಮಾಂಸೆಯು (ಜಿಜ್ಞಾಸೆಯು–ವಿಚಾರವು) ಏಕೆ ಅವಶ್ಯಕವು ? ಈ ಕಾರಣದಿಂದಲೇ ಶಬ್ದಶಾಸ್ತ್ರ ಪ್ರವೀಣರು ಸಹ, ಶ್ರುತ್ಯರ್ಥಗಳನ್ನು ನಿಶ್ಚಯಿಸಿಕೊಳ್ಳಲು ನಿರ್ಬಂಧಗಳನ್ನು ಹೇರದೇ, ಶಬ್ದ–ವಿಭಕ್ತಿ

ವೈದಿಕಃ–ವೇದಾರ್ಥಜ್ಞಾನಿಯು, ಶ್ರುತಿಂ–'ಯತ್ರ ತ್ವಸ್ಯ' ಎಂಬ ಶ್ರುತಿಯನ್ನು (ಶ್ರುತ್ಯರ್ಥವನ್ನು), ಬ್ರೂಯಾತ್–ಹೇಳಿಯಾನು? (ಯಾರೂ ಹೇಳುವುದಿಲ್ಲ); ಸ್ಪಷ್ಟಶ್ರುತಿಸಮಾಖ್ಯಯಾ–ನಿರವಕಾಶಾರ್ಥ ಬೋಧಕವಾದ ಶ್ರುತಿ ಸಮಾಖ್ಯೆಯಿಂದ, ಬಾಧಿತಾರ್ಥಾಂ–ಬಾಧಿತವೆಂದು ತೋರುವ ಅದರ ಅರ್ಥವನ್ನು, ಯೋಗ್ಯಾರ್ಥೇ–ಯೋಗ್ಯವಾದ ಅರ್ಥದಲ್ಲಿಯೇ, ಪ್ರಣಯೇತ್–ಯೋಜಿಸಿಕೊಳ್ಳಬೇಕು; ನೋ ಚೇತ್–ಹಾಗಲ್ಲದಿದ್ದರೆ (ಮೇಲೆ ತೋರುವ ಅರ್ಥವನ್ನೇ ಹಿಡಿಯುವುದಾದರೆ), ಮೀಮಾಂಸಾ–ವೇದ ಮೀಮಾಂಸೆಯು (ಪೂರ್ವಾಪರ ವಿಚಾರವು), ಕಿಂ ನಿಬಂಧನಾ–ಯಾವುದಕ್ಕಾಗಿ ಅವಶ್ಯಕ? (ಮೀಮಾಂಸೆಯೇ ಅನಾವಶ್ಯಕವೆಂದಾಗುತ್ತದೆ); ಅತಃ–ಈ ಕಾರಣದಿಂದ, ಶಾಬ್ದಿಕಃ–ವೈಯಾಕರಣಿಯು, ಛಂದಸಿ–ಶ್ರುತಿಗಳಲ್ಲಿ, ಮರ್ಯಾದಾಂ–ಅರ್ಥ ಮರ್ಯಾದೆಯನ್ನು ಏವಂ ಏವ ಇತಿ–ಹೀಗೆಯೇ ಎಂದು, ಶಬ್ದವ್ಯತ್ಯಾಸಂ–ಶಬ್ದವ್ಯತ್ಯಾಸವನ್ನು, ವಿಭಕ್ತಿವ್ಯತ್ಯಾಯಾದಿ ಚ–ವಿಭಕ್ತಿವ್ಯತ್ಯಾಸಾದಿಯನ್ನೂ, ನೈವಾಹ–ಹೇಳಲಿಲ್ಲವು; ಪದೇ ಪದೇ–ಮತ್ತೆ ಮತ್ತೆ, ಏವಂ–ಹೀಗೆ, ಅಬಾಧಿತಾರ್ಥಲಾಭಾಯ–ಅವಿರುದ್ಧವಾದ ಅರ್ಥ ಲಾಭಕ್ಕಾಗಿಯೇ, ಆಹ–ಹೇಳಿರುವನು (ಅಬಾಧಿತವಾದ ಅರ್ಥವು ವೇದ ವಾಕ್ಯದಿಂದ ಸಿದ್ಧವಾಗಬೇಕಾದುದು ಮುಖ್ಯವಲ್ಲದೇ ಶಬ್ದಗಳ ಹಾಗೂ ವಿಭಕ್ತಿಗಳ ವ್ಯತ್ಯಾಸಗಳ ವ್ಯತ್ಯಾಸವನ್ನು ಗಮನಿಸಬೇಕೆಂದು ಬಲಾತ್ಕಾರವಾಗಿ ವಿಧಿಸಿರುವುದಿಲ್ಲ).

**ತಸ್ಮಾತ್ಕ್ವಾಚಿತ್ಕೈಕ್ಯವಾಕ್ಯಮುಪಾದಾಯ ಬಹುಶ್ರುತೀಃ ।**
**ನೋಪೇಕ್ಷಯೇತ್ತಾದೃಗರ್ಥಂ ತಸ್ಯೈಕ್ಯಸ್ಯ ಪರಂ ವದೇತ್ ॥ ೨೪೯ ॥**

ತಸ್ಮಾತ್–ಆದ್ದರಿಂದ, ಕ್ವಾಚಿತ್ಕಐಕ್ಯವಾಕ್ಯಂ–ಒಂದೆಡೆಯಲ್ಲಿರುವ ಐಕ್ಯ ವಾಕ್ಯವನ್ನು, ಉಪಾದಾಯ–ಹಿಡಿದುಕೊಂಡು, ಬಹುಶ್ರುತೀಃ–(ಭೇದವನ್ನು

---

ವ್ಯತ್ಯಾಸಗಳ ಮರ್ಯಾದೆಯನ್ನು, ಹೀಗೆಂದೇ ವಿಧಿಸಿರುವುದಿಲ್ಲ (ಯೋಗ್ಯಾರ್ಥವನ್ನು ತಿಳಿಯಲು ವ್ಯತ್ಯಾಸಗಳನ್ನು ಮಾಡಿಕೊಳ್ಳಲು ಅವಕಾಶವಿತ್ತಿದ್ದಾರೆ); ಅಬಾಧಿತವಾದ (ಅವಿರುದ್ಧವಾದ ಅರ್ಥಲಾಭಕ್ಕಾಗಿಯೇ ಹೀಗೆ ಹೇಳಿರುವರು, (೨೪೭–೨೪೮). ಆದ್ದರಿಂದ ಶ್ರುತಿಗಳಲ್ಲಿ ಒಂದೆಡೆಯಲ್ಲಿರುವ ಐಕ್ಯಪರವೆಂಬ ವಾಕ್ಯವನ್ನು ಹಿಡಿದು, ಬಹುಶ್ರುತಿಗಳಿಗೆ ವಿರೋಧವಾಗಿ, ಅವುಗಳನ್ನು ಉಪೇಕ್ಷಿಸಿ

ಹೇಳುವ) ಬಹುಶ್ರುತಿಗಳನ್ನು, ನ ಉಪೇಕ್ಷಯೇತ್–ಉದಾಸೀನ ಮಾಡುವುದು (ಗಣಿಸದಿರುವುದು) ಸರಿಯಲ್ಲ (ಉಪೇಕ್ಷೆಮಾಡತಕ್ಕದ್ದಲ್ಲ); ಪರಂ-ಮತ್ತೇನೆಂದರೆ, ತಸ್ಯ ಐಕ್ಯಸ್ಯ–ಆ ಐಕ್ಯವಾಕ್ಯಕ್ಕೆ ತಾದೃಗರ್ಥಂ-ಬಹುಶ್ರುತಿಗಳಿಗೆ ಅನುಕೂಲವಾದ ಅರ್ಥವನ್ನೇ, ವದೇತ್–ಹೇಳತಕ್ಕದ್ದು.

**ವ್ಯತ್ಯಾಸೇನ ವ್ಯತ್ಯಯೇನ ವೃತ್ತ್ಯಾ ವಾ ಲೋಕಸಿದ್ಧಯಾ ।**
**ಕಥಂ ಮೀಮಾಂಸಕಸ್ಯಾರ್ಥಃ ಸರ್ವಾನುಭವಬಾಧಿತಃ ॥ ೨೫೦ ॥**

ಲೋಕಸಿದ್ಧಯಾ – ಲೋಕಸಿದ್ಧವಾದ (ಲೋಕದಲ್ಲಿ ಕಂಡುಬರುವ), ವೃತ್ತ್ಯಾ ವಾ-ಚೌರ್ಯಾದಿ ವೃತ್ತಿಗಳಿಂದಾಗಲಿ, ವ್ಯತ್ಯಾಸೇನ-ವ್ಯತ್ಯಾಸದಿಂದಾಗಲಿ (ಭೇದದಿಂದಾಗಲಿ), ವ್ಯತ್ಯಯೇನ–ಅವುಗಳ ಫಲವ್ಯತ್ಯಾಸದಿಂದಾಗಲಿ (ಕಳ್ಳನಿಗೆ ಹಸ್ತಾದಿಗಳರಾಹಿತ್ಯ ಮುಂತಾದವುಗಳಿಂದಾಗಲಿ), ಕಥಂ-ಹೇಗೆ, ಮೀಮಾಂಸಕಸ್ಯ – ವೇದವಿಚಾರಪರವಾದ (ಮೀಮಾಂಸಕನ), ಅರ್ಥಃ – ವೇದಾರ್ಥವು, ಸರ್ವಾನುಭವಬಾಧಿತಃ – ಸರ್ವರ ಅನುಭವ ವಿರೋಧವುಳ್ಳದ್ದು (ಆಗುತ್ತದೆ? ಶಕ್ಯವಿಲ್ಲ); (ಲೋಕಾನುಭವ ವಿರೋಧವಿಲ್ಲದಂತೆ ಶ್ರುತ್ಯರ್ಥಗಳನ್ನು ತಿಳಿಯಬೇಕಾದುದು ಅವಶ್ಯಕ).

**ಯತಃ ಸಾಧನವೈಚಿತ್ರ್ಯಂ ದೇವರ್ಷ್ಯಾದಿಷು ದೃಶ್ಯತೇ ।**
**ಅತಃ ಫಲೇಪಿ ವೈಚಿತ್ರ್ಯಂ ತತೋ ಮುಕ್ತಾಃ ಪರಾವರಾಃ ॥ ೨೫೧ ॥**

'ಸೈಷಾನಂದಸ್ಯ ಮೀಮಾಂಸಾ ಭವತಿ' ಎಂಬ ಶ್ರುತ್ಯುಕ್ತವಾದ, ಮನುಷ್ಯ ಜೀವರಿಂದ ಬ್ರಹ್ಮಪರ್ಯಂತರಾದ ಮುಕ್ತಜೀವರ ಆನಂದ ತಾರತಮ್ಯವನ್ನು ಯುಕ್ತಿಯುಕ್ತವೂ ಆಗಿರುತ್ತದೆಂದು ಸಾಧಿಸುತ್ತಾರೆ:—

---

ಐಕ್ಯಾರ್ಥವನ್ನು ತಿಳಿಯುವುದು (ಹೇಳುವುದು) ಉಚಿತವಲ್ಲ; ಐಕ್ಯವಾಕ್ಯಕ್ಕೆ ಬಹುಶ್ರುತಿಗಳಿಗೆ ಅನುಗುಣವಾದ ಭೇದಪರವಾದ ಅರ್ಥವನ್ನೇ ಹೇಳಬೇಕು (೨೪೯). ಚೌರ್ಯಾದಿ ವೃತ್ತಿಭೇದದಿಂದಾಗಲಿ, ಅವುಗಳ ಫಲಭೋಗ ವ್ಯತ್ಯಾಸದಿಂದಾಗಲಿ, ಲೋಕಾನುಭವಸಿದ್ಧವಾದ ವಿಷಯಗಳು (ಪ್ರಮೇಯಗಳು) ಹೇಗೆ ಬದಲಾಗುವುದಿಲ್ಲವೋ, ಅದರಂತೆ ಮೀಮಾಂಸಕನು ವೇದವಾಕ್ಯಗಳಿಗೆ ತಿಳಿಯುವ ಅರ್ಥವು, ಲೋಕಾನುಭವ ವಿರುದ್ಧಗಳಾಗುವುದಿಲ್ಲ; ಲೋಕಾನುಭವವನ್ನು ವಿರೋಧಿಸದಿರುವ ಅರ್ಥವನ್ನೇ ತಿಳಿಯಬೇಕು (೨೫೦). ದೇವಋಷ್ಯಾದಿ

ಯತಃ-ಯಾವ ಕಾರಣದಿಂದ, ದೇವರ್ಷ್ಯಾದಿಷು-ದೇವತೆಗಳು, ಋಷಿಗಳು ಮೊದಲಾದವರಲ್ಲಿ, ಸಾಧನವೈಚಿತ್ರ್ಯಂ-ಅವರ ಮುಕ್ತಿಸಾಧನಗಳಲ್ಲಿ ವಿವಿಧತ್ವವು (ತರತಮಭಾವವು), ದೃಶ್ಯತೇ-ಪ್ರತ್ಯಕ್ಷಸಿದ್ಧವಾಗಿ ತೋರುತ್ತದೆಯೋ, ತತಃ-ಆ ಕಾರಣದಿಂದ, ಫಲೇ ಅಪಿ-(ಸಾಧನಲಭ್ಯವಾದ) ಫಲದಲ್ಲಿ (ಮುಕ್ತಿಯ ಆನಂದದಲ್ಲಿಯೂ), ವೈಚಿತ್ರ್ಯಂ-ವೈವಿಧ್ಯವು (ವಿವಿಧತ್ವವು) (ತತಃ-ಅದರಿಂದಲೇ), ಮುಕ್ತಾಃ - ಮುಕ್ತರು, ಪರಾವರಾಃ - ತಾರತಮ್ಯವುಳ್ಳವರು (ಪರ-ಉತ್ತಮ, ಅವರ-ಕನಿಷ್ಠವೆಂಬ ವ್ಯತ್ಯಾಸವುಳ್ಳವರು).

**ನ ಚೇನ್ಮುಕ್ತೌ ತಾರತಮ್ಯಂ ಕೃತಹಾನ್ಯಕೃತಾಗಮೌ ।**
**ಭವೇತಾಂ ಹಿ ಮಹಾದೋಷೌ ಭ್ರಾಂತಾಶ್ಚ ಸ್ಯುರ್ಮಹೋದ್ಯಮಾಃ**
॥ ೨೫೨ ॥

ವಿಪಕ್ಷದಲ್ಲಿ ಬಾಧಕವನ್ನು ಹೇಳುತ್ತಾರೆ :—

ಮುಕ್ತೌ-ಮುಕ್ತಿಯಲ್ಲಿ, ತಾರತಮ್ಯಂ-ತಾರತಮ್ಯವು, ನ ಚೇತ್-ಇಲ್ಲದಿದ್ದರೆ, ಕೃತಹಾನ್ಯಕೃತಾಗಮೌ-ಸಾಧನಗಳು ವ್ಯರ್ಥವೂ, ಯತ್ನಿಸದ ಫಲಗಳು (ಮುಕ್ತಿಯಲ್ಲಿ) ದೊರೆಯುವುದೂ, ಭವೇತಾಂ-ಆಗಬೇಕಾಗುತ್ತದೆ; ಮಹಾ-ದೋಷೌ-(ಈ ಎರಡೂ) ಮಹಾದೋಷಗಳು; ಮಹೋದ್ಯಮಾಃ-ಮಹಾ ಪ್ರಯತ್ನ ಮಾಡಿದವರೂ, ಭ್ರಾಂತಾಶ್ಚ ಸ್ಯುಃ-(ಫಲವೈಷಮ್ಯದಿಂದ) ಭ್ರಾಂತರಾಗುತ್ತಾರೆ.

---

ಜೀವರ ಮೋಕ್ಷಸಾಧನೆಗಳಲ್ಲಿ ವೈವಿಧ್ಯವೂ ಕಂಡುಬಂದಿದೆ; ಆದ್ದರಿಂದ ಸಾಧನಾನುಗುಣವಾಗಿ ಲಭಿಸುವ ಫಲದಲ್ಲಿ, ಮೋಕ್ಷಾನಂದದಲ್ಲಿ ವೈವಿಧ್ಯ ವಿರಬೇಕು; ಈ ಕಾರಣದಿಂದ ಸಹ 'ಸೈಷಾ ಆನಂದಸ್ಯ ಮೀಮಾಂಸಾ' ಎಂಬ ಶ್ರುತಿ ಪ್ರಕರಣವು, ಆನಂದತಾರತಮ್ಯವನ್ನು ನಿರೂಪಿಸಿ, ಬ್ರಹ್ಮದೇವನ ಪರ್ಯಂತರಾದ ಜೀವರ ಆನಂದತಾರತಮ್ಯವನ್ನು ನಿಶ್ಚಯಿಸಿರುವುದು ಯುಕ್ತ ಯುಕ್ತವಾಗಿದೆ (೨೫೧). ಮುಕ್ತಿಯಲ್ಲಿ ಆನಂದ ತಾರತಮ್ಯವಿಲ್ಲದಿದ್ದರೆ, (ಸಾಧನ) ಯತ್ನಗಳ ಹಾನಿಯೂ, ಯತ್ನವಿಲ್ಲದ ಫಲಗಳೂ ಉಂಟಾಗಬೇಕಾಗುವುದು ಇದು ಮಹಾದೋಷವು; ಮಹಾಪ್ರಯತ್ನ ಮಾಡಿದರೂ ಭ್ರಾಂತರಾಗುತ್ತಾರೆ (೨೫೨).

**ಸ್ವರೂಪಾನಂದವೈಚಿತ್ರ್ಯಮೀಮಾಂಸಾಂ ಕುರ್ವತೀ ಶ್ರುತಿಃ ।**
**ಮುಕ್ತಾನಾಂ ತಾರತಮ್ಯಸ್ಯಾನಂಗೀಕಾರೇ ಪ್ರಕುಪ್ಯತಿ ॥ ೨೫೩ ॥**

ಸ್ವರೂಪಾನಂದವೈಚಿತ್ರ್ಯಮೀಮಾಂಸಾಂ – ಸ್ವರೂಪಾನಂದ ತಾರತಮ್ಯ ವಿಚಾರವನ್ನು, ಕುರ್ವತೀಶ್ರುತಿಃ–ಮಾಡುವ ಶ್ರುತಿಯು, ಮುಕ್ತಾನಾಂ–ಮುಕ್ತರ, ತಾರತಮ್ಯಸ್ಯ ತಾರತಮ್ಯದ, ಅನಂಗೀಕಾರೇ – ಅಂಗೀಕಾರ ಮಾಡದಿದ್ದರೆ (ತಾರತಮ್ಯವನ್ನು ಅಂಗೀಕರಿಸದಿದ್ದರೆ), ಪ್ರಕುಪ್ಯತಿ–(ಭೇದವೇ ಇಲ್ಲದಂತಾಗಿ) (ಜೀವಬ್ರಹ್ಮರ ಅಭೇದವೇ ಪ್ರಾಪ್ತವಾಗಿ) ಕೋಪಗೊಳ್ಳುತ್ತದೆ.

**ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।**
**ಆನಂದಂ ಬ್ರಹ್ಮಣೋ ವಿದ್ವಾನ್ನಬಿಭೇತಿ ಕುತಶ್ಚನ ॥ ೨೫೪ ॥**
**ಇತ್ಯಂತೋಕ್ತಪರಬ್ರಹ್ಮಸ್ವರೂಪಾನಂದಪಙ್ಕ್ತಿಗಾ ।**
**ಸರ್ವಾಪ್ಯಾನಂದಮೀಮಾಂಸಾ ಸ್ವರೂಪಾನಂದಗೋಚರಾ ॥ ೨೫೫ ॥**
**ಭವೇದ್ಧಿ ಸರ್ವಥಾ ನೋ ಚೇತ್ ಪ್ರಾಯಪಾಠಸ್ಯ ಕಾ ಗತಿಃ ।**
**ಪ್ರಾಯಪಾಠವಿರೋಧೋ ಹಿ ಮಹಾನ್ ದೋಷೋ ವಿದಾಂಮತೇ ॥ ೨೫೬ ॥**

ಅವ್ಯವಹಿತೋತ್ತರೋಪಸಂಹಾರ ವಾಕ್ಯದಲ್ಲಿ ಸಹ ಬ್ರಹ್ಮನ ಸ್ವರೂಪಾನಂದದ ಮೀಮಾಂಸೆಯೇ ಪ್ರಸಕ್ತವಾಗಿರುವುದರಿಂದ, ಎಲ್ಲವೂ ಸ್ವರೂಪಾನಂದ ಮೀಮಾಂಸೆಯೇ ಆಗಿದೆ, ಅವಾಂತರ ಅವಸ್ಥಾಗತ ಆನಂದ ವಿಷಯಕವಲ್ಲವೆಂದು ಹೇಳುತ್ತಾರೆ :—

---

ಸ್ವರೂಪಾನಂದ ವೈಚಿತ್ರ್ಯವನ್ನು ವಿಚಾರಮಾಡುವ ಶ್ರುತಿಯು, ಮುಕ್ತರ ಆನಂದತಾರತಮ್ಯವನ್ನು ಅಂಗೀಕರಿಸದಿದ್ದರೆ, ಕುಪಿತವಾಗುತ್ತದೆ ; ಶ್ರುತಿ ಪ್ರಾಮಾಣ್ಯವನ್ನು ತಿರಸ್ಕರಿಸುವುದರಿಂದ ಶ್ರುತ್ಯಭಿಮಾನಿದೇವತೆಯು ಕೋಪಗೊಳ್ಳುವುದು ಸಹಜವೇ ಆಗಿದೆ (೨೫೩). ಪರಬ್ರಹ್ಮನ ಆನಂದದ ಆನಂತ್ಯವನ್ನು (ಅಪಾರವೆಂಬುದನ್ನು), ನಿರೂಪಿಸುವ 'ಯತೋ ವಾಚೋ ನಿರ್ವತಂತೇ' ಎಂದು, ಮನಸ್ಸಿನಿಂದ ಸ್ಮರಿಸಲಾಗದ, ಮಾತಿನಿಂದ ಹೇಳಲಾಗದುದೆಂದು, (ಬ್ರಹ್ಮಾದಿ ಮುಕ್ತ ಜೀವರಿಗೂ ಗ್ರಹಿಸಲು ಶಕ್ಯವಲ್ಲದ್ದೆಂದು) ನಿರೂಪಿಸುತ್ತದೆ ; ಈ ಪರಬ್ರಹ್ಮನನ್ನು ಯಥಾಯೋಗ್ಯವಾಗಿ ತಿಳಿದು ಸಂಸಾರಭಯವನ್ನು ಅತಿಕ್ರಮಿಸಿದ

ಯತಃ–ಯಾವುದರ ದೆಶೆಯಿಂದ, ವಾಚಃ–ವಾಗಿಂದ್ರಿಯಗಳು (ವಾಕ್ಯಗಳು), ಮನಸಾ ಸಹ–ಮನಸ್ಸಿನಿಂದ ಸಹಿತವಾಗಿ, ಅಪ್ರಾಪ್ಯ – ಹೊಂದಲಾಗದೇ (ಪೂರ್ಣವಾಗಿ ಗ್ರಹಿಸಲಾಗದೇ), ನಿವರ್ತಂತೇ–ಹಿಂದಿರುಗುವುವೋ, ಬ್ರಹ್ಮಣಃ–ಪರಬ್ರಹ್ಮನ, ಆನಂದಂ–(ಅಪರಿಮಿತವಾದ) ಆನಂದವನ್ನು ವಿದ್ವಾನ್–ತಿಳಿದವನು, ಕುತಶ್ಚನ–ಯಾವುದರಿಂದಲೂ (ಸಂಸಾರಾದಿಗಳಿಂದ), ನ ಬಿಭೇತಿ–ಹೆದರುವುದಿಲ್ಲ; ಇತಿ – ಹೀಗೆ, ಅಂತೋಕ್ತ – ಅಂತ್ಯದಲ್ಲಿ ಹೇಳಿದ, ಪರಬ್ರಹ್ಮಸ್ವರೂಪಾನಂದ ಪಙ್ಕ್ತಿಗಾ–ಪರಬ್ರಹ್ಮನ ಸ್ವರೂಪಾನಂದ ನಿರೂಪಣ (ಸಾಲಿನಲ್ಲಿರುವ) ವಾಕ್ಯವು, ಸರ್ವಸ್ಯ – (ಹಿಂದೆ – ಮೊದಲಗಿಗೆ ಪ್ರಸಕ್ತರಾದ) ಸರ್ವಮುಕ್ತರ, ಆನಂದ ಮೀಮಾಂಸಾ – ಆನಂದವಿವೇಚನೆಯು, *ಸ್ವರೂಪಾನಂದ ಗೋಚರಾ – (ಜೀವ) ಸ್ವರೂಪಾನಂದ ವಿಷಯಕವೇ ಸರ್ವಥಾ–ಸರ್ವ ರೀತಿಯಿಂದಲೂ, ಭವೇತ್–ಆಗುತ್ತದೆ (ಎಂಬುದನ್ನು ಸಾಧಿಸುತ್ತದೆ); ನೋ ಚೇತ್ – ಹಾಗಲ್ಲದಿದ್ದರೆ, ಪ್ರಾಯಪಾಠಸ್ಯ–ಪ್ರಾಯಪಾಠಕ್ಕೆ (ಬಹುವಾಗಿ ಆನಂದವಿಷಯವನ್ನೇ ಪ್ರಸ್ತಾಪಿಸಿರುವುದರ), ಕಾ ಗತಿಃ–ಗತಿಯೇನು (ಫಲವೇನು ? – ಪ್ರಯೋಜನವಿಲ್ಲದ್ದಾಗುತ್ತದೆ); ಪ್ರಾಯಪಾಠ ವಿರೋಧಃ–ಪ್ರಾಯಪಾಠವನ್ನು ವಿರೋಧಿಸುವುದೆಂಬುದು, ವಿದಾಂಮತೇ – ಜ್ಞಾನಿಗಳ ಅಭಿಪ್ರಾಯದಲ್ಲಿ, ಮಹಾನ್‌ದೋಷಃ – ದೊಡ್ಡ ದೋಷವು, ಹಿ–ಎಂದು ಪ್ರಸಿದ್ಧವಷ್ಟೇ.

**ಸತ್ಯಜ್ಞಾನಾನಂದಪದ್ಯೈರಾನಂದಮಯಚರ್ಚಯಾ ।**
**ಉಪಕ್ರಮೋಽಪಿ ಯದ್ಬ್ರಹ್ಮಸ್ವರೂಪಾನಂದ ಈರಿತಃ ॥ ೨೫೭ ॥**

ಉಪಕ್ರಮ (ಆರಂಭ)ದಲ್ಲಿಯೂ, ಸ್ವರೂಪಾನಂದವೇ ಉಪಕ್ರಾಂತವಾಗಿರುವುದರಿಂದ, ಮಧ್ಯದಲ್ಲಿಯೂ ಆನಂದಮೀಮಾಂಸೆಯೇ ಇರಬೇಕೆಂದು, ಮಧ್ಯ

---

ಜೀವನು (ಮುಕ್ತನು) ಯಥಾಯೋಗ್ಯವಾದ ಆನಂದಾನುಭವವುಳ್ಳವನೆಂದು ಹೇಳುವ ವಾಕ್ಯಗಳೂ, ಒಂದೇ ಪಂಕ್ತಿಯಲ್ಲಿದ್ದು, ಪ್ರಾಯಪಾಠದಿಂದ, ಅಲ್ಲಿ ಸ್ವರೂಪಾನಂದ ನಿರೂಪಣೆಯೇ ವಿಷಯವಾಗಿರುತ್ತದೆಂದು ಸಿದ್ಧವಾಗುತ್ತದೆ; ಪ್ರಾಯಪಾಠವನ್ನು ವಿರೋಧಿಸುವುದು, ವೇದಜ್ಞಾನಿಗಳ ಅಭಿಪ್ರಾಯದಲ್ಲಿ ಮಹಾದೋಷವು ; ಈ ದೋಷಕ್ಕೆ ಯಾವ ಪರಿಹಾರವೂ ಇಲ್ಲದಂತಾಗುತ್ತದೆ; ಆದ್ದರಿಂದ ಇಲ್ಲಿ ಪ್ರಸಕ್ತವಾದುದು ಸ್ವರೂಪಾನಂದದ ಜಿಜ್ಞಾಸೆಯಲ್ಲದೇ ಅವಾಂತರದಶಾಗತ ಸುಖ ವಿಶೇಷ ವಿಷಯಕವಲ್ಲ (೨೫೪–೨೫೬). ಸ್ವರೂಪಾನಂದ ಮೀಮಾಂಸೆಯೇ

ಭಾಗವು ಉಪಕ್ರಮೋಪಸಂಹಾರಗಳಿಗೆ ಅನುಗುಣವಾಗಿಯೇ ಯೋಜನೆ ಮಾಡಬೇಕಾದ್ದರಿಂದಲೂ ಸಿದ್ಧವಾಗುತ್ತದೆನ್ನುತ್ತಾರೆ:—

ಸತ್ಯಜ್ಞಾನಾನಂದಪದೈಃ—ಸತ್ಯ, ಜ್ಞಾನ, ಆನಂದಗಳೆಂಬ ಪದಗಳಿಂದ, ಆನಂದಮಯ ಚರ್ಚಯಾ—ಆನಂದವೇ ಪ್ರಧಾನ ಚರ್ಚಾ ವಿಷಯವಾಗಿರುವುದರಿಂದ, ಉಪಕ್ರಮೇಪಿ – ಆರಂಭದಲ್ಲಿಯೂ, ಯತ್ – ಯಾವ ಕಾರಣದಿಂದ, ಬ್ರಹ್ಮಸ್ವರೂಪಾನಂದಃ – ಪರಬ್ರಹ್ಮನ ಸ್ವರೂಪಾನಂದವು, ಈರಿತಃ – ಹೇಳಲ್ಪಟ್ಟಿದೆಯೋ (ಅತಃ—ಎಂದು ಮುಂದಿನ ಶ್ಲೋಕದಿಂದ ಅನ್ವಯಪೂರ್ತಿಗೊಳ್ಳುತ್ತದೆ);

**ಅತೋ ಮಧ್ಯೇ ಕೃತಾ ಚಿಂತಾ ಸ್ವರೂಪಾನಂದಗೋಚರಾ ।**
**ಭವೇದವಶ್ಯಂ ಸಂಸಾರಮಾತ್ರಗೋಷ್ಠೀ ಕಥಂ ಶ್ರುತೇಃ ॥ ೨೫೮ ॥**

ಬೇರೊಂದು ಯುಕ್ತಿಯನ್ನು ಹೇಳುತ್ತಾರೆ:—

ಅತಃ—ಆದ್ದರಿಂದ, ಮಧ್ಯೇ—ಮಧ್ಯದಲ್ಲಿ, ಕೃತಾ—ಮಾಡಲಾದ, ಚಿಂತಾ—ಆಲೋಚನೆಯು, ಸ್ವರೂಪಾನಂದಗೋಚರಾ – ಸ್ವರೂಪಾನಂದ ವಿಷಯವು, ಅವಶ್ಯಂ ಭವೇತ್—ಅವಶ್ಯಕವಾಗಿ ಆಗಿರುತ್ತದೆ; ಶ್ರುತೇಃ—ಸಂಸಾರಮಾತ್ರಗೋಷ್ಠೀ ಕಥಂ – ಸಾಂಸಾರಿಕಸುಖದಲ್ಲಿ ವೈರಾಗ್ಯವನ್ನು ಉತ್ಪಾದಿಸಿ ಮೋಕ್ಷಸುಖದಲ್ಲಿ ರತಿಯನ್ನುಂಟುಮಾಡಿ ಮೋಕ್ಷಮಾರ್ಗವನ್ನೇ ಪ್ರವರ್ತಿಸುವ ಶ್ರುತಿಯು, ಹೇಗೆ ಸಾಂಸಾರಿಕ ಸುಖವನ್ನು ವರ್ಣಿಸುತ್ತದೆ? (ಶಕ್ಯವಲ್ಲ—ಆದ್ದರಿಂದ ಪ್ರಸಕ್ತವಾದ ಆನಂದವು ಸ್ವರೂಪಾತ್ಮಕವೇ ಸರಿ (ಮೌಕ್ತಿಕಾನಂದವೇ).

---

ಎಂಬುದು, ಈ ಪ್ರಕರಣದ ಆರಂಭದಲ್ಲಿ ಪರಬ್ರಹ್ಮನ ಸ್ವರೂಪಾನಂದವೇ, ಸತ್ಯಂ, ಜ್ಞಾನಂ, ಆನಂದಂ, ಎಂಬ ಪದಗಳಿಂದ, ಆನಂದಮಯನ (ಪ್ರಧಾನ) ಚರ್ಚೆಯೇ ಉಪಾಕ್ರಾಂತವೆಂಬುದು ಸ್ಪಷ್ಟವಿದೆ ; ಮಧ್ಯಭಾಗವು (ಪ್ರಕರಣದ ಮಧ್ಯದಲ್ಲಿ) ಉಪಕ್ರಮ, ಉಪಸಂಹಾರಾನುಗುಣವಾಗಿರಬೇಕಾದ್ದು ಅವಶ್ಯಕವೂ (ಯುಕ್ತವೂ) ಆಗಿದೆ ; ಆದ್ದರಿಂದ ಸ್ವರೂಪಾನಂದ ಮೀಮಾಂಸೆಯೇ ಮಧ್ಯದಲ್ಲಿಯೂ ಪ್ರಸಕ್ತ ವಿಷಯವೆಂದು ಸಿದ್ಧವಾಗುತ್ತದೆ (೨೫೭). ಆದ್ದರಿಂದಲೂ, ಪ್ರಕರಣ ಮಧ್ಯಗತವಾದ ಜೀವಾಚೇತನರ ಆನಂದ ತಾರತಮ್ಯ ನಿರೂಪಣೆಯು, ಸ್ವರೂಪಗತವಾದ ಆನಂದ ವಿಷಯಕವೇ ಆಗಿದೆ ; ಸಂಸಾರದಲ್ಲಿ ವೈರಾಗ್ಯವನ್ನುತ್ಪಾದಿಸಿ, ಮೋಕ್ಷ

**ತದ್ದೃಷ್ಟಾಂತತಯಾ ಸಂಸಾರ್ಯಾನಂದೋಽಪಿ ವಿಚಾರ್ಯತೇ ॥೨೫೯॥**

ತದ್ದೃಷ್ಟಾಂತತಯಾ—ಮನುಷ್ಯಗಂಧರ್ವಾದಿಗಳ ನಿದರ್ಶನದಿಂದ (ಸ್ವರೂಪಾನಂದದ ಶತೋತ್ತರತ್ವಾದಿ ತಾರತಮ್ಯವನ್ನು ಅನುಭವಾರೂಢಮಾಡಿಕೊಡಲಿಕ್ಕಾಗಿ), ಸಂಸಾರ್ಯಾನಂದಃ ಅಪಿ—ಸಂಸಾರಿಜೀವರ ಆನಂದವೂ, ವಿಚಾರ್ಯತೇ—ಆಲೋಚಿಸಲಾಗುತ್ತದೆ.[1]

**ತತ್ತದ್ರೂಪಸ್ಯ ತಾದೃಕ್ತ್ವಾಭಾವೇ ಬಹಿರಯಂ ಕ್ರಮಃ ।**
**ಕಥಂ ಸ್ಯಾನ್ನಿಯಮೋಽನ್ಯೈವ ಯೋ ವೇದೇನ ಪ್ರಮೀಯತೇ ॥ ೨೬೦ ॥**

ಮುಕ್ತಸ್ವರೂಪ ಆನಂದ ತಾರತಮ್ಯ ಬೋಧಕವು ಹೇಗಾಗುತ್ತದೆಂಬುದನ್ನು ಪ್ರದರ್ಶಿಸುತ್ತಾರೆ :—

ತತ್ತದ್ರೂಪಸ್ಯ—ಆಯಾ ಸ್ವರೂಪದವನಿಗೆ ಬಹಿಃ ತಾದೃಕ್ತ್ವಾಭಾವೇ—ತತ್ಸದೃಶಬಾಹ್ಯರೂಪವಿಲ್ಲದಿದ್ದಲ್ಲಿ, ಅಯಂ ಕ್ರಮಃ—ಉಕ್ತ ಕ್ರಮವು, ಯಃ—ಯಾವುದು

---

ಮಾರ್ಗವನ್ನು ಪ್ರವರ್ತಿಸುವ ವೇದದಲ್ಲಿ, ಸಾಂಸಾರಿಕವಾದ ಅನ್ಯಸುಖದ ವಿವರಣೆಯು ಹೇಗೆ ಯುಕ್ತವಾಗುತ್ತದೆ ? (೨೫೮). ಮನುಷ್ಯ ಗಂಧರ್ವಾದಿಗಳ ಲೌಕಿಕ ಆನಂದವು ನಿದರ್ಶನಾರ್ಥವಾಗಿ ಮಾತ್ರ ಅಲ್ಲಿ ಪ್ರಸ್ತಾಪಿಸಲ್ಪಟ್ಟಿರುತ್ತದೆ (೨೫೯). ವೇದವು ಹೇಳುವ ಸ್ವರೂಪವು (ಅದರ ಸಾದೃಶ್ಯವು), ಬಾಹ್ಯದಲ್ಲಿ (ಸಂಸಾರದಲ್ಲಿ) ಇರುವುದಾದರೆ, ವೇದದಲ್ಲಿ ಹೇಳುವ ಆನಂದಾದಿಗಳ ಶತಗುಣಾಧಿಕ

[1] 'ಶ್ರೋತ್ರಿಯಸ್ಯ ಚಾಕಾಮಹತಸ್ಯ' ಎಂಬುದು ಮುಕ್ತಸುಖವನ್ನು ಹೇಳುತ್ತದೆಂದು ನೀನು ಅಂಗೀಕರಿಸಿರುವಾಗ, 'ಸ ಏಕೋ ಮನುಷ್ಯಗಂಧರ್ವಾಣಾಂ' ಎಂಬುದೂ ಮುಕ್ತರ ಆನಂದವೇ ಆಗಬೇಕಲ್ಲವೇ? ಎಂದರೆ, ನಿಜ, ಮನುಷ್ಯ ಗಂಧರ್ವಾದಿಗಳ ಸಾಂಸಾರಿಕ ಆನಂದಕ್ಕೆ, ಮೋಕ್ಷಾನಂದದ ಸಾದೃಶ್ಯವಿಲ್ಲ ಮತ್ತು ದೇವಗಂಧರ್ವಾದಿಗಳಿಗೆ ಕ್ರಮವಾಗಿ, ನೂರರಷ್ಟು ಬಾಹ್ಯಾನಂದವೂ ಇಲ್ಲ ; ಹೀಗಿದ್ದರೂ ಬಾಹ್ಯ (ಸಾಂಸಾರಿಕ) ಆನಂದವನ್ನು ದೃಷ್ಟಾಂತವಾಗಿಟ್ಟುಕೊಂಡು, ಮೌಕ್ತಿಕಾನಂದದ ಶತಗುಣಾದಿ ತಾರತಮ್ಯಭಾವವನ್ನು ಬುದ್ಧ್ಯಾರೂಢ ಮಾಡಿಕೊಡಲು ಲೌಕಿಕಾನಂದವೂ ಪ್ರಸಕ್ತವೆಂದು ತಿಳಿಯಬಹುದಾಗಿದೆ. ಗೃಹದಹೊರಗೆ ಪ್ರಸರವಾದ ಧೂಪದ ಹೊಗೆಯನ್ನು ಕಂಡು, ಗೃಹದೊಳಗಿನ ಧೂಮದ ನಿಬಿಡತೆಯ ತಾರತಮ್ಯವನ್ನು ಅರಿಯುವಂತೆ, ಈ ದೃಷ್ಟಾಂತವೂ ಇರುವುದೆಂದು ತಿಳಿಯಬೇಕು.

(ಯಾವ ಸ್ವರೂಪವು), ವೇದೇನ ಪ್ರಮೀಯತೇ–ವೇದದಿಂದ ತಿಳಿಸಲಾಗುವುದೋ ನಿಯಮೇನ ಏವ–ತಪ್ಪದೇ, ಕಥಂ ಸ್ಯಾತ್–ಹೇಗೆ ಆಗುತ್ತದೆ ? (ಶಕ್ಯವಿಲ್ಲ) (ಕಲ್ಯಾದಿದೈತ್ಯರಿಗೆ ಸ್ವರೂಪಾನಂದವು ಎಂದೂ ಇಲ್ಲ ; ಹೀಗಿದ್ದರೂ ಬಾಹ್ಯಾನಂದವು–ವಿಷಯಾದಿಜನ್ಯವಾದುದು, ಇರುತ್ತದೆ ; ಬಾಹ್ಯವೈವಿಧ್ಯದಿಂದ ಸ್ವರೂಪ ವೈಚಿತ್ರ್ಯವನ್ನೇ ತಿಳಿಯಬೇಕಾಗುತ್ತದೆ ; ಅದಕ್ಕೂ ಕಾರಣವಿದೆ).

**ಉಕ್ತೋ ಹಿ ಮಾನುಷಾನಂದೋ ನ ಸದಾ ವಿದ್ಯತೇ ನೃಣಾಂ ।**
**ಸಂಸಾರಿಣಾಂ ಕ್ವಚಿದ್ದುಃಖಮಪಿ ಸಂಭಾವಿತಂ ಯತಃ ॥ ೨೬೧ ॥**

ಉಕ್ತಃ–ಶ್ರುತ್ಯುಕ್ತವಾದ, ಮಾನುಷಾನಂದಃ–ಮಾನುಷಾನಂದವು, ಹಿ–ಯಾವ ಕಾರಣದಿಂದ, ನೃಣಾಂ–ಮನುಷ್ಯರಿಗೆ (ಸಂಸಾರದಲ್ಲಿ), ಸದಾ–ಸರ್ವದಾ, ನ ವಿದ್ಯತೇ – ಇರುವುದಿಲ್ಲವೋ, (ಮತ್ತು) ಯತಃ – ಯಾವ ಕಾರಣದಿಂದ, ಸಂಸಾರಿಣಾಂ–ಸಂಸಾರಿಜೀವರಿಗೆ, ಕ್ವಚಿತ್–ಕೆಲವು ವೇಳೆ, ದುಃಖಂ ಅಪಿ–ದುಃಖವೂ ಸಹ, ಸಂಭಾವಿತಂ–ಇರುವುದುಂಟೋ (ಅತಃ–ಎಂದು ಮುಂದಿನ ಶ್ಲೋಕದಿಂದ ಅರ್ಥ ಪೂರ್ಣವಾಗುತ್ತದೆ).

**ಅತಸ್ತಾದೃಙ್ಮಾಕ್ತಸುಖಂ ನಿಯತಂ ಹಿ ಶ್ರುತೇರ್ಮತಂ ।**
**ನ ಚೇದ್ಬ್ರಹ್ಮಾದಿಜೀವಾನಾಂ ರೂಪಸ್ಯಾನಂದರೂಪತಾ ।**
**ಕೇನ ಸಿದ್ಧ್ಯೇದ್ಯದಿ ಸ್ಪಷ್ಟಾ ಶ್ರುತಿರೇಷಾ ಬಹಿರ್ಗತಾ ॥ ೨೬೨ ॥**

ಅತಃ–ಆದ್ದರಿಂದ, ತಾದೃಙ್ಮಾಕ್ತಸುಖಂ–(ಐಶ್ವರ್ಯ ಪೂರ್ಣ ಸಕಲ ಪೃಥಿವೀಪರಿಪಾಲನ ದಶಾದಲ್ಲಿರುವ ಚಕ್ರವರ್ತಿಗೆ ಯಾವ ಸುಖವೋ ಅದೇ

---

ಕ್ರಮವನ್ನು ತಿಳಿಯಬಹುದು ; ಆದರೆ ವಸ್ತುಸ್ಥಿತಿಯು ಹಾಗಿರುವುದಿಲ್ಲ–ವೇದವು ನಿರೂಪಿಸುವ ಸ್ವರೂಪವು ಸಂಸಾರ ದಶಾದಲ್ಲಿರುವುದಿಲ್ಲ (೨೬೦). ವೇದೋಕ್ತವಾದ ಮಾನುಷಾನಂದವು, ಮನುಷ್ಯರಿಗೆ ಸದಾ ಇರುವುದಿಲ್ಲ ಮತ್ತು ಸಂಸಾರಿಗಳಿಗೆ, ಕೆಲವುವೇಳೆ ದುಃಖವೂ ಇರುತ್ತದೆ; ಕಲ್ಯಾದಿ ದೈತ್ಯರಿಗೆ ಸಂಸಾರದಲ್ಲಿ ಕಿಂಚಿತ್ ವೈಷಯಿಕ ಸುಖವಿದ್ದರೂ, ಸ್ವರೂಪದಲ್ಲಿ ದುಃಖಮಾತ್ರವೇ ಇರುತ್ತದೆ; ಇತ್ಯಾದಿ ಕಾರಣಗಳಿಂದ ತಾರತಮ್ಯವನ್ನು ಬುದ್ಧ್ಯಾರೂಢಮಾಡಿಕೊಡಲು, ಲೌಕಿಕ ಆನಂದವನ್ನು ನಿದರ್ಶನಾರ್ಥವಾಗಿ ಮಾತ್ರ ನಿರೂಪಿಸುತ್ತದೆಂದು ತಿಳಿಯಬೇಕು (೨೬೧). ಶ್ರುತ್ಯುಕ್ತ ಚಕ್ರವರ್ತಿ ಮೊದಲಾದ ಜೀವರ ಲೌಕಿಕಾನಂದವು

*

ಸ್ವಭಾವದ) ನಿಯಮೇನ ವಿದ್ಯಮಾನವಾದ ಮುಕ್ತಿ ದಶಾದ ಸುಖವು, ನಿಯತಂ–ತಪ್ಪದೇ ಸದಾ ಇರುವುದೆಂಬುದು, ಶ್ರುತೇಃ–ವೇದದ, ಮತಂ ಹಿ–ತಾತ್ಪರ್ಯವೆಂಬುದು ಸಿದ್ಧವು (ಶ್ರುತಿಸಮ್ಮತವಾದ ಅಭಿಪ್ರಾಯವು) ; (ಇದರ, ಈ ಸುಖದ ಶತಗುಣವಾದ ಆನಂದವು, ಶ್ರವಣಫಲವನ್ನು ಪೂರ್ಣಹೊಂದಿದ, ಹೊಂದಲ್ಪಟ್ಟ ಸ್ವಯೋಗ್ಯ ಸಕಲ ಕಾಮುಗಳುಳ್ಳ ಮುಕ್ತನಿಗೆ, ನಿರಂತರವಿರುತ್ತದೆಂದು ಭಾವ) ; ನ ಚೇತ್ – (ಈ ಶ್ರುತಿಯು) ಸ್ವರೂಪಾನಂದ ಪರವಲ್ಲದಿದ್ದರೆ, ಬ್ರಹ್ಮಾದಿ ಜೀವಾನಾಂ – ಬ್ರಹ್ಮಾದಿಜೀವರ, ರೂಪಸ್ಯ – ಸ್ವರೂಪಕ್ಕೆ, ಆನಂದರೂಪತಾ – ಆನಂದರೂಪತ್ವವು (ಆನಂದವೇ ಮೂರ್ತಿವೆತ್ತಂತಿರುವುದೆಂಬುದು), ಕೇನ – ಯಾವುದರಿಂದ (ಯಾವ ಪ್ರಮಾಣದಿಂದ), ಯದಿ–ಒಂದು ಪಕ್ಷದಲ್ಲಿ, ಏಷಾ ಸ್ಪಷ್ಟಾ ಶ್ರುತಿಃ–ಈ ಸ್ಪಷ್ಟವಾದ ವಾಕ್ಯವು, ಬಹಿಃಗತಾ–ಬಾಹ್ಯ ವಿಷಯಕವೇ ಆಗುವುದಾದರೆ (ಸಂಸಾರಿಕ ಸುಖವನ್ನೇ ಹೇಳಿದರೆ), ಸಿಧ್ಯೇತ್–ಸಿದ್ಧಿಸುತ್ತದೆ ? (ಸಿದ್ಧಿಸುವುದಿಲ್ಲ).

**ಕಥಂ ಬ್ರಹ್ಮಸುಖಂ ತೇಷಾಮವಾಙ್ಮನಸಗೋಚರಂ ।**
**ನ ಹಿ ತಕ್ಷಕಚೂಡಾಸ್ಥಂ ರತ್ನಮನ್ಯೇನ ಲಭ್ಯತೇ ।**
**ಅತಸ್ತಾರ್ಕಿಕಜೀವಾಃ ಸ್ಯುಃ ಸರ್ವೇ ಜೀವಾಸ್ತವಾಪಿ ಹಿ ॥ ೨೬೩ ॥**

'ಯತೋ ವಾಚೋ ನಿವರ್ತಂತೇ—' ಇತ್ಯಾದಿ ಶ್ರುತಿಯಿಂದ ಸಿದ್ಧವಾಗುವುದೆಂಬ ಬ್ರಹ್ಮಸ್ವರೂಪ ಭೂತ ಆನಂದದಿಂದ, ಜೀವರ ಆನಂದಸ್ವರೂಪತ್ವವೂ ಸಿದ್ಧವೆಂಬುದನ್ನು ನಿರೂಪಿಸುತ್ತಾರೆ :—

---

ನಿಯಮೇನ ಸದಾ ಇರುವುದಾದರೆ, ಅದರ ಶತಗುಣದಷ್ಟು ಆನಂದವು ಮುಕ್ತಮಾನುಷಾನಂದವೆಂಬುದು ಶ್ರುತಿಸಮ್ಮತವಾದ ಅಭಿಪ್ರಾಯವಾಗಿದೆ ; ಈ ಶ್ರುತಿಯು ಸ್ವರೂಪಾನಂದ ಪರವಲ್ಲದಿದ್ದರೆ, ಬ್ರಹ್ಮಾದಿ ಜೀವರು ಆನಂದರೂಪರು ಎಂದು ಹೇಗೆ ಸಾಧಿಸಲಾಗುತ್ತದೆ? ಆನಂದ ಮೀಮಾಂಸಾ ಶ್ರುತಿಯು ಸಾಂಸಾರಿಕ ಸುಖ ತಾರತಮ್ಯವನ್ನು ಮಾತ್ರ ನಿರೂಪಿಸುತ್ತದೆ ಎಂದರೆ, ಬ್ರಹ್ಮಾದಿಗಳಿಗೆ ಆನಂದ ರೂಪತ್ವವೇ ಸಿದ್ಧಿಸುವುದಿಲ್ಲ (೨೬೨). 'ಯತೋ ವಾಚೋ ನಿರ್ವತಂತೇ' ಇತ್ಯಾದಿ ಶ್ರುತ್ಯುಕ್ತ ಮನೋವಚನಗಳಿಂದ ಅಗ್ರಾಹ್ಯವೆಂಬ, ಆನಂದ ರೂಪತ್ವವು ಬ್ರಹ್ಮಾದಿಗಳಿಗೆ ಹೇಗೆ ಸಾಧಿಸುತ್ತವೆ? (ಶಕ್ಯವಿಲ್ಲ) ; ತಕ್ಷಕನ ಫಣದಲ್ಲಿರುವ

ಅವಾಙ್ಮನಸಗೋಚರಂ–ಬ್ರಹ್ಮಾದಿಜೀವರಿಂದ ಮನಸ್ಸಿನಿಂದ ಚಿಂತಿಸಲು, ಮುಖದಿಂದ ಹೇಳಲು ಅಶಕ್ಯವೆಂದು ಶ್ರುತಿಯಿಂದ ಪ್ರತಿಪಾದಿತವಾದ, ಬ್ರಹ್ಮ ಸುಖಂ–ಬ್ರಹ್ಮನ ಸುಖವು, ತೇಷಾಂ–ಬ್ರಹ್ಮಾದಿಜೀವರಿಗೆ, ಕಥಂ–ಹೇಗೆ ಉಂಟಾದೀತು ? ತಕ್ಷಕ ಚೂಡಾಸ್ಥಂ–ಸರ್ಪರಾಜನ ಫಣದಲ್ಲಿ (ತಲೆಯಲ್ಲಿ)ರುವ, ರತ್ನಂ–ಮಣಿಯು, ಅನ್ಯೇನ–ಯಾರೊಬ್ಬನಿಂದ, ನ ಲಭ್ಯತೇ ಹಿ–ಹೊಂದಲಾಗುವುದಿಲ್ಲವಷ್ಟೆ; ಅತಃ–ಆದ್ದರಿಂದ, ತಾರ್ಕಿಕಜೀವಾಃ–(ಮುಕ್ತಿಯಲ್ಲಿ ಸುಖವೇ ಇಲ್ಲವೆಂದು ಹೇಳಲ್ಪಡುವ) ತಾರ್ಕಿಕಜೀವರು, ಸರ್ವೇ ಜೀವಾಃ–ಸಮಸ್ತಜೀವರೂ, ತವ ಅಪಿ–ನಿನಗೂ ಸಹ (ನಿನ್ನಂತೆ ಸಹ–ದುಃಖರಹಿತರು ಮಾತ್ರ) ಸ್ಯುಃ–ಆಗುವರು, ಹಿ–(ಆನಂದ ತಾರತಮ್ಯವನ್ನು ಅಂಗೀಕರಿಸದಿದ್ದರೆ ನೀನೂ ಇದೇ ಸಿದ್ಧಾಂತಕ್ಕೆ ಬರಬೇಕು).

**ಜೀವಸ್ವರೂಪಾನಂದಸ್ಯ ತಾದೃಕ್ತ್ವೇ ಕಿಂ ಗತಂ ತವ ।**
**ಐಕ್ಯಾಯೋಗಾದ್ಯದಿ ಭಯಂ ಭೇದೋಽಸ್ತು ಸತತಂ ಸತಾಂ ।**
**ಅಪೌರುಷೇಯೇ ನಿರ್ಬಂಧೋ ನ ಸ್ವಸ್ವಮತಸಿದ್ಧಯೇ ॥ ೨೬೪ ॥**

ಜೀವಸ್ವರೂಪಾನಂದಸ್ಯ–ಜೀವಸ್ವರೂಪಾನಂದವು, ತಾದೃಕ್ತ್ವೇ–ಹಾಗಿದ್ದರೆ (ತಾರತಮ್ಯ ಯುಕ್ತವಾದರೆ), ತವ–ನಿನಗೆ, ಕಿಂ ಗತಂ–ಏನು ಹಾನಿಯು ? ಐಕ್ಯಾಯೋಗಾತ್ – ಜೀವಜೀವೈಕ್ಯವು ಕೂಡುವುದಿಲ್ಲವೆಂದು, ಯದಿ ಭಯಂ –

---

ಮಣಿಯನ್ನು ಯಾರೊಬ್ಬನು ಪಡೆಯಲು ಶಕ್ಯವೇ ? ಜೀವರು ಮುಕ್ತರಾದರೂ ಆನಂದರೂಪರೆಂದಲ್ಲದಿದ್ದರೆ, ಎಲ್ಲರೂ ತಾರ್ಕಿಕ ಜೀವರಾಗಬೇಕಾಗುವುದು ; ತಾರ್ಕಿಕರಂತೆ ಮುಕ್ತಜೀವರು ದುಃಖರಹಿತರು ಮಾತ್ರ–ಸುಖವುಳ್ಳವರಲ್ಲ ; ಆದ್ದರಿಂದ ಜೀವರ ಆನಂದತಾರತಮ್ಯವನ್ನು ಅಂಗೀಕರಿಸದಿದ್ದರೆ, ನೀನೂ ತಾರ್ಕಿಕನೇ ಆಗುವಿ, ಎಂದು ಮಾಯಾವಾದಿಯನ್ನು ಆಕ್ಷೇಪಿಸಿರುತ್ತಾರೆ (೨೬೩). ಜೀವಸ್ವರೂಪಾನಂದವು ತಾರತಮ್ಯ ಯುಕ್ತವಾಗಿದ್ದರೆ, ನಿನಗೇನು ತೊಂದರೆ ? (ಏನು ಹಾನಿ ?) ಆಗ, ಐಕ್ಯವು (ಜೀವ ಪರಸ್ಪರ ಐಕ್ಯವೂ, ಜೀವ ಬ್ರಹ್ಮೈಕ್ಯವೂ) ಕೂಡುವುದಿಲ್ಲವೆಂಬ ಭಯದಿಂದ ಆನಂದ ತಾರತಮ್ಯವನ್ನು ತಿರಸ್ಕರಿಸುವಿಯಾದರೆ, ಸಜ್ಜನರಲ್ಲಿ ಸದಾ ಭೇದವೇ ಇರಲಿ ; ಮುಕ್ತಿಯಲ್ಲಿ ಭೇದವಿರುತ್ತದೆಂಬ ಸ್ವಮತವನ್ನು ಸಾಧಿಸಲು ಅಪೌರುಷೇಯವಾದ ವೇದವು ಯಾವ ನಿರ್ಬಂಧವನ್ನೂ

ಭಯವಾದರೆ, ಸತಾಂ–ಸಜ್ಜನರಿಗೆ (ಸಜ್ಜನರ), ಭೇದಃ–ಭೇದವು, ಸತತಂ–ಸರ್ವದಾ (ಮುಕ್ತಿಯಲ್ಲಿ ಸಹ), ಅಸ್ತು–ಇರಲಿ; ಅಪೌರುಷೇಯೇ ವೇದೇ–ಪುರುಷನಿರ್ಮಿತವಲ್ಲದ ವೇದದಲ್ಲಿ, ಸ್ವಸ್ವಮತಸಿದ್ಧಯೇ–ತಂತಮ್ಮ ಮತಸಿದ್ಧಿಯಾಗಲು, ನಿರ್ಬಂಧಃ ನ–ಯಾವ ನಿರ್ಬಂಧವೂ ಇಲ್ಲ.

**ಅಕಾಮಹತತಾ ಕಸ್ಮಾನ್ಮುಕ್ತಲಿಂಗಮಪೋದ್ಯತೇ ।**
**ಕಥಮವೃಜಿನತ್ವಂ ಚ ಮುಕ್ತಾದನ್ಯಸ್ಯ ಶೋಭತೇ ॥ ೨೬೫ ॥**

ಅಕಾಮಹತತಾ – 'ಶ್ರೋತ್ರಿಯಸ್ಯಾಚಾಕಾಮಹತಸ್ಯ' ಎಂಬಲ್ಲಿರುವ ಅಕಾಮಹತತ್ವವು (ಇಚ್ಛಿತಕಾಮಪ್ರಾಪ್ತಿಯು), ಕಸ್ಮಾತ್–ಯಾವ ಕಾರಣದಿಂದ, ಮುಕ್ತಲಿಂಗಂ – ಮುಕ್ತನ ಲಕ್ಷಣವನ್ನು, ಅಪೋದ್ಯತೇ – ಕೆಡಿಸುತ್ತದೆ? ಚ–ಮತ್ತು, ಅವೃಜಿನತ್ವಂ–ಅಪಾಪತ್ವವು (ಪಾಪಲೇಪರಾಹಿತ್ಯವು), ಕಥಂ–ಹೇಗೆ, ಮುಕ್ತಾತ್–ಮುಕ್ತನಿಂದ, ಅನ್ಯಸ್ಯ–ಭಿನ್ನನಿಗೆ, ಶೋಭತೇ–ಯೋಗ್ಯವೆನಿಸುತ್ತದೆ? (ಅದೂ ಮುಕ್ತಲಕ್ಷಣವೆಂದು ಅಂಗೀಕರಿಸುವಲ್ಲಿ ಏನು ಬಾಧಕ?).

**ಬ್ರಾಹ್ಮಣಸ್ಯ ಹಿ ದೇಹೋಽಯಂ ನೋಪಭೋಗಾಯ ಕಲ್ಪತೇ ।**
**ಇಹ ಕ್ಲೇಶಾಯ ಮಹತೇ ಪ್ರೇತ್ಯಾನಂತಸುಖಾಯ ಚ ॥ ೨೬೬ ॥**

ಹೇಗೆ ಮನುಷ್ಯ ಗಂಧರ್ವಾದಿ ಪದದಲ್ಲಿರುವ ಜೀವರಿಗೆ ಉತ್ತರೋತ್ತರ (ಮೇಲೆ ಮೇಲಿನವರಿಗೆ) ಶತಶತಾಧಿಕ ಆನಂದವೋ, ಹಾಗೆ ವೈದಿಕ ಕರ್ಮಾನುಷ್ಠಾನಪರರಾದ ಶ್ರೋತ್ರಿಯರಾದ ಬ್ರಾಹ್ಮಣಾದಿಗಳಿಗೆ, ಪದಸ್ಥದೇವಾದಿಗಳಂತೆ ಆನಂದಾತಿಶಯವನ್ನು ತಿಳಿಯಬೇಕೆಂಬ ಪರಕೀಯ ವ್ಯಾಖ್ಯಾನವನ್ನು ದೂಷಿಸುತ್ತಾರೆ :—

---

ಒಡ್ಡುವುದಿಲ್ಲವಷ್ಟೆ (೨೬೪) ಅಕಾಮಹತತ್ವವೆಂದರೆ, ಇಚ್ಛಿತ ಕಾಮಪ್ರಾಪ್ತಿಯು; ಮುಕ್ತನಿಗೆ ಶ್ರುತಿಯು ಹೇಳುವ ಈ ಲಕ್ಷಣವನ್ನೇಕೆ ತಿರಸ್ಕರಿಸಬೇಕು? ಅದರಿಂದ ಮುಕ್ತಲಕ್ಷಣವು ಹೇಗೆ ಕೆಡುತ್ತದೆ? ಕಾಮಹತನಲ್ಲದವನು (ಇಚ್ಛಿತವು ದೊರೆಯದವನು) ಅಕಾಮಹತನು–ಕಾಮಶೂನ್ಯನಲ್ಲ; ಮುಕ್ತನು ಅಯೋಗ್ಯವಾದುದನ್ನು ಕಾಮಿಸುವುದೇ ಇಲ್ಲ; ಕಾಮಿಸಿದುದೆಲ್ಲವೂ, ಯತ್ನವಿಲ್ಲದೇ ಸಿದ್ಧವಾಗುತ್ತವೆ; ಆದ್ದರಿಂದ ಆತನು ಅಕಾಮಹತನು; ಪಾಪರಾಹಿತ್ಯವು ಅಮುಕ್ತನಿಗೆ ಯೋಗ್ಯವಾಗುವುದಿಲ್ಲ; ಅಕಾಮಹತತ್ವ ಮತ್ತು ಪಾಪರಾಹಿತ್ಯಗಳು, ಮುಕ್ತಲಕ್ಷಣಗಳು (೨೬೫). ವೈದಿಕ ಕರ್ಮಾನುಷ್ಠಾನವಂತರಿಗೆ (ಶ್ರೋತ್ರಿಯ

ಬ್ರಾಹ್ಮಣಸ್ಯ– ಬ್ರಾಹ್ಮಣನಿಗೆ, ಅಯಂ – ಈ (ಸಾಂಸಾರಿಕ) ಭೌತಿಕ, ದೇಹಃ–ದೇಹವು, ಉಪಭೋಗಾಯ–ವಿಷಯಭೋಗಕ್ಕಾಗಿ, ನ ಕಲ್ಪತೇ–ನಿರ್ಮಿತ ವಾದುದಲ್ಲ; ಹಿ–(ಯಸ್ಮಾತ್) ಏಕೆಂದರೆ, ಇಹ–ಈ ದೇಹದಲ್ಲಿ, ಮಹತೇ ಕ್ಲೇಶಾಯ–ಮಹಾಕ್ಲೇಶಗಳನ್ನು ಅನುಭವಿಸಲೂ, ಪ್ರೇತ್ಯ–ದೇಹತ್ಯಾಗಾನಂತರ ಕಾಲದಲ್ಲಿ (ಪರದಲ್ಲಿ), ಅನಂತಸುಖಾಯ – ಅನಂತಸುಖಭೋಗಕ್ಕಾಗಿಯೂ, ಚ–(ಬ್ರಾಹ್ಮಣದೇಹವು ಬಂದಿರುತ್ತದೆ) ಆಗಿರುತ್ತದೆ.

**ಇತ್ಯುಕ್ತ್ಯಾ ನೇಹ ಸುಖಿನೋ ವಿರಾಗ ಅಪಿ ಯೋಗಿನಃ ।**
**ಅತಃ ಪದಸ್ಥಸುಖವತ್ಪದಾಕಾಮೋ ಸುಖಂ ಕುತಃ ॥ ೨೬೭ ॥**

ಇತ್ಯುಕ್ತ್ಯಾ–ಹೀಗೆಂಬ (ಭಾರತ) ವಾಕ್ಯದಿಂದ, ವಿರಾಗಾಃ-ವಿರಕ್ತರಾದ, ಯೋಗಿನಃ ಅಪಿ–ಜ್ಞಾನಿಗಳೂ, ಇಹ–ಈ ದೇಹದಲ್ಲಿ, ನ ಸುಖಿನಃ–ಸುಖವುಳ್ಳ ವರಲ್ಲ; ಅತಃ–ಈ ಕಾರಣದಿಂದ, ಪದಸ್ಥಸುಖವತ್-ಮುಕ್ತ ಸ್ಥಾನದಲ್ಲಿರುವನಂತೆ, ಪದಾಕಾಮಃ–ಮುಕ್ತಪದವನ್ನೇ ಇಚ್ಛಿಸದವನು, ಸುಖಂ–ಸುಖವನ್ನು, ಕುತಃ– ಎಲ್ಲಿಂದ ಹೊಂದುವನು ?

**ಸ ಭುಙ್ಕ್ತೇ ವಿಷಯಾನ್ಸರ್ವಾನ್ ಪ್ರಶಾಸ್ತಿ ಚ ಜಗತ್ತ್ರಯಂ ।**
**ಅಯಂ ಪಂಚಾಗ್ನಿಮಧ್ಯಸ್ಥಸ್ತಪಸ್ತಪತಿ ಸರ್ವದಾ ।**
**ಸುಖಲೇಶೋಽಪಿ ನಾಸ್ಯಾಸ್ತಿ ಸುಖಂ ತಾದೃಕ್ಕಥಂ ವದ ॥ ೨೬೮ ॥**

ಸಃ – ( ಇಂದ್ರ ಪದವಿಯಲ್ಲಿರುವ ) ಆತನು, ಸರ್ವಾನ್ – ಸಮಸ್ತ, ವಿಷಯಾನ್–ಇಚ್ಛಿತ ಭೋಗಗಳನ್ನು, ಭುಙ್ಕ್ತೇ–ಭೋಗಿಸುತ್ತಾನೆ; ಚ–

---

ಬ್ರಾಹ್ಮಣಾದಿಗಳಲ್ಲಿ) ಪದಸ್ಥ ದೇವಾದಿಗಳಂತೆ ಶತೋತ್ತರ ಆನಂದಾತಿಶಯವನ್ನು ತಿಳಿಯಬೇಕೆಂಬ ಪರನ ವ್ಯಾಖ್ಯಾನವೂ ಯುಕ್ತವಾಗುವುದಿಲ್ಲ; ಏಕೆಂದರೆ, ಬ್ರಾಹ್ಮಣನ ದೇಹವು ಸುಖಭೋಗಕ್ಕಾಗಿ ನಿರ್ಮಿತವಾದುದಲ್ಲ; ಮಹಾಕ್ಲೇಶ ಗಳನ್ನು ಅನುಭವಿಸಿ, ಮರಣಾನಂತರ (ಪರದಲ್ಲಿ) ಅನಂತ ಸುಖವನ್ನು ಹೊಂದ ಲಿಕ್ಕಾಗಿ ನಿರ್ಮಿತವಾಗಿದೆ, ಎಂದು ಭಾರತದಲ್ಲಿ ಹೇಳಲಾಗುತ್ತದೆ (೨೬೬). ಆದ್ದರಿಂದ ವಿರಕ್ತರಾದ ಯೋಗಿಗಳೂ ಈ ದೇಹದಲ್ಲಿ ಸುಖವುಳ್ಳವರಲ್ಲ; ಮುಕ್ತ ಪದಸ್ಥರಂತೆ, ಪದವನ್ನೇ ಕಾಮಿಸದವನು ಸುಖವನ್ನು ಹೊಂದಲು ಸಾಧ್ಯವಿಲ್ಲ (೨೬೭). ಪದಸ್ಥನಾದ ಮುಕ್ತ ಇಂದ್ರನು ಸಮಸ್ತ ವಿಷಯೋಪಭೋಗವುಳ್ಳವ

ಹಾಗೂ, ಜಗತ್ತ್ರಯಂ-ಮೂರು ಲೋಕಗಳನ್ನು, ಪ್ರಶಾಸ್ತಿ-ಆಳುತ್ತಾನೆ; ಅಯಂ-ಉಕ್ತಶ್ರೋತ್ರಿಯ ಬ್ರಾಹ್ಮಣನು (ಪದರಹಿತನು), ಪಂಚಾಗ್ನಿಮಧ್ಯಸ್ಥಃ-ಪಂಚಾಗ್ನಿಗಳ ಮಧ್ಯದಲ್ಲಿ ಕೂತು, ಸರ್ವದಾ-ನಿರಂತರವಾಗಿ, ತಪಃ-ತಪಸ್ಸನ್ನು ತಪತಿ-ತಪಿಸುತ್ತಾನೆ (ಆಚರಿಸುತ್ತಾನೆ); ಅಸ್ಯ-ಈತನಿಗೆ, ಸುಖಲೇಶಃ ಅಪಿ-ಸುಖಲೇಶವೂ, ನ ಅಸ್ತಿ-ಇರುವುದಿಲ್ಲ; ತಾದೃಕ್ ಸುಖಂ-ಸ್ಥಾನದಲ್ಲಿರುವನ ಸದೃಶ ಸುಖವು, ಕಥಂ-ಹೇಗೆ ಲಭಿಸಬಹುದು? ವದ-ಹೇಳು.

**ತದಿಹ ಕ್ಲೇಶಭಾಗ್ಯೋಗೀ ಸುಖಂ ತಸ್ಯಾಸ್ತಿ ಮುಕ್ತಿಗಂ ।**
**ತಸ್ಮಾನ್ಮುಕ್ತಸುಖೇಷ್ವೇವ ತಾರತಮ್ಯಂ ತವಾಪ್ಯಭೂತ್ ॥ ೨೬೯ ॥**

ತತ್-ಆದ್ದರಿಂದ (ವಿರಕ್ತರಿಗೂ ಮುಕ್ತಿಕಾಲೀನವಾದ ಸುಖಮಾತ್ರ ಭೋಗವು ಸಿದ್ಧವಿರುವುದರಿಂದ), ಇಹ-ಈ ಲೋಕದಲ್ಲಿ, ಕ್ಲೇಶಭಾಕ್-ದುಃಖ (ಕಷ್ಟ) ಭಾಗಿಯಾದ, ಯೋಗೀ-ವಿರಕ್ತನೂ (ಜ್ಞಾನಿಯೂ), ತಸ್ಯ-ಆತನಿಗೆ, ಮುಕ್ತಿಗಂ-ಮುಕ್ತ ಸ್ಥಾನದಲ್ಲಿರುವ, ಸುಖಂ-ನಿರಂತರ ಸುಖವು, ಅಸ್ತಿ-ಇರುತ್ತದೆ; ತಸ್ಮಾತ್-ಆದ ಕಾರಣದಿಂದ, (ವಿರಕ್ತರಿಗೂ ಮುಕ್ತಿಕಾಲೀನವಾದ ಸುಖಮಾತ್ರ ಭೋಗವು ಇರುವುದರಿಂದ), (ಅಧಿಕಾರಿಗಳಾದ ಇಂದ್ರಾದಿ ದೇವತೆಗಳಂತೆ ಲೋಕಶಾಸನಾದಿ ರಹಿತ ಸುಖ ಮಾತ್ರ ಭೋಗವಿರುವುದರಿಂದ) ಮುಕ್ತಸುಖೇಷು-ಮುಕ್ತಜೀವರ ಭೋಗಗಳಲ್ಲಿಯೂ, ತಾರತಮ್ಯಂ-ಅಧಿಕ ಕನಿಷ್ಠಗಳೆಂಬುದು (ತರತಮಭಾವವು), ತವಾಪಿ-ನಿನಗೂ ಸಹ, ಅಭೂತ್-ಸಿದ್ಧವಾಯಿತು.

**ಅತಃ ಕಾಮಾರ್ಥಸಂಪತ್ತ್ಯಾ ಹ್ಯಕಾಮಹತತಾಸ್ತ್ವಿಯಂ ।**
**ಅಕಾಮಸ್ಯ ವೃಥಾ ಕಾಮಹತತಾ ವಾಙ್ನಚೇತ್ತವ ॥ ೨೭೦ ॥**

---

ನಾಗಿ; ಮೂರು ಲೋಕಗಳನ್ನು ಆಳುತ್ತಾನೆ; ಸಂಸಾರಾವಸ್ಥೆಯಲ್ಲಿರುವ ಆತನೇ ಪಂಚಾಗ್ನಿ ಮಧ್ಯದಲ್ಲಿ ಕೂತು ತಪಸ್ಸನ್ನು ಸರ್ವದಾ ಆಚರಿಸುತ್ತಿರುವನು; ಮುಕ್ತೇಂದ್ರಸದೃಶ ಸುಖವು ಆತನಿಗೆಲ್ಲಿ ಬರುತ್ತದೆ? (೨೬೮). ಆದ್ದರಿಂದ ವಿರಕ್ತರಿಗೆ ಮುಕ್ತಿಯಲ್ಲಿ ಸುಖವು ಸಿದ್ಧವಿದೆ; ಇಲ್ಲಿ, ಮುಕ್ತಿ ಸಾಧನದಲ್ಲಿರುವಾಗ, ಬಹುಕ್ಲೇಶಗಳನ್ನೇ ಅನುಭವಿಸಬೇಕು; ಆದ್ದರಿಂದ ಸುಖತಾರತಮ್ಯವನ್ನು ಮುಕ್ತಿಯಲ್ಲಿ ಮಾತ್ರ ಹೇಳಬೇಕು; ನೀನಾದರೂ ಈ ವಾದವನ್ನು ಅಂಗೀಕರಿಸಬೇಕು (೨೬೯). ಕಾಮಿತವಾದ ಭೋಗ್ಯವಸ್ತುಗಳ ಪರಿಪೂರ್ಣತ್ವವಿದ್ದರೆ ಮಾತ್ರ

ಅಕಾಮಹತತ್ವಶಬ್ದವೇ ಮುಕ್ತಪ್ರಕರಣವೆಂಬುದನ್ನು ಸಾಧಿಸುತ್ತದೆ; ಅಮುಕ್ತರು ವಿರಕ್ತರು-ಕಾಮರಹಿತರು; ಕಾಮಿಸಿದುದು ಲಭಿಸದಿದ್ದರೆ, ಕಾಮಹತನೆನಿಸುವನು; ಇಚ್ಛಿಸಿದುದೆಲ್ಲ ದೊರಕಿದರೆ ಅಕಾಮಹತನೇ ಸರಿ; 'ಸಂಕಲ್ಪಾದೇವ ತಚ್ಛ್ರುತೇಃ' ಎಂಬ ಸೂತ್ರವು, ಇಚ್ಛಾಮಾತ್ರದಿಂದ ಸರ್ವಕಾಮಗಳೂ ಸಿದ್ಧವಾಗುತ್ತವೆಂದು, ನಿರ್ಣಯಿಸಿ ಹೇಳಿರುತ್ತದೆ; ಈ ಕಾರಣದಿಂದ ಮುಕ್ತಪ್ರಕರಣತ್ವವೆಂಬುದನ್ನು ಸ್ಥಾಪಿಸುತ್ತಾರೆ:—

ಅತಃ-ಆದ್ದರಿಂದ (ಮುಕ್ತಿಯಲ್ಲಿಯೇ ಸಕಲ ಕಾಮ್ಯಗಳ ಪ್ರಾಪ್ತಿಯಾದ್ದರಿಂದ), ಇಯಂ ಅಕಾಮಹತತಾ ತು-ಶ್ರುತ್ಯುಕ್ತ ಅಕಾಮಹತತ್ವವಾದರೋ, ಕಾಮಾರ್ಥಸಂಪತ್ತ್ಯಾ ಹಿ-ಇಚ್ಛಿತ ವಸ್ತುಗಳ ಪರಿಪೂರ್ಣತೆಯಿಂದಲೇ ಆಗಿರುತ್ತದೆ; ಅಕಾಮಸ್ಯ-ಭೋಗೇಚ್ಛೆಯೇ ಇಲ್ಲದವನಿಗೆ, ಅಕಾಮಹತತಾವಾಕ್-ಕಾಮಹತನಲ್ಲವೆಂಬ ನುಡಿಯು, ತವ-ನಿನಗೆ (ನಿನ್ನಂತೆ), ನ ಚೇತ್-ಮುಕ್ತಪರವಲ್ಲದಿದ್ದರೆ, ವೃಥಾ-ವ್ಯರ್ಥವೇ (ಸರಿ).

**ವಿರಕ್ತಾಃ ಸರ್ವಸಂಪತ್ತೌ ವಿರಕ್ತಾಃ ಸ್ಯುರ್ನ ಕುತ್ರಚಿತ್ ।**
**ತತ್ತತ್ಪದೇಷ್ವಕಾಮಾಸ್ತೇ ವಿರಕ್ತಾಃ ಕ್ವ ವ್ಯವಸ್ಥಯಾ ॥ ೨೭೦ ॥**

**ತವ! ನೀಚಪದಾಕಾಮಾತ್ಸುಖಂ ಶತಗುಣೋತ್ತರಂ ।**
**ಭವೇದುಚ್ಚಪದಾಕಾಮೇ ಕಥಂ ಸ್ಯುಸ್ತಾದೃಶರ್ಷಯಃ ॥ ೨೭೨ ॥**

**ಯದಿ ಸರ್ವಪದಾ ಕಾಮಾಃ ಸರ್ವೇ ತರ್ಹಿ ಸುಖೇ ಸಮಾಃ ।**
**ಭವೇಯುಸ್ತಾರತಮ್ಯೇನ ಸುಖಿತಾ ತೇಷು ಕಿಂ ಕೃತಾ ॥ ೨೭೩ ॥**

ಮನುಷ್ಯಗಂಧರ್ವಪದೇಚ್ಛೆಗಿಂತ ದೇವಗಂಧರ್ವಪದೇಚ್ಛೆಯು, ಶತಗುಣಾಧಿಕ ಆನಂದವುಳ್ಳದ್ದಾದ್ದರಿಂದ, ಇಚ್ಛಿತವೇ ಆಗುತ್ತದೆ; ಹಾಗೆ ಮೇಲಿನ ಅಧಿಕಾನಂದದ

---

ಶ್ರುತ್ಯುಕ್ತ ಅಕಾಮಹತತ್ವವೆನಿಸುತ್ತದೆ; ಇದು ಮುಕ್ತ ವ್ಯಾವರ್ತಕ ಲಕ್ಷಣವು; ಹಾಗಲ್ಲದಿದ್ದರೆ (ಮುಕ್ತಪರವಲ್ಲದಿದ್ದರೆ), ಅಕಾಮಹತತ್ವವೆಂಬ ಪದವು ವ್ಯರ್ಥವೇ ಆಗುತ್ತದೆ; ಅಕಾಮನು (ಕಾಮ್ಯ ಶೂನ್ಯನು, ವಿರಕ್ತನು) ಅಕಾಮಹತನಲ್ಲ; 'ಸಂಕಲ್ಪಾದೇವ ತಚ್ಛ್ರುತೇಃ' ಎಂಬ ಸೂತ್ರವು ಈ ವಿಷಯಕ ನಿರ್ಣಯವನ್ನು ಸಾಧಿಸಿರುತ್ತದೆ (೨೭೦). ಎಲ್ಲ ಭೋಗಗಳು ಪರಿಪೂರ್ಣವಾಗಿರಲು, ಸರ್ವರೂ,

ಪದವನ್ನು ಕಾಮಿಸದಿದ್ದರೆ ಆಯಾ ಪದಸ್ಥರು ಅಕಾಮಹತರು ಹೇಗಾಗುವರು? ಆನಂದತಾರತಮ್ಯವೂ ತಪ್ಪಿಹೋಗುತ್ತದೆ, ಎಂಬ ಸಂಶಯವನ್ನು ಪರಿಹರಿಸುತ್ತಾರೆ:—

ಸರ್ವಸಂಪತ್ತೌ – ಎಲ್ಲ ಕಾಮಗಳು ಪೂರ್ಣವಾಗಿರಲು, ಕುತ್ರಚಿತ್–ಎಲ್ಲಿಯೂ, ವಿರಕ್ತಾಃ–ವಿರಕ್ತರೇ, ನ ಸ್ಯುಃ–ಇಲ್ಲದಾಗುವರು, ತತ್ತತ್ಪದೇಷು–ಆಯಾ (ಮನುಷಗಂಧರ್ವಾದಿ) ಪದಗಳಲ್ಲಿ, ಅಕಾಮಾಃ – ಇಚ್ಛೆಯಿಲ್ಲದ, ತೇ ವಿರಕ್ತಾಃ–ಆ ವಿರಕ್ತಮುಕ್ತರು, ಕ್ವ ವ್ಯವಸ್ಥಯಾ–ಎಲ್ಲಿ ಯಾವ ವ್ಯವಸ್ಥೆಯಿಂದ (ಸಿದ್ಧರಾಗುವರು?); (ಅಥವಾ ಪಾಠಾಂತರದಂತೆ, ತೇ ವಿಭಕ್ತಾಃ–ಆ ಮುಕ್ತರು ಹೇಗೆ ಪ್ರತ್ಯೇಕಿಸಲ್ಪಡುವರು? ಅವರನ್ನು ತಿಳಿಯುವ ಬಗೆ ಹೇಗೆ?); ತವ–ನಿನ್ನಂತೆ, ನೀಚಪದಾಕಾಮಾತ್–ಕೆಳಗಿನ ಪದವನ್ನು ಇಚ್ಛಿಸುವುದಕ್ಕಿಂತ, ಶತಗುಣೋತ್ತರಂ–ಮೇಲಿನ ಪದವು ಶತಗುಣಾಧಿಕ ಆನಂದವುಳ್ಳದ್ದು, ಭವೇತ್–ಆದರೆ (ಆಗುತ್ತದೆ), ಉಚ್ಚಪದಾಕಾಮೇ–ಮೇಲಿನ ಪದವನ್ನು ಕಾಮಿಸದಿರಲು, ಕಥಂ–ಹೇಗೆ, ತಾದೃಶರ್ಷಯಃ–ಆ ವಿಧ ಜ್ಞಾನಿಗಳು, ಸ್ಯುಃ–ಆಗುವರು?; ಯದಿ ಸರ್ವಪದಾಕಾಮಾಃ–ಸರ್ವರೂ ಯಾವ ಪದವನ್ನೂ ಇಚ್ಛಿಸದಿದ್ದಲ್ಲಿ, ತರ್ಹಿ–ಆಗ, ಸರ್ವೇ–ಸರ್ವಮುಕ್ತರೂ, ಸುಖೇ–ಸುಖದಲ್ಲಿ, ಸಮಾಃ–ಸಮಾನರೇ, ಭವೇಯುಃ–ಆಗುವರು; ತೇಷು–ಅವರಲ್ಲಿ, ತಾರತಮ್ಯೇನ–ತರತಮಭಾವದಿಂದ, ಸುಖಿತಾ–ಸುಖಿತ್ವವು (ಸುಖವುಳ್ಳವರೆಂಬುದು), ಕಿಂ ಕೃತಾ–ಯಾವ ಉದ್ದೇಶದಿಂದ (ಯಾವ ಪ್ರಯೋಜನವುಳ್ಳದ್ದು)?

---

ವಿರಕ್ತರೇ ಆಗುವರು; ವಿರಕ್ತರೆಂಬುವರೇ ಎಲ್ಲಿಯೂ ಇಲ್ಲದಂತಾಗುವರು; ಮುಕ್ತಪದಗಳಲ್ಲಿ ಆಕಾಂಕ್ಷೆಯಿಲ್ಲದವರೆಂಬುದನ್ನು ಯಾವ ವ್ಯವಸ್ಥೆಯಿಂದ ತಿಳಿಯಬೇಕು? ನೀಚಪದವನ್ನು ಇಚ್ಛಿಸದಿರುವುದಕ್ಕಿಂತ ಉಚ್ಚ ಪದವನ್ನು ಇಚ್ಛಿಸದಿರುವುದು ಶತಗುಣಾಧಿಕ ಆನಂದಕ್ಕೆ ಕಾರಣವಾಗುವುದೆಂತು? ಅಧಿಕಾನಂದದ ಸ್ಥಾನವಿದ್ದರೂ ಕಾಮಿಸದ ಋಷಿಯು (ವಿರಕ್ತನು, ಜ್ಞಾನಿಯು) ಹೇಗೆ ಸಿದ್ಧರಾಗುವರು? ಸರ್ವಪದಗಳನ್ನು ಕಾಮಿಸಿದ ಸರ್ವರೂ ಸಮಸುಖಿಗಳಾಗಬೇಕಾಗಿ ಪ್ರಾಪ್ತವಾಗಿ, ಆನಂದ ತಾರತಮ್ಯಕ್ಕೆ ಸ್ಥಾನವಿಲ್ಲದಂತಾಗುತ್ತದೆ; ಮುಕ್ತರಲ್ಲಿ ಸುಖಿತ್ವ ತಾರತಮ್ಯವು ಏತಕ್ಕಾಗಿ (ಯಾವ ಪ್ರಯೋಜನವುಳ್ಳದ್ದು? (೨೭೧–೨೭೩).

**ಅತಸ್ತತ್ತತ್ಪದಾಕಾಮಃ ಸಕಾಮೋಽನ್ಯಪದೇಷು ಚ ।**
**ಭವೇದಸೌ ಮಹಾಯೋಗೀ ಕಾ ಗೀಸ್ತಂ ಬಾಧಿತಂ ವದೇತ್ ॥೨೭೪॥**

ಅತಃ–ಆದ್ದರಿಂದ, ತತ್ತತ್ಪದಾಕಾಮಃ–ಆಯಾ (ತನ್ನ) ಪದವನ್ನು ಇಚ್ಛಿಸದವನು, ಅನ್ಯಪದೇಷು–ಬೇರೆ (ಉಚ್ಚ) ಪದಗಳಲ್ಲಿ, ಸಕಾಮಃ ಚ–ಕಾಮನೆಯುಳ್ಳವನೇ, ಅಸೌ ಮಹಾಯೋಗೀ – ಈ ಮಹಾಯೋಗಿಯು (ವಿರಕ್ತ ಜ್ಞಾನಿಯು), ಭವೇತ್–ಆಗುವನು; ತಂ–ಆತನನ್ನು, ಕಾ ಗೀಃ–ಯಾವ ವಾಕ್ಯವು, ಬಾಧಿತಂ – ಬಾಧಿತನನ್ನಾಗಿ (ವಿರುದ್ಧ ವರ್ತನೆಯುಳ್ಳವನೆಂದು), ವದೇತ್–ಹೇಳೀತು ? (ಶಕ್ಯವಿಲ್ಲ).

**ಭೋಗ್ಯಾರ್ಥತಾರತಮ್ಯೇ ಸ್ಯಾತ್ತಾರತಮ್ಯಂ ಸುಖಸ್ಯ ಚ ।**
**ತತ್ತ್ಯಾಗೇಽಪಿ ಸುಖಸ್ಯೋಚ್ಚನೀಚತೇತ್ಯದ್ಭುತಂ ವಚಃ ॥ ೨೭೫ ॥**

ಭೋಗ್ಯಾರ್ಥತಾರತಮ್ಯೇ – ಭೋಗಿಸುವ ಪದಾರ್ಥತಾರತಮ್ಯವಿದ್ದಲ್ಲಿ, (ಸಿಹಿ, ಖಾರ ಇತ್ಯಾದಿ ವಸ್ತುಗಳಂತೆ), ಸುಖಸ್ಯ–(ಅದರ ಅನುಭವಜನಿಕ) ಸುಖದ, ತಾರತಮ್ಯಂ ಚ–ತಾರತಮ್ಯವೂ (ಇರುತ್ತದೆ), ತತ್ತ್ಯಾಗೇಽಪಿ–ಅದನ್ನು ಬಿಟ್ಟರೂ (ಭೋಗ್ಯವಸ್ತುವನ್ನೇ ಗಣನೆಗೆ ತಾರದೇ), ಸುಖಸ್ಯ–ಸುಖದ, ಉಚ್ಚನೀಚತಾ–ಉತ್ಕೃಷ್ಟತ್ವ ಕನಿಷ್ಠತ್ವಗಳೆಂಬ, ವಚಃ–ಮಾತು, (ಅಭಿಪ್ರಾಯವು), ಏತತ್–ಅದು, ಅದ್ಭುತಂ–ಆಶ್ಚರ್ಯವೇ ಸರಿ.

---

ಆದ್ದರಿಂದ ತಂತಮ್ಮ ಪದಗಳಲ್ಲಿ (ಮುಕ್ತ ಸ್ಥಾನಗಳಲ್ಲಿ) ಕಾಮರಹಿತವಾದ ಮುಕ್ತರು, ಉಚ್ಚ (ಮೇಲಿನ ಶತಗುಣಾಧಿಕಾನಂದವುಳ್ಳ) ಪದದಲ್ಲಿ ಕಾಮವುಳ್ಳವರೇ ಆಗುತ್ತಾರೆ; ಮುಕ್ತನೆಂಬ ಈ ಮಹಾಯೋಗಿಯನ್ನು ಯಾವ ಶ್ರುತಿ ವಾಕ್ಯವು, ಇಲ್ಲವೆಂದು ಹೇಳೀತು ? ಆತನನ್ನು ವಿರುದ್ಧ ವರ್ತನೆಯುಳ್ಳವನೆಂದು ಹೇಳಲಾದೀತೇ ? (೨೭೪). ಭೋಗ್ಯವಸ್ತುಗಳ ತಾರತಮ್ಯವೇ (ಸಿಹಿ, ಖಾರಾದಿ ವಸ್ತುಗಳ ಭೋಗವು ಸುಖಕ್ಲೇಶಾದ್ಯನುಭವಗಳನ್ನು ಉಂಟುಮಾಡುವುದರಿಂದ) ಸುಖದ ತಾರತಮ್ಯವೂ ಸಿದ್ಧವಾಗುತ್ತದೆ; ಅವುಗಳನ್ನು ಬಿಟ್ಟೇ (ಗಣನೆಗೆ ತಾರದೇ) ಸುಖದ ಉಚ್ಚ ನೀಚತ್ವಗಳನ್ನು ಹೇಳುವುದು (ಸುಖತಾರತಮ್ಯದ

**ಕಿಂ ಕೂಪಸ್ಥಜಲಾಕಾಮಾತ್ಸುಖಂ ಶತಗುಣೋತ್ತರಂ ।**
**ತಟಾಕಸ್ಥಜಲಾಕಾಮೇ ಪಿಪಾಸಾರಹಿತೇ ವದ ॥ ೨೭೬ ॥**
**ಸೂಕ್ಷ್ಮಭಾಂಡೋದನಾಕಾಮಾತ್ಸುಖಂ ಶತಗುಣೋತ್ತರಂ ।**
**ಸ್ಥೂಲಭಾಂಡೋದನಾಕಾಮೇ ಬುಭುಕ್ಷಾರಹಿತೇಽಸ್ತಿ ಕಿಂ ॥ ೨೭೭ ॥**

ಇದನ್ನೇ ನಿದರ್ಶನದ್ವಾರಾಪ್ರದರ್ಶಿಸುತ್ತಾರೆ :—

ಪಿಪಾಸಾರಹಿತೇ—ನೀರಡಿಕೆ ಇಲ್ಲದವನಲ್ಲಿ (ಬಾಯಾರಿಕೆಯಿಲ್ಲದವನಲ್ಲಿ), ಕೂಪಸ್ಥಜಲಾಕಾಮಾತ್—ಬಾವಿನೀರನ್ನು ಇಚ್ಛಿಸದಿರುವುದಕ್ಕಿಂತ, ತಟಾಕಸ್ಥ ಜಲಾಕಾಮೇ—ಕೆರೆಯ ನೀರನ್ನು ಅಪೇಕ್ಷಿಸದಿರುವುದರಲ್ಲಿ, ಶತಗುಣೋತ್ತರಂ—ನೂರುಮಡಿ (ಅಧಿಕವಾದ), ಸುಖಂ ಕಿಂ—ಸುಖವಿರುವುದೇನು ? (ಉಚ್ಚನೀಚ ಪದಸ್ಥರಿಬ್ಬರೂ ಅಕಾಮಹತರಾಗಿರುವಾಗ ಸುಖ ತಾರತಮ್ಯಕ್ಕೆ ಕಾರಣವಿಲ್ಲ ವೆಂಬಲ್ಲಿ ದೃಷ್ಟಾಂತವಿದೆ) ; (ಹೀಗೆಯೇ), ಬುಭುಕ್ಷಾರಹಿತೇ—ಹಸಿವಿಲ್ಲದವನಲ್ಲಿ, ಸೂಕ್ಷ್ಮ ಭಾಂಡೋದನಾಕಾಮಾತ್—ಸಣ್ಣತಪ್ಪಲೆಯಲ್ಲಿನ ಅನ್ನವನ್ನು ಇಚ್ಛಿಸ ದಿರುವುದಕ್ಕಿಂತ, ಸ್ಥೂಲಭಾಂಡೋದನಾಕಾಮೇ—ದೊಡ್ಡತಪ್ಪಲೆಯ ಅನ್ನವನ್ನು ಕಾಮಿಸದಿರುವುದು, ಶತಗುಣೋತ್ತರಂ—ನೂರರಷ್ಟು ಹೆಚ್ಚಾದ (ಅಧಿಕವಾದ), ಸುಖಂ—ಸುಖವು. ಅಸ್ತಿ ಕಿಂ—ಇರುವುದೇನು ? (ಇಲ್ಲವಷ್ಟೆ).

**ಕಥಂಚಿತ್ಕಾಮಶೂನ್ಯೋ ಯಃ ಸೋಽಕಾಮಹತ ಉಚ್ಯತಾಂ ।**
**ಪದಂ ನ ಪದಲಭ್ಯಂ ತೇ ತತೋಽಪ್ಯೇತದಲೌಕಿಕಂ ।**
**ಶ್ರುತ್ಯುಕ್ತಾ ವೃಜಿನತ್ವಂ ತು ಘಟತೇ ನ ಕಥಂಚನ ॥ ೨೭೮ ॥**

ಕಾಮಶೂನ್ಯನು ಅಕಾಮಹತನಲ್ಲ ; ಹತಪದವು ವ್ಯರ್ಥವಾಗುತ್ತದೆನ್ನು ತ್ತಾರೆ :—

---

ನುಡಿಗಳು) ಆಶ್ಚರ್ಯವೇ ಸರಿ (೨೭೫). ನೀರಡಿಕೆಯೇ ಇಲ್ಲದ ಇಬ್ಬರಲ್ಲಿ ಬಾವಿ ಜಲವನ್ನು ಇಚ್ಛಿಸದವನಿಗಿಂತ, ಕೆರೆಯ ಜಲವನ್ನು ಕಾಮಿಸದವನಿಗೆ ಶತಗುಣಾಧಿಕ ಸುಖವೇ ? ಆಶ್ಚರ್ಯವಲ್ಲವೇ ? ಹಾಗೆಯೇ ಹಸಿವಿಲ್ಲದ ಇಬ್ಬರಲ್ಲಿ ಸಣ್ಣ ತಪ್ಪಲೆಯ ಪಕ್ವಾನ್ನವನ್ನು ಕಾಮಿಸದವನಿಗಿಂತ, ದೊಡ್ಡ ತಪ್ಪಲೆಯ ಪಕ್ವಾನ್ನವನ್ನು ಇಚ್ಛಿಸಿದವನಿಗೆ, ನೂರುಮಡಿ ಸುಖವಿರುವುದೇ ? ಅದ್ಭುತವಾದವು ! (೨೭೬—೨೭೭) ಈ ನಿನ್ನ ತಾರತಮ್ಯ ನಿರಾಕರಣ

ಯಃ—ಯಾವನೊಬ್ಬನು, ಕಥಂಚಿತ್—ಯಾವುದೇ ಕಾರಣದಿಂದ (ಅಥವಾ ಕಾರಣವಿಲ್ಲದೇ), ಕಾಮಶೂನ್ಯಃ—ಕಾಮರಹಿತನಾದ, ಸಃ—ಆತನು, ಅಕಾಮ ಹತಃ—ಅಕಾಮಹತನು, (ಎಂದು) ಉಚ್ಯತಾಂ—(ಎಂದು) ಹೇಳಲ್ಪಡಲಿ ; ಪದಂ— ಪದವೆಂಬ ಪದವು (ಶಬ್ದವು), ತೇ—ನಿನಗೆ, ಪದಲಭ್ಯಂ ನ—ಶ್ರುತಿಪದಗಳಲ್ಲಿ ಸಿಕ್ಕುವುದಿಲ್ಲ; ತತಃ ಅಪಿ—ಈ ಕಾರಣದಿಂದಲೂ, ಏತತ್—ಇದು (ನಿನ್ನ ವಾದವು), ಅಲೌಕಿಕಂ — ಅಸಂಭವವಾದುದು (ಈ ಸಂದರ್ಭಕ್ಕೆ ಅನ್ವಯಿಸುವುದಲ್ಲ); ಶ್ರುತ್ಯುಕ್ತಾವೃಜಿನತ್ವಂ ತು—ಶ್ರುತ್ಯುಕ್ತ ಪಾಪರಾಹಿತ್ಯವಾದರೋ, ಕಥಂಚನ— ಹೇಗೂ (ಯಾವ ರೀತಿಯಿಂದಲೂ), ನ ಘಟತೇ—(ಕಾಮಶೂನ್ಯನಿಗೆ ಮಾತ್ರ) ಕೂಡುವುದಿಲ್ಲ (ಪಾಪರಾಹಿತ್ಯವು ಮುಕ್ತರಲ್ಲಿ ಮಾತ್ರ ಕೂಡುತ್ತದೆ).

**ತತ್ತಚ್ಛ್ರುತ್ಯರ್ಥಕಥನಂ ನ ಶ್ರುತ್ಯೈ ರೋಚತೇ ಸತಾಂ ।**
**ಭಾರತೀಹೃದಯಂ ತ್ವೇಕೋ ಭಾರತೋ ವೇತ್ತಿ ನಾಪರಃ ॥ ೨೭೯ ॥**

---

ವಾದವು (ನಿದರ್ಶನಗಳೂ) ಪ್ರಕೃತ ಮುಕ್ತಜೀವರಿಗೆ ಅನ್ವಯಿಸುವುದೇ ಇಲ್ಲ ; ಕಾಮಶೂನ್ಯನು ಅಕಾಮನು, ಮಾತ್ರ—ಅಕಾಮಹತನಲ್ಲ ; ಹತಶಬ್ದವು ವ್ಯರ್ಥವಾಗುತ್ತದೆ; ಯಾವುದೇ ಕಾರಣದಿಂದ ಕಾಮಗಳನ್ನು (ವಿಷಯ ಭೋಗವನ್ನು) ತ್ಯಜಿಸಿದವನನ್ನು ಅಕಾಮಹತನೆಂದು ಕರೆಯಬೇಕಾದೀತು ! ಕಥಂಚಿತ್ ಎಂಬ ಶ್ಲೋಕದಲ್ಲಿರುವ ಶಬ್ದವು ಹತಪದವು ವ್ಯರ್ಥವೆಂಬುದನ್ನು ಸೂಚಿಸಲಿಕ್ಕಾಗಿ ಇದೆ; ಶ್ರುತಿಯಲ್ಲಿ 'ಪದ' ಎಂಬ ಪದವಿಲ್ಲ; ಪದಲಭ್ಯ ಕಾಮಗಳಿಂದ ಶೂನ್ಯನೆಂಬ ಅರ್ಥವು ಸಿದ್ಧವೇ ಆಗುವುದಿಲ್ಲ; ಮುಕ್ತನು (ಯಾವನೂ) ಅಯೋಗ್ಯ (ತನಗೆ ಯೋಗ್ಯವಲ್ಲದ ಕಾಮನೆಗಳನ್ನು ಹೊಂದುವುದೇ ಇಲ್ಲ—ಮುಕ್ತನಿಗೆ ಪೂರ್ಣ ಸ್ವರೂಪಯೋಗ್ಯತೆಯು ತಿಳಿದಿರುತ್ತದೆ; ಕಾಮಿಸಿದುದು ಲಭಿಸದಿರುವುದೂ ಇಲ್ಲ ; ಇದೇ 'ಶ್ರೋತ್ರಿಯಸ್ಯ ಚಾಕಾಮಹತಸ್ಯ' ಎಂಬಲ್ಲಿ ಹೇಳಿದ ಅಕಾಮಹತತ್ವವು ಇದೇ ಆಗಿದೆ; ಪಾಪರಾಹಿತ್ಯವೆಂಬುದು (ಅವೃಜಿ ನತ್ವವು) ಅಮುಕ್ತರಿಗೆ ಕೂಡುವುದೇ ಇಲ್ಲ—ಸಂಭಾವ್ಯವೇ ಅಲ್ಲ—ಮುಕ್ತರು ಮಾತ್ರ ಪಾಪರಹಿತರು ; ಈ ಉಭಯ ಲಕ್ಷಣಗಳು ಮುಕ್ತರನ್ನು ವ್ಯಾವರ್ತಿಸುತ್ತವೆ— ಆನಂದ ತಾರತಮ್ಯಾದಿಗಳೂ ಸಿದ್ಧವಾಗುತ್ತವೆ (೨೭೮). ಶ್ರುತಿ ತಾತ್ಪರ್ಯ (ಹೃದಯವು, ಗೂಢಾರ್ಥ) ಕಥನವು, ಸಜ್ಜನರಿಗಾಗಲಿ ಶ್ರುತ್ಯಭಿಮಾನಿ ಭಾರತೀ

**ಅನುಸಂಧೀಯತಾಂ ಚರ್ಚಾ ಮಹತೀ ಮೂಲಶಾಸ್ತ್ರಗಾ ।**
**ಬುದ್ಧ್ಯಾವಾರೋಹಸಿದ್ಧ್ಯರ್ಥಂ ತತಃ ಕಿಂಚಿದಿಹೋದ್ಧೃತಂ ॥೨೮೦॥**

ತತ್–ಈ ಕಾರಣದಿಂದ, ಸತಾಂ–ಸಜ್ಜನರ (ಸಜ್ಜನರಿಗೆ), ಶ್ರುತ್ಯರ್ಥ ಕಥನಂ–ಶ್ರುತಿಯ ಅರ್ಥವನ್ನು (ತಾತ್ಪರ್ಯವನ್ನು) ಬಿಡಿಸಿ ಹೇಳುವುದು, ಶುತ್ಯೈ-ಶ್ರುತಿಗೂ (ಶ್ರುತ್ಯಭಿಮಾನಿ ದೇವತೆಗೂ), ನ ರೋಚತೇ-ರುಚಿಸುವುದಿಲ್ಲ (ಸರಿತೋರುವುದಿಲ್ಲ); ಭಾರತೀಹೃದಯಂ ತು – ಭಾರತೀದೇವಿಯ (ವಾಣಿ ದೇವಿಯ) ಅಭಿಪ್ರಾಯವನ್ನು ಆದರೂ, ಭಾರತಃ–ವಾಯುದೇವನು, ಏಕಃ– ಒಬ್ಬನೇ (ಪೂರ್ಣವಾಗಿ, ಮುಖ್ಯಾರ್ಥವನ್ನು), ವೇತ್ತಿ-ತಿಳಿಯುತ್ತಾನೆ; ಅಪರಃ– ಅನ್ಯನು, ನ–ತಿಳಿಯುವುದಿಲ್ಲ; ಮೂಲಶಾಸ್ತ್ರಗಾ–ಮೂಲಶಾಸ್ತ್ರದಲ್ಲಿನ (ವೇದದಲ್ಲಿ ಅಡಕವಾಗಿರುವ), ಚರ್ಚಾ–ಚರ್ಚೆಯು (ಜಿಜ್ಞಾಸೆಯು), ಮಹತೀ–ಮಹತ್ವ ವುಳ್ಳದ್ದು (ಮಹಾಫಲವುಳ್ಳದ್ದು); ಅನುಸಂಧೀಯತಾಂ-ನೆನಪಿನಲ್ಲಿಡು; ಬುದ್ಧ್ಯಾವ ರೋಹ ಸಿದ್ಧ್ಯರ್ಥಂ–ಅನುಭವಾರೂಢಮಾಡಿಕೊಡಲು, (ಬುದ್ಧಿಯು ಗ್ರಹಿಸಲು ಅನುಕೂಲಿಸಲೆಂದು), ಕಿಂಚಿತ್–ಸ್ವಲ್ಪಮಾತ್ರವು, ಇಹ–ಇಲ್ಲಿ, ಉದ್ಧೃತಂ– ಮೇಲೆತ್ತಿ ತೋರಿಸಲಾಯಿತು.

**ಅತೋ ಮಿಥೋ ಜೀವಭೇದೋ ಜೀವಬ್ರಹ್ಮವಿಭಿನ್ನತಾ ।**
**ತತ್ತದಾನಂದವೈಚಿತ್ರ್ಯಾತ್ ಸಿದ್ಧಾ ಸಿದ್ಧಾಂತವೇದಿನಾಂ ॥ ೨೮೧ ॥**

---

ದೇವಿಗಾಗಲಿ, ರುಚಿಸುವುದಿಲ್ಲ–ಸರಿತೋರುವುದಿಲ್ಲ; ಭಾರತೀ ಹೃದಯವು ವಾಯುದೇವನೊಬ್ಬನೇ ಬಲ್ಲನು; ಅನ್ಯರಿಗೆ (ಪೂರ್ಣವಾದ ಮುಖ್ಯಾರ್ಥವು) ತಿಳಿಯದು; ಮೂಲಶಾಸ್ತ್ರವಾದ ವೇದದ ತಾತ್ಪರ್ಯ ವಿಷಯಕ ಚರ್ಚೆಯು ಮಹಾ ಫಲವುಳ್ಳದ್ದು; ಅವಶ್ಯವಾಗಿ ನೆನಪಿರಲು ಯೋಗ್ಯವಾದುದು; ಹೀಗೆಂಬುದನ್ನು ಅನುಭವಾರೂಢಮಾಡಿಕೊಡುವುದಕ್ಕಾಗಿ, ಪ್ರಸಕ್ತ ಚರ್ಚೆ ಯನ್ನು ಸ್ವಲ್ಪ ಮಾತ್ರ ಮೇಲೆತ್ತಿ ತೋರಿಸಲಾಯಿತು (೨೭೯–೨೮೦). ಈ ಕಾರಣದಿಂದ, ಪರಸ್ಪರ (ಅನ್ಯೋನ್ಯವಾದ) ಜೀವಭೇದವೂ, ಜೀವಬ್ರಹ್ಮರ ವಿಲಕ್ಷಣ ಭೇದವೂ, ಮುಕ್ತಿಯಲ್ಲಿನ ಆನಂದ ತಾರತಮ್ಯದಿಂದ, ಸಿದ್ಧಾಂತ ಜ್ಞಾನಿಗಳಿಗೆ, ಸಿದ್ಧವಾಗುತ್ತದೆ; ಆದ್ದರಿಂದ, ಫಲಪರ್ಯಂತವಾದ ಸರ್ವವೂ, ಎಂದರೆ ಶ್ರುತ್ಯುಕ್ತವೂ, ಯುಕ್ತಿಸಿದ್ಧವೂ ಆದ, ಸ್ಮೃತಿಮತವು (ಸ್ಮೃತಿಗಳ

**ತಸ್ಮಾಚ್ಛ್ರೌತಂ ಚ ಯೌಕ್ತಂ ಚ ಮಧ್ವಸ್ಯ ಮತಮಾಫಲಾತ್ ।**
**ಹೃದ್ಯಂ ಚ ನಿರವದ್ಯಂ ಚ ತತ್ಸರ್ವಮತಿಮಂಗಲಂ ॥ ೨೮೨ ॥**

ಅತಃ—ಆದ್ದರಿಂದ, ಮಿಥಃ—ಪರಸ್ಪರವಾಗಿ, ಜೀವಭೇದಃ—ಜೀವಭೇದವೂ, ಜೀವಬ್ರಹ್ಮವಿಭಿನ್ನತಾ—ಜೀವಬ್ರಹ್ಮರ ವಿಶೇಷ (ವಿಲಕ್ಷಣವಾದ) ಭೇದವೂ, ತತ್ತದಾನಂದ ವೈಚಿತ್ರ್ಯಾತ್ — ಆನಂದ ತಾರತಮ್ಯದಿಂದಲೂ, ಸಿದ್ಧಾಂತ ವೇದಿನಾಂ—ಸಿದ್ಧಾಂತಜ್ಞಾನಿಗಳಿಗೆ, ಸಿದ್ಧಾ—ಸಿದ್ಧವೇ (ಆಗಿದೆ); ತಸ್ಮಾತ್—ಆದ್ದರಿಂದ, ಶ್ರೌತಂ-ಶ್ರುತ್ಯುಕ್ತವೂ, ಯೌಕ್ತಂ ಚ-ಯುಕ್ತಿಸಿದ್ಧವೂ, ಆಫಲಾತ್-ಫಲ ಪರ್ಯಂತವಾದ, ಮಧ್ವಸ್ಯ—ಮಧ್ವದ (ಶ್ರುತ್ಯುಕ್ತವನ್ನೇ ಯುಕ್ತಬದ್ಧವಾಗಿ ನಿರೂಪಿಸುವ) ಸ್ಮೃತಿಗಳ, ಮತಂ—ಮತವು (ತಾತ್ಪರ್ಯವು), ಹೃದ್ಯಂ—ಮನೋಹರವೂ, ಚ—ಮತ್ತು, ನಿರವದ್ಯಂ—ದೋಷರಹಿತವೂ (ನಿರ್ದುಷ್ಟವೂ), ತತ್ಸರ್ವಂ—ಆ ಎಲ್ಲವೂ, ಅತಿಮಂಗಲಂ—ಅತ್ಯಂತವಾಗಿ ಮಂಗಲಪ್ರದವೇ (ಆಗಿದೆ).

**ತೇ ಪ್ರಸಾದೋ ಹರೇ ಸೇವಾನುರೂಪ ಇತಿ ಸಪ್ತಮೇ ।**
**ಪ್ರಹ್ಲಾದೋ ಯತ್ಸ್ಫುಟಂ ಮುಕ್ತೌ ಫಲಂ ಸೇವಾನುಗಂ ಜಗೌ**
**॥ ೨೮೩ ॥**

'ಸಂಸೇವಯಾ ಸುರತರೋರಿವ ತೇ ಪ್ರಸಾದಃ । ಸೇವಾನುರೂಪ ಉದಯೋ ನ ಪರಾವರತ್ವಂ' ಎಂಬ ಭಾಗವತದ, ಭಕ್ತಪ್ರಹ್ಲಾದನ ವಾಕ್ಯದಿಂದ, ಪ್ರಸಾದ ಲಭ್ಯವಾದ ಮುಕ್ತಿಯಲ್ಲಿ ತಾರತಮ್ಯವನ್ನು ಸಾಧಿಸುತ್ತದೆಂದು ನಿರೂಪಿಸುತ್ತಾರೆ :—

ಹರೇ—ಹೇ ಶ್ರೀಹರೇ!, ತೇ—ನಿನ್ನ, ಪ್ರಸಾದಃ-ಪ್ರಸಾದವು (ಅನುಗ್ರಹವು), ಸೇವಾನುರೂಪಃ—(ನಿನ್ನ) ಸೇವಾನುಗುಣವಾದುದು, ಇತಿ—ಎಂದು, ಸಪ್ತಮೇ—(ಭಾಗವತ) ಸಪ್ತಮಸ್ಕಂಧದಲ್ಲಿ, ಪ್ರಹ್ಲಾದಃ — ಪ್ರಹ್ಲಾದನು, ಯತ್ — ಯಾವುದನ್ನು, ಸ್ಫುಟಂ—ಸ್ಪಷ್ಟವಾಗಿ (ಸಂಶಯಕ್ಕೆ ಅವಕಾಶವಿಲ್ಲದೇ), ಮುಕ್ತೌ—

---

ತಾತ್ಪರ್ಯವು), ಅತ್ಯಂತ ಮನೋಹರವೂ, ನಿರ್ದುಷ್ಟವೂ, ಎಂದೇ ಸಿದ್ಧವು ; ಅದೇ ಸರ್ವಮಂಗಲಪ್ರದವು—ಸದ್ಬುದ್ಧಿ ಪ್ರದವೂ ಆಗಿರುತ್ತದೆ (೨೮೧—೨೮೨). ಶ್ರೀಹರಿಪ್ರಸಾದ ಮಾತ್ರ ಲಭ್ಯವಾದುದು, ಮೋಕ್ಷವು; ಆ ಪ್ರಸಾದವು,

ಮುಕ್ತಿಯಲ್ಲಿ, ಸೇವಾನುಗಂ–ಸೇವಾನುರೂಪವಾದ, ಫಲಂ–ಫಲವನ್ನಾಗಿ, ಜಗೌ–ಹೇಳಿರುವನು (ಕೀರ್ತಿಸಿರುವನು) ('ನ ಪರಾವರತ್ವಂ' ಎಂಬುದರಿಂದ, ಸೇವೆ ಇಲ್ಲದೇ ಪ್ರಸಾದವಿಲ್ಲ, ಪ್ರಸಾದವಿಲ್ಲದೇ ಮೋಕ್ಷವಿಲ್ಲವೆಂದು ಹೇಳಿ, ಪ್ರಸಾದದಲ್ಲಿ ತಾರತಮ್ಯವನ್ನು, ತತ್ಪ್ರಯುಕ್ತವಾದ ಫಲತಾರತಮ್ಯವೂ ಸಿದ್ಧವಾಗುತ್ತದೆ–ಪರಾವರತ್ವಂ ನ ಎಂದರೆ ಹೆಚ್ಚು ಕಡಿಮೆಗಳಿಲ್ಲವೆಂದರ್ಥ).

**ತತ್ರೈವ ಮುಕ್ತೌ ಫಲಸಂಪದ ಉಚ್ಚಾವಚಾ ಇತಿ ।**
**ದಾತೈವ ಯತ್ಫಲಾಸಾಮ್ಯಂ ಪ್ರಾಹ ಭಾಗವತೇ ಸ್ಫುಟಂ।**
**ಯುಕ್ತಿಶ್ರುತಿಸ್ಮೃತಿಭ್ಯಸ್ತತ್ಸಿದ್ಧಾ ಮುಕ್ತೋಚ್ಚನೀಚತಾ ॥ ೨೮೪ ॥**

'ನಾಹಂ ತು ಸಖ್ಯೋ ಭಜತೋಽಪಿ ಜಂತೂನ್ ಭಜಾಮ್ಯಮೀಷಾಮನುವೃತ್ತಯೇ ಯಥಾ। ತಥೈವ ಮತ್ತಃ ಫಲಸಂಪದಃ ಸ್ಯುರುಚ್ಚಾವಚಾಃ ಕಲ್ಪತರೋರಿವಾರ್ಥಿನಾಂ' ಎಂಬ (ಭಾಗವತ) ದಶಮಸ್ಕಂಧದಲ್ಲಿ ಶ್ರೀಕೃಷ್ಣನು ತನ್ನ ಪ್ರಿಯ ಗೋಪಿಯರಿಗೆ ಹೇಳಿದ ವಾಕ್ಯದಿಂದ ಸಹ ಮುಕ್ತಿಯಲ್ಲಿ ತಾರತಮ್ಯವು ಸಿದ್ಧವೆಂದು ಗೊತ್ತಾಗುತ್ತದೆನ್ನುತ್ತಾರೆ :—

ತತ್ರ ಏವ–ಭಾಗವತದಲ್ಲಿಯೇ, ಮುಕ್ತೌ–ಮುಕ್ತಿಯಲ್ಲಿ, ಉಚ್ಚಾವಚಾಃ–ಉಚ್ಚನೀಚಗಳಾದ, ಫಲಸಂಪದಃ–(ತ್ರಿಗುಣಸಂಬಂಧವಿಲ್ಲದ)[1] ಫಲಸಂಪತ್ತುಗಳು

ಭಾಗವತದಲ್ಲಿ ಭಕ್ತಪ್ರಹ್ಲಾದನ ಆನುಭವಿಕ ನುಡಿಯಂತೆ, 'ಸೇವಾನುರೂಪ ಉದಯಃ'–ಸೇವಾನುಗುಣವಾಗಿ ಉಂಟಾಗತಕ್ಕದ್ದೆ–ಸೇವೆಯು ಉಚ್ಚ ನೀಚತ್ವ ಲಕ್ಷಣವುಳ್ಳದ್ದಾದ್ದರಿಂದ, ಪ್ರಸಾರವೂ ಹಾಗೆಯೇ ದೊರೆಯತಕ್ಕದ್ದೆ,–ಮುಕ್ತಿಯಲ್ಲಿನ ಫಲವೂ ಅಧಿಕಾರಿ ತಾರತಮ್ಯವನ್ನು ಅನುಸರಿಸಿ ತಾರತಮ್ಯವುಳ್ಳದ್ದೇ ಆಗಿರುತ್ತದೆ ; (ಜೀವಸ್ವರೂಪದಲ್ಲಿ ತಾರತಮ್ಯವಿದ್ದರೆ ಮಾತ್ರ ಜಗತ್ತಿನಲ್ಲಿ ತರತಮ ಭಾವಗಳು ಇರಲು ಶಕ್ಯವಾಗುತ್ತದೆ) (೨೮೩). ಮುಕ್ತಿಯಲ್ಲಿ ಉಚ್ಚ ನೀಚಗಳಾದ (ತರತಮಭಾವವುಳ್ಳ) ಫಲಸಂಪತ್ತುಗಳು ಲಭಿಸುತ್ತವೆಂದು, ಫಲ ದಾತನಾದ ಶ್ರೀಕೃಷ್ಣನೇ, ಭಾಗವತ ದಶಮಸ್ಕಂಧದಲ್ಲಿ, ಸ್ಪಷ್ಟವಾಗಿ ಹೇಳಿರುವನು;

1 'ಹರಿಸ್ತು ನಿರ್ಗುಣಃ ಸಾಕ್ಷಾತ್ ಪುರುಷಃ ಪ್ರಕೃತೇಃ ಪರಃ । ಸ ಸರ್ವದೃಗುಪದ್ರಷ್ಟಾ ತಂ ಭಜನ್ನಿರ್ಗುಣೋ ಭವೇತ್' ಎಂಬ ಸ್ಮೃತಿಯೂ ಶ್ರೀಹರಿ ಭಜನೆಯಿಂದ ಗುಣತ್ರಯಾತ್ಮಕ ಫಲಗಳು ದೊರೆಯುವುದಿಲ್ಲವೆಂದು ಸ್ಪಷ್ಟವಾಗಿ ಹೇಳುತ್ತದೆ.

ಇತಿ—(ದೊರೆಯುತ್ತವೆಂದು) ಎಂಬುದಾಗಿ, ದಾತಾ ಏವ—ಫಲದಾತನಾದ ಶ್ರೀಕೃಷ್ಣನೇ, ಯತ್—ಯಾವ ಕಾರಣದಿಂದ, ಭಾಗವತೇ—ದಶಮ ಸ್ಕಂಧದಲ್ಲಿ, ಸ್ಫುಟಂ—ಸ್ಪಷ್ಟವಾಗಿ, ಫಲಾಸಾಮ್ಯಂ—ಫಲತಾರತಮ್ಯವನ್ನು (ಉಚ್ಚನೀಚ ಫಲಗಳ ಪ್ರಾಪ್ತಿಯನ್ನು), ಪ್ರಾಹ—ಹೇಳಿರುವನೋ, ತತ್—ಆದ್ದರಿಂದ, ಯುಕ್ತಿಶ್ರುತಿ-ಸ್ಮೃತಿಭ್ಯಃ—ಯುಕ್ತಿ, ಶ್ರುತಿ, ಮತ್ತು ಸ್ಮೃತಿಗಳಿಂದ, ಮುಕ್ತೋಚ್ಚನೀಚತಾ—ಮುಕ್ತಿಯಲ್ಲಿನ ತಾರತಮ್ಯವು, ಉಚಿತಾ—ಯೋಗ್ಯವೆಂದು, ಸಿದ್ಧಾ—ಸಿದ್ಧವಾಗುತ್ತದೆ.

**ಮನೋಜವೇಷ್ವಸಮತಾ ಯತ್ಸಖ್ಯಂ ಚೋದಿತಂ ಶ್ರುತೌ ।**
**ತನ್ಮಾತ್ಸರಾದ್ಯಭಾವಶ್ಚ ತತ್ರ ತೇಷಾಂ ಪ್ರಸಿದ್ಧ್ಯತಿ ॥ ೨೮೫ ॥**

ಮುಕ್ತರಲ್ಲಿ ನೀಚರಿಗೆ ಉತ್ತಮರನ್ನು ಕಂಡು ಮಾತ್ಸರ್ಯವೂ, ಉಚ್ಚರಿಗೆ ನೀಚರಲ್ಲಿ ತಿರಸ್ಕಾರವೂ ಉಂಟಾಗಬಹುದೆಂಬ ಶಂಕೆಯನ್ನು ಶ್ರುತ್ಯುಕ್ತ ಯುಕ್ತಿಯಿಂದಲೇ ಪರಿಹರಿಸುತ್ತಾರೆ :—

---

ಯುಕ್ತಿ, ಶ್ರುತಿ ಸ್ಮೃತಿಗಳಿಂದ[1] ಹೀಗೆ ಮುಕ್ತತಾರತಮ್ಯವು ಸಿದ್ಧವಾಗುತ್ತದೆ (೨೮೪). ಸಕಲ ಮುಕ್ತರಲ್ಲಿ ಪರಸ್ಪರ ಮೈತ್ರೀಭಾವವನ್ನು, ಜ್ಞಾನದಲ್ಲಿ ಅಸಮತ್ವವನ್ನು (ತಾರತಮ್ಯವನ್ನು) ಹೇಳುವುದರೊಂದಿಗೆ ಶ್ರುತಿಯು ಹೇಳುವುದ

[1] ಸಾಧನ ತಾರತಮ್ಯವಿದ್ದಲ್ಲಿ ಸಾಧ್ಯತಾರತಮ್ಯವಿರಬೇಕೆಂಬುದು ಯುಕ್ತಿಯು, ಆನಂದ ಮೀಮಾಂಸಾ ರೂಪದ ಶ್ರುತಿಯು, ಉಕ್ತ ಭಾಗವತ ವಾಕ್ಯರೂಪದ ಸ್ಮೃತಿಯು; ಹೀಗೆ ಮೂರು ಪ್ರಮಾಣಗಳಿಂದಲೂ ಸಿದ್ಧವಾಗುವ ಮಹಾ (ಮುಖ್ಯ) ಪ್ರಮೇಯವಿದಾಗಿರುತ್ತದೆ; ಉಕ್ತ ಭಾಗವತ ಶ್ಲೋಕಾರ್ಥವು ಹೀಗಿದೆ :—ಹೇ ಸಖ್ಯಃ—ಎಲೈ ಪ್ರಿಯರೇ, ಅಹಂ ತು—ನಾನಾದರೋ, ಭಜತಃ ಜಂತೂನ್—ಸೇವಿಸುವ ಜೀವರನ್ನು, (ಅಭಜತಃ ಅಪಿ—ಫಲಾರ್ಥಿಗಳಾಗಿ ಸೇವಿಸದವರನ್ನು), ನ ಭಜಾಮಿ—ಅವರ ಇಚ್ಛಾನುಸಾರ ಫಲಕೊಡುವವನು ಆಗುವುದಿಲ್ಲ; ಅಮೀಷಾಂ—ನನ್ನನ್ನು ಸೇವಿಸುವವರ, ಅನುವೃತ್ತಯಃ ಯಥಾ—ಉಪಾಸನೆಗಳು ಹೇಗೋ, ತಥಾ—ಹಾಗೆ (ಉಪಾಸನಾನುಸಾರವಾಗಿ), ಅರ್ಥಿನಾಂ—ಪ್ರಾರ್ಥಿಸುವರಿಗೆ (ಸೇವಿಸುವರಿಗೆ) ಸುರತರೋಃ ಇವ—ಕಲ್ಪವೃಕ್ಷದಂತೆ, (ಸೇವಕರಿಗೆ ದೊರೆಯುವ ಫಲದಂತೆ), ಉಚ್ಚಾವಚಾಃ—ಉಚ್ಚ ನೀಚಗಳಾದ, ಫಲಸಂಪದಃ—ಫಲರೂಪದ ಸಂಪತ್ತುಗಳು, ಮತ್ತಃ—ನನ್ನಿಂದ, (ನನ್ನ ಅನುಗ್ರಹದಿಂದ—ಪ್ರಸಾದದಿಂದಲೇ), ಸ್ಯುಃ—ಆಗುತ್ತವೆ (ಲಭಿಸುತ್ತವೆ).

ಶ್ರುತೌ–ಶ್ರುತಿಯಲ್ಲಿ, ಮನೋಜವೇಷ್ವಸಮತಾ–ಜ್ಞಾನ ಸಾಮರ್ಥ್ಯದಲ್ಲಿ ಅಸಮತ್ವವೂ, ಚ–ಮತ್ತು (ಅದರೊಂದಿಗೆ), ಸಖ್ಯಂ–(ಪರಸ್ಪರ) ಸ್ನೇಹವೂ, ಯತ್–ಯಾವ ಕಾರಣದಿಂದ, ಉದಿತಂ–ಹೇಳಲ್ಪಟ್ಟಿದೆಯೋ, ತತ್–ಆ ಕಾರಣ ದಿಂದ, ಮತ್ಸರಾದ್ಯಭಾವಃ–ಮಾತ್ಸರ್ಯಾದಿ (ಅವಜ್ಞಾ-ತಿರಸ್ಕಾರಾದಿ) ಭಾವಗಳ ಅಭಾವವು, ತೇಷಾಂ–ಮುಕ್ತರಿಗೆ, ತತ್ರ–ಮುಕ್ತಿಯಲ್ಲಿ, ಪ್ರಸಿದ್ಧ್ಯತಿ–ಸ್ಪಷ್ಟ ವಾಗಿ ಸಿದ್ಧವಾಗುತ್ತದೆ.

**ಹರಿಸಾಮ್ಯೋಕ್ತಿವತ್ಕ್ವಾಪಿ ಸಾಮ್ಯೋಕ್ತಿರ್ದುಃಖವರ್ಜನಾತ್ ।**
**ಉಕ್ತಾ ನಿರವಕಾಶಾಸ್ತಾ ಯಚ್ಛ್ರುತಿಸ್ಮೃತಿಯುಕ್ತಯಃ ।**
**ತತ್ಸಿದ್ಧತಾರತಮ್ಯಂ ತನ್ಮುಕುಂದೋಽಪಿ ನ ಮೋಚಯೇತ್ ॥ ೨೮೬ ॥**

ಕ್ವಾಪಿ–ಎಲ್ಲಿಯೋ ಒಂದು ಸ್ಥಲದಲ್ಲಿ, ಸಾಮ್ಯೋಕ್ತಿಃ–ಮುಕ್ತರು ಪರಸ್ಪರ ಸಮರೆಂಬ ವಾಕ್ಯವು, ಹರಿಸಾಮ್ಯೋಕ್ತಿವತ್–'ಮಮ ಸಾಧರ್ಮ್ಯಮಾಗತಾಃ', ಎಂಬ ಗೀತಾವಚನದಂತೆ, ದುಃಖವರ್ಜನಾತ್–ದುಃಖರಾಹಿತ್ಯ ಮಾತ್ರದಿಂದ, ಉಕ್ತಾ–(ಸಾಮ್ಯವು) ಹೇಳಲ್ಪಡುತ್ತದೆ; ಯತ್–ಯಾವ ಕಾರಣದಿಂದ, ತಾಃ–ಪೂರ್ವದಲ್ಲಿ ಹೇಳಲಾದ, ಶ್ರುತಿ ಸ್ಮೃತಿ ಯುಕ್ತಯಃ–ಶ್ರುತಿ, ಸ್ಮೃತಿ, ಯುಕ್ತಿಗಳು, ನಿರವಕಾಶಾಃ–ಅನ್ಯಾರ್ಥಕ್ಕೆ ಅವಕಾಶವಿಲ್ಲದ ಸ್ಪಷ್ಟ ಪ್ರಮಾಣಗಳು (ಆಗಿವೆಯೋ), ತತ್–ಆ ಕಾರಣದಿಂದ, ತತ್ಸಿದ್ಧ ತಾರತಮ್ಯಂ–ಅವುಗಳಿಂದ ಸಿದ್ಧವಾದ ತಾರತಮ್ಯವನ್ನು, ಮುಕುಂದಃ ಅಪಿ–ಶ್ರೀಹರಿಯೂ, ನ ಮೋಚ ಯೇತ್–ತೆಗೆದುಹಾಕಲಾರನು (ಇಲ್ಲದಂತೆ ಮಾಡುವುದಿಲ್ಲ) (ತಾರತಮ್ಯವನ್ನು ತೊಲಗಿಸುವುದಿಲ್ಲ).

---

ರಿಂದ, ಮಾತ್ಸರ್ಯ, ಅವಜ್ಞಾದಿ ಭಾವಗಳಿಗೆ ಅವಕಾಶವಿರುವುದಿಲ್ಲವೆಂದೇ ಸಿದ್ಧ ವಾಗುತ್ತದೆ (೨೮೫). ಕೆಲವೊಂದು ಸ್ಥಲದಲ್ಲಿ ಕಾಣುವ ಸಾಮ್ಯೋಕ್ತಿಯು, 'ಮಮ ಸಾಧರ್ಮ್ಯಮಾಗತಾಃ'–ನನ್ನ ಸಮಾನ ಧರ್ಮವನ್ನು ಹೊಂದುವರೆಂದು ಗೀತೆಯಲ್ಲಿ ಶ್ರೀಕೃಷ್ಣನು ಹೇಳಿರುವ ಸಾಮ್ಯದಂತೆ, ದುಃಖವರ್ಜನ ಮಾತ್ರದಿಂದ, ಆಗಿರುತ್ತದೆಯಲ್ಲದೇ ತಾರತಮ್ಯ ವಿಘಾತಕವಲ್ಲ; ಉಕ್ತವಾದ ಶ್ರುತಿ ಸ್ಮೃತಿ, ಯುಕ್ತಿಗಳು ನಿರವಕಾಶಗಳಾಗಿರುವುದರಿಂದ ಅನಾದಿ ನಿತ್ಯವಾದ ಮುಕ್ತರ

**ಗುರೋಃ ಶಿಷ್ಯಸ್ಯ ಪಾಂಥಸ್ಯ ಕಾಕಸ್ಯ ಚ ಪಶೋರಪಿ ।**
**ದ್ವಿತೀಯಾಶೈವ ಯದ್ದೃಷ್ಟಾ ಸುಖಂ ಕಸ್ಯಾದ್ವಿತೀಯತಾ ॥ ೨೮೭ ॥**

ಮಾಯಾವಾದಿಯು ಪರಮಮೋಕ್ಷವೆಂದು ಹೇಳುವ ದ್ವಿತೀಯರಾಹಿತ್ಯವೆಂಬ ಅದ್ವಿತೀಯತ್ವವು ಸುಖವಿರೋಧವೆಂಬ ಕಾರಣದಿಂದ ಮೋಕ್ಷವೇ ಅಲ್ಲವೆಂಬಲ್ಲಿ ಲೌಕಿಕ, ಅಲೌಕಿಕ ದೃಷ್ಟಾಂತಗಳನ್ನು ತೋರಿಸುತ್ತಾರೆ :—

ಯತ್ – ಯಾವ ಕಾರಣದಿಂದ, ಗುರೋಃ – ಗುರುವಿಗೂ, ಶಿಷ್ಯಸ್ಯ– ಶಿಷ್ಯನಿಗೂ (ಗುರುವಿಗೆ ಶಿಷ್ಯಾಭಾವದಿಂದ ದುಃಖವೂ, ಶಿಷ್ಯರಿಗೆ ಗುರುವಿಲ್ಲದ್ದರಿಂದ ದುಃಖವೂ ಕಂಡಿದೆ), ಪಾಂಥಸ್ಯ–ದಾರಿನಡೆಯುವವನಿಗೂ, ಕಾಕಸ್ಯ–ಕಾಗೆಗೂ, ಪಶೋಃ ಅಪಿ–ಪಶುವಿಗೂ ಸಹ, ದ್ವಿತೀಯಾಶಾ–ಎರಡನೇ ವಸ್ತುವಿನ ಆಶೆಯು (ಅಪೇಕ್ಷೆಯು ಸುಖಾರ್ಥವಾಗಿ), ದೃಷ್ಟಾ–(ಲೋಕದಲ್ಲಿ) ಕಂಡಿದೆ ; ಕಸ್ಯ– ಯಾರಿಗೆ, ಅದ್ವೀಯತಾ–ಅದ್ವಿತೀಯತ್ವವು (ಒಂಟಿಗನಾಗಿರುವುದು), ಸುಖಂ– ಸುಖಪ್ರದವು ? (ಯಾರಿಗೂ ಅಲ್ಲ), (ಸುಖವಿಲ್ಲದ ಮೋಕ್ಷವು ಪುರುಷಾರ್ಥವೇ ಅಲ್ಲ).

**ನಶ್ವರಂ ಯದಿ ಹ್ಯೈಶ್ವರ್ಯಮತೋಽನಶ್ವರಸಂಪದೇ ।**
**ಸ್ವರ್ಗಾರ್ಥೀ ಕುರುತೇ ಯಜ್ಞಂ ಸುಖಂ ಕಸ್ಯಾದ್ವಿತೀಯತಾ ॥೨೮೮॥**

ಯತ್ (ಯಸ್ಮಾತ್)–ಯಾವ ಕಾರಣದಿಂದ, ಇಹ–ಈ ಲೋಕದಲ್ಲಿ, ನಶ್ವರಂ–ನಾಶವುಳ್ಳ (ಕ್ಷಣಿಕವಾದ), ಐಶ್ವರ್ಯಂ–(ಧನ ಗೃಹಾದಿ) ಸಂಪತ್ತನ್ನು,

---

ತಾರತಮ್ಯವನ್ನು ಶ್ರೀಹರಿಯೂ ತೊಡೆದು ಹಾಕುವುದಿಲ್ಲ (೨೮೬). ಗುರು ಶಿಷ್ಯರಲ್ಲಿ ಪರಸ್ಪರ ಅಭಾವದಿಂದ (ಗುರುವಿಲ್ಲದ ಶಿಷ್ಯನಿಗೂ, ಶಿಷ್ಯನಿಲ್ಲದ ಗುರುವಿಗೂ) ದುಃಖವು ಕಂಡಿದೆ; ದಾರಿ ನಡೆಯುವವನಿಗೂ ಸಂಗಡಿಗನು ಬೇಕು– ಅಭಾವದಲ್ಲಿ ದುಃಖವು (ಕ್ಲೇಶವು) ಕಂಡಿವೆ ; ಕಾಗೆ, ಪಶು ಮುಂತಾದ ಪ್ರಾಣಿ ಮಾತ್ರಕ್ಕೂ ಸುಖಾರ್ಥವಾಗಿ, ಎರಡನೆಯ ವಸ್ತುವಿನ ಆಶೆಯಿದೆ ; ಹೀಗಿರಲು ಅದ್ವಿತೀಯನಿಗೆ ಸುಖವೆಲ್ಲಿ ? (೨೮೭). ಧನ, ಗೃಹಾದಿ ಇಹ ಐಶ್ವರ್ಯವು ನಶ್ವರವು (ಕ್ಷಣಿಕವು–ಅಲ್ಪಕಾಲವಿರತಕ್ಕದ್ದು ;) ಈ ಕಾರಣದಿಂದ ಚಿರಕಾಲ ಸ್ಥಾಯಿಯಾದ ಸುಖಕ್ಕಾಗಿ, ಸ್ವರ್ಗವನ್ನು ದೊರಕಿಸಿಕೊಳ್ಳಲು, ಬಹುಯತ್ನದಿಂದ

ಅತಃ–ಅದಕ್ಕಿಂತ, ಅನಶ್ವರಂ–ಚಿರಕಾಲವಿರುವ ಸ್ವರ್ಗೈಶ್ವರ್ಯವನ್ನು, ಸಂಪದೇ–ಅವುಗಳ ಸಂಪಾದನೆಗಾಗಿ, ಸ್ವರ್ಗಾರ್ಥೀ–ಸ್ವರ್ಗವನ್ನು ಇಚ್ಛಿಸಿ, ಯಜ್ಞಂ–ತತ್ಸಾಧನವಾದ (ಆ ಫಲಕ್ಕೆ ಆಶ್ರಯವಾದ) ಯಜ್ಞವನ್ನು, ಕುರುತೇ –(ಜೀವನು) ಮಾಡುತ್ತಾನೋ, (ಎಲ್ಲರೂ ಸುಖಾರ್ಥಿಗಳೇ ಆಗಿ ಯತ್ನಮಾಡುವರಾದ್ದರಿಂದ), ಕಸ್ಯ–ಯಾರಿಗೆ, ಅದ್ವಿತೀಯತಾ–ಅದ್ವಿತೀಯತ್ವವು, ಸುಖಂ–ಸುಖವು ಲಭಿಸಬಹುದು? (ಸಾಧನೆಗಳಿಲ್ಲದೆ ಸಾಧ್ಯವಾದ ಸುಖವು ಒಂಟಿಗನಾಗಿರುವ ಸ್ಥಿತಿಯು ಹೇಗೆ ದೊರಕಿಸಬಲ್ಲದು? (ಶಕ್ಯವಿಲ್ಲ).

**ಏಕಾರ್ಥನಾಶೇಪ್ಯನ್ಯಾರ್ಥೇ ಸ್ತ್ರೀನಾಶೇ ಸ್ತ್ರ್ಯಂತರೇ ಸ್ಪೃಹಾ ।**
**ದಗ್ಧೇ ಗೇಹೇ ನೂತ್ನಗೇಹೇ ಸುಖಂ ಕಸ್ಯಾದ್ವಿತೀಯತಾ ॥ ೨೮೯ ॥**

ಏಕಾರ್ಥನಾಶೇಪಿ–ಒಂದು ವಸ್ತು ನಷ್ಟವಾದರೂ, ಅನ್ಯಾರ್ಥೇ–ಬೇರೆ ವಸ್ತುವಿನಲ್ಲಿ, ಸ್ಪೃಹಾ – ಇಚ್ಛೆಯೂ, ಸ್ತ್ರೀನಾಶೇ – ಪತ್ನೀ ವಿಯೋಗವಾದರೆ, ಸ್ತ್ರ್ಯಂತರೇ–ಅನ್ಯ ಪತ್ನಿಯಲ್ಲಿ (ಸ್ಪೃಹಾ–ಇಚ್ಛೆಯು,) ದಗ್ಧೇ ಗೇಹೇ–ಮನೆಯು ಸುಟ್ಟುಹೋಗುತ್ತಿರಲು, ನೂತ್ನಗೇಹೇ-ಹೊಸಮನೆಯಲ್ಲಿ.(ಸ್ಪೃಹಾ-ಇಚ್ಛೆಯೂ) (ಸರ್ವರಿಗೆ ಇರುವಾಗ), ಕಸ್ಯ–ಯಾರಿಗೆ, ಸುಖಂ–ಸುಖವು, ಅದ್ವಿತೀಯತಾ–ಒಂಟಿಗತನವು ?

**ಧತ್ತೇ ಪ್ರಿಯಾಂ ಮುಕುಂದೋಂಕೇ ಗಾತ್ರಾರ್ಧೇ ತು ಶಿವಾಂ ಶಿವಃ ।**
**ಸಖ್ಯಾ ಸಖಾಯೋ ನಂದಂತಿ ಸುಖಂ ಕಸ್ಯಾದ್ವಿತೀಯತಾ ॥ ೨೯೦ ॥**

ಮುಕುಂದಃ–ಶ್ರೀಹರಿಯು, ಪ್ರಿಯಾಂ–ಭಾರ್ಯಳಾದ, ಶ್ರೀಲಕ್ಷ್ಮೀದೇವಿಯನ್ನು ಅಂಕೇ – ತೊಡೆಯಲ್ಲಿ, ಧತ್ತೇ –(ಸದಾ) ಧರಿಸಿರುತ್ತಾನೆ (ಕೂಡಿಯೇ

---

ಯಜ್ಞಾದಿಗಳನ್ನು ಜನರು ಆಚರಿಸುತ್ತಾರೆ; ಸರ್ವರೂ ಸುಖಾರ್ಥಿಗಳೇ ಆಗಿರುವರು, ಸುಖವೇ ಪುರುಷಾರ್ಥವು; ಅದು ಅದ್ವಿತೀಯತ್ವದಲ್ಲಿ ದೊರೆಯುವುದಿಲ್ಲ; ಅನ್ಯರು ಅಥವಾ ಅನ್ಯಭೋಗ ಸಾಮಗ್ರಿಗಳಿಲ್ಲದ ಒಂಟಿತನದಿಂದ ಸುಖವು ಲಭಿಸುವುದಿಲ್ಲ (೨೮೮). ಸರ್ವಾನುಭವ ಸಿದ್ಧವಾದುದಕ್ಕೆ ನಿದರ್ಶನಗಳಿಗೇನು ಕೊರತೆ? ಒಂದು ಪದಾರ್ಥವು ನಷ್ಟವಾದರೆ ಮತ್ತೊಂದರ ಆಶೆ; ಒಬ್ಬ ಸ್ತ್ರೀಯು ಕೈ ತಪ್ಪಿದರೆ, ಮತ್ತೊಬ್ಬ ಸ್ತ್ರೀಯನ್ನು ದೊರಕಿಸಿಕೊಳ್ಳುವ ಆಶೆ; ಮನೆ ಸುಟ್ಟು ಹೋದರೆ, ನೂತನ ಗೃಹದ ಆಶೆ; ಅದ್ವಿತೀಯತ್ವವು ಯಾರಿಗೆ ಸುಖಪ್ರದವಾಗಿದೆ? (ಯಾರಿಗೂ ಇಲ್ಲ) (೨೮೯). ಶ್ರೀಹರಿಯು (ನಿತ್ಯ

ಇರುತ್ತಾನೆ); ಗಾತ್ರಾರ್ಧೇ—ಅರ್ಧದೇಹದಲ್ಲಿ, ಶಿವಃ ತು—ಶಿವನಾದರೂ, ಶಿವಾಂ—ಪಾರ್ವತೀದೇವಿಯನ್ನು, (ಧತ್ತೇ—ಧರಿಸಿರುವವನು); ಸಖಾಯಃ—ಮುಕ್ತರು, ಸಖ್ಯಾ—ಮಿತ್ರರಿಂದ ಕೂಡಿ, ನಂದಂತಿ[1]—ನಲಿಯುತ್ತಾರೆ (ಹರ್ಷದಿಂದ ವಿಹರಿಸುತ್ತಾರೆ); ಅದ್ವಿತೀಯತಾ—(ಎಲ್ಲಿಯೂ) ಅದ್ವಿತೀಯತ್ವವು, (ಎರಡನೆಯ ವಸ್ತುವೇ ಬೇಕಿಲ್ಲವೆಂಬಾಶೆಯು), ಕಸ್ಯ—ಯಾರಿಗೆ, ಸುಖಂ—ಪುರುಷಾರ್ಥವಾಗುತ್ತದೆ ?

**ಯದಿ ಸಾಂಸಾರಿಕದ್ವೈತಮಿವ ಮುಕ್ತೌ ದ್ವಿತಾ ಭವೇತ್ ।**
**ತದಾನ್ಯೋನ್ಯಂ ದರ್ಶನಂ ಸ್ಯಾತ್ಸಖ್ಯಂ ವಿಷಯಭೋಕ್ತೃತಾ ॥೨೯೧॥**

'ಯತ್ರ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ । ತತ್ಕೇನ ಕಂ ಪಶ್ಯೇತ್ಕೇನ ಕಂ ಜಿಘ್ರೇದ್ವಿಜ್ಞಾತಾರಮರೇ ಕೇನ ವಿಜಾನೀಯಾದ್ಯೇನೇದಮಖಿಲಂ ವೇದ ತಂ ಚ ಕೇನ ವಿಜಾನೀಯಾತ್' ಎಂಬ ಶ್ರುತಿಯು ತರ್ಕ ಮುದ್ರೆಯಿಂದ ದ್ವೈತವನ್ನೇ (ತರ್ಕದಿಂದ) ಸೂಚಿಸುತ್ತದೆ, ದ್ವೈತಾಭಾವವನ್ನು ನಿರಾಕರಿಸುವುದಿಲ್ಲ—ಆದ್ದರಿಂದ ಅದ್ವಿತೀಯಾವಸ್ಥೆಯು ಮುಕ್ತಿಯಲ್ಲವೆಂದು ಹೇಳುತ್ತಾರೆ :—

ಯದಿ—ಒಂದು ಪಕ್ಷ, ಸಾಂಸಾರಿಕದ್ವೈತಂ ಇವ—ಸಂಸಾರಾವಸ್ಥೆಯಲ್ಲಿರುವಂಥ ದ್ವೈತದಂತೆ, ಮುಕ್ತೌ—ಮುಕ್ತಿಯಲ್ಲಿ, ದ್ವಿತಾ—ಭೇದವು, ಭವೇತ್—ಇರುವುದಾದರೆ (ಶ್ರುತಿಯಲ್ಲಿರುವ 'ಯತ್ರ' ಪದವು, 'ಯದಿ' ಎಂಬ ಅರ್ಥವುಳ್ಳದ್ದು—ಅವ್ಯಯಗಳಿಗೆ ಅನೇಕಾರ್ಥವು ಉಚಿತವಾಗುವುದರಿಂದ ಹಾಗಲ್ಲದಿದ್ದರೆ

---

ಮುಕ್ತನು, ಆನಂದರೂಪನು ಆದರೂ) ಶ್ರೀಲಕ್ಷ್ಮೀದೇವಿಯನ್ನು ತನ್ನ ಅಂಕದಲ್ಲಿ ಧರಿಸಿರುತ್ತಾನೆ (ಆಕೆಯು ಸದಾ ಅವಿಯೋಗಿನಿಯು); ಶಿವನು ತನ್ನ ಅರ್ಧದೇಹದಲ್ಲಿ ಪಾರ್ವತಿಯನ್ನು ಧರಿಸಿರುವವನು ; ಮುಕ್ತರು ಮಿತ್ರರಿಂದ ಕೂಡಿ, ನಲಿಯುವರೆಂದು ಶ್ರುತಿಯು ಹೇಳುತ್ತದೆ; ಹೀಗಿರಲು, ಎರಡನೆಯ ವಸ್ತುವೇ ಇರಕೂಡದೆಂಬ ಅದ್ವಿತೀಯತೆಯ ಆಶೆಯು ಯಾರಿಗೆ ಸುಖವನ್ನುಂಟು ಮಾಡುತ್ತದೆ ? (೨೯೦). ಸಂಸಾರಾವಸ್ಥೆಯಲ್ಲಿರುವಂತೆ ಮುಕ್ತಿಯಲ್ಲಿ ಸಹ ಭೇದವಿದ್ದರೆ ಮಾತ್ರ ಭಿನ್ನ ವಸ್ತುಗಳಿದ್ದರೆ ಮಾತ್ರ, (ನಶ್ವರ, ಪ್ರಾಕೃತ ವಸ್ತುಗಳಲ್ಲ) ಮುಕ್ತರ ಒಡನಾಟ, ವಿಷಯಭೋಗ, ಸಖ್ಯ, ಇತ್ಯಾದಿಗಳು ಪರಸ್ಪರ

1 'ಸಖ್ಯಾ ಸಖಾಯೋ ಮುಕ್ತಾ ನಂದಂತಿ' ಎಂಬ ಶ್ರುತಿಜ್ಞಾಪಕವಿದು.

ತತ್ ಎಂಬ ಮುಂದಿನ ಪದಕ್ಕೆ 'ತತ್ರ' ಎಂಬರ್ಥವು ಪರನಿಗೂ ಇಲ್ಲದಂತಾಗುತ್ತದೆ) ತದಾ—ಆಗ, ಅನ್ಯೋನ್ಯಂ — ಪರಸ್ಪರವಾಗಿ, ವಿಷಯಭೋಕ್ತೃತಾ — ವಿಷಯ ಭೋಗವೂ (ಇಂದ್ರಿಯಗಳಿಂದ ವಿಷಯಭೋಗವೂ), ದರ್ಶನಂ—ನೋಟವೂ (ದರ್ಶನವೂ), ಸಖ್ಯಂ—ಮಿತ್ರಭಾವವೂ, ಸ್ಯಾತ್—ಉಂಟಾಗುತ್ತದೆ (ಭೇದವೇ—ಭಿನ್ನವಸ್ತು ಮಾತ್ರವೇ), ಇಲ್ಲವಾದರೆ, ಇವು ಯಾವುದೂ ಕೂಡುವುದಿಲ್ಲ; (ಪ್ರಸಕ್ತ ಶ್ರುತ್ಯರ್ಥದ ನಿರೂಪಣೆಯು, ಮುಂದಿನ ಶ್ಲೋಕಗಳಲ್ಲಿ ಮಾಡಲಾಗಿದೆ) (ಮುಕ್ತಿಯಲ್ಲಿರುವ ದ್ವೈತವು ಸಾಂಸಾರಿಕ ದ್ವೈತದಂತೆ ಅಲ್ಲವೆಂಬ ವೈಲಕ್ಷಣ್ಯವು ಶ್ರುತಿ ಸೂಚಿತವೆಂದು ತಿಳಿಯಬೇಕು).

**ಯದಾತ್ಮೈಕ ಏವ ಸ್ಯಾನ್ಮುಕ್ತೌ ನಾನ್ಯತ್ತು ಕಿಂಚನ ।**
**ತದಾ ಕಂ ಕೇನ ಪಶ್ಯೇತ್ಸಕಂ ಜಿಘ್ರೇತ್ಸ್ವಂ ಚ ಕೇನ ವಾ ॥ ೨೯೨ ॥**

**ಪಶ್ಯೇದಕರಣಸ್ತಸ್ಮಾನ್ಮೋಕ್ಷಸ್ಯಾಪುರುಷಾರ್ಥತಾ ।**
**ಅತೋಽವಶ್ಯಂ ಭವೇದ್ದ್ವೈತಂ ಮುಕ್ತೌ ಸಂಸಾರವತ್ಸತಾಂ ॥೨೯೩॥**

**ಇತಿ ಶ್ರುತಿಸ್ತರ್ಕಮುದ್ರಾಮಾಶ್ರಿತ್ಯ ದ್ವೈತಮೇವ ಯತ್ ।**
**ಸ್ಥಿರೀಕರೋತಿ ಮುಕ್ತಾನಾಂ ಕಸ್ಯ ಸ್ಯಾದದ್ವಿತೀಯತಾ ॥ ೨೯೪ ॥**

'ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್' ಎಂಬ ಶ್ರುತಿಯ ಫಲಿತಾರ್ಥವನ್ನು ಹೇಳುತ್ತಾರೆ :—

---

ಹೊಂದುತ್ತವೆ ; 'ಯತ್ರ ದ್ವೈತಮಿವ ಭವತಿ' ಎಂಬ ಶ್ರುತಿಯು, ಈ ಅರ್ಥವನ್ನೇ ಹೇಳುತ್ತದೆ; 'ಸರ್ವಮಾತ್ಮೈವಾಭೂತ್' ಎಂಬ ವಾಕ್ಯವು ಅದ್ವಿತೀಯಾವಸ್ಥೆಯನ್ನು ಮುಕ್ತಿಗೆ ಹೇಳುವುದಿಲ್ಲ; ತರ್ಕಮುದ್ರೆಯಿಂದ ದ್ವೈತವನ್ನೇ ಸಾಧಿಸುತ್ತದೆ (೨೯೧). ಮುಕ್ತಿಯಲ್ಲಿ ಆತ್ಮನೊಬ್ಬನೇ ಇರುವನೆಂದೂ ಆತ್ಮಭಿನ್ನ ಅನ್ಯವಸ್ತುಮಾತ್ರವೂ ಇಲ್ಲವೆಂದೂ ಆದರೆ, ಆಗ, ಮುಕ್ತನು ಯಾರನ್ನು ಯಾವ (ಕರಣ) ಸಾಧನದಿಂದ ನೋಡಬಲ್ಲನು? ವಾಸನೆ ನೋಡುವುದೆಂತು? ಇಂದ್ರಿಯಗಳೇ ಇಲ್ಲದ ಮುಕ್ತನು, ಪುರುಷಾರ್ಥವನ್ನು ಪಡೆದವನೆಂಬುದು ಅರ್ಥವಿಲ್ಲದ ಮಾತಾಗುತ್ತದೆ; ಆದ್ದರಿಂದ, ಸಂಸಾರದಲ್ಲಿರುವಂತೆ ಭಿನ್ನವಸ್ತುಗಳ ಇರುವಿಕೆಯು (ದ್ವೈತವು), ಮುಕ್ತಿಯಲ್ಲಿಯೂ ಇರಲೇಬೇಕು; ಎಂಬ

ಯದಾ ತು ಮುಕ್ತೌ–ಯಾವಾಗ (ಮುಕ್ತಿಯಲ್ಲಿಯೇ), ಆತ್ಮಾ–ಆತ್ಮನು, (ಚೇತನನು), ಏಕ ಏವ ಸ್ಯಾತ್–ಒಬ್ಬನೇ ಇರುವನಾದರೆ, ಅನ್ಯತ್ ತು ನ ಕಿಂಚನ–ಬೇರಾವುದೂ ಇಲ್ಲವೋ,[1] ತದಾ–ಆಗ, ಕಂ–ಯಾರನ್ನು ಕೇನ–ಯಾವುದರಿಂದ, ಪಶ್ಯೇತ್ – ನೋಡುವನು ? ಕಂ – ಯಾವುದನ್ನು, ಜಿಘ್ರೇತ್ – ಮೂಸುವನು ( ವಾಸನೆ ನೋಡುವನು ? ), ಸ್ವಂ ಚ – ತನ್ನನ್ನಾದರೂ, ಅಕರಣಃ–ಸಾಧನವಿಲ್ಲದ (ಇಂದ್ರಿಯಗಳಿಲ್ಲದ) ಮುಕ್ತನು, ಕೇನ ವಾ ಪಶ್ಯೇತ್– ಯಾವುದರಿಂದ ತಿಳಿಯುವನು ?, ತಸ್ಮಾತ್–ಆದ್ದರಿಂದ, ಮೋಕ್ಷಸ್ಯ–ಮುಕ್ತಿಗೆ, ಅಪುರುಷಾರ್ಥತಾ – ಪುರುಷಾರ್ಥತ್ವವು (ಬೇಕೆಂದು ಅಪೇಕ್ಷಿಸಲ್ಪಡುವಿಕೆಯು)

---

ನಿರ್ಣಯವನ್ನು ಪ್ರಸಕ್ತ ಶ್ರುತಿಯು, ತರ್ಕವನ್ನಾಶ್ರಯಿಸಿ ನಿರೂಪಿಸಿ ದ್ವೈತವನ್ನೇ ದೃಢೀಕರಿಸುತ್ತದೆ ; ಸಜ್ಜನರಿಗೆ ಅದ್ವಿತೀಯತ್ವವೆಂಬುದಿಲ್ಲ ; (ಅವರೇ ಮುಕ್ತರು ; ಅನ್ಯರಿಗೆ ಈ ಮುಕ್ತಿಯು ದೊರೆಯದು–ಬೇರೆ ಮುಕ್ತಿಯೆಂಬುದು ಇಲ್ಲ. ಅವಾಂತರ ಮುಕ್ತಿಯಾಗಲಿ, ಪರಮಮೋಕ್ಷವೆಂಬುದಾಗಲಿ ಇರುವುದಿಲ್ಲ ; ಇರುವುದೆಂಬಲ್ಲಿ

---

1 'ಸರ್ವಮಾತ್ಮೈವಾಭೂತ್' ಎಂಬುದರಿಂದ ಮುಕ್ತಿಯಲ್ಲಿ, ಇಂದ್ರಿಯಾದಿ ಯಾವುದೂ, ಆತ್ಮವ್ಯತಿರಿಕ್ತವಾದುದೇನೂ ಇಲ್ಲವೆಂದಾದರೆ, ಮುಕ್ತಸ್ತ್ರೀಪುರುಷಾದಿ ನಾನಾ ವಿಧ ಜೀವದೇಹಗಳೂ, ಅವುಗಳ ಇಂದ್ರಿಯಗಳೂ, ತದ್ಭೋಗಾರ್ಹಗಳಾದ ದಿವ್ಯ ಅನ್ನ ಪಾನಾದಿಗಳೂ ಇಲ್ಲವೆಂದೇ ಆಗುತ್ತದೆ ; ಸ್ವದೇಹೇಂದ್ರಿಯಗಳಿಂದ ಸಹಿತವಾದ ತನ್ನ ವ್ಯವಹಾರ ಸಾಧಕವಾಗುವ, ಭೇದಸಂಬಂಧಿಯಾದ್ದರಿಂದ ದ್ವೈತಪದದಿಂದ ಹೇಳಲಾಗುವ ದ್ವೈತಭಾವವೇ ಮುಕ್ತಿಯಲ್ಲಿ ಇಲ್ಲವಾದರೆ, ಮುಕ್ತನು ಯಾವ ರೂಪವನ್ನೂ ಕಾಣಲಾರನು ; ಯಾವ ಕರಣದಿಂದ (ಇಂದ್ರಿಯ–ಸಾಧನದಿಂದ) ನೋಡಬಲ್ಲನು ? ; ಯಾವ ಕರಣದಿಂದ ಆಘ್ರಾಣಿಸಬಲ್ಲ ? ತನ್ನನ್ನೂ ಅನ್ಯರನ್ನೂ ಯಾವ ಕರಣದಿಂದ ತಿಳಿಯಬಲ್ಲನು ? ಪರಮಾತ್ಮನಿಂಥ ದತ್ತವಾದ ಮುಕ್ತಭೋಗಗಳನ್ನು ಹೇಗೆ ಅನುಭವಿಸುವನು ? ಪರಮಾತ್ಮನನ್ನು ಯಾವ ಸಾಧನದಿಂದ ತಿಳಿಯಬಲ್ಲನು ? ದೇಹೇಂದ್ರಿಯಗಳಿಲ್ಲದ ಘಟದಂತೆ ಮುಕ್ತನೆಂದಾಗುತ್ತದೆ ; 'ಸೋಽಶ್ನುತೇ ಸರ್ವಾನ್ ಕಾಮಾನ್' ಎಂಬ ಶ್ರುತಿಯು ಮುಕ್ತನು ಸರ್ವಕಾಮಗಳನ್ನು ಭೋಗಿಸುವನೆಂದು ಹೇಳುವುದು ಅರ್ಥವಿಲ್ಲದುದೇ ಆಗಬೇಕಾಗುತ್ತದೆ ; ಆದ್ದರಿಂದ, ಚಿದ್ರೂಪಗಳಾದ ನಾನಾ ಜೀವದೇಹೇಂದ್ರಿಯಗಳೂ, ದಿವ್ಯ (ಅಲೌಕಿಕ–ಅಪ್ರಾಕೃತ) ಗಂಧ, ರಸ, ಅನ್ನಾದಿಗಳ ದ್ವೈತವು ಮುಕ್ತಿಯಲ್ಲಿ ಅವಶ್ಯವಾಗಿ ಇರುತ್ತದೆಂಬುದೇ ಯುಕ್ತಿಯುಕ್ತವೂ ಆಗುತ್ತದೆ ; 'ಸರ್ವಮಾತ್ಮೈವಾಭೂತ್' ಎಂಬುದು ಅದ್ವೈತವನ್ನು ಹೇಳುವುದಾದರೆ, ಮೋಕ್ಷಕ್ಕೆ ಪುರುಷಾರ್ಥತ್ವವೂ ಸಿದ್ಧಿಸುವುದಿಲ್ಲ.

ಇಲ್ಲದುದು (ಆಗುತ್ತದೆ); ಅತಃ–ಆದ್ದರಿಂದ (ಮೋಕ್ಷವು ಸರ್ವಾಪೇಕ್ಷಿತವಾದ್ದರಿಂದ), ಸತಾಂ–ಸಜ್ಜನರಿಗೆ, ಸಂಸಾರವತ್ – ಸಂಸಾರ ದಶಾದಲ್ಲಿರುವಂತೆ, ಮುಕ್ತೌ – ಮುಕ್ತಿಯಲ್ಲಿ (ಮುಕ್ತಿದಶಾದಲ್ಲಿಯೂ), ದ್ವೈತಂ–ದ್ವೈತವು (ಭಿನ್ನವಸ್ತುಗಳ ಇರುವಿಕೆಯು), ಅವಶ್ಯಂ–ಅವಶ್ಯವಾಗಿ, ಭವೇತ್–ಇರಬೇಕಾಗುತ್ತದೆ ; ಇತಿ– ಹೀಗೆ, ಶ್ರುತಿಃ–(ಪ್ರಸಕ್ತ) ಶ್ರುತಿವಾಕ್ಯವು, ಯತ್ – ಯಾವ ಕಾರಣದಿಂದ, ತರ್ಕಮುದ್ರಾಂ–ತರ್ಕವಿಧಾನವನ್ನು, ಆಶ್ರಿತ್ಯ – ಅವಲಂಬಿಸಿ, ದ್ವೈತಮೇವ – ದ್ವೈತವನ್ನೇ, ಸ್ಥಿರೀಕರೋತಿ–ದೃಢಪಡಿಸುತ್ತದೆಯೋ, (ಆದ್ದರಿಂದ), ಮುಕ್ತಾನಾಂ–ಮುಕ್ತರಿಗೆ (ಮುಕ್ತಮಧ್ಯದಲ್ಲಿ), ಕಸ್ಯ–ಯಾರಿಗೆ, ಅದ್ವಿತೀಯತಾ– ಅದ್ವೈತಭಾವವು, ಸ್ಯಾತ್–ಉಂಟಾಗುತ್ತದೆ ? (ಯಾರಿಗೂ ಇಲ್ಲ).

**ಯದಿ ವಸ್ತುಸ್ಥಿತಿಕಥಾ ವೃಥಾಭೂತ್ತರ್ಹಿ ತೇ ಶ್ರುತಿಃ ।**
**ವಿಜ್ಞಾತಾರಮರೇ ಕೇನ ವಿಜಾನೀಯಾದಿತಿ ಸ್ಫುಟಂ ॥ ೨೯೫ ॥**
**ಯತ್ಸ್ವಜ್ಞಾನಂ ಚ ನೇತ್ಯಾಹ ತತಸ್ತಾರ್ಕಿಕಮೋಕ್ಷವಾಕ್ ।**
**ಅಭೂದಿಯಂ ವೇದವಾಣೀ ಕೃಪಾಣೀ ತೇ ಭವೇದ್ಧ್ರುವಂ ॥ ೨೯೬ ॥**

ನಮ್ಮಿಂದ ಹೇಳಲ್ಪಾದ (ತರ್ಕಮುದ್ರೆಯನ್ನು) ಅಂಗೀಕರಿಸದೇ ಆ ಶ್ರುತಿ ವಾಕ್ಯಕ್ಕೆ, ಮುಕ್ತನು ಏನನ್ನೂ ಕಾಣನು; ತಿಳಿಯನು, ಇತ್ಯಾದಿ ಪರವಾದ ವ್ಯಾಖ್ಯಾನದ ದೋಷವನ್ನು ಹೇಳುತ್ತಾರೆ :—

---

ಯಾವ ಶ್ರುತ್ಯಾದಿ ಪ್ರಮಾಣಗಳೂ ಇರುವುದಿಲ್ಲ) (೨೯೨-೨೯೪). ಪ್ರಸಕ್ತ, 'ಯತ್ರ ದ್ವೈತಮಿವ ಭವತಿ....' ಎಂಬ ಶ್ರುತಿಯು 'ಸರ್ವಮಾತ್ಮೈವಾಭೂತ್' ಎಂಬುದರಿಂದ ನೀನು (ಪರನು) ಹೇಳುವಂತೆ, ಮುಕ್ತಿಯನ್ನು ಅದ್ವಿತೀಯಾ ವಸ್ಥೆಯನ್ನಾಗಿ ಹೇಳುವುದೆಂಬ, ವಸ್ತುಸ್ಥಿತಿ ಮಾತ್ರ ನಿರೂಪಣ ಪರವೆಂಬುದು, ಉಕ್ತರೀತಿಯಿಂದ, (ಯುಕ್ತಿಬಲದಿಂದ ಮುಕ್ತಿಯಲ್ಲಿ) ದ್ವೈತವನ್ನೇ ಸಾಧಿಸು ವುದರಿಂದ, ವ್ಯರ್ಥವಾದವೆಂದು ಸಿದ್ಧವಾಯಿತು ; 'ವಿಜ್ಞಾತಾರಂ ಕೇನ ವಿಜಾನೀಯಾತ್' ಎಂದು ಅದೇ ಶ್ರುತಿಯು ಮುಂದೆ, ಸ್ಪಷ್ಟವಾಗಿ, ತನ್ನನ್ನು ತಾನು ಹೇಗೆ ತಿಳಿಯುವನು, ತಿಳಿದು ನೋಡೆಂದು, ಹೇಳುತ್ತಿರುವುದನ್ನಾದರೂ ಗಮನಿಸಬೇಡವೆ ? ಹಾಗೆ ತರ್ಕ ಮುದ್ರೆಯನ್ನು ಆಶ್ರಯಿಸದಿದ್ದರೆ, ವಸ್ತುಸ್ಥಿತಿ ಯನ್ನೇ ನಿರೂಪಿಸುವುದೆಂದು ತಿಳಿದರೆ, ಸ್ವಜ್ಞಾನವೂ ಇಲ್ಲದ ಸರ್ವಾನುಭವ

ಯದಿ–ಒಂದು ಪಕ್ಷ, ವಸ್ತು ಸ್ಥಿತಿಕಥಾ–(ಆ ಶ್ರುತಿಯು) ಮುಕ್ತಿಯಲ್ಲಿರುವ ವಸ್ತುಸ್ಥಿತಿಯನ್ನೇ ಹೇಳುವುದು ಆದರೆ, ತರ್ಹಿ – ಆಗ, ತೇ–ನಿನ್ನ, ಶ್ರುತಿಃ–(ಪ್ರಸಕ್ತ) ಶ್ರುತಿಯು, ವೃಥಾ–ವ್ಯರ್ಥವಾದುದು, ಅಭೂತ್–ಆಯಿತು ; ಅರೇ–ಎಲೇಜೀವ ! ವಿಜ್ಞಾತಾರಂ–ತನ್ನನ್ನು, ಕೇನ–ಯಾವುದರಿಂದ, ವಿಜಾನೀಯಾತ್–ತಿಳಿಯುವನು ? ಇತಿ–ಎಂದು ಸ್ಫುಟಂ–ಸ್ಪಷ್ಟವಾಗಿ (ಕೇಳುತ್ತಿಲ್ಲವೇ ?) (ಅದೂ ವ್ಯರ್ಥವೇ ?); ಯತ್–ಯಾವ ಕಾರಣದಿಂದ, (ಈ ಪ್ರಶ್ನೆಯು ಮುಕ್ತನಿಗೆ ಸ್ವಜ್ಞಾನವನ್ನು ಸೂಚಿಸುವುದೋ), ಸ್ವಜ್ಞಾನಂ ಚ–ತನ್ನ ಜ್ಞಾನವೂ, ನೇತ್ಯಾಹ–ಇಲ್ಲವೆಂದು ಹೇಳುವುದೋ, ತತಃ–ಆದ್ದರಿಂದ (ಸ್ವಜ್ಞಾನವೂ ಇಲ್ಲವೆಂದೇ ಪ್ರಾಪ್ತವಾಗುವುದರಿಂದ), ತಾರ್ಕಿಕಮೋಕ್ಷವಾಕ್–(ಪ್ರಸಕ್ತ ಶ್ರುತಿಯು) ತಾರ್ಕಿಕನ ಮೋಕ್ಷವನ್ನೇ ಹೇಳುವ ವಾಕ್ಯವಾಗುತ್ತದೆ–ತಾರ್ಕಿಕಮುಕ್ತನಿಗೆ ಸುಖಾದಿಗಳ ಜ್ಞಾನವೂ ಇಲ್ಲವಷ್ಟೆ–ಸರ್ವಾನುಭವ ಶೂನ್ಯಸ್ಥಿತಿಯನ್ನೇ ಈ ಶ್ರುತಿಯು ಹೇಳಿದಂತಾಗುತ್ತದೆ ; ಇಯಂ–ಈ (ಹೀಗಿರುವ) ವೇದವಾಣೀ – ವೇದವಾಕ್ಯವು, ಧ್ರುವಂ – ನಿಶ್ಚಯವಾಗಿ, ಭವೇತ್ – ( ತಾರ್ಕಿಕಮುಕ್ತನನ್ನೇ ಹೇಳುವುದು ) ಆಗುತ್ತದೆ ; ತೇ–ನಿನಗೆ, ಕೃಪಾಣೀ–(ನಿನ್ನ ಮತ ನಾಶಕಾರಣವಾದ, ಖಡ್ಗವೇ), ಭವೇತ್–ಆಗುತ್ತದೆ.

**ನ ಪ್ರೇತ್ಯಸಂಜ್ಞೇತಿ ಚ ವಾಕ್ ಪ್ರಾಕೃತಜ್ಞಾನಶೂನ್ಯತಾಂ ।**
**ಮುಕ್ತೆಸ್ಯಾಹ ಪರಂ ನೋಚೇಜ್ಜಿಗ್ಯುಸ್ತಾರ್ಕಿಕಬಾಲಕಾಃ ॥ ೨೯೭ ॥**

'ನ ಪ್ರೇತ್ಯ ಸಂಜ್ಞಾಸ್ತಿ' ಎಂಬ ಶ್ರುತಿಗೆ, ಮರಣಾನಂತರ ಸ್ವರೂಪ ಜ್ಞಾನವೂ ನಷ್ಟವಾಗುತ್ತದೆಂಬ ಅರ್ಥವನ್ನು ಅಂಗೀಕರಿಸುವ ನಿನಗೆ ಬೇರೆ ಅರ್ಥವನ್ನು ಹೇಳುವೆನೆನ್ನುತ್ತಾರೆ :—

---

ಶೂನ್ಯವಾದ (ಸುಖಾದಿ ಜ್ಞಾನವಿಲ್ಲದ) ತಾರ್ಕಿಕ ಮೋಕ್ಷವನ್ನೇ ಹೇಳುತ್ತಿದೆ ಎಂದು ಪ್ರಾಪ್ತವಾಗಿ, ಈ ವೇದವಾಣಿಯೇ ನಿನ್ನ ನಾಶಕಾರಕ ಕೃಪಾಣಿ (ಖಡ್ಗ) ಆಗುತ್ತದೆ ; ನಿನ್ನ ಮತವೂ ಬಿದ್ದುಹೋಗುತ್ತದೆ ; ತಾರ್ಕಿಕನಿಂದ ಪರಾಜಿತನೂ ಆಗುವಿ (೨೫೫–೨೯೬). 'ನ ಪ್ರೇತ್ಯಸಂಜ್ಞಾಸ್ತಿ' ಎಂಬ ಶ್ರುತಿಯು, ಮುಕ್ತಿಯಲ್ಲಿ (ಮರಣಾನಂತರ–ಮೃತ್ಯುವನ್ನು–ಸಂಸಾರವನ್ನು ದಾಟಿದ ನಂತರ), ಪ್ರಾಕೃತ ಜ್ಞಾನವನ್ನು ಮಾತ್ರ ನಿಷೇಧಿಸುತ್ತದೆ ; ಜ್ಞಾನಮಾತ್ರವನ್ನಲ್ಲ ; (ಪ್ರಾಕೃತವಾದ

ನ ಪ್ರೇತ್ಯಸಂಜ್ಞಾ ಇತಿ ಚ ವಾಕ್-(ಪ್ರೇತ್ಯ ಸಂಜ್ಞಾನ ಇತಿ ಚ ವಾಕ್) ಮೃತನಾದನಂತರ ಜ್ಞಾನವಿಲ್ಲವೆಂಬ ವಾಕ್ಯವು, ಪ್ರಾಕೃತ ಜ್ಞಾನಶೂನ್ಯತಾಂ-ಪ್ರಾಕೃತ ಜ್ಞಾನಶೂನ್ಯತ್ವವನ್ನು (ಪ್ರಾಕೃತದೇಹಜನ್ಯವಾದ ಜ್ಞಾನರಾಹಿತ್ಯವನ್ನು), ಮುಕ್ತಸ್ಯ-ಮುಕ್ತನಿಗೆ, ಆಹ-ಹೇಳಿತು; ಪರಂ ನೋ ಚೇತ್-ಪ್ರಾಕೃತಜ್ಞಾನಮಾತ್ರವನ್ನು ಮರಣವು ಅಪಹರಿಸುವುದೆಂಬರ್ಥವನ್ನು ಹೇಳದಿದ್ದರೆ, ತಾರ್ಕಿಕಬಾಲಕಾಃ-ತಾರ್ಕಿಕ ಬಾಲಕರೂ (ಅಪಂಡಿತರೂ), ಜಿಗ್ಯುಃ-(ನಿನ್ನನ್ನು) ಗೆಲ್ಲುವರು (ಜ್ಞಾನಮಾತ್ರ ನಿಷೇಧಕವೆಂಬರ್ಥವನ್ನು ಹೇಳಿದರೆ ತಾರ್ಕಿಕಮತವನ್ನೇ ಅಂಗೀಕರಿಸಿದಂತಾಗುತ್ತದೆ).

**ಕಿಂಚ ನ ಪ್ರೇತ್ಯಸಂಜ್ಞಾಸ್ತೀತ್ಯುಕ್ತಿರ್ಮೋಹನಿಪಾತನಂ ।**
**ಇತಿ ಶ್ರುತೇಶ್ಚ ನ ಜ್ಞಾನಮಾತ್ರಂ ಸಾ ವಾಙ್ನಿಷೇಧತಿ ॥ ೨೯೮ ॥**

ಕಿಂಚ-ಮತ್ತೇನೆಂದರೆ (ಮುಕ್ತನಿಗೆ ಜ್ಞಾನಮಾತ್ರ ನಿಷೇಧಕ ಅರ್ಥವುಳ್ಳದ್ದಲ್ಲ, ಎಂಬಲ್ಲಿ ಬೇರೆ ಯುಕ್ತಿಯೂ ಇದೆ), ನ ಪ್ರೇತ್ಯಸಂಜ್ಞಾಸ್ತೀತ್ಯುಕ್ತಿಃ-(ಮೃತನು) ಏನನ್ನು ತಿಳಿಯನೆಂಬ ಉಕ್ತಿಯು, ಮೋಹನಿಪಾತನಂ-'ಅತ್ರೈವ ಮಾ ಭಗವಾನ್ ಮೋಹಾಂ ತಮಾಪಾತತ್-ಎಂಬ ಅದರ ಉತ್ತರವಾಕ್ಯವು (ಅತ್ರೈವ ಎಂಬ ಮುಂದಿನ ಶ್ರುತಿವಾಕ್ಯವು) ('ನ ಪ್ರೇತ್ಯಸಂಜ್ಞಾಸ್ತಿ' ಎಂಬ ವಾಕ್ಯವನ್ನು ಅನುವಾದಮಾಡಿ, 'ಇಲ್ಲಿಯೇ ಮೋಹವನ್ನುಂಟುಮಾಡುವಿರಿ' ಎಂದು ಹೇಳಿ), ಇತಿ ಶ್ರುತೇಶ್ಚ-ಎಂಬ ಶ್ರುತಿಯ ಮುಂದಿನ ವಾಕ್ಯದಿಂದಲೂ, ಜ್ಞಾನ ಮಾತ್ರಂ-ಜ್ಞಾನ ಸಾಮಾನ್ಯವನ್ನೇ, ಸಾ ವಾಕ್-'ನ ಪ್ರೇತ್ಯಸಂಜ್ಞಾಸ್ತಿ' ಎಂಬ ವಾಕ್ಯವು, ನ ನಿಷೇಧತಿ-ನಿಷೇಧಿಸುವುದಿಲ್ಲ (ಎಂದು ತಿಳಿದುಬರುತ್ತದೆ).

---

ಮನ ಮೊದಲಾದ ಇಂದ್ರಿಯಗಳಿಂದ ಲಭಿಸುವ ಜ್ಞಾನವು ಪ್ರಾಕೃತಜ್ಞಾನವು); ಮುಕ್ತನಿಗೆ ಜ್ಞಾನಮಾತ್ರವನ್ನು ನಿಷೇಧಿಸುತ್ತದೆಂದು ಹೇಳಿದರೆ ಆಗ ತಾರ್ಕಿಕ ಬಾಲಕರೂ (ಅಪಂಡಿತರೂ) ನಿನ್ನನ್ನು ಗೆಲ್ಲವರು (೨೯೭). 'ನ ಪ್ರೇತ್ಯಸಂಜ್ಞಾಸ್ತಿ' ಎಂಬ ಶ್ರುತಿಯ ಮುಂದಿನ ವಾಕ್ಯವು, ಈ ವಾಕ್ಯವನ್ನು ಉದ್ದೇಶಿಸಿಯೇ, 'ಅತ್ರೈವ ಮಾ ಭಗವಾನ್' ಎಂದು, ಸ್ವಜ್ಞಾನವೂ ಇಲ್ಲವೆಂದು ಹೇಳಿ, ಇಲ್ಲಿಯೇ (ಇದರಿಂದಲೇ) ಮೋಹವನ್ನುಂಟುಮಾಡುಫಿರಿ, ಎಂದು ಶಿಷ್ಯನು ಹೇಳಿದನೆಂದು ನಿರೂಪಿಸಿ, ಜ್ಞಾನಮಾತ್ರವನ್ನು ಹಿಂದಿನ ವಾಕ್ಯವು ನಿಷೇಧಿಸಿರುವುದಿಲ್ಲ

**ಯತ್ರ ವಸ್ತು ದ್ವೈತಮಿವ ದ್ವಿತ್ರಲಗ್ನಂ ಮನೋ ಭವೇತ್ ।**
**ತತ್ರೇತರಃ ಪುಮಾನ್ ಪಶ್ಯೇದಿತರಾರ್ಥಾನಪಿ ಸ್ಫುಟಂ ॥ ೨೯ ॥**

'ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್' ಎಂಬ ಶ್ರುತಿ ವಾಕ್ಯದ ಯಥಾಸ್ಥಿತಪದಗಳಿಂದಲೇ ಲಭ್ಯವಾಗುವ ಬೇರೆ ಅರ್ಥವನ್ನು ಹೇಳುತ್ತಾರೆ :—

ಯತ್ರ–ಎಲ್ಲಿ (ಯಾವ ಸಂಸಾರ ದಶಾದಲ್ಲಿ ; ವಸ್ತು ದ್ವೈತಂ ಇವ–ವಸ್ತುಗಳ ನಾನಾತ್ವ (ಬಹುತ್ವ)ದಂತೆ, ದ್ವಿತ್ರಲಗ್ನಂ–ಎರಡು ಮೂರು ವಸ್ತುಗಳಲ್ಲಿ ಲಗ್ನವಾಗದಂತೆ (ಸಂಬಂಧಿಸಿಕೊಂಡಿರುವಂತೆ), ಮನಃ–ಮನಸ್ಸು, ಭವೇತ್–ಆಗುತ್ತದೆಯೋ, (ತದಿತರ ಇತರಂ ಪಶ್ಯತಿ) (ಆಯಾ ವಸ್ತುವನ್ನು ನೋಡಿದರೂ ಅಲ್ಲಿ ಅನ್ಯವಸ್ತು ಜ್ಞಾನವೂ ಇರುವುದೋ), ತತ್ರ–ಅಲ್ಲಿ, ಇತರಃ–ಅನ್ಯವಾದ, ಪುಮಾನ್–ಜೀವನು,–ಇತರಾರ್ಥಾನ್ ಅನ್ಯವಸ್ತುಗಳನ್ನು, ಅಪಿ–ಸಹ, ಸ್ಫುಟಂ–ಸ್ಪಷ್ಟವಾಗಿ, ಪಶ್ಯೇತ್–ಕಾಣುವನು.[1]

---

ವೆಂಬುದನ್ನು ಸ್ಪಷ್ಟಗೊಳಿಸಿರುತ್ತದೆ (೨೮). ಸಂಸಾರ ದಶಾದಲ್ಲಿ, ನಾನಾ ವಸ್ತುಗಳಲ್ಲಿ ಸಂಬದ್ಧವಾದ ಮನಸ್ಸುಳ್ಳವನಾಗಿ, ಪುರುಷನು, ಒಂದರ ಜೊತೆಗೆ ಮತ್ತೊಂದನ್ನೂ ತನ್ನಿಂದ ಭಿನ್ನವಾದ ಬಹುವಸ್ತುಗಳನ್ನು ನೋಡುತ್ತಾನೆ–ತಿಳಿಯುತ್ತಾನೆ; ಇದು ಸರ್ವರ ಸ್ಪಷ್ಟವಾದ ಅನುಭವವಾಗಿದೆ; ಮುಕ್ತಿದಶಾದಲ್ಲಿ ಹೀಗಲ್ಲವೆಂಬ ವೈಲಕ್ಷಣ್ಯವನ್ನು ತಿಳಿಸುವುದೇ ಪ್ರಸಕ್ತ 'ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್' ಎಂಬ ಶ್ರುತಿಯ ಯಥಾಸ್ಥಿತ ಪದಗಳ ಅರ್ಥವಾಗುತ್ತದೆ (೨೯). ಸಂಸಾರದಶಾದಲ್ಲಿಯೂ, ಏಕಾಂತ ದೇಶದಲ್ಲಿ ಏಕಾಗ್ರ ಮನಸ್ಕನಾಗಿ ತನಗೆ ಸರ್ವೇಷ್ಟನಾದ ಭಗವಂತನ ಚಿಂತೆಯಲ್ಲಿರುವ ಯೋಗಿಗೆ, ಭಗವದಿತರವಾದ ಯಾವ ವಸ್ತುವು ಗೋಚರಿಸುತ್ತದೆ; ಯಾವುದನ್ನು ನೋಡುತ್ತಾನೆ; ಯಾವ ಗಂಧಾದಿಗಳನ್ನು ಆಘ್ರಾಣಿಸುತ್ತಾನೆ; ತನ್ನನ್ನು ತಾನಾದರೂ, ಯಾರಿಂದ ತಿಳಿಯುತ್ತಾನೆ; ಎಲ್ಲವೂ ಸರ್ವನಿಯಾಮಕನಾದ ಶ್ರೀಹರಿಯ ವ್ಯಾಪಾರವೆಂಬ ಅನುಸಂಧಾನವುಳ್ಳವನಾಗಿರುತ್ತಾನೆ; ಹೀಗೆ ಆತ್ಮರತನಾಗಿ (ತನ್ನ

---

1 ಮುಕ್ತಿಯಲ್ಲಿ ಹೀಗಲ್ಲ; ಸರ್ವತ್ರ ಪರಮಾತ್ಮನ ಕೃತಿಯನ್ನೇ ಕಾಣುತ್ತಾನೆ. ಮುಕ್ತ್ಯವಸ್ಥೆಯ ಜ್ಞಾನದ ವೈಲಕ್ಷಣ್ಯವನ್ನು ಈ ಶ್ರುತಿಯು ನಿರೂಪಿಸಿದೆ.

**ಯತ್ರ ತ್ವೇಕಾಗ್ರಮನಸಃ ಸರ್ವಮಿಷ್ಟಂ ಚ ಯೋಗಿನಃ ।**
**ಆತ್ಮೈವಾಭೂತ್ತತ್ರ ಕೇನ ತತೋಽನ್ಯಂ ಕಂ ಸ ಪಶ್ಯತಿ ॥ ೩೦೦ ॥**

**ಕಂ ಜಿಘ್ರತಿ ಸ್ವಕಂ ರೂಪಂ ಕೇನ ವಾಸೌ ಪ್ರಪಶ್ಯತಿ ।**
**ಯೇನೇದಮಖಿಲಂ ವೇದ ಪಶ್ಯೇದ್ವಾ ಕೇನ ತಂ ಗುರುಂ ।**
**ಇತ್ಯಾತ್ಮರತಮುಕ್ತೌ ದ್ವಾ ಯತ್ರತ್ವಸ್ಯೇತಿ ವಾಗಿಯಂ ॥ ೩೦೧ ॥**

ಯತ್ರ ತು–ಯಾವ ತಪೋಯೋಗ್ಯ ವಿವಿಕ್ತ ಪ್ರದೇಶದಲ್ಲಿ ಆದರೂ, ಏಕಾಗ್ರಮನಸಃ – ಏಕಾಗ್ರಮನಸ್ಸುಳ್ಳ (ಪರಮಾತ್ಮನಲ್ಲಿಯೇ) ಸ್ಥಾಪಿಸಲಾದ ಮನಸ್ಸುಳ್ಳ, ಯೋಗಿನಃ–ಯೋಗಿಗೆ, (ಧ್ಯಾನಯೋಗಿಗೆ), ಸರ್ವಂ–ಸಮಸ್ತ, ಇಷ್ಟಂ–ಇಷ್ಟವಾದುದೂ, ಆತ್ಮೈವ–ಪರಮಾತ್ಮನೇ, ಅಭೂತ್–ಆಗಿರುವನೋ, (ಸರ್ವೇಂದ್ರಿಯಗಳಿಂದ ಶ್ರೀಹರಿಯನ್ನೇ ಅನುಭವಿಸುವೆನೆಂಬ ಭಾವವುಳ್ಳ ಯೋಗಿಯೂ), ತತ್ರ–ಅಲ್ಲಿ (ಧ್ಯಾನಯೋಗದಲ್ಲಿ ಅಥವಾ ಮುಕ್ತಿಯಲ್ಲಿ), ಕೇನ–ಯಾರಿಂದ, ತತಃ ಅನ್ಯಂ – ಪರಮಾತ್ಮ ಭಿನ್ನವಸ್ತುವನ್ನು, (ಕಾಣುವನು?) ಸಃ–ಆ ಯೋಗಿಯು, ಕಂ ಪಶ್ಯತಿ–ಸ್ವಸ್ವರೂಪವನ್ನು (ನೋಡುತ್ತಾನೆ–ತಿಳಿಯುತ್ತಾನೆ?) (ಪರಮಾತ್ಮನಿಂದಲ್ಲದೇ ಬೇರಾರಿಂದ ತಿಳಿಯುತ್ತಾನೆ? ಸ್ವಸ್ವರೂಪ ಜ್ಞಾನವೂ ಪರಮಾತ್ಮನಿಂದಲೇ ಆಗುತ್ತದೆ); ಅಸೌ–ಈ ಯೋಗಿಯು (ಮುಕ್ತನು) ಸ್ವಕಂ ರೂಪಂ–ಸ್ವರೂಪವನ್ನಾಗಲಿ ಕೇನ–ಯಾರಿಂದ, ಪ್ರಪಶ್ಯತಿ–ನೋಡುತ್ತಾನೆ, ಕಂ ಜಿಘ್ರತಿ – ಏನನ್ನು ಆಘ್ರಾಣಿಸುವನು? (ಸ್ವತಂತ್ರನಾಗಿ ಏನೂ ಮಾಡುವುದಿಲ್ಲ–ಎಲ್ಲವೂ ಪರಮಾತ್ಮನಿಂದಲೇ ಎಂಬ ಪೂರ್ಣಜ್ಞಾನವುಳ್ಳವನಾಗಿರುತ್ತಾನೆ); ಯೇನ–ಯಾರಿಂದ (ಯಾವ ಪರಮಾತ್ಮನಿಂದ–'ಕೇನ ವಿಜಾನೀಯಾತ್' ಎಂಬುದರ ಅರ್ಥಕಥನವಿದು) ಇದಂ ಅಖಿಲಂ–ಈ ಸರ್ವವನ್ನೂ (ವಿಶ್ವವನ್ನೂ), ವೇದ–ತಿಳಿದಿರುವನೋ, ಕೇನ–ಆ ಪರಮಾತ್ಮನಿಂದ, ತಂ ಗುರುಂ–ಆ ಜಗದ್ಗುರುವನ್ನು

---

ಸ್ವತಂತ್ರ ಕರ್ತೃತ್ವವನ್ನು ಮರೆತು,) ಆನಂದಿಸುವ, ಯೋಗಿಯ ಸ್ಥಿತಿಯನ್ನಾದರೂ ಈ ಶ್ರುತಿಯು ವರ್ಣಿಸುತ್ತದೆಂದು ತಿಳಿಯಬಹುದಾಗಿದೆ; ಹೀಗೆ ಪ್ರಸಕ್ತ ಶ್ರುತಿಯು, ಪರಮಾತ್ಮನಲ್ಲಿಯೇ ಆಸಕ್ತನಾದ ಯೋಗಿಯ ನಿದರ್ಶನದಿಂದ

(ಪರಮಾತ್ಮನನ್ನು) (ಪ್ರಪಶ್ಯತಿ – ನೋಡುತ್ತಾನೆ);[1] ಇತಿ – ಹೀಗೆ, ಇಯಂ– ವಾಕ್–ಈ ಶ್ರುತಿಯು 'ಯತ್ರ ತ್ವಸ್ಯ' ಇತಿ – ಯತ್ರ ತ್ವಸ್ಯ ಎಂಬುದಾಗಿ, ಆತ್ಮರತಂ–ಪರಮಾತ್ಮನಲ್ಲಿಯೇ ಆಸಕ್ತನಾದ ಯೋಗಿಯನ್ನು, ವಾ–ಆಗಲೀ, ಅಸ್ತೌತ್–ಸ್ತುತಿಸಿರುತ್ತದೆ.

**ಅಕ್ಷಾಸಕ್ತಃ ಕಿಮುಶ್ರೌಷೀನ್ಮಾತುರ್ಮೃತಿಮುದೀರಿತಾಂ ।**
**ಕಿಂ ಪಶ್ಯೇತ್ ಪಶ್ಯತೋಽಪಿ ಸ್ವಂ ಘಟಸ್ಥಹೃದಯಾ ನಟೀ ।**
**ಶರಕೃತ್ಕೇನ ಕಿಂ ಜಿಘ್ರೇತ್ಕಂ ಜಾನೀಯಾತ್ಕಮೀಕ್ಷತೇ ॥ ೩೦೨ ॥**

ಭಗವದ್ಧ್ಯಾನ ಮಾತ್ರ ಆಸಕ್ತನಾದ ಯೋಗಿಗಿಂತ ಲೌಕಿಕ ದೃಷ್ಟಾಂತ ದಿಂದಲೂ ಉಕ್ತಪ್ರಕ್ರಿಯೆಯನ್ನು (ಶ್ರುತ್ಯರ್ಥವನ್ನು ನಿಶ್ಚಯಿಸುವುದಕ್ಕೆ ಸಹಾಯಕವಾಗುವ) ಯುಕ್ತಿಯನ್ನು ತೋರಿಸುತ್ತಾರೆ:—

---

ಮುಕ್ತಿಯಲ್ಲಿ ದ್ವೈತವನ್ನೇ ಸ್ಥಿರಪಡಿಸುತ್ತದೆ (೩೦೦–೩೦೧). ಭಗವಂತನಲ್ಲಿ ಆಸಕ್ತನಾದ ಯೋಗಿಯನ್ನೇಕೆ? ಲೌಕಿಕ ವ್ಯಾಪಾರದಲ್ಲಿ ಮಗ್ನರಾದ ಏಕಾಗ್ರ ಚಿತ್ತರನ್ನು ನೋಡಿದರೂ, ಒಂದರಲ್ಲಿ ಆಸಕ್ತವಾದ ಮನಸ್ಸು, ಅನ್ಯವನ್ನು ತಿಳಿಯುವುದಿಲ್ಲವೆಂಬ ತತ್ವವು ಸ್ಪಷ್ಟವಾಗುತ್ತದೆ; ಪಗಡೆ ಆಟದಲ್ಲಿರುವವನು ತನ್ನ ತಾಯಿಯ ಮರಣವಾರ್ತೆಯನ್ನು ಕೇಳಿಸಿಕೊಳ್ಳುವುದಿಲ್ಲ; ತಲೆಯಮೇಲಿನ ಕುಂಭದಲ್ಲಿ ಚಿತ್ತವನ್ನಿಟ್ಟು, ರಂಗಸ್ಥಲದಲ್ಲಿ ನರ್ತಿಸುವ ನರ್ತಕಿಯೂ, ನೋಡು ತ್ತಿರುವ ಜನರನ್ನು ಸಹ ಲಕ್ಷಿಸುವುದಿಲ್ಲ; ಬಾಣದ ವಕ್ರವನ್ನು ತಿದ್ದುವ ನಿಪುಣನು, ತನ್ನ ಕೆಲಸದಲ್ಲಿ ತೊಡಗಿರಲು ಎದುರಿನಲ್ಲಿರುವ ಜನರನ್ನು ಗಮನಿಸುವನೇ;

---

[1] ಮುಕ್ತನಿಗೆ ದೃಷ್ಟಾಂತವಾಗಿ ವಿವಿಕ್ತದೇಶದಲ್ಲಿ ಕೂತು ತಪಸ್ಸುಮಾಡುವ ಯೋಗಿ ಯನ್ನು ತೋರಿಸಿ, ಈ ಶ್ರುತಿಯು, ಮುಕ್ತಿಯಲ್ಲಿ ಜಗದ್ವಿಲಕ್ಷಣ ಭೇದವನ್ನೇ (ದ್ವೈತವನ್ನೇ) ಸಾಧಿಸಿ, ಅದ್ವೈತಭಾವವನ್ನು ನಿರಾಕರಿಸುತ್ತದೆ; ಸರ್ವೇಂದ್ರಿಯಗಳು ಪರಮಾತ್ಮನಲ್ಲಿ ಉಪರತವಾಗಿರುವುದರಿಂದ, ಯೋಗಿಯ ಇಂದ್ರಿಯಗಳು ಬಾಹ್ಯ ಪದಾರ್ಥಗಳಿಂದ ನಿವೃತ್ತ ವಾಗಿರುತ್ತವೆ; ಮುಕ್ತನ ಇಂದ್ರಿಯಗಳೆಲ್ಲವೂ, ಸ್ವರೂಪಾತ್ಮಕವೇ ಆಗಿವೆ; ಜೀವನಿಂದ ಭಿನ್ನಗಳಲ್ಲ–ಸಂಸಾರಿಜೀವನಂತೆ, ಮುಕ್ತನು ಸರ್ವತ್ರ ಪರಮಾತ್ಮಾನುಭವವುಳ್ಳವನೇ ಆಗಿರು ತ್ತಾನೆ—ಸಕಲ ಇಂದ್ರಿಯ ವ್ಯಾಪಾರಗಳು ನಡೆದರೂ, ಅವುಗಳಲ್ಲಿ ಪರಮಾತ್ಮನ ಕೃತಿ ಯನ್ನೇ ಕಾಣುತ್ತಾನೆ, ಈ ವಿಶೇಷ ಸಹಿತವಾಗಿ ಶ್ರುತ್ಯುಕ್ತನಿದರ್ಶನವನ್ನು ಗ್ರಹಿಸಬೇಕು.

ಅಕ್ಷಾಸಕ್ತಃ – ಚತುರಂಗಾದಿ ಕ್ರೀಡಾಸಕ್ತನೂ, ಉದೀರಿತಾಂ – ನುಡಿಯಲ್ಪಟ್ಟ, ಮಾತುಃ–ತನ್ನ ತಾಯಿಯ, ಮೃತಿಂ–ಮರಣವನ್ನು, ಅಶ್ರೌಷೀತ್‌ಕಿಂ–ಕಿವಿಯಲ್ಲಿ ಹಾಕಿಕೊಂಡನೇನು ? ಘಟಸ್ಥಹೃದಯಾ ನಟೀ–ತಲೆಯಮೇಲಿಟ್ಟಿರುವ ಘಟದಲ್ಲಿ ನೆಟ್ಟಮನಸ್ಸುಳ್ಳ ನರ್ತಕಿಯು, ಪಶ್ಯತಃ ಅಪಿ–(ರಂಗಸ್ಥಳದ ಜನರನ್ನು) ನೋಡುತ್ತಿರುವಳಾದರೂ, ಪಶ್ಯೇತ್ ಕಿಂ–ಕಾಣುವಳೇನು ? (ಇಲ್ಲ) ; ಶರಕೃತ್–(ಬಾಣದ) ಶರದ ವಕ್ರವನ್ನು ತಿದ್ದುವ ನಿಪುಣನು, ಕಂ–ಯಾವ ಪರಿಮಳವನ್ನು, ಜಿಘ್ರೇತ್–ಆಘ್ರಾಣಿಸುವನು, ಕಂ–ಯಾವುದನ್ನು ( ಪರಿಮಳವಿಶೇಷವನ್ನು ), ಜಾನೀಯಾತ್ – ತಿಳಿಯುವನು, ಕಂ – ಯಾವುದನ್ನು, ಈಕ್ಷತೇ – ದೃಷ್ಟಿಸಿ ತಿಳಿಯುವನು ? (ತಿಳಿಯಲಾರನು).

**ಮುಕ್ತಾಃ ಸ್ವಾತ್ಮರತಾ ಜಿಘ್ರಂತೀಕ್ಷಂತೇ ಕಂ ವಿಜಾನತೇ ।**
**ಸೇನಾಮನ್ಯಮನಾಃ ಸೇನಾಂ ನಾಜ್ಞಾಸೀದಿತಿ ಲೌಕಿಕಂ ।**
**ಆತ್ಮೈಕಾಸಕ್ತಚಿತ್ತೋಽಪಿ ತಥೇತಿ ಕಿಮಲೌಕಿಕಂ ॥ ೩೦೩ ॥**

ಮೊದಲು ಸಾಂಸಾರಿಕ ಯೋಗಿಗಳ (ಅಪರೋಕ್ಷಜ್ಞಾನಿ) ಪರವಾದ ಶ್ರುತ್ಯರ್ಥವನ್ನು ನಿರೂಪಿಸಿ, ಈಗ, ಮುಕ್ತಧ್ಯಾನ ವಿಷಯವೆಂದೂ ಶ್ರುತ್ಯರ್ಥವನ್ನು ಹೇಳುತ್ತಾರೆ :—

ಮುಕ್ತಾಃ–ಮುಕ್ತಜೀವರು, ಸ್ವಾತ್ಮರತಾಃ–ಪರಮಾತ್ಮನ ಚಿಂತೆಯಲ್ಲಿ ಆಸಕ್ತರಾಗಿರುವಾಗ (ತುಚ್ಛನಾದ ಅಲ್ಪ ಫಲಕಾರಿ ಕಾರ್ಯದಲ್ಲಿ ಆಸಕ್ತನಾದ ಶರಕಾರ ನಿಪುಣನು ಭೇರ್ಯಾದಿ ಶಬ್ದಸಹಿತ ಪ್ರಾಪ್ತವಾಗುತ್ತಿರುವ ರಾಜಸೇನೆಯನ್ನೇ ಗಮನಿಸಿರುವಾಗ, ಮಹಾ ಫಲ (ಆನಂದ) ಪ್ರದವಾದ ಭಗವಚ್ಚಿಂತನೆ

---

ಬೇರೇನನ್ನು ನೋಡುವನು ? ಯಾವ ಪರಿಮಳವನ್ನು ಆಘ್ರಾಣಿಸಿ ತಿಳಿಯಬಲ್ಲನು ? (೩೦೨). ಲೌಕಿಕ ಶರಕರ್ತನ ಸ್ಥಿತಿಯೇ ಹೀಗಿರುವಾಗ, ಪರಮಾತ್ಮನಲ್ಲಿ ಸತತವಾಗಿ ಅತ್ಯಂತ ಆಸಕ್ತರಾದ ಮುಕ್ತರು ಅನ್ಯವನ್ನೇನನ್ನು ನೋಡರು, ತಿಳಿಯರು; ಈ ಲೌಕಿಕ ನಿದರ್ಶನವು, ಶ್ರುತಿಪದಗಳಾದ 'ಕಿಂ ಪಶ್ಯತಿ' ಇತ್ಯಾದಿಗಳ ಭಾವವನ್ನು, ಸ್ಪಷ್ಟಗೊಳಿಸುತ್ತದೆ ; ಶರಕರ್ತನು ನಾಯಕ ಸಮೇತವಾದ ಸೇನೆಯನ್ನೇ, ಭೇರ್ಯಾದಿವಾದ್ಯಗಳಿದ್ದರೂ, ತಿಳಿಯಲಿಲ್ಲವಷ್ಟೆ ; ಪರಮಾತ್ಮೈಕ

ಯಲ್ಲಿ ರತನಾದ ಮುಕ್ತನು), ಕಂ ಜಿಘ್ರಂತಿ–ಯಾವ ಪರಿಮಳವನ್ನು ತಿಳಿಯು ವರು ? ಕಂ ಈಕ್ಷಂತೇ–ಬೇರೇನನ್ನು ಕಾಣುವರು ? ಕಂ ವಿಜಾನತೇ–ಅನ್ಯವೇನನ್ನು ತಿಳಿಯುತ್ತಾರೆ ? ಅನ್ಯಮನಾಃ–ಅನ್ಯಮನಸ್ಕನಾದ ಶರಕಾರನು, ಸೇನಾಂ–ನಾಯಕ (ಅಧಿಕಾರಿ ಸಮೇತವಾದ), ಸೇನಾಂ–(ರಾಜ) ಸೇನೆಯನ್ನು, ನಾಜ್ಞಾಸೀತ್–ತಿಳಿಯಲಿಲ್ಲವು, ಇತಿ ಲೌಕಿಕಂ–ಎಂದು ಲೌಕಿಕ ದೃಷ್ಟಾಂತವು ಇರುತ್ತದೆ ಯಲ್ಲವೇ ?) ; ಆತ್ಮೈಕಾಸಕ್ತ ಚಿತ್ತಃ ಅಪಿ–ಪರಮಾತ್ಮನಲ್ಲಿಯೇ ಸ್ಥಾಪಿತವಾದ ಚಿತ್ತವುಳ್ಳವನು, ತಥಾ ಇತಿ–ಹಾಗೆಯೇ (ಕಂ ಈಕ್ಷಂತೇ ಇತ್ಯಾದಿ) ಎಂದು ಹೇಳುವುದು, ಅಲೌಕಿಕಂ ಕಿಂ–ಆಶ್ಚರ್ಯವೇನು ? (ಶ್ರುತಿಯು ಹೇಳುವುದು ಆಶ್ಚರ್ಯವಲ್ಲ).

**ಅಪ್ರಾಕೃತಪ್ರಾಕೃತಾಭ್ಯಾಂ ದ್ವಾಭ್ಯಾಂ ದ್ವಿತ್ವೇ ಭವೇ ಭವೇತ್ ।**
**ದ್ವಿತಾಃ ಸಂಸಾರಿಣಸ್ತಸ್ಮಾತ್ತತ್ಸಂಬಂಧಿವಪುಸ್ತ್ವಿದಂ ॥ ೩೦೪ ॥**
**ಬಾಹ್ಯಂ ದ್ವೈತಮಿತಿ ಪ್ರೋಕ್ತಮಸ್ವಭಾವತ್ವತಶ್ಚ ತತ್ ।**
**ಇವಶಬ್ದೋದಿತಂ ಜೀವೇ ಯದಾ ಭವತಿ ತನ್ಮೈಣಾಂ ॥ ೩೦೫ ॥**
**ತದಾತ್ವಿತರಶಬ್ದೋಕ್ತೋ ಬಾಹ್ಯೇಂದ್ರಿಯಗಣೋಪ್ಯಯಂ ।**
**ಪಶ್ಯೇತ್ಸ್ವರೂಪಾದಿತರಮರ್ಥಂ ದೇಹಘಟಾದಿಕಂ ॥ ೩೦೬ ॥**

ಪ್ರಸಕ್ತ ಶ್ರುತಿಗೆ ಬೇರೆ ರೀತಿಯಿಂದ, ಅಲ್ಲಿರುವ ಪದಗಳಿಗೆ ಅರ್ಥವನ್ನು ಹೇಳಿ ಅದರಿಂದ, ಮುಕ್ತಿಗೆ ಸಂಸಾರದಿಂದ ವೈಲಕ್ಷಣ್ಯವನ್ನು ಪ್ರದರ್ಶಿಸುತ್ತಾರೆ :—

---

ಚಿತ್ತನೂ ಹೀಗೆಯೇ ಎಂಬರ್ಥವನ್ನು ಶ್ರುತಿಯು ತಿಳಿಸುತ್ತದೆ (೩೦೩). ಜೀವ ಜಡಗಳೆಂಬ ಎರಡು ವಸ್ತುಗಳಿಂದ, ಜೀವನು, ಸಂಸಾರಾವಸ್ಥೆಯಲ್ಲಿ ಕೂಡಿಯೇ ಇರುತ್ತಾನೆ ; ಆದ್ದರಿಂದ ಜೀವರು 'ದ್ವಿತ'ರು ; ಅವರ ಸಂಬಂಧವುಳ್ಳ ಈ ದೇಹವು ದ್ವಿತ್ವವುಳ್ಳದ್ದು ; ಇದು, ಸ್ವಾಭಾವಿಕ ಸ್ಥಿತಿಯಲ್ಲದ್ದರಿಂದ, ದ್ವೈತವು ಬಾಹ್ಯವೆನಿಸುತ್ತದೆ ; 'ಯತ್ರ ದ್ವೈತಮಿವ' ಎಂಬಲ್ಲಿರುವ 'ಇವ' ಪದದಿಂದ, ಜೀವ ಸ್ವರೂಪವೂ ವಿವಕ್ಷಿತವಾಗುತ್ತದೆ ; 'ಇತರ'ವೆಂಬ (ತದಿತರ ಇತರಂ ಪಶ್ಯತಿ) ಶಬ್ದವು, ಆಗ, ಬಾಹ್ಯೇಂದ್ರಿಯ ಸಮೂಹವನ್ನು ಹೇಳುತ್ತದೆ ; ಅವುಗಳಿಂದ ಸಹ ದೇಹ ಘಟಾದಿಗಳ ಜ್ಞಾನವಾಗುತ್ತದೆ ; ಈ ಪ್ರಕಾರದ ಅರ್ಥಾಂತರವನ್ನು ಪ್ರಸಕ್ತ

ಅಪ್ರಾಕೃತಪ್ರಾಕೃತಾಭ್ಯಾಂ–ಚೇತನಾಚೇತನಗಳೆಂಬ, ದ್ವಾಭ್ಯಾಂ–ಎರಡು ವಸ್ತುಗಳಿಂದ, ಇತಃ–ಕೂಡಿದ ಜೀವನು, ಭವೇ–ಸಂಸಾರದಲ್ಲಿ, ಭವೇತ್–ಆಗಿರುತ್ತಾನೆ; ಸಂಸಾರಿಣಃ–ಜೀವರು, ತಸ್ಮಾತ್–ಆದ್ದರಿಂದ, ದ್ವೀತಾಃ–ದ್ವೀತರೆನಿಸುವರು; ತತ್ಸಂಬಂಧಿ–ಜೀವ ಸಂಬಂಧಿಯಾದ್ದರಿಂದ; (ದ್ವೈತವು), ಇದಂ–ಪರಿದೃಶ್ಯಮಾನವಾದ ಪ್ರಾಕೃತವು (ಜಡವು), ವಪುಃ–(ಜೀವನ) ದೇಹವು; ಬಾಹ್ಯಂ–ಬಾಹ್ಯವಾದುದು (ಹೊರಗಿನ ದೇಹವು), ದ್ವೈತಂ ಇತಿ ಪ್ರೋಕ್ತಂ–ದ್ವೈತವೆಂದು ಹೇಳಲ್ಪಡುತ್ತದೆ; (ಉಕ್ತವ್ಯುತ್ಪತ್ತಿಯಿಂದ ಜಡ, ಚೇತನಾತ್ಮಕ ಎರಡೂ ಜೀವದೇಹಗಳಲ್ಲಿ 'ದ್ವೈತ'ವೆಂಬುದು ಸಮವಾದರೂ), ಅಸ್ವಭಾವತ್ವತಃ–ಅಸ್ವಾಭಾವಿಕವಾದ್ದರಿಂದ (ಸ್ವಾಭಾವದೇಹವಲ್ಲದ್ದರಿಂದ), ತತ್–ಬಾಹ್ಯದೇಹವು (ದ್ವೈತವೆನಿಸುತ್ತದೆ); ಇವಶಬ್ದೋದಿತಂ–'ಇವ' (ಯತ್ರ ದ್ವೈತಮಿವ ಭವತಿ ಎಂಬಲ್ಲಿರುವ) ಶಬ್ದದಿಂದ ಸ್ವಾಭಾವಿಕತ್ವವೆಂಬ ಅರ್ಥವನ್ನು ಹಿಡಿದು, ಜೀವ ಸ್ವರೂಪ ಪ್ರತಿಪಾದಕವೇ) ಆಗುತ್ತದೆ;[1] ಯದಾ–(ಯಾವಾಗ) ಯಾವ ಕಾಲದಲ್ಲಿ, ತತ್–ಆ ದೇಹವು, (ದ್ವೈತವು), ನೃಣಾಂ–ಮನುಷ್ಯರಿಗೆ (ಸ್ವರೂಪದೇಹಕ್ಕೆ), ಭವತಿ–ಅನ್ವಯಿಸುತ್ತದೆಯೋ, ತದಾ ತು–ಆಗಲಾದರೋ, ಇತರ ಶಬ್ದೋಕ್ತಃ–(ಶ್ರುತಿಗತವಾದ) ಇತರ ಶಬ್ದದಿಂದ ಹೇಳಲ್ಪಡುವುದು, ಅಯಂ – ಈ, ಬಾಹ್ಯೇಂದ್ರಿಯ ಗಣಃ ಅಪಿ–ಬಾಹ್ಯದೇಹೇಂದ್ರಿಯಾದಿಗಳೂ ಸಹ (ಆಗುತ್ತವೆ); ಸ್ವರೂಪಾತ್–ಜೀವಸ್ವರೂಪದಿಂದ, ಇತರಂ ಅರ್ಥಂ–ಬೇರೆ ವಸ್ತುವಾದ, ದೇಹ ಘಟಾದಿಕಂ–ದೇಹಘಟಾದಿಗಳನ್ನು, ಪಶ್ಯೇತ್ – ನೋಡುವನು (ಕಾಣುವನೂ ಆಗುತ್ತಾನೆ).

**ಯತ್ರ ತ್ವಾತ್ಮಾತ್ಮಕಂ ಸರ್ವಮಭೂದ್ದೇಹೇಂದ್ರಿಯಾದಿಕಂ ।**
**ತತ್ರ ಮುಕ್ತೌ ಕೇನ ಬಾಹ್ಯೇನಾಕ್ಷ್ಣಾ ಬಾಹ್ಯಾರ್ಥಮೀಕ್ಷತೇ ।**
**ಕಂ ವಾ ಜಿಘ್ರೇದ್ವಿಜಾನೀಯಾದಿತ್ಯರ್ಥೋ ವಾ ಶ್ರುತೇರ್ಭವೇತ್**
**॥ ೩೦೭ ॥**

---

ಶ್ರುತಿಗೆ ತಿಳಿಯುವುದರಿಂದ, ಐಕ್ಯಾರ್ಥವು ಸರ್ವಥಾ ಸಿದ್ಧಿಸುವುದಿಲ್ಲ (೩೦೪–೩೦೬). ಮುಕ್ತಿಯಲ್ಲಿ, ಸಂಸಾರದಶಾಕ್ಕೆ ವಿರುದ್ಧವಾಗಿ, (ಎಲ್ಲವೂ), ದೇಹೇಂದ್ರಿ

[1] 'ಭವತಿ ಇವ' ಎಂಬುದರಿಂದ; ಸ್ವಾಭಾವಿಕವಲ್ಲದ್ದೆಂಬ ಅರ್ಥವು ಸಿದ್ಧವಾಗುತ್ತದೆ.

ಯತ್ರ ತು – ಮುಕ್ತಿಯಲ್ಲಿ, (ಆದರೂ), (ತು ಶಬ್ದವು ಸಂಸಾರದಿಂದ ವಿಶೇಷವನ್ನು ತಿಳಿಸುತ್ತದೆ). ದೇಹೇಂದ್ರಿಯಾದಿಕಂ – ದೇಹೇಂದ್ರಿಯಾದಿಯು, (ಸರ್ವಂ–ಎಲ್ಲವೂ, ಆತ್ಮಾತ್ಮಕಂ–ಆತ್ಮಸ್ವರೂಪವೇ, ಅಭೂತ್–ಆಗಿರುವುದೋ (ಸರ್ವಮಾತ್ಮೈವಾಭೂತ್, ಎಂಬುದರ ಅರ್ಥ) ; (ಇಲ್ಲಿರುವ ' ಏವ 'ಕಾರವು[1] ದೇಹೇಂದ್ರಿಯಾತ್ಮಕಂ–ದೇಹೇಂದ್ರಿಯಗಳೆಲ್ಲವನ್ನೂ ಬೇರ್ಪಡಿಸುವುದಿಲ್ಲ–ಎಲ್ಲವೂ ಆತ್ಮ ಭಿನ್ನಗಳಲ್ಲವೆಂದೇ ಹೇಳುತ್ತದೆ), ತತ್ರ ಮುಕ್ತೌ– ಆ ಮುಕ್ತಿದಶಾದಲ್ಲಿ, ಕೇನ–ಯಾವ, ಬಾಹ್ಯೇನ – ( ಆತ್ಮ)ಭಿನ್ನವಾದ, ಅಕ್ಷ್ಣಾ – ಕಣ್ಣಿನಿಂದ, ಬಾಹ್ಯಾರ್ಥಂ–ಪ್ರಾಕೃತವಸ್ತುವನ್ನು, ಈಕ್ಷತೇ–ನೋಡುವನು ? ಕಿಂ ವಾ–ಯಾವ (ಬಾಹ್ಯಘ್ರಾಣದಿಂದ) ಪ್ರಾಕೃತಗಂಧವನ್ನು ವಾಸನೆನೋಡುವನು ? ವಿಜಾನೀಯಾತ್–ಯಾವ ಪ್ರಾಕೃತ ಮನಸ್ಸಿನಿಂದ, ಯಾವ ವಸ್ತುವನ್ನು ತಿಳಿಯುವನು ? 'ಇತ್ಯರ್ಥಃ ವಾ–ಎಂಬ ಅರ್ಥವಾದರೂ, ಶ್ರುತೇಃ–(ಪ್ರಸಕ್ತ) ಶ್ರುತಿಗೆ, ಭವೇತ್–ಆಗುತ್ತದೆ (ಸಲ್ಲುತ್ತದೆ).[2]

---

ಯಾದಿಗಳೆಲ್ಲವೂ, 'ಸರ್ವಮಾತ್ಮೈವಾಭೂತ್' ಆತ್ಮಸ್ವರೂಪಗಳೇ ಎಂದು ಹೇಳಿರುವುದರಿಂದ, ಪ್ರಾಕೃತ ಚಕ್ಷುರಾದಿಗಳೇ ಇಲ್ಲದೇ, ಎಲ್ಲ ಚೇತನ ಸ್ವರೂಪವೇ ಆಗಿರುವುದರಿಂದ, ಬಾಹ್ಯ ಚಕ್ಷುವಿನಿಂದ ನೋಡುವುದೆಲ್ಲಿಂದ ಬಂತು ? ಬಾಹ್ಯವಾದ (ಪ್ರಾಕೃತವಾದ) ವಸ್ತುಗಳಾದರೂ ಎಲ್ಲಿವೆ ? ಪ್ರಾಕೃತ ಮನಸ್ಸಿನಿಂದ ಯಾವ

---

1 'ಆತ್ಮೈವಾಭೂತ್', ಐಕ್ಯಾರ್ಥವೆಂಬ ಔಪಚಾರಿಕಾರ್ಥವನ್ನು ಅಂಗೀಕರಿಸದಿರುವುದರಿಂದ ಫಲ ಸ್ವಾರಸ್ಯವೂ ಸೂಚಿತವೆಂದು ತಿಳಿಯಬೇಕು.

2 ಬಾಹ್ಯಂ—ಎಂಬುದು ಮುಕ್ತಿಯಲ್ಲಿರುವ ಅಪ್ರಾಕೃತಾತ್ಮಕವಸ್ತು ಭಿನ್ನವಸ್ತುವನ್ನು ಸೂಚಿಸುತ್ತದೆ. ಮುಕ್ತರಿಗೆ ಪ್ರಾಕೃತ ದೇಹವು ಸರ್ವಥಾ ಇರುವುದಿಲ್ಲ. ಮುಕ್ತಲೋಕದ ಗೇಹಾದಿಗಳು (ಮನೆ ಮೊದಲಾದವು ಲಕ್ಷ್ಮ್ಯಾತ್ಮಕವಾದುವಾಗಿವೆ ; ಮುಕ್ತಿಯಲ್ಲಿ ಸಹ ಕೆಲವು ಶುದ್ಧ ಪ್ರಾಕೃತನಿರ್ಮಿತ ವಸ್ತುಗಳಿದ್ದರೂ, ಪ್ರಾಕೃತ ಇಂದ್ರಿಯಾದಿಗಳು ಸರ್ವಥಾ ಮುಕ್ತರಿಗೆ ಇರುವುದಿಲ್ಲ ; ಇದನ್ನೇ 'ಕೇನೇತರೇಣ ಇತರಂ ಪಶ್ಯೇತ್' ಎಂಬುದು ಹೇಳುತ್ತದೆ ; ಕಿಂತು, ಸ್ವರೂಪ ಚಕ್ಷು, ಘ್ರಾಣಾದಿಗಳಿಂದಲೇ ನೋಡುವ ಮುಂತಾದ ವ್ಯಾಪಾರಗಳನ್ನು, ಮುಕ್ತರು ನಡೆಸುವರೆಂದು ತಿಳಿಯಬೇಕು; ಸಂಸಾರದಲ್ಲಿ ಪ್ರಾಕೃತೇಂದ್ರಿಯಗಳಿಂದ ವಿಷಯಭೋಗಾದಿಗಳನ್ನು ಮಾಡಿದರೆ, ಮುಕ್ತಿಯಲ್ಲಿ ಸ್ವರೂಪೇಂದ್ರಿಯಗಳಿಂದಲೇ ಸಕಲ ವಿಷಯಭೋಗವೂ ಸಂಭವಿಸುತ್ತದೆಂಬ ಸ್ವರೂಪಾವಿರ್ಭಾವದ ಮಹಿಮೆಯನ್ನು ಪ್ರತಿಪಾದಿಸುವುದರಲ್ಲಿ ಈ ಶ್ರುತಿಯ ಅಭಿಪ್ರಾಯವಿರುತ್ತದೆ.

**ಯಥೋದಂ ಶುದ್ಧಮಾಸಿಕ್ತಂ ಶುದ್ಧೇ ಸ್ಯಾತ್ತಾದೃಗೇವ ಹಿ ।**
**ಏವಂ ಮುನೇರ್ಜಾನತಶ್ಚ ಶುದ್ಧೋಽಪ್ಯಾತ್ಮಾ ಪರಾತ್ಮನಿ ।**
**ಪ್ರವಿಷ್ಟಸ್ತಾದೃಗೇವ ಸ್ಯಾನ್ನ ತದಾತ್ಮೇತಿ ಯಾ ಶ್ರುತಿಃ ॥ ೩೦೮ ॥**

ಈ ಶ್ರುತಿಗೆ ಪರನು ಹೇಳುವ ಸರ್ವೈಕ್ಯವೆಂಬ ಅರ್ಥವು ಬಹುಶ್ರುತಿಗಳ ಅರ್ಥವನ್ನು ವಿರೋಧಿಸುತ್ತದೆನ್ನುತ್ತಾರೆ :—

ಯಥಾ—ಹೇಗೆ, ಶುದ್ಧಂ—ಶುದ್ಧವಾದ, ಉದಂ—ಉದಕವು, (ಜಲವು), ಶುದ್ಧೇ—ಶುದ್ಧಜಲದಲ್ಲಿ, ಆಸಿಕ್ತಂ—ಸೇರಿಸಲ್ಪಟ್ಟು, (ಮಿಶ್ರಿತವಾಗಿ), ತಾದೃಕ್ ಏವ ಸ್ಯಾತ್—ಅದರ (ಸೇರಿಸಲ್ಪಟ್ಟ) ಜಲಸದೃಶವೇ ಆಗುತ್ತದೆಯೋ, ('ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ। ಏವಂ ಮುನೇರ್ವಿಜಾನತ ಆತ್ಮಾಭವತಿ ಗೌತಮ।' ಎಂಬ ಶ್ರುತಿಯನ್ನು ಸಂಗ್ರಹಿಸಲಾಗಿದೆ) ; ಏವಂ—ಹೀಗೆ, ಗೌತಮ—ಜ್ಞಾನಿಯಾದ ಹೇ ಗೌತಮ ! ಜಾನತಃ—ಜ್ಞಾನಿಯಾದ, ಮುನೇಃ—ಮುನಿಯ (ಮುಕ್ತನ) (ಅಥವಾ ಅಪರೋಕ್ಷದರ್ಶಿಯ), ಆತ್ಮಾ—ಚೇತನವು, ಶುದ್ಧಃ ಅಪಿ—ಶುದ್ಧವೇ ಆಗಿರುವುದಾಗಿ, ಪರಾತ್ಮನಿ—ಪರಮಾತ್ಮನಲ್ಲಿ ಪ್ರವಿಷ್ಟಃ—ಪ್ರವೇಶಿಸಿ, ತಾದೃಗೇವ—ಪರಮಾತ್ಮನಂತೆಯೇ (ಶುದ್ಧನು), ಸ್ಯಾತ್—ಆಗುತ್ತಾನೆ; ತದಾತ್ಮಾ—ಪರಮಾತ್ಮ ಸ್ವರೂಪವೇ, ನ—ಅಲ್ಲ, ಇತಿ—ಎಂಬ, ಯಾ ಶ್ರುತಿಃ—ಯಾವ ಶ್ರುತಿಯೋ (ಅದರ ವಿರೋಧವು ಪ್ರಾಪ್ತವಾಗುತ್ತದೆ).

**ಪರಮಂ ಸಾಮ್ಯಮೇವೇತಿ ಬ್ರಹ್ಮಣಾ ಸಹ ಚೇತಿ ವಾಕ್ ।**
**ಉಪಸಂಕ್ರಮ್ಯ ಚೇತ್ಯುಕ್ತಿರುಪಸಂಕ್ರಾಮತೀತಿ ವಾಕ್ ॥೩೦೯॥**

---

ವಸ್ತುವನ್ನು ತಿಳಿಯುತ್ತಾನೆ ? ಎಂಬೀ ಅರ್ಥವೇ ಶ್ರುತಿಗೆ ಸಿದ್ಧವಾಗುತ್ತದೆ (೩೦೭). 'ಸರ್ವಮಾತ್ಮೈವಾಭೂತ್' ಎಂಬುದರಿಂದ ಸರ್ವೈಕ್ಯವು ಸಿದ್ಧವಾಗುವುದಿಲ್ಲ ; ಬಹುಶ್ರುತಿಗಳ ವಿರೋಧ ಬರುತ್ತದೆ ; ಶುದ್ಧಜಲವನ್ನು ಶುದ್ಧಜಲದಲ್ಲಿ ಸೇರಿಸಿದಂತೆ ಶುದ್ಧನಾದ ಮುಕ್ತನೂ (ಅಥವಾ ಅಪರೋಕ್ಷ ಜ್ಞಾನಿಯೂ), ಪರಮಾತ್ಮನ ಉದರ ಪ್ರವೇಶದಿಂದ ಶುದ್ಧನೇ ಆಗುತ್ತಾನೆಯಲ್ಲದೇ, ಐಕ್ಯವನ್ನು ಹೊಂದುವುದಿಲ್ಲ ; ಶ್ರುತಿಯು ತಾದಾತ್ಮ್ಯವನ್ನು ಹೊಂದುವನೆಂದು ಹೇಳುವುದಿಲ್ಲ ; 'ತಾದೃಗೇವ ಭವತಿ' ಎಂಬ ಶ್ರುತಿಯು ಈ ಪ್ರಮೇಯವನ್ನು ಸ್ಪಷ್ಟಗೊಳಿಸುತ್ತದೆ (೩೦೮). 'ಪರಮಂ ಸಾಮ್ಯಮುಪೈತಿ' ಎಂಬ ಶ್ರುತಿಯೂ,

**ಸಾಕ್ಷಾಜ್ಜ್ಞಾನಫಲಂ ಮೋಕ್ಷಂ ಶಂಸಂತ್ಯಸ್ತತ್ರ ತತ್ರ ಹಿ ।**
**ಕಥಂ ಘಟೇರನ್ ಸರ್ವೈಕ್ಯೇ ಬಹ್ವ್ಯೋऽರ್ಥಾಂತರವರ್ಜಿತಾಃ ॥೩೧೦॥**

ಪರಮಂ ಸಾಮ್ಯಮೇವೇತಿ–ಪರಮಾತ್ಮ ಸಾಮ್ಯವನ್ನು ಹೊಂದುವನೆಂದೂ, ('ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ। ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ,' ಎಂಬ ಶ್ರುತಿಯು ಇದರಿಂದ ಸಂಗೃಹೀತವಾಯಿತು); ಚ–ಮತ್ತು, ಬ್ರಹ್ಮಣಾ ಸಹ–ಬ್ರಹ್ಮದೇವನಿಂದ ಸಹಿತನಾಗಿ, ಇತಿವಾಕ್–ಎಂಬ ಶ್ರುತಿಯೂ ('ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್। ಸೋऽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ।' ಎಂಬ ಶ್ರುತಿಯೂ ಸಂಗೃಹೀತ ವಾಯಿತು), ಚ–ಮತ್ತು, ಉಪಸಂಕ್ರಮ್ಯ ಇತ್ಯುಕ್ತಿಃ–ಸಮೀಪವನ್ನು ಹೊಂದಿ ಎಂಬ ಶ್ರುತಿಯು ('ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ।' ಎಂಬ ಶ್ರುತಿಯೂ), ಉಪಸಂಕ್ರಾಮತೀ ವಾಕ್ – ಉಪಸಂಕ್ರಾಮತಿ, ಎಂಬ ಶ್ರುತಿಯೂ ('ಏತಮನ್ನಮಯಮಾತ್ಮಾನಮುಪಸಂಕ್ರಾಮತಿ'। ಇತ್ಯಾದಿ ಬ್ರಹ್ಮ ವಲ್ಲೀ ಶ್ರುತಿಯೂ) (ಸಂಗ್ರಹಿಸಲ್ಪಟ್ಟಿರುತ್ತದೆ); (ಇವು) ಸಾಕ್ಷಾತ್–ಸ್ಪಷ್ಟವಾಗಿ, ಜ್ಞಾನಫಲಂ–ಅಪರೋಕ್ಷಜ್ಞಾನ ಫಲವನ್ನು, ಮೋಕ್ಷಂ–ಮೋಕ್ಷವನ್ನಾಗಿ (ಪರಮ ಮೋಕ್ಷವೆಂದು), ತತ್ರ ತತ್ರ–ಅಲ್ಲಲ್ಲಿ (ಪ್ರಸಂಗವಿದ್ದಾಗಲೆಲ್ಲ), ಪ್ರಶಂಸಂತ್ಯಃ– ಪ್ರಶಂಶಿಸುತ್ತವೆ; (ಹೀಗಿರುವ ಶ್ರುತಿಗಳು),[1] ಬಹ್ವ್ಯಃ–ಬಹುಸಂಖ್ಯೆಯಶ್ರುತಿಗಳು

'ಬ್ರಹ್ಮಣಾ ಸಹ ವಿಪಶ್ಚಿತಾ', ಎಂಬ ಶ್ರುತಿಯೂ, 'ಪರಂಜ್ಯೋತಿರುಪಸಂಕ್ರಮ್ಯ' ಎಂಬುದೂ, 'ಏತಮನ್ನಮಯಮಾತ್ಮಾನಮುಪಸಂಕ್ರಾಮತಿ' ಎಂಬುದೂ, ಈ ಎಲ್ಲ ಬಹುಶ್ರುತಿಗಳು, ಮೋಕ್ಷವನ್ನು, ಜ್ಞಾನ ಫಲವನ್ನಾಗಿ ಹೇಳುತ್ತಿರಲು,

[1] ಅನ್ನಮಯಾದಿಗಳು ದೇಹಗತಕೋಶಗಳಾದ್ದರಿಂದ, ಪರಮಾತ್ಮನ ಪ್ರಾಪ್ತಿಯಿಲ್ಲ ವೆಂಬ ಸಂಶಯವು ಯುಕ್ತವಾಗುವುದಿಲ್ಲ; 'ಕಾಮಾನ್ನೀಕಾಮರೂಪ್ಯನುಸಂಚರನ್।! ಎಂದು ಅನ್ನಮಯನ ಜ್ಞಾನಕ್ಕೆ ಹೇಳಿರುವ ಫಲವು ಮುಕ್ತಿಯಲ್ಲದೇ ಅನ್ಯತ್ರ ಅಸಂಭವ ವಾಗುತ್ತದೆ; 'ಅನ್ನಮಯಮಾತ್ಮಾನಮುಪಸಂಕ್ರಾಮತಿ।' ಎಂಬುದಾಗಿ, ಅನ್ನಮಯಾದಿ ಐದಕ್ಕೂ ಪರಮಾತ್ಮತ್ವವೇ ಹೇಳಲಾಗಿದೆ; ಉಪಸಂಕ್ರಾಮತಿ' ಎಂಬುದಕ್ಕೆ, ನೀನು ಹೇಳುವಂತೆ, ಉಪನಯನ ಶಬ್ದಕ್ಕೆ ಅತಿಕ್ರಮಿಸಿ ಬರ್ಹಿನಯನವೆಂಬ ಅರ್ಥವನ್ನು ಯಾರೂ ಹೇಳುವುದಿಲ್ಲ.

*

ಅರ್ಥಾಂತರವರ್ಜಿತಾಃ—(ಹಿಂದೆ ಪಠಿತವಾದ ಶ್ರುತಿಗಳು) ಬೇರೆ ಅರ್ಥವಿಲ್ಲದವುಗಳಾದರೆ, ಸರ್ವೈಕ್ಯೇ—ಸರ್ವೈಕ್ಯದಲ್ಲಿ, (ಸರ್ವಾಭೇದದಲ್ಲಿ—ಅದ್ವೈತದಲ್ಲಿ), ಕಥಂ—ಹೇಗೆ, ಘಟೇರನ್—ಹೊಂದುತ್ತವೆ ? (ಕೂಡುತ್ತದೆ ?—ಶಕ್ಯವಿಲ್ಲ).

**ಯದಿ ಜೀವನ್ಮುಕ್ತಿಪರಾ ಸರ್ವಾಪೀಯಂ ಮಮ ಶ್ರುತಿಃ ।**
**ಯತ್ರತ್ವಸ್ಯೇತಿ ಯಾ ವಾಕ್ತೇ ತರ್ಹಿ ಸುಪ್ತಿಪರಾಸ್ತು ಸಾ ॥ ೩೧೧ ॥**
**ಯತ್ರ ಜಾಗರಣೇ ನಾನಾಪದಾರ್ಥದ್ವೈತವನ್ನೃಣಾಂ ।**
**ತಜ್ಜ್ಞಾನಂ ಚ ಭವೇತ್ತರ್ಹಿ ಸ್ಯಾದನ್ಯೋನ್ಯನಿರೀಕ್ಷಣಂ ॥ ೩೧೨ ॥**

'ಯತ್ರ ತ್ವಸ್ಯ' ಎಂಬ ಶ್ರುತಿಗೆ ಅರ್ಥಾಂತರವನ್ನು ಹೇಳಲು, ಅಜ್ಞಜನರ ಶಂಕೆಯನ್ನು ಮೇಲೆತ್ತಿ ಹೇಳುತ್ತಾರೆ :—

ಯತ್ರ ತ್ವಸ್ಯ ಇತಿ—ಯತ್ರ ತ್ವಸ್ಯ ಎಂಬ, ಇಯಂ—ಈ, (ಪ್ರಸಕ್ತದ), ಸರ್ವಾಪಿ ಶ್ರುತಿಃ—ಪೂರ್ಣ ಶ್ರುತಿಯು (ಯತ್ರ ದ್ವೈತಮಿವ . . . .; ಯತ್ರತ್ವಸ್ಯ ಸರ್ವಮಾತ್ಮೈವಾಭೂತ್। ಎಂಬ ಪೂರಾ ಶ್ರುತಿಯು), ಮಮ—ನನ್ನಂತೆ, ಯದಿ ಜೀವನ್ಮುಕ್ತಿಪರಾ—ಅಪರೋಕ್ಷ ಜ್ಞಾನಿಯ ಪರವೆಂದಾದರೆ, ತೇ—ನಿನಗೆ, ತರ್ಹಿ—ಆಗ, ಸಾ—ಆ ಶ್ರುತಿಯು, ಸುಪ್ತಿಪರಾ—ನಿದ್ರಾವಸ್ಥಾಪರವಾದುದು, ಅಸ್ತು—ಆಗಲಿ (ಆಗುತ್ತದೆ); ಯತ್ರ—('ಯತ್ರ ದ್ವೈತಮಿವ', ಎಂಬಲ್ಲಿರುವ) ಯತ್ರ—ಯಾವ, ಜಾಗರಣೆ—ಜಾಗ್ರದವಸ್ಥೆಯಲ್ಲಿ, ನೃಣಾಂ—ಜೀವರಿಗೆ, ನಾನಾ ಪದಾರ್ಥದ್ವೈತವತ್—ನಾನಾ ಪದಾರ್ಥದ ಬಹುತ್ವವುಳ್ಳದ್ದರ, ಚ—ಹಾಗೂ, ತಜ್ಜ್ಞಾನಂ—ಅವುಗಳ ಜ್ಞಾನವೂ (ನೋಡುವುದು, ಆಘ್ರಾಣಿಸುವುದು ಇತ್ಯಾದಿ), ತರ್ಹಿ – ಆಗ, ಭವೇತ್ – ಸಂಭವಿಸುತ್ತದೆ ; ಅನ್ಯೋನ್ಯನಿರೀಕ್ಷಣಂ – ಪರಸ್ಪರ ನೋಡುವುದು

---

ಅವು, ಐಕ್ಯವನ್ನು ಹೇಳದಿರುವಾಗ, ಅವುಗಳಿಗೆ ಅನ್ಯಾರ್ಥವನ್ನು ಹೇಳದಿದ್ದರೆ, ಅವು ಸರ್ವೈಕ್ಯದಲ್ಲಿ ಹೇಗೆ ಹೊಂದಿಕೆಯಾಗುತ್ತವೆ? ಸರ್ವೈಕ್ಯವು ಹೇಗೆ ಸಂಭಾವ್ಯವಾಗುತ್ತದೆ? ಹೇಗೆ ಕೂಡುತ್ತದೆ?—ಸರ್ವಥಾ ಸರ್ವೈಕ್ಯವು ಕೂಡುವುದಿಲ್ಲ (೩೦೯–೩೧೦). 'ಯತ್ರ ದ್ವೈತಮಿವ....'ಎಂಬ ಪ್ರಸಕ್ತ ಶ್ರುತಿಯು, ನನ್ನಂತೆ ಅಪರೋಕ್ಷಜ್ಞಾನಿ ಅಥವಾ ಮುಕ್ತನ ಪರವಾದ ಅರ್ಥವುಳ್ಳದ್ದಾದರೆ, ನೀನು ಹೇಳುವ ಸರ್ವೈಕ್ಯವನ್ನು ಪ್ರತಿಪಾದಿಸದೇ, ಜಾಗ್ರತ್ ಮತ್ತು ಸುಷುಪ್ತಿ(ನಿದ್ರೆ)ಗಳ

(ಇತ್ಯಾದಿಯೂ), ಸ್ಯಾತ್—ಆಗುತ್ತದೆಯಷ್ಟೆ ('ಕೇನ ಕಂ ಪಶ್ಯೇತ್ ವಿಜ್ಞಾತಾರಂ ಕೇನ ವಿಜಾನೀಯಾತ್', ಎಂಬ ಎಲ್ಲ ಪದಗಳ ಅರ್ಥವೂ ಹೊಂದಿಕೆಯಾಗುತ್ತದೆ).

**ಯತ್ರ ಸರ್ವಂ ಚ ಕರಣಮಾತ್ಮಸಾಕ್ಷ್ಯೇವ ಕೇವಲಂ ।**
**ಬಾಹ್ಯಾನಾಂ ಮನ ಆದೀನಾಂ ಯದಾಹ್ಯುಪರತಿಸ್ತದಾ ॥ ೩೧೩ ॥**

**ತತ್ರ ಸುಪ್ತೌ ಕೇನ ಕಿಂ ವಾ ಪಶ್ಯೇಜ್ಜಿಘ್ರೇಚ್ಚ ಕಂ ತದಾ ।**
**ಸ್ವದಷ್ಟಾರಂ ಚ ಕಂ ಪಶ್ಯೇದಜ್ಞಾನಾವರಣಾತ್ತದಾ ।**
**ಯೇನೇದಮಖಿಲಂ ವೇದ ಜಾನೀಯಾತ್ತಂ ಚ ಕೇನ ಸಃ ॥ ೩೧೪ ॥**

ನಿದ್ರೆಯಲ್ಲಿ ತನ್ನನ್ನು ತಾನೇ ತಿಳಿಯದ ಅಜ್ಞಾನವಿರುವುದರಿಂದ, 'ವಿಜ್ಞಾತಾರಂ ಅರೇ ಕೇನ ವಿಜಾನೀಯಾತ್,' ಎಂಬುದರ ಅರ್ಥವೂ ಹೊಂದುವುದೆಂದು ನಿರೂಪಿಸುತ್ತಾರೆ :—

ಯತ್ರ—ಎಲ್ಲಿ (ನಿದ್ರೆಯಲ್ಲಿ), ಸರ್ವಂ—ಎಲ್ಲ, ಕರಣಂ ಚ—ಕರಣವೂ (ಇಂದ್ರಿಯವೂ), ಆತ್ಮಸಾಕ್ಷೀ ಏವ ಕೇವಲಂ—ಸಾಕ್ಷಿಯಾದ ಆತ್ಮನು ಮಾತ್ರವೋ

---

ವೈಲಕ್ಷಣ್ಯವನ್ನು ನಿರೂಪಿಸುತ್ತದೆಂಬ ಅರ್ಥವನ್ನು ತಿಳಿಯಲು ಬರುತ್ತದೆ; 'ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್' ಎಂಬುದು ಸ್ಪಷ್ಟವಾಗಿ ಸುಪ್ತಿಪರವಾಗುತ್ತದೆ; 'ಯತ್ರ ದ್ವೈತಮಿವ'ಎಂಬುದು ಜಾಗ್ರದವಸ್ಥೆಯಲ್ಲಿರುವ ವಿವಿಧ ಪದಾರ್ಥಗಳ ದ್ವೈತಭಾವದಂತೆ, ಮನುಷ್ಯರಿಗೆ, ಆಯಾ ಇಂದ್ರಿಯಗಳಿಂದ ಅವುಗಳ ಜ್ಞಾನವಾಗುತ್ತದೆಂಬರ್ಥವೂ ಕೂಡುತ್ತದೆ; ಮತ್ತು ಪರಸ್ಪರ ಒಬ್ಬರನ್ನೊಬ್ಬರು ನೋಡುವುದು ಮುಂತಾದ ವ್ಯವಹಾರಗಳೂ ಸಂಭಾವ್ಯವೇ ಆಗುತ್ತವೆ; 'ಕೇನ ಕಂ ಪಶ್ಯೇತ್'ಇತ್ಯಾದಿಗಳು, ನಿದ್ರಾವಸ್ಥೆಗೆ ಅನ್ವಯಿಸುತ್ತವೆ(೩೧೧-೩೧೨). ನಿದ್ರಾವಸ್ಥೆಯಲ್ಲಿ ಮನ ಮೊದಲಾದ ಇಂದ್ರಿಯಗಳೆಲ್ಲವೂ ಉಪರತವಾಗಿರುವುದರಿಂದ, ಸಾಕ್ಷಿಸ್ವರೂಪನಾದ ಜೀವನು ಮಾತ್ರನೇ ಇರುತ್ತಾನೆ; ಜೀವನಲ್ಲದೇ ಬೇರಾವುದೂ ಇರುವುದಿಲ್ಲ; ಆಗ ಜೀವನು, ಏನನ್ನು ಕಾಣುತ್ತಾನೆ? ಏನನ್ನು ಮೂಸಿ ನೋಡುವನು? ಈ ಕ್ರಿಯೆಗಳಿಗೆ ಅವಶ್ಯಕವಾದ ಇಂದ್ರಿಯಗಳ ವ್ಯಾಪಾರವೇ ನಿಂತಿದೆ; ಜೀವನು ಅಜ್ಞಾನದಿಂದ ಆಚ್ಛಾದಿತನಾಗಿದ್ದಾನೆ; ಈ ವಿಶ್ವವನ್ನೆಲ್ಲ ತಿಳಿದ ಸರ್ವಜ್ಞನಾದರೂ ಆ ಅವಸ್ಥೆಯಲ್ಲಿ ತೋರುವನೇ?

(ಜೀವನಲ್ಲದೇ ಬೇರಾವುದೂ ಇರುವುದಿಲ್ಲವೋ), ತದಾ–ಆಗ, ಬಾಹ್ಯಾನಾಂ–ಬಾಹ್ಯಗಳ (ಚೇತನ ಭಿನ್ನಗಳಾದ, ಪ್ರಾಕೃತ), ಮನ ಆದೀನಾಂ–ಮನವೇ ಮೊದಲಾದವುಗಳ, ಉಪರತಿಃ ಯದಾ–ಯಾವ ಕಾಲದಲ್ಲಿ ಉಪಶಾಂತಿಯೋ (ಕಾರ್ಯ ಸಮರ್ಥಗಳಾಗಿರುವುದಿಲ್ಲವೋ), ತತ್ರ ಸುಪ್ತೌ–ಆ ನಿದ್ರಾವಸ್ಥೆಯಲ್ಲಿ, ಕೇನ–ಯಾವುದರಿಂದ, ಕಿಂ ವಾ–ಯಾವುದನ್ನಾಗಲಿ, ಪಶ್ಯೇತ್–ನೋಡುವನು? ತದಾ – ಆಗ, ಕಂ – ಯಾವುದನ್ನು, ಜಿಘ್ರೇತ್ ಚ–ವಾಸನೆ ತಿಳಿಯುವನು? ಸ್ವದಷ್ಟಾರಂ – (ಸುಪ್ತನಾದ ತನ್ನನ್ನು, ಜಾಗ್ರತನಾದ ತನ್ನನ್ನು) ತನ್ನನ್ನು ತಿಳಿಯುವ, ತಂ – ಪರಮಾತ್ಮನನ್ನು, ಸಃ – ಸುಪ್ತನು, ಕಂ – ಆತನನ್ನು (ಯಾವನನ್ನು), ಪಶ್ಯೇತ್–ನೋಡುವನೇ? (ಇಲ್ಲ) ; ತದಾ–ಆಗ (ನಿದ್ರಾವಸ್ಥೆಯಲ್ಲಿ), ಅಜ್ಞಾನಾವರಣಾತ್ – ಅಜ್ಞಾನದಿಂದ ಆವೃತನಾಗಿರುವುದರಿಂದ, (ಅಜ್ಞಾನದ ಆಚ್ಛಾದನೆ–ಹೊದ್ದಿಕೆ ಇರುವುದರಿಂದ), ಯೇನ–ಯಾರಿಂದ, ಇದಂ ಅಖಿಲಂ – ವಿಶ್ವವೆಲ್ಲವೂ, ವೇದ – ತಿಳಿಯಲ್ಪಟ್ಟಿರುವುದೋ, ಕೇನ–ಆತನಿಂದ, (ಆಗ, ನಿದ್ರೆಯಲ್ಲಿ), ತಂ–ಆತನನ್ನು, ವಿಜಾನೀಯಾತ್–ತಿಳಿಯುವನೇ? (ಇಲ್ಲ). (ಸರ್ವಜ್ಞನಾದ ಪರಮಾತ್ಮನಿಂದ ಸಹ ನಿದ್ರೆಯಲ್ಲಿ ಸ್ವಜ್ಞಾನವಾಗುವುದಿಲ್ಲ).

**ಅಥವಾ ಪ್ರಾಹ ಸಾ ಮುಕ್ತೌ ಸುಖರೂಪೇಂದ್ರಿಯಾದಿಕಂ ।**
**ಏಕೀಭವಂತಿ ಚ ಪರೇ ಮುಕ್ತಾಶ್ಚ ಕ್ಷೀರನೀರವತ್ ॥ ೩೧೫ ॥**

ಅಥವಾ–(ಬೇರೆ ವಿಧದಿಂದ ಸಹ ಶ್ರುತ್ಯರ್ಥವನ್ನು ತಿಳಿಯಬಹುದಾಗಿದೆ) ಮತ್ತು ಏನೆಂದರೆ, ಸಾ–ಆ (ಪ್ರಸಕ್ತ) ಶ್ರುತಿಯು, ಮುಕ್ತೌ–ಮುಕ್ತಿಯಲ್ಲಿ,

---

ಅಥವಾ ಅವನಿಂದ ತನ್ನನ್ನಾದರೂ ತಿಳಿಯುವನೇ? (ಇಲ್ಲ) (೩೧೩–೩೧೪). ಅಥವಾ ಪ್ರಸಕ್ತ ಶ್ರುತಿಯು, ಸುಖರೂಪದ (ಸುಖಸ್ವರೂಪ) ಇಂದ್ರಿಯಗಳು, ಸುಖರೂಪದ ವಿಷಯಗಳೂ, ಸುಖರೂಪವಾದ ಮುಕ್ತರು, ಎಲ್ಲವೂ ಪರಮಾತ್ಮನಲ್ಲಿ ಕ್ಷೀರನೀರಗಳಂತೆ, ಏಕೀಭಾವವನ್ನು ಹೊಂದುತ್ತವೆ ; 'ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯೂ ಇದನ್ನೇ ಹೇಳುತ್ತದೆ; ಕ ಶಬ್ದವು ಸುಖವಾಚಕವಾದ್ದರಿಂದ ಪ್ರಸಕ್ತ ಶ್ರುತಿಯೂ, ಈ ಶ್ರುತ್ಯರ್ಥದ ವಿವರಣೆಯೇ ಆಗಿರುತ್ತದೆ (೩೧೫). 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ ನ ಬಾಹ್ಯಂ ಕಿಂಚನ ವೇದ'–ಎಂಬ ಶ್ರುತಿಯು ನಿದ್ರೆಯಲ್ಲಿ ಜೀವನು, ಹೃದಯ

ಸುಖರೂಪೇಂದ್ರಿಯಾದಿಕಂ–[1]ಸುಖರೂಪದ ಇಂದ್ರಿಯ, ವಿಷಯಾದಿ (ಭೋಗ್ಯ) ವಸ್ತುಗಳೂ, ಮುಕ್ತಾಃ ಚ–(ಸುಖರೂಪರೇ ಆದ) ಮುಕ್ತರೂ ಸಹ, ಪರೇ–ಪರಮಾತ್ಮನಲ್ಲಿ, ಕ್ಷೀರನೀರವತ್–ಹಾಲು ನೀರಿನಂತೆ, ಏಕೀಭವಂತಿ[2]–ಒಂದಾಗುತ್ತವೆ, (ಎಂದು), ಪ್ರಾಹ–ಹೇಳುತ್ತದೆ (ಹೇಳಿತು).

**ಪ್ರವಿಷ್ಟತ್ವಾತ್ತದುದರೇ ಸರ್ವೇಷಾಂ ಸ್ವಪತಾಂ ಹೃದಿ ।**
**ಅರ್ಥೋಽಪ್ಯೇವಮಭೂತ್ ಸ್ವಸ್ಥಃ ಕ್ಲಿಷ್ಟಾರ್ಥೋಽ ನಾಸ್ತಿ ಕಶ್ಚನ ।**
**ಪುನರಾವೃತ್ತಿರೇವಾಸೀತ್ತದ್ವತ್ತ್ವದ್ವಚನಸ್ಯ ಚ ॥ ೩೧೬ ॥**

ಶ್ರುತಿಗೆ ಬೇರೆ ಅರ್ಥವನ್ನು ಹೇಳುತ್ತಾರೆ :—

---

ಸ್ಥಿತನಾದ ಪ್ರಾಜ್ಞನಾಮಕ ಶ್ರೀಹರಿಯನ್ನು ಪ್ರವೇಶಮಾಡಿ ಸುಖದಿಂದಿರುವನೆಂದು ಹೇಳುತ್ತದೆ; ಪ್ರಸಕ್ತ ಶ್ರುತಿಯನ್ನು, ಸುಪ್ತಜೀವರ ಪರವಾಗಿ ಅರ್ಥ ಮಾಡುವುದರಲ್ಲಿ ಯಾವ ಕಷ್ಟವೂ ಇರುವುದಿಲ್ಲ; ಪ್ರಾಜ್ಞನಾಮಕ ಶ್ರೀಹರಿಯ ಉದರ ಪ್ರವೇಶ ಮಾಡುವನೆಂಬ ಅರ್ಥವನ್ನೇ ಈ ಶ್ರುತಿಯು ದೃಢಪಡಿಸುತ್ತದೆ; ನನ್ನಂತೆ ಮುಕ್ತನನ್ನು ಹೇಳುತ್ತದೆಂದರೆ, ಸಂಸಾರಕ್ಕೆ ಪುನರಾವೃತ್ತಿ ಎಂಬುದಿಲ್ಲ; ನಿನ್ನಂತೆ, ನಿದ್ರಾವಸ್ಥೆಯಿಂದ ತಿರಿಗಿ ಜಾಗ್ರದವಸ್ಥೆಗೆ ಬರುವುದರಿಂದ, ಪುನರಾವೃತ್ತಿಯುಂಟೆಂದು ಪ್ರಾಪ್ತವಾಗುತ್ತದೆ–ಈ ಮಾತ್ರದ ವ್ಯತ್ಯಾಸವೂ ನಿನಗೆ ಗ್ರಾಹ್ಯವೇ ಆಗಬೇಕಲ್ಲವೇ ? (ಇದು ವಿನೋದದ ಮಾತೆಂದು ತಿಳಿಯಬೇಕು) (೩೧೬).

---

1 ಕ ಶಬ್ದವು ಸುಖವಾಚಕವು, ಕೇನ–ಸುಖರೂಪದ ಕಣ್ಣಿಂದ, ಕಂ–ಸುಖರೂಪನಾದ ಅನ್ಯಮುಕ್ತನನ್ನು, ಕೇನ–ಸುಖರೂಪದ ಘ್ರಾಣದಿಂದ, ಕಂ–ಸುಖರೂಪ ಗಂಧಯುಕ್ತ ಸ್ತ್ರೀಸುಖವನ್ನು, ಕೇನ–ಸುಖರೂಪನಾದ ಸಾಕ್ಷಿಯಿಂದ, ಎಂಬ ಶ್ರುತ್ಯರ್ಥದ ಯೋಜನೆಯನ್ನು, 'ಸುಖರೂಪೇಂದ್ರಿಯಾದಿತಂ' ಎಂಬ ಪದವು ಸೂಚಿಸುತ್ತದೆ;

2 'ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತ್ಯರ್ಥವನ್ನೇ ಹೇಳುತ್ತದೆ; ಮುಕ್ತರ ಶ್ರೀಹರಿಯ ಉದರ ಪ್ರವೇಶನದಲ್ಲಿ, ಅವರು ಪ್ರತ್ಯೇಕವಾಗಿ ಕಂಡುಬರುವುದಿಲ್ಲವಾದ್ದರಿಂದ, ಏಕೀಭವಂತಿ ಎಂಬ ಪ್ರಯೋಗವಿದೆ; (ಹಾಲು ನೀರುಗಳು ಒಂದಾದವು, ಎಂದಂತೆ) ಯದ್ಯಪಿ ಹಾಲು ನೀರುಗಳು ಭಿನ್ನವಾಗಿಯೇ ಇರುತ್ತವೆ—ಅವನ್ನು ಪ್ರತ್ಯೇಕಿಸಲೂ ಶಕ್ಯವಿದೆ.

ಸ್ವಪತಾಂ – ನಿದ್ರಿಸುವ, ಸರ್ವೇಷಾಂ – ಸರ್ವರಿಗೆ, ಹೃದಿ – ಹೃದಯದಲ್ಲಿ, ಉದರೇ–(ಸತಾ ಸೌಮ್ಯ ತದಾ ಸಂಪನ್ನೋ ಭವತಿ| ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ| ಎಂಬ ಶ್ರುತಿಯು ಪ್ರಾಜ್ಞನಾಮಕ ಪರಮಾತ್ಮನನ್ನು ಹೊಂದಿ) ಹೃದಯಸ್ಥಿತ ಪ್ರಾಜ್ಞನಾಮಕ ಪರಮಾತ್ಮನ ಉದರ ದಲ್ಲಿ; ಪ್ರವಿಷ್ಟತ್ವಾತ್–ಪ್ರವೇಶವು ಇರುವುದರಿಂದ (ಸುಪ್ತರು ಪ್ರವೇಶಿಸುವುದ ರಿಂದಲೂ), ಏವಂ ಅರ್ಥಃ ಅಪಿ–ಹೀಗಿರುವ ಅರ್ಥವೂ, ಸ್ವಸ್ಥಃ–ದೃಢವೇ, ಅಭೂತ್–ಆಗುತ್ತದೆ; ಕಶ್ಚನ–ಯಾವ, ಕ್ಲಿಷ್ಟಾರ್ಥಃ–ಕಷ್ಟವಾದ ಅರ್ಥವು (ಅನುಸರಿಸಲು ಬಾರದ ಅರ್ಥವು), ನಾಸ್ತಿ–(ಇದರಲ್ಲಿ) ಇರುವುದಿಲ್ಲ; ತದ್ವತ್– ನಿದ್ರೆಯಂತೆ, ತ್ವದ್ವಚನಸ್ಯ ಚ–ನಿನ್ನ (ಪ್ರಸಕ್ತ) ಶ್ರುತಿಗಾದರೂ, ಪುನರಾವೃತ್ತಿಃ– ಪುನಾರವೃತ್ತಿ (ಹಿಂದಿರುಗುವುದು), ಆಸೀತ್ ಏವ–ಆಯಿತು (ಮುಕ್ತಿಗೆ ಪುನರಾ ವೃತ್ತಿಯಲ್ಲಿ, ನಿದ್ರೆಯಿಂದ ಪುನರಾವೃತ್ತಿ–ಪುನಃ ಜಾಗ್ರದವಸ್ಥೆಗೆ ಬರುವುದಿದೆ– ವಿನೋದಪರವೆಂದು ತಿಳಿಯಬೇಕು).

**ನುಮು ವಾಕ್ಯಾನಿ ನ ಪುನರಾವರ್ತಂತೇ ಕದಾಚನ ।**
**ತೇಷು ತೇಷು ಪ್ರಕರಣೇಷ್ವನುಕ್ತ್ಯಾನ್ಯಫಲಸ್ಯ ಹಿ ॥ ೩೧೭ ॥**

ಮಮು–ನನ್ನಂತೆ, ವಾಕ್ಯಾನಿ–ಈ ಶ್ರುತಿವಾಕ್ಯಗಳು, ಕದಾಚನ–ಎಂದೂ, ನ ಪುನರಾವರ್ತಂತೇ-ಪುನರಾವೃತ್ತಿಯುಳ್ಳವುಗಳಲ್ಲಿ (ಪುನರಾವೃತ್ತಿಯನ್ನು ಹೇಳು ವುದಿಲ್ಲ–ಪರಮಮುಕ್ತಿಯನ್ನೇ ಪ್ರತಿಪಾದಿಸುತ್ತವೆ); ತೇಷು ತೇಷು ಪ್ರಕರಣೇಷು– ವೇದವು ಆಯಾ ಪ್ರಕರಣಗಳಲ್ಲಿ, ಅನ್ಯಫಲಸ್ಯ–(ಬೇರೆ ಸಾಧನೆಗಳ) ಬೇರೆ

---

ಈ ಶ್ರುತಿಯು, ಪುನರಾವೃತ್ತಿರಹಿತವಾದ ಪರಮಮುಕ್ತಿಯನ್ನೇ ಪ್ರತಿಪಾದಿಸು ತ್ತದೆಯಲ್ಲದೇ, ಜೀವನ್ಮುಕ್ತಿಯನ್ನಾಗಲಿ, ಅವಾಂತರ ಅನ್ಯಮುಕ್ತಿಯನ್ನಾಗಲಿ, ಹೇಳುವುದಿಲ್ಲ; ವೇದವು ಒಂದು ಶಾಖೆಯಲ್ಲಿ ಸಾಧನವನ್ನು ಹೇಳಿ ಮತ್ತೊಂದು ಶಾಖೆಯಲ್ಲಿ ಫಲವನ್ನು ಹೇಳುವುದಿಲ್ಲ; ಹಾಗೆ ನಿರೂಪಿಸುವುದು ಅಸಂಗತವಾಗು ತ್ತದೆ; ಆಯಾ ಪ್ರಕರಣದಲ್ಲಿಯೇ ಫಲನಿರೂಪಣೆಯೂ ಯುಕ್ತವಾಗುವುದ ರಿಂದಲೂ, ಜೀವನ್ಮುಕ್ತರಿಗೆ ಈ ಶ್ರುತಿಯಲ್ಲಿ ಉಕ್ತವಾದ ಫಲಪ್ರಾಪ್ತಿಯೂ ಇಲ್ಲದ್ದರಿಂದ, ಈ ಶ್ರುತಿಯು ಪರಮುಕ್ತಿ ಪ್ರಕರಣಕ್ಕೇ ಸೇರಿದ್ದಾಗಿದೆ; ಆ ಮುಕ್ತಿಯ ಫಲವೇ ಇಲ್ಲಿ ಹೇಳಲ್ಪಟ್ಟಿದೆ. ಪುನರಾವೃತ್ತಿ ಇಲ್ಲವೆಂಬುದೂ ಈ ಫಲ ನಿರೂಪಣೆಯೇ

ಫಲಗಳ, ಅನುಕ್ತ್ಯಾ—ಹೇಳದಿರುವುದರಿಂದ (ಒಂದು ಶಾಖೆಯಲ್ಲಿ ಸಾಧನವನ್ನು, ಮತ್ತೊಂದರಲ್ಲಿ ಅದರ ಫಲವನ್ನು ಹೇಳುವುದು ಅಸಂಗತವಾಗುವುದರಿಂದ), ಹಿ— (ಈ ಶ್ರುತ್ಯುಕ್ತವಾದುದು ಪರಮಮುಕ್ತಿಯೇ ಸರಿ—ಜೀವನ್ಮುಕ್ತರನ್ನು ಪ್ರತಿಪಾದಿಸುವ ಪ್ರಕರಣದಲ್ಲಿ ಈ ವಾಕ್ಯವಿರುವುದಿಲ್ಲ) ಎಂಬುದು ಸ್ಪಷ್ಟವೇ ಇದೆ. (ಸ್ವೇಷ್ಟ ಭೋಗಪ್ರಾಪ್ತಿ ಮೊದಲಾದ ಫಲವೂ ಇಲ್ಲಿಯೇ ಉಕ್ತವಾಗಿರುವುದರಿಂದಲೂ, ಜೀವನ್ಮುಕ್ತನಿಗೆ ಈ ವಿಧ ಫಲಪ್ರಾಪ್ತಿಯೂ ಇಲ್ಲದ್ದರಿಂದಲೂ, ಪರಮಮುಕ್ತಿ ಪ್ರಕರಣವೆಂಬುದು ಸಿದ್ಧವಾಗುತ್ತದೆ).

**ಮುಮುಕ್ಷೋಸ್ತ್ವಸ್ಯ ಕೇನೇದಂ ಫಲಂ ವಕ್ತ್ಯನಪೇಕ್ಷಿತಂ ।**
**ಅನ್ಯತ್ರ ಹಿ ವಿರಕ್ತಾಸ್ತೇ ಸರ್ವವಿದ್ಯಾವಿಶಾರದಾಃ ॥ ೩೧೮ ॥**

ಬೇರೆ ಯುಕ್ತಿಯನ್ನು ಹೇಳುತ್ತಾರೆ :—

ಮುಮುಕ್ಷೋಃ—ಮೋಕ್ಷವನ್ನು ಇಚ್ಛಿಸುವವನಿಗೆ, ಅನಪೇಕ್ಷಿತಂ—ಅಪೇಕ್ಷಿತವಲ್ಲದ, ಫಲಂ—ಫಲವನ್ನು, ಕೇನ—ಯಾವ ಕಾರಣದಿಂದ, ಅಸ್ಯ ತು—ಈತನಿಗೇ, ಇದಂ—ಇದನ್ನು, ವಕ್ತಿ—(ಶ್ರುತಿಯು) ಹೇಳುತ್ತದೆ? ಸರ್ವವಿದ್ಯಾವಿಶಾರದಾಃ—ಸಕಲವಿದ್ಯಾಪಾರಂಗತರು, ಅನ್ಯತ್ರ—ಬೇರಾವ ಫಲದಲ್ಲಿಯೂ, ತೇ—ಅವರು, ವಿರಕ್ತಾ ಹಿ—ವಿರಕ್ತರಷ್ಟೆ; (ಬೇರಾವ ಫಲವನ್ನು ಆಶಿಸದ ವೈರಾಗ್ಯಶಾಲಿಗಳಾದ ಜ್ಞಾನಿಗಳಿಗೆ, ಈ ಮೋಕ್ಷ ಫಲವೇಕೆ? ಮಾವಿನ ಹಣ್ಣನ್ನು ಇಚ್ಛಿಸಿದವನಿಗೆ ಕೋವಿದಾರವನ್ನು ಕೊಟ್ಟಂತೆ )

**ಅಜ್ಞಾನಾಖ್ಯಾಂಜನಚ್ಛೇದಃ ಪುಣ್ಯಪಾಪವಿಮೋಚನಂ ।**
**ಸರ್ವಕಾಮಾಶನಂ ಚೈವ ಸ್ವರೂಪವ್ಯಕ್ತಿರೇವ ಚ ।**
**ಜೀವನ್ಮುಕ್ತೌ ಕರ್ಮಫಲೇ ಕಥಂ ಸ್ಯಾದ್ಧೀಮತಾಂ ಮತೇ ॥ ೩೧೯ ॥**

ಈ ಶ್ರುತ್ಯುಕ್ತಫಲವು ಜೀವನ್ಮುಕ್ತಿಯಲ್ಲಿ ಅಸಂಭವವಾದ್ದರಿಂದ, ಈ ಮುಕ್ತಿಯು ಪರಮಮುಕ್ತಿಯೇ ಎಂಬುದನ್ನು ಸ್ಪಷ್ಟಗೊಳಿಸುತ್ತಾರೆ :—

---

ಆಗಿರುತ್ತದೆ (೩೧೭). ಮೋಕ್ಷವನ್ನು ಆಶಿಸಿ, ಮಹಾಯತ್ನದಿಂದ ಅಖಿಲ ವಿದ್ಯಾವಿಶಾರದನಾಗಿ, ಅನ್ಯಫಲಗಳಲ್ಲಿ ಪೂರ್ಣವಿರಕ್ತರಾದ ಈ ಮುಮುಕ್ಷುಗಳಿಗೆ, ನೀನು ಹೇಳುವ ಈ ಫಲವು ಸಂಗತವಾಗುತ್ತದೆಯೇ? ಸುಖಾನುಭವವಿಲ್ಲದ ಫಲವು ಅಂಥವರಿಗೆ ಇಚ್ಛಿತವೇ ಆಗುವುದಿಲ್ಲ (೩೧೮). ಅಜ್ಞಾನವೆಂಬ ಅಂಧಕಾರದ

ಅಜ್ಞಾನಾಖ್ಯಾಂಜನಚ್ಛೇದಃ – ಅಜ್ಞಾನವೆಂಬ ಕಾಡಿಗೆಯು ಛೇದವು (ನಾಶವು), ಪುಣ್ಯಪಾಪ ವಿಮೋಚನಂ – ಪುಣ್ಯಪಾಪಗಳ ವಿಮೋಚನೆಯೂ (ಫಲಭೋಗರಾಹಿತ್ಯವೂ), ಸರ್ವಕಾಮಾಶನಂ ಚೈವ–ಇಚ್ಛಿತ ಸರ್ವಕಾಮಗಳ ಭೋಗವೆಂಬುದೂ, ಚ – ಮತ್ತು, ಸ್ವರೂಪವ್ಯಕ್ತಿರೇವ – ಸ್ವಸ್ವರೂಪದ ಅಭಿವ್ಯಕ್ತಿಯೂ (ಸ್ವರೂಪ ಮಾತ್ರದಿಂದ ಸ್ಥಿತಿಯೂ), ಜೀವನ್ಮುಕ್ತೌ–ಜೀವನ್ಮುಕ್ತ್ಯವಸ್ಥೆಯು, ಕರ್ಮಫಲೇ – (ಪ್ರಾರಬ್ಧ) ಕರ್ಮಫಲಭೋಗವು (ಸತ್ಯಾಂ – ಇರುತ್ತಿರಲು), (ಇವುಗಳಿರುವ ಅವಸ್ಥೆಯಲ್ಲಿ), ಕಥಂ–ಹೇಗೆ, ಧೀಮತಾಂ ಮತೇ–ಜ್ಞಾನಿಗಳ ಅಭಿಪ್ರಾಯದಲ್ಲಿ, ಸ್ಯಾತ್–ಸಂಭವಿಸುತ್ತದೆ ? (ಶಕ್ಯವಲ್ಲ).

**ಯದಿ ಕಾಮಾಶನಂ ತೇಷಾಂ ಮಮಂಥುಃ ಕ್ಷೀರಸಾಗರಂ ।**
**ಯಜ್ಞಾಶನಾರ್ಥಂ ಕಲಹಸ್ತತ್ರ ತತ್ರ ಕಥಂ ವದ ॥ ೩೨೦ ॥**

ತೇಷಾಂ-ಜೀವನ್ಮುಕ್ತರಿಗೆ (ಅಪರೋಕ್ಷಜ್ಞಾನಿಗಳಿಗೆ), ಯದಿ ಕಾಮಾಶನಂ- ('ಕಾಮಾನ್ನೀ ಕಾಮರೂಪ್ಯನುಸಂಚರನ್'-ಇತ್ಯಾದಿಯಾಗಿ ಶ್ರುತಿಯು ಹೇಳುವ) ಇಚ್ಛಿತ ಸರ್ವಭೋಗವು ಇರುವುದಾದರೆ, ಕಥಂ–ಹೇಗೆ, ಕ್ಷೀರಸಾಗರಂ–ಕ್ಷೀರ ಸಮುದ್ರವನ್ನು (ಅಮೃತಕ್ಕಾಗಿ), ಮಮಂಥುಃ–ಮಥನಮಾಡಿದರು ? (ಅಪೇಕ್ಷಿತ ಸರ್ವವೂ ಇಚ್ಛಾಮಾತ್ರದಿಂದ ಸಿದ್ಧವಾಗುತ್ತಿರಲು, ಶ್ರಮಸಾಧ್ಯವಾದ ಯತ್ನವೇಕೆ ? ದೈತ್ಯರೊಡನೆ ವ್ಯಾಜ್ಯವೇಕೆ ?) ; ತತ್ರ ತತ್ರ-ಅಲ್ಲಲ್ಲಿ (ಕಂಡುಬರುವಂತೆ), ಯಜ್ಞಾಶನಾರ್ಥಂ–ಯಜ್ಞದಲ್ಲಿ ಅರ್ಪಿಸುವ ಆಹುತಿಗಾಗಿ, ಕಲಹಃ–ಕಲಹವು (ರುದ್ರಾದಿಗಳಂತೆ ದಕ್ಷಯಜ್ಞದಲ್ಲಿ ಎಂಬಂತೆ) (ಕಥಂ–ಹೇಗೆ ಸಂಭಾವ್ಯವಾಗು

---

ನಾಶವೂ, ಪುಣ್ಯಪಾಪಗಳ ಫಲಭೋಗವಿಲ್ಲದಿರುವುದೂ, ಸರ್ವಭೋಗಗಳ ಅನುಭವವೂ, ಸ್ವರೂಪದ ಅಭಿವ್ಯಕ್ತಿಯೂ, ಕರ್ಮಫಲವು ಇನ್ನೂ ಉಳಿದಿರುವ ಕಾಲವಾದ ಜೀವನ್ಮುಕ್ತಿದಶಾದಲ್ಲಿ ಯುಕ್ತವಾಗುತ್ತದೆಯೇ ? ಇದು ಜ್ಞಾನಿ ಸಮ್ಮತವಾಗುವುದಿಲ್ಲ (೩೧೯). ಜೀವನ್ಮುಕ್ತರಿಗೆ ಕಾಮಭೋಗವು ಫಲವಾದರೆ, ಜೀವನ್ಮುಕ್ತರಾದ ದೇವತೆಗಳು, ಅಮೃತಲಾಭಕ್ಕಾಗಿ ಕ್ಷೀರಸಾಗರವನ್ನೇಕೆ ಪ್ರಯಾಸದಿಂದ ಮಥನಮಾಡಬೇಕು ಮತ್ತು ಅದಕ್ಕಾಗಿ ದೈತ್ಯರೊಡನೆ ಕಲಹವೇಕೆ ? ರುದ್ರಾದಿದೇವತೆಗಳು ಯಜ್ಞದಲ್ಲಿ ಅರ್ಪಿತವಾದ ಹವಿಸ್ಸುಗಳಿಗಾಗಿ ಏಕೆ ಕಲಹದಲ್ಲಿ ತೊಡಗಬೇಕು ? (ದಕ್ಷಯಜ್ಞದಲ್ಲಿನಂತೆ) ಅಲ್ಲಲ್ಲಿ ಈ ವಿಧ ಕಲಹವು

ತ್ತದೆ? (ಅಪರೋಕ್ಷಜ್ಞಾನಿಗಳಾದ ರುದ್ರಾದಿದೇವತೆಗಳು ಜೀವನ್ಮುಕ್ತರೇ ಆಗಿರುವರು).

**ತ್ವಗಸ್ಥಿಮಾತ್ರಗಾತ್ರಾಣಾಂ ವಾತಪರ್ಣೋದಕಾಶಿನಾಂ ।**

**ಸದಾ ಶರೀರಸಂತಾಪತಪಸ್ಯಾಸಕ್ತಚೇತಸಾಂ ॥ ೩೨೦ ॥**

**ಮುನೀನಾಂ ನಾರದಾದೀನಾಂ ಸಾಕ್ಷಾತ್ಕೃತಪರಾತ್ಮನಾಂ ।**

**ಜೀವನ್ಮುಕ್ತಿದಶಾಸ್ಥಾನಾಂ ಕಥಂ ಕಾಮಾನ್ವಿತಾ ವದ ॥ ೩೨೨ ॥**

ಜೀವನ್ಮುಕ್ತದಶಾದಲ್ಲಿ ಕಾಮಭೋಗಭೋಕ್ತೃತ್ವವಿಲ್ಲವೆಂದು ಮಾತ್ರವಲ್ಲ, ತದ್ವಿರುದ್ಧಪರಿಸ್ಥಿತಿಯೂ ಉಂಟೆನ್ನುತ್ತಾರೆ:—

ತ್ವಗಸ್ಥಿಮಾತ್ರಗಾತ್ರಾಣಾಂ—ಚರ್ಮ, ಅಸ್ಥಿಗಳೇ ಶರೀರವಾಗಿವುಳ್ಳ, ವಾತಪರ್ಣೋದಕಾಶಿನಾಂ—ಗಾಳಿ, ಎಲೆ, ನೀರುಗಳೇ ಆಹಾರವಾಗಿವುಳ್ಳ, ಸದಾ—ಸರ್ವದಾ, ಶರೀರಸಂತಾಪತಪಸ್ಯಾಸಕ್ತ ಚೇತಸಾಂ—ಶರೀರಕ್ಕೆ ತಾಪವನ್ನುಂಟು ಮಾಡುವ ತಪಸ್ಸಿನ ಆಚರಣೆಯಲ್ಲಿ ಆಸಕ್ತರಾದ, ಸಾಕ್ಷಾತ್ಕೃತ ಪರಾತ್ಮನಾಂ—ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿರುವ, ಜೀವನ್ಮುಕ್ತಿದಶಾಸ್ಥಾನಂ-ಜೀವನ್ಮುಕ್ತ್ಯವಸ್ಥೆಯಲ್ಲಿರುವರಾದ, ನಾರದೀದಾನಾಂ—ನಾರದಾದಿ, ಮುನೀನಾಂ—ಮುನಿಗಳಿಗೆ, ಕಥಂ—ಹೇಗೆ, ಕಾಮಾನ್ವಿತಾ—ಕಾಮಭೋಗವು? (ಯುಕ್ತವಾಗುತ್ತದೆ?), ವದ—ಹೇಳು, (ಆದ್ದರಿಂದ ಕಾಮಭೋಗವು ಜೀವನ್ಮುಕ್ತನಿಗೆ ಲಭ್ಯವಾದ ಫಲವಲ್ಲ).

---

ಉಕ್ತವಾಗಿದೆ; ಆದ್ದರಿಂದ ಇಚ್ಛಿತಭೋಗಪ್ರಾಪ್ತಿಯು, ಜೀವನ್ಮುಕ್ತಿಯ ಫಲವಲ್ಲ (೩೨೦). ಜೀವನ್ಮುಕ್ತರೆಂಬ ಬಹುಮಂದಿ, ಚರ್ಮ ಅಸ್ಥಿ ಮಾತ್ರವುಳ್ಳ ಶರೀರಗಳಾಗಿರುವರು; ಗಾಳಿ, ಎಲೆ, ನೀರುಗಳೇ ಆಹಾರವಾಗಿವುಳ್ಳವರಾಗಿರುವರು; ಶರೀರ ಸಂತಾಪಕರವಾದ ತಪಸ್ಸಿನಲ್ಲಿ ಆಸಕ್ತರಾಗಿರುವ, ಜೀವನ್ಮುಕ್ತ ದಶಾದಲ್ಲಿರುವ, ಪರಮಾತ್ಮನ ಸಾಕ್ಷಾತ್ಕಾರವನ್ನು ಹೊಂದಿದ, ನಾರದಾದಿ ಮುನಿಗಳಿಗೆ, ಈ ಶ್ರುತ್ಯುಕ್ತವಾದ ಕಾಮಾನ್ವತ್ವವು (ಕಾಮಭೋಗವು) ಹೇಗೆ ಹೊಂದುತ್ತದೆ? ಹೊಂದುವುದಿಲ್ಲ; ಆದ್ದರಿಂದ, ಇಲ್ಲಿ ನಿರೂಪಿತವಾದುದು ಪರಮಮುಕ್ತಿಯು—

**ಅತೋ ನಿರವಕಾಶಾನಿ ವಚನಾನ್ಯಖಿಲಾನಿ ಮೇ ।**
**ಬ್ರೂಯುರ್ಮುಕ್ತಿಮನಾವೃತ್ತಿಂ ನಾವರ್ತಂತೇ ಕಥಂಚನ ॥ ೩೨೩ ॥**
**ಯಃ ಸಮೀಪಾಪ್ತಿಸಾಹಿತ್ಯಸಾಮ್ಯಾನಿ ಚ ವಿಭಿನ್ನಯೋಃ ।**
**ತತಃ ಪರಮಮೋಕ್ಷೇ ಚ ಭೇದೋಽಯಂ ಸುಸ್ಥಿರೋಽಭವತ್ ॥೩೨೪॥**

ಅತಃ–ಆದ್ದರಿಂದ, ಮೇ–ನನ್ನಂತೆ, ಅಖಿಲಾನಿ–ಸಮಸ್ತ, ವಚನಾನಿ–(ಶ್ರುತಿ) ವಾಕ್ಯಗಳೂ, ನಿರವಕಾಶಾನಿ – ಅನ್ಯಾರ್ಥಕ್ಕೆ ಅವಕಾಶವಿಲ್ಲದವುಗಳೇ (ಆಗಿದ್ದು). ಮುಕ್ತಿಂ – ಮೋಕ್ಷವನ್ನು, ಅನಾವೃತ್ತಿಂ – ಆವೃತ್ತಿರಹಿತವೆಂದೂ, ಕಥಂಚನ–ಹೇಗೂ (ಯಾವ ಕಾರಣದಿಂದಲೂ), ನಾವರ್ತಂತೇ–ತಿರಿಗಿ ಸಂಸಾರಕ್ಕೆ ಬರುವುದಿಲ್ಲವೆಂದೂ, ಯಃ–ಯಾವುದು (ಮುಕ್ತಿಯು), ಸಮೀಪಾಪ್ತಿ ಸಾಹಿತ್ಯ ಸಾಮ್ಯಾನಿ ಚ–ಸಾಮೀಪ್ಯ, ಸಾಯುಜ್ಯ, ಸಾಲೋಕ್ಯ ಮತ್ತು ಸಾರೂಪ್ಯಗಳೆಂಬ ಭಿನ್ನವಿಧಗಳುಳ್ಳದ್ದೆಂದೂ, ಬ್ರೂಯುಃ – ಹೇಳುತ್ತವೆ. ತತಃ–ಆದ್ದರಿಂದ, ಪರಮ ಮೋಕ್ಷೇ ಚ–ಪರಮಮುಕ್ತಿಯಲ್ಲಿಯೂ, ವಿಭಿನ್ನಯೋಃ–ಜೀವನ್ಮುಕ್ತಿ, ಪರಮ ಮುಕ್ತಿಗಳಲ್ಲಿಯೂ, ಅಯಂ ಭೇದಃ–ಈ ಭೇದವು, ಸುಸ್ಥಿರಃ–ಸುದೃಢವು, ಅಭವತ್–ಆಯಿತು.

**ಸರ್ವೀಭೂಯ ಪರಂಬ್ರಹ್ಮ ಸರ್ವಾನ್ ಕಾಮಾನ್ ಕಿಲಾಶ್ನುತೇ ।**
**ಮುಕ್ತಸ್ತದ್ಬ್ರಹ್ಮರೂಪೇಣ ಭುಂಕ್ತೇ ತಾನಖಿಲಾನ್ ಕಿಲ ॥ ೩೨೫ ॥**

'ಬ್ರಹ್ಮಣಾ ಸಹ ಸರ್ವಾನ್ ಕಾಮಾನ್ ಅಶ್ನುತೇ' ಎಂಬುದಕ್ಕೆ, ಮಾಯಾವಾದಿಯು, ಮುಕ್ತನೂ ಬ್ರಹ್ಮತಾದಾತ್ಮ್ಯವನ್ನು (ಬ್ರಹ್ಮಸ್ವರೂಪವನ್ನೇ)

---

ಜೀವನ್ಮುಕ್ತಿಯಲ್ಲ (೩೨೧–೩೨೨). ಈ ಶ್ರುತಿಯು ಹೇಳುವ ಪುನರಾವೃತ್ತಿ ರಾಹಿತ್ಯವೆಂಬ ಫಲವು ನಿರವಕಾಶವಾಗಿ ಪರಮಮೋಕ್ಷವನ್ನೇ ಹೇಳುತ್ತದೆ; ಯಾವ ಕಾರಣದಿಂದಲೂ ತಿರಿಗಿ ಸಂಸಾರಕ್ಕೆ ಬರದಿರುವುದೆಂಬ ಫಲವು, ಅನ್ಯಾರ್ಥಕ್ಕೆ ಎಡೆಗೊಡದೇ ಪರಮಮೋಕ್ಷವೆಂದೇ ಸ್ಥಾಪಿಸುತ್ತದೆ; ಪರಮಮೋಕ್ಷವು, ಸಾಮೀಪ್ಯ, ಸಾಯುಜ್ಯ, ಸಾಲೋಕ್ಯ, ಸಾರೂಪ್ಯಗಳೆಂದು ಭಿನ್ನವಾಗಿದೆ; ಜೀವನ್ಮುಕ್ತಿ ಮತ್ತು ಪರಮಮೋಕ್ಷಗಳಲ್ಲಿರುವ ಭೇದವು, ಈ ಶ್ರುತಿಯಿಂದ ಸುಸ್ಥಿರವಾಗಿ ಸಿದ್ಧವಾಗುತ್ತದೆ (೩೨೩–೩೨೪). 'ಬ್ರಹ್ಮಣಾ ಸಹ ಸರ್ವಾನ್

ಹೊಂದಿ, ಪಶುಪಕ್ಷ್ಯಾದಿ ನಾನಾ ಜೀವರೆಂಬ ಬ್ರಹ್ಮನಿಂದ ಭುಜ್ಯಮಾನ ಗಳಾದ ಸಕಲಭೋಗಗಳನ್ನು (ಸಹ) ಏಕಕಾಲದಲ್ಲಿ ಭೋಗಿಸುತ್ತಾನೆಂಬ ಅರ್ಥವನ್ನು ಹೇಳುತ್ತಾನೆ; ಇದನ್ನು ಅತ್ಯಂತ ಪರಿಹಾಸ್ಯರೂಪವಾದುದೆಂದು ಹೇಳುತ್ತಾರೆ :—

ಪರಂಬ್ರಹ್ಮ—ಪರಬ್ರಹ್ಮನು, ಸರ್ವೀಭೂಯ—ಎಲ್ಲವೂ ತಾನೇ ಆಗಿ (ಪಶ್ವಾದಿ ನಾನಾ ರೂಪಗಳಿಂದ ತಾನೇ ಆಗಿ), ಸರ್ವಾನ್ ಕಾಮಾನ್—ಸರ್ವ ಭೋಗಗಳನ್ನು, ಅಶ್ನುತೇ ಕಿಲ—ಭೋಗಿಸುತ್ತಾನೆ, ಎನ್ನುವಿಯಷ್ಟೆ; ಮುಕ್ತಃ—ಮುಕ್ತನು, ತದ್ಬ್ರಹ್ಮರೂಪೇಣ—ಸರ್ವಾತ್ಮಕ ಬ್ರಹ್ಮನ ರೂಪದಿಂದ, ತಾನ್ ಅಖಿಲಾನ್—ಆ ಸಮಸ್ತವನ್ನು, ಭುಙ್ಕ್ತೇ ಕಿಲ—ಭೋಗಿಸುತ್ತಾನಷ್ಟೆ.

**ಸಹಶಬ್ದೋ ಯೌಗಪದ್ಯಂ ವದೇದಾತ್ಮೇಚ್ಛಯಾ ಕಿಲ ।**
**ತಸ್ಯ ಕ್ರಮಿಕಭೋಗಾಂಶ್ಚ ಭುಙ್ಕ್ತೇಽಯಂ ಯುಗಪತ್ಕಿಲ ।**
**ಯೇ ಪ್ರಾಹುರಿತ್ಥಂ ಶ್ರುತ್ಯರ್ಥಮನರ್ಥಂ ಕಿಂ ನ ತೇ ವಿದುಃ ॥೩೨೬॥**

ಸಹ ಶಬ್ದಃ—ಸಹ ಎಂಬ ಶಬ್ದವು, ಯೌಗಪದ್ಯಂ—ಏಕಕಾಲದಲ್ಲಿ ಎಂಬರ್ಥ ವನ್ನು, ವದೇತ್—ಹೇಳುತ್ತದೆ: ಆತ್ಮೇಚ್ಛಯಾ ಕಿಲ—ತನ್ನ ಇಚ್ಛೆಯಿಂದಲೇ ಅಷ್ಟೆ; ಕ್ರಮಿಕಭೋಗಾನ್—ದಿನದಿನದಲ್ಲಿ ಕ್ರಮವಾಗಿ ಉಂಟಾಗುವ ಭೋಗ ಗಳನ್ನು, ಅಯಂ—(ಈ) ಮುಕ್ತನು, ಭುಙ್ಕ್ತೇ—ಭೋಗಿಸುತ್ತಾನೆ; ತಸ್ಯ—ಆ ಭೋಗಕ್ಕೆ, 'ಯುಗಪತ್ ಕಿಲ—ಯುಗಪತ್ ಎನ್ನುವಿಯಷ್ಟೆ (ಕ್ರಮಿಕಭೋಗ ಗಳನ್ನು ಯುಗಪತ್ ಭೋಜನದ ಸಮವೆಂಬುದೇ ಪರಿಹಾಸ್ಯಕರವು);

---

ಕಾಮಾನ್ ಅಶ್ನುತೇ' ಎಂಬುದರ ಅರ್ಥವನ್ನು ಮಾಯಾವಾದಿಯು, ನಾನಾ ಜೀವರಿಂದ ಭೋಗಿಸಲ್ಪಡುವ ಭೋಗಗಳನ್ನು ಆಯಾ ರೂಪದಿಂದ ಇರುವ ತಾನೇ, ಪರಬ್ರಹ್ಮನು ಭೋಗಿಸುತ್ತಾನೆಂದೂ, ಮುಕ್ತನಾದವನು, ಸರ್ವಾತ್ಮಕ ಬ್ರಹ್ಮರೂಪವನ್ನು ಹೊಂದಿ, ಆ ಸಮಸ್ತ ಭೋಗಗಳನ್ನು ಪರಬ್ರಹ್ಮನೊಂದಿಗೆ ಅನುಭವಿಸುವನೆಂಬರ್ಥವನ್ನು ಹೇಳುತ್ತಾರೆ; ಇದು ಯೋಗ್ಯವಲ್ಲ (೩೨೫). ಏಕೆಂದರೆ, 'ಸಹ' ಎಂಬ ಈ ವಾಕ್ಯದಲ್ಲಿರುವ ಶಬ್ದವು, 'ಯುಗಪತ್'—ಏಕ ಕಾಲದಲ್ಲಿ ಎಂಬರ್ಥವನ್ನು ಹೇಳುತ್ತದೆ; ಆತ್ಮೇಚ್ಛೆಯಿಂದಲೇ ಹೀಗೆ ಏಕಕಾಲದಲ್ಲಿ ಸರ್ವಜೀವರ ಭೋಗಗಳನ್ನು ಅನುಭವಿಸುತ್ತಾನೆಂಬುದೂ ಯುಕ್ತಿವಿರುದ್ಧವೇ

ಶ್ರುತ್ಯರ್ಥಂ–ಈ ಶ್ರುತ್ಯರ್ಥವನ್ನು, ಇತ್ಥಂ–ಹೀಗೆಂದು ಯೇ ಪ್ರಾಹುಃ–ಯಾರು ಹೇಳುವರೋ, ತೇ–ಅವರು (ಮಾಯಾವಾದಿಗಳು), ಅನರ್ಥಂ–ಪ್ರಾಪ್ತವಾಗುವ ಅನರ್ಥವನ್ನು (ದುರರ್ಥವನ್ನು) ಕಿಂ ನ ವಿದುಃ–ತಿಳಿಯರೇನು! (ಆಶ್ಚರ್ಯವು).

**ತುಷಾನ್ನಂ ಕಂಟಕಾನ್ನಂ ಚ ಮಲಂ ನಾರಕಭೋಜನಂ ।**
**ನಾನಾಯೋನಿಸ್ಥಜೀವಾನಾಂ ಹೀನಾಹೀನಾಶನಾನಿ ಚ ॥ ೩೨೭ ॥**

**ಇಮೇ ಸರ್ವಾತ್ಮಕಬ್ರಹ್ಮಕಾಮಾ ಮುಕ್ತಸ್ಯ ಚೇತ್ತ್ವ ।**
**ಮುಕ್ತಿರ್ನ ಬಂಧಾತ್ತರ್ಹ್ಯೇಷಾ ಭುಕ್ತಿರ್ಮುಕ್ತೇರಭೂದಹೋ ।**
**ತಸ್ಮಾದೀದೃಗ್ವಿಧವ್ಯಾಖ್ಯಾ ಪ್ರತ್ಯಾಖ್ಯಾ ಮುಕ್ತಿಸಂಪದಃ ॥ ೩೨೮ ॥**

**ಕಥಂ ಚ ಪರಮಂ ಸಾಮ್ಯಂ ಜೀವನ್ಮುಕ್ತೌ ಹಿ ದುಃಖಿನಾಂ ।**
**ನಿರ್ದುಃಖಬ್ರಹ್ಮಣಾ ಸಾಕಮಿತಿ ಚಿಂತ್ಯಂ ವಿವೇಕಿಭಿಃ ॥ ೩೨೯ ॥**

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ॥ ೩೩೦ ॥**

**ಇತಿ ಗೀತಾಸು ಯತ್ಸ್ಪಷ್ಟಂ ಸ್ವಸಾಧರ್ಮ್ಯಂ ಹರಿರ್ಜಗೌ ।**
**ಸರ್ಗಪ್ರಲಯಶೂನ್ಯಾನಾಂ ಮಹಾಮೋಕ್ಷಸ್ಥದೇಹಿನಾಂ ॥ ೩೩೧ ॥**

**ಜೀವನ್ಮುಕ್ತಾಶ್ಚ ಜಾಯಂತೇ ಮ್ರಿಯಂತೇ ಚ ತದಾ ತದಾ ।**
**ಅತಃ ಪರಮಮುಕ್ತಸ್ಯ ಪ್ರಶಂಸೇಯಂ ನ ಸಂಶಯಃ ॥ ೩೩೨ ॥**

---

ಆಗುತ್ತದೆ; ವಿವಿಧ ಜೀವರು, ದಿನದಿನದಲ್ಲಿ ಕ್ರಮವಾಗಿ ಪಡೆಯುವ ಭೋಗಗಳನ್ನು ಏಕಕಾಲದಲ್ಲಿ ಹೊಂದುವುದೆಂಬುದು, ಮುಕ್ತನಿಗೆ ಹೇಗೆ ಯುಕ್ತವಾಗುತ್ತದೆ? ಹೀಗೆ ಶ್ರುತ್ಯರ್ಥವನ್ನು ಹೇಳುವುದರಿಂದ ಪ್ರಾಪ್ತವಾಗುವ ಅನರ್ಥವನ್ನು, ಅವರು (ಮಾಯಾವಾದಿಗಳು) ತಿಳಿಯರು (೩೨೬). ಹೊಟ್ಟು (ಕತ್ತೆಯ ಆಹಾರ), ಮುಳ್ಳು (ಒಂಟೆಯ ಆಹಾರ), ಮಲ (ನಾಯಿಯು ತಿನ್ನುವುದು), ನರಕದಲ್ಲಿ ಅನುಭವಿಸುವ ವಿವಿಧ ದುಃಖಗಳು, ಈ ಮೊದಲಾದ ನಾನಾ ಯೋನಿಗಳಲ್ಲಿರುವ ಜೀವರ, ಉಚ್ಚನೀಚಗಳಾದ ಆಹಾರಗಳು ಮತ್ತು ಭೋಗಗಳು,

ತುಷಾನ್ನಂ-(ಹೊಟ್ಟಿನತವುಡು) (ಕತ್ತೆಯ ಆಹಾರ), ಕಂಟಕಾನ್ನಂ ಚ-ಮುಳ್ಳಿನ ಆಹಾರ (ಉಷ್ಟ್ರಪಕ್ಷಿಯ ಆಹಾರ), ಮಲಂ - ಮಲವು (ನಾಯಿ ತಿನ್ನುವುದು), ನಾರಕಭೋಜನಂ - ನರಕದಲ್ಲಿ ಅನುಭವಿಸುವ ದುಃಖಭೋಗ, ನಾನಾ ಯೋನಿಸ್ಥ ಜೀವಾನಾಂ-ನಾನಾ ದೇಹಗಳಲ್ಲಿರುವ ಜೀವರುಗಳ, ಹೀನಾ ಹೀನಾಶನಾನಿ ಚ - ನೀಚೋಚ್ಚಗಳಾದ ವಿವಿಧ ಆಹಾರಗಳು, ಇಮೇ - ಈ (ಉಕ್ತ ಸರ್ವಭೋಗಗಳು), ಸರ್ವಾತ್ಮಕ ಬ್ರಹ್ಮಕಾಮಾಃ-ಸರ್ವಸ್ವರೂಪನಾದ ಬ್ರಹ್ಮನ ಭೋಗಗಳು, ತವ-ನಿನ್ನಂತೆ, ಮುಕ್ತಸ್ಯ-ಮುಕ್ತನಿಗೆ; ಚೇತ್-ಆಗುವುದಾದರೆ, ಮುಕ್ತಿಃ-ಮುಕ್ತಿಯು, ನ ಬಂಧಾತ್-ಸಂಸಾರದಲ್ಲಿದ್ದರಿಂದ, ತರ್ಹಿ-ಆಗ ತೇಷಾಂ-ಆ ಎಲ್ಲ ಜೀವರ, ಭುಕ್ತಿಃ-ಆಹಾರವು, ಮುಕ್ತೇಃ-ಮುಕ್ತನಿಗೆ, ಅಭೂತ್-(ಎಂದು) ಆಯಿತು ; ಅಹೋ-ಆಶ್ಚರ್ಯವು ; ತಸ್ಮಾತ್-ಆದ್ದರಿಂದ, ಈದೃಗ್ವಿಧವ್ಯಾಖ್ಯಾ-ಈ ರೀತಿಯ (ಶ್ರುತಿ) ವ್ಯಾಖ್ಯಾನವು, ಮುಕ್ತಿಸಂಪದಃ-ಮುಕ್ತಿರೂಪದ ಭಾಗ್ಯಕ್ಕೆ, ಪ್ರತ್ಯಾಖ್ಯಾ-ವಿರೋಧವಾದ ಅರ್ಥನಿರೂಪಣೆಯು ; ದುಃಖಿನಾಂ-ದುಃಖವುಳ್ಳವರಾದ ಜೀವರಿಗೆ, ಜೀವನ್ಮುಕ್ತೌ-ಜೀವನ್ಮುಕ್ತಿಯಲ್ಲಿ ಪರಮಂ ಸಾಮ್ಯಂ-ಪರಮಸಾಮ್ಯವು (ಸಾದೃಶ್ಯವು), ನಿರ್ದುಃಖಬ್ರಹ್ಮಣಾಸಾಕಂ-ದುಃಖಸ್ಪರ್ಶವಿಲ್ಲದ ಬ್ರಹ್ಮನೊಡನೆ, ಕಥಂ-ಹೇಗೆ ? (ಕೂಡುತ್ತದೆ), ಇತಿ-ಎಂದು, ವಿವೇಕಿಭಿಃ-ವಿವೇಕಿಗಳಿಂದ, ಚಿಂತ್ಯಂ-ಚಿಂತಿಸತಕ್ಕದ್ದು (ಅಲ್ಲವೇ ?) ; ಇದಂ-ಈ (ಗೀತೋಕ್ತ), ಜ್ಞಾನಂ-ಜ್ಞಾನವನ್ನು, ಉಪಾಶ್ರಿತ್ಯ - ಆಶ್ರಯಿಸಿಕೊಂಡಿದ್ದು, ಮಮ-ನನ್ನ, ಸಾಧರ್ಮ್ಯಂ-ಸಮಾನಧರ್ಮವನ್ನು, ಆಗತಾಃ-ಹೊಂದಿದವರು,

---

ಸರ್ವಾತ್ಮಕ ಪರಬ್ರಹ್ಮರೂಪನಾದ ಮುಕ್ತನಿಗೆ, ಇರಬೇಕಾಗುತ್ತವೆ; ಸಂಸಾರವೆಂಬ ಬಂಧವಿಲ್ಲದಿದ್ದರೂ, ಈ ಭೋಗವು ಮುಕ್ತನಿಗೆಂದಂತಾಯಿತು, ಆಶ್ಚರ್ಯ ! ಆದ್ದರಿಂದ ಈ ವಿಧದ ಶ್ರುತಿವ್ಯಾಖ್ಯಾನವು ಮುಕ್ತಿರೂಪದ ಮಹಾಭಾಗ್ಯವನ್ನು ವಿರೋಧಿಸುತ್ತದೆ ; ದುಃಖಿಗಳಾದ (ದುಃಖಸ್ಪರ್ಶವುಳ್ಳ-ಪ್ರಾರಬ್ಧಭೋಗವುಳ್ಳ) ಜೀವರಿಗೆ, ಜೀವನ್ಮುಕ್ತಿಯಲ್ಲಿ, ಸರ್ವದೋಷದೂರನು (ದುಃಖಲೇಶರಹಿತನೂ ಕರ್ಮಭೋಗರಹಿತನೂ) ಆದ ಪರಬ್ರಹ್ಮನ ಪರಮಸಾಮ್ಯವು ಹೇಗೆ ಯುಕ್ತವಾದೀತೆಂಬುದನ್ನು ವಿವೇಕಿಗಳು ಚಿಂತಿಸಬೇಕಲ್ಲವೇ ? ಈ ನನ್ನ ಜ್ಞಾನವನ್ನು ಆಶ್ರಯಿಸಿ, ನನ್ನ ಸಾಧರ್ಮ್ಯವನ್ನು ಹೊಂದಿದವರು ಸೃಷ್ಟಿಕಾಲದಲ್ಲಿ ಹುಟ್ಟುವುದಿಲ್ಲ (ಪ್ರಾಕೃತ ದೇಹಗಳನ್ನು ಹೊಂದುವುದಿಲ್ಲ) ಮತ್ತೆ ಪ್ರಲಯದಲ್ಲಿ ನಷ್ಟರಾಗುವುದಿಲ್ಲ ; ಇದೇ

(ಪರಮಾತ್ಮಸಮಾನ ಧರ್ಮವನ್ನು ವಿವರಿಸುತ್ತಾನೆ) ; ಸರ್ಗೇ ಅಪಿ–ಸೃಷ್ಟಿಯಲ್ಲಿ, ನ ಉಪಜಾಯಂತೇ–ಹುಟ್ಟುವುದಿಲ್ಲ (ಜಗತ್ಸೃಷ್ಟಿಕಾಲದಲ್ಲಿ, ಸೃಷ್ಟಿಯಲ್ಲಿ ಬರುವುದಿಲ್ಲ) ; ಪ್ರಲಯೇ–ಪ್ರಲಯದಲ್ಲಿ, ನ ವ್ಯಥಂತಿ ಚ–ನಾಶವನ್ನು ಹೊಂದುವುದಿಲ್ಲ (ತನ್ನಿಮಿತ್ತ ದುಃಖವನ್ನು ಹೊಂದುವುದಿಲ್ಲ) ; ಇತಿ–ಹೀಗೆಂದು, ಗೀತಾಸು–ಭಗವದ್ಗೀತೆಯಲ್ಲಿ, ಯತ್–ಯಾವ ಕಾರಣದಿಂದ, ಸಾಧರ್ಮ್ಯಂ–ಸಮಾನಧರ್ಮವನ್ನು, ಹರಿಃ–ಶ್ರೀಕೃಷ್ಣನು, ಜಗೌ – ಕೀರ್ತಿಸಿರುವನೋ (ಹೇಳಿರುವನೋ), (ಮತ್ತು) ಸರ್ಗಪ್ರಲಯಶೂನ್ಯಾನಾಂ–ಸೃಷ್ಟಿ, ಲಯಗಳಿಲ್ಲದ, ಮಹಾಮೋಕ್ಷಸ್ಥದೇಹಿನಾಂ–ಪರಮ ( ಮುಖ್ಯ ) ಮೋಕ್ಷದಲ್ಲಿರುವ ಜೀವರಿಗೆ (ಈ ವಿಧ ಸಾಧರ್ಮ್ಯವೂ), ಚ–ಮತ್ತು, ಜೀವನ್ಮುಕ್ತಾಃ–ಜೀವನ್ಮುಕ್ತರು, ತದಾ ತದಾ–ಆಗಾಗ (ಭೋಕ್ತವ್ಯಪ್ರಾರಬ್ಧಕರ್ಮಾನುಸಾರವಾಗಿ), ಜಾಯಂತೇ – ಹುಟ್ಟುತ್ತಾರೆ, ಮ್ರಿಯಂತೇ–ಮರಣವನ್ನು ಹೊಂದುತ್ತಾರೆ (ಎಂಬುದೂ), ಅತಃ–ಆದ್ದರಿಂದ (ಉಕ್ತವಾಗಿರುವುದರಿಂದ) ಇಯಂ–ಈ ಶ್ರುತಿಯು, (ಕಾಮಾನ್ನೀ, ಅನಾವೃತ್ತಿಶಬ್ದಗಳಿಂದ ನಿರೂಪಿತವಾದ), ಪರಮ ಮುಕ್ತಸ್ಯ–ಪರಮಮುಕ್ತನ, ಪ್ರಶಂಸಾ – ಪ್ರಶಂಸೆಯೇ (ಆಗಿದೆ), ಸಂಶಯಃ ನ – ಯಾವ ಸಂದೇಹಕ್ಕೂ ಅವಕಾಶವಿಲ್ಲ.

**ತಥಾನ್ಯೋಪನಿಷತ್ ಪ್ರಾಹ ಶರವತ್ತನ್ಮಯೋ ಭವೇತ್ ।**
**ಇತಿ ಮುಕ್ತಿಪ್ರಕರಣೇ ಶರವನ್ಮುಕ್ತಚೇತನಃ ॥ ೩೩ ॥**

---

ನನ್ನ ಸಮಾನ ಧರ್ಮದ ಪ್ರಾಪ್ತಿಯೆಂದು, ಗೀತೆಯಲ್ಲಿ ಶ್ರೀಕೃಷ್ಣನು, ಕೀರ್ತಿಸಿರಲು ಮುಕ್ತಜೀವರಿಗೆ, ಪರಮಾತ್ಮಸಮವಾದ ಸರ್ವಧರ್ಮಗಳನ್ನು ತಿಳಿಯುವುದು ಮೂರ್ಖತನವಲ್ಲವೇ ? ಜೀವನ್ಮುಕ್ತರಾದರೋ (ಪ್ರಾರಬ್ಧಕರ್ಮಾನುಸಾರವಾಗಿ) ಜನನ ಮರಣಗಳುಳ್ಳವರಾಗಿರುತ್ತಾರೆ ; ಅವರು ಮಹಾಮೋಕ್ಷಸ್ಥಿತರಾದ ಮುಕ್ತಜೀವರಿಂದ ಅತ್ಯಂತ ಭಿನ್ನರು ; ಕಾಮಾನ್ನೀ, ನ ಪುನರಾವರ್ತಂತೇ ; ಇತ್ಯಾದಿ ಶಬ್ದಗಳು ನಿರವಕಾಶವಾಗಿ ತಿಳಿಸುವಂತೆ, ಈ ಪ್ರಸಕ್ತಶ್ರುತಿಯು, ಪರಮಮುಕ್ತನ ಪರವಾದುದೇ ಆಗಿದೆ—ಯಾವ ಸಂಶಯಕ್ಕೂ ಅವಕಾಶವಿಲ್ಲ (೩೨–೩೩). ಬೇರೊಂದು ಉಪನಿಷತ್ತು 'ಶರವತ್ತನ್ಮಯೋ ಭವೇತ್' ಎಂದು ಮುಕ್ತಿಪ್ರಕರಣದಲ್ಲಿ ಹೇಳುತ್ತದೆ ; ಮುಕ್ತಚೇತನನೇ ಶರದಂತೆ, ಲಕ್ಷ್ಯ (ಗುರಿಯೇ) ಬ್ರಹ್ಮನು,

**ಲಕ್ಷ್ಯವದ್ಬ್ರಹ್ಮ ತಸ್ಯಾಂತಃ ಪ್ರವೇಶಃ ಕ್ಷೀರನೀರವತ್ ।**
**ಇದಮೇವಾಸ್ಯ ಸಾಯುಜ್ಯಂ ಮಯಟೋಽರ್ಥೋಽಪ್ಯಯಂ ಕಿಲ**
**॥ ೩೩೪ ॥**

ತಥಾ–ಮತ್ತು, ಶರವತ್–ಬಾಣದಂತೆ (ಗುರಿಯಿಡಲ್ಪಟ್ಟ ಶರದಂತೆ), ತನ್ಮಯಃ – ತನ್ಮಯನು (ಗುರಿಯಲ್ಲಿಯೇ ಸ್ಥಾಪಿತವಾದ ಚಿತ್ತವುಳ್ಳವನು), ಭವೇತ್–ಆಗುತ್ತಾನೆ; ಇತಿ ಅನ್ಯಃ ಉಪನಿಷತ್–ಬೇರೊಂದು ಉಪನಿಷತ್ತು, ಮುಕ್ತಿ ಪ್ರಕರಣದಲ್ಲಿ, ಪ್ರಾಹ–ಹೇಳಿತು; ಮುಕ್ತಚೇತನಃ–ಮುಕ್ತಚೇತನನು, ಶರವತ್–ಶರದಂತೆಯೂ, ಲಕ್ಷ್ಯವತ್ ಬ್ರಹ್ಮ–ಗುರಿಯಂತೆ ಬ್ರಹ್ಮನು, ತಸ್ಯ–ಅದರ (ಗುರಿಯ–ಬ್ರಹ್ಮನ), ಅಂತಃ–ಒಳಗೆ, ಕ್ಷೀರ ನೀರವತ್–ಹಾಲು ನೀರುಗಳಂತೆ, ಪ್ರವೇಶಃ–ಪ್ರವೇಶವು (ಎಂದು ಹೇಳಿತು–ಇತ್ಯುಪನಿಷತ್); ಇದಂ ಏವ–ಇದೇ (ಈ ದೃಷ್ಟಾಂತದಿಂದ ಸೂಚಿತವಾದುದೇ), ಅಸ್ಯ–ಮುಕ್ತಚೇತನನ, ಸಾಯುಜ್ಯಂ – ಸಾಯುಜ್ಯಮುಕ್ತಿಯು ; ಮಯಟಃ ಅರ್ಥಃ ಅಪಿ – ಮಯಟ್ ಪ್ರತ್ಯಯದ ಅರ್ಥವೂ, ಅಯಂ ಕಿಲ–ಇದೇ ಅಲ್ಲವೇ ? (ತನ್ಮಯಃ ಎಂಬಲ್ಲಿರುವ ಮಯಟ್ ಪ್ರತ್ಯಯಸೂಚಿತವಾದುದು ಇದೇ ಅರ್ಥವು).

**ಜಾತಿಭೇದೋ ವರ್ಣಭೇದೋ ಮುಕ್ತಭೇದೋಽಸ್ತಿ ತತ್ರ ಚ ।**
**ಭೇದೇನಾದರ್ಶನಾದೇವ ತದೇಕೀಭಾವವಾಕ್ ಶ್ರುತೌ ।**
**ಅದೃಷ್ಟಾಂತೋಕ್ತಿತೋ ಯಸ್ಮಾತ್ಸದೃಷ್ಟಾಂತಾ ಬಲೀಯಸೀ ॥೩೩೫॥**

ತತ್ರ ಚ–ಈ ಉಪನಿಷದ್ವಾಕ್ಯದಲ್ಲಿಯೇ, ಜಾತಿಭೇದಃ–ಶರ ಮತ್ತು ಲಕ್ಷ್ಯ (ಗುರಿ) ಎಂಬ ಜಾತಿಭೇದದಂತೆ (ಪ್ರವೇಶಗೊಳ್ಳುವ ಶರ ಮತ್ತು ಲಕ್ಷೀಭೂತವಾದ

---

ಶರವು ಅಲ್ಲಿ ಪ್ರವೇಶಿಸುವುದೇ, ಕ್ಷೀರದಲ್ಲಿ ನೀರು ಪ್ರವೇಶಿಸುವಂತೆ, ಹೋಗಿ ಸೇರುವುದೇ ಸಾಯುಜ್ಯಮುಕ್ತಿಯು ; ಮುಕ್ತಚೇತನನ ಸಾಯುಜ್ಯ ಮುಕ್ತಿಯನ್ನು ಈ ಉಪನಿಷತ್ತು, ಸದೃಷ್ಟಾಂತವಾಗಿ ನಿರೂಪಿಸುತ್ತದೆ; 'ಶರವತ್ತನ್ಮಯೋ ಭವೇತ್' ಎಂಬಲ್ಲಿರುವ 'ಮಯಟ್' ಪ್ರತ್ಯಯವು ಈ ಅರ್ಥವನ್ನೇ ತಿಳಿಸುತ್ತದೆ; ತನ್ಮಯವೆಂದರೆ, ತತ್ಸ್ವರೂಪತ್ವ–ತದೇಕತ್ವವಲ್ಲ ; ಶರ ಮತ್ತು ಗುರಿಗಳು ಒಂದೇ ಅಲ್ಲ–ಆಗುವುದೂ ಇಲ್ಲ (೩೩೩-೩೩೪). ಭಿನ್ನರಾದ ಮುಕ್ತರಲ್ಲಿ, ಜಾತಿಭೇದ,

ಪುರುಷರೆಂಬ ಜಾತಿಭೇದ), ವರ್ಣಭೇದಃ–ವರ್ಣಭೇದವೂ (ಜೀವಪರಮಾತ್ಮರಿಬ್ಬರೂ ಭಿನ್ನವರ್ಣದವರು–ಶರವು ಅಲ್ಪಕಾಂತಿಯುಳ್ಳ ಕಬ್ಬಿಣದಂತೆ, ಲಕ್ಷ್ಯವು ಮಹಾಕಾಂತಿಯುಳ್ಳ ತೇಜೋರೂಪದ ಪುರುಷನಂತೆ), ಮುಕ್ತಭೇದಃ ಅಪಿ–(ಮುಕ್ತಚೇತನನು ಮುಕ್ತನಾದವನು, ಬ್ರಹ್ಮನು ನಿತ್ಯಮುಕ್ತನು) ಹೀಗೆ ಮುಕ್ತಭೇದವೂ, ಅಸ್ತಿ ಚ–ಇದ್ದೇ ಇದೆ (ತತ್ರ–ಮುಕ್ತಿಯಲ್ಲಿ), ಯಸ್ಮಾತ್–ಯಾವ ಕಾರಣದಿಂದ, ಅದೃಷ್ಟಾಂತತೋಕ್ತಿತಃ – ದೃಷ್ಟಾಂತವಿಲ್ಲದೇ ಹೇಳುವುದಕ್ಕಿಂತ, ಸದೃಷ್ಟಾಂತಾ – ನಿದರ್ಶನಪೂರ್ವಕ ಹೇಳುವುದು, ಬಲೀಯಸೀ – ಪ್ರಬಲವಾದುದೋ, (ತತ್–ಆದ್ದರಿಂದ), ಭೇದೇನ–ಭೇದದಿಂದ (ಭಿನ್ನಭಾವದಿಂದ), ಅದರ್ಶನಾತ್ ಏವ – ತೋರುವುದಿಲ್ಲವಾದ್ದರಿಂದಲೇ, ಶ್ರುತೌ – ಶ್ರುತಿಯಲ್ಲಿ, ಏಕೀಭಾವವಾಕ್ – ಏಕೀಭಾವವೆಂಬ ಶಬ್ದವಿರುತ್ತದೆ (ಉಕ್ತದೃಷ್ಟಾಂತವು ಏಕೀಭಾವವೆಂಬುದರ ಅರ್ಥವನ್ನು ತಿಳಿಸಿಕೊಡುತ್ತದೆ).

**ಕಥಂ ಜೀವೇಶಭೇದೋ ನ ಯಂ ಮುಕ್ತೋಽಪಿ ನ ಮುಂಚತಿ ।**
**ದ್ವಾಸುಪರ್ಣೇತಿ ಸೈವಾಹ ಪುನಸ್ತದ್ಭೇದಮಂಜಸಾ ।**
**ತಸ್ಮಾದ್ವೇದಾಂತವಾಕ್ಯಾನಾಮಸ್ಮಿನ್ನರ್ಥೇ ಮಹಾನ್ ಭರಃ ॥೩೩೬॥**

ಜೀವೇಶಭೇದಃ–ಜೀವಬ್ರಹ್ಮರ ಭೇದವು, ಕಥಂ ನ–ಹೇಗೆ ಅಲ್ಲ? (ಇರುವುದಿಲ್ಲ); ಯಂ–ಯಾವುದನ್ನು (ಭೇದವನ್ನು), ಮುಕ್ತಃ ಅಪಿ–ಮುಕ್ತನೂ ಸಹ,

---

ವರ್ಣಭೇದ, ಮುಕ್ತಭೇದಗಳಿವೆ; ಈ ಭೇದಗಳು ಸ್ಪಷ್ಟವಾಗಿ ತೋರುವುದಿಲ್ಲ; ಸಂಸಾರಾವಸ್ಥೆಯಲ್ಲಿ ಈ ಭೇದಗಳು ಸುಸ್ಪಷ್ಟವಾಗಿ ಕಾಣುತ್ತವೆ; ಈ ಕಾರಣದಿಂದಲೇ ಏಕೀಭಾವವೆಂಬ ನುಡಿಯು ಶ್ರುತಿಯಲ್ಲಿದೆ; ಪ್ರಸಕ್ತ ಶರ ಲಕ್ಷ್ಯಗಳ ನಿದರ್ಶನವು (ಸಾದೃಶ್ಯವು) ಈ ಭೇದಗಳನ್ನು ಸ್ಪಷ್ಟಗೊಳಿಸುತ್ತದೆ; ದೃಷ್ಟಾಂತವಿಲ್ಲದೇ ಹೇಳುವುದಕ್ಕಿಂತ, ಸದೃಷ್ಟಾಂತ ನಿರೂಪಣೆಯು ಬಲಿಷ್ಠವಾದುದು (ನಿಶ್ಚಯವನ್ನು ಸಾಧಿಸಬಲ್ಲದು) (೩೩೫). ಜೀವೇಶಭೇದವು ಏಕಿಲ್ಲ (ಅವರು ಒಂದೇ ಏಕಾಗಬೇಕು?); ಯಾವ ಈ ಭೇದವನ್ನು ಮುಕ್ತನೂ ಪರಿತ್ಯಜಿಸಲಾರನೋ, ಅದನ್ನೇ ಅಥರ್ವಣೋಪನಿಷತ್ತು, 'ದ್ವಾಸುಪರ್ಣಾ' ವಾಕ್ಯದಿಂದ ಹೇಳಿ ಪುನಃ ಸದೃಷ್ಟಾಂತವಾಗಿ 'ಶರವತ್ತನ್ಮಯೋಭವೇತ್' ಎಂದೂ ಹೇಳಿತು;

ನ ಮುಂಚತಿ–ಬಿಡುವುದಿಲ್ಲವೋ (ಅದು ಹೇಗೆ ಇರುವುದಿಲ್ಲ); ಸಾ ಏವ–ಆ ಅಥರ್ವಣೋಪನಿಷತ್ತೇ ('ಶರವತ್ತನ್ಮಯೋ ಭವೇತ್'–ಎಂಬ ಶ್ರುತಿಯೇ), ಪುನಃ–ಮತ್ತೆ, ದ್ವಾಸುಪರ್ಣೇತಿ–'ದ್ವಾಸುಪರ್ಣಾ' ಎಂಬ ಅದೇ ಉಪನಿಷತ್ತು, ಆಹ – ಹೇಳಿತು; ತದ್ಭೇದಂ – ಅದೇ ಜ್ಞಾನವನ್ನು (ಭೇದ ಜ್ಞಾನವನ್ನು), ಅಂಜಸಾ–ಸ್ಪಷ್ಟವಾಗಿ (ಆಹ–ಹೇಳಿತು); ತಸ್ಮಾತ್–ಆದ್ದರಿಂದ, ವೇದಾಂತ ವಾಕ್ಯಾನಾಂ – ಉಪನಿಷದ್ವಾಕ್ಯಗಳಿಗೆ, ಅಸ್ಮಿನ್ ಅರ್ಥೇ – ಇದೇ ಅರ್ಥದಲ್ಲಿ (ಜೀವೇಶಭೇದ ಪ್ರತಿಪಾದನೆಯಲ್ಲಿ), ಮಹಾನ್ – ಅತಿಶಯವಾದ, ಭರಃ– ಆದರವು, (ಎಂದು ಸಿದ್ಧವಾಗುತ್ತದೆ).

**ತ್ವಮೇವಾಹಮಿತಿ ಪ್ರೋಕ್ತೋ ಭೃತ್ಯಸ್ತತ್ಪ್ರೇಮ ಭಾವಯೇತ್ ।**
**ಅತೋ ಮುಕ್ತೈಕ್ಯವಾಕ್ಯಂ ಚ ಮುಕ್ತಸ್ಯಾತ್ಯಾಪ್ತತಾ ಪರಂ ॥೩೩೭॥**

**ಮಮಾತ್ಮಾ ಭದ್ರಸೇನೋಯಮಿತ್ಯುಕ್ತಿರ್ದ್ವೇಷ್ಟಿ ಕಿಂ ದ್ವಯಂ ।**
**ಏಕೀಭೂತಾ ಇತಿ ಪ್ರೋಕ್ತೇ ಕಿಂ ಗವಾಮದ್ವಿತೀಯತಾ ॥ ೩೩೮ ॥**

ತ್ವಂ ಏವ ಅಹಂ–ನೀನು ನಾನೇ (ನಾನೇ ನೀನು), ಇತಿ ಪ್ರೋಕ್ತಃ– ಎಂದು (ರಾಜನಿಂದ) ಹೇಳಲ್ಪಟ್ಟ, ಭೃತ್ಯಃ–ಸೇವಕನು, ತತ್ಪ್ರೇಮ–ರಾಜನ ಪ್ರೇಮವನ್ನು (ರಾಜನಿಗೆ ತನ್ನಲ್ಲಿರುವ ಪ್ರೀತಿಯನ್ನು), ಭಾವಯೇತ್–ಪ್ರಕಾಶಿಸು ತ್ತಾನೆ; ಅತಃ–ಈ ಕಾರಣದಿಂದ, ಮುಕ್ತೈಕ್ಯವಾಕ್ಯಂ ಚ–ಮುಕ್ತನ ಏಕತ್ವ ವಾಕ್ಯವು, ಮುಕ್ತಸ್ಯ–ಮುಕ್ತನ, ಅತ್ಯಾಪ್ತತಾಪರಂ–(ಶ್ರೀಹರಿಗೆ ಅತಿಶಯವಾಗಿ) ಆಪ್ತನೆಂಬರ್ಥಮಾತ್ರವುಳ್ಳದ್ದಾಗುತ್ತದೆ; ಮಮಾತ್ಮಾ – ನನ್ನ ಸ್ವರೂಪನೇ (ಆತ್ಮನೇ), ಅಯಂ ಭದ್ರಸೇನಃ–ಈ ಭದ್ರಸೇನನು, ಇತ್ಯುಕ್ತಿಃ–ಎಂಬ ನುಡಿಯು,

---

ವೇದಾಂತ (ಉಪನಿಷತ್) ವಾಕ್ಯಗಳಿಗೆ ಜೀವೇಶ ಭೇದ ಪ್ರತಿಪಾದನೆ ಮಾಡುವುದರಲ್ಲಿ ಮಹಾ ಆದರವಿದೆ; (೩೩೬). 'ನೀನು ನಾನೇ' ಎಂದು ಹೇಳಿದರೆ ರಾಜನಿಗೆ ಭೃತ್ಯನಲ್ಲಿರುವ ಪ್ರೇಮವನ್ನು ತೋರಿಸುತ್ತದೆ ಹೀಗೆ ಮುಕ್ತರ ಐಕ್ಯವಾಕ್ಯವೂ, ಮುಕ್ತನಿಗೆ ಶ್ರೀಹರಿಗೆ ಪರಮ ಪ್ರಿಯನೆಂಬುದನ್ನು ತಿಳಿಸುತ್ತದೆ; ಈ ಭದ್ರಸೇನನು 'ನನ್ನ ಆತ್ಮವೇ ಆಗಿದ್ದಾನೆ' ಎಂದು ಹೇಳುವುದು, ನಾನು ಮತ್ತು ಭದ್ರಸೇನರೆಂಬ ಎರಡು ವ್ಯಕ್ತಿಗಳ ಇರುವಿಕೆಯನ್ನು ವಿರೋಧಿಸುವು ದಿಲ್ಲವಷ್ಟೆ; ಗೋವುಗಳು ಏಕಭೂತವಾದವೆಂದರೆ, ಒಂದೇ ಆಯಿತೆಂದು

*

ದ್ವಯಂ–ಇಬ್ಬರನ್ನು (ಎರಡು ವ್ಯಕ್ತಿಗಳ ಇರುವಿಕೆಯನ್ನು), ದ್ವೇಷ್ಟಿ ಕಿಂ–ವಿರೋಧಿಸುವುದೇನು ? (ಇಲ್ಲ) (ಆತ್ಮೀಯಭಾವವೆಂದರೆ ಅತಿಶಯ ಪ್ರೇಮವೆಂದೇ ಅರ್ಥವಲ್ಲವೇ ?); ಏಕೀಭೂತಾಃ ಇತಿಪ್ರೋಕ್ತೇ–ಏಕೀಭಾವವನ್ನು ಹೊಂದಿದವು, ಎಂದು ಹೇಳಿದರೆ, ಗಾವಃ – ಗೋವುಗಳು, ಅದ್ವಿತೀಯತಾ ಕಿಂ – ಒಂದೇ ಆದುವೆಂದರ್ಥವೇ ?

**ದ್ವೇಷಾಂಧಾಯ ವನೇ ವಾಸೋ ಯೋಷಾತ್ಯಾಗೋಽಪಿ ರೋಚತೇ ।**
**ನ ಚೇದ್ದ್ವಿತೀಯಶೂನ್ಯತ್ವಮೋಕ್ಷಾಯ ಯತತೇ ಕಥಂ ॥ ೩೩೯ ॥**

ಭಗವಂತನ ದ್ವೇಷದಿಂದಲೇ ಮಾಯಾವಾದಿಯ ಶ್ರುತ್ಯರ್ಥದ ಈ ರೀತಿಯ ಚೌರ್ಯವು ಸಿದ್ಧವೆಂಬಲ್ಲಿ ದೃಷ್ಟಾಂತವನ್ನು ತೋರಿಸುತ್ತಾರೆ :—

ದ್ವೇಷಾಂಧಾಯ–(ಪತ್ನಿಯಲ್ಲಿ) ದ್ವೇಷದಿಂದ ಕುರುಡನಾದವನಿಗೆ, ವನೇ–ಅರಣ್ಯದಲ್ಲಿ, ವಾಸಃ–ವಾಸವೂ, ಯೋಷಾತ್ಯಾಗಃ ಅಪಿ–ಭಾರ್ಯಾತ್ಯಾಗವೂ (ಗುಹಾವಾಸವೂ), ರೋಚತೇ–ಇಷ್ಟವಾಗುತ್ತದೆ ; ನ ಚೇತ್–ಹಾಗಲ್ಲದಿದ್ದರೆ (ದ್ವೇಷವಿಲ್ಲದಿದ್ದರೆ), ದ್ವಿತೀಯಶೂನ್ಯತ್ವಮೋಕ್ಷಾಯ – ಅದ್ವಿತೀಯತ್ವವೆಂಬ (ಏಕಾಕಿತ್ವರೂಪದ) ಮೋಕ್ಷಕ್ಕಾಗಿ, ಕಥಂ–ಏಕೆ, ಯತತೇ–ಯತ್ನಿಸುತ್ತಾನೆ (ವೇದಾರ್ಥಗಳನ್ನು ಹೀಗೆ ವಿರುದ್ಧವಾಗಿ ಗ್ರಹಿಸುವುದೂ ಶ್ರವಣರೂಪದ ಯತ್ನವೇ ಅಲ್ಲವೇ ?).

**ಚೋರಸ್ಯಾಭಾಷಣಂ ಲಿಂಗಮಸ್ಪರ್ಶನಮದರ್ಶನಂ ।**
**ಕಥಂ ಮೋಕ್ಷಮಶಿಕ್ಷಂತ ನ ಚೇದೇತಾದೃಶೀಂ ದಶಾಂ ॥ ೩೪೦ ॥**

ಚೋರಸ್ಯ – ಕಳ್ಳನಿಗೆ, ಅಭಾಷಣಂ–(ಅನ್ಯರೊಡನೆ) ಮಾತನಾಡದಿರುವುದು, ಅಸ್ಪರ್ಶನಂ ಅದರ್ಶನಂ–ಸ್ಪರ್ಶನದರ್ಶನಾದಿಗಳಿಲ್ಲದಿರುವುದು, ಲಿಂಗಂ–

---

ಅರ್ಥವಲ್ಲ–ಗೋಷ್ಠದಲ್ಲಿ ಒಂದು ಸ್ಥಲದಲ್ಲಿ ಸೇರಿದವು ಇತ್ಯಾದಿಯಾಗಿ ಅರ್ಥವಾಗುತ್ತದೆ (೩೩೭–೩೩೮). ದ್ವೇಷದಿಂದ ಅಂಧನಾದ ಪುರುಷನಿಗೆ, ಭಾರ್ಯಾತ್ಯಾಗವೂ, ವನವಾಸವೂ ರುಚಿಸುವಂತೆ, ಭಗವದ್ದ್ವೇಷದಿಂದ ಮುಕ್ತನು ದ್ವಿತೀಯ ಶೂನ್ಯವೆಂಬ ಮೋಕ್ಷವನ್ನು ಶ್ರುತಿಯು ಹೇಳುತ್ತದೆಂಬ ದುರರ್ಥವನ್ನು ತಿಳಿಯುತ್ತಾನೆ ; ಹಾಗೆ ದ್ವೇಷಭಾವನೆಯಿಲ್ಲದಿದ್ದರೆ, ದ್ವಿತೀಯ ಶೂನ್ಯ ಮೋಕ್ಷಕ್ಕಾಗಿ ಹೇಗೆ ಯತ್ನಿಸುವನು ? (೩೩೯). ಶ್ರುತ್ಯರ್ಥಗಳ ತಸ್ಕರನಾದ

ಲಕ್ಷಣವು (ತಸ್ಕರನು, ಅನ್ಯರೊಡನೆ ಭಾಷಣ, ಸ್ಪರ್ಶನ, ದರ್ಶನಗಳನ್ನು ತಪ್ಪಿಸಲು ಯತ್ನಪೂರ್ವಕವಾಗಿ ಕತ್ತಲಲ್ಲಿ ಅಡಗಿರುವಂತೆ), ನ ಚೇತ್–ಹಾಗಲ್ಲದಿದ್ದರೆ (ಮಾಯಾವಾದಿಯು, ಶ್ರುತ್ಯರ್ಥ ಚೋರನಲ್ಲದಿದ್ದರೆ), ಮೋಕ್ಷಂ–ಮುಕ್ತಿಯನ್ನು, ಏತಾದೃಶೀಂ–ಈ ಪ್ರಕಾರದ, ದಶಾಂ–ಸ್ಥಿತಿಯನ್ನಾಗಿ (ಅದ್ವೈತದಶಾವನ್ನಾಗಿ), ಕಥಂ-ಹೇಗೆ (ಬೇರಾವ ಕಾರಣದಿಂದ), ಅಶಿಕ್ಷಂತ-ಹೇಳುವನು? (ಭಗವದ್ದ್ವೇಷವೇ ಕಾರಣವೆಂಬುದು ಸ್ಪಷ್ಟವಾಗುತ್ತದೆ).

**ಪೂರ್ವೋತ್ತರವಿರುದ್ಧೋಕ್ತಿಂ ಮತ್ತೋ ವಕ್ತಿ ನ ಜಾತ್ವಪಿ ।**
**ಕಿಮೇಕಾಕೀ ನರಮತ ಇತ್ಯಾದ್ಯುಕ್ತೀಃ ಸ ನಾತ್ಯಗಾತ್ ॥ ೩೪೧ ॥**

ಪೂರ್ವೋತ್ತರ ವಿರುದ್ಧೋಕ್ತಿಂ–ಹಿಂದೆ ಮುಂದೆ ಪರಸ್ಪರ ವಿರುದ್ಧವಾದ ನುಡಿಯನ್ನು, ಮತ್ತಃ–ಹುಚ್ಚನು, ಜಾತ್ವಪಿ–ಎಂದೂ, ನ ವಕ್ತಿ–ಆಡುವುದಿಲ್ಲ (ಅದ್ವಿತೀಯತ್ವವೇ ಮೋಕ್ಷವೆಂಬ ವಾದಿಯು, ಹುಚ್ಚನಿಗಿಂತ ಅಧಿಕ ಭ್ರಾಂತನು); ಕಿಂ ಏಕಾಕೀನರಮತಃ – 'ಕಿಂ ಏಕಾಕೀನರಮತಃ' ಎಂಬ, ಇತ್ಯಾದ್ಯುಕ್ತೀಃ – ಮೊದಲಾದ ಸ್ಪಷ್ಟ ಶ್ರುತಿವಾಕ್ಯಗಳನ್ನು, ಸಃ–(ಮುಕ್ತಿಯಲ್ಲಿ ಅದ್ವಿತೀಯತ್ವವನ್ನು ಹೇಳುವ) ಆ ವಾದಿಯು, ನ ಅತ್ಯಗಾತ್–(ಏಕಾಕಿತ್ವವನ್ನು ಅಂಗೀಕರಿಸಿ) ಅತಿಕ್ರಮಿಸುವುದಿಲ್ಲವೇ ? (ಮಹಾ ಉನ್ಮತ್ತನೆಂದು ಭಾವ).

**ಜ್ಯೋತಿಃ ಪ್ರಾಪ್ಯ ಸ ಪರ್ಯೇತಿ ಸ್ತ್ರೀ ಜ್ಞಾತ್ಯಜ್ಞಾತಿಸಂಯುತಃ ।**
**ಸಹಾಶ್ನುತೇ ಸರ್ವಕಾಮಾನಿತ್ಯಾದ್ಯಾ ಮೌಕ್ತಿಕೋಕ್ತಯಃ ॥ ೩೪೨ ॥**

ಹಿಂದಿನ ಶ್ಲೋಕದಲ್ಲಿ 'ಇತ್ಯಾದ್ಯುಕ್ತೀಃ' ಎಂಬಲ್ಲಿ ಹೇಳಿದ, ಆದಿಪದದಿಂದ ಸೂಚಿತವಾದ ಶ್ರುತಿಗಳನ್ನು ಜ್ಞಾಪಿಸುತ್ತಾರೆ :—

---

ಮಾಯಾವಾದಿಯು, ಅನ್ಯರ ದರ್ಶನ, ಸಂಭಾಷಣ, ಸ್ಪರ್ಶನಾದಿಗಳನ್ನು ಧಿಕ್ಕರಿಸಿ ಕತ್ತಲೆಯಲ್ಲಿ ಅಡಗುವ ಕಳ್ಳನಂತೆ, ಮೋಕ್ಷವನ್ನು ಅದ್ವೈತದಶಾವನ್ನಾಗಿ, ಹೇಳುತ್ತಾನೆ; ಹಾಗಲ್ಲದಿದ್ದರೆ ಹೀಗೆಂದೂ ಹೇಳುತ್ತಿರಲಿಲ್ಲ (೩೪೦). ಹಿಂದೆ ಮುಂದೆ ವಿರುದ್ಧವಾದ ನುಡಿಯನ್ನು ಮತ್ತನೂ ಎಂದೂ ಆಡುವುದಿಲ್ಲ; 'ಕಿಂ ಏಕಾಕೀ ನರಂ ಅತಃ' ಇತ್ಯಾದಿ ಶ್ರುತಿಗಳನ್ನು ದುರ್ಲಕ್ಷಿಸಿ ಮುಕ್ತಿಗೆ ಅದ್ವಿತೀಯತ್ವ ವನ್ನು–ಏಕಾಕಿತ್ವವನ್ನು ಹೇಳುವವನು, ಮಹೋನ್ಮತ್ತನೇ ಸರಿ (೩೪೧). ಮುಕ್ತ್ಯವಸ್ಥೆಯಲ್ಲಿ ಏಕಾಕಿತ್ವವಿಲ್ಲೆಂಬುದನ್ನು ಅನ್ಯ ಬಹುಶ್ರುತಿಗಳೂ ಹೇಳುತ್ತವೆ ;

ಜ್ಯೋತಿಃ–ಪರಂಜ್ಯೋತಿಯನ್ನು, ಪ್ರಾಪ್ಯ–ಹೊಂದಿ, ಸಃ–ಮುಕ್ತನು, ಸ್ತ್ರೀಜ್ಞಾತ್ಯಜ್ಞಾತಿ ಸಂಯುತಃ–('ಸ್ತ್ರೀಭಿರ್ವಾ ಯಾನೈರ್ವಾ' ಇತ್ಯಾದಿಯಂತೆ), ಸ್ತ್ರೀಯರು, ಜ್ಞಾತಿ, ಅಜ್ಞಾತಿಗಳಿಂದ ಸಹಿತನಾಗಿ, ಪರ್ಯೇತಿ–ಸುತ್ತುತ್ತಾನೆ (ವಿಹರಿಸುತ್ತಾನೆ); ಸಹಾಶ್ನುತೇ–(ಬ್ರಹ್ಮದೇವನಿಂದ ಸಹಿತನಾಗಿ) ಅನ್ಯಮುಕ್ತರೊಡನೆ, ಸರ್ವಕಾಮಾನ್–ಸಕಲ (ಇಚ್ಛಿತ) ಭೋಗಗಳನ್ನು, ಇತ್ಯಾದ್ಯಾಃ–(ಭೋಗಿಸುವನೆಂದು ಹೇಳುವ) ಮೊದಲಾದ ಶ್ರುತಿವಾಕ್ಯಗಳು, ಮಾಕ್ತಿ-ಕೋಕ್ತಯಃ–ಮುಕ್ತರ ವಿಷಯವಾದವು (ಇರುತ್ತವೆ).

**ರಾಜನ್ನಿಗಡಬದ್ಧಸ್ಯ ತನ್ಮುಕ್ತಸ್ಯ ಚ ರಾಡ್ಭವಾನ್ ।**
**ಯಥಾಬದ್ಧಗತಿಃ ಕೃಷ್ಣೋ ಮುಕ್ತಾನಾಂ ಪರಮಾ ಗತಿಃ ॥ ೩೪೩ ॥**

**ಸ್ವಾಧೀನಂ ಸ್ವಸಮಂ ಕರ್ತುಂ ನೋತ್ಸಹಸ್ವ ಕದಾಚನ ।**
**ಸಾರೂಪ್ಯದೋಽಪಿ ಕಿಂ ಶ್ರೀಶೋ ದತ್ತೇ ಶ್ರೀವತ್ಸಕೌಸ್ತುಭೌ ॥೩೪೪॥**

ನೀತಿವಿರುದ್ಧವಾದ್ದರಿಂದಲೂ, ಭಗವಂತನು, ಮುಕ್ತರಿಗೆ ತನ್ನಿಂದ ಐಕ್ಯವನ್ನು ಕೊಡುವುದಿಲ್ಲ; ಭಕ್ತರಾದ ಮುಕ್ತರೂ ಅದನ್ನು (ಐಕ್ಯವನ್ನು) ಆಶಿಸುವುದಿಲ್ಲ, ಎನ್ನುತ್ತಾರೆ:—

ರಾಜನ್–ಹೇ ರಾಜನೇ! ನಿಗಡಬದ್ಧಸ್ಯ–ಶೃಂಖಲೆಯಿಂದ ಬದ್ಧರಾದವರ, ಚ–ಮತ್ತು, ತನ್ಮುಕ್ತಸ್ಯ–ಬಂಧದಿಂದ ಮುಕ್ತರಾದವರ, ರಾಟ್–ರಾಜನು, ಭವಾನ್ – ನೀನು, ಯಥಾ – ಹೇಗೋ (ತಥಾ–ಹಾಗೆ), ಯಥಾ ಬದ್ಧಗತಿಃ–ಬದ್ಧರಿಗೆ ಗತಿಯಾದಂತೆ (ಸಂಸಾರಿಗಳಿಗೆ ಆಶ್ರಯನಾದಂತೆ), ಕೃಷ್ಣಃ–ಶ್ರೀಕೃಷ್ಣನು,

---

'ಸ ತತ್ರ ಪರ್ಯೇತಿ ಸ್ತ್ರೀಭಿರ್ಯಾನೈಃ' ಇತ್ಯಾದಿ ಶ್ರುತಿಯು, ಮುಕ್ತನು, ಸ್ತ್ರೀಯರಿಂದಲೂ, ಜ್ಞಾತಿ ಅಜ್ಞಾತಿಗಳಿಂದಲೂ ಸಹಿತನಾಗಿ ಯಾನಗಳಲ್ಲಿ ಸಂಚರಿಸುತ್ತ ಸರ್ವಭೋಗವುಳ್ಳವನಾಗಿ ವಿಹರಿಸುತ್ತಾನೆ, ಎಂದು ಹೇಳುತ್ತದೆ; ಈ ಶ್ರುತಿಗಳಲ್ಲಿ ಮುಕ್ತರ ವಿಷಯವೇ ಪ್ರತಿಪಾದ್ಯವಾಗಿದೆ (೩೪೨). ಶೃಂಖಲೆಯಲ್ಲಿರುವ ಬಂದಿಗಳಿಗೂ, ಮುಕ್ತರಾದ ಪ್ರಜೆಗಳಿಗೂ ಸ್ವಾಮಿಯಾದ ರಾಜನಂತೆ, ಸಂಸಾರದಲ್ಲಿ ಬಂಧಿತರಾದ ಜೀವರಿಗೂ ಮುಕ್ತರಾದ ಜೀವರಿಗೂ ಭಗವಂತನು ಮಹಾಸ್ವಾಮಿಯಾಗಿದ್ದಾನೆ; ರಾಜನು ತನ್ನ ಅಧೀನರಾದ ಪ್ರಜೆಗಳನ್ನು ಎಂದೂ

ಮುಕ್ತಾನಾಂ – ಮುಕ್ತನಿಗೆ, ಪರಮಾ ಗತಿಃ – ಅತ್ಯುತ್ತಮಗತಿಯು (ಪರಮ ಪ್ರಾಪ್ಯನೂ–ಆಶ್ರಯನೂ ಆಗಿರುವನು);[1] ಸ್ವಾಧೀನಂ – ನಿನ್ನ ಅಧೀನನನ್ನು, ಸ್ವಸಮಂ–ನಿನ್ನ ಸಮನನ್ನಾಗಿ, ಕರ್ತುಂ–ಮಾಡಲಿಕ್ಕೆ, ಕದಾಚನ–ಎಂದೂ, ನ ಉತ್ಸಹಸ್ವ–(ನೀನು) ಉತ್ಸಾಹಪಡುವುದಿಲ್ಲ; ಶ್ರೀಶಃ – ಲಕ್ಷ್ಮೀಪತಿಯು, ಸಾರೂಪ್ಯದಃ ಅಪಿ–ಸಾರೂಪ್ಯಮುಕ್ತಿಯನ್ನು ಕೊಡುವವನಾದರೂ, ಶ್ರೀವತ್ಸ-ಕೌಸ್ತುಭೌ–(ತನ್ನ) ಶ್ರೀವತ್ಸಕೌಸ್ತುಭಗಳನ್ನು, ದತ್ತೇ ಕಿಂ–ಕೊಡುವನೇನು? (ಎಂದೂ ಕೊಡುವುದಿಲ್ಲ).

**ಸದಾ ಸೇವ್ಯಪಿ ನಾಕಾಂಕ್ಷೇದಂಗನಾಲಿಂಗನಂ ಪ್ರಭೋಃ ।**
**ಇಚ್ಛಂತ್ಯಚ್ಛಹೃದೋ ಮುಕ್ತಾವಪಿ ನೈಕ್ಯಂ ತದೀಶಿತುಃ ॥ ೩೪೫ ॥**

ಸದಾ–ಸರ್ವದಾ, ಸೇವ್ಯಪಿ–ಸೇವ್ಯನೇ ಆದರೂ, ಪ್ರಭೋಃ–ಪ್ರಭುವಿನ (ತನ್ನ ಸ್ವಾಮಿಯ), ಅಂಗನಾಲಿಂಗನಂ–ಭಾರ್ಯೆಳ ಅಂಗಸಂಗವನ್ನು (ಸ್ವಗುರು ತಲ್ಪಗಮನದ ಮಹಾಪಾತಕವಾಗುವುದರಿಂದ), ನ ಆಕಾಂಕ್ಷೇತ್ – ಇಚ್ಛಿಸ ಕೂಡದು (ಆದ್ದರಿಂದಲೇ); ಅಚ್ಛಹೃದಃ – ಪವಿತ್ರಮನಸ್ಕರಾದ ಮುಕ್ತರು, ಮುಕ್ತೌ ಅಪಿ – ಮುಕ್ತಿಯಲ್ಲಿಯೂ, ಈಶಿತುಃ–(ತಮ್ಮ) ಮಹಾಸ್ವಾಮಿಯ, ಐಕ್ಯಂ–ಐಕ್ಯವನ್ನು ನ ಇಚ್ಛಂತಿ–ಇಚ್ಛಿಸುವುದಿಲ್ಲ.

---

ತನ್ನ ಸಮರನ್ನಾಗಿ ಮಾಡಿಕೊಳ್ಳಲು ಉತ್ಸಾಹಿಸುವುದಿಲ್ಲ; ಹಾಗೆಯೇ ಭಗವಂತನು ಮುಕ್ತರಿಗೆ ಸಾರೂಪ್ಯ ಮುಕ್ತಿಯನ್ನು ಪ್ರದಾನ ಮಾಡಿದರೂ, ಲಕ್ಷ್ಮೀಪತಿಯಾದ ತಾನು, ತನ್ನ ಶ್ರೀವತ್ಸ ಕೌಸ್ತುಭಗಳನ್ನು ಕೊಡುವನೇ? (ಇಲ್ಲ) (೩೪೩–೩೪೪). ಪರಮ ಭಕ್ತರಾದ ಮುಕ್ತರು (ಜೀವ ಚೇತನರು) ನಿತ್ಯದಲ್ಲಿ ಹರಿಸೇವಾಪರರೇ ಆಗಿದ್ದರೂ, ಪ್ರಭುವಿನ ಸ್ತ್ರೀಯ ಸಂಗವನ್ನು ಎಂದೂ ಇಚ್ಛಿಸುವುದಿಲ್ಲ; ಅವರು ಪವಿತ್ರ ಹೃದಯರು; ಮುಕ್ತಿಯಲ್ಲಿ ಸಹ ತಮ್ಮ

1 'ಮುಕ್ತಾನಾಂ ಪರಮಾ ಗತಿಃ' ಎಂಬುದು ವಿಷ್ಣುಸಹಸ್ರನಾಮಗಳಲ್ಲಿರುವ ಭಗವಂತನ ಪುಣ್ಯನಾಮವು–ದೃಷ್ಟಾಂತೋಕ್ತವು ಪರಮ ಪ್ರಮಾಣವೆಂಬಲ್ಲಿ ಇದೇ ಶಬ್ದ ದಿಂದಲೇ ಭಗವಂತನು ಉದ್ದಿಷ್ಟನಾಗಿರುವನು.

**ಹೃಷ್ಟೋಽಪಿ ರಾಜಾ ನ ಸ್ವೀಯಾಂ ಜಾಯಾಂ ವಿಶತಿ ಕಸ್ಯಚಿತ್ ।**
**ಪ್ರಪನ್ನಾಯ ಪ್ರಸನ್ನೋಽಪಿ ಸ್ವಾತ್ಮೈಕ್ಯಂ ನ ದಿಶೇದ್ಧರಿಃ ॥ ೩೪೬ ॥**

ಹೃಷ್ಟಃ ಅಪಿ–ಸಂತುಷ್ಟನಾದರೂ, ರಾಜಾ–ರಾಜನು, ಸ್ವೀಯಾಂ–ತನ್ನ, ಜಾಯಾಂ – ಭಾರ್ಯೆಗಳನ್ನು, ಕಸ್ಯಚಿತ್ – ಬೇರೆ ಯಾರೊಬ್ಬರಿಗೆ, (ಯಥಾ) ನ ದಿಶತಿ – ಕೊಡುವುದಿಲ್ಲವೋ (ತಥಾ – ಹಾಗೆಯೇ), ಹರಿಃ – ಶ್ರೀಹರಿಯೂ, ಪ್ರಪನ್ನಾಯ–ಶರಣಾಗತನಿಗೆ, ಪ್ರಸನ್ನಃ ಅಪಿ–ಪ್ರಸನ್ನನಾದರೂ, ಸ್ವಾತ್ಮೈಕ್ಯಂ–ತನ್ನೊಂದಿಗೆ ಐಕ್ಯವನ್ನು, ನ ದಿಶೇತ್–ಕೊಡುವುದಿಲ್ಲ.

**ನ ರಾಜವಾಹನಂ ಕಾಂಕ್ಷೇನ್ನ ತತ್ಸಿಂಹಾಸನಂ ಭಟಃ ।**
**ಗರುಡಾರೂಢತಾ ಶೇಷಶಾಯಿತಾ ತತ್ಕದಾಪಿ ನ ॥ ೩೪೭ ॥**

ತತ್ (ತಸ್ಮಾತ್)–ಆದ್ದರಿಂದಲೇ, ಭಟಃ–ಭೃತ್ಯನು, ರಾಜವಾಹನಂ–ರಾಜವಾಹನವನ್ನು, ನ ಕಾಂಕ್ಷೇತ್ – ಅಪೇಕ್ಷಿಸಕೂಡದು ; ತತ್ಸಿಂಹಾಸನಂ–ಆತನ (ರಾಜನ) ಸಿಂಹಾಸನವನ್ನು, ನ–ಇಚ್ಛಿಸಬಾರದು ; ಕದಾಪಿ–ಎಂದಿಗೂ, ಗರುಡಾರೂಢತಾ–ಗರುಡನನ್ನೇರುವುದನ್ನು, ಶೇಷಶಾಯಿತಾ–ಶೇಷನಲ್ಲಿ ಶಯನವನ್ನು, ನ–ಆಶಿಸಲೇ ಕೂಡದು.

**ಸುರೇಶ್ವರೌ ಹರೇಃ ಸೇವಾಪರೌ ಸರ್ವತ್ರ ಸರ್ವದಾ ।**
**ನರೋಽಲ್ಪಕಃ ಕಥಂ ಮುಕ್ತೌ ತೌ ಮುಕ್ತಾವಾರುರುಕ್ಷತಿ ॥ ೩೪೮ ॥**

ಹರೇಃ–ಶ್ರೀಹರಿಯು, ಸರ್ವತ್ರ–ಎಲ್ಲ ದೇಶದಲ್ಲಿ, ಸರ್ವದಾ–ಎಲ್ಲಕಾಲದಲ್ಲಿ, ಸೇವಾಪರೌ–ಸೇವೆಯಲ್ಲಿ ಆಸಕ್ತರಾದ, ಸುರೇಶ್ವರೌ–ದೇವಶ್ರೇಷ್ಠರು ; ಅಲ್ಪಕಃ

---

ಸ್ವಾಮಿಯ ಐಕ್ಯವನ್ನು ಎಂದೂ ಆಶಿಸುವುದಿಲ್ಲ (೩೪೫). ಭೃತ್ಯನ ವಿಷಯದಲ್ಲಿ ಪರಮ ಪ್ರೀತನಾದ ರಾಜನು ಯಾವನೊಬ್ಬನಿಗೂ ಸ್ವಸ್ತ್ರೀಯನ್ನು ಕೊಡುವುದುಂಟೇ ? ಹೀಗೆಯೇ ಜೀವನ ಮೇಲೆ ಅತ್ಯಂತ ಪ್ರಸನ್ನನಾದರೂ, ಶ್ರೀಹರಿಯು ಸ್ವಾತ್ಮೈಕ್ಯವನ್ನು (ತನ್ನಿಂದ ಐಕ್ಯವನ್ನು) ಕೊಡುವುದಿಲ್ಲ (೩೪೬). ರಾಜಭೃತ್ಯನಾದ ಸೈನಿಕನು, ರಾಜ ವಾಹನವನ್ನಾಗಲೀ, ರಾಜ ಸಿಂಹಾಸನವನ್ನಾಗಲಿ, ಇಚ್ಛಿಸಕೂಡದು–ಅದಕ್ಕಿಂತ ಮಹಾಪರಾಧವಿಲ್ಲ ; ಯೋಗ್ಯ ಶಿಕ್ಷೆಯನ್ನು (ಶಿರಚ್ಛೇದಾದಿ ರೂಪದ ಶಿಕ್ಷೆಯನ್ನು) ಹೊಂದುವನು ; ಹೀಗೆಯೇ ಭಕ್ತನು ಎಂದೂ ಗರುಡವಾಹನವನ್ನು, ಶೇಷಶಾಯಿತ್ವವನ್ನು, ಇಚ್ಛಿಸಕೂಡದು (೩೪೭). ಗರುಡ ಶೇಷರಿಬ್ಬರೂ ಶ್ರೀಹರಿಯನ್ನು ಸರ್ವತ್ರ ಸರ್ವದಾ ಸೇವಿಸುವುದರಲ್ಲಿಯೇ

ನರಃ–ಅಲ್ಪನಾದ (ತುಚ್ಛನಾದ) ನರನು, ತೌ–ಅವರನ್ನು (ಶೇಷಗರುಡರನ್ನು), ಮುಕ್ತೌ-ಅವರನ್ನು (ಮುಕ್ತಶೇಷಗರುಡರೂ ಶ್ರೀಹರಿಸೇವೆಯಲ್ಲಿಯೇ ಇರುತ್ತಿರಲು) ಕಥಂ – ಹೇಗೆ, ಮುಕ್ತೌ – ಮುಕ್ತಿದಶಾದಲ್ಲಿ, ಆರುರುಕ್ಷತಿ – ಏರುತ್ತಾನೆ (ಉಪಯೋಗಿಸುವ ಇಚ್ಛೆಯುಳ್ಳವನಾಗುತ್ತಾನೆ?).

**ನ ಯತ್ರ ಮಾಯಾ ಕಿಮುತಾಪರ ಇತ್ಯಾಖಿಲೇಶಿತುಃ ।**
**ಪುರೇ ಕಾಮಕ್ರೋಧಪೂರ್ವಕಾರ್ಯಸ್ಯಾಭಾವಮಂಜಸಾ ॥೩೪೯॥**
**ಕಿಮುತೇತಿ ವದನ್ಯೋಗೀ ಮಾಯಾಽಭಾವಾಖ್ಯಹೇತುನಾ ।**
**ಕಾರಣಾಭಾವರೂಪೇಣ ಸಾಧಯಾಮಾಸ ಯೌಕ್ತಿಕಃ ॥ ೩೫೦ ॥**

ಈಗ ವೈಕುಂಠಾದಿಲೋಕವು, ಲಕ್ಷ್ಮ್ಯಾತ್ಮಕವೆಂದು, ಭಾಗವತ ಮತ್ತು ಪಂಚರಾತ್ರಗಳ ವಾಕ್ಯಗಳಿಂದ ಸಾಧಿಸುತ್ತಾರೆ :—

ಯತ್ರ–ಎಲ್ಲಿ (ವೈಕುಂಠಾದಿ ಮುಕ್ತಲೋಕಗಳಲ್ಲಿ), ಮಾಯಾ–ಜಡ ಪ್ರಕೃತಿಯು (ಪಂಚಭೂತಗಳು), ನ – ಇರುವುದಿಲ್ಲವೋ, ಅಪರೇ – ತಜ್ಜನ್ಯ (ಪ್ರಾಕೃತ) ತತ್ವಗಳು, ಕಿಮುತ–ಇಲ್ಲವೆಂದು ಹೇಳಲೇನು?, ಅಖಿಲೇಶಿತುಃ–ಸರ್ವಸ್ವಾಮಿಯಾದ ಶ್ರೀಹರಿಯ, ಪುರೇ–ಪುರದಲ್ಲಿ (ಶ್ರೀಹರಿಪುರದಲ್ಲಿ–ವೈಕುಂಠಾದಿ ಗಳಲ್ಲಿ), ಕಾಮಕ್ರೋಧಪೂರ್ವಕಾರ್ಯಸ್ಯ–ಕಾಮಕ್ರೋಧಾದಿ ಪ್ರಕೃತಿಕಾರ್ಯ ಗಳ, ಅಭಾವಂ–ಅಭಾವವನ್ನು, ಅಂಜಸಾ–ಸ್ಪಷ್ಟವಾಗಿ, ಯೋಗೀ–ಶ್ರೀಶುಕರು, ಕಿಮುತ ಇತಿ ವದನ್–ಕಿಮುತ ಎಂದು ಹೇಳಿ, ಮಾಯಾಭಾವಾಖ್ಯಹೇತುನಾ–ಮಾಯಾಭಾವವೆಂಬ ಹೇತುವಿನಿಂದ, ಕಾರಣಭಾವರೂಪೇಣ–ಕಾರಣವಿಲ್ಲದೇ

---

ಆಸಕ್ತರಾಗಿ ಸುಖಿಸುವರು; ದೇವ ಶ್ರೇಷ್ಠರು; ಮಾನವನು ಅಲ್ಪನು–ಕ್ಷುದ್ರ ಚೇತನನು; ಇವನು ಮುಕ್ತಿಯಲ್ಲಿ ಮುಕ್ತ ಗರುಡ ಶೇಷರನ್ನು ಏರಲು ಹೇಗೆ ಇಚ್ಛಿಸುವನು? (ಎಂದಿಗೂ ಅಂತಹ ದುರಿಚ್ಛೆಯನ್ನು ಹೊಂದುವುದಿಲ್ಲ) (೩೪೮). 'ನ ಯತ್ರ ಮಾಯಾ ಕಿಮುತಾಪರೇ' ಇತ್ಯಾದಿ ಭಾಗವತ ಶ್ಲೋಕದಲ್ಲಿ, ವೈಕುಂಠಾದಿ ಮುಕ್ತ ಲೋಕದಲ್ಲಿ ಬಂಧಕ ಪ್ರಕೃತಿಯೇ ಇಲ್ಲವೆಂದೂ, ಪ್ರಾಕೃತವಾದ ಪ್ರಕೃತಿ ಜನ್ಯವಾದ) ಕಾಮ ಕ್ರೋಧಾದಿ ಕಾರ್ಯಗಳು ಇಲ್ಲವೆಂದೂ ಸ್ಪಷ್ಟವಾಗಿ ಹೇಳಿರುವರು; ಪರಮ ಸ್ವಾಮಿಯಾದ ಶ್ರೀಹರಿಪುರ ದಲ್ಲಿ ಇವುಗಳಿಗೆಲ್ಲಿ ಅವಕಾಶವಿದೆ? ಜ್ಞಾನಿಗಳಾದ ಶ್ರೀಶುಕರು, 'ಕಿಮುತ'

ಕಾರ್ಯವಿಲ್ಲವೆಂದು ಸಾಧಿಸುವ ಹೇತುವಿನಿಂದ, ಯೌಕ್ತಿಕಃ–ಯುಕ್ತಿನಿಪುಣರಾದ ತಾವು, ಸಾಧಯಾಮಾಸ–ಸಾಧಿಸಿರುವರು.

**ಈಷನ್ಮಾಯಾವಶೇಷಂ ಚ ದಾಷಸೇಮುಂ ನು ತೇ ಮುನಿಃ ।**
**ಸಿದ್ಧೇಶ್ವರಸ್ಯ ಕಿಂ ಸ್ವೋಕ್ತಹೇತ್ವಸಿದ್ಧಿರ್ಮನಃ ಪ್ರಿಯಾ ।**
**ಚಂಡಾಲಾಂಗುಲಿಸಂಗೇಽಪಿ ಚಂಡಾಲಸ್ಪರ್ಶ ಏವ ಹಿ ॥ ೩೫೧ ॥**

ತೇ ಮುನಿಃ – ನಿಮ್ಮ ಶುಕರು, ಈಷನ್ಮಾಯಾವಶೇಷಂ ಚ – ಅಲ್ಪ ಮಾಯೆಯ ಇರುವಿಕೆಯನ್ನು, ಇಮುಂ ದಾಷಸೇ ನು–ಮಾಯೆಯ ಅಸ್ತಿತ್ವವೆಂದು ಅಂಗೀಕರಿಸುವನೇನು ? ಸಿದ್ಧೇಶ್ವರಸ್ಯ – ಸಿದ್ಧನಾದ (ಪ್ರಸನ್ನನಾದ) ಈಶ್ವರನಿಗೆ, ಮನಃಪ್ರಿಯಾ–ಮನಸ್ಸಂತೋಷವೆಂಬ, ಸ್ವೋಕ್ತಹೇತ್ವಸಿದ್ಧಿಃ ಕಿಂ–ಕಾರ್ಯದ ಕಾರಣವೆಂದು ಹೇಳಲಾದ ಹೇತುವಿನ ಅಸಿದ್ಧಿಯೇನು ? (ಸಂತುಷ್ಟನಾದ ಈಶ್ವರ ನಿರುತ್ತರಲು, ಮನಃಪ್ರೀತಿಯಿಲ್ಲವೆಂಬಂತೆ)–ಮಾಯಾಲೇಶವಿದ್ದರೂ ಇಲ್ಲದಂತೆಯೇ ಎಂದು ಭಾವಿಸಿರಬಹುದಲ್ಲವೇ ? (ದೃಷ್ಟಾಂತವನ್ನು ಹೇಳುತ್ತಾರೆ), ಚಂಡಾಲಾಂಗುಲಿಸಂಗೇ ಅಪಿ–ಚಂಡಾಲನ ಬೆರಳು ಸ್ಪರ್ಶವಿದ್ದರೂ, ಚಂಡಾಲಸ್ಪರ್ಶ ಏವ ಹಿ–ಚಂಡಾಲಸ್ಪರ್ಶವಿದ್ದಂತೆಯೇ ಸರಿಯಷ್ಟೆ ! (ಆದ್ದರಿಂದ ಮಾಯಾಲೇಶವಿದ್ದರೂ, ಮಾಯಾಭಾವವೆಂಬ ಹೇತುವೇ ವೈಕುಂಠಾದಿಗಳಿಗೆ ಸಿದ್ಧಿಸುವುದಿಲ್ಲ).

**ಕಾರ್ಯಾಭಾವಸ್ಯ ಚಾಂಜಸ್ಯಂ ಸರ್ವಥಾಽಭಾವ ಏವ ಯತ್ ।**
**ಅತೋಽಸೌ ಕಾರಣಸ್ಯಾಪಿ ಸರ್ವಥಾಽಭಾವಮಾಕ್ಷಿಪೇತ್ ॥ ೩೫೨ ॥**

ಕಾರ್ಯಾಭಾವಸ್ಯ–ಕಾರ್ಯಾಭಾವದ (ಕಾಮಕ್ರೋಧಾದಿಗಳ ಅಭಾವದ), ಆಂಜಸ್ಯಂ ಚ–ಸ್ಪಷ್ಟತೆಯಾದರೂ, ಯತ್–ಯಾವ ಕಾರಣದಿಂದ, ಸರ್ವಥಾ

---

ಎಂದು ಹೇಳಿ, ಪ್ರಕೃತಿಯ ಅಭಾವವೆಂಬ ಹೇತುವಿನಿಂದ, ಕಾರಣಾಭಾವವು ಕಾರ್ಯಾಭಾವವನ್ನು ಸಾಧಿಸುವುದೆಂಬ ಯುಕ್ತಿಯ ಮೂಲಕ, ಕಾರ್ಯರೂಪಗಳಾದ ಕಾಮ ಕ್ರೋಧಾದಿಗಳೂ ಮುಕ್ತಿಯಲ್ಲಿಲ್ಲವೆಂದು ಸಾಧಿಸಿರುವರು (೩೪೯–೩೫೦). ಅಲ್ಪವಾದ ಮಾಯೆಯಿದ್ದರೂ ಮಾಯವೇ ಅಲ್ಲಿಲ್ಲವೆಂದು, ಶುಕಮುನಿಗಳು ಏಕೆ ಹೇಳಿರಲಾರರು ? ಈಶ್ವರನು ಸಂತುಷ್ಟನಾಗಿದ್ದರೂ, ನಮಗೆ ಪ್ರಿಯವಾದುದನ್ನು ಕೊಡಲು ಅವಶ್ಯಕವಾದ ಪ್ರಸನ್ನತೆಯಿಲ್ಲವೆಂದು ತಿಳಿಯಬಹುದೇ ? ಚಂಡಾಲನ ಬೆರಳು ಸ್ಪರ್ಶವಾಗಿದ್ದರೂ, (ಅತ್ಯಲ್ಪ ಸ್ಪರ್ಶವಿದ್ದರೂ) ಚಂಡಾಲ ಸ್ಪರ್ಶವಿದ್ದಂತೆಯೇ ಅಲ್ಲವೇ ? (೩೫೧). 'ನ ಯತ್ರ ಮಾಯಾ'

ಅಭಾವ ಏವ–ಸರ್ವಪ್ರಕಾರದಿಂದ (ಅವುಗಳ) ರಾಹಿತ್ಯವೇ (ಆಗಿರುತ್ತದೆಯೋ), ಅತಃ–ಆದ್ದರಿಂದ, ಅಸೌ–('ನ ಯತ್ರ ಮಾಯಾ ಕಿಮುತಾಪರೇ' ಎಂದು ಉಕ್ತವಾದ ಕಿಮುತ ಎಂಬುದು) ಸರ್ವಥಾಕಾರ್ಯಾಭಾವವು, ಕಾರಣಸ್ಯಾಪಿ–ಕಾರಣದ (ಮಾಯೆಯ), ಸರ್ವಥಾ–ಸರ್ವವಿಧದ, ಅಭಾವಂ ಅಪಿ–ಅಭಾವವನ್ನು, ಆಕ್ಷಿಪೇತ್–ಆಕ್ಷೇಪಿಸುತ್ತದೆ (ಹೀಗೆಂಬ ದೋಷವೂ ತಪ್ಪುವುದಿಲ್ಲ) (ಕಾರ್ಯಗಳಾದ ಕಾಮಕ್ರೋಧಾದಿಗಳ ಅಭಾವವಾದರೋ ಸಿದ್ಧವಿದೆ).

**ಏವಂ ಚ ಮಾಯಾತ್ಯಂತಾಭಾವಸ್ಥಾನಂ ನಿತ್ಯಮುಕ್ತತಾಂ ।**
**ಚಿದ್ರೂಪತ್ವಂ ನ ಕಿಂ ಲೇಭೇ ಜಡಂ ಮಾಯಾಮಯಂ ಹಿ ತೇ**

॥ ೩೫೩ ॥

ಏವಂ ಚ–ಹೀಗೆ ('ನ ಯತ್ರ ಮಾಯಾ' ಎಂಬುದಕ್ಕೆ ಅಲ್ಪಮಾಯೆಯ ಇರುವಿಕೆಯನ್ನು ಊಹಿಸಿಕೊಳ್ಳುವುದು ಉಚಿತವಲ್ಲದ್ದರಿಂದ), ಮಾಯಾತ್ಯಂತಾಭಾವಸ್ಥಾನಂ – ಮಾಯಾಲೇಶವೂ ಇರದ ಸ್ಥಾನವು, ನಿತ್ಯಮುಕ್ತತಾಂ – ನಿತ್ಯಮುಕ್ತತ್ವವನ್ನು (ನಿತ್ಯದೋಷದೂರತ್ವವನ್ನು), ಚಿದ್ರೂಪತ್ವಂ–ಚೇತನಾತ್ಮಕತ್ವವನ್ನು, ಲೇಭೇ ನ ಕಿಂ–ಹೊಂದಲಿಲ್ಲವೇನು? (ಈ ಲಕ್ಷಣವನ್ನು ಹೊಂದಿರುತ್ತದೆಯೇ ಸರಿ); ತೇ–ನಿನ್ನ ಮತದಂತೆ, ಜಡಂ–ಜಡಪ್ರಕೃತಿಯೇ, ಮಾಯಾಮಯಂ ಹಿ–ಮಾಯಾತ್ಮಕವಷ್ಟೆ.

---

ಎಂಬುದು ಕಾರಣದ (ಮಾಯೆಯ) ಸರ್ವಪ್ರಕಾರದ ಅಭಾವವನ್ನು ಹೇಳುತ್ತದೆ; ಹೀಗಿದ್ದರೂ ಅಲ್ಪಾಂಶವನ್ನು ಯುಕ್ತಿಬಲದಿಂದ ಶಂಕಿಸುವುದು ಉಚಿತವಾಗುವುದಿಲ್ಲ; ಮಾಯೆಯ ಕಾರ್ಯಗಳಾದ ಕಾಮಕ್ರೋಧಾದಿಗಳ ಅಭಾವವು 'ಕಿಮುತ' ಎಂಬುದರಿಂದ ಅಂಜಸಾ (ಸ್ಪಷ್ಟವಾಗಿ) (ಯಾವ ವಿಧದಿಂದಲೂ ಇಲ್ಲವೆಂದು) ಹೇಳಲ್ಪಡುತ್ತದೆ; ಆದ್ದರಿಂದ ಕಾರ್ಯಗಳ–ಕಾಮಾದಿಗಳ, ಕಾರಣವಾದ ಮಾಯೆಯು–ಪ್ರಕೃತಿಯು, ಸರ್ವಥಾ ಇಲ್ಲವೆಂದೇ ಸಿದ್ಧವಾಗುತ್ತದೆ; ಅಲ್ಪಾಂಶವು ಇರಬೇಕೆಂಬ ಪರನ ಯುಕ್ತಿ ಬಲದ ಊಹೆಯು ಇದರಿಂದ ವಿರೋಧಿಸಲ್ಪಡುತ್ತದೆ (೩೫೨). ಏವಂಚ ಮಾಯೆಯ ಅತ್ಯಂತಾಭಾವವುಳ್ಳದ್ದೆಂಬ, ಸ್ಥಾನವು, ನಿತ್ಯಮುಕ್ತತ್ವವನ್ನು, ಚಿದ್ರೂಪತ್ವವನ್ನು ಹೊಂದುವುದಿಲ್ಲವೇ? ನಿನ್ನಂತೆ (ಪರನಂತೆ) ಜಡವೇ ಮಾಯಾಮಯವು; ಅದರ ಅತ್ಯಂತಾಭಾವವು, ನಿತ್ಯಮುಕ್ತತ್ವವನ್ನೂ

**ತಲ್ಲಕ್ಷ್ಮ್ಯಾತ್ಮಕ ಲೋಕೋಽಪಿ ಸೋಽಭೂದ್ಯನ್ನಿತ್ಯಮುಕ್ತಚಿತ್ ।**
**ಲಯೇಽಪ್ಯಲೀನಾ ಸೈವೈಕಾ ತತ್ಪತಿರ್ಯತ್ಪರಃ ಪತಿಃ ॥ ೩೫೪ ॥**

ತತ್—ಆದ್ದರಿಂದ, ಸಃ—ಆ ವೈಕುಂಠಲೋಕವೂ, ಲಕ್ಷ್ಮ್ಯಾತ್ಮಕಲೋಕಃ—ಲಕ್ಷ್ಮೀರೂಪದ ಲೋಕವು, ಅಭೂತ್‌ಅಪಿ—ಆಗಿಯೇ ತೀರಿತು (ಅವಶ್ಯವಾಗಿ ಲಕ್ಷ್ಮ್ಯಾತ್ಮಕವೇ ಆಯಿತು); ಯತ್—ಯಾವ ಕಾರಣದಿಂದ, ನಿತ್ಯಮುಕ್ತಚಿತ್—ನಿತ್ಯಮುಕ್ತಚೇತನಳಾದ, ಲಯೇಽಪಿ – ಪ್ರಲಯದಲ್ಲಿಯೂ, ಅಲೀನಾ – ಲಯ ಹೊಂದದ, ಸಾ—ಆಕೆಯೇ (ಲಕ್ಷ್ಮಿಯೇ), ಏಕಾ ಏವ—ಒಬ್ಬಳೇ ಆಗಿರುವಳೋ; (ತತ್—ಆದ್ದರಿಂದ) ತತ್ಪತಿಃ—ಆಕೆಯ ಪತಿಯು, ಯತ್ಪರಃ ಪತಿಃ—ಯಾವ (ಆ) ವೈಕುಂಠದ ಪತಿಯೇ (ಒಡೆಯನೇ) ಆಗಿರುವನು.[1]

**ಏವಂ ಚ ಯುಕ್ತಿತೋ ವೈಕುಂಠಾದಿಲೋಕಾಶ್ಚಿದಾತ್ಮಕಾಃ ।**
**ಲಕ್ಷ್ಮ್ಯಾತ್ಮಕಾಃ ಸತ್ಯರೂಪಾ ನಿತ್ಯಾಶ್ಚಾಸನ್ನ ಸಂಶಯಃ ॥ ೩೫೫ ॥**
**ವೈಕುಂಠನಾಮಲೋಕಂ ತದ್ದಿವ್ಯಂ ಷಡ್ಗುಣಸಂಯುತಂ ।**
**ಅವೈಷ್ಣವಾನಾಮಪ್ರಾಪ್ಯಂ ಗುಣತ್ರಯವಿವರ್ಜಿತಂ ॥ ೩೫೬ ॥**

---

ಚಿದ್ರೂಪತ್ವವನ್ನೂ, ವೈಕುಂಠಲೋಕಕ್ಕೆ ಹೊಂದಿಸುತ್ತದೆ (ಎರಡೂ ಉಳ್ಳದ್ದೆಂದು ಸಾಧಿಸುತ್ತದೆ) (೩೫೩). ನಿತ್ಯ ಮುಕ್ತ ಚೇತನ ತತ್ವವೆಂಬುದು ಲಕ್ಷ್ಮೀ ಸ್ವರೂಪವೇ ಆಗಿದೆ; ಪ್ರಲಯದಲ್ಲಿ ಸಹ ಆಕೆಗೆ ಮಾತ್ರ ಲಯವಿಲ್ಲ; ಆದ್ದರಿಂದ, ವೈಕುಂಠಲೋಕವು ಲಕ್ಷ್ಮ್ಯಾತ್ಮಕವೆಂದೂ (ಲಕ್ಷ್ಮೀರೂಪವೇ ಎಂದೂ) ವೈಕುಂಠ ಪತಿಯೇ ನಾರಾಯಣನೆಂದೂ ಸಿದ್ಧವಾಗುತ್ತದೆ (೩೫೪). ಆದ್ದರಿಂದ ವೈಕುಂಠಾದಿ (ಶ್ವೇತದ್ವೀಪ, ಅನಂತಾಸನ) ಲೋಕಗಳು ಚೇತನಾತ್ಮಕವೆಂದೂ, ಲಕ್ಷ್ಮೀ ರೂಪಗಳೆಂದೂ, ಸತ್ಯವೂ, ನಿತ್ಯವೂ ಆದವುಗಳೆಂದು, ಸ್ಮೃತಿಸಮ್ಮತ ಯುಕ್ತಿಯಿಂದಲೇ ಸಿದ್ಧವಾದವು, ಸಂಶಯವಿಲ್ಲ; ವೈಕುಂಠವೆಂಬ ಲೋಕವು (ಮುಕ್ತ

---

[1] ಯದ್ಯಪಿ ಶ್ರೀಹರಿಯೂ ನಿತ್ಯ ಮುಕ್ತನೇ ಆಗಿರುವನು—ಲಕ್ಷ್ಮೀಮಾತ್ರಳಲ್ಲ; ಆದರೆ ಆತನೇ ವೈಕುಂಠರೂಪದಿಂದಿಲ್ಲ—ವೈಕುಂಠಪತಿ ಎಂದೇ ಪ್ರಸಿದ್ಧನಾಗಿದ್ದಾನೆ; ಆತನ ಪತ್ನಿಯಾದ ಲಕ್ಷ್ಮೀದೇವಿಯೇ ವೈಕುಂಠರೂಪಳೆಂಬುದೇ ಉಚಿತವು.

ಏವಂ ಚ–ಹೀಗೆಯೇ, ಯುಕ್ತಿತಃ–(ಸ್ಮೃತಿಮೂಲವುಳ್ಳ)ಯುಕ್ತಿ[1]ಯಿಂದ, ವೈಕುಂಠಾದಿಲೋಕಾಃ–ವೈಕುಂಠಾದಿ (ಶ್ವೇತದ್ವೀಪ, ಅನಂತಾಸನಗಳು ಸಹ) ಲೋಕಗಳು, ಚಿದಾತ್ಮಕಾಃ–ಚೇತನಾತ್ಮಕಗಳು, ಲಕ್ಷ್ಮ್ಯಾತ್ಮಕಾಃ–ಲಕ್ಷ್ಮೀರೂಪ ಗಳೇ, ಸತ್ಯರೂಪಾಃ–ಸತ್ಯವಾದವುಗಳು (ಅಲಂಕಾರೋಕ್ತಿಯಲ್ಲ), ನಿತ್ಯಾಶ್ಚ– ನಿತ್ಯವಾದವುಗಳೇ, ಆಸನ್–ಆದವು ; ನ ಸಂಶಯಃ–ನಿಶ್ಚಯವು (ಯಾವ ಸಂದೇಹವೂ ಇಲ್ಲ); ವೈಕುಂಠಂ ನಾಮ ಲೋಕಂ ತತ್–ವೈಕುಂಠವೆಂದು ಕರೆಯ ಲ್ಪಡುವ (ಪ್ರಸಿದ್ಧಿಯುಳ್ಳ) ಆ ಲೋಕವು, ದಿವ್ಯಂ – ಅಲೌಕಿಕವು (ಲೋಕ ವಿಲಕ್ಷಣವು), ಷಡ್ಗುಣ ಸಂಯುತಂ – ಐಶ್ವರ್ಯಾದಿಷಡ್ಗುಣಗಳಿಂದ ಪೂರ್ಣ ವಾದುದು ;[2] ಅವೈಷ್ಣವಾನಾಂ–ವಿಷ್ಣುಭಕ್ತಿಯಿಲ್ಲದವರಿಗೆ, (ಮುಕ್ತಿಯೋಗ್ಯ ರಲ್ಲದವರಿಗೆ), ಅಪ್ರಾಪ್ಯಂ–ಹೊಂದಲಸಾಧ್ಯವಾದುದು ; ಗುಣತ್ರಯವಿವರ್ಜಿತಂ–

---

ಲೋಕವು), ಅಲೌಕಿಕವೂ, ಷಡ್ಗುಣ ಯುಕ್ತವೂ, ವಿಷ್ಣುಭಕ್ತರಲ್ಲದವರಿಂದ ಅಪ್ರಾಪ್ಯವೂ (ಸತ್ವಾದಿ) ಗುಣತ್ರಯ ರಹಿತವೂ, ಎಂದೂ ಸಹ ಯುಕ್ತಿಯಿಂದಲೇ

---

1 'ವಿಮತೋ ವೈಕುಂಠಲೋಕಃ ಚಿದಾತ್ಮಕೋ ಭವಿತುಮರ್ಹತಿ | ಮಾಯಾ ಮಾಯಾಮಯಯೋರನ್ಯತರತ್ವರಹಿತತ್ವಾತ್ ಬ್ರಹ್ಮವತ್ |' ಮತ್ತು 'ವಿಮತೋ ವೈಕುಂಠಲೋಕಃ ಲಕ್ಷ್ಮ್ಯಾತ್ಮಕೋ ಭವಿತುಮರ್ಹತಿ | ಭಗವದ್ಭಿನ್ನತ್ವೇ ಸತಿ ನಿತ್ಯಮುಕ್ತ ಚೈತನ್ಯಾತ್ಮಕತ್ವಾತ್ ವ್ಯತಿರೇಕೇಣ ಜೀವವತ್ ಘಟವತ್ ವಾ ||' ಎಂಬ ಎರಡು ಯುಕ್ತಿಗಳು ಸೂಚಿತವಾಗಿವೆ; ಇವುಗಳ ನಿರೂಪಣೆಯು ಹೀಗಿದೆ:—'ವಿವಾದ ವಿಷಯವಾದ ವೈಕುಂಠಲೋಕವು ಚೇತನಾತ್ಮಕವು, ಪ್ರಕೃತಿ ಮತ್ತು ಪ್ರಾಕೃತಗಳಲ್ಲಿ ಯಾವುದೂ ಇಲ್ಲದಿರುವುದರಿಂದ, ಬ್ರಹ್ಮನಂತೆ ;' ಮತ್ತು 'ವೈಕುಂಠಲೋಕವು ಲಕ್ಷ್ಮ್ಯಾತ್ಮಕವಾದುದು- ಭಗವದ್ಭಿನ್ನವಾಗಿದ್ದು ನಿತ್ಯ ಮುಕ್ತ ಚೇತನಾತ್ಮಕವಾದುದರಿಂದ, ವ್ಯತಿರೇಕದಿಂದ ಜೀವನಂತೆ ಅಥವಾ ಘಟದಂತೆ.' ಎಂದು ತಾರ್ಕಿಕರು ಅನುಮಾನಿಸಬಹುದು ; ಈ ಅನುಮಾನವು ಭಾಗವತಾದಿ ಸ್ಮೃತಿಸಮ್ಮತವೂ ಆಗಿದೆ.

2 ಭಗವಂತನು ಷಡ್ಗುಣೈಶ್ವರ್ಯಪೂರ್ಣನು–ಭಗ ಶಬ್ದಾರ್ಥವೇ ಷಡ್ಗುಣಪೂರ್ಣ ನೆಂದಿದೆ ; 'ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ | ಜ್ಞಾನವಿಜ್ಞಾನಯೋ ಶ್ಚೈವ ಷಣ್ಣಾಂ ಭಗ ಇತೀರಣಾ ||–ಪೂರ್ಣೈಶ್ವರ್ಯ, ವೀರ್ಯ, ಯಶ, ಕಾಂತಿ, ಜ್ಞಾನ, ವಿಜ್ಞಾನಗಳು, ಯಥಾಯೋಗ್ಯವಾಗಿ ವೈಕುಂಠವಾಸಿಗಳೆಲ್ಲರೂ ಹೊಂದಿರುವರು–ಲೋಕವೂ ಈ ಗುಣಗಳುಳ್ಳದ್ದು.

ಗುಣತ್ರಯಗಳಿಂದ (ಸತ್ವ, ರಜ, ತಮಗಳೆಂಬ ಪ್ರಾಕೃತಗುಣಗಳಿಂದ) ರಹಿತವಾದುದು (ಎಂದು ಸಿದ್ಧವಾಯಿತು).

**ನಿತ್ಯಸಿದ್ಧೈಃ ಸಮಾಕೀರ್ಣಂ ಚಿನ್ಮಯೈಃ ಪಾಂಚಕಾಲಿಕೈಃ।**
**ಸಭಾಪ್ರಾಸಾದಸಂಯುಕ್ತಂ ವನೈಶ್ಚೋಪವನೈಃ ಶುಭಂ ॥ ೩೫೭ ॥**

**ವಾಪಿಕೂಪತಟಾಕೈಶ್ಚ ವೃಕ್ಷಷಂಡೈಶ್ಚ ಮಂಡಿತಂ।**
**ಅಪ್ರಾಕೃತಂ ಸುರೈರ್ವಂದ್ಯಮಯುತಾರ್ಕಸಮಪ್ರಭಂ ॥ ೩೫೮ ॥**

**ಪ್ರಕೃಷ್ಟಸತ್ವರಾಶಿತ್ವಾತ್ಕದಾ ದ್ರಕ್ಷ್ಯಾಮಿ ಚಕ್ಷುಷಾ।**
**ಇತ್ಥಂ ವೈಕುಂಠನಗರೀಮಸ್ತೌಷೀಚ್ಚತುರಾನನಃ ॥ ೩೫೯ ॥**

ನಿತ್ಯಸಿದ್ಧೈಃ – ನಿತ್ಯಮುಕ್ತರಿಂದಲೂ, ಚಿನ್ಮಯೈಃ – ಚಿನ್ಮಾತ್ರರಾದ (ಸ್ವರೂಪದಿಂದಿರುವ), ಪಾಂಚಕಾಲಿಕೈಃ – ಪಂಚಕಾಲಗಳಲ್ಲಿ ಹರಿಸೇವಾಸಕ್ತರಾದವರಿಂದಲೂ (ಪಾಂಚರಾತ್ರಿಕರಿಂದಲೂ), ಸಮಾಕೀರ್ಣಂ – ತುಂಬಿರುವ, ಸಭಾಪ್ರಾಸಾದಸಂಯುಕ್ತಂ–ಸಭಾಸ್ಥಾನ ಮತ್ತು ಉಪ್ಪರಿಗೆ ಗೃಹಗಳಿಂದ ಪೂರ್ಣವಾದುದೂ, ವನೈಃ – ವನಗಳಿಂದಲೂ, ಚ – ಹಾಗೂ, ಉಪವನೈಃ–ಉಪವನಗಳಿಂದ (ವಿಹಾರಸ್ಥಾನಗಳಿಂದ), ಶುಭಂ – ಶೋಭಿಸುವುದೂ, ವಾಪೀಕೂಪತಟಾಕೈಶ್ಚ–ವಾಪಿ (ಬಾವಿ) ಕೂಪ (ಇಳಿಯುವ ಬಾವಿ) ಕೆರೆ ಮುಂತಾದ ಜಲಾಶಯಗಳಿಂದಲೂ, ಚ–ಮತ್ತು, ವೃಕ್ಷಷಂಡೈಶ್ಚ–ವೃಕ್ಷ ಸಮೂಹಗಳಿಂದ ಸಹ, ಮಂಡಿತಂ – ಭೂಷಿತವಾದುದೂ, ಅಪ್ರಾಕೃತಂ – ಪ್ರಾಕೃತವಲ್ಲದುದೂ (ಜಡವಲ್ಲದುದೂ), ಸುರೈಃ – ದೇವತೆಗಳಿಂದಲೂ, ವಂದ್ಯಂ – ನಮಸ್ಕೃತವಾದ,

---

ಸಿದ್ಧವಾಯಿತು (೩೫೫–೩೫೬). ಸ್ವಸ್ವರೂಪಗಳಿಂದಿರುವ, ಪಾಂಚಕಾಲಿಕರಿಂದಲೂ, ನಿತ್ಯಮುಕ್ತರಿಂದಲೂ ತುಂಬಿರುವ, ಸಭಾ ಪ್ರಾಸಾದಿಗಳಿಂದಲೂ, ವನ, ಉಪವನಗಳಿಂದಲೂ ಶೋಭಿಸುವ, ವಾಪೀಕೂಪತಟಾಕಾದಿಗಳಿಂದಲೂ, ವಿವಿಧ ವೃಕ್ಷ ಸಮೂಹಗಳಿಂದಲೂ ಮಂಡಿತವಾದ, ಅಪ್ರಾಕೃತವೂ, ದೇವತೆಗಳಿಂದ ನಮಸ್ಕೃತವೂ, ಸಹಸ್ರಾರು ಸೂರ್ಯಪ್ರಕಾಶದಿಂದ ಬೆಳಗುವುದೂ ಆದ, ಉತ್ತಮ ಜೀವರಾಶಿಗಳಿಂದ ಪೂರ್ಣವಾದ, ದಿವ್ಯ ವೈಕುಂಠ ಲೋಕವನ್ನು ಕಣ್ಣಿಂದ ಎಂದು ನೋಡೇನೆಂದು, ಚತುರ್ಮುಖನು ಸ್ತುತಿಸಿರುವನು (೩೫೭–೩೫೯).

ಅಯುತಾರ್ಕಸಮ ಪ್ರಭಂ–ಹತ್ತು ಸಹಸ್ರ ಸೂರ್ಯಸಮಪ್ರಕಾಶದಿಂದ ಒಪ್ಪುವುದೂ (ಆದ), ವೈಕುಂಠನಗರೀಂ–ವೈಕುಂಠನಗರಿಯನ್ನು, ಪ್ರಕೃಷ್ಟಸತ್ವರಾಶಿತ್ವಾತ್–ಉತ್ತಮ ಪುರುಷಸಮಾಜವಾದ್ದರಿಂದ, ಚಕ್ಷುಷಾ - ಕಣ್ಣಿನಿಂದ, ಕದಾ - ಯಾವಾಗ, ದ್ರಕ್ಷ್ಯಾಮಿ–ನೋಡುವೆನು, ಇತ್ಥಂ–ಹೀಗೆ, ಚತುರಾನನಃ–ಚತುರ್ಮುಖ ಬ್ರಹ್ಮನೂ, ಅಸ್ತೌಷೀತ್–ಸ್ತುತಿಸಿರುವನು.

**ಪಂಚರಾತ್ರೇ ಚತುರ್ವಕ್ತ್ರಸ್ತೋತ್ರೇಷ್ವಾದ್ಯಮಿದಂ ಕಿಲ ॥ ೩೬೦ ॥**

ಇದಂ – ಈ ಉದ್ಗಾರವು, ಪಂಚರಾತ್ರೇ – ಪಂಚರಾತ್ರಾಗಮದಲ್ಲಿ, ಚತುರ್ವಕ್ತ್ರಸ್ತೋತ್ರೇಷು–ಚತುರ್ಮುಖನ ಸ್ತೋತ್ರಗಳಲ್ಲಿ, ಆದ್ಯಂ ಕಿಲ–ಮೊದಲಿನದೆಂದು ಪ್ರಸಿದ್ಧವಿದೆ.

**ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ ।**
**ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ ।**
**ಇತ್ಯುಕ್ತೇ ಷಡ್ಗುಣಃ ಪೂರ್ಣಜ್ಞಾನವಿಜ್ಞಾನಶಕ್ತಿಮಾನ್ ॥ ೩೬೧ ॥**

**ಸಂಯುತತ್ವೋಕ್ತಿತಶ್ಚಾಭೂತ್ಸನ್ಮ್ಯಗ್ಯುಕ್ತೋ ಹಿ ತೈರ್ಗುಣೈಃ ।**
**ಅಪ್ರಾಕೃತಾ ಸುರೈರ್ವಂದ್ಯೋ ಲೋಕೋಽಸೌ ನ ಹ್ಯಚೇತನಃ ॥೩೬೨॥**

ಐಶ್ವರ್ಯಸ್ಯ ಸಮಗ್ರಸ್ಯ–ಪೂರ್ಣೈಶ್ವರ್ಯ, ವೀರ್ಯಸ್ಯ–ಪರಾಕ್ರಮವೂ, ಯಶಸಃ–ಯಶಸ್ಸು, ಶ್ರಿಯಃ–ಕಾಂತಿಯು, ಜ್ಞಾನವಿಜ್ಞಾನಯೋಃ ಏವ ಚ–ಜ್ಞಾನವಿಜ್ಞಾನಗಳು, ಇವುಗಳ, ಷಣ್ಣಾಂ–ಆರಕ್ಕೆ, ಭಗಃ–ಭಗವು, ಇತೀರಣಾ–

---

ಪಂಚರಾತ್ರಾಗಮದಲ್ಲಿ ಚತುರ್ಮುಖ ಬ್ರಹ್ಮನ ಸ್ತೋತ್ರಗಳಲ್ಲಿ ಇದು (ಉಕ್ತ ವೈಕುಂಠಸ್ತುತಿಯು) ಮೊದಲಿನದೆಂದು (ಶ್ರೇಷ್ಠವೆಂದು) ಪ್ರಸಿದ್ಧವಾಗಿದೆ (೩೬೦). ಸಕಲೈಶ್ವರ್ಯವು, ವೀರ್ಯ, ಯಶಸ್ಸು, ಕಾಂತಿ, ಜ್ಞಾನ, ವಿಜ್ಞಾನಗಳ ಪರಿಪೂರ್ಣತೆಯು, 'ಭಗ' ಎಂದು ಹೇಳಲಾಗುತ್ತದೆ; ಈ ಪ್ರಮಾಣದಲ್ಲಿ ವೈಕುಂಠಲೋಕವು ಷಡ್ಗುಣಪೂರ್ಣವೆಂದೂ, ಜ್ಞಾನವಿಜ್ಞಾನ ಸಾಮರ್ಥ್ಯವುಳ್ಳದ್ದೆಂದೂ, ಭಗಶಬ್ದ ವಾಚ್ಯಗಳಾದ ಆರೂ ಗುಣಗಳಿಂದ ಪೂರ್ಣವೆಂಬ ಉಕ್ತಿಯಿಂದ, ಸದಾ ಅಪ್ರಾಕೃತವೆಂದೂ ; ಸರ್ವ ದೇವತೆಗಳಿಂದ ನಮಸ್ಕೃತವಾದುದೆಂದೂ ಚೇತನಾತ್ಮಕವೆಂದೂ ಸಿದ್ಧವಾಗುತ್ತದೆ (೩೬೧–೩೬೨).

ಎಂದು ನಾಮವು ; ಇತ್ಯುಕ್ತೇಃ-ಎಂಬ ಪ್ರಮಾಣದಂತೆ, ಷಡ್ಗುಣಃ-ಷಡ್ಗುಣವುಳ್ಳ, ಪೂರ್ಣಜ್ಞಾನವಿಜ್ಞಾನ ಶಕ್ತಿಮಾನ್-ಪೂರ್ಣಜ್ಞಾನವಿಜ್ಞಾನ ಸಾಮರ್ಥ್ಯವುಳ್ಳ ವೈಕುಂಠಲೋಕವು, ಗುಣೈಃ-ಉಕ್ತ ಆರೂ ಗುಣಗಳಿಂದ, ಸಮ್ಯಗ್ಯುಕ್ತಃ-ಪೂರ್ಣವಾಗಿ ಕೂಡಿರುವ ವೈಕುಂಠಲೋಕವು, ಸಂಯುತತ್ವೋಕ್ತಿತಃ-ಕೂಡಿದ್ದೆಂಬ ಪ್ರಮಾಣದಿಂದ ಸಹ, ಅಭೂತ್-(ವೈಕುಂಠವೆಂಬ ನಾಮವುಳ್ಳದ್ದು) ಆಯಿತು ; ಅಸೌ ಲೋಕಃ-ಈ ಲೋಕವು, ಸುರೈಃ-ದೇವತೆಗಳಿಂದ, ವಂದ್ಯಃ-ನಮಸ್ಕಾರಾರ್ಹವೂ, ಅಪ್ರಾಕೃತಾ – ಪ್ರಕೃತಿಸ್ಪರ್ಶವಿಲ್ಲದುದೂ (ಅಭೂತ್ – ಎಂದು ಸಿದ್ಧವಾಯಿತು) ; ಹಿ-ಏಕೆಂದರೆ, ಅಚೇತನಃ ನ-ಜಡವಾದುದಲ್ಲ.

**ವಿಶೇಷಣತ್ರಯಂ ಹ್ಯೇತಚ್ಛ್ರಿಯಃ ಶ್ರೀಶಸ್ಯ ಚೋಚಿತಂ ।**
**ಅತೋಽಪಿ ಶ್ರೀಪತೇರ್ಲೋಕಃ ಶ್ರೀರೂಪೋಽಯಂ ಭವೇದ್ಧ್ರುವಂ**
॥ ೩೬೩ ॥

ಹಿ-ಯಾವ ಕಾರಣದಿಂದ (ಯಸ್ಮಾತ್), ಏತತ್-ಈ, ವಿಶೇಷಣತ್ರಯಂ-ಮೂರು ವಿಶೇಷಣಗಳು (ಷಡ್ಗುಣಪೂರ್ಣತ್ವ, ಅಪ್ರಾಕೃತತ್ವ ಮತ್ತು ದೇವ-ವಂದ್ಯತ್ವಗಳು), ಶ್ರಿಯಃ-ಲಕ್ಷ್ಮೀದೇವಿಗೂ, ಶ್ರೀಶಸ್ಯ ಚ-ಲಕ್ಷ್ಮೀಪತಿಯಾದ ನಾರಾಯಣನಿಗೂ, ಉಚಿತಂ-ಯೋಗ್ಯವಾದುದೋ, ಅತೋಽಪಿ-ಈ ಕಾರಣದಿಂದಲೂ, ಶ್ರೀಪತೇಃ – ನಾರಾಯಣನ, ಲೋಕಃ-ಲೋಕವು, ಶ್ರೀರೂಪಃ ಅಯಂ-ಲಕ್ಷ್ಮೀರೂಪವಾದುದೇ, ಭವೇತ್-ಎಂದೂ ಸಿದ್ಧವಾಗುತ್ತದೆ; ಧ್ರುವಂ-ನಿಶ್ಚಯವು (ಸಂಶಯವಿಲ್ಲ).

**ಪಠನ್ ಸಹಸ್ರನಾಮಾನಿ ಶಂಭುಬ್ರಹ್ಮೋರ್ಧ್ವಧಾಮಗಃ ।**
**ಇತಿ ಯಂ ಧೂರ್ಜಟಿಃ ಸ್ತೌತಿ ಕಿಂ ತದ್ಧಾಮ ವಿಚಾರ್ಯತಾಂ**
॥ ೩೬೪ ॥

---

ಷಡ್ಗುಣಪೂರ್ಣತ್ವ ಅಪ್ರಾಕೃತತ್ವ ಮತ್ತು ಸರ್ವದೇವ ವಂದ್ಯತ್ವಗಳು, ಲಕ್ಷ್ಮೀದೇವಿಯಲ್ಲಿ ಮತ್ತು ಲಕ್ಷ್ಮೀಪತಿಯಾದ ಶ್ರೀ ನಾರಾಯಣನಲ್ಲಿಯೂ ಇರುತ್ತವೆ ; ಅವರಿಬ್ಬರಿಗೆ ಮಾತ್ರ ಈ ವಿಶೇಷಣಗಳು ಯೋಗ್ಯವಾಗುತ್ತವೆ ; ಈ ಗುಣತ್ರಯವು ವೈಕುಂಠಾದಿ ಮುಕ್ತಲೋಕಗಳಿಗೂ ಇರುವುದರಿಂದಲೇ ಶ್ರೀಪತಿಯ ಲೋಕವಾದ ವೈಕುಂಠವು ಶ್ರೀರೂಪವೇ (ಲಕ್ಷ್ಮೀರೂಪವೇ) ಆಗಿದೆ; ಇದು ಸತ್ಯವು-ಸಂಶಯವಿಲ್ಲ (೩೬೩). ಶಿವನು ಸಹಸ್ರನಾಮವನ್ನು ಪಠನ ಮಾಡುವವನಾಗಿ

ಸಹಸ್ರನಾಮಾನಿ–ಸಹಸ್ರನಾಮಗಳನ್ನು, ಪಠನ್ ಧೂರ್ಜಟಿಃ–ಪಠಿಸುವ ಶಿವನೂ, ಯಂ–ಯಾವ ಲೋಕವನ್ನು (ವೈಕುಂಠವನ್ನು), ಶಂಭುಬ್ರಹ್ಮೋರ್ಧ್ವ–ಧಾಮಗಃ ಇತಿ–ಶಂಭು ಬ್ರಹ್ಮರ ಮೇಲಿನ ಸ್ಥಾನವೆಂದು, ಸ್ತೌತಿ–ಪ್ರಶಂಸಿಸುವನೋ, ತದ್ಧಾಮ – ಆ ಸ್ಥಾನವು, ಕಿಂ–ಯಾವುದೆಂದು, ವಿಚಾರ್ಯತಾಂ–ವಿಚಾರಮಾಡಲ್ಪಡಲಿ (ವಿವೇಚಿಸಬೇಕಲ್ಲವೇ?).

**ಶಂಭುಬ್ರಹ್ಮೋರ್ಧ್ವತಾ ಧಾಮ್ನಸ್ತಾಭ್ಯಾಮುತ್ತಮತೈವ ಹಿ ।**
**ಅಹಂಕಾರಾತ್ಮಕಾಚ್ಛಂಭೋರ್ಬ್ರಹ್ಮಣೋ ಮಹದಾತ್ಮಕಾತ್ ।**
**ನ ಹಿ ವೈಕುಂಠಪೂರೂರ್ಧ್ವಂ ತದ್ಗುಣೈರೇವ ಸೋಽಪರಿ ॥ ೩೭೫ ॥**

ಧಾಮ್ನಃ – ವೈಕುಂಠದ, ಶಂಭುಬ್ರಹ್ಮೋರ್ಧ್ವತಾ – ರುದ್ರಬ್ರಹ್ಮಲೋಕಗಳಿಂದ ಊರ್ಧ್ವತ್ವವು, ತಾಭ್ಯಾಂ–ಆ ಲೋಕಗಳಿಂದ, ಉತ್ತಮತಾ ಏವ–ಉತ್ತಮತ್ವವೇ ಆಗಿದೆ (ಮೇಲ್ಭಾಗದಲ್ಲಿರುತ್ತದೆಂಬುದರಿಂದ ಅಲ್ಲ); ಹಿ–ಏಕೆಂದರೆ, ಶಂಭೋಃ – ಶಂಭುವಿಗೆ (ರುದ್ರಲೋಕಕ್ಕೆ), ಅಹಂಕಾರಾತ್ಮಕಾತ್ – ಅಹಂಕಾರತತ್ವಾತ್ಮಕತ್ವವಿರುವುದರಿಂದ, ಬ್ರಹ್ಮಣಃ–ಬ್ರಹ್ಮಲೋಕಕ್ಕೆ, ಮಹದಾತ್ಮಕಾತ್–ಮಹತ್ತತ್ವಾತ್ಮಕತ್ವವಿರುವುದರಿಂದ, ವೈಕುಂಠ ಪೂಃ – ವೈಕುಂಠಪುರಿಯು, ಊರ್ಧ್ವಂ – ಮೇಲಿರುವುದು, ನ ಹಿ–ಅಲ್ಲವು (ಹಿ–ಪ್ರಸಿದ್ಧವು; ಸಮಾನಮಹಿಮೋಪೇತವಾದ ಶ್ವೇತದ್ವೀಪವು, ಅನಂತಾಸನವು ಸತ್ಯಲೋಕದ ಮೇಲಿರುವುದಿಲ್ಲ); ತದ್ಗುಣೈಃ ಏವ–ರುದ್ರಲೋಕ, ಬ್ರಹ್ಮಲೋಕಗಳ ಗುಣಗಳಿಂದಲೇ, ಸಾ–ವೈಕುಂಠವು, ಉಪರಿ – ಉತ್ತಮವಾಗಿದೆ (ಮೇಲಿದೆ – ತ್ರಿಗುಣರಹಿತವೂ, ಅಪ್ರಾಕೃತವೂ ಆಗಿದೆ).

---

ಶಂಭು ಹಾಗೂ ಬ್ರಹ್ಮರ ಲೋಕದ ಊರ್ಧ್ವಲೋಕವೆಂದು ಹೇಳುವ ಲೋಕವಾವುದೆಂಬುದನ್ನು ವಿವೇಚಿಸಬೇಕು (೩೭೪). ಶಂಭು ಬ್ರಹ್ಮರಿಗಿಂತ ಊರ್ಧ್ವಧಾಮವೆಂಬುದು, ಶಂಭು ಬ್ರಹ್ಮರ ಲೋಕಕ್ಕಿಂತ ಉತ್ತಮವಾದುದೇ ಆಗಿದೆ; ಮೇಲಿರುವುದೆಂಬುದು, ಊರ್ಧ್ವ ಪದದ ಅರ್ಥವಲ್ಲ; ಏಕೆಂದರೆ, ರುದ್ರನೂ, ರುದ್ರಲೋಕವೂ, ಅಹಂಕಾರಾತ್ಮಕಗಳು; ಬ್ರಹ್ಮನೂ ಬ್ರಹ್ಮಲೋಕವೂ ಮಹತ್ತತ್ವಾತ್ಮಕಗಳು; ವೈಕುಂಠದಲ್ಲಿ ಪ್ರಾಕೃತ ಪ್ರವೇಶವಿಲ್ಲ–ಅದು ತ್ರಿಗುಣವರ್ಜಿತವು; ಅಹಂಕಾರ ಮತ್ತು ಮಹತ್ತತ್ವಗಳು, ಪ್ರಕೃತಿ ಕಾರ್ಯಗಳು

**ಬ್ರಹ್ಮಾದಯೋ ಬಹುತಿಥಮಿತಿ ಭಾಗವತೋಕ್ತಿತಃ ।**
**ಬ್ರಹ್ಮಾದಿಭ್ಯೋ ಗುಣೈರುಚ್ಚಾ ಯಚ್ಛ್ರೀರೇವ ಹರೇಃ ಪ್ರಿಯಾ ।**
**ಏವಂ ಚ ಲಕ್ಷ್ಮೀರೂಪತ್ವಂ ಲೋಕಸ್ಯ ನ ಕಥಂ ವದ ॥ ೩೬೬ ॥**

ಬ್ರಹ್ಮಾದಯೋ ಬಹುತಿಥಂ ಇತಿ–'ಬ್ರಹ್ಮಾದಯೋ ಬಹುತಿಥಂ ಯದಪಾಂಗ ಮೋಕ್ಷಕಾಮಾ....' ಎಂಬ, ಭಾಗವತೋಕ್ತಿತಃ – ಭಾಗವತವಾಕ್ಯದಿಂದ, ಬ್ರಹ್ಮಾದಿಭ್ಯಃ–ಬ್ರಹ್ಮಾದಿಗಳ ದೆಶೆಯಿಂದ, ಗುಣೈಃ–ಗುಣಗಳಿಂದ, ಉಚ್ಚಾ–ಉತ್ತಮಳಾದ, ಯಚ್ಛ್ರೀರೇವ–ಯಾವ ಶ್ರೀದೇವಿಯು (ಲಕ್ಷ್ಮೀದೇವಿಯು), ಹರೇಃ–ಶ್ರೀಹರಿಯ, ಪ್ರಿಯಾ–ಭಾರ್ಯಳೋ (ಭಾಗವತವಾಕ್ಯದಿಂದ ಹೀಗೆಂದು, ಯತ್–ಯಾವ ಕಾರಣದಿಂದ ಸಿದ್ಧವಾಗುವುದೋ), ಏವಂ ಚ–ಹೀಗೆ (ಆದ್ದರಿಂದ), ಲೋಕಸ್ಯ – ವೈಕುಂಠಲೋಕಕ್ಕೆ, ಲಕ್ಷ್ಮೀರೂಪತ್ವಂ – ಲಕ್ಷ್ಮೀಸ್ವರೂಪತ್ವವು, ಕಥಂ ನ–ಹೇಗೆ ಆಗುವುದಿಲ್ಲ? ವದ–ಹೇಳು.

**ಹರೇರನುವ್ರತಾ ಏವ ಮುಕ್ತಾಸ್ತತ್ರಾಪಿ ತೇ ಕಿಲ ।**
**ಸರ್ವೇ ಚತುರ್ಬಾಹವಶ್ಚ ಶ್ಯಾಮಕೋಮಲಮೂರ್ತಯಃ ॥ ೩೬೭ ॥**

---

(ಪ್ರಕೃತಿಯಿಂದ ಉತ್ಪನ್ನವಾದವುಗಳು) ; ಆದ್ದರಿಂದ ವೈಕುಂಠಪುರಿಯು ರುದ್ರ ಬ್ರಹ್ಮಧಾಮಗಳಿಂದ ಗುಣದಲ್ಲಿ ಉತ್ತಮವೇ ಆಗಿದೆ ; ಆದ್ದರಿಂದ ಈ ಅರ್ಥದಲ್ಲಿ ಅದು ಮೇಲಿದೆ (ಊರ್ಧ್ವವು) ; ವಸ್ತುತಃ ಬ್ರಹ್ಮಲೋಕವು ಸಪ್ತಲೋಕಗಳಲ್ಲಿ ಎಲ್ಲಕ್ಕಿಂತ ಮೇಲಿದೆ ; ವೈಕುಂಠವು ಅದಕ್ಕಿಂತ ಮೇಲಿದೆ, ನಿಜ ; ಆದರೆ ನಿತ್ಯ ಮುಕ್ತ ವಾಸಸ್ಥಾನಗಳಾದ ಶ್ವೇತದ್ವೀಪ, ಅನಂತಾಸನಗಳು ಬ್ರಹ್ಮಲೋಕದ ಮೇಲ್ಭಾಗದಲ್ಲಿಲ್ಲ; ಭೂಲೋಕಕ್ಕೆ ಹೊಂದಿಕೊಂಡೇ ಇವೆ; ಎಂಬುದನ್ನು ಗಮನಿಸಿ ಈ ವಿಶೇಷವನ್ನು 'ವೈಕುಂಠಾದಿ ಲೋಕಾಶ್ಚಿದಾತ್ಮಕಾಃ' ಎಂದು ಶ್ಲೋಕ (೩೫೫)ದ ಅರ್ಥದೊಂದಿಗೆ ಗ್ರಹಿಸಬೇಕು (೩೬೫). ಬ್ರಹ್ಮಾದಿ ದೇವತೆಗಳೂ ಯಾವಾಕೆಯ ಕಡೆಗಣ್ಣ ನೋಟವನ್ನು ಆಶಿಸುತ್ತಿರುವರೋ, ಎಂದು ಮುಂತಾಗಿ ಭಾಗವತೋಕ್ತ ಮಹಿಮೆಯುಳ್ಳ ಲಕ್ಷ್ಮೀದೇವಿಯು, ಬ್ರಹ್ಮಾದಿಗಳ ದೆಶೆಯಿಂದ ಉತ್ತಮಳೆಂದು ಸಿದ್ಧವಿದೆ ; ಈಕೆಯ ಪತಿಯೇ ಸಾಕ್ಷಾನ್ನಾರಾಯಣನು ; ಹೀಗಿರುವಾಗ ವೈಕುಂಠ ಲೋಕಕ್ಕೆ ಲಕ್ಷ್ಮೀಸ್ವರೂಪತ್ವವು ಹೇಗೆ ಸಿದ್ಧಿಸುವುದಿಲ್ಲ? (೩೬೬). ಆ ವೈಕುಂಠದಲ್ಲಿರುವರೆಲ್ಲರೂ ಮುಕ್ತರೇ – ಎಲ್ಲರೂ ಶ್ರೀಹರಿಯ ಅನುಚರರೇ

**ಮಣಿಪ್ರವೇಕಾಭರಣಾ ನಿಷ್ಕಕಂಠಾಃ ಸುವರ್ಚಸಃ ॥ ೩೬೮ ॥**

**ಶ್ರೀವತ್ಸಕೌಸ್ತುಭಾಭಾವಾತ್ಪೂರ್ಣಶಕ್ತ್ಯಾದ್ಯಭಾವತಃ ।**
**ವಿಲಕ್ಷಣಾಃ ಪರಂ ಸರ್ವೇಽಪ್ಯಾಕಾರೇ ಸದೃಶಾಃ ಕಿಲ ॥ ೩೬೯ ॥**

**ಜಗದ್ವ್ಯಾಪಾರವರ್ಜಂ ಚ ವಿನಾ ಶ್ರೀವತ್ಸಕೌಸ್ತುಭೌ ।**
**ಇತಿ ಸೂತ್ರೇ ಭಾಗವತೇ ಚೋಕ್ತ್ಯಾ ವಿಷ್ಣೋರ್ವಿಲಕ್ಷಣಾಃ ॥ ೩೭೦ ॥**

ವೈಕುಂಠಲೋಕವು ಮಾಯಾರಹಿತವೂ, ಲಕ್ಷ್ಮ್ಯಾತ್ಮಕವೂ ಆದುದರ ಫಲವೇನೆಂಬುದನ್ನು, ಅದು ಪರಮಮುಕ್ತರ ವಿಹಾರಸ್ಥಾನವೆಂದು ಶ್ರೀಭಾಗವತ ದಿಂದ ಸಿದ್ಧವಾಗುವುದೆಂದೂ ನಿರೂಪಿಸುತ್ತಾರೆ:—

ತತ್ರ ಅಪಿ—ಆ ವೈಕುಂಠದಲ್ಲಿಯೂ, ತೇ ಮುಕ್ತಾಃ—ಆ ಸಕಲ ಮುಕ್ತರೂ, ಹರೇಃ—ಶ್ರೀಹರಿಯ, ಅನುವ್ರತಾಃ ಏವ—ಸೇವಕರೇ (ಅನುಸರಿಸುವ ವ್ರತವುಳ್ಳವರೇ), ಕಿಲ—ಪ್ರಸಿದ್ಧವು ; ಸರ್ವೇ—ಎಲ್ಲರೂ, ಚತುರ್ಬಾಹವಶ್ಚ—ಚತುರ್ಭುಜ ಗಳುಳ್ಳವರೇ ; ಶ್ಯಾಮಕೋಮಲಮೂರ್ತಯಃ—ಶ್ಯಾಮವರ್ಣದ ಕೋಮಲದೇಹ ವುಳ್ಳವರು ; ಮಣಿಪ್ರವೇಕಾಭರಣಾಃ—ಉತ್ತಮರತ್ನಾಭರಣಗಳಿಂದ ಅಲಂಕೃತರು; ನಿಷ್ಕಕಂಠಾಃ—ಸುವರ್ಣಮಾಲೆಗಳನ್ನು ಕಂಠದಲ್ಲಿ ಧರಿಸಿದವರು ; ಸುವರ್ಚಸಃ—ಮಹಾಕಾಂತಿಮಂತರು ; (ಈ ಸಾರೂಪ್ಯಮುಕ್ತರೆಲ್ಲರೂ) ಶ್ರೀವತ್ಸಕೌಸ್ತುಭಾ ಭಾವಾತ್—ಶ್ರೀವತ್ಸ ಮತ್ತು ಕೌಸ್ತುಭಗಳ ಅಭಾವದಿಂದಲೂ, ಪೂರ್ಣಶಕ್ತ್ಯಾದ್ಯ ಭಾವತಃ – (ಶ್ರೀಹರಿಯಂತೆ) ಪೂರ್ಣಜ್ಞಾನಾದಿಶಕ್ತಿಗಳಿಲ್ಲದವರಾದ್ದರಿಂದಲೂ,

---

ಆಗಿರುವರು ; ಸಕಲರೂ ಚತುರ್ಭುಜಗಳುಳ್ಳವರು ; ಶ್ಯಾಮವರ್ಣದ ಕೋಮಲ ಮೂರ್ತಿಗಳು ; ಶ್ರೇಷ್ಠ ರತ್ನನಿರ್ಮಿತ ಆಭರಣಗಳುಳ್ಳವರು : ಕಂಠದಲ್ಲಿ ಸುವರ್ಣ ಮಾಲೆಗಳನ್ನು ಧರಿಸಿ, ಮಹಾಕಾಂತಿಮಂತರಾಗಿರುವರು ; ಅವರಲ್ಲಿ ಯಾರಿಗೂ ಶ್ರೀಹರಿಗೆ ಮಾತ್ರ ಇರುವ, ಶ್ರೀವತ್ಸಕೌಸ್ತುಭಗಳಿರುವುದಿಲ್ಲ ; ಪರಿಪೂರ್ಣ ವಿಜ್ಞಾನಾದಿ ಶಕ್ತಿರಹಿತರಾಗಿರುವರು ; ಎಲ್ಲರೂ ಶ್ರೀಹರಿಯಿಂದ ವಿಲಕ್ಷಣರೇ ; ಆದರೂ ಆಕಾರದಲ್ಲಿ (ರೂಪದಲ್ಲಿ) ಮಾತ್ರ ಸದೃಶರಾಗಿರುವರು (ಎಲ್ಲರೂ ಸಾರೂಪ್ಯ ಮುಕ್ತರೇ) ; ಜಗತ್ಸೃಷ್ಟ್ಯಾದಿ ಸಾಮರ್ಥ್ಯ ರಹಿತರೂ, ಶ್ರೀವತ್ಸಕೌಸ್ತುಭ ರಹಿತರೂ ಎಂದು ಬ್ರಹ್ಮಸೂತ್ರಗಳಲ್ಲಿ ಮತ್ತು ಭಾಗವತದಲ್ಲಿ ಸ್ಪಷ್ಟೋಕ್ತಿಗಳಿವೆ ;

*

ಪರಂ – ಅತಿಶಯವಾಗಿ, ವಿಲಕ್ಷಣಾಃ – ಶ್ರೀಹರಿಯಿಂದ ಅತ್ಯಂತ ವಿಲಕ್ಷಣರು (ಶ್ರೀಹರಿಯ ಲಕ್ಷಣರಹಿತರು), ಸರ್ವೇಽಪಿ – ಎಲ್ಲರೂ, ಆಕಾರೇ – ರೂಪದಲ್ಲಿ, ಸದೃಶಾಃ ಕಿಲ – ಸದೃಶರಾಗಿರುವುದೂ ಸಿದ್ಧವೇ; ಜಗದ್ವ್ಯಾಪಾರವರ್ಜಂ– ಜಗತ್ಸೃಷ್ಟ್ಯಾದಿಕ್ರಿಯೆಗಳಿಲ್ಲದ, ಚ – ಹಾಗೂ, ಶ್ರೀವತ್ಸಕೌಸ್ತುಭೌ ವಿನಾ– ಶ್ರೀವತ್ಸಕೌಸ್ತುಭಗಳಿಲ್ಲದೆಯೂ, ಇತಿ–(ಇರುವರೆಂದು) ಎಂದು, ಸೂತ್ರೇ– ('ಜಗದ್ವ್ಯಾಪಾರವರ್ಜಂ' ಎಂಬ) ಬ್ರಹ್ಮಸೂತ್ರದಲ್ಲಿಯೂ, ಭಾಗವತೇ ಚ– ('ನ ವರ್ತತೇ ಯತ್ರ....' ಇತ್ಯಾದಿ [1]) ಭಾಗವತ ಶ್ಲೋಕಭಾಗಗಳಲ್ಲಿಯೂ, ಉಕ್ತ್ಯಾ–(ಇರುವ) ವಾಕ್ಯಗಳಿಂದ, ವಿಷ್ಣೋಃ–ವಿಷ್ಣುವಿನಿಂದ, ವಿಲಕ್ಷಣಾಃ– ಮುಕ್ತರು ವಿಲಕ್ಷಣರು (ಅತ್ಯಂತ ಭಿನ್ನಧರ್ಮಗಳುಳ್ಳವರು).

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ।**
**ಇತಿ ಗೀತಾಸು ಯೇ ಪ್ರೋಕ್ತಾಸ್ತ ಏತೇ ಯೋಗಿನಃ ಕಿಲ ॥ ೩೭೦ ॥**

ಹೀಗೆ ಭಾಗವತ ಸಮಾಖ್ಯೆಯಿಂದಲೂ, ಶ್ರೀವತ್ಸಕೌಸ್ತುಭರಹಿತರಾಗಿ ಷೋಡಶ (ಪ್ರಾಕೃತ) ಕಲಾರಹಿತರೂ ಆಗಿ, ಮುಕ್ತಸ್ವರೂಪವನ್ನು ನಿರೂಪಿಸುವ

---

ಹೀಗೆ ವೈಕುಂಠದಲ್ಲಿರುವ ಮುಕ್ತರು ಸರೂಪರಾದರೂ ಶ್ರೀಹರಿಯಿಂದ ವಿಲಕ್ಷಣ ರಾಗಿರುವರು (೩೬೭–೩೭೦). ಗೀತೆಯಲ್ಲಿ ಸಹ ವೈಕುಂಠದಲ್ಲಿರುವ ಮುಕ್ತರು,

---

[1] 'ನ ವರ್ತತೇ ಯತ್ರ ರಜಸ್ತಮಸ್ತಯೋಃ ಸತ್ವಂ ಚ ಮಿಶ್ರಂ ನ ಚ ಕಾಲ- ವಿಕ್ರಮಃ । ನ ಯತ್ರ ಮಾಯಾ ಕಿಮುತಾ ಪರೇ ಹರೇರನುವ್ರತಾ ಯತ್ರ ಸುರಾ- ಸುರಾರ್ಚಿತಾಃ । ಶ್ಯಾಮಾವದಾತಾಃ ಶತಪತ್ರ ಲೋಚನಾಃ ಪಿಶಂಗವಸ್ತ್ರಾಃ ಸುರುಚಃ ಸುಪೇಶಸಃ । ಸರ್ವೇ ಚತುರ್ಬಾಹವ ಉನ್ಮಿಷನ್ಮಣಿ ಪ್ರವೇಕನಿಷ್ಕಾಭರಣಾಃ ಸುವರ್ಚಸಃ । ಪ್ರವಾಲ ವೈಡೂರ್ಯಮೃಣಾಲವರ್ಚಸಾಂ ಪರಿಸ್ಫುರತ್ಕುಂಡಲ ಮೌಲಿಮಾಲಿನಾಂ । ಭ್ರಾಜಿಷ್ಣುಭಿರ್ಯಃ ಪರಿತೋ ವಿರಾಜತೇ ಲಸದ್ವಿಮಾನಾ ವಲಿಭಿರ್ಮಹಾತ್ಮನಾಂ । ವಿದ್ಯೋತ ಮಾನಪ್ರಮದೋತ್ತಮಾಭಿಃ ಸುವಿದ್ಯುದಭ್ರಾವಲಿಭಿರ್ಯಥಾ ನಭಃ । ಶ್ರೀ ಯತ್ರ ರೂಪಿಣ್ಯು ರುಗಾಯ ಪಾದಯೋಃ ಕರೋತಿ ಮಾನಂ ಬಹುಧಾ ವಿಭೂತಿಭಿಃ॥' ಎಂಬ ಭಾಗವತ ಶ್ಲೋಕಾರ್ಥಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ; ಈ ಶ್ಲೋಕಾರ್ಥಗಳಿಂದ, ಭಾಗವತ ಶ್ಲೋಕಾರ್ಥಗಳೂ, ಸಾಮಾನ್ಯವಾಗಿ ತಿಳಿಯಬಹುದಾಗಿದೆ; ಆದ್ದರಿಂದ ಇವುಗಳ ಅರ್ಥ ವನ್ನು ಪ್ರತ್ಯೇಕವಾಗಿ ಕೊಟ್ಟಿರುವುದಿಲ್ಲ.

ಜಗತ್ಸೃಷ್ಟ್ಯಾದಿ ವ್ಯಾಪಾರಶೂನ್ಯತ್ವವನ್ನು ಹೇಳುವ ಸೂತ್ರದಿಂದಲೂ ಹೇಳಿ, ಜೀವನ್ಮುಕ್ತಿದಶಾದಲ್ಲಿರುವ ಶುಕವಾಮದೇವಾದಿಗಳಿಗೂ, ಸಾಧಾರಣವಲ್ಲದ, ಗೀತೋಕ್ತಸಾರೂಪ್ಯ ಮುಕ್ತಿಯನ್ನು ನಿರೂಪಿಸುತ್ತಾರೆ :—

ಇದಂ ಜ್ಞಾನಂ-ಈ ಗೀತೋಕ್ತಜ್ಞಾನವನ್ನು (ಶ್ರೀಹರಿಯೇ ಪುರುಷೋತ್ತಮನೆಂಬ ಜ್ಞಾನವನ್ನು), ಉಪಾಶ್ರಿತ್ಯ—ಆಶ್ರಯಿಸಿ, ಮಮ—ನನ್ನ (ಶ್ರೀಕೃಷ್ಣನ), ಸಾಧರ್ಮ್ಯಂ—ಸಮಾನಧರ್ಮವನ್ನು (ಸರ್ವಧರ್ಮಸಾಮ್ಯವನ್ನಲ್ಲ), ಆಗತಾಃ—ಹೊಂದಿದವರಾಗಿ (ಆ ಸಮಾನ ಧರ್ಮಗಳು ಯಾವುದೆಂದರೆ), ಸರ್ಗೇ ಅಪಿ—ಸೃಷ್ಟಿಕಾಲದಲ್ಲಿಯೂ (ಪ್ರಲಯಾನಂತರ ಜಗತ್ಸೃಷ್ಟಿಕಾಲದಲ್ಲಿ ಸಹ), ನ ಉಪಜಾಯಂತೇ-ಹುಟ್ಟುವುದಿಲ್ಲ(ಭೌತಿಕದೇಹ ಸಂಬಂಧವನ್ನು ಹೊಂದುವುದಿಲ್ಲ), ಪ್ರಲಯೇ—ಪ್ರಲಯದಲ್ಲಿ, ನ ವ್ಯಥಂತಿ ಚ — ನಷ್ಟರಾಗುವುದಿಲ್ಲ (ಮರಣಾದಿ ದುಃಖವನ್ನು ಹೊಂದುವುದಿಲ್ಲ) (ಜನನ ಮರಣರಹಿತನಾಗುತ್ತಾನೆ ಮಾತ್ರ) ; ಇತಿ-ಹೀಗೆಂದು, ಗೀತಾಸು-ಶ್ರೀಭಗವದ್ಗೀತೆಯಲ್ಲಿ, ಯೇ-ಯಾರು, ಪ್ರೋಕ್ತಾಃ—ಹೇಳಲ್ಪಟ್ಟಿರುವರೋ, ಏತೇ—(ಭಾಗವತೋಕ್ತರಾದ) ಇವರೇ, ಯೋಗಿನಃ ಕಿಲ—ಮುಕ್ತಜ್ಞಾನಿಗಳೆಂಬುದು ಸ್ಪಷ್ಟವಿದೆ.

**ಏವಂ ಚ ಜನನಾಭಾವಾನ್ಮರಣಾಭಾವತಸ್ತಥಾ ।**
**ಜಡದೇಹಾದ್ಯಭಾವಾಚ್ಚ ದುಃಖಾಭಾವಾಚ್ಚ ಸರ್ವದಾ ॥ ೩೭೨ ॥**

---

ಜೀವನ್ಮುಕ್ತ ದಶಾದಲ್ಲಿರುವ ಶುಕ ವಾಮದೇವಾದಿ ಜ್ಞಾನಿಗಳಿಗೂ ಸಾಧಾರಣವಲ್ಲದ ಧರ್ಮಗಳುಳ್ಳವರೆಂದು ನಿರೂಪಿಸಲಾಗಿದೆ; ಗೀತೋಕ್ತಜ್ಞಾನವನ್ನು ಆಶ್ರಯಿಸಿ, ನನ್ನ (ಶ್ರೀಕೃಷ್ಣನ) ಸಮಾನಧರ್ಮವುಳ್ಳವರಾಗುವರು ; ಜನನ ಮರಣ ರಹಿತರೆಂಬುದೇ ಈ ಸಮಾನ ಧರ್ಮವು ; ಸೃಷ್ಟಿಕಾಲದಲ್ಲಿ ಹುಟ್ಟುವುದಿಲ್ಲ; ಪ್ರಲಯದಲ್ಲಿ ಮೃತರಾಗುವುದಿಲ್ಲ; ಈ ಸದೃಶ ಧರ್ಮವುಳ್ಳವರೇ ಮುಕ್ತರು ; ಅವರೇ ವೈಕುಂಠ ನಿವಾಸಿಗಳು (೩೭೧). ಹೀಗೆ, ಜನನಾಭಾವ, ಮರಣಾಭಾವ, ಜಡ (ಪ್ರಾಕೃತ) ದೇಹಾಭಾವ, ಸರ್ವದಾ ದುಃಖಾಭಾವ, ಜ್ಞಾನಾನಂದಾತ್ಮಕ ರೂಪವುಳ್ಳ (ದೇಹವುಳ್ಳ)ವರಾಗಿರುವುದು, ನಿತ್ಯ ಸುಖಭೋಕ್ತೃತ್ವಗಳೆಂಬ ಲಕ್ಷಣಗಳು ಸಂಸಾರಿ ಜೀವರಿಂದ, ಮುಕ್ತರನ್ನು ವಿಭಕ್ತರನ್ನಾಗಿ ಮಾಡುತ್ತವೆ (ಪ್ರತ್ಯೇಕವಾಗಿ ಗುರುತಿಸುತ್ತವೆ) ; ಎಲ್ಲ ಜೀವರೂ ಬದ್ಧರು ಮತ್ತು ಮುಕ್ತರೆಂಬ

**ಜ್ಞಾನಾನಂದಮಯಾಕಾರಾ ನಿತ್ಯಂ ಚ ಸುಖಭುಕ್ತ್ವತಃ ।**
**ಮುಕ್ತಿರ್ವಿಲಕ್ಷಣಾ ಬಂಧಾಜ್ಜೀವಾಃ ಸರ್ವೇ ದ್ವಯೋಃ ಸಮಾಃ ।**
**ತ್ರಿವಿಧಾಃ ಸಂತಿ ಸಂಸಾರೇ ಶುದ್ಧಾ ಏವ ವಿಮುಕ್ತಿಗಾಃ ॥ ೩೭೩ ॥**

ಉಕ್ತ ಪ್ರಮೇಯವನ್ನೇ ಸ್ಪಷ್ಟಗೊಳಿಸುತ್ತಾರೆ :—

ಏವಂ ಚ-ಹೀಗೆ (ಸಾರಾಂಶವೇನೆಂದರೆ), ಜನನಾಭಾವಾತ್-ಜನ್ಮರಾಹಿತ್ಯದಿಂದಲೂ, ತಥಾ – ಹಾಗೂ, ಮರಣಾಭಾವತಃ – ಮರಣರಾಹಿತ್ಯದಿಂದಲೂ, ಜಡದೇಹಾದ್ಯಭಾವಾತ್ ಚ-ಜಡದೇಹ ಮೊದಲಾದ್ದರ (ಮನ ಆದಿ ಇಂದ್ರಿಯಾದಿ) ಅಭಾವದಿಂದಲೂ, ಸರ್ವದಾ–ಸದಾ (ಎಲ್ಲ ಕಾಲದಲ್ಲಿ), ದುಃಖಾಭಾವಾತ್ ಚ – ದುಃಖರಾಹಿತ್ಯದಿಂದಲೂ, ಜ್ಞಾನಾನಂದಮಯಾಕಾರಾಃ – ಜ್ಞಾನಾನಂದ ನಿರ್ಮಿತದೇಹವುಳ್ಳವರೂ (ಜ್ಞಾನಾನಂದಗಳೇ ರೂಪಗೊಂಡಿರುವ ದೇಹಾಕಾರವುಳ್ಳವರೂ), ನಿತ್ಯಂ ಚ–ನಿತ್ಯವೂ, ಸುಖಭುಕ್ತ್ವತಃ–ಸುಖಭೋಗ ಮಾಡುವುದರಿಂದಲೂ, ಮುಕ್ತಿಃ–ಮೋಕ್ಷವು, ಬಂಧಾತ್–ಬಂಧರೂಪದ ಸಂಸಾರದಿಂದ, ವಿಲಕ್ಷಣಾ–ವಿರುದ್ಧಲಕ್ಷಣವುಳ್ಳದ್ದು, ಸರ್ವೇ ಜೀವಾಃ-ಎಲ್ಲ ಜೀವರು, ದ್ವಯೋಃ–ಬಂಧಮೋಕ್ಷಗಳಲ್ಲಿ, ಸಮಾಃ–ಸಮರೇ (ಎಲ್ಲರೂ ಎರಡರಲ್ಲಿ ಒಂದನ್ನು ಉಳ್ಳವರೇ ಆಗಿರುತ್ತಾರೆ); ಸಂಸಾರೇ–ಸಂಸಾರದಲ್ಲಿ, ತ್ರಿವಿಧಾಃ–ಮುಕ್ತಿಯೋಗ್ಯ, ತಮೋಯೋಗ್ಯ, ನಿತ್ಯಸಂಸಾರಿಗಳೆಂಬ ತ್ರಿವಿಧಜೀವರೂ, ಸಂತಿ–ಇರುವರು ; ಶುದ್ಧಾಃ ಏವ–ಶುದ್ಧಸ್ವರೂಪದವರೇ, ವಿಮುಕ್ತಿಗಾಃ–ಮುಕ್ತಿಯೋಗ್ಯರೆಂಬುವರು.

**ಅಶ್ವೋ ಮಾನ್ಯೋ ಗಜೋ ಮಾನ್ಯೋ ಧೇನುರ್ಮಾನ್ಯಾ ದಿವೌಕಸಾಂ ।**
**ವೃಕ್ಷಃ ಕಲ್ಪತರುರ್ಮಾನ್ಯಃ ಸರ್ಪೋ ಮಾನ್ಯೋ ಹರೇಃ ಪ್ರಿಯಃ ॥ ೩೭೪ ॥**

---

ಎರಡು ವರ್ಗಗಳಲ್ಲಿ ಸೇರುತ್ತಾರೆ ; ಸಂಸಾರದಲ್ಲಿ ಮುಕ್ತಿಯೋಗ್ಯರು, ತಮೋಯೋಗ್ಯರು ಮತ್ತು ನಿತ್ಯ ಸಂಸಾರಿಗಳೆಂಬ ತ್ರಿವಿಧ ಜೀವರೂ ಇರುತ್ತಾರೆ ; ಅವರಲ್ಲಿ ಶುದ್ಧ ಸ್ವರೂಪರಾದವರೇ ಮುಕ್ತಿಯೋಗ್ಯರೆಂಬುವರು (೩೭೨-೩೭೩). ಸ್ವರ್ಗದಲ್ಲಿರುವ ಇಂದ್ರನ ಉಚ್ಚೈಃಶ್ರವವೆಂಬ ಅಶ್ವವು ಪೂಜ್ಯವಾಗಿದೆ ; ಹಾಗೆಯೇ ಐರಾವತವೂ ಮಾನ್ಯವೇ ಆಗಿದೆ ; ಕಲ್ಪವೃಕ್ಷವೂ ಮಾನ್ಯವೇ ಅಲ್ಲವೇ ? ಕಾಮಧೇನುವೂ ದೇವಪೂಜ್ಯವಾಗಿಯೇ ಇದೆ ; ಅಷ್ಟೇಕೆ—ಸರ್ಪಾಕಾರನಾದ ಶೇಷನೂ

ಪಶುಪಕ್ಷ್ಯಾದಿಮುಕ್ತರಿಗೆ, ಹೀನಯೋನಿತ್ವ ನಿಮಿತ್ತವೆಂಬ ಕಾರಣದಿಂದ, ವೈಕುಂಠಪುರಿಯಲ್ಲಿ, ಅವರೂ ಜ್ಞಾನಾನಂದರೂಪರೇ ಆದ್ದರಿಂದ, ಯಾವ ಹೀನತ್ವವೂ ಇರುವುದಿಲ್ಲವೆಂಬುದನ್ನು ನಿದರ್ಶನಗಳಿಂದ ಸಾಧಿಸುತ್ತಾರೆ :—

ದಿವೌಕಸಾಂ—ದೇವತೆಗಳ, ಅಶ್ವಃ–(ಸ್ವರ್ಗಸ್ಥವಾದ) ಉಚ್ಚೈಶ್ರವವೆಂಬ ಕುದುರೆಯು, ಮಾನ್ಯಃ—ಪೂಜ್ಯವು; ಗಜಃ—ಗಜವೂ (ಐರಾವತವೂ), ಮಾನ್ಯಃ—ಪೂಜ್ಯವೇ ; ಧೇನುಃ – ಕಾಮಧೇನುವೂ, ಮಾನ್ಯಾ – ಪೂಜ್ಯವು ; ವೃಕ್ಷಃ—ವೃಕ್ಷವಾದ, ಕಲ್ಪತರುಃ—ಕಲ್ಪವೃಕ್ಷವೂ, ಮಾನ್ಯಃ—ಪೂಜ್ಯವಾದುದೇ ; ಹರೇಃ—ಶ್ರೀಹರಿಗೆ, ಪ್ರಿಯಃ—ಪ್ರೀತಿಪಾತ್ರವಾದ, ಸರ್ಪಃ—ಶೇಷನೂ, ಮಾನ್ಯಃ—ಪೂಜ್ಯನೇ (ಅಲ್ಲವೇ ? ಈ ಎಲ್ಲರೂ ಸಂಸಾರದೆಶೆಯಲ್ಲಿಯೇ ಪೂಜ್ಯರಾಗಿರಲು, ಜ್ಞಾನಾನಂದ ರೂಪರಾಗಿ, ಜನನಮರಣಾದಿ ದೋಷರಹಿತರಾದ ಮುಕ್ತಪಶುವೃಕ್ಷಾದಿಗಳು ಪೂಜ್ಯರೆಂದು ಹೇಳಲೇನು ?).

**ಪಕ್ಷೀ ವಿಷ್ಣುರಥೋ ಮಾನ್ಯೋ ಲೋಕೋ ಮಾನ್ಯೋ ಹಿ ಯೋರ್ಥ್ಯತೇ ।**
**ಸ್ತ್ರಿಯಶ್ಚಾಪ್ಸರಸೋ ಮಾನ್ಯಾಃ ಶ್ವಾನಾವಪಿ ಚ ನಾಕಿನಾಂ ॥ ೩೭೫ ॥**

ಪಕ್ಷೀ – ಪಕ್ಷಿಯಾದ ಗರುಡನೂ, ವಿಷ್ಣುರಥಃ – (ಜಡರೂಪದ) ವಿಷ್ಣು ರಥವೂ, ಮಾನ್ಯಃ—ಪೂಜ್ಯವು ; ಯಃ—ಯಾವುದು, ಅರ್ಥ್ಯತೇ—ಪ್ರಾರ್ಥಿಸಲ್ಪಡುವುದೋ, ಲೋಕಃ—ಆ ಲೋಕವು (ಅಮರಾವತಿಲೋಕವು), ಮಾನ್ಯಃ—ಮಾನ್ಯವೇ (ಆಗಿದೆ); ನಾಕಿನಾಂ—ಸ್ವರ್ಗವಾಸಿಗಳಿಗೆ (ದೇವತೆಗಳಿಗೆ), ಶ್ವಾನೌಅಪಿ—ಶ್ವಾನ (ನಾಯಿ)ಗಳೂ, (ಮಾನ್ಯೌ—ಮಾನ್ಯಗಳೇ) (ಪೂಜಾರ್ಹವಾದುವೇ) ; ಸ್ತ್ರಿಯಶ್ಚ—ಸ್ತ್ರೀಯರಾದರೂ, ಅಪ್ಸರಸಃ—ಅಪ್ಸರೆಯರು (ದೇವಜಾತಿಯ ವೇಶ್ಯೆಯರು), ಮಾನ್ಯಾಃ—ಮಾನ್ಯರೇ (ಆಗಿರುವರು).

---

ಶ್ರೀಹರಿಗೆ ಅತಿಪ್ರಿಯನು ; ಆತನು ಸಹ ದೇವಪೂಜ್ಯನೇ ! (೩೭೪). ಪಕ್ಷಿಯಾದ ಗರುಡನೂ, ವಿಷ್ಣುರಥವೂ, ಯಜ್ಞಾದಿಗಳನ್ನಾಚರಿಸಿ, ಫಲತ್ವೇನ ಪ್ರಾರ್ಥಿಸಿ ಕೊಳ್ಳುವ ಅಮರಾವತಿ ಲೋಕವು (ಸ್ವರ್ಗಲೋಕವೂ) ಮಾನ್ಯಗಳೇ ಆಗಿವೆ ; ದೇವವೇಶ್ಯೆಯರಾದ ಅಪ್ಸರೆಯರು ಮಾನ್ಯರೇ ಆಗಿರುವರು ; ದೇವಲೋಕ ವಾಸಿಗಳಿಗೆ ಶ್ವಾನಗಳು (ಎರಡೂ) ದೇವತೆಗಳಂತೆ ಪೂಜ್ಯವೇ ಆಗಿವೆ (೩೭೫).

**ಮಾನ್ಯೌ ಕಿಲ ಶ್ಯಾಮನಾಮಾ ಶಬಲಾಖ್ಯಶ್ಚ ಯಃ ಶ್ರುತಃ ।**
**ಭೂಲೋಕೇ ಸ್ಥಿತಪಶ್ವಾದೇಃ ಸ್ವರ್ಗಲೋಕೇ ಸ್ಥಿತೇ ಯದಾ ॥೩೭೬॥**

ಶ್ಯಾಮನಾಮಾ–ಶ್ಯಾಮ ಎಂಬ ಹೆಸರುಳ್ಳ, ಶಬಲಾಖ್ಯಶ್ಚ–ಶಬಲನಾಮವುಳ್ಳ, ಯಃ–ಯಾವ ಶ್ವಾನದ್ವಯವು, ಶ್ರುತಃ–ಶ್ರುತಿಯಲ್ಲಿ ('ಯೌತೇ ಶ್ವಾನೌ ಯಮರಕ್ಷಿತಾರೌ ಚತುರಕ್ಷೌ ಪಕ್ಷಿರಕ್ಷೀ ನೃಚಕ್ಷಸೌ', ಎಂಬ ಶ್ರುತಿಯಲ್ಲಿ ಉಕ್ತವಾದವು), ಮಾನ್ಯೌ ಕಿಲ–ಮಾನ್ಯಗಳಷ್ಟೆ; ಭೂಲೋಕೇ ಸ್ಥಿತ ಪಶ್ವಾದೇಃ–ಭೂಲೋಕದಲ್ಲಿರುವ ಪಶುಪಕ್ಷಿವೃಕ್ಷಾದಿಗಳಿಗೆ, ಯದಾ–ಯಾವಾಗ, ಸ್ವರ್ಗಲೋಕೇ ಸ್ಥಿತೇ–ಸ್ವರ್ಗಲೋಕದಲ್ಲಿರುವಲ್ಲಿ (ಪೂಜ್ಯತೆಯುಂಟಲ್ಲವೇ ?).

**ಪೂಜ್ಯತಾ ಪ್ರಾಕೃತೇಽಪ್ಯರ್ಥೇ ತದಾ ವಿಷ್ಣೋಸ್ತ್ರಿಧಾಮಸು ।**
**ಸ್ಥಿತಾನಾಂ ಶುದ್ಧಸತ್ವಾನಾಂ ಜ್ಞಾನಾನಂದಸ್ವರೂಪಿಣಾಂ ।**
**ಶ್ರುತಿಸ್ಮೃತೀತಿಹಾಸಾದ್ಯೈಃ ಸ್ತುತಾನಾಂ ಕಿಂ ನ ಪೂಜ್ಯತಾ ॥೩೭೭॥**

**ಉತ್ತರೋತ್ತರವಸ್ತೂನಾಮುತ್ತಮೋತ್ತಮತೋಚಿತಾ ।**
**ಮುಕುಂದನಗರೀಸ್ಥಾನಾಂ ಮುಕ್ತತ್ವೈವ ಗುಣೋಚಿತಾ ॥ ೩೭೮ ॥**

ಪ್ರಾಕೃತೇ–ಹೀನಪ್ರಕೃತ್ಯಂಶ ನಿರ್ಮಿತಗಳಾದ, ಅರ್ಥೇಽಪಿ–ಶ್ವಾನಗಳೆಂಬ ವಸ್ತುಗಳಲ್ಲಿ (ಯದಾ ಸ್ವರ್ಗಲೋಕೇಸ್ಥಿತೇ–ಸ್ವರ್ಗಲೋಕದಲ್ಲಿರಲು), ಪೂಜ್ಯತಾ–ಪೂಜ್ಯ ಭಾವನೆಯು ಇರುತ್ತಿರಲು,[1] ತದಾ–ಆಗ, ವಿಷ್ಣೋಃ–ಶ್ರೀವಿಷ್ಣುವಿನ,

---

ಶ್ಯಾಮ ಮತ್ತು ಶಬಲಗಳೆಂಬ ಎರಡು ಶ್ವಾನಗಳು ಶ್ರುತ್ಯುಕ್ತಗಳೂ ಆಗಿವೆ; ವೈಶ್ವದೇವ ಕರ್ಮದಲ್ಲಿ ದೇವಪಂಗ್ತಿಯಲ್ಲಿ ಮಾನ್ಯವಾಗುತ್ತವೆ; ಹೀಗೆ, ಭೂಲೋಕದಲ್ಲಿರುವ ಪಶ್ವಾದಿ ಜಾತಿಗೆ ಸೇರಿದ ಪ್ರಾಣಿಗಳೂ, ಸ್ವರ್ಗಲೋಕದಲ್ಲಿರಲು ಪೂಜ್ಯತೆಯುಂಟಾಗುವುದು ಕಂಡಿದೆ; (೩೭೬). ಹೀನ ಪ್ರಕೃತ್ಯಂಶಗಳಿಂದ ರಚಿತವಾದ ದೇಹಗಳುಳ್ಳ ಶ್ವಾನಾದಿಗಳು ಸ್ವರ್ಗಾದಿ ಉತ್ತಮ ಲೋಕದಲ್ಲಿದ್ದಾಗ

[1] ವೈಶ್ವದೇವ ಕರ್ಮದಲ್ಲಿ ಅದ್ಯಾಪಿ, ಶ್ಯಾಮ, ಶಬಲಗಳೆಂಬ ಶ್ವಾನಗಳೂ ಗೃಹಸ್ಥರಿಂದ, ದೇವಪಂಗ್ತಿಯಲ್ಲಿ ಪೂಜಿಸಲ್ಪಡುತ್ತಿರಲು, ಸ್ವರ್ಗದಲ್ಲಿರುವ ತಜ್ಜಾತೀಯ ಚೇತನರು ಪೂಜ್ಯರೆಂದು ಹೇಳಬೇಕಿಲ್ಲವಷ್ಟೆ; ವೈಕುಂಠಾದಿ ತ್ರಿಧಾಮಗಳಲ್ಲಿರುವ ಮುಕ್ತರು ಸುತರಾಂ ಪೂಜ್ಯರೆಂಬುದು ಸಿದ್ಧವೇ ಆಗುತ್ತವೆ.

ತ್ರಿಧಾಮಸು-(ವೈಕುಂಠ ಮೊದಲಾದ) ತ್ರಿಧಾಮಗಳಲ್ಲಿ, ಸ್ಥಿತಾನಾಂ-ಇರುವ, ಜ್ಞಾನಾನಂದಸ್ವರೂಪಿಣಾಂ – ಜ್ಞಾನಾನಂದಸ್ವರೂಪರಾದ, ಶುದ್ಧಸತ್ವಾನಾಂ – ಶುದ್ಧಸ್ವರೂಪವುಳ್ಳ, ಶ್ರುತಿಸ್ಮೃತೀಹಾಸಾದ್ಯೈಃ-ಶ್ರುತಿಸ್ಮೃತಿ ಇತಿಹಾಸಾದಿಗಳಿಂದ, ಸ್ತುತಾನಾಂ-ಸ್ತುತಿಸಲ್ಪಡುವ ಮುಕ್ತರಿಗೆ, ಪೂಜ್ಯತಾ-ಪೂಜ್ಯತೆಯು, ನ ಕಿಂ-ಇಲ್ಲವೇನು ? ; ಉತ್ತರೋತ್ತರವಸ್ತೂನಾಂ-ಮೇಲೆ ಮೇಲಿನ ವಸ್ತುಗಳಿಗೆ (ಮನುಷ್ಯದೇವಾದಿಗಳಿಗೆ), ಉತ್ತಮೋತ್ತಮತಾ-ಉತ್ತಮೋತ್ತಮತ್ವವು (ಮೇಲೆ ಮೇಲಿನ ಲೋಕದಲ್ಲಿರುವವರಿಗೆ), ಉಚಿತಾ – ಯೋಗ್ಯವೇ (ಆಗುತ್ತದೆ) ; ಮುಕುಂದನಗರೀಸ್ಥಾನಾಂ-ವೈಕುಂಠನಗರಿಯಲ್ಲಿರುವವರಿಗೆ, ಮುಕ್ತತಾ ಏವ-ಮುಕ್ತತ್ವವೇ, ಗುಣಾ ಉಚಿತಾ-ಯೋಗ್ಯವಾದ (ಪೂಜ್ಯತೆಗೆ ಕಾರಣವಾಗುವ) ಗುಣವು (ಆಗಿದೆ).

**ದಿವ್ಯಾದಿವ್ಯತಟಾಕೇಷು ದಿವ್ಯಾದಿವ್ಯವನೇಷು ಚ ।**
**ದಿವ್ಯಾದಿವ್ಯನಗರ್ಯಾಂ ಚ ದಿವ್ಯಜ್ಞಾನಸುಖಾತ್ಮಕಾಃ ॥ ೩೭೯ ॥**
**ಮತ್ಸ್ಯಾದ್ಯಾ ಮೃಗಪಕ್ಷ್ಯಾದ್ಯಾ ಹಸ್ತ್ಯಶ್ವರಥಪೂರ್ವಕಾಃ ।**
**ಅರ್ಥಾಸ್ತತ್ತದಲಂಕಾರಾ ಮತ್ಸ್ಯಕೂರ್ಮಾದಿರೂಪಿಣಃ ।**
**ವಿಷ್ಣೋರಾಕೃತಿವತ್ಸ್ವಸ್ಥಾಃ ಸಂತಿ ಚೇತ್ಸಂತು ಕಿಂ ತವ ॥ ೩೮೦ ॥**

ದಿವ್ಯಾದಿವ್ಯತಟಾಕೇಷು-ದಿವ್ಯವಾದ ಮತ್ತು ಸಾಧಾರಣಗಳಾದ ಸರೋವರಗಳಲ್ಲಿಯೂ, ಚ-ಹಾಗೂ, ದಿವ್ಯಾದಿವ್ಯವನೇಷು-ದಿವ್ಯ ಮತ್ತು ಸಾಧಾರಣವೆಂಬ

---

ಪೂಜ್ಯತೆಯು ಕಂಡಿರಲು, ಶ್ರೀವಿಷ್ಣು ತ್ರಿಧಾಮಗಳಾದ, ವೈಕುಂಠ, ಶ್ವೇತದ್ವೀಪ, ಅನಂತಾಸನಗಳಲ್ಲಿರುವ, ಶುದ್ಧಸ್ವರೂಪರಾದ ಜ್ಞಾನಾನಂದ ರೂಪರಾದವರ ಪೂಜ್ಯತೆಯು ಸಹಜವಾಗಿ ಸಿದ್ಧವಾಗುತ್ತದೆ; ಈ ಲೋಕದ ಪ್ರಜೆಗಳು ಶ್ರುತಿ, ಸ್ಮೃತಿ, ಇತಿಹಾಸಗಳಲ್ಲಿ ಸಹ ಸ್ತುತ್ಯರಾಗಿರುವರು ; ಅವರು ಮಾನ್ಯರೆಂಬುದೇನೂ ಆಶ್ಚರ್ಯವಲ್ಲ ; ಪಶ್ವಾದಿಗಳಿಂದ ಮೇಲೆ ಮೇಲಿನ ಮನುಷ್ಯ ದೇವಾದಿಗಳಿಗೆ, ಮೇಲೆ ಮೇಲಿನ ಲೋಕಗಳಲ್ಲಿದ್ದರೆ, ಅಧಿಕವಾದ ಉತ್ತಮತ್ವವು ಶ್ರುತ್ಯಾದಿಗಳಿಂದ ಸಿದ್ಧವಾಗುತ್ತದೆ ; ವಿಷ್ಣುನಗರ ವಾಸಿಗಳು ಮುಕ್ತರೆಂಬ ಒಂದೇ ಕಾರಣದಿಂದ ಪೂಜಾರ್ಹರಾಗುತ್ತಾರೆ ; (೩೭೭-೩೭೮). ಸಾಮಾನ್ಯವೂ,

ವನಗಳಲ್ಲಿ (ಆಯಾ ವನಸರೋವರಗಳಲ್ಲಿ), ದಿವ್ಯಾದಿವ್ಯನಗರ್ಯಾಂ ಚ–ದಿವ್ಯಾದಿವ್ಯನಗರದಲ್ಲಿಯೂ, ದಿವ್ಯಜ್ಞಾನಸುಖಾತ್ಮಕಾಃ–ಅಲೌಕಿಕವಾದ ಜ್ಞಾನಾನಂದ ಸ್ವರೂಪರಾದ, ಮತ್ಸ್ಯಾದ್ಯಾಃ-ಮತ್ಸ್ಯ ಮೊದಲಾದವು(ಮೀನು ಮುಂತಾದುವು), ಮೃಗಪಕ್ಷ್ಯಾದ್ಯಾಃ – ಮೃಗಪಕ್ಷಿ ಮೊದಲಾದ, ಹಸ್ತ್ಯಶ್ವರಥಪೂರ್ವಕಾಃ – ಗಜ, ಅಶ್ವ, ರಥ ಮೊದಲಾದ, ತತ್ತದಲಂಕಾರಾಃ–ಆಯಾ ಅಲಂಕಾರವುಳ್ಳ (ರೂಪವುಳ್ಳ)ವಾಗಿ ಮತ್ಸ್ಯಕೂರ್ಮಾದಿರೂಪಿಣಃ – ಮತ್ಸ್ಯಕೂರ್ಮಾದಿ ಅವತಾರಗಳುಳ್ಳ, ವಿಷ್ಣೋಃ-ಶ್ರೀವಿಷ್ಣುವಿನ, ಆಕೃತಿವತ್ಸ್ವಸ್ಥಾಃ-ಆಕಾರಸದೃಶದಿಂದಿರುವ, ಅರ್ಥಾಃ – ಪದಾರ್ಥಗಳು, ಸಂತಿ ಚೇತ್–(ವೈಕುಂಠಾದಿಲೋಕದಲ್ಲಿ) ಇರುವುದಾದರೆ, ಸಂತು–ಇರಲಿ, ಕಿಂ ತವ–ನಿನಗೇನು (ಬಾಧಕ ?).

**ಶ್ರುತ್ಯಾ ಸ್ಮೃತ್ಯಾ ಚ ಯಾ ವರ್ಣ್ಯಾ ಸಾ ಶೂನ್ಯಾಪೂರ್ನ ವೈಷ್ಣವೀ**

॥ ೩೮೦ ॥

ಶ್ರುತ್ಯಾ-ಶ್ರುತಿಯಿಂದಲೂ, ಸ್ಮೃತ್ಯಾ-ಸ್ಮೃತಿಗಳಿಂದಲೂ, ಯಾ ವರ್ಣ್ಯಾ–ವರ್ಣಿತವಾದ, ಸಾ – ಆ (ಪ್ರಸಿದ್ಧ), ವೈಷ್ಣವೀ ಪೂಃ – ವಿಷ್ಣುನಗರಿಯು, ಶೂನ್ಯಾ ನ–ಶೂನ್ಯವಲ್ಲ (ಆ ನಗರಿಗೆ ಯೋಗ್ಯವಾದ ವಸ್ತುಗಳಿಂದ ಪರಿಪೂರ್ಣವೇ ಆಗಿದೆ ; ಶೂನ್ಯನಗರಿಯಾಗಲು ಅವಕಾಶವೇ ಇಲ್ಲ ; ಅಲ್ಲಿರುವ ವಸ್ತುಗಳೆಲ್ಲವೂ, ಮತ್ಸ್ಯ, ಕೂರ್ಮ, ವರಾಹ, ಶಿಂಶುಮಾರಾದಿ ಶ್ರೀಹರಿಯ ಜಗತ್ಪೂಜ್ಯ ಚಿದಾನಂದಮಯ ದಿವ್ಯಾಕಾರಗಳಂತೆ ಜ್ಞಾನಾನಂದಮಯಗಳಾಗಿರುವುದರಿಂದ ಯಾವ ಹಾನಿಯೂ ಇಲ್ಲವಷ್ಟೆ).

---

ದಿವ್ಯವೂ ಆದ ಬಹುಸರೋವರಗಳಲ್ಲಿಯೂ, ಸಾಮಾನ್ಯವೂ ವಿಲಕ್ಷಣವೂ ಆದ ವನಗಳಲ್ಲಿಯೂ, ಸಾಧಾರಣ ಮತ್ತು ವಿಶೇಷ ಸಲ್ಲಕ್ಷಣ ಯುಕ್ತಪಟ್ಟಣ ಸಮೂಹದಲ್ಲಿಯೂ, ಜ್ಞಾನಾನಂದ ಸ್ವರೂಪರಾದ, ಮೀನು ಮಕರಾದಿಗಳೂ, ಮೃಗಪಕ್ಷ್ಯಾದಿಗಳು, ಗಜ, ತುರಗ ರಥಾದಿ ವಸ್ತುಗಳು, ವಿಷ್ಣುವಿನ ಸಚ್ಚಿದಾನಂದಾತ್ಮಕಗಳಾದ ಮತ್ಸ್ಯ ಕೂರ್ಮಾದಿ ಆಕಾರ ಸದೃಶಗಳಾದ ವಸ್ತುಗಳು ವೈಕುಂಠಾದಿ ಲೋಕಗಳಲ್ಲಿರುತ್ತವೆಂದು, ಶ್ರುತ್ಯಾದಿಗಳು ವರ್ಣಿಸುತ್ತವೆ ; ಅಂಥ ವಸ್ತುಗಳು ಅಲ್ಲಿರಲಿ ; ಅದರಿಂದ ಇಲ್ಲವೆಂದು ಸಾಧಿಸಬಯಸುವನಿಗೆ ಏನು ಬಾಧಕ ? (ಏನೂ ಇಲ್ಲವಷ್ಟೆ) (೩೭೯–೩೮೦). ಹೀಗಿರುತ್ತೆಂದು, ಶ್ರುತಿಯಿಂದಲೂ, ಸ್ಮೃತಿಗಳಿಂದಲೂ, ವೈಕುಂಠನಗರಿಯು, ಬಹುಪರಿಯಿಂದ ವರ್ಣಿತವಾಗಿರುತ್ತದೆ;

**ಪೂರ್ಣಾ ಪುರೋಚಿತೈಃ ಸತ್ತ್ವೈಃ ಸುಪುರತ್ವಾದ್ಧರೇಃ ಪುರೀ ।**
**ಯಥಾ ಸಂಪ್ರತಿಪನ್ನೇತಿ ಕಿಂ ನ ಸ್ಯಾದನುಮಾ ಮಮ ॥ ೩೮೨ ॥**

ಉಕ್ತಾರ್ಥದಲ್ಲಿ ಅನುಮಾನವನ್ನು ರಚಿಸುತ್ತಾರೆ :—

ಹರೇಃ–ಶ್ರೀಹರಿಯ, ಪುರೀ–ನಗರಿಯು (ವೈಕುಂಠವು), ಪುರೋಚಿತೈಃ–ನಗರಿಗೆ ಯೋಗ್ಯವಾದ, ಸತ್ತ್ವೈಃ–ವಸ್ತುಗಳಿಂದ (ಚೇತನರಿಂದ), ಪೂರ್ಣಾ–ಪೂರ್ಣವಾದುದು ; ಸುಪುರತ್ವಾತ್–ಮಂಗಳಪುರವೇ ಆದ್ದರಿಂದ, ಯಥಾ–ಹೇಗೆ, ಸಂಪ್ರತಿಪನ್ನಾ–ಸರ್ವಸಮ್ಮತವಾದ ಅಮರಾವತಿಯಂತೆ, ಇತಿ–ಎಂದು, ಅನುಮಾ–ಅನುಮಾನಪ್ರಯೋಗವು, ಮಮ–ನನ್ನಂತೆ, ಕಿಂ ನ ಸ್ಯಾತ್–ಏಕಾಗುವುದಿಲ್ಲ?

**ಸ ಸತ್ತ್ವರಾಶಿರ್ಮುಕ್ತತ್ವವ್ಯಾಕೋಪಸ್ಯ ನ ಕಾರಕಃ ।**
**ಪ್ರಕೃಷ್ಟತ್ವಾದ್ಯಥಾವಿಷ್ಣೋರ್ಮತ್ಸ್ಯಾದ್ಯಾ ವ್ಯಕ್ತಿರಾಶಯಃ ॥೩೮೩॥**

ಸಃ–ಆ (ವೈಕುಂಠಪುರಿಯಲ್ಲಿರುವ), ಸತ್ತ್ವರಾಶಿಃ – ಪ್ರಾಣಿಸಮೂಹವು, ಮುಕ್ತತ್ವವ್ಯಾಕೋಪಸ್ಯ–ಮುಕ್ತತ್ವ ವಿರೋಧದ, ಕಾರಕಃ–ಕಾರಣವು, ನ–ಆಗುವುದಿಲ್ಲ ; ಯಥಾ–ಹೇಗೆಂದರೆ, ವಿಷ್ಣೋಃ–ಶ್ರೀವಿಷ್ಣುವಿನ, ಮತ್ಸ್ಯಾದ್ಯಾಃ–ಮತ್ಸ್ಯ ಮೊದಲಾದ, ವ್ಯಕ್ತಿರಾಶಯಃ–ಅವತಾರ ಸಮೂಹಗಳಂತೆ, ಪ್ರಕೃಷ್ಟತ್ವಾತ್–(ವಿಶಿಷ್ಟತ್ವ – ಉತ್ತಮತ್ವ) ಪ್ರಕೃಷ್ಟತ್ವ, ಜ್ಞಾನಾನಂದಾದಿರೂಪವುಳ್ಳವಾದ್ದರಿಂದ (ಇದೂ ಅನುಮಾನರೂಪವೇ).

---

ಶ್ರೀವಿಷ್ಣು ನಗರಿಯು (ಪರಮ ಪ್ರಭುವಿನ ಪುರವು) ಶೂನ್ಯವಾಗಿರುವ ಸಂಭವವೇ ಇರುವುದಿಲ್ಲ; ಅಲ್ಲಿರಲು ಉಚಿತವಾದ ವಸ್ತುಗಳಿಂದ ಪೂರ್ಣವಾಗಿ ಶೋಭಿಸುತ್ತದೆ ; ಅವೆಲ್ಲವೂ ಜಗತ್ಪೂಜ್ಯ ಶ್ರೀವಿಷ್ಣುವಿನಂತೆ ಜ್ಞಾನಾನಂದಾತ್ಮಕವೇ ಆಗಿ, ಮಾನ್ಯವೇ ಆಗಿವೆ (೩೮೧). ಶ್ರೀವಿಷ್ಣು ನಗರಿಯು ಆ ನಗರಿಗೆ ಯೋಗ್ಯವಾದ ವಸ್ತುಗಳಿಂದ ಪೂರ್ಣವಾದುದು ; ಮಂಗಲ ನಗರಿಯಾದ್ದರಿಂದ, ಅಮರಾವತಿ ನಗರಿಯಂತೆ, ಎಂಬ ಅನುಮಾನವೂ ಇದನ್ನು ಸಾಧಿಸಬಹುದಾಗಿದೆ (೩೮೨). ವೈಕುಂಠದಲ್ಲಿ ಸತ್ತ್ವಸಮೂಹವು ಅವುಗಳ ಮುಕ್ತತ್ವವನ್ನು (ಆ ಲೋಕದ ಮುಕ್ತವಾಸಾರ್ಹತ್ವವನ್ನು) ವಿರೋಧಿಸುವುದಿಲ್ಲ ; ವಿಷ್ಣುವಿನ ಮತ್ಸ್ಯಾದಿ ಅವತಾರ ಸಮೂಹವು ಪ್ರತಿಯೊಂದೂ ಉತ್ತಮತ್ವ ವಿಶಿಷ್ಟವೇ ಆಗಿರುವಂತೆ,

**ಪ್ರಕೃಷ್ಟಶ್ಚ ಸ ಸಂಸಾರದೂರತ್ವಾತ್ತದ್ವದೇವ ಹಿ ।**
**ದುಃಖಮೇವ ಹಿ ಸಂಸಾರೇ ತತಃ ಕ್ವಾನುಪಪನ್ನತಾ ।**
**ತಚ್ಚ ಮಾಯಾತ್ಯಯಸ್ಥಾನಸ್ಥತ್ವಾತ್ತದ್ವತ್ ಪ್ರಸಿದ್ಧ್ಯತಿ ॥ ೩೮೪ ॥**

ಸಃ–(ವೈಕುಂಠಸ್ಥ) ಪ್ರಾಣಿಸಮೂಹವು, ಪ್ರಕೃಷ್ಟಶ್ಚ–ಉತ್ತಮವಾದುದೇ ಸರಿ (ಏಕೆಂದರೆ); ಸಂಸಾರದೂರತ್ವಾತ್–ದುಃಖರೂಪದ ಸಂಸಾರದ ಅಭಾವ ದಿಂದ, ತದ್ವತ್ ಏವ ಹಿ–ಭಗವದವತಾರರಾಶಿಗಳಂತೆಯೇ ಸರಿ; ಸಂಸಾರೇ–ಸಂಸಾರದಲ್ಲಿ, ದುಃಖಂ ಏವ ಹಿ–ದುಃಖವೇ (ಪ್ರಧಾನವಾಗಿ) ಇರುವುದಷ್ಟೆ; ತತಃ–ಆದ್ದರಿಂದ, ಅನುಪಪನ್ನತಾ–ಯುಕ್ತಿ ವಿರುದ್ಧವಾದುದು, ಕ್ವ–ಎಲ್ಲಿದೆ? (ಸರ್ವಥಾ ಇಲ್ಲ); ತಚ್ಚ–ಸಂಸಾರದೂರತ್ವವು (ಅಭಾವವು), ಮಾಯಾತ್ಯಯ ಸ್ಥಾನಸ್ಥತ್ವಾತ್–ಮಾಯಾತ್ಯಂತಾಭಾವದ ಸ್ಥಲದಲ್ಲಿರುವುದರಿಂದ, (ಮಾಯಾ ಧ್ವಂಸಕ್ಕೆ ಮುಖ್ಯ ಹೇತುವಾದ ಲಿಂಗಭಂಗಕ್ಕೆ ಸಾಧನವಾದ ವಿರಜಾನದಿಯಿಂದ ವೈಕುಂಠವು ಸುತ್ತುವರಿಯಲ್ಪಟ್ಟಿರುವುದರಿಂದ), ತದ್ವತ್–(ವೈಕುಂಠದಲ್ಲಿರುವ) ಭಗವದ್ರೂಪದಂತೆ (ಇತ್ಯಾದಿ ಅನುಮಾನಗಳೂ ಉಕ್ತ ಪ್ರಮೇಯಸಾಧಕ ವಾಗುತ್ತವೆ).

**ಭಿನ್ನಾ ಮಿಥಃ ಪರೇಶಾಚ್ಚ ಮುಕ್ತಾ ವಿಸದೃಶತ್ವತಃ ।**
**ಸತ್ವರಾಶಿರ್ಯಯಾತ್ರತ್ಯೋ ಯಥಾ ವಾ ರಾಜತದ್ಭಟೌ ॥ ೩೮೫ ॥**

ಮುಕ್ತಾಃ – (ವೈಕುಂಠಸ್ಥ) ಮುಕ್ತಚೇತನರು, ಮಿಥಃ – ಪರಸ್ಪರವಾಗಿ (ಒಬ್ಬರಿಂದೊಬ್ಬರು), ಭಿನ್ನಾಃ–ಭೇದವುಳ್ಳವರು, ವಿಸದೃಶತ್ವತಃ–ಸದೃಶಾಕಾರ

---

ವೈಕುಂಠದ ಎಲ್ಲ ಪದಾರ್ಥಗಳೂ ಜ್ಞಾನಾನಂದ ರೂಪಗಳೇ ಆದ್ದರಿಂದ; ಎಂಬ ಅನುಮಾನವು ಇದನ್ನು ಸಾಧಿಸುತ್ತದೆ (೩೮೩). ಆ ಸತ್ವರಾಶಿಯೆಲ್ಲವೂ, (ಚೇತನ ಸಮೂಹವು) (ಪ್ರಾಣಿರಾಶಿಯು) ಪ್ರಕೃಷ್ಟವಾದುದೇ, ಪ್ರತಿಯೊಂದೂ (ಸ್ವಯೋಗ್ಯ) ಉತ್ತಮತ್ವವುಳ್ಳದ್ದೇ ಆಗಿದೆ; ಸಂಸಾರದ ಅಭಾವದಿಂದ ಹಾಗೆಯೇ ಸರಿ; ಭಗವದವತಾರರಾಶಿಗಳಂತೆಯೇ; ಸಂಸಾರದಲ್ಲಿ ಮಾತ್ರ ದುಃಖವು– ಆದ್ದರಿಂದ ಸರ್ವವೂ ಸುಖರೂಪವಾಗಿರಲು ಯಾವ ಯುಕ್ತಿವಿರೋಧವೂ (ಅನುಪಪನ್ನತೆಯೂ) ಇಲ್ಲ; ಅದು ವೈಕುಂಠವು ಮಾಯೆಯನ್ನು ಅತಿಕ್ರಮಿಸಿದ (ಪ್ರಕೃತಿ ಶೂನ್ಯವಾದ) ಸ್ಥಲ ವಿಶೇಷವು; ಈ ಸತ್ವರಾಶಿಯು ಅಲ್ಲಿರುವುದರಿಂದ, ಎಂಬ ಹೇತುವೇ ಇದನ್ನು ಸಾಧಿಸುತ್ತದೆ (೩೮೪). ವೈಕುಂಠಸ್ಥ ಮುಕ್ತರು,

ವಿಲ್ಲದವರಾದ್ದರಿಂದ ; ಚ–ಮತ್ತು, ಪರೇಶಾತ್–ಪರಮಾತ್ಮನಿಂದಲೂ (ಭಿನ್ನರೇ), ಅತ್ರತ್ಯಃ–ಅಲ್ಲಿರುವ, ಸತ್ವರಾಶಿಃ–ಚೇತನರಾಶಿಯು, ಯಯಾ–ಯಾವುದರಿಂದ, ರಾಜಭಟಾ–ರಾಜಭೃತ್ಯರು, ಯಥಾ–ಹೇಗೋ ಹಾಗೆ (ಭಿನ್ನರು ಮತ್ತು ಪರಮಾತ್ಮನ ಭೃತ್ಯರೇ ಸರ್ವರೂ ಆಗಿರುವರು).

**ಪ್ರಕೃಷ್ಟಸತ್ವರಾಶಿತ್ವಾದಿತ್ಯಾಹ ಸ್ಮೃತಿರೇವ ಯತ್ ।**
**ಪ್ರಕೃಷ್ಟಃ ಸತ್ವರಾಶಿಶ್ಚ ಯಸ್ಯಾಸೌ ಹಿ ತಥಾಭಿಧಃ ॥ ೩೮೬ ॥**

**ತತ್ಕುತರ್ಕಕುವಾಕ್ಯೇಭ್ಯೋ ನ ಬಿಭ್ಯತ್ಯಸುಮಾ ಇಮಾಃ ।**
**ಅತೋಽನುಮಾನಮಾಲೇಯಂ ತಾಮಲಂಕುರುತೇ ಪುರೀಂ ॥೩೮೭॥**

ಪ್ರಕೃಷ್ಟಸತ್ವರಾಶಿತ್ವಾತ್–(ವೈಕುಂಠನಗರಿಯು) ಪ್ರಕೃಷ್ಟಚೇತನ ಸಮೂಹ ವುಳ್ಳದ್ದಾದ್ದರಿಂದ, ಇತಿ–ಎಂದು, ಸ್ಮೃತಿಃ ಏವ–ಪಂಚರಾತ್ರಾದಿ ಸ್ಮೃತಿಯೇ, ಆಹ–ಹೇಳಿದೆ ; ಯತ್–ಯಾವ ಕಾರಣದಿಂದ, ಪ್ರಕೃಷ್ಟಃ–ಉತ್ತಮವೂ, ಸತ್ವರಾಶಿಶ್ಚ–ಚೇತನ ಸಮೂಹವೂ, ಯಸ್ಯ ಅಸೌ–ಯಾವುದು ಉಳ್ಳದ್ದೋ ಅದು, ತಥಾ–ಹಾಗೆ (ಪ್ರಕೃಷ್ಟಸತ್ವರಾಶಿ ಎಂಬ), ಅಭಿದಃ–ನಾಮವುಳ್ಳದ್ದು, ಹಿ–ಎಂದು ಸಿದ್ಧವೋ, ತತ್–ಆ ಕಾರಣದಿಂದ, ಕುತರ್ಕವಾಕ್ಯೇಭ್ಯಃ–ಕುತರ್ಕ

---

ಪರಸ್ಪರರಾಗಿಯೂ, ಪರಮಸ್ವಾಮಿಯಾದ ಶ್ರೀವಿಷ್ಣುವಿನಿಂದಲೂ, ಭಿನ್ನರೇ ಆಗಿರುವರು ; ಆ ಎಲ್ಲರೂ, ಸಮಾನ ರೂಪವುಳ್ಳವರಾದರೂ ವಿಸದೃಶರು–ತಾರತಮ್ಯ ಯುಕ್ತರಾಗಿರುವರು ; ಈ ಕಾರಣದಿಂದಲೇ ಹೀಗೆಂದು ಸಿದ್ಧವಾಗುತ್ತದೆ ; ರಾಜಭೃತ್ಯರಂತೆ ಎಂಬ ದೃಷ್ಟಾಂತವೇ ಇದನ್ನು ಸಾಧಿಸುತ್ತದೆ (೩೮೫). ವೈಕುಂಠವು ಪ್ರಕೃಷ್ಟ ಸತ್ವರಾಶಿಯುಳ್ಳದ್ದೆಂದು, ಪಂಚರಾತ್ರ ಸ್ಮೃತಿಯೇ ಹೇಳಿದೆ; ಉತ್ಕೃಷ್ಟವಾದ ಚೇತನ ಸಮೂಹವನ್ನು ಯಾವುದು ಉಳ್ಳದ್ದೋ ಅದೇ ಪ್ರಕೃಷ್ಟ ಸತ್ವರಾಶಿಯುಳ್ಳದ್ದೆ, ಎಂಬ ನಾಮವುಳ್ಳದ್ದು ; ಆದ್ದರಿಂದ, ಈವರೆಗೆ ನಿರೂಪಿಸಿದ ಯುಕ್ತಿಮಾಲೆಯು ಕುತರ್ಕ, ಕುವಾಕ್ಯಗಳಿಂದ ಹೆದರುವ ಕಾರಣವೇ ಇಲ್ಲ ; ಈ ಅನುಮಾನ ಮಾಲೆಯಿಂದ ಭೂಷಿತವಾದುದೇ ಪರಮಪವಿತ್ರವಾದ ವಿಷ್ಣು

ಮತ್ತು ಕುವಾಕ್ಯಗಳಿಂದ[1], ಇಮಾಃ ಅನುಮಾಃ–(ಪೂರ್ವೋಕ್ತ) ಅನುಮಾನಗಳು, ನ ಬಿಭ್ಯತಿ–ಹೆದರುವುದಿಲ್ಲ (ಈ ಕುತರ್ಕಕುವಾಕ್ಯಗಳು ಈ ಅನುಮಾನಗಳನ್ನು ನಿರಾಕರಿಸಲಾರವು); ಅತಃ–ಈ ಕಾರಣದಿಂದಲೂ, ಇಯಂ–ಈ, ಅನುಮಾನ ಮಾಲಾ – ಅನುಮಾನಗಳ ಮಾಲೆಯು (ಪುಷ್ಪಮಾಲೆಯಂತೆ ಶೋಭಿಸುವುದಾಗಿ), ತಾಂ ಪುರೀಂ–ಆ ವೈಕುಂಠಪುರಿಯನ್ನು, ಅಲಂಕುರುತೇ–ಅಲಂಕರಿಸುತ್ತದೆ.

**ಶ್ರೀರೇವ ಲೋಕರೂಪೇಣ ವಿಷ್ಣೋಸ್ತಿಷ್ಠತಿ ಸರ್ವದಾ ।**
**ಅತೋ ಹಿ ವೈಷ್ಣವಾ ಲೋಕಾ ನಿತ್ಯಾಸ್ತೇ ಚೇತನಾ ಅಪಿ ॥ ೩೮೮ ॥**

ಉಕ್ತಾರ್ಥದಲ್ಲಿ ಬೇರೆ ಪ್ರಮಾಣವಚನಗಳನ್ನು ತೋರಿಸುತ್ತಾರೆ :—

ಶ್ರೀರೇವ – ಲಕ್ಷ್ಮೀದೇವಿಯೇ, ವಿಷ್ಣೋಃ – ಶ್ರೀವಿಷ್ಣುವಿನ, ಲೋಕರೂಪೇಣ–ಲೋಕರೂಪಳಾಗಿ (ವೈಕುಂಠಾದಿ ಲೋಕಾಕಾರದಿಂದ), ಸರ್ವದಾ–ನಿತ್ಯವೂ, ತಿಷ್ಠತಿ – ಇರುತ್ತಾಳೆ (ಶ್ರೀರೇವ....ಎಂಬುದು ಸ್ಮೃತಿವಾಕ್ಯವು); ಅತಃ ಹಿ–ಆದ್ದರಿಂದಲೇ, ವೈಷ್ಣವಾ ಲೋಕಾಃ–ವಿಷ್ಣುಸಂಬಂಧಿಗಳೆಂದು ಪ್ರಸಿದ್ಧಗಳಾದ (ತ್ರಿಧಾಮಗಳು – ವೈಕುಂಠ, ಅನಂತಾಸನ, ಶ್ವೇತದ್ವೀಪಗಳು)[2],

---

ಪುರಿಯು (ವೈಕುಂಠವು) (೩೮೬–೩೮೭). 'ಶ್ರೀರೇವ ಲೋಕ ರೂಪೇಣ ವಿಷ್ಣೋಸ್ತಿಷ್ಠತಿ ಸರ್ವದಾ' ಎಂಬ ಸ್ಮೃತಿಯೂ, ಶ್ರೀದೇವಿಯೇ (ಶ್ರೀ ಲಕ್ಷ್ಮೀ ದೇವಿಯೇ) ಸದಾ ಶ್ರೀವಿಷ್ಣುಲೋಕದ ರೂಪದಿಂದಿರುತ್ತಾಳೆಂದು ಹೇಳುತ್ತದೆ; ಆದ್ದರಿಂದ ಸಹ ವಿಷ್ಣುಲೋಕಗಳೆಂದು ಪ್ರಸಿದ್ಧವಾದ, ವೈಕುಂಠ, ಅನಂತಾಸನ ಮತ್ತು ಶ್ವೇತದ್ವೀಪಗಳು ನಿತ್ಯಗಳೇ–ಚೇತನ ಸ್ವರೂಪಗಳೇ ಆಗಿವೆ (ಶ್ರೀದೇವಿಯೂ

---

[1] 'ವಿಮತಃ ಸತ್ವರಾಶಿಃ ಪ್ರಾಕೃತೋ ಭವಿತುಮರ್ಹತಿ; ಸತ್ವರಾಶಿತ್ವಾತ್, ಸಾಂಸಾರಿಕ ಸತ್ವರಾಶಿವತ್' ಎಂಬ ಕುತರ್ಕವೂ, 'ಬ್ರಹ್ಮಾತಿರಿಕ್ತಂ ಕಿಮಪಿ ನಾಸ್ತಿ' ಎಂಬ ಕುತ್ಸಿತವಾದಿ ವಾಕ್ಯವೂ, ಇಲ್ಲಿ ಪ್ರಸಕ್ತವೆಂದು ತಿಳಿಯಬೇಕು; 'ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಂ । ಜ್ಞಾನೇಷ್ವೇತೇಷು ರಾಜೇಂದ್ರ ಸರ್ವೇಷ್ವೇತದ್ವಿಶಿಷ್ಯತೇ' ಎಂಬ ಭಾರತೋಕ್ತಿಯು ಪಂಚರಾತ್ರವನ್ನು ಪ್ರಮಾಣಗಳಲ್ಲಿ ಶ್ರೇಷ್ಠವೆಂದು ಹೇಳುವುದರಿಂದ ಸಹ ಈ ಪ್ರಮಾಣಗಳನ್ನು ತ್ಯಜಿಸುವುದು ಯುಕ್ತವಾಗುವುದಿಲ್ಲ.

[2] 'ತ್ರಿಧಾಮ' ಎಂಬುದೇ ಭಗವಂತನ ಪುಣ್ಯನಾಮವಾಗಿದೆ.

ನಿತ್ಯಾಃ–ನಿತ್ಯಗಳು, ಅಪಿ–ಮತ್ತು, ತೇ–ಅವು (ಆ ಲೋಕಗಳು), ಚೇತನಾಃ–ಚೇತನಗಳೇ (ಜಡವಲ್ಲ).

**ಪಶುಪಕ್ಷ್ಯಾದಿರೂಪೇಣ ಜೀವಾ ಏವ ಪೃಥಕ್ ಸ್ಥಿತಾಃ ।**
**ಸಂಸೃತೌ ವ್ಯತ್ಯಯಸ್ತೇಷಾಂ ಮುಕ್ತೌ ತತ್ತತ್ಸ್ವರೂಪತಾ ॥ ೩೮೯ ॥**

ಪಶುಪಕ್ಷ್ಯಾದಿರೂಪೇಣ – ಪಶು, ಪಕ್ಷಿ ಇತ್ಯಾದಿರೂಪದಿಂದ, ಜೀವಾಃ ಏವ–ಜೀವ ಚೇತನರೇ, ಪೃಥಕ್‌ಸ್ಥಿತಾಃ–ಬೇರೆ ಬೇರೆಯಾಗಿರುವರು (ವೈಕುಂಠಾದಿ ಲೋಕಗಳಲ್ಲಿರುವರು); ತೇಷಾಂ – ಅವರಿಗೆ, ಸಂಸೃತೌ – ಸಂಸಾರಾವಸ್ಥೆಯಲ್ಲಿ, ವ್ಯತ್ಯಯಃ [1] –ವ್ಯತ್ಯಾಸವು; ಮುಕ್ತೌ–ಮುಕ್ತಿದಶಾದಲ್ಲಿ, ತತ್ತತ್ಸ್ವರೂಪತಾ–ಆಯಾರೂಪ (ಪಶುಪಕ್ಷ್ಯಾದಿ) ಆಕಾರದಿಂದ ಇರುವಿಕೆಯೇ (ಆಗಿರುತ್ತದೆ).

**ಇತ್ಯಾದಿ ಮಾನೈಸ್ತತ್ಪ್ರೋಕ್ತೇ ಚರ್ಚಾಯುಕ್ತಿಬುಭುತ್ಸಯಾ ।**
**ಅತೋ ಯುಕ್ತಿಯುತಂ ಶ್ರೌತಂ ಸರ್ವಂ ಮಾನ್ಯಮಿತಿ ಸ್ಥಿತಂ ॥೩೯೦॥**

ಇತ್ಯಾದಿ ಮಾನೈಃ–ಈ ಮೊದಲಾದ ಪ್ರಮಾಣವಚನಗಳಿಂದ (ಹೇಳಲಾದ ಅರ್ಥವು ಸಿದ್ಧವಾಗುತ್ತದೆ); ಚರ್ಚಾಯುಕ್ತಿ ಬುಭುತ್ಸಯಾ–ವಾದ ಮತ್ತು

---

ನಿತ್ಯಮುಕ್ತರಾದ ವ್ಯಾಪ್ತ ಚೇತನಗಳೇ ಅಲ್ಲವೇ ?) (೩೮೮). ವೈಕುಂಠಾದಿ ಲೋಕಗಳಲ್ಲಿರುವ ಮುಕ್ತ ಪಶುಪಕ್ಷ್ಯಾದಿಗಳು, ಸ್ವರೂಪದಿಂದ ಅದೇ ರೂಪಗಳುಳ್ಳವರು ; ಸಂಸಾರದಶಾದಲ್ಲಿ (ಕರ್ಮಾನುಸಾರ ಪ್ರಾಪ್ತವಾಗುವ) ಬೇರೆ ರೂಪಗಳಲ್ಲಿದ್ದರೂ ಭಿನ್ನಯೋನಿಗಳಲ್ಲಿ ದೇಹಗಳನ್ನು ಹೊಂದಿದ್ದರೂ ಮುಕ್ತಿಯಲ್ಲಿ, ಸ್ವಸ್ವರೂಪಗಳಾದ ಪಶುಪಕ್ಷ್ಯಾದಿ ರೂಪದಿಂದಲೇ ಇರುವರು(೩೮೯). ಈ ಮುಂತಾದ ಸ್ಮೃತಿವಾಕ್ಯಗಳು ಶ್ರುತ್ಯುಕ್ತ ಪ್ರಮೇಯಗಳನ್ನೇ ಯುಕ್ತಿ ಸಹಿತವಾಗಿ ಸಾಧಿಸುತ್ತವೆ; ಯುಕ್ತಿವಾದದಿಂದ ಜ್ಞಾನ ನಿಶ್ಚಯವನ್ನು ಹೊಂದುವ ಇಚ್ಛೆಯುಳ್ಳವರಿಂದ ಈ ಪ್ರಮಾಣಗಳು ಆದರದಿಂದ ಗ್ರಾಹ್ಯಗಳು ; ಶ್ರುತಿಯು ಯುಕ್ತಿಯುಕ್ತವಾಗಿ

1 ಬಾಹ್ಯ (ಸಂಸಾರದಲ್ಲಿ) ಪಶ್ವಾದಿರೂಪದಿಂದ ಮಾತ್ರ ವ್ಯತ್ಯಾಸವು; ಪಶುಪಕ್ಷ್ಯಾದಿ ಜೀವರಿಗೆ, ಸ್ವಾಭಾವಿಕವಾದ ಚಿದಾನಂದಾತ್ಮಕ ಆಯಾ ರೂಪಗಳೇ ಇಲ್ಲದಿದ್ದರೆ, ಘಟಕುಡ್ಯಾದಿ ಜಡವಸ್ತುಗಳಲ್ಲಿ, ಪಶ್ವಾದಿ (ಮಾನುಷಾದಿ) ರೂಪಗಳು ಕಾಣಬಹುದಿತ್ತು ; ಆದರೆ ಎಂದೂ ಹಾಗಿಲ್ಲ ; ಸಂಸಾರ ದೆಶೆಯಲ್ಲಿ ಪಶುವಿಗೆ, ಪಕ್ಷಿ ಮೃಗಾದಿ ರೂಪಗಳು ಬರಬಹುದು–ಆದರೆ ಘಟಾದಿ ಜಡಾಕಾರವು ಬರುವುದಿಲ್ಲ.

ಯುಕ್ತಿಗಳಿಂದ ತಿಳಿಯಲಿಚ್ಛಿಸುವುದರಿಂದ, ತತ್ಪ್ರೋಕ್ತೇ – ಆ ಪ್ರಮೇಯವು ನಿರೂಪಿಸಲ್ಪಡುತ್ತಿರಲು, ಅತಃ–ಅದರಿಂದ, ಯುಕ್ತಿಯುತಂ–ಯುಕ್ತಿಸಹಿತವಾದ, ಸರ್ವಂ–ಎಲ್ಲವೂ (ಎಲ್ಲ ಪ್ರಮೇಯವೂ), ಮಾನ್ಯಂ ಇತಿ–ಪ್ರಮಾಣಸಿದ್ಧವೇ ಎಂದು, ಸ್ಥಿತಂ–ಸ್ಥಾಪಿತವಾಗುತ್ತದೆ.

**ಸ್ಪಷ್ಟಾ ಶ್ರುತಿಶ್ಚಾರ್ಥಮೇನಂ ವಕ್ತಿ ತಚ್ಚಾತುರೀಂ ಶೃಣು ॥ ೩೯೧ ॥**

ಏನಂ–ಹೀಗೆಂಬ, ಅರ್ಥಂ – ಅರ್ಥವನ್ನು, ಸ್ಪಷ್ಟಾ ಶ್ರುತಿಃ – ಸ್ಪಷ್ಟವಾದ ಶ್ರುತಿಯು, ವಕ್ತಿ – ಹೇಳುತ್ತದೆ; ತಚ್ಚಾತುರೀಂ – ಶ್ರುತಿಚಾತುರ್ಯವನ್ನು (ನಿಪುಣತೆಯನ್ನು), ಶೃಣು–ಕೇಳು.

**ಸುರಧೇನುದ್ರುಮಾಹೀಂದ್ರವೀಂದ್ರನದ್ಯಾದಿರೂಪಿಣಃ ।**
**ಮುಕ್ತಾಶ್ಚ ಪಶುಪಕ್ಷ್ಯಾದ್ಯಾಃ ಸಂತಿ ಚೇತ್ ಕಿಂ ತತೋ ಗತಂ**
**॥ ೩೯೨ ॥**

ಶ್ರುತ್ಯರ್ಥವನ್ನು ಹೇಳಲು, ಬೇರೆ ರೀತಿಯಿಂದ, ಅದನ್ನು ಸಾಧಿಸುವ ಯುಕ್ತಿಸ್ಮೃತಾದಿಯನ್ನು ತೋರಿಸುತ್ತಾರೆ :—

ಸುರಧೇನುದ್ರುಮಾಹೀಂದ್ರವೀಂದ್ರ ನದ್ಯಾದಿರೂಪಿಣಃ – (ಹೇಗೆ – ಹಿಂದೆ ಹೇಳಿದ ನ್ಯಾಯದಂತೆ) ಕಾಮಧೇನು, ಕಲ್ಪದ್ರುಮ, ಶೇಷ, ಗರುಡ, ಸುರನದಿ (ದೇವಗಂಗೆ) ಮೊದಲಾದ ರೂಪದಿಂದ, ಸ್ವರ್ಗದಲ್ಲಿದ್ದು, ಸರ್ವಜನಪೂಜ್ಯವೂ ಆಗಿರುತ್ತವೆಯೋ (ತಥಾ–ಹಾಗೆ), ಮುಕ್ತಾಶ್ಚ–ಮುಕ್ತರಾದ, ಪಶುಪಕ್ಷ್ಯಾದ್ಯಾಃ–ಪಶುಪಕ್ಷಿಗಳೂ, ಸಂತಿ ಚೇತ್ – ಮುಕ್ತಿಯಲ್ಲಿ (ವೈಕುಂಠಾದಿಗಳಲ್ಲಿ), ಇರುವುವಾದರೆ, ತತಃ–ಅದರಿಂದ, ಕಿಂ ಗತಂ – ಏನು ನಷ್ಟವು (ಯಾವ ಹಾನಿಯೂ ಇಲ್ಲ).

---

ಹೇಳುವುದೆಲ್ಲವೂ ಮಾನ್ಯವೇ– ಅಂಗೀಕಾರ ಯೋಗ್ಯವೇ ಆದುದು (೩೯೦). ಈ ಅರ್ಥವನ್ನೇ ಶ್ರುತಿಯು ಸ್ಪಷ್ಟವಾಗಿ ಹೇಳುತ್ತದೆ; ಆ ಶ್ರುತಿ ಚಾತುರ್ಯವನ್ನು ಶ್ರವಣಮಾಡು (೩೯೧). ಕಾಮಧೇನು, ಕಲ್ಪವೃಕ್ಷ, ಶೇಷ, ಗರುಡ, ದೇವಗಂಗೆ ಮೊದಲಾದವು ಸ್ವರ್ಗಾದಿ ಲೋಕದಲ್ಲಿದ್ದು ಸರ್ವಜನ ಪೂಜ್ಯವಾಗುವಂತೆ, ಮುಕ್ತರಾದ ಪಶುಪಕ್ಷ್ಯಾದಿಗಳು ಮುಕ್ತಿಯಲ್ಲಿ ಜ್ಞಾನಾನಂದರೂಪರಾಗಿ ಇರುವರೆಂದರೆ ಏಕೆ ಸಂಶಯಗೊಳ್ಳುವಿ? ಅದರಿಂದ ಯಾವ ಹಾನಿಯೂ ಯಾರಿಗೂ ಇಲ್ಲ–ಮುಕ್ತಲೋಕಕ್ಕೂ ಯಾವ ದೋಷವೂ ತಗಲುವುದಿಲ್ಲ (೩೯೨).

**ನಿರ್ದುಃಖಾನಂದಚಿದ್ರೂಪಾ ಮುಕ್ತಾಸ್ತೇ ಚಿತ್ರಯೋನಯಃ ।**
**ಮತ್ಸ್ಯಕೂರ್ಮವರಾಹಾದ್ಯಾ ಇವೋ ನ ದೋಷಮೂರ್ತಯಃ ॥ ೩೯೩ ॥**

ಹಿಂದಿನ ಸಾಮಾನ್ಯೋಕ್ತಿಯನ್ನು ವಿಶೇಷವಾಗಿ ಅನುವಾದ ಮಾಡುತ್ತಾರೆ :—

ತೇ ಮುಕ್ತಾಃ—ಆ ಮುಕ್ತರು, ನಿರ್ದುಃಖಾನಂದ ಚಿದ್ರೂಪಾಃ—ಕೇವಲ (ದುಃಖಸ್ಪರ್ಶವಿಲ್ಲದ) ಆನಂದಜ್ಞಾನರೂಪರಾದ, ಮುಕ್ತರು, ಮತ್ಸ್ಯ ಕೂರ್ಮ ವರಾಹಾದ್ಯಾಃ ಇವ—ಮತ್ಸ್ಯ, ಕೂರ್ಮ, ವರಾಹಾದಿಗಳಂತೆ (ಆ ರೂಪಗಳುಳ್ಳವರು) (ಇರುವರಾದರೆ), ದೋಷಮೂರ್ತಯಃ ನ—ಭೂಲೋಕದ (ಅಥವಾ ಸಂಸಾರದಶಾದಲ್ಲಿರುವ) ಮತ್ಸ್ಯಾದಿಗಳಂತೆ ದೋಷಸ್ವರೂಪರು ಅಲ್ಲ (ಶುದ್ಧ ಆನಂದಜ್ಞಾನರೂಪರಾದ ಚೇತನರಾಗಿರುವರು).

**ಬ್ರಹ್ಮಲೋಕಾಪ್ತಚಂಡಾಲಾದ್ಯಶೇಷಪ್ರಾಣಿಸಾರ್ಥಪಃ ॥**
**ಇತಿ ನಾಮಾರ್ಥತತ್ವಜ್ಞಾ ಮುಕ್ತಾ ಚೇತ್ಥಂ ಪ್ರಚಕ್ಷತೇ ।**
**ಸ್ವನೀತಗರ್ದಭಶ್ವಾದಿರಿತಿ ನಾಮಾಂತರಂ ಕಿಲ ॥ ೩೯೪ ॥**

ಬ್ರಹ್ಮಲೋಕಾಪ್ತಚಂಡಾಲಾದ್ಯಶೇಷ ಪ್ರಾಣಿಸಾರ್ಥಪಃ – ಬ್ರಹ್ಮಲೋಕವನ್ನು (ವಿಷ್ಣುಲೋಕವನ್ನು) ತನ್ನ (ಶ್ರೀರಾಮಚಂದ್ರನ) ಸಹಾಯದಿಂದ

---

ಆ ಲೋಕಸ್ಥ ಮುಕ್ತರೆಲ್ಲರೂ ನಿರ್ದುಃಖಾನಂದ ಜ್ಞಾನ ಸ್ವರೂಪರು ; ವಿವಿಧ ದೇಹಗಳ ಆಕಾರದಲ್ಲಿರುವರು ; ಮತ್ಸ್ಯ, ಕೂರ್ಮ, ವರಾಹಾದಿಗಳ ರೂಪವುಳ್ಳವರೆಂಬುದರಿಂದ ಅವರಿಗೆ ಯಾವ ದೋಷವೂ ಇಲ್ಲ—ದೋಷ ಸ್ವರೂಪರು ಅಲ್ಲವೇ ಅಲ್ಲ (೩೯೩). ವಾಸುದೇವ ಸಹಸ್ರನಾಮಗಳ ಅರ್ಥತತ್ವಜ್ಞಾನಿಗಳು, ಸಾಕ್ಷಾನ್ನಾರಾಯಣನಾದ ಶ್ರೀರಾಮಚಂದ್ರನು, ಸ್ವಲೋಕಕ್ಕೆ ಹಿಂದಿರುಗುವಾಗ ತನ್ನೊಂದಿಗೆ ಗರ್ದಭ, ಶ್ವಾನ ಮೊದಲಾದ ಪ್ರಾಣಿಗಳನ್ನು, ಶ್ವೇತದ್ವೀಪಕ್ಕೆ ಹೋಗುವ ಮೊದಲು 'ಯೇಯೇ ಮೋಕ್ಷಪದೇಚ್ಛವಃ' ಎಂದು ಡಂಗುರ ಹೊಡಿಸಿ, ಕರೆದುಕೊಂಡು ಹೋದನೆಂಬ ಪ್ರಸಿದ್ಧಿಯನ್ನು, ಈ ಗರ್ದಭ (ಕತ್ತೆ), ಶ್ವಾನ (ನಾಯಿ) ಮೊದಲಾದ ನಾಮಗಳು ಮುಕ್ತರಾದ (ಜ್ಞಾನಾನಂದ ರೂಪರಾದ) ಜೀವರುಗಳ ನಾಮಾಂತರವೆಂಬುದನ್ನು ಬಲ್ಲರು; ಚಂಡಾಲಾದಿ ನಾನಾ ಜಾತಿಗಳಲ್ಲಿ ಜನ್ಮತಾಳಿದ್ದ, ಜೀವರ ನಾಮಾಕ್ರಾಂತವಾದ ಸಾಂಕೇತಿಕ ಶಬ್ದಗಳಿವು—ಆದರೆ

ಹೊಂದಿದ ಚಂಡಾಲ, ಪಶ್ವಾದಿ ಸಕಲಪ್ರಾಣಿಸಮೂಹದ ರಕ್ಷಕನಾದ ಶ್ರೀರಾಮಚಂದ್ರನು ; ಇತಿ–ಎಂಬ, ನಾಮಾರ್ಥ ತತ್ವಜ್ಞಾಃ–ವಾಸುದೇವ ಸಹಸ್ರನಾಮದ ಅರ್ಥವನ್ನು ತಿಳಿದವರು, ಮುಕ್ತೌ–ಮುಕ್ತಿಯಲ್ಲಿ, ಇತ್ಥಂ–ಈ ಪ್ರಕಾರವಾಗಿ (ನಿರ್ದುಃಖಾನಂದಸ್ವರೂಪರಾದ ಪಶುಪಕ್ಷಿ ಚಂಡಾಲಾದಿ ನಾನಾ ಜಾತಿಗಳಲ್ಲಿ ಆಕ್ರಾಂತವಾದ ನಾನಾ ನಾಮಗಳಿಂದ), ಪ್ರಚಕ್ಷತೇ – ಕರೆಯಲ್ಪಡುವವರು ; ಸ್ವರ್ನೀತಗರ್ದಭಶ್ವಾದಿಃ – ಸ್ವಶಬ್ದವಾಚ್ಯನಾದ ಶ್ರೀವಿಷ್ಣುವಿನಿಂದ (ಶ್ರೀರಾಮಚಂದ್ರನಿಂದ) ಕರೆತರಲ್ಪಟ್ಟ ಕತ್ತೆ ನಾಯಿ ಮೊದಲಾದವುಗಳು, ಇತಿ–ಎಂದು, ನಾಮಾಂತರಂ ಕಿಲ–ಆ ಚೇತನರ ನಾಮಾಂತರಗಳೆಂದು ಪ್ರಸಿದ್ಧವು (ಶ್ವೇತದ್ವೀಪವನ್ನು ಕುರಿತು ಹೊರಟ ಶ್ರೀರಾಮಚಂದ್ರನು ತನ್ನೊಂದಿಗೆ ಪಶುಪಕ್ಷ್ಯಾದಿಗಳು ಕರೆದೊಯ್ದನೆಂಬುದು ಪ್ರಸಿದ್ಧವೇ ಇದೆ).

**ವಿಷವೃಕ್ಷಫಲಾಕಾರಾ ಶರ್ಕರಾಕೃತಕೃತ್ರಿಮಾ ।**
**ಧತ್ತೇ ಕಿಂ ತಿಕ್ತತಾದೋಷಂ ಮುಕ್ತಾಸ್ತೇ ತದ್ವದೇವ ಹಿ ॥ ೩೯೫ ॥**

**ಮುಕ್ತೇರಮುಕ್ತಿತಾ ತು ಸ್ಯಾದ್ದುಃಖೇ ಸತ್ಯೇವ ನಾನ್ಯಥಾ ।**
**ದೇಹಾದಿರ್ದುಃಖಹೇತುತ್ವಾದ್ದುಃಖಮಿತ್ಯುಪಚರ್ಯತೇ ॥ ೩೯೬ ॥**

ವಿಷವೃಕ್ಷಫಲಾಕಾರಾ – ಕಹಿಯಾದ ಹಣ್ಣಿನ ವೃಕ್ಷದ ಆಕಾರವುಳ್ಳ, ಶರ್ಕರಾಕೃತಕೃತ್ರಿಮಾ–ಸಕ್ಕರೆಯಲ್ಲಿ ಮಾಡಿದ ಪ್ರತಿಮೆಯು, ತಿಕ್ತದೋಷಂ–ಕಹಿರೂಪದ ದೋಷವನ್ನು, ಧತ್ತೇ ಕಿಂ–ಹೊಂದಿರುವುದೇನು (ಇಲ್ಲ) ; ತೇ ಮುಕ್ತಾಃ–ಆ ಮುಕ್ತರು (ಸ್ವರೂಪದಲ್ಲಿ ಗರ್ದಭಾದಿ ಆಕಾರವುಳ್ಳ ಮುಕ್ತರು), ತದ್ವತ್ ಏವ ಹಿ–ಅದರಂತೆಯೇ (ಸಕ್ಕರೆ ಪ್ರತಿಮೆಯಂತೆ) ಸರಿ ; ದುಃಖೇ–ದುಃಖವು, ಸತಿ ಏವ–ಇದ್ದರೆ ಮಾತ್ರ, ಮುಕ್ತೇಃ–ಮುಕ್ತಿಗೆ, ಅಮುಕ್ತಿತಾ ತು–ಅಮುಕ್ತಿತ್ವವಾದರೋ, ಸ್ಯಾತ್ – ಆಗುತ್ತದೆ, ಅನ್ಯಥಾ ನ – ಬೇರೆಯಲ್ಲ ;

---

ಎಲ್ಲರೂ ಮುಕ್ತರೆಂಬುದನ್ನು ಈ ತತ್ವಜ್ಞಾನಿಗಳು ಬಲ್ಲರು (೩೯೪). ವಿಷವೃಕ್ಷದ ಫಲದಂತೆ (ಕಹಿಯಾದ ಫಲದಂತೆ) ಆಕಾರವುಳ್ಳ ಫಲವನ್ನು, ಸಕ್ಕರೆಯಲ್ಲಿ ರಚಿಸಿಟ್ಟರೆ, ಕಹಿ ಎಂಬ ದೋಷವುಳ್ಳದ್ದಾಗುವುದೇ ? (ಇಲ್ಲ) ; ಮುಕ್ತರೂ ಹೀಗೆಂದು ತಿಳಿಯಬೇಕು; ದುಃಖವಿದ್ದರೆ ಮಾತ್ರ ಮುಕ್ತಿಯು ಅಮುಕ್ತಿಯಾಗುತ್ತದೆ;

ದೇಹಾದಿಃ – ಪ್ರಾಕೃತದೇಹಾದಿಗಳು, ದುಃಖಹೇತುತ್ವಾತ್ – ದುಃಖ ಕಾರಣವಾದ್ದರಿಂದ, ದುಃಖಂ ಇತಿ–ದುಃಖವೆಂದು, ಉಪಚರ್ಯತೇ–ಉಪಚಾರದಿಂದ (ಅಮುಖ್ಯವಾಗಿ) ಹೇಳಲ್ಪಡುತ್ತವೆ.

**ತದ್ದುಃಖಂ ದುಃಖಹೇತುಶ್ಚ ದುಃಖಾನ್ಮುಕ್ತೌ ನ ಶೋಭತೇ ।**
**ಯದ್ದುಃಖಾತ್ಯಂತವಿಚ್ಛೇದಂ ಮೋಕ್ಷಮಾಹುರ್ವಿಚಕ್ಷಣಾಃ ॥ ೩೯೭ ॥**

ತತ್–ಆದ್ದರಿಂದ, ದುಃಖಂ–ದುಃಖವು, ದುಃಖಾತ್–ದುಃಖರೂಪವಾದ್ದರಿಂದಲೂ, ದುಃಖಹೇತುತ್ವಾತ್–ದುಃಖಹೇತುವಾದ್ದರಿಂದಲೂ (ದುಃಖದಾಯಕವಾದ್ದರಿಂದಲೂ), ಮುಕ್ತೌ – ಮುಕ್ತಿದಶಾದಲ್ಲಿ (ಪ್ರಾಕೃತ ದೇಹಾದಿಯು), ನ ಶೋಭತೇ–ಪ್ರಶಸ್ತವಾಗುವುದಿಲ್ಲ (ಯುಕ್ತವಾಗುವುದಿಲ್ಲ); ಯತ್–ಏಕೆಂದರೆ, ವಿಚಕ್ಷಣಾಃ – ಜ್ಞಾನಿಶ್ರೇಷ್ಠರು, ದುಃಖಾತ್ಯಂತವಿಚ್ಛೇದಂ – ದುಃಖದ ನಿಃಶೇಷ ನಾಶವನ್ನು, ಮೋಕ್ಷಂ–ಮೋಕ್ಷವನ್ನಾಗಿ, ಆಹುಃ–ಹೇಳುವರು.

**ನಿರ್ದುಃಖಾನಂದದೇಹಸ್ತು ಯದಿ ಸ್ಯಾತ್ಪರಮಾತ್ಮವತ್ ।**
**ತಚ್ಚಿತ್ರತಾಯಾಮಪಿ ಚ ಕಿಂ ವಿತ್ತಂ ತವ ನಶ್ಯತಿ ॥ ೩೯೮ ॥**

ನಿರ್ದುಃಖಾನಂದ ದೇಹಃ ತು–(ಮುಕ್ತರಿಗೆ) ನಿರ್ದುಃಖಾನಂದರೂಪದ ದೇಹವಾದರೂ, ಯದಿ ಸ್ಯಾತ್–ಇರುವುದಾದರೆ, ಪರಮಾತ್ಮವತ್–ಪರಮಾತ್ಮನಂತೆ (ಮತ್ಸ್ಯಾದಿ ಹೀನಯೋನಿಯರೂಪವು ಹೀನತ್ವಕ್ಕೆ ಕಾರಣವಾಗದೇ – ದುಃಖಪ್ರದವಾಗದಿರುವಂತೆ), ತಚ್ಚಿತ್ರತಾಯಾದಿ ಅಪಿ ಚ–(ಮುಕ್ತರ ದೇಹಗಳು) ವಿವಿಧತ್ವವುಳ್ಳವಾದರೂ (ಗರ್ದಭ, ಪಶು, ಪಕ್ಷ್ಯಾದಿ ವಿಚಿತ್ರರೂಪಗಳಿದ್ದರೂ), ತವ ವಿತ್ತಂ–ನಿನ್ನ ಧನವು, ನಶ್ಯತಿ ಕಿಂ–ನಷ್ಟವಾಗುವುದೇನು? (ಇಲ್ಲ).

---

ದುಃಖಕ್ಕೆ ಕಾರಣವಾದ ಪ್ರಾಕೃತ ದೇಹವು, ದುಃಖವೆಂದೇ ಉಪಚರಿಸಲಾಗುತ್ತದೆ; (೩೯೫–೩೯೬). ಪ್ರಾಕೃತ ದೇಹವೇ ದುಃಖವಾದ್ದರಿಂದಲೂ, ದುಃಖಹೇತುವಾದ್ದರಿಂದಲೂ, ಮುಕ್ತಿ ದಶಾದಲ್ಲಿ ಪ್ರಾಕೃತ ದೇಹವು ಶೋಭಿಸುವುದಿಲ್ಲ (ಮುಕ್ತರಿಗೆ ಇರುವುದೇ ಇಲ್ಲ); ದುಃಖದ (ಪ್ರಾಕೃತ ದೇಹದ) ನಿಶ್ಶೇಷನಾಶವೇ, ಮುಕ್ತಿಯೆಂದು ಜ್ಞಾನಿಗಳು ಹೇಳುವರು; (೩೯೭). ಪರಮಾತ್ಮನ ಮತ್ಸ್ಯಾದಿ ಅವತಾರ ರೂಪಗಳಂತೆ, ಮುಕ್ತರೂ ನಿರ್ದುಃಖಾನಂದ ದೇಹವುಳ್ಳವರಾದರೆ, ಅವರ ವಿವಿಧಾಕಾರದ ದೇಹಗಳು ಹೇಗೆ ಮುಕ್ತತ್ವವನ್ನು ಬಾಧಿಸುತ್ತವೆ? ಆ ರೂಪಗಳಿಂದ

*

**ಪುರುರೂಪಸ್ಯ ತಸ್ಯೈವೋ ಪ್ರತಿರೂಪಾಃ ಕಿಲಾಖಿಲಾಃ ।**
**ಶ್ರುತಿಸಿದ್ಧಂ ತತೋ ಜೀವ ನಾನಾರೂಪಂ ನ ಸಂಶಯಃ ॥ ೩೯ ॥**

ಜೀವಸ್ವರೂಪದಲ್ಲಿ ವೈಚಿತ್ರ್ಯಸಾಧಕವಾದ 'ರೂಪಂ ರೂಪಂ ಪ್ರತಿರೂಪೋ ಬಭೂವ' ಇತ್ಯಾದಿ ಶ್ರುತ್ಯರ್ಥವನ್ನು ಸಂಗ್ರಹಿಸಿ [1] ನಿರೂಪಿಸುತ್ತಾರೆ :—

---

ನಿನಗಾಗುವ ನಷ್ಟವೇನು? ಧನವ್ಯಯವೇ? (ಇಲ್ಲವಷ್ಟೆ) (೩೮). ಪರಮಾತ್ಮನು ಅನಂತರೂಪಗಳುಳ್ಳವನಾದ್ದರಿಂದ 'ಪುರುರೂಪ'ನೆನಿಸುವನು ; ಈ ಸಮಸ್ತ ಮುಕ್ತ ಜೀವರೂ, ಪ್ರತಿಬಿಂಬರು (ಪರಮಾತ್ಮನ ಒಂದೊಂದು ರೂಪದ ಸಮಾನಾಕಾರದ

[1] ಪ್ರಸಕ್ತವಾದ ಪೂರ್ಣಶ್ರುತಿವಾಕ್ಯವು ಹೀಗಿದೆ :—"ರೂಪಂರೂಪಂ ಪ್ರತಿರೂಪೋ ಬಭೂವ ತದಸ್ಯರೂಪಂ ಪ್ರತಿಚಕ್ಷಣಾಯ। ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾಹ್ಯಸ್ಯ ಹರಯಃ ಶತಾದಶ॥"; ಇದರ ಸಮುದಾಯಾರ್ಥವು ಈ ಮುಂದೆ ವಿವರಿಸಲಾಗುವಂತೆ ಇದೆ ; ಇಂದ್ರಃ—ಪರಮೈಶ್ವರ್ಯಪೂರ್ಣನಾದ ಪರಮಾತ್ಮನು; (ಯಾವ ರೂಪದಲ್ಲಿಯೂ ಪ್ರಕೃತಿಬಂಧರಹಿತನಾದ್ದರಿಂದ ವಿಷ್ಣುವೇ ನಿರ್ಗುಣನು ; ಪ್ರಾಕೃತಬಹುರೂಪಗಳಿಲ್ಲದವನಾದ್ದರಿಂದ ಪುರುರೂಪನು ; ಮಾಯಾಭಿಃ—ಸ್ವೇಚ್ಛೆಯಿಂದ ಸ್ವೀಕರಿಸಲ್ಪಟ್ಟ ಲಕ್ಷ್ಮೀರೂಪಗಳಿಂದ ಸಹಿತನಾದ್ದರಿಂದಲೂ ಪುರುರೂಪನು); ('ಪುರೂಣಿ ಅನಂತಾನಿ ನಾನಾವಿಧಾನಿ ಚ ರೂಪಾಣಿ ಯಸ್ಯ' ಎಂದರೆ, ವಿವಿಧವಾದ ಅಸಂಖ್ಯರೂಪಗಳುಳ್ಳವನು ಯಾವನೋ ಆ ಪರಮಾತ್ಮನು ಪುರುರೂಪನು) ; ಈಯತೇ—(ಎಂದು) ಪ್ರತಿಪಾದಿಸಲ್ಪಡುತ್ತಾನೆ – ಶ್ರುತಿಪುರಾಣಾದಿಗಳಲ್ಲಿ ; ಅಸ್ಯ – ಪರಮಾತ್ಮನ, ಹರಯಃ – ದುರಿತ (ಪಾಪ) ಹರಗಳಾದ್ದರಿಂದ 'ಹರಿ'ನಾಮವುಳ್ಳ, ಶತಾ—ನಾರಾಯಣಾದಿ ಶತರೂಪಗಳು; ದಶ—ಮತ್ಸ್ಯಕೂರ್ಮಾದಿ ದರ್ಶಮೂರ್ತಿಗಳು, ಯುಕ್ತಾಹಿ—ಆಕಾರ ವೈಚಿತ್ರ್ಯದಿಂದ (ರೂಪ, ಆಯುಧ ವೈಚಿತ್ರ್ಯಗಳಿಂದ), ಯುಕ್ತವೇ ಆಗಿವೆ (ಪ್ರಸಿದ್ಧವು) ; ಎಲ್ಲ ಪರಮಾತ್ಮನ ರೂಪಗಳು ಪರಮೈಶ್ವರ್ಯಶಕ್ತಿಯಿಂದ ಆವಿರ್ಭೂತವಾದವು ; ಕರ್ಮಜನಿತವಲ್ಲ—ಒಂದೊಂದೂ ಪರಮೈಶ್ವರ್ಯ ಸಾಮರ್ಥ್ಯವುಳ್ಳವೇ ಆಗಿವೆ; ಅಲ್ಲದೇ ಎಲ್ಲ ರೂಪಗಳೂ ಮಹದೈಶ್ವರ್ಯ ಯುಕ್ತಗಳೇ ಎಂಬುದೂ ಇಲ್ಲ 'ಮಾಯಾ' ಶಬ್ದದಿಂದ ವಿವಕ್ಷಿತವಾಗಿದೆ; (ಪರಾಭಿಮತವಾದ 'ಮಾಯಾ' ಅಲ್ಲ ; ಪರನಂತೆ ಅವಿದ್ಯೆಯು ಒಂದೇ ; ಮಾಯಾಭಿಃ ಎಂಬುವ ಬಹುವಚನವು ಕೂಡುವುದಿಲ್ಲ) ಮತ್ತು ಹರಿಶಬ್ದೋಕ್ತ ಅನಿಷ್ಟಹರಣ ಸಾಮರ್ಥ್ಯವನ್ನು ವಿರೋಧಿಸುತ್ತದೆ) ; (ಮತ್ತು ಸ್ವೇಚ್ಛೆಯಿಂದ ಪ್ರಕಟಿಸಲಾದ ದೇಹಗಳುಳ್ಳವನಿಗೆ ಮಾಯಾಬಂಧವೆಂಬುದು ಹೇಗೆ ಯುಕ್ತವಾಗುತ್ತದೆ? 'ತಸ್ಯೇಚ್ಛಯಾತ್ತವಪುಷಃ ಕುತ ಏವ ಬಂಧಃ' ಇತ್ಯಾದಿ ಪ್ರಮಾಣಗಳಿಂದ, ಭಗವದವತಾರಗಳು ಆಯಾ ಕಾಲದಲ್ಲಿ

ಪುರುರೂಪಸ್ಯ—ಪುರುರೂಪನೆಂದು ಹೇಳಲಾಗುವ, ತಸ್ಯ—ಪರಮಾತ್ಮನ, ಇಮೇ—ಈ, ಅಖಿಲಾಃ—ಸಮಸ್ತರೂ (ಜೀವರೂ), ಪ್ರತಿರೂಪಾಃ—ಪ್ರತಿರೂಪ ರೆಂದು (ಪ್ರತಿಬಿಂಬರೆಂದು), ಶ್ರುತಿಸಿದ್ಧಂ—ಶ್ರುತಿಗಳಿಂದಲೇ ಸಿದ್ಧವಾದುದು; ತತಃ—ಆದ್ದರಿಂದ (ಆ ಪರಮಾತ್ಮನಿಂದಲೇ ಆತನ ಅಧೀನಗಳೇ ಆದ), ಜೀವ ನಾನಾರೂಪಂ—ಜೀವರ ನಾನಾರೂಪಗಳೆಂಬುದು (ಸಿದ್ಧವಾಗಿದೆ), ಸಂಶಯಃ ನ—ಯಾವ ಸಂದೇಹಕ್ಕೂ ಅವಕಾಶವಿಲ್ಲ (ಜೀವರು ಬಿಂಬ ಸದೃಶಾಕಾರವುಳ್ಳ ಪ್ರತಿ ಬಿಂಬರು; ಬಿಂಬದರ್ಶನವು ಮೋಕ್ಷಸಾಧಕ ಅಪರೋಕ್ಷಜ್ಞಾನವೆನಿಸುತ್ತದೆ).

---

ಪ್ರತಿಯೇ ಜೀವನು); 'ರೂಪಂ ರೂಪಂ ಪ್ರತಿರೂಪೋ ಬಭೂವ' ಎಂದು ಶ್ರುತಿಯೂ ಹೇಳುತ್ತದೆ; ಆದ್ದರಿಂದ ಜೀವರು ಶುದ್ಧವಾದ ವಿಚಿತ್ರ ಆಕಾರ

---

ಆವಿರ್ಭವಿಸಿ, ಸ್ವಭಕ್ತರಾದ ಬ್ರಹ್ಮಾದಿದೇವತೆಗಳು, ಭೂದೇವಿ, ಪ್ರಹ್ಲಾದಾದಿಭಕ್ತರ ಅನಿಷ್ಟಗಳನ್ನು ಪರಿಹರಿಸಿ, ಭಕ್ತಾಭೀಷ್ಟಗಳನ್ನು ಸಲ್ಲಿಸಲು, ದೇವರಕ್ಷಣೆ ದೈತ್ಯಸಂಹಾರ ಕ್ಕಾಗಿ ರುಕ್ಮಿಣೀ ಮೂಲರೂಪಳಾದ ಶ್ರೀದೇವಿಯನ್ನು ಸ್ವೇಚ್ಛೆಯಿಂದಲೇ ಜೊತೆಯಲ್ಲಿಟ್ಟು ಕೊಂಡು ಲೀಲೆಯಿಂದ ಧರಿಸಿದ ರೂಪಗಳೆಂದು ಬಹುಪ್ರಮಾಣಗಳಿಂದ ಸಿದ್ಧವಾಗುತ್ತದೆ). ಈ ಕಾರಣಗಳಿಂದಲೂ, 'ದುರ್ಗೇತಿ ಭದ್ರಕಾಲೀತಿ ವಿಜಯೀ ವೈಷ್ಣವೀತಿ ಚ। ಮಾಯಾ ನಾರಾಯಣೀ' ಎಂಬ ಪ್ರಮಾಣದಂತೆ, ವಿವಿಧ ನಾಮಗಳುಳ್ಳ ಮಾಯಾನಾಮಕ ಶ್ರೀದೇವಿ ಯಿಂದ ಸಹಿತವಾದ ರೂಪಗಳುಳ್ಳವನೆಂಬುದೇ ಉಚಿತವಾದ ಅರ್ಥವು; 'ಮಹಾಮಾಯೇತ್ಯ ವಿದ್ಯೇತಿ ನಿಯತಿರ್ಮೋಹಿನೀತಿ ಚ। ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾನಂತಕಥ್ಯತೇ। ಎಂಬ ಭಗವದಿಚ್ಛಾವಾಚಕ ಪದಗಳಲ್ಲಿಯೂ 'ಮಾಯಾ' ಶಬ್ದವು ಸೇರಿದೆ; 'ಮಾಂ ರಮಾಂ ಸಂಪದ್ರೂಪಲಕ್ಷ್ಮೀಂ ಯಾಪಯತಿ' ಎಂಬ ವ್ಯುತ್ಪತ್ತಿಯಿಂದಲೂ ಮಾಯಾ ಶಬ್ದವು ಶ್ರೀದೇವಿ ಪರವಾಗುತ್ತದೆ; 'ಮಯ' ನಿರ್ಮಿತವಾದ್ದರಿಂದ ಮಾಯಾಶಬ್ದವಾಚ್ಯ ವಾದುದು ಐಂದ್ರಜಾಲಿಕ ಕುವಿದ್ಯೆಯು; ಅದು ದೈತ್ಯರಲ್ಲಿರುವುದರಿಂದ ಅದನ್ನು ಆದಿಪುರುಷ ನಾದ ಭಗವಂತನಲ್ಲಿ ಸೇರದಂತೆ, ವಿಜ್ಞಾನಾಸ್ತ್ರದಿಂದ 'ಮಾಯಾಂ ಅಪಾಸ್ಯತಿ ನಿಮಿಷಾಂತರೇ' ಎಂಬ ಪ್ರಮಾಣ ವಚನಾನುಸಾರವಾಗಿ, ಮಾಯಾನಿರ್ಹರಣ ಸಾಮರ್ಥ್ಯಪೂರ್ಣನೆಂದೂ ಅರ್ಥವಾಗುತ್ತದೆ—ಮಾಯಾಸಹಿತನೆಂಬುದಕ್ಕೆ; ತಸ್ಯ—(ಹೀಗಿರುವ) ಭಗವಂತನ, ರೂಪಂ ರೂಪಂ ಒಂದೊಂದು ರೂಪವೂ, ಪ್ರತಿರೂಪಂ—('ಪ್ರತಿರೂಪಂ ಯಸ್ಯ' ಎಂಬ ವ್ಯುತ್ಪತ್ತಿ ಯಿಂದ ಪ್ರತಿಜೀವನೂ ಸಮಾನರೂಪತಯಾ ಪ್ರತಿಮಾರೂಪ ಪದವಾಚ್ಯನು—ಪ್ರತಿಬಿಂಬನು, ಬಭೂವ—ಆಗಿರುವನು; ತತ್—ಆ ಭಗವಂತನ ಬಿಂಬರೂಪವು, ಅಸ್ಯ—ಜೀವನಿಗೆ ಪ್ರತಿ ಚಕ್ಷಣಾಯ—(ಮೋಕ್ಷಸಾಧನವಾದ ಬಿಂಬದರ್ಶನಕ್ಕಾಗಿ (ಭವೇತ್—ಆಗುತ್ತದೆ).

**ಶತಾ ದಶೇತಿ ತದ್ರೂಪಂ ಯಚ್ಛ್ರುತ್ಯೈವ ವಿವೇಚಿತಂ ।**
**ಅತಃ ಸ್ವರೂಪಮಾತ್ರಂ ನ ರೂಪಂ ಮತ್ಸ್ಯಾದಯೋ ಹಿ ತೇ**
**॥ ೪೦೦ ॥**

ಯತ್–ಯಾವ ಕಾರಣದಿಂದ, ಶತಾ ದಶ ಇತಿ–ನೂರು, ಹತ್ತು ಎಂದು, ತದ್ರೂಪಂ – ಬಿಂಬಭೂತವಾದ ರೂಪವು, ಶ್ರುತ್ಯಾ ಏವ – ಶ್ರುತಿಯಿಂದಲೇ, ವಿವೇಚಿತಂ–ವಿವೇಚಿಸಲಾಗಿದೆಯೋ, ಅತಃ–ಆದ್ದರಿಂದ, ರೂಪಂ–ಬಿಂಬರೂಪವೆಂಬ ಭಗವಂತನ ರೂಪವು, ಸ್ವರೂಪಮಾತ್ರಂ–ಸ್ವರೂಪಮಾತ್ರವು, ನ–ಅಲ್ಲ ; ತೇ–ಅವು (ಆ ರೂಪಗಳು), ಮತ್ಸ್ಯಾದಯಃ–ಮತ್ಸ್ಯ ಮುಂತಾದ ರೂಪಗಳೇ, ಹಿ–ಎಂದು ಸ್ಪಷ್ಟವಾಗುತ್ತದೆ.

**ಕಥಂ ಸ್ವರೂಪಮಾತ್ರಸ್ಯ ಶತತಾ ದಶತಾ ತವ ।**
**ತತ್ಪುರುತ್ವಂ ನ ಪೂರ್ಣತ್ವಂ ಬಹುತೈವ ಭವೇದ್ಧ್ರುವಂ ॥ ೪೦೧ ॥**

ತವ – ನಿನ್ನಂತೆ, ಸ್ವರೂಪಮಾತ್ರಸ್ಯ – ಸ್ವರೂಪ ಮಾತ್ರಕ್ಕೆ, ಶತತಾ – ಶತತ್ವವು, ದಶತಾ–ದಶತ್ವವು, ಕಥಂ–ಹೇಗೆ (ಕೂಡುತ್ತದೆ? ಬ್ರಹ್ಮನಿಗೆ ಏಕತ್ವವನ್ನೇ ಅಂಗೀಕರಿಸುವ ನಿನಗೆ–ಮಾಯಾವಾದಿಗೆ ಇದು ಕೂಡುವುದಿಲ್ಲ) ; ತತ್–ಆದ್ದರಿಂದ, ಪುರುತ್ವಂ–ಪುರುತ್ವವು (ಶ್ರುತಿಯಲ್ಲಿ 'ಪುರುರೂಪಸ್ಯ' ಎಂಬಲ್ಲಿರುವ ಪುರುತ್ವವು), ಪೂರ್ಣತ್ವಂ ನ–ಪೂರ್ಣತ್ವವೆಂಬರ್ಥವುಳ್ಳದ್ದಲ್ಲ ; ಧ್ರುವಂ–ನಿಶ್ಚಯವಾಗಿ, ಬಹುತಾ ಏವ ಭವೇತ್–ಬಹುತ್ವವೆಂದೇ ಅರ್ಥವಾಗಬೇಕು (ಅಲ್ಲವೇ?).

---

ವುಳ್ಳವರಾಗಿರುವರು–ಇದು ಶ್ರುತಿಸಿದ್ಧವು–ಸಂಶಯವಿಲ್ಲ (೩೯೯). ಬಿಂಬರೂಪವೆಂಬ ಶ್ರೀಹರಿಯ ರೂಪವು, ಶತ, ದಶ, ಎಂದು ಶ್ರುತಿಯಿಂದಲೇ ವಿವೇಚಿಸಲ್ಪಟ್ಟಿರುವುದರಿಂದ, ಅದು ಸ್ವರೂಪ ಮಾತ್ರವಲ್ಲ ; ಸ್ವರೂಪವೆಂಬುದು ಏಕಮಾತ್ರವೆಂದು ಪರನ ವಾದವೂ ಆಗಿದೆ ; ಆದ್ದರಿಂದ ಆ ಶ್ರುತಿಯಲ್ಲಿ ಪ್ರಸಕ್ತವಾದ ಬಿಂಬ ರೂಪಗಳು, ಮತ್ಸ್ಯಾದಿ ಬಹುರೂಪಗಳೇ ಸರಿ (೪೦೦). ಪರಬ್ರಹ್ಮನಿಗೆ ಏಕತ್ವವನ್ನು ಅಂಗೀಕರಿಸಿರುವ ಪರನಿಗೆ (ಮಾಯಾವಾದಿಗೆ) 'ಶ್ರುತಿಯು ಹೇಳುವ ಶತತ್ವ ದಶತ್ವಗಳು ಯುಕ್ತವಾಗುವುದಿಲ್ಲ ; ಆದ್ದರಿಂದ 'ಪುರುರೂಪಸ್ಯ' ಎಂಬುದಕ್ಕೆ ಪೂರ್ಣತ್ವವುಳ್ಳ ರೂಪವೆಂಬರ್ಥವು ಹೊಂದುವುದಿಲ್ಲ ; ಬಹುಸಂಖ್ಯೆಯ ರೂಪಗ

**ರೂಪಂ ರೂಪಂ ಚೇತಿ ವೀಪ್ಸಾ ಜುಗುಪ್ಸಾ ಚ ನ ಚೇದ್ಭವೇತ್ ।**
**ಮತ್ಸ್ಯಕೂರ್ಮಾದಿರೂಪಾಣಾಂ ಪ್ರತಿರೂಪಾಶ್ಚ ತಾದೃಶಾಃ ।**
**ಕಥಂ ನ ವಾಚ್ಯಾ ಧೀಮದ್ಭಿಃ ಪ್ರತಿಶಬ್ದಾರ್ಥವೇದಿಭಿಃ ॥ ೪೦೨ ॥**

ರೂಪಂ ರೂಪಂ ಚೇತಿ – ರೂಪಂ ರೂಪಂ ಎಂದು, ವೀಪ್ಸಾ– ದ್ವಿರಾವರ್ತಿ ಹೇಳೋಣವು, ನ ಚೇತ್–(ಮುಕ್ತರಿಗೆ ಮತ್ಸ್ಯಾದಿ ಸದೃಶಾಕಾರವನ್ನು) ಹೇಳದಿದ್ದರೆ, ಜುಗುಪ್ಸಾ ಚ–ಹೀನತ್ವವು (ತುಚ್ಛತೆಯು), ಭವೇತ್–(ಮುಕ್ತರಿಗೆ) ಉಂಟಾಗುತ್ತದೆ; ಮತ್ಸ್ಯ ಕೂರ್ಮಾದಿ ರೂಪಾಣಾಂ – ಮೀನು, ಆಮೆ, ಇತ್ಯಾದಿ ರೂಪಗಳ, ಪ್ರತಿರೂಪಾಶ್ಚ–ಪ್ರತಿಬಿಂಬಗಳಾದರೋ, ತಾದೃಶಾಃ–(ಆ ಪ್ರಾಣಿಗಳ) ಸದೃಶಾಕಾರವುಳ್ಳವುಗಳು (ಎಂದು), ಧೀಮದ್ಭಿಃ–ಬುದ್ಧಿಯುಳ್ಳವರಿಂದ, ಪ್ರತಿಶಬ್ದಾರ್ಥವೇದಿಭಿಃ–ಪ್ರತಿಶಬ್ದಾರ್ಥವನ್ನು ತಿಳಿದ (ವಿವೇಕಿ) ಗಳಿಂದ, ಕಥಂ ನ ವಾಚ್ಯಾ–ಹೇಗೆ ಹೇಳಲಾಗುವುದಿಲ್ಲ? (ಹೇಳುತ್ತಾರೆಯಷ್ಟೆ).

**ತತ್ತದ್ರೂಪಾಪರೋಕ್ಷ್ಯೇಣ ಮೋಕ್ಷಸ್ತೇಷಾಂ ಭವೇತ್ಕಿಲ ।**
**ಪ್ರತಿಪತ್ತ್ಯಾಪರೋಕ್ಷ್ಯಂ ಹಿ ಪ್ರತಿಚಕ್ಷಣಮುಚ್ಯತೇ ॥ ೪೦೩ ॥**

ತತ್ತದ್ರೂಪಾಪರೋಕ್ಷ್ಯೇಣ – ಆ ಯಾ ರೂ ಪ ದ ಸಾಕ್ಷಾತ್ಕಾರದಿಂದ, ತೇಷಾಂ–ಆ ಜೀವರಿಗೆ (ಆಯಾ ಜೀವರಿಗೆ ತಮ್ಮ ಬಿಂಬರೂಪದರ್ಶನದಿಂದ), ಮೋಕ್ಷಃ–ಮೋಕ್ಷವು, ಭವೇತ್ ಕಿಲ–ದೊರೆಯುವುದಷ್ಟೆ; ಪ್ರತಿಪತ್ತ್ಯಾ–ಜ್ಞಾನದಿಂದ, ಆಪರೋಕ್ಷ್ಯಂ – ಅಪರೋಕ್ಷವು (ಜ್ಞಾನಸಹಿತವಾದ ಸಾಕ್ಷಾತ್ಕಾರವು),

---

ಳುಳ್ಳವನೆಂದೇ ನಿಶ್ಚಯವಾದ ಅರ್ಥವಾಗುತ್ತದೆ (೪೦೧). 'ರೂಪಂರೂಪಂ' ಎಂದು ಶ್ರುತಿಯು ದ್ವಿರಾವರ್ತಿ ಹೇಳಿರುವುದು, ಪ್ರತಿಯೊಂದು ಮುಕ್ತರ ರೂಪವೂ ಭಗವಂತನ ಪ್ರತಿಬಿಂಬವೇ ಎಂಬುದನ್ನು ಸಮರ್ಥಿಸುತ್ತದೆ; ಮುಕ್ತರಿಗೆ, ಮತ್ಸ್ಯಾದಿ ಭಗವದ್ಬಿಂಬ ರೂಪದ ಸದೃಶಾಕಾರವನ್ನು ಹೇಳದಿದ್ದರೆ, ತುಚ್ಛವಾದ ಮೀನು ಮಕರ ಜಂತುಗಳೆಂಬರ್ಥವು ಪ್ರಾಪ್ತವಾಗುತ್ತದೆ; ವಸ್ತುತಃ ಎಲ್ಲ ಮುಕ್ತ ಜೀವರೂ ಅತ್ಯಂತ ಪರಿಶುದ್ಧರಾದ ಭಗವಂತನ ಪ್ರತಿಬಿಂಬರೇ ಆಗಿರುವರು; 'ಪ್ರತಿ' ಎಂಬ ಶಬ್ದಾರ್ಥವನ್ನು ತಿಳಿದ ವಿವೇಕಿಗಳು (ಶಬ್ದಾರ್ಥಜ್ಞಾನಿಗಳು ವ್ಯುತ್ಪನ್ನರು) ಹಾಗೆಂದೇ ತಿಳಿಯುತ್ತಾರೆ–ಹೇಳುತ್ತಾರೆ (೪೦೨). ತಂತಮ್ಮ

ಪ್ರತಿಚಕ್ಷಣಂ ಉಚ್ಯತೇ ಹಿ—('ತದಸ್ಯ ರೂಪಂ ಪ್ರತಿಚಕ್ಷಣಾಯ' ಎಂಬಲ್ಲಿರುವ) ಪ್ರತಿಚಕ್ಷಣಪದದಿಂದ ಹೇಳಲ್ಪಡುತ್ತದಷ್ಟೆ; (ಹಾಗಲ್ಲದಿದ್ದರೆ ಸ್ವಬಿಂಬದರ್ಶನ ವೆಂದಲ್ಲದಿದ್ದರೆ, 'ಪ್ರತಿ' ಪದವು ವ್ಯರ್ಥವಾಗುತ್ತದೆ).

**ತದಸ್ಯೇತಿ ಶ್ರುತೌ ಪ್ರೋಕ್ತಂ ಜೀವಸ್ಯ ಪರಮಸ್ಯ ಚ ।**
**ದ್ರಷ್ಟೃದೃಶ್ಯಾತ್ಮಕಂ ರೂಪದ್ವಯಂ ತತ್ಪಾರಮಾರ್ಥಿಕಂ ।**
**ಯನ್ಮೋಕ್ಷದಪ್ರಮಾರೂಪಸಾಕ್ಷಾತ್ಕಾರಸ್ಯ ಗೋಚರಃ ॥ ೪೦೪ ॥**

ತತ್ (ತಸ್ಮಾತ್)-ಆದ್ದರಿಂದ, ತದಸ್ಯೇತಿ ಶ್ರುತೌ ಪ್ರೋಕ್ತಂ-'ತದಸ್ಯರೂಪಂ ಪ್ರತಿಚಕ್ಷಣಾಯ' ಎಂಬ ಶ್ರುತಿವಾಕ್ಯದಲ್ಲಿ ಹೇಳಲಾದ, ಜೀವಸ್ಯ—ಜೀವನ, ಚ—ಮತ್ತು, ಪರಮಸ್ಯ – ಪರಮಾತ್ಮನ, ದ್ರಷ್ಟೃದೃಶ್ಯಾತ್ಮಕಂ – ನೋಡುವ ಮತ್ತು ನೋಡಲ್ಪಡುವವರು ಎಂಬ, ರೂಪದ್ವಯಂ – ಎರಡು ರೂಪಗಳು (ರೂಪದ್ವಯವು), ಪಾರಮಾರ್ಥಿಕಂ – ಪರಮಸತ್ಯವೇ; ಯತ್ – ಏಕೆಂದರೆ (ಯಾವ ಕಾರಣದಿಂದ ಎಂದರೆ), ಮೋಕ್ಷದ ಪ್ರಮಾರೂಪ ಸಾಕ್ಷಾತ್ಕಾರಸ್ಯ—ಮೋಕ್ಷಪ್ರದನೆಂಬ ಪ್ರಮಾಣಸಿದ್ಧ ಸಾಕ್ಷಾತ್ಕಾರಕ್ಕೆ, ಗೋಚರಃ—ವಿಷಯನಾದವನು (ಪರಮಾತ್ಮನು).

---

ಬಿಂಬರೂಪದ ಸಾಕ್ಷಾತ್ಕಾರದಿಂದಲೇ, ಜೀವರು ಮುಕ್ತರಾಗುತ್ತಾರೆಂದು ಪ್ರಮಾಣ ಸಿದ್ಧವಾಗಿದೆ; ಶ್ರುತಿಯಲ್ಲಿ 'ಪ್ರತಿಚಕ್ಷಣಾಯ' ಎಂಬಲ್ಲಿರುವ 'ಪ್ರತಿ' ಪದವು ಸ್ವಸ್ವಬಿಂಬದ ದರ್ಶನವೆಂಬರ್ಥವನ್ನೇ ಹೇಳುತ್ತದೆ; ಸ್ವಬಿಂಬದ ದರ್ಶನವೆಂಬರ್ಥ ವಲ್ಲದಿದ್ದರೆ, 'ಪ್ರತಿ' ಪದವು ವ್ಯರ್ಥವಾಗುತ್ತದೆ (೪೦೩). 'ತದಸ್ಯ ರೂಪಸ್ಯ ಪ್ರತಿಚಕ್ಷಣಾಯ' ಎಂಬ ಶ್ರುತಿವಾಕ್ಯದಲ್ಲಿ ಹೇಳಲಾದ (ಪ್ರಸಕ್ತರಾದ) ನೋಡುವ ಮತ್ತು ನೋಡಲ್ಪಡುವವರೆಂಬ ರೂಪದ, ಜೀವ ಪರಮಾತ್ಮರೆಂಬ ರೂಪದ್ವಯವು, ಎರಡೂ ಚೇತನಗಳೂ, ಪಾರಮಾರ್ಥಿಕ ಸತ್ಯತ್ವವುಳ್ಳವೆಂದೂ ಸಿದ್ಧವಾಗುತ್ತದೆ; ಮೋಕ್ಷಪ್ರದನೆಂದು ಪ್ರಮಾಣ ಸಿದ್ಧನಾದವನ ಸಾಕ್ಷಾತ್ಕಾರಕ್ಕೆ ವಿಷಯನಾದ್ದರಿಂದ, ಪರಮಾತ್ಮನೂ, ಕಾಣುವ ಜೀವನೂ ಸತ್ಯರೆಂಬುದು ಇದರಿಂದಲೇ ಸಿದ್ಧವಾಗುತ್ತದೆ

**ಮೋಕ್ಷಂ ಪ್ರತ್ಯಪರೋಕ್ಷಂ ಚ ಯತಸ್ತತ್ಪ್ರತಿಚಕ್ಷಣಂ ।**
**ಅರ್ಥಂ ಪ್ರತ್ಯೇವ ದೃಷ್ಟಿಶ್ಚ ಯತೋಽಭೂತ್ಪ್ರತಿಚಕ್ಷಣಂ ।**
**ಅತೋ ಯಥಾರ್ಥಜ್ಞಾನಾರ್ಥಾ ಪ್ರತಿಚಕ್ಷಣವಾಗಿಯಂ ॥ ೪೦೫ ॥**

ಪ್ರತಿಚಕ್ಷಣಪದದಿಂದ ಸಾಕ್ಷಾತ್ಕಾರವು ಉಕ್ತವಾದರೂ ಮೋಕ್ಷಪ್ರಾಪ್ತಿಯ ಲಾಭವು ಹೇಗೆಂಬುದನ್ನು, ವಿವರಿಸುತ್ತಾರೆ :—

ಮೋಕ್ಷಂ ಪ್ರತಿಚ—ಮೋಕ್ಷಕ್ಕಾಗಿಯೇ, ಅಪರೋಕ್ಷಂ—ಸಾಕ್ಷಾತ್ಕಾರವು, ಯತಃ—ಯಾವ ಕಾರಣದಿಂದ, ತತ್—ಶ್ರುತ್ಯುಕ್ತವಾದ, ಪ್ರತಿಚಕ್ಷಣಂ—ಪ್ರತಿಚಕ್ಷಣ ವೆಂಬ ಪದವೋ (ಪದವಿರುವುದೋ), ಯತಃ—ಮತ್ತು ಯಾವ ಕಾರಣದಿಂದ, ಅರ್ಥಂ ಪ್ರತಿಏವ—ಫಲಾರ್ಥವಾಗಿಯೇ (ವಸ್ತುವನ್ನು ಉದ್ದೇಶಿಸಿಯೇ), ದೃಷ್ಟಿಃ— ದರ್ಶನವೋ, ಪ್ರತಿಚಕ್ಷಣಂ ಅಭೂತ್—ಪ್ರತಿಚಕ್ಷಣ ಎಂಬ ಪದವಾಗಿದೆಯೋ, ಅತಃ—ಆದ್ದರಿಂದ, ಇಯಂ—ಈ, ಪ್ರತಿಚಕ್ಷಣವಾಕ್—ಪ್ರತಿಚಕ್ಷಣಪದ ಯುಕ್ತ ವಾಕ್ಯವು, ಯಥಾರ್ಥಜ್ಞಾನಾರ್ಥಾ—(ದ್ರಷ್ಟೃ ದೃಶ್ಯಗಳೆಂಬ ರೂಪದ್ವಯದ) ಸತ್ಯತ್ವ ಜ್ಞಾನಪ್ರತಿಪಾದಕವೇ ಆಗಿರುತ್ತದೆ.

**ಉದ್ದೇಶ್ಯತಾ ಕಥಂ ನೋ ಚೇದನುದ್ದೇಶಭ್ರಮೋ ಸತಾಂ ।**
**ತಾದರ್ಥ್ಯೇ ಹಿ ಚತುರ್ಥೀಯಮನರ್ಥೇ ಸಾ ಕಥಂ ವದ ॥ ೪೦೬ ॥**

ಬೇರೆ ಪ್ರಕಾರದಿಂದಲೂ ಸಮ್ಯಕ್ ಜ್ಞಾನ (ಯಥಾರ್ಥ ಜ್ಞಾನ) ವನ್ನೇ ಉಂಟುಮಾಡುತ್ತದೆನ್ನುತ್ತಾರೆ :—

---

ಯಲ್ಲವೇ ? (೪೦೪). ಮೋಕ್ಷಪ್ರಾಪ್ತಿಗಾಗಿಯೇ ಸಾಕ್ಷಾತ್ಕಾರವಾದ್ದರಿಂದ ಪ್ರತಿ- ಚಕ್ಷಣ ಪದವು ಸಾರ್ಥಕವಾಗಿದೆ; ಮೋಕ್ಷವೆಂಬ ಫಲಕ್ಕಾಗಿಯೇ ಅಪರೋಕ್ಷ ದರ್ಶನವೆಂದು ಪ್ರಮಾಣ ಸಿದ್ಧವಾಗಿದೆ; ಅರ್ಥವನ್ನು (ವಸ್ತುವನ್ನು) ಉದ್ದೇಶಿಸಿಯೇ ನೋಡುವಿಕೆಯು (ವಸ್ತುವೇ ಇಲ್ಲದಿರಲು ನೋಡುವುದೆಲ್ಲಿಂದ ಬರುತ್ತದೆ?); ಆದ್ದರಿಂದ ಸಹ 'ಪ್ರತಿಚಕ್ಷಣ' ಪದವು ಸಾರ್ಥಕವಾಗಿದೆ; ಈ ಉಭಯ ವ್ಯುತ್ಪತ್ತಿಯಿಂದ, ಪ್ರತಿಚಕ್ಷಣವೆಂಬ ಶಬ್ದವು, (ಚೇತನದ್ವಯದ— ಜೀವಪರಮಾತ್ಮರ—ದ್ರಷ್ಟೃ ದೃಶ್ಯರ) ಯಥಾರ್ಥಜ್ಞಾನವನ್ನು ಪ್ರತಿಪಾದಿಸುವುದೇ ಆಗುತ್ತದೆ (೪೦೫). 'ಪ್ರತಿಚಕ್ಷಣಾಯ' ಎಂಬ ಪದವು ಚತುರ್ಥೀ ವಿಭಕ್ತಿ

ಹಿ—ಯಾವ ಕಾರಣದಿಂದ, ಇಯಂ ಚತುರ್ಥೀ—('ಪ್ರತಿಚಕ್ಷಣಾಯ' ಎಂಬ ಶ್ರುತಿಗತಪದವು) ಈ ಚತುರ್ಥೀ ವಿಭಕ್ತಿಯಲ್ಲಿರುವುದು, ತಾದರ್ಥ್ಯೇ—ತದರ್ಥವಾಗಿ ಎಂಬರ್ಥವುಳ್ಳದ್ದೋ, ಸಾ—ಅದು (ಆ ಶಬ್ದವು), ಅನರ್ಥೇ—ವಸ್ತುವೇ ಇಲ್ಲದಿದ್ದಲ್ಲಿ (ಫಲವಿಲ್ಲದಿದ್ದಲ್ಲಿ), ಕಥಂ ವದ—ಹೇಗೆ ಯುಕ್ತವಾಗುತ್ತದೆ? ಹೇಳು; ನೋಚೇತ್—ಹಾಗಲ್ಲದಿದ್ದರೆ, ಅನುದ್ದೇಶಭ್ರಮೇ—ಉದ್ದೇಶರಹಿತವಾದ (ಫಲರಹಿತವಾದ—ಇಲ್ಲದ) ಮಿಥ್ಯಾಪದಾರ್ಥದಲ್ಲಿ, ಸತಾಂ—ವಿವೇಕಿಗಳಿಗೆ, ಉದ್ದೇಶ್ಯತಾ ಕಥಂ—ಉದ್ದೇಶವು ಹೇಗೆ ಯುಕ್ತವಾಗುತ್ತದೆ?

**ಐಶ್ವರ್ಯವಾನ್ ಕಿಲೇಂದ್ರೋಽಸೌ ಸದ್ಗುಣೋ ನ ತು ನಿರ್ಗುಣಃ ।**
**ಅತೋ ಮಾಯಾಪದಂ ಚಾಸ್ಯ ಮಾಹಾತ್ಮ್ಯಾನ್ಯೇವ ಶಂಸತಿ ॥೮೦೭॥**

ಅಸೌ ಇಂದ್ರಃ — ಈ ಸ್ವರ್ಗಾಧಿಪತಿ ಇಂದ್ರನು, ಐಶ್ವರ್ಯವಾನ್ — ಐಶ್ವರ್ಯಾದಿಗಳುಳ್ಳವನು, ಕಿಲ—ಎಂದು ಪ್ರಸಿದ್ಧವಷ್ಟೆ; ಸದ್ಗುಣಃ—(ಐಶ್ವರ್ಯವುಳ್ಳವನೆಂಬುದು) ಇಂದ್ರನ ಸದ್ಗುಣವೇ, ನ ತು ನಿರ್ಗುಣಃ—ನಿರ್ಗುಣನಲ್ಲ (ಇಂದ್ರನು, ಪರನು ಹೇಳುವಂತೆ ನಿರ್ಗುಣ, ಚಿನ್ಮಾತ್ರನಲ್ಲ), ಅತಃ—ಆದ್ದರಿಂದ, ಅಸ್ಯ—ಇಂದ್ರಪದವಾಚ್ಯನಾದ ಶ್ರೀನಾರಾಯಣನಿಗೆ, ಮಾಯಾಪದಂ—(ಪ್ರಯೋಗಿಸಲ್ಪಡುವ) ಮಾಯಾಪದವು, ಮಾಹಾತ್ಮ್ಯಾನಿ ಏವ — ಮಹಾತ್ಮ್ಯೆಗಳನ್ನೇ (ಮಹಿಮೆಗಳನ್ನೇ — ಸದ್ಗುಣಗಳನ್ನೇ), ಶಂಸತಿ — ಹೇಳುತ್ತದೆ ('ಮಯಟಃ ಪ್ರಾಧಾನ್ಯೇ' — ಮಯಟ್ ಪ್ರತ್ಯಯವು, ಪ್ರಾಧಾನ್ಯವೆಂಬ ಅರ್ಥವುಳ್ಳದ್ದೆಂದು ಅನುಶಾಸನವೂ ಇದೆ).

---

ಯಲ್ಲಿರುವುದೂ ಯಥಾರ್ಥಜ್ಞಾನ ಪ್ರತಿಪಾದಕವೆಂಬುದನ್ನು ಸಮರ್ಥಿಸುತ್ತದೆ; 'ತಾದರ್ಥ್ಯೇ ಚತುರ್ಥೀ' ಎಂಬ ನಿಯಮವಿದೆ; ಅರ್ಥವೇ ಇಲ್ಲದಿದ್ದಲ್ಲಿ, (ಫಲವಿಲ್ಲದಿದ್ದಲ್ಲಿ ಅಥವಾ ವಸ್ತುವೇ ಇಲ್ಲದಿದ್ದಲ್ಲಿ) ಚತುರ್ಥೀ ಪ್ರಯೋಗವೂ ಕೂಡುವುದೇ ಇಲ್ಲ; ಭ್ರಮಾತ್ಮಕ ವಸ್ತುವಿನಲ್ಲಿ ಅಥವಾ ಫಲದಲ್ಲಿ, ವಿವೇಕಿಗಳಿಗೆ ಉದ್ದೇಶವೇ ಇರುವುದಿಲ್ಲ (ಅದು ಯುಕ್ತವಾಗುವುದಿಲ್ಲ); ಮಿಥ್ಯಾವಸ್ತುವು ಉದ್ದೇಶ ಪಾತ್ರವೇ ಅಲ್ಲ; ಆದ್ದರಿಂದ ಈ ಅರ್ಥವೇ ಶ್ರುತಿಗೆ ಸಾಧುವಾದುದು (೮೦೬). ಸ್ವರ್ಗಾಧಿಪತಿಯಾದ ಪುರಂದರನು (ಇಂದ್ರನು) ಮಹಾ ಐಶ್ವರ್ಯವಂತನೆಂದು ಪ್ರಸಿದ್ಧನಷ್ಟೆ; ಐಶ್ವರ್ಯವುಳ್ಳವನೆಂಬುದು ಆತನ ಸದ್ಗುಣವೇ ಆಗಿದೆ; ಇಂದ್ರನು ನಿರ್ಗುಣನಾದ

**ಬಹುತ್ವಾರ್ಥವಿಭಕ್ತ್ಯರ್ಥೋ ಮಾಯೈಕಾ ತೇ ಕಥಂ ವದ ।**
**ಕಥಂ ಮಾಯಾಖ್ಯದೋಷಃ ಸ್ಯಾತ್ಪರಮೇಶ್ವರತಾಶ್ರಯೇ ।**
**ನ ಹಿ ಮಾಯಾಮಯಂ ರೂಪಂ ಪ್ರಮಾಗೋಚರತಾಂ ವ್ರಜೇತ್ ॥**
॥ ೪೦೮ ॥

ಪರನಿಗೆ ಅಭಿಮತವಾದ ಅರ್ಥದಲ್ಲಿ ಮಾಯಾಶಬ್ದವನ್ನು ಗ್ರಹಿಸದಿರಲು ಬೇರೆ ನಿಮಿತ್ತವನ್ನು ಹೇಳುತ್ತಾರೆ :—

ಪರಮೇಶ್ವರತಾಶ್ರಯೇ – ಪರಬ್ರಹ್ಮತ್ವದ ಆಶ್ರಯದಲ್ಲಿ, ಮಾಯಾಖ್ಯ ದೋಷಃ—ಮಾಯೆ ಎಂಬ ದೋಷವು, ಕಥಂ ಸ್ಯಾತ್—ಹೇಗೆ ಸಂಭವಿಸುತ್ತದೆ? ಬಹುತ್ವಾರ್ಥವಿಭಕ್ತ್ಯರ್ಥಃ – ಬಹುತ್ವವೆಂಬ ಅರ್ಥದ ವಿಭಕ್ತಿಸೂಚಕವಾದ, ಮಾಯಾ—ಮಾಯಾ ಪದವು, ಏಕಾ—ಒಂದೇ, ತೇ—ನಿನಗೆ, ಕಥಂ ವದ— (ಮಾಯೆ ಎಂಬ ಅರ್ಥವುಳ್ಳದ್ದು), ಹೇಗಾಗುತ್ತದೆ? ಹೇಳು ; ಮಾಯಾಮಯಂ— ಮಾಯಾಮಯವಾದ, ರೂಪಂ – ರೂಪವು (ನಾರಾಯಣನ ರೂಪವು), ಪ್ರಮಾಗೋಚರತಾಂ—ಜ್ಞಾನವಿಷಯತ್ವವನ್ನು, ನ ಹಿ ವ್ರಜೇತ್—ಹೊಂದುವು ದಿಲ್ಲವಷ್ಟೆ; (ಪ್ರತಿಚಕ್ಷಣ ಪದೋಕ್ತ ಜ್ಞಾನಗೋಚರತ್ವವು ಕೂಡುವುದಿಲ್ಲವಾದ್ದರಿಂದ ಆ ರೂಪವು ಮಾಯಾಮಯವಲ್ಲ).

---

ಚೇತನ ಮಾತ್ರನಲ್ಲ; ಇಂದ್ರಶಬ್ದ ಮುಖ್ಯವಾಚ್ಯನಾದ ಮಹೈಶ್ವರ್ಯವುಳ್ಳ ನಾರಾಯಣನು, ಮಹಾಸದ್ಗುಣನೇ ಆಗಿರುವನು ; ಮಯಟ್ ಪ್ರತ್ಯಯವು ಪ್ರಾಧಾನ್ಯವೆಂಬರ್ಥವುಳ್ಳದಾದ್ದರಿಂದ ಮಹಿಮೆಗಳನ್ನೇ ಹೇಳುತ್ತದೆಯಲ್ಲದೇ ನಿರ್ಗುಣತ್ವವನ್ನಲ್ಲ (೪೦೭). ಬಹುತ್ವವೆಂಬರ್ಥವನ್ನು ಸೂಚಿಸುವ ವಿಭಕ್ತ್ಯರ್ಥ ವುಳ್ಳ ಮಾಯಾಶಬ್ದವು, ಒಂದೇ ಎಂಬರ್ಥವುಳ್ಳದ್ದು ಹೇಗೆ ಆಗುತ್ತದೆ? (ಮಾಯೆಯು ಒಂದೇ ಅಷ್ಟೆ) ; ಪರಮೈಶ್ವರ್ಯವಂತನಲ್ಲಿ (ಇಂದ್ರನಲ್ಲಿ) ಮಾಯೆ ಎಂಬ ಈ ದೋಷವಿರಲು ಹೇಗೆ ಸಾಧ್ಯ? (ಗುಣವಂತನಲ್ಲಿ ಈ ದೋಷವೇ? ಮಾಯಾಮಯವಾದ ರೂಪವು, ಯಥಾರ್ಥಜ್ಞಾನ ಗೋಚರವಾಗುವುದು ಹೇಗೆ? ('ಪ್ರತಿಚಕ್ಷಣಾಯ' ಎಂಬ ಪದವು, ಜ್ಞಾನಗೋಚರವೆಂದು ಹೇಳುವು

**ಶತಾ ದಶೇತಿ ಕಥನಾದಿಂದ್ರೋ ನಾಯಂ ಪುರಂದರಃ ।**
**ಪರಮೇಶ್ವರತಾ ಮುಖ್ಯಾ ನ ಯನ್ನಶ್ವರಸಂಪದಿ ॥ ೪೦೯ ॥**

'ಇಂದ್ರೋ ಮಾಯಾಭಿಃ' ಎಂಬಲ್ಲಿ, ಪ್ರಸಕ್ತಶ್ರುತಿಯಲ್ಲಿರುವ ಇಂದ್ರನು ಪ್ರಸಿದ್ಧ ಇಂದ್ರನಲ್ಲವೆಂಬಲ್ಲಿ ಎರಡು ಯುಕ್ತಿಗಳನ್ನು ಹೇಳುತ್ತಾರೆ :—

ಅಯಂ ಇಂದ್ರಃ—ಈ ಶ್ರುತ್ಯುಕ್ತ ಇಂದ್ರನು, ಪುರಂದರಃ ನ—ಪುರಂದರ ನಾಮಕ ಸ್ವರ್ಗಾಧಿಪತಿಯು ಅಲ್ಲ; ಶತಾ ದಶೇತಿಕಥನಾತ್—ಶತ, ದಶಪದ ಗಳಿಂದ ಬಹುರೂಪಗಳುಳ್ಳವನೆಂದು ಹೇಳಿರುವುದರಿಂದಲೂ, ಹಿ—(ಯಸ್ಮಾತ್) ಯಾವ ಕಾರಣದಿಂದ, ನಶ್ವರಸಂಪದಿ—ನಶ್ವರವಾದ ಸಂಪತ್ತುಳ್ಳವನಲ್ಲಿ, ಮುಖ್ಯಾ-ಮುಖ್ಯಾರ್ಥದ, ಪರಮೇಶ್ವರತಾ—ಪರಮೈಶ್ವರ್ಯತ್ವವೂ, ನ—ಯುಕ್ತವಲ್ಲವೋ ಆದ್ದರಿಂದಲೂ (ಪುರಂದರನಲ್ಲ—ನಾರಾಯಣನೇ).

**ಯುಕ್ತ್ಯಾ ಹೀತಿ ಸುಯುಕ್ತೀನಾಂ ವಿದ್ವತ್ಸಿದ್ಧೇಶ್ಚ ಕೀರ್ತನಾತ್ ।**
**ಸಂಶಯೋಽಸ್ಮಿನ್ ಸಮಸ್ತೇಽರ್ಥೇ ಕಾರ್ಯೋ ನಾರ್ಯೈಃ ಕದಾಚನ ॥ ೪೧೦ ॥**

ಹಿ ಇತಿ—ಹಿ ಎಂಬ ಶಬ್ದವು, ಯುಕ್ತೀನಾಂ—ಉಕ್ತವಾದ ಯುಕ್ತಿಗಳಿಗೆ, ವಿದ್ವತ್ಪ್ರಸಿದ್ಧೇಃ ಚ—ವಿದ್ವತ್ ಪ್ರಸಿದ್ಧಿಯನ್ನೂ, ಕೀರ್ತನಾತ್—ಹೇಳಿರುವುದರಿಂದ, ಅಸ್ಮಿನ್—ಈ ಶ್ರುತಿಯ, ಸಮಸ್ತೇ ಅರ್ಥೇ—ಸಕಲವಾದ ಅರ್ಥದಲ್ಲಿ, ಆರ್ಯೈಃ—ಸಜ್ಜನರಿಂದ, ಕದಾಚನ—ಎಂದಿಗೂ, ಸಂಶಯಃ—ಸಂಶಯವು (ಗ್ರಾಹ್ಯವೆಂಬ ವಿಷಯದಲ್ಲಿ ಸಂದೇಹವು), ನ ಕಾರ್ಯಃ—ಮಾಡತಕ್ಕದ್ದಲ್ಲ.

---

ದಿಲ್ಲವೇ?); (೪೦೮). ಈ ಶ್ರುತಿ ಪ್ರತಿಪಾದ್ಯ ಇಂದ್ರನು, ಪುರಂದರನಲ್ಲವೆಂಬುದು ಬೇರೆರಡು ಯುಕ್ತಿಗಳಿಂದಲೂ ಸಿದ್ಧವಾಗುತ್ತದೆ; ಪುರಂದರನು ಶತದಶ ಶಬ್ದ ಗಳಿಂದ ಬೋಧ್ಯವಾದ ಬಹುರೂಪಗಳುಳ್ಳವನಲ್ಲ; ನಶ್ವರವಾದ ಐಶ್ವರ್ಯ ವುಳ್ಳವನು, ಪರಮೇಶ್ವರ ಪದ ಮುಖ್ಯವಾಚ್ಯನಲ್ಲ; ಉಭಯ ಯುಕ್ತಿಗಳೂ ಶ್ರುತಿ ಸೂಚಿತಗಳೇ ಆಗಿವೆ (೪೦೯). ಶ್ರುತಿ ಸೂಚಿತಗಳೆಂಬ ಯುಕ್ತಿಗಳು, 'ಹಿ' ಎಂಬ ಶಬ್ದದಿಂದ ವಿದ್ವತ್ಪ್ರಸಿದ್ಧಿಯುಳ್ಳವೆಂದೂ, ಹಿಂದಿನ ಶ್ಲೋಕದಿಂದ ಸ್ಪಷ್ಟ ಗೊಳಿಸಿರುವುದರಿಂದ, ಈ ಶ್ರುತ್ಯುಕ್ತವಾದ ಸಮಸ್ತಾರ್ಥಗಳ ವಿಷಯದಲ್ಲಿ

**ಅಮುಕ್ತಾಗಮ್ಯಭೂರ್ಯಾ ಹಿ ಸಾ ಸಾಕ್ಷಾನ್ಮುಕ್ತಿರೇವ ಹಿ ।**
**ತತ್ರಾಪಿ ಭಗವದ್ಭಾಗ್ಯಮುಕ್ತಂ ಭಾಗವತೇ ಬಹು ।**
**ಯದಾಗಾತ್ಸನಕಾದೀನ್ ಸ್ವಾನ್ ಮುನೀನ್ ಅನುನಿನೀಷಯಾ**
|| ೪೧೧ ||

ಮಾಯಾತಿದೂರನಾದ ವೈಕುಂಠಪತಿಯಲ್ಲಿ ಕೇಳಿಬರುವ (ಪ್ರಯೋಗಿಸಲ್ಪಡುವ) ಮಾಯಾಶಬ್ದವು, ಮಾಹಾತ್ಮ್ಯವಾಚಕವೇ ಸರಿ–ಅವಿದ್ಯಾವಾಚಕವಲ್ಲ, ಎಂದು ಹೇಳುತ್ತಾರೆ :—

ಯಾ–ಯಾವುದು, ಅಮುಕ್ತಾಗಮ್ಯಭೂಃ–ಅಮುಕ್ತರಿಂದ ಅಗಮ್ಯವಾದ (ಹೊಂದಲಶಕ್ಯವಾದ) ಲೋಕವು, ಹಿ –ಎಂದು ಪ್ರಸಿದ್ಧವೋ, ಸಾ–ಅದು (ಆ ವೈಕುಂಠಾದಿಯು), ಸಾಕ್ಷಾತ್–ಸ್ಪಷ್ಟವಾಗಿ, ಮುಕ್ತಿಃ ಏವ ಹಿ–ಮುಕ್ತಿಯೇ ಸರಿ ; ತತ್ರಾಪಿ–ಅಲ್ಲಿ ಸಹ, ಭಗವದ್ಭಾಗ್ಯಂ–ಭಗವಂತನ ಭಾಗ್ಯವು, ಭಾಗವತೇ–ಭಾಗವತದಲ್ಲಿ, ಬಹು–ಬಹುವಾಗಿ (ವಿಸ್ತಾರದಿಂದ), ಉಕ್ತಂ–ಹೇಳಲ್ಪಟ್ಟಿದೆ; ಸ್ವಾನ್–ತನ್ನವರಾದ (ಭಕ್ತರಾದ), ಮುನೀನ್–ಮುನಿಗಳಾದ, ಸನಕಾದೀನ್–ಸನಕಾದಿಗಳನ್ನು, ಅನುನಿನೀಷಯಾ–ವಿನಯೋಕ್ತಿಗಳಿಂದ ರಂಜಿಸುವ ಇಚ್ಛೆಯಿಂದ, ಯದಾ – ಯಾವಾಗ, ಆಗಾತ್ – ಬಂದನೋ (ಆತನ ವೈಭವವು ಮುಂದಿನ ಶ್ಲೋಕಗಳಲ್ಲಿ ವರ್ಣಿತವಾಗಿದೆ).

---

ಜ್ಞಾನಿಗಳು (ವಿವೇಕಿಗಳು) ಯಾವ ಸಂಶಯವನ್ನು ಹೊಂದಲು ಕಾರಣವಿಲ್ಲ (೪೧೦). ವೈಕುಂಠವು ಅಮುಕ್ತರಿಂದ ಹೊಂದಲಶಕ್ಯವಾದುದು. ಒಮ್ಮೆ ಸನಕಾದಿ ಮುನಿಗಳು ಶ್ರೀಹರಿದರ್ಶನವನ್ನಪೇಕ್ಷಿಸಿ, ವೈಕುಂಠಕ್ಕೆ ಹೋದರು ; ಆದರೆ ಒಳಗೆ ಹೋಗಲು, ಅವರು ಅಮುಕ್ತರಾದ್ದರಿಂದ ಅವಕಾಶವಿರಲಿಲ್ಲವಾಗಿ, ಶ್ರೀಹರಿಯು ತಾನೇಬಂದು ದ್ವಾರದಲ್ಲಿ ಅವರನ್ನು ಕಂಡನು ; ಈ ಕಥಾಭಾಗವನ್ನು ನಿರೂಪಿಸುವ ಶ್ರೀ ಭಾಗವತವು ಭಗವಂತನ ಮಹದೈಶ್ವರ್ಯವನ್ನು ವಿಸ್ತರಿಸುತ್ತದೆ; ವಿನಯೋಕ್ತಿಗಳಿಂದ ಮುನಿಗಳನ್ನು ರಂಜಿಸುವ ಇಚ್ಛೆಯಿಂದ ಅಲ್ಲಿಗೆ ಪ್ರಾಪ್ತನಾದ ವೈಕುಂಠಪತಿಯ ಭಾಗ್ಯವು ಅಸದೃಶವಾದುದು ; ಇದೂ 'ಮಾಯಾ' ಶಬ್ದವು, ಅವಿದ್ಯಾ ವಾಚಕವಲ್ಲ – ಮಹಿಮಾವಾಚಕವೆಂದು ಸಾಧಿಸುತ್ತದೆ (೪೧೧).

ವಿನತಾತನಯಾಂಸಸ್ಥಃ ಶ್ರಿಯಾ ದೇವ್ಯಾ ಸಮನ್ವಿತಃ ॥ ೪೧೨ ॥
ಚಾರ್ವಂಘ್ರಿಜಂಘಾಜಾನೂರು ಕಟಿಕುಕ್ಷಿವಲಿತ್ರಯಃ ।
ನಿಮ್ನನಾಭಿಸ್ಸ್ಫುರನ್ಮಧ್ಯ ವಿಶಾಲೋರಸ್ಥಲೋಜ್ಜ್ವಲಃ ॥ ೪೧೩ ॥
ಕಂಬುಗ್ರೀವೋ ವೃತ್ತಪೀನದೀರ್ಘಬಾಹುಚತುಷ್ಟಯಃ ।
ಅಮಂದಸಾಂದ್ರಸೌಂದರ್ಯಮಂದಿರಾಸ್ಯೇಂದುಮಂಡಲಃ ॥ ೪೧೪ ॥
ಚಾರ್ವಕ್ಷಿಫಾಲನಾಸಾಸ್ಯ ಕರ್ಣಗಂಡಾರುಣಾಧರಃ ।
ಮಂದಸ್ಮಿತಪ್ರಭಾಮಿಶ್ರಸುಂದರೋಷ್ಠಾರುಣದ್ಯುತಿಃ ॥ ೪೧೫ ॥
ಕಿರೀಟಹಾರಗ್ರೈವೇಯರತ್ನಕುಂಡಲಕೌಸ್ತುಭಃ ।
ಕಾಂಚೀಕಿಂಕಿಣಿಮಂಜೀರನೂಪುರಾದ್ಯೈರ್ವಿರಾಜಿತಃ ॥ ೪೧೬ ॥
ಕರಸ್ಥಕಮಲಂ ಧುನ್ವನ್ ಕರುಣಾಲೋಲಲೋಚನಃ ।
ಛತ್ರಚಾಮರವಾದಿತ್ರಗೀತನೃತ್ತಾಕ್ಷತಾಂಕುರೈಃ ॥ ೪೧೭ ॥
ವ್ಯಜನೈರ್ಧೂಪದೀಪೈಶ್ಚ ಪುಷ್ಪೈರ್ನೀರಾಜನೈಃ ಸ್ತವೈಃ ।
ಅರ್ಚ್ಯಮಾನಃ ಪ್ರತಿಪದಂ ಮುಕ್ತಸಂಸಾರಬಂಧನೈಃ ॥ ೪೧೮ ॥
ಸುರೈರಸಂಖ್ಯೈಃ ಪರಿತೋ ಮುಕ್ತಕ್ಲೇಶೈಃ ಕೃತೋತ್ಸವಃ ।
ತತ್ರಾಯಾತ್ಯಖಿಲ ಸರ್ವೇಶೋ ಯತ್ರ ತೇ ಸನಕಾದಯಃ ॥ ೪೧೯ ॥

ವಿನತಾತನಯಾಂಸಸ್ಥಃ–ಗರುಡಭುಜದ ಮೇಲೆ ಕೂತು, ಶ್ರಿಯಾ ದೇವ್ಯಾ–ಶ್ರೀದೇವಿಯಿಂದ (ಲಕ್ಷ್ಮೀದೇವಿಯಿಂದ), ಸಮನ್ವಿತಃ – ಕೂಡಿದವನಾಗಿ,

---

ಶ್ರೀ ವೈಕುಂಠಪತಿಯು, ಲಕ್ಷ್ಮೀ ಸಮೇತನಾಗಿ ಗರುಡನ ಹೆಗಲೇರಿ ಬರುತ್ತಿದ್ದಾನೆ; ಆತನ ಪಾದ, ಜಂಘೆ, ಊರು, ಕಟಿ, ಕುಕ್ಷಿ, ವಲಿತ್ರಯಗಳು, ತಗ್ಗಿದ ನಾಭಿ, ಪ್ರಕಾಶಿಸುವ ವಿಶಾಲ ವಕ್ಷಸ್ಥಲ, ಉಜ್ವಲವಾದ ಕಂಬುಕಂಠ, ದುಂಡಾಗಿ ತುಂಬಿದ ನಾಲ್ಕು ಬಾಹುಗಳು, ಪೂರ್ಣ ಸೌಂದರ್ಯದ ಮಂದಿರದಂತಿರುವ ಮುಖಚಂದ್ರಮನು, ಅತ್ಯಂತ ಮನೋಹರವಾಗಿವೆ; ಅಕ್ಷಿ, ಹಣೆ, ತಿಲಕ, ಬಾಯಿ, ಕಿವಿ, ಕಪೋಲ, ತುಟಿಗಳು ಮನೋಜ್ಞವಾಗಿವೆ; ಅಲ್ಲಿ ಪ್ರಕಾಶಿಸುವ

ಚಾರ್ವಂಘ್ರಿಜಂಘಾಜಾನೂರು ಕಟಿಕುಕ್ಷಿವಲಿತ್ರಯಃ–ಸುಂದರವಾದ ಪಾದಗಳು, ಜಂಘೆಗಳು, ಜಾನುಗಳು, ತೊಡೆಗಳು, ಕುಕ್ಷಿ ಮತ್ತು ವಲಿತ್ರಯ (ತ್ರಿವಳಿರೇಖೆ) ಗಳುಳ್ಳ, ನಿಮ್ನನಾಭಿಸ್ಫುರನ್ಮಧ್ಯವಿಶಾಲೋರಸ್ಥಲೋಜ್ಜ್ವಲಃ – ತಗ್ಗಾದ ನಾಭಿ (ಹೊಕ್ಕಳು) ಪ್ರಕಾಶಿಸುವ ಕಟಿಪ್ರದೇಶ, ವಿಶಾಲವಾದ ವಕ್ಷಸ್ಥಲ (ಎದೆ) ಗಳಿಂದ ಉಜ್ವಲವಾದ, ಕಂಬುಗ್ರೀವೋ ಪೀನ ದೀರ್ಘಬಾಹುಚತುಷ್ಟಯಃ – ಕಂಬು-ಕಂಠನೂ, ತುಂಬಿಕೊಂಡಿರುವ ನಾಲ್ಕು ದೀರ್ಘ (ಉದ್ದವಾದ) ಬಾಹುಗಳುಳ್ಳವನೂ, ಅಮಂದಸಾಂದ್ರಸೌಂದರ್ಯ ಮಂದಿರಾಸ್ಯೇಂದುಮಂಡಲಃ – ಪೂರ್ಣ ನಿಬಿಡ ಸೌಂದರ್ಯಕ್ಕೆ ಮಂದಿರದಂತಿರುವ ಮುಖಚಂದ್ರಮಂಡಲವುಳ್ಳವನೂ, ಚಾರ್ವಕ್ಷಿಫಾಲನಾಮಾಸ್ಯ ಕರ್ಣಗಂಡಾರುಣಾಧರಃ–ಮನೋಹರವಾದ ಕಣ್ಣು, ಹಣೆ, ತಿಲಕಗಳಿಂದ ಶೋಭಿಸುವ, ಅರುಣಕಪೋಲಕರ್ಣಗಳಿಂದಲೂ, ಕೆಂದುಟಿಗಳಿಂದಲೂ ಶೋಭಿಸುವ ಮುಖವುಳ್ಳವನೂ, ಮಂದಸ್ಮಿತಪ್ರಭಾಮಿಶ್ರ ಸುಂದ-ರೋಷ್ಠಾರುಣದ್ಯುತಿಃ–ಮಂದಸ್ಮಿತದಿಂದ ಪ್ರಕಾಶಿತವೂ ಸುಂದರ ತುಟಿಗಳಿಂದ ಶೋಭಿಸುವವನೂ, ಕಿರೀಟಹಾರಗ್ರೈವೇಯ ರತ್ನಕುಂಡಲಕೌಸ್ತುಭಃ–ಕಿರೀಟ, ಹಾರಗಳುಳ್ಳ ಕಂಠ, ರತ್ನಕುಂಡಲಗಳಿಂದ ಮತ್ತು ಕೌಸ್ತುಭಮಣಿಯಿಂದ ವಿರಾಜಿಸುವವನೂ, ಕಾಂಚೀಕಿಂಕಿಣಿಮಂಜೀರ ನೂಪುರಾದ್ಯೈರ್ವಿರಾಜಿತಃ–ಒಡ್ಯಾಣ, ಧ್ವನಿಗೈವ ಗೆಜ್ಜೆಗಳುಳ್ಳ ಖುಳಿ ಮತ್ತು ನೂಪುರ ಮೊದಲಾದ ಆಭರಣಗಳಿಂದ ವಿರಾಜಿತನೂ, ಕರಸ್ಥಕಮಲಂ–ಕೈಯಲ್ಲಿ ಹಿಡಿದಿರುವ ಕಮಲವನ್ನು,

---

ಮಂದಹಾಸದ ಕಾಂತಿಯಿಂದ ಮಿಶ್ರಿತವಾದ ಸುಂದರವಾದ ತುಟಿಗಳು, ಅತ್ಯಾಕರ್ಷಕವಾಗಿವೆ, ಕಿರೀಟ, ರತ್ನಹಾರಗಳಿಂದಲೂ, ರತ್ನಕುಂಡಲಗಳಿಂದಲೂ, ಕಂಠದಲ್ಲಿ ವಿರಾಜಿಸುವ ಕೌಸ್ತುಭ ಮಣಿಯಿಂದಲೂ, ಅತ್ಯಂತ ಶೋಭಿಸುವ ಮನೋಹರವಾದ ರೂಪವುಳ್ಳವನು ; ಕಾಂಚಿಯಲ್ಲಿ ಶಬ್ದಗೈಯುವ ಗೆಜ್ಜೆಗಳ ಧ್ವನಿಯಿಂದಲೂ, ಖುಳಿ ನೂಪುರಾದಿಗಳಿಂದ ಶೋಭಿಸುವ ಪಾದಗಳುಳ್ಳವನೂ, ಆಗಿ ಕೈಯಲ್ಲಿರುವ ಕಮಲ ಪುಷ್ಪವನ್ನು ತೂಗಾಡಿಸುತ್ತ, ದಯಾಪೂರ್ಣವಾದ ನೋಟವುಳ್ಳವನೂ ಆದ ಆ ವೈಕುಂಠಪತಿಯು, ಛತ್ರ, ಚಾಮರ, ವಾದ್ಯ, ಗೀತ, ನೃತ್ಯಾದಿಗಳಿಂದ ಸೇವಿಸಲ್ಪಡುತ್ತಿರುವ ಆ ಮಹಾ ಪ್ರಭುವು, ಅಕ್ಷತ, ಅಂಕುರಗಳಿಂದಲೂ, ವ್ಯಜನಗಳಿಂದಲೂ, ಧೂಪ, ದೀಪ, ಪುಷ್ಪ, ನೀರಾಜನಾದಿಗಳಿಂದಲೂ, ಉತ್ತಮ ಸ್ತೋತ್ರಗಳಿಂದಲೂ, ಸುತ್ತಲೂ ನಿಂತು ಅರ್ಚಿಸುತ್ತಿರುವ

ಘುನ್ವನ್ – ಅಲ್ಲಾಡಿಸುತ್ತ, ಕರುಣಾಲೋಲಲೋಚನಃ – ದಯಾಪೂರ್ಣವಾದ ಚಂಚಲ (ಚಪಲ) ಕಣ್ಣುಳ್ಳವನೂ, ಛತ್ರಚಾಮರವಾದಿತ್ರಗೀತನೃತ್ತಾಕ್ಷತಾಂ-ಕುರೈಃ–ಛತ್ರ, ಚಾಮರ, ವಾದ್ಯ, ಗೀತ, ನೃತ್ಯಗಳಿಂದಲೂ ಅಕ್ಷತ, ಅಂಕುರ ಗಳಿಂದಲೂ, ವ್ಯಜನೈರ್ಧೂಪದೀಪೈಃ.ಚ–ವ್ಯಜನ, ಧೂಪ, ದೀಪಗಳಿಂದಲೂ, ಪುಷ್ಪೈಃ – ಪುಷ್ಪಗಳಿಂದಲೂ, ನೀರಾಜನೈಃ – ಆರತಿಗಳಿಂದಲೂ, ಸ್ತವೈಃ– ಸ್ತೋತ್ರಗಳಿಂದಲೂ, ಪ್ರತಿಪದಂ – ಹೆಜ್ಜೆಹೆಜ್ಜೆಗೂ, ಅರ್ಚ್ಯಮಾನಃ – ಪೂಜಿಸ ಲ್ಪಡುವವನಾಗಿ, ಮುಕ್ತಸಂಸಾರಬಂಧನೈಃ – ಸಂಸಾರದಿಂದ ಮುಕ್ತರಾದವ ರಿಂದಲೂ, ಅಸಂಖ್ಯೈಃ–ಅಸಂಖ್ಯರಾದ, ಸುರೈಃ–ದೇವತೆಗಳಿಂದಲೂ, ಪರಿತಃ– ಸುತ್ತುವರಿಯಲ್ಪಟ್ಟವನಾಗಿ, ಕೃತೋತ್ಸವಃ–ಮಾಡಲಾದ ಉತ್ಸವವುಳ್ಳವನಾಗಿ, ಯತ್ರ–ಎಲ್ಲಿ, ತೇ–ಆ, ಸನಕಾದಯಃ–ಸನಕಾದಿ ಮುನಿಗಳೋ, ತತ್ರ–ಅಲ್ಲಿಗೆ (ಅವರಿದ್ದಲ್ಲಿಗೆ), ಸರ್ವೇಶಃ – ಸರ್ವಸ್ವಾಮಿಯು (ಮಹಾಸ್ವಾಮಿಯು – ವೈಕುಂಠ ಪತಿಯು), ಆಯಾತ್ ಕಿಲ–ಬಂದನೆಂಬುದು ಪ್ರಸಿದ್ಧವು.

**ಜೀವನ್ಮುಕ್ತೈಶ್ಚ ಮುನಿಭಿರಗಮ್ಯಾ ಸಾ ಹರೇಃ ಪುರೀ ।**
**ಆಸೀತ್ಪರಮಮುಕ್ತಾನಾಮಾಸ್ಥಾನ್ಯೇವ ವಿವೇಕಿನಾಂ ॥ ೪೨೦ ॥**

ಜೀವನ್ಮುಕ್ತೈಃ ಮುನಿಭಿಶ್ಚ–ಜೀವನ್ಮುಕ್ತರಾದ ಸನಕಾದಿ ಮುನಿಗಳಿಂದ ಸಹ, ಸಾ ಹರೇಃ ಪುರೀ–ಶ್ರೀಹರಿಯ ವೈಕುಂಠನಗರಿಯು, ಅಗಮ್ಯಾ–ಹೊಂದಲು ಶಕ್ಯವಾಗದುದು ; ವಿವೇಕಿನಾಂ – ವಿವೇಕವುಳ್ಳವರಿಗೆ, ಪರಮಮುಕ್ತಾನಾಂ – ಪರಮಮುಕ್ತರ, ಆಸ್ಥಾನ್ಯೇವ – ವಾಸಯೋಗ್ಯಸ್ಥಲಮಾತ್ರವೇ, ಆಸೀತ್ – ಆಯಿತು.

---

ಅಸಂಖ್ಯ ದೇವತೆಗಳಿಂದಲೂ ಸಂಸಾರ ಬಂಧ ನಿರ್ಮುಕ್ತರಾದ ಅನಂತ ಮುಕ್ತ ರಿಂದಲೂ, ಹೆಜ್ಜೆಹೆಜ್ಜೆಗೂ ಸ್ತುತಿಸಲ್ಪಡುತ್ತಾ, ಮಹೋತ್ಸವದ ವೈಭವದಿಂದ, ಸನಕಾದಿಗಳು ಇದ್ದೆಡೆಗೆ (ಮಹಾದ್ವಾರದ ಬಳಿಗೆ) ಆ ಮಹಾಪ್ರಭುವು ಬಂದ ನೆಂದು, ಭಾಗವತವು ವಿವರಿಸುತ್ತದೆ; (೪೧೨ – ೪೧೯ ). ಇದರಿಂದ, ಹರಿಪುರಿಯು (ವೈಕುಂಠ ನಗರಿಯು) ಜೀವನ್ಮುಕ್ತರಾದ ಮಹಾಭಕ್ತರಿಗೂ

**ನ ಚೇದಂತಃಪುರಂ ಸರ್ವಾನ್ ಪ್ರವೇಶ್ಯಾನಂದಯೇದ್ಧಿ ತಾನ್ ।**
**ಕೃಪಾಲುರ್ಭಕ್ತಿಭರಿತಾಂಸ್ತತೋ ನಾಮುಕ್ತಭೂರಸೌ ॥ ೪೨೧ ॥**

**ತತ್ರಾಪ್ಯುಕ್ತಪ್ರಮಾಣೇನ ಪ್ರಭುಃ ಸಾಕಾರ ಏವ ಸಃ ।**
**ಶ್ರೀಶ್ಚ ದಿವ್ಯಮನೋಜ್ಞಾಂಗೀ ಭೃತ್ಯಾಸ್ತೇ ದಿವ್ಯಮೂರ್ತಯಃ ।**
**ಅನಂತಾಸ್ತೇ ಚ ಸೇವಂತೇ ಸೇವ್ಯಸ್ತೈಃ ಸರ್ವದಾ ಪ್ರಭುಃ ॥ ೪೨೨ ॥**

**ಹರ್ಮ್ಯಾಣಿ ರತ್ನಭವನಾನ್ಯುದ್ಯಾನೋಪವನಾನಿ ಚ ।**
**ವಾಪೀಕೂಪತಟಾಕಾನಿ ಸಂತಿ ತತ್ರ ಗೃಹೇ ಗೃಹೇ ॥ ೪೨೩ ॥**

ನ ಚೇತ್–ಮುಕ್ತರಿಗೆ ಮಾತ್ರ ಗಮ್ಯವಲ್ಲದಿದ್ದರೆ, ಕೃಪಾಲುಃ–ದಯಾಸಮುದ್ರನಾದ ಭಗವಂತನು, ಭಕ್ತಿ ಭರಿತಾನ್–ಪೂರ್ಣ ಭಕ್ತಿಯುಳ್ಳವರಾದ, ಸರ್ವಾನ್ – ಸನಕಾದಿಗಳೆಲ್ಲರನ್ನು, ಅಂತಃಪುರಂ – (ತನ್ನ) ಅಂತಃಪುರವನ್ನು, ಪ್ರವೇಶ್ಯ–ಪ್ರವೇಶಿಸಿ (ಒಳಗೆ ಕರೆದೊಯ್ದು), ತಾನ್–ಅವರನ್ನು, ಆನಂದಯೇತ್ ಹಿ – ಸಂತೋಷಪಡಿಸುತ್ತಿದ್ದನು; ತತಃ – ಆದ್ದರಿಂದ, ಅಸೌ – ವೈಕುಂಠವು,

---

(ಸನಕಾದಿ ಮುನಿಗಳಿಗೂ) ಅಗಮ್ಯವೆಂದೂ, ಪರಮಮುಕ್ತರ ಆವಾಸಸ್ಥಾನವೆಂದೂ ವಿವೇಕಿಗಳು ಸುಲಭವಾಗಿ ಗ್ರಹಿಸಬಹುದಾಗಿದೆ (೪೨೦). ವೈಕುಂಠ ನಗರಿಯು, ಅಮುಕ್ತರಿಗೆ ಅಗಮ್ಯವಲ್ಲದಿದ್ದರೆ, ಜೀವನ್ಮುಕ್ತರಾದ ಸನಕಾದಿಗಳನ್ನು ಶ್ರೀಹರಿಯು ಒಳಗೆ ಕರೆದೊಯ್ದು ಅಂತಃಪುರದಲ್ಲಿ, ಪ್ರವೇಶಿಸಿ, ಆನಂದಪಡಿಸುತ್ತಿದ್ದನು; ಕೃಪಾಲುವಾದ ಶ್ರೀಹರಿಯು ಭಕ್ತಿಭರಿತರಾದ ಸನಕಾದಿಗಳಿಗೆ ಅಷ್ಟೆ, ಮಾಡುತ್ತಿರಲಿಲ್ಲವೇ ? ವೈಕುಂಠ ನಗರಿಯೊಳಗಿನಿಂದ ಮಹಾವೈಭವದ ಉತ್ಸವದಲ್ಲಿ ಪ್ರಾಪ್ತವಾದ್ದನ್ನು ವರ್ಣಿಸಿದ ಭಾಗವತ ಪ್ರಮಾಣಾನುಸಾರವಾಗಿ, ವೈಕುಂಠವು ಅಮುಕ್ತರಿಗೆ ಗಮ್ಯವಲ್ಲವೆಂದೂ, ಪ್ರಭುವು ಸಾಕಾರನೆಂದೂ, ಲಕ್ಷ್ಮೀದೇವಿಯೂ ದಿವ್ಯ ಮನೋಹರಾಂಗಿ ಎಂದೂ, ಸೇವಕರಾದ ಅಸಂಖ್ಯ ಮುಕ್ತರೆಲ್ಲರೂ ದಿವ್ಯಸುಂದರ ರೂಪವುಳ್ಳವರೆಂದೂ, ಈ ಎಲ್ಲರಿಂದ ಸೇವ್ಯನಾದ ಭಗವಂತನು ಸರ್ವದಾ ಅವರ ಮಹಾಪ್ರಭುವೆಂದೂ ಸಿದ್ಧವಾಗುತ್ತದೆ; ರತ್ನ ನಿರ್ಮಿತಗೃಹಗಳು, ಪ್ರತಿಯೊಂದೂ ವಾಪೀಕೂಪ ತಟಾಕಾದಿಗಳಿಂದ, ಉದ್ಯಾನ, ಉಪವನಗಳಿಂದಲೂ, ಶೋಭಿಸುತ್ತ, ಮುಕ್ತಯೋಗ್ಯವೆನಿಸಿವೆ (೪೨೧–೪೨೩).

ಅಮುಕ್ತಭೋಃ – ಅಮುಕ್ತರಿರುವ ಸ್ಥಲವು, ನ – ಅಲ್ಲ (ಮುಕ್ತಮಾತ್ರ ಗಮ್ಯವಾದುದು); ತತ್ರಾಪಿ – ಅಲ್ಲಿಯೂ ಸಹ (ಮುಕ್ತಭಾಗದಲ್ಲಿ ಸಹ), ಉಕ್ತಪ್ರಮಾಣೇನ–ಹೇಳಲಾದ ಪ್ರಮಾಣ ವಾಕ್ಯಗಳಿಂದ (ಅಲ್ಲಿಂದ ಈ ಹಿಂದೆ ಹೇಳಿದ ದಿವ್ಯರೂಪದಿಂದ ಉತ್ಸವದೊಡನೆ ಪೂಜಿತನಾಗಿ ದ್ವಾರದವರೆಗೆ ಬಂದನೆಂಬ ವಾಕ್ಯಗಳ ಪ್ರಮಾಣವು), ಸಃ ಪ್ರಭುಃ–ಆ ಮಹಾಸ್ವಾಮಿಯು, ಸಾಕಾರ ಏವ–ಆಕಾರವುಳ್ಳವನೇ (ನಿರಾಕಾರನಲ್ಲ); ಶ್ರೀಶ್ಚ – ಲಕ್ಷ್ಮೀದೇವಿಯೂ, ದಿವ್ಯ-ಮನೋಜ್ಞಾಂಗೀ–ದಿವ್ಯಮನೋಹರ ದೇಹವುಳ್ಳವಳೂ, ತೇ–ಆ, ಭೃತ್ಯಾಃ ದಿವ್ಯಮೂರ್ತಯಃ – ದಿವ್ಯರೂಪವುಳ್ಳವರು; ತೇ – ಅವರು (ಆ ಭೃತ್ಯರು), ಅನಂತಾಶ್ಚ–ಅಸಂಖ್ಯರಾಗಿರುವರು (ನಿತ್ಯದಿವ್ಯಸ್ವರೂಪರೇ), ಸೇವಂತೇ–ಸೇವಿಸುತ್ತಾರೆ; ಪ್ರಭುಃ – ಮಹಾಸ್ವಾಮಿಯು, ಸರ್ವದಾ – ಸದಾ, ತೈಃ – ಅವರಿಂದ (ಮುಕ್ತಭೃತ್ಯರಿಂದ), ಸೇವ್ಯಃ – ಸೇವಿಸಲ್ಪಡುತ್ತಾನೆ; ರತ್ನಭವನಾನಿ – ರತ್ನನಿರ್ಮಿತಗಳಾದ, ಹರ್ಮ್ಯಾಣಿ–ಗೃಹಗಳು (ಇರುತ್ತವೆ); ಉದ್ಯಾನೋಪವನಾನಿ–ಉದ್ಯಾನಗಳೂ, ಉಪವನಗಳೂ, ಚ – ಮತ್ತು, ವಾಪೀಕೂಪತಟಾಕಾನಿ–ವಾಪೀ (ಇಳಿದು ತುಂಬುವ ಬಾವಿ), ಕೂಪ (ಬಾವಿ) ಸಣ್ಣ ಸರೋವರಗಳು, ಗೃಹೇಗೃಹೇ–ಪ್ರತಿಗೃಹಕ್ಕೂ, ತತ್ರ–ವೈಕುಂಠದಲ್ಲಿ, ಸಂತಿ–ಇರುತ್ತವೆ.

**ಪಕ್ವೋ ವಾತಾಪಿದೇಹೋಽಪಿ ಭಿಕ್ಷೋಃ ಶಾಕಾದಿರೂಪತಃ ।**
**ರಕ್ಷಃಶಕ್ತ್ಯಾ ಯಥಾಪೂರ್ವಂ ಲಕ್ಷ್ಯತೇ ತಕ್ಷಣೇ ಕಿಲ ॥ ೪೨೪ ॥**

ಮುಕ್ತಭೋಗ್ಯ ಅನ್ನಪಾಯಸಾದಿಗಳಿಗೆ ನಿತ್ಯತ್ವವನ್ನು ಸದೃಷ್ಟಾಂತವಾಗಿ ಉಪಪಾದಿಸುತ್ತಾರೆ :—

ಭಿಕ್ಷೋಃ – ಭಿಕ್ಷಾರ್ಥವಾಗಿ ಬಂದ ಬ್ರಾಹ್ಮಣನಿಗೆ, ಶಾಕಾದಿರೂಪತಃ – ಶಾಕಾದಿರೂಪದಿಂದ (ತರಕಾರಿಯಂತೆ ಕೊಯ್ದು), ಪಕ್ವಃ – ಬೇಯಿಸಲ್ಪಟ್ಟ, ವಾತಾಪಿದೇಹಃ ಅಪಿ–ವಾತಾಪಿ (ಎಂಬ ರಾಕ್ಷಸನ) ದೇಹವೂ, ರಕ್ಷಃಶಕ್ತ್ಯಾ–

---

ಮುಕ್ತರ ಅನ್ನಾದಿ ಆಹಾರ ಪದಾರ್ಥಗಳೂ, ಮುಕ್ತಿಯಲ್ಲಿ ನಿತ್ಯವೇ ಆಗಿರುತ್ತವೆ; ವಾತಾಪಿಯ ದೇಹವನ್ನು ಕತ್ತರಿಸಿ, ಬೇಯಿಸಿ, ಬ್ರಾಹ್ಮಣ ಅತಿಥಿಗೆ ಭೋಜನ ಮಾಡಿಸಿದರೂ, ಅಣ್ಣ ಇಲ್ವಲನು ಕರೆದೊಡನೆ ಹೊಟ್ಟೆ ಸೀಳಿಕೊಂಡು ಹೊರಗೆ ಬಂದು ಮೊದಲಿನಂತೆ ನಿಲ್ಲುತ್ತಿದ್ದನು; ನಂತರ ಇಬ್ಬರೂ ಕೂಡಿ

ರಾಕ್ಷಸನ ಶಕ್ತಿಯಿಂದ (ಅಣ್ಣನಾದ ಇಲ್ವನ ತಪಃಶಕ್ತಿಯಿಂದ), ಯಥಾಪೂರ್ವಂ– ಮೊದಲಿದ್ದಂತೆ, ತಕ್ಷಣೇ–(ಅಣ್ಣ ಕೂಗಿ ಕರೆದ ಕ್ಷಣದಲ್ಲಿಯೇ), ಲಕ್ಷ್ಯತೇ– (ಬ್ರಾಹ್ಮಣನ ಹೊಟ್ಟೆಯಿಂದ ಹೊರಗೆಬಂದು ಮೊದಲಿನಂತೆ) ಕಾಣಲ್ಪಡುತ್ತಾನೆ; ಕಿಲ–ಪುರಾಣ ಪ್ರಸಿದ್ಧವಷ್ಟೆ (ಮುಕ್ತರಿಗೆ ಅನ್ನಪಾನಾದಿಗಳ ಕೊರತೆಯಿಲ್ಲ– ಅವೆಲ್ಲವೂ ನಿತ್ಯವೇ–ವಾತಾಪಿಯು ನಿತ್ಯನಾಗಿಯೇ ಇದ್ದಂತೆ).[1]

**ಅತೋ ಮೌಕ್ತಂ ಸಮಸ್ತಂ ಚ ವಸ್ತು ಭುಕ್ತಂ ಚ ತೈಃ ಪುನಃ ।**
**ತಥೈವ ತಿಷ್ಠೇತ್ತನ್ನಿತ್ಯಂ ಸ್ಯಾಚ್ಚಾಜಂ ಲಿಂಗದೇಹವತ್ ॥ ೪೨೫ ॥**

ಅತಃ–(ಕತ್ತರಿಸಿ ತಿನ್ನಲ್ಪಟ್ಟ ದೇಹವು ಮೊದಲಿದ್ದಂತೆ ಕಂಡದ್ದರಿಂದ) ಹೇಗೋ, ಮೌಕ್ತಂ–ಮುಕ್ತಿಯಲ್ಲಿನ, ಸಮಸ್ತಂ ಚ–ಸರ್ವ, ತೈಃ–ಮುಕ್ತರಿಂದ, ಭುಕ್ತಂ ಚ ವಸ್ತು–ಭೋಗಿಸಲ್ಪಟ್ಟ ಪದಾರ್ಥವೂ, ಪುನಃ–ಮತ್ತೆ, ತಥಾ ಏವ– ಹಾಗೆಯೇ (ಮೊದಲಿದ್ದಂತೆಯೇ), ತಿಷ್ಠೇತ್–ಇರುತ್ತದೆ ; ತತ್–ಅದು, ಅಜಂ– ಪುನಃ ಹುಟ್ಟುವುದೆಂಬುದಿಲ್ಲದೇ, ಲಿಂಗದೇಹವತ್–ಅನಾದಿಯಾದ ಲಿಂಗದೇಹ ದಂತೆ (ಅದೇ ಲಿಂಗದೇಹವು ಸಂಸಾರದಲ್ಲಿರುವ ಪರ್ಯಂತ, ಜೀವರೊಂದಿಗೆ ಇದ್ದು

---

ಬ್ರಾಹ್ಮಣ ಮಾಂಸವನ್ನು ಭಕ್ಷಿಸುತ್ತಿದ್ದರೆಂಬ ಪೌರಾಣಿಕ ಕಥೆಯು ಪ್ರಸಿದ್ಧವಿದೆ; (೪೨೪). ಅಲ್ಪನಾದ ರಾಕ್ಷಸನ ತಪಃಶಕ್ತಿಯಿಂದ ಇದು ಸಾಧ್ಯವಿರಲು, ಮುಕ್ತರಿಂದ ಭುಕ್ತವಾದ ಸಮಸ್ತವೂ, ನಿತ್ಯವೆಂದು ಹೇಳಲೇನು ? ಸಂಸಾರದ ದೆಶೆಯಲ್ಲಿರುವ ಜೀವನ ಲಿಂಗದೇಹವು, ಆತನ ಅಸಂಖ್ಯ ಸ್ಥೂಲ ದೇಹಗಳೊಂದಿಗೆ ಬರುತ್ತಿದ್ದರೂ, ಅದು ಅನಾದಿ ನಿತ್ಯವಾಗಿರುವಂತೆ, ಮುಕ್ತ ಭುಕ್ತ ಸರ್ವವೂ ನಿತ್ಯವೇ ಆಗಿರುತ್ತದೆ; ಭೋಗಿಸಿದರೂ ಹಾಗೆಯೇ ಇರುತ್ತದೆ (೪೨೫).

---

[1] ವಾತಾಪಿ ಇಲ್ವಲರು ಉಗ್ರ ರಾಕ್ಷಸರು ; ವಾತಾಪಿಯನ್ನು ಪಕ್ವಮಾಡಿಬಂದ ಬ್ರಾಹ್ಮಣ ಅತಿಥಿಗೆ ಉಣಬಡಿಸಿ, ನಂತರ ಇಲ್ವಲನು 'ಹೇ ವಾತಾಪಿ' ಎಂದೊಡನೆಯೇ ಬ್ರಾಹ್ಮಣನ ಹೊಟ್ಟೆಯಿಂದ ದೃಢಾಂಗನಾಗಿ (ಮೊದಲಿನಂತೆ) ಹೊರಗೆ ಬರುತ್ತಿದ್ದನು ; ಬ್ರಾಹ್ಮಣನು ಸಾಯುತ್ತಿದ್ದನು ; ಆತನ ಮಾಂಸವನ್ನು ಇಬ್ಬರೂ ಸೇರಿ ಭೋಜನ ಮಾಡು ತ್ತಿದ್ದರು ; ಹೀಗೆ ಬಹು ಬ್ರಾಹ್ಮಣರನ್ನು ಸಂಹರಿಸುತ್ತಿರಲು ಅಗಸ್ತ್ಯ ಋಷಿಗಳು ಅತಿಥಿ ಗಳಾಗಿ ಬಂದು, ವಾತಾಪಿಯನ್ನು ಉಂಡು, ಜೀರ್ಣಿಸಿಕೊಂಡು ('ವಾತಾಪಿ ಜೀರ್ಣೋಭವ' ಎಂದು ಹೇಳುವ ಮಾತ್ರದಿಂದ) ತಾವು ಉಳಿದುಕೊಂಡು, ಬ್ರಾಹ್ಮಣರನ್ನು ತಮ್ಮ ತಪಃ ಪ್ರಭಾವದಿಂದ ರಕ್ಷಿಸಿದರೆಂಬ ಪೌರಾಣಿಕಕಥೆಯು ಪ್ರಸಿದ್ಧವಿದೆ.

*

ಸ್ಥೂಲದೇಹದ ಜೊತೆಗೆ ಬರುವಂತೆ), ನಿತ್ಯಂ – ನಿತ್ಯವಾದುದು, ಸ್ಯಾತ್– ಆಗಿರುತ್ತದೆ.

**ಸರ್ವಃ ಸರ್ವೇಶಶಕ್ತ್ಯೈವ ಶ್ರುತ್ಯುಕ್ತಾರ್ಥಃ ಸಮರ್ಥ್ಯತೇ ।**
**ಅನ್ಯೈರಘಟಿತಂ ಯೋಽಸೌ ಘಟಯೇದಣುಗೋ ಮಹಾನ್ ॥೪೨೬॥**

ಸರ್ವಃ–ಸಕಲ, ಶ್ರುತ್ಯುಕ್ತಾರ್ಥಃ–ಶ್ರುತಿಯಲ್ಲಿ ಹೇಳಲಾದ ಅರ್ಥವೂ, ಸರ್ವೇಶ ಶಕ್ತ್ಯಾ ಏವ–ಸರ್ವೇಶನ ಸಾಮರ್ಥ್ಯದಿಂದಲೇ, ಸಮರ್ಥ್ಯತೇ–ಸಮರ್ಥಿಸಲ್ಪಡುತ್ತದೆ; ಯಃ–ಯಾವ ಸರ್ವೇಶನಾದ, ಅಸೌ–ಈ ಶ್ರೀಹರಿಯು, ಅಣುಗಃ– ಅಣುಗನಾದರೂ (ಪರಮಾಣುವಿನಲ್ಲಿದ್ದವನಾದರೂ), ಮಹಾನ್–(ಬ್ರಹ್ಮಾಂಡವನ್ನೇ ಧರಿಸುವ) ಮಹದ್ರೂಪವುಳ್ಳವನೂ ಆಗಿರುವನು (ಆತನು); ಅನ್ಯೈಃ– ಬೇರೆ ಯಾರಿಂದಲೂ, ಅಘಟಿತಂ – ಸಾಧಿಸಲಾಗದುದನ್ನು, ಘಟಯೇತ್– ಆಗುವಂತೆ ಮಾಡುವನು (ಅಲ್ಪಕನಾದ ರಾಕ್ಷಸನ ತಪಃಶಕ್ತಿಯಿಂದ, ಮೃತನಾದ ವಾತಾಪಿಯು ಪುನಃ ಪುನಃ ಎದ್ದು ಬರುವುದು, ಸಾಧಿಸಿದರೆ, ಅಘಟಿತ ಘಟಕನಾದ ಶ್ರೀಹರೀಚ್ಛೆಯಿಂದ ಮುಕ್ತರ ಸರ್ವವಸ್ತುಗಳೂ, ಅನಾದ್ಯನಂತಗಳಾಗಿ, ಹೇಗೆ ಭೋಗಿಸಿದರೂ, ಎಷ್ಟೇ ಭೋಗಿಸಿದರೂ, ಇದ್ದಂತೆ ನಿತ್ಯವಾಗಿಯೇ ಇರುವುದೇನೂ ಆಶ್ಚರ್ಯವಲ್ಲವಷ್ಟೆ).

**ಐಕ್ಯಂ ಚ ನಿರ್ಗುಣತ್ವಂ ಚ ನ ಶ್ರೌತಂ ನಾಪಿ ಯುಕ್ತಿಮತ್ ॥೪೨೭॥**

ಹೀಗಿರಲು, ಅಘಟಿತ ಘಟಕಶಕ್ತಿಯಿಂದ, ಜೀವೈಕ್ಯವನ್ನು ನಿರ್ಗುಣತ್ವವನ್ನು ತನಗೆ, ಭಗವಂತನು ಏಕೆ ಸಾಧಿಸುವನು, ಎನ್ನುತ್ತಾರೆ :—

---

ಪರಮಾಣುವಿನಲ್ಲಿರುವ (ಅಣುವಿಗೆ ಅಣುತರನಾದ) ಭಗವಂತನು, ಬ್ರಹ್ಮಾಂಡವನ್ನು ಧಾರಣಮಾಡಿರುವ ಮಹದ್ರೂಪವುಳ್ಳ, ಅಘಟಿತ ಘಟಕ ಸಾಮರ್ಥ್ಯವುಳ್ಳವನು ; ಶ್ರುತ್ಯುಕ್ತವಾದ ಸರ್ವೇಶನ ಸರ್ವಶಕ್ತಿಯಿಂದ, ಶ್ರುತ್ಯುಕ್ತ ಸರ್ವ ಪ್ರಮೇಯಗಳನ್ನು ಸಮರ್ಥಿಸಲು ಬರುತ್ತದೆ ; ಅನ್ಯರಿಂದ ಸಾಧ್ಯವಲ್ಲದ ಸರ್ವವನ್ನು, ಘಟನೆ ಮಾಡುವ ಶಕ್ತನಾಗಿದ್ದಾನೆ (೪೨೬). ಹೀಗೆ ಅಘಟಿತ ಘಟಕ ಶಕ್ತಿಯುಳ್ಳವನಾದರೂ, ಭಗವಂತನು, ತನ್ನ ನೀಚತ್ವಕ್ಕೆ ಕಾರಣವಾಗುವ ಜೀವೈಕ್ಯವನ್ನೂ, ನಿರ್ಗುಣತ್ವವನ್ನೂ ಘಟಿಸುವಂತೆ ಮಾಡುವುದಿಲ್ಲ ; ಜೀವೈಕ್ಯವೂ ನಿರ್ಗುಣತ್ವವೂ

ಐಕ್ಯಂ ಚ–ಜೀವೈಕ್ಯವೂ, ನಿರ್ಗುಣತ್ವಂ ಚ–ನಿರ್ಗುಣತ್ವವೂ, ಶ್ರೌತಂ ನ–ಶ್ರುತಿ ಪ್ರಮಾಣಸಿದ್ಧವಲ್ಲ (ಭಗವಂತನು, ಶ್ರುತಿ ಪ್ರಮಾಣಸಿದ್ಧವಾದ ಸರ್ವವನ್ನು ಸಂಭವಿಸುವಂತೆ ಮಾಡುವನು ; ಆದರೆ ಶಕ್ತನಾದರೂ ಅಪ್ರಾಮಾಣಿಕವಾದ ಶಶವಿಷಾಣವನ್ನು ಸಿದ್ಧಮಾಡುವುದಿಲ್ಲ–ಸರ್ವದಾ ಶ್ರುತಿ ಪ್ರಮಾಣಸಿದ್ಧವಾದ ವಸ್ತುವನ್ನೇ ನಿರ್ಮಿಸುತ್ತಾನೆ).

**ರುಣದ್ಧಿ ಯದ್ಧಿ ಘಟಕಶಕ್ತೀಶತ್ವೇ ಮಹಾಪ್ರಭೋಃ ।**
**ಘಟಯೇನ್ನೇದೃಶಾನರ್ಥಕರಮರ್ಥಂ ಸ ಬುದ್ಧಿಮಾನ್ ॥ ೪೨೮ ॥**

ಬೇರೆ ಯುಕ್ತಿಯನ್ನು ತೋರಿಸುತ್ತಾರೆ :—

ಸಃ – ಆತನು (ಅಘಟಿತ ಘಟಕಶಕ್ತಿಯುಳ್ಳ ಆ ಮಹಾಪ್ರಭುವು), ಬುದ್ಧಿಮಾನ್ – ಸರ್ವಜ್ಞನು (ಮಹಾ ವಿವೇಕಿಯು); ಯತ್ ಹಿ – ಯಾವ ಜೀವೈಕ್ಯಾದಿಯು, ಮಹಾಪ್ರಭೋಃ – ಮಹಾಸ್ವಾಮಿಯ (ತನ್ನ) ಘಟಕ ಶಕ್ತೀಶತ್ವೇ–ಅಘಟಿತ ಘಟಕಶಕ್ತಿಯನ್ನೂ, ಈಶತ್ವವನ್ನೂ, ರುಣದ್ಧಿ–ನಿರೋಧಿಸುವುದೋ (ತಡೆಹಿಡಿಯುವುದೋ), ಈದೃಶಾನರ್ಥಕರಂ ಅರ್ಥಂ–ಈ ಪ್ರಕಾರದ (ತನಗೇ) ಅನರ್ಥವನ್ನುಂಟುಮಾಡುವ ಕಾರ್ಯವನ್ನು, ನ ಘಟಯೇತ್–ಸಂಭವಿಸುವಂತೆ ಮಾಡುವುದಿಲ್ಲ.

**ದುಃಖಂ ಸಂಧಿತ್ಸತೋ ಯತ್ಸಾ ಶಕ್ತಿಃ ಪ್ರಚ್ಯವತೇ ಬಹಿಃ ॥ ೪೨೯ ॥**

ಆದ್ದರಿಂದ ತನ್ನಲ್ಲಿ ದುಃಖವು ಸಂಬಂಧಿಸುವಂತೆ ಮಾಡುವುದೇ ಇಲ್ಲವೆನ್ನುತ್ತಾರೆ :—

---

ಶ್ರುತಿಸಿದ್ಧವೂ ಅಲ್ಲ–ಯುಕ್ತಿ ಸಮ್ಮತವೂ ಅಲ್ಲ; (೪೨೭). ಶಶವಿಷಾಣವನ್ನು ನಿರ್ಮಿಸಲು ಶಕ್ತನೇ ಆದರೂ, ಅದು ಅಪ್ರಾಮಾಣಿಕವಾದ್ದರಿಂದ, ನಿರ್ಮಿಸುವುದಿಲ್ಲ; ಪ್ರಭುವು ಮಹಾ ಬುದ್ಧಿಶಾಲಿಯು,–ವಿವೇಕಿಯು ; ಜೀವೈಕ್ಯಾದಿಯು, ತನ್ನ ಅಘಟಿತ ಘಟಕ ಸಾಮರ್ಥ್ಯವನ್ನೇ ನಿರೋಧಿಸುತ್ತದೆ ; ತನ್ನ ಅನರ್ಥಕ್ಕೆ ಕಾರಣವಾಗುವುದನ್ನೆಂದಿಗೂ ಮಾಡನು (೪೨೮). ತನ್ನನ್ನೇ ದುಃಖಿಯನ್ನಾಗಿ ಮಾಡುವ ಕಾರ್ಯವನ್ನು ಸಾಧಿಸುವುದು, ಅಘಟಿತ ಘಟಕ ಶಕ್ತಿಯಲ್ಲ ; ಅಚಿಂತ್ಯ ಶಕ್ತಿಯೂ, ದುಃಖವೂ ಪರಸ್ಪರ ವಿರುದ್ಧವಲ್ಲವೇ ? ದುಃಖವುಳ್ಳವನಾದರೆ ಈ

ಯತ್—ಯಾವ ಕಾರಣದಿಂದ (ಅಘಟಿತ ಘಟಕಶಕ್ತನಾದರೂ ದುಃಖಿಯಾದರೆ, ಈ ಎರಡೂ ಪರಸ್ಪರ ವಿರುದ್ಧವಾಗುವುದರಿಂದ), ದುಃಖಂ—ದುಃಖವನ್ನು, ಸಂಧಿತ್ಸತಃ—(ತನಗೆ) ಸಂಬಂಧವಾಗುವಂತೆ ಮಾಡುವಾತನ, ಸಾ ಶಕ್ತಿಃ—ಆ (ಅಘಟಿತ ಘಟಕ) ಶಕ್ತಿಯು, ಬಹಿಃ ಪ್ರಚ್ಯವತೇ—(ಆತನಿಂದ) ಹೊರಗೆ ಸರಿಯುತ್ತದೆ (ಆತನಲ್ಲಿರುವುದೇ ಇಲ್ಲ).[1]

**ಯಃ ಸರ್ವೇಶ್ವರತಾಗುಪ್ತ್ಯೈ ಸೇಹೇ ವಿಪ್ರಪದಾಹತಿಂ ।**
**ಸ್ವಮಹಿಮ್ನಿ ಮಹಾಂಸ್ತಸ್ಯ ಭರಃ ಸ್ತೋತ್ರರ್ಥಕಾರಿಣಃ ॥ ೪೩೦ ॥**

ಸ್ವಮಹಿಮೆಯನ್ನು ಭಗವಂತನು ಎಂದೂ ತ್ಯಜಿಸಲಿಚ್ಛಿಸುವುದಿಲ್ಲವೆಂಬುದನ್ನು ಆತನ ಚರಿತ್ರೆಯಿಂದಲೇ ಅನುಭವಾರೂಢಮಾಡಿಕೊಡುತ್ತಾರೆ :—

ಯಃ — ಭಗವಂತನು, ಸರ್ವೇಶ್ವರತಾಗುಪ್ತ್ಯೈ — ತನ್ನ ಸರ್ವೋತ್ತಮತ್ವದ ರಕ್ಷಣೆಗಾಗಿ, ವಿಪ್ರಪದಾಹತಿಃ — ಭೃಗುಮುನಿಯ ಪಾದಘಾತವನ್ನು, ಸೇಹೇ — ಸಹಿಸಿದನು ; ಸ್ತೋತ್ರರ್ಥಕಾರಿಣಃ—(ಹೇತುಗರ್ಭ ವಿಶೇಷಣವಿದು) ಸ್ತುತ್ಯರ್ಥವಾಗಿ (ಅಲ್ಪರಾದ ತೃಣಜೀವರಿಗೆ ಸಹ ಮೋಕ್ಷಫಲವನ್ನು ಕೊಡುವ) ಸರ್ವವನ್ನು ಮಾಡುವ, ತಸ್ಯ—ಭಗವಂತನಿಗೆ, ಸ್ವಮಹಿಮ್ನಿ—ತನ್ನ ಮಹತ್ತ್ವದಲ್ಲಿ (ಮಹಿಮೆಯಲ್ಲಿ), ಮಹಾನ್‌ಭರಃ — ಬಹುವಾದ ವಿಶ್ವಾಸವಿದೆ ; (ಸ್ವಮಹಿಮೆಯನ್ನು ಎಂದೂ ತ್ಯಜಿಸುವುದಿಲ್ಲ—ಜೀವೈಕ್ಯವನ್ನು ಘಟಿಸಿದರೆ, ಜೀವನಂತೆ ನೀಚತ್ವವು ತನಗೂ ಸಂಭವಿಸುತ್ತದೆ ; ಈಶತ್ವದ ಹಾನಿಯುಂಟಾಗುತ್ತದೆ ; ನಿರ್ಗುಣತ್ವದಿಂದ ಅಘಟಿತ ಘಟಕ ಶಕ್ತಿಯ ಲೋಪ ಪ್ರಸಂಗವೂ ಉಂಟಾಗುತ್ತದೆ).

---

ಶಕ್ತಿಯು ಇರುವುದೇ ಇಲ್ಲ (೪೨೯). ಭಗವಂತನು, ತನ್ನ ಸರ್ವೇಶ್ವರತ್ವದ ರಕ್ಷಣೆಗಾಗಿ, ಬ್ರಾಹ್ಮಣನ (ಭೃಗು ಋಷಿಯ) ಪಾದ ತಾಡನವನ್ನು ಸಹಿಸಿದನು ; ತನ್ನನ್ನು ಮಹಾ ಮಹಿಮನೆಂದು ಸ್ತುತಿಸುವ ತೃಣಾದಿ ಕ್ಷುಲ್ಲಕ ಜೀವಗಳಿಗೂ ಮೋಕ್ಷವನ್ನೇ ಪ್ರದಾನಮಾಡುತ್ತಾನೆ; ತನ್ನ ಮಾಹಾತ್ಮ್ಯೆಯಲ್ಲಿ ಪೂರ್ಣ ವಿಶ್ವಾಸವುಳ್ಳವನು ; ಜೀವೈಕ್ಯದಿಂದ ಸರ್ವೇಶತ್ವದ ಹಾನಿಯೂ, ನಿರ್ಗುಣತ್ವದಿಂದ

---

[1] ಶತ್ರುವಿನ ಉದರವನ್ನು ಸೀಳಲು ಸಮರ್ಥವಾದ ತನ್ನ ನಖಗಳಿಂದ, ನರಹರಿಯು, ತನ್ನ ಉದರವನ್ನು ಸೀಳಿಕೊಳ್ಳುವನೇ ? ಸರ್ವಥಾ ಅಸಂಭಾವ್ಯವು.

**ಸಾಯೋಧ್ಯಾಖ್ಯಾ ಹರಿಪುರೀ ರತ್ನಗೋಪುರಮಂಟಪಾ ।**
**ಶ್ರೀರೇವ ನಗರಾಕಾರಾ ಸೇವತೇ ಸ್ವಪತಿಂ ಕಿಲ ।**
**ಭಕ್ತಾಃ ಪರಮಮುಕ್ತಾಸ್ತೇ ನಿತ್ಯಮುಕ್ತೋ ಹರಿಃ ಪ್ರಭುಃ ॥ ೪೩೧ ॥**

ಸಾ – ಸನಕಾದಿಗಳಿಗೂ ಅಗಮ್ಯವಾದ, ರತ್ನಗೋಪುರಮಂಟಪಾ – ರತ್ನನಿರ್ಮಿತಗೋಪುರಗಳಿಂದಲೂ ಮಂಟಪಗಳಿಂದಲೂ, ಅಯೋಧ್ಯಾಖ್ಯಾ– ಅಯೋಧ್ಯೆ ಎಂಬ ನಾಮವುಳ್ಳ, ಹರಿಪುರೀ – ವೈಕುಂಠಪತಿಯ ನಗರವು, (ಶೋಭಿಸುತ್ತದೆ) ; ಶ್ರೀಃ ಏವ–ಲಕ್ಷ್ಮೀದೇವಿಯೇ, ನಗರಾಕಾರಾ–ಆ ಪುರಿಯ ಆಕಾರದಿಂದ ಇದ್ದು, ಸ್ವಪತಿಂ–ತನ್ನ ಪತಿಯಾದ ನಾರಾಯಣನನ್ನು, ಸೇವತೇ ಕಿಲ–ಸೇವಿಸುತ್ತಿರುವಳೆಂಬುದೂ ಪ್ರಮಾಣಸಿದ್ಧವೇ ಆಗಿದೆ ; ತೇ ಪರಮಮುಕ್ತಾಃ– ಅಲ್ಲಿರುವ ಪರಮಮುಕ್ತರು ( ಭಗವಂತನ ಪರಿಚರ್ಯೆಮಾಡುವವರೆಲ್ಲರೂ ), ಭಕ್ತಾಃ–ಶ್ರೀಹರಿಯ ಭಕ್ತರೇ ; ಪ್ರಭುಃ–ಸ್ವಾಮಿಯಾದ, ಹರಿಃ–ಶ್ರೀಹರಿಯು, ನಿತ್ಯಮುಕ್ತಃ–ನಿತ್ಯಮುಕ್ತನು.

**ತಸ್ಮಾಜ್ಜೀವೇಶ್ವರಾಭೇದೋ ಜೀವಾಭೇದೋಽದ್ವಿತೀಯತಾ ।**
**ನಿರಾಕಾರತ್ವಮಜ್ಞತ್ವಂ ನಿರ್ಗುಣಬ್ರಹ್ಮಯುತ್ತವ ॥ ೪೩೨ ॥**
**ಅಪ್ರಾಮಾಣಿಕಮೇವೇದಂ ಸರ್ವಮಾಸೀನ್ನ ಸಂಶಯಃ ।**
**ಉಕ್ತೇ ಪರಮಮೋಕ್ಷೇಽಸ್ಮಿನ್ ಯನ್ನಾಭೂತ್ ಕುತ್ರ ತದ್ಭವೇತ್ ॥ ೪೩೩ ॥**

ತಸ್ಮಾತ್–ಆದ್ದರಿಂದ (ಮುಕ್ತಸೇವ್ಯನಾದ ಶ್ರೀಹರಿಯ ಮಹಿಮೆಯು ಈ ಹಿಂದೆ ನಿರೂಪಿಸಿದಂತೆ ಇರುವುದರಿಂದ), ಜೀವೇಶ್ವರಾಭೇದಃ – ಜೀವೇಶ್ವರರ

---

ಅಘಟಿತ ಘಟಕ ಶಕ್ತಿನಾಶವೂ ಸಂಭವಿಸುತ್ತದೆ ; ಸ್ವಾನರ್ಥವನ್ನು ಯಾವ ಮೂರ್ಖನೂ ಸಾಧಿಸುವುದಿಲ್ಲ (೪೩೦). ರತ್ನ ನಿರ್ಮಿತ ಗೋಪುರಗಳಿಂದಲೂ ಮಂಟಪಗಳಿಂದಲೂ ಮಂಡಿತವಾದ ಆ ದಿವ್ಯ ನಗರಿಯು, ಸನಕಾದಿ ಜೀವನ್ಮುಕ್ತರಿಗೂ ಅಗಮ್ಯವಾದುದು ; ಶ್ರೀದೇವಿಯೇ ಆ ನಗರಾಕಾರಳಾಗಿದ್ದು ತನ್ನ ಪತಿಯನ್ನು ಸೇವಿಸುತ್ತಿರುವಳು ; ಅಯೋಧ್ಯಾನಾಮಕವಾದ ವೈಕುಂಠದಲ್ಲಿ ಭಗವಂತನ ಪರಿಚರ್ಯದಲ್ಲಿರುವ ಸರ್ವಮುಕ್ತರೂ, ಭಕ್ತರೇ–ಪ್ರಭುವಿನ ಭೃತ್ಯರೇ; ನಿತ್ಯಮುಕ್ತನಾದ ಶ್ರೀಹರಿಯೇ ಆ ನಗರದ ಪ್ರಭುವು (೪೩೧). ಆದ್ದರಿಂದ,

ಅಭೇದವೂ, ಜೀವಾಭೇದಃ–(ಪರಸ್ಪರ) ಜೀವರ ಅಭೇದವೂ, ಅದ್ವಿತೀಯತಾ–ಅದ್ವಿತೀಯತ್ವವೂ (ಏಕಾಕಿತ್ವವೂ), ನಿರಾಕಾರತ್ವಂ–ನಿರಾಕಾರತ್ವವೂ, ಅಜ್ಞತ್ವಂ–ಅಜ್ಞಾನದಿಂದ ಆವೃತವಾಗಿರುವಿಕೆಯೂ, ಯತ್ ತವ–ಯಾವ ನಿನ್ನ, ನಿರ್ಗುಣ ಬ್ರಹ್ಮ–ನಿರ್ಗುಣ ಬ್ರಹ್ಮನೂ, ಇದಂ ಸರ್ವ–ಈ ಎಲ್ಲವೂ (ಎಲ್ಲ ಪ್ರಕ್ರಿಯೆಗಳೂ), ಅಪ್ರಾಮಾಣಿಕಂ ಏವ–ಪ್ರಮಾಣರಹಿತಗಳೇ, ಆಸೀತ್–ಆದವು ; ನ ಸಂಶಯಃ–ಸಂಶಯವಿಲ್ಲ (ಪ್ರಮಾಣಗಳಿಲ್ಲದ ನಿನ್ನ ಕಲ್ಪನೆಗಳು ಮಾತ್ರವೆಂದು ನಿಶ್ಚಯ) ; ಉಕ್ತೇ ಅಸ್ಮಿನ್ ಪರಮಮೋಕ್ಷೇ–ಹೇಳಲಾದ ಈ ಮುಖ್ಯ ಮೋಕ್ಷದಲ್ಲಿ, ಯನ್ನಾಭೂತ್–ಯಾವುದು ಇಲ್ಲವೋ, ತತ್–ಅದು, ಕುತ್ರ ಭವೇತ್–ಬೇರೆಲ್ಲಿ ಇರುತ್ತದೆ ?

**ಅತೋ ದುರಾಶಾಂ ಸಂತ್ಯಜ್ಯ ಭಜ ಕೃಷ್ಣಪದಾಂಬುಜಂ ।**
**ಗರ್ತೇ ವಾ ಪತ ಮಧ್ಯೇ ತೇ ಸ್ಥಿತಿರ್ಲಜ್ಜಾತುರಸ್ಯ ನ ॥ ೪೩೪ ॥**
**ಏವಂ ಚ ಸುಖರೂಪೇಣ ಚಕ್ಷುಷಾ ಸುಖರೂಪಿಣಾಂ ।**
**ಮುಕ್ತಂ ಪಶ್ಯತಿ ಮುಕ್ತೋऽನ್ಯಃ ಸುಖರೂಪೇಣ ಜಿಘ್ರತಿ ॥ ೪೩೫ ॥**
**ಘ್ರಾಣೇನ ಸುಖರೂಪತ್ವಾತ್ ಘ್ರೇಯಮೇವಂ ಸುಖಾತ್ಮನಾ ।**
**ಮನಸೈವ ವಿಜಾನೀಯಾದ್ವಿಜ್ಞಾತಾರಂ ಹರಿಂ ಪ್ರಭುಂ ॥ ೪೩೬ ॥**

---

ಜೀವೇಶ್ವರರ ಅಭೇದವೂ, ಜೀವರ ಪರಸ್ಪರ ಅಭೇದವೂ, ಅದ್ವಿತೀಯತ್ವವೂ, ನಿರಾಕಾರತ್ವವೂ, ಅಜ್ಞಾನಾವೃತನಾದ ನಿರ್ಗುಣ ಬ್ರಹ್ಮನೂ, ಈ ಎಲ್ಲವೂ ಅಪ್ರಮಾಣಿಕವೇ ಆಗಿದೆ; ಪರಮಮೋಕ್ಷವಾದ ವೈಕುಂಠದಲ್ಲಿಯೇ ಇಲ್ಲದಿರುವ ಇವು ಬೇರೆ ಎಲ್ಲಿರುತ್ತವೆ ? ಅನ್ಯ ಪರಮಮೋಕ್ಷವೆಂಬುದಿಲ್ಲ (೪೩೨–೪೩೩). ಆದ್ದರಿಂದ ಬ್ರಹ್ಮೈಕ್ಯ ರೂಪದ ಮುಕ್ತಿಯನ್ನು ಪಡೆಯುವೆನೆಂಬ ದುರಿಚ್ಛೆಯನ್ನು ತ್ಯಜಿಸಿ, ಶ್ರೀಕೃಷ್ಣ ಪಾದಗಳನ್ನು ಆಶ್ರಯಿಸಿ, ಸೇವಿಸು ; ಅಥವಾ ಅಂಧ ತಮಸ್ಸಿನಲ್ಲಿ ಯಾದರೂ ಬೀಳು ; ನಿನಗೆ ಈ ಎರಡನ್ನು ಬಿಟ್ಟು ಮಧ್ಯಮಾರ್ಗವು (ಗತಿಯು) ಯಾವುದೂ ಇಲ್ಲ ; ನಿರ್ಲಜ್ಜನಾಗಿ ಬ್ರಹ್ಮೈಕ್ಯಕ್ಕಾಗಿ ಆತುರನಾಗಿರುವ ನಿನಗೆ ಅನ್ಯಗತಿ ಇಲ್ಲ ; ಏವಂಚ, ಸುಖರೂಪರಾದ ಮುಕ್ತರಿಗೆ ಸರ್ವೇಂದ್ರಿಯಗಳೂ ಸುಖರೂಪವೇ ಆಗಿವೆ ; ಅವುಗಳ ವಿಷಯಗಳೂ ಸುಖಾತ್ಮಕವೇ ಆಗಿವೆ ;

**ಇತ್ಯೇವ ಯತ್ರತ್ವಸ್ಯೇತಿ ಶ್ರುತಿಃ ಸ್ವಾರ್ಥಮುಪಾದದೇ ।**
**ಯತಃ ಸುಖಂ ಕಮಿತ್ಯಾಹುಃ ಶಬ್ದತತ್ವವಿಶಾರದಾಃ ॥ ೪೩೭ ॥**

**ಅನ್ಯಾರ್ಥಸ್ಯ ಮಹಾಮೋಕ್ಷೇಪ್ಯೇತಸ್ಮಿನ್ ವೈಷ್ಣವೇ ಪದೇ ।**
**ಉಕ್ತರೀತ್ಯಾ ಬಾಧಿತತ್ವಾದಯೋಗ್ಯಂ ತಜ್ಜಹೌ ಶ್ರುತಿಃ ॥ ೪೩೮ ॥**

**ವಿಸ್ತರಸ್ತ್ವಸ್ಯ ಸರ್ವಸ್ಯ ಮೂಲಶಾಸ್ತ್ರಮಹಾರ್ಣವೇ ।**
**ದ್ರಷ್ಟವ್ಯಶ್ಚಿತ್ತಶುದ್ಧ್ಯರ್ಥಮೇತಾವಚ್ಚರ್ಚಿತಂ ಮಯಾ ॥ ೪೩೯ ॥**

ಅತಃ–ಹೀಗೆ ಮುಕ್ತಿಸ್ವರೂಪವಿರುವುದರಿಂದ, ದುರಾಶಾಂ–ದುರಾಶೆಯನ್ನು (ನಿರ್ಗುಣನಿರಾಕಾರತ್ವ ಅದ್ವಿತೀಯತ್ವಗಳನ್ನು ಹೊಂದಬಹುದೆಂಬ ಆಶೆಯನ್ನು), ಸಂತ್ಯಜ್ಯ–ನಿಶ್ಶೇಷವಾಗಿ ಬಿಟ್ಟು, ಕೃಷ್ಣಪದಾಂಬುಜಂ–ಶ್ರೀಕೃಷ್ಣಪಾದಕಮಲವನ್ನು, ಭಜ–ಸೇವಿಸು, ವಾ–ಅಥವಾ, ಗರ್ತೇ–ಅಂಧತಮಸ್ಸಿನಲ್ಲಿ, ಪತ–ಬೀಳು, ನಿರ್ಲಜ್ಜಾತುರಸ್ಯ–ನಿರ್ಲಜ್ಜನಾಗಿ ಐಕ್ಯಮುಕ್ತಿಗಾಗಿ ಧಾವಿಸುವ, ತೇ–ನಿನಗೆ, ಮಧ್ಯೇ–ಮಧ್ಯದಲ್ಲಿ, ಸ್ಥಿತಿಃ–ಸ್ಥಿತಿಯೂ (ಅವಸ್ಥಾನವೂ), ನ–ಇರುವುದಿಲ್ಲ (ನಿತ್ಯಸಂಸಾರಿಗಳ ಅವಸ್ಥೆ ಸಹ ಇರುವುದಿಲ್ಲ–ತಮಸ್ಸೇಗತಿಯು); ಏವಂಚ–ಹೀಗೆ, ಸುಖರೂಪಿಣಾಂ – ಆನಂದಸ್ವರೂಪರಾದವರಿಗೆ, ಸುಖರೂಪೇಣ–ಸುಖರೂಪದ (ಆನಂದರೂಪದ), ಚಕ್ಷುಷಾ–ಕಣ್ಣಿಂದ, ಮುಕ್ತಂ–ಅನ್ಯಮುಕ್ತನನ್ನು (ಬೇರೆ ಮುಕ್ತರನ್ನು), ಪಶ್ಯತಿ–ಕಾಣುತ್ತಾನೆ; ನೋಡುತ್ತಾನೆ (ನೋಡುವುದೆಂಬುದು ಇದೆ); ಅನ್ಯಃ ಮುಕ್ತಃ–ಬೇರೊಬ್ಬ ಮುಕ್ತನು, ಸುಖರೂಪೇಣ ಘ್ರಾಣೇನ – ಸುಖರೂಪ ಘ್ರಾಣದಿಂದ (ನಾಸಿಕದಿಂದ), ಜಿಘ್ರತಿ – ವಾಸನೆ ನೋಡುತ್ತಾನೆ (ಸುಖಗಂಧವನ್ನೇ ಮೂಸುತ್ತಾನೆ); ಸುಖರೂಪತ್ವಾತ್ –

---

ಸುಖರೂಪ ಕಣ್ಣಿಂದ ಅನ್ಯ ಮುಕ್ತರನ್ನು ಕಾಣುತ್ತಾನೆ; ಸುಖರೂಪ ಘ್ರಾಣದಿಂದ, ಸುಖರೂಪದ ಗಂಧವನ್ನು ಮೂಸುತ್ತಾನೆ; ಆ ಅನುಭವವೂ ಪ್ರಿಯವೇ ಆಗುತ್ತದೆ; ಸುಖರೂಪದ ಮನಸ್ಸಿನಿಂದ, ಸರ್ವಜ್ಞನಾದ ಭಗವಂತನನ್ನು ಯಥಾಯೋಗ್ಯವಾಗಿ ತಿಳಿಯುತ್ತಾನೆ; ತಿಳಿದು ಆನಂದಿಸುತ್ತಾನೆ; ಈ ಅರ್ಥವನ್ನೇ 'ಯತ್ರತ್ವಸ್ಯ' ಇತ್ಯಾದಿ ಶ್ರುತಿಯು ಉಪಪಾದಿಸಿರುತ್ತದೆ; ಕಶಬ್ದವು ಸುಖವಾಚಕವೆಂದು ಶಬ್ದತತ್ವವಿಶಾರದರು ತಿಳಿಯುತ್ತಾರೆ; ಮಹಾಮೋಕ್ಷವಾದ

(ಗಂಧವೂ) ಸುಖರೂಪವೇ ಆದ್ದರಿಂದ, ಘ್ರೇಯಂ ಏವಂ–ಗಂಧವೂ ಹೀಗೆಯೇ ಸುಖರೂಪವಾದುದೇ (ಆಗಿದೆ) ; ಸುಖಾತ್ಮನಾ–ಸುಖರೂಪದ, ಮನಸಾ ಏವ–ಮನಸ್ಸಿನಿಂದಲೇ, ವಿಜ್ಞಾತಾರಂ – ಸರ್ವಜ್ಞನಾದ, ಪ್ರಭುಂ – ಮಹಾಸ್ವಾಮಿಯಾದ, ಹರಿಂ–ಶ್ರೀಹರಿಯನ್ನು, ವಿಜಾನೀಯಾತ್–ತಿಳಿಯುತ್ತಾನೆ ; ಇತ್ಯೇವ–ಹೀಗೆಂದೇ, ಯತ್ರತ್ವಸ್ಯ ಇತಿ ಶ್ರುತಿಃ–'ಯತ್ರತು–ತತ್ರಮಾಂ ಅಮೃತಂ ಕೃಧಿ' ಎಂದು ಈ ಹಿಂದೆ ವಿವೇಚಿಸಲಾದ ಶ್ರುತಿಯು,[1] ಸ್ವಾರ್ಥಂ–ತನ್ನ ಅರ್ಥವನ್ನು (ತಾತ್ಪರ್ಯವನ್ನು), ಉಪಾದದೇ–ಉಪಪಾದಿಸಿರುತ್ತದೆ ; ಯತಃ–ಏಕೆಂದರೆ, ಸುಖಂ–ಸುಖವನ್ನು, ಶಬ್ದತತ್ವವಿಶಾರದಾಃ – ಶಬ್ದಾರ್ಥಗಳ ನಿಜಸ್ವರೂಪವನ್ನು ಬಲ್ಲವರು (ವ್ಯುತ್ಪನ್ನರು), ಕಂ ಇತ್ಯಾಹುಃ–'ಕಂ' ಎಂದು ಹೇಳುವರು ; ಮಹಾಮೋಕ್ಷೇಪಿ – ಮಹಾಮೋಕ್ಷದಲ್ಲಿಯೂ, ತಸ್ಮಿನ್ – ಆ, ವೈಷ್ಣವೇ ಪದೇ–ಶ್ರೀವಿಷ್ಣುವಿನ ಸ್ಥಾನದಲ್ಲಿ, ಅನ್ಯಾರ್ಥಸ್ಯ–ಬೇರೆ ಅರ್ಥಕ್ಕೆ, ಉಕ್ತರೀತ್ಯಾ–ಹಿಂದೆ ಹೇಳಿದಂತೆ, ಬಾಧಿತತ್ವಾತ್ – ಬಾಧಿತವಾಗುವುದರಿಂದ (ಉಕ್ತಾರ್ಥವನ್ನು ವಿರೋಧಿಸುವುದರಿಂದ), ಅಯೋಗ್ಯಂ ತತ್–ಯುಕ್ತವಲ್ಲದ ಅನ್ಯಾರ್ಥವನ್ನು, ಶ್ರುತಿಃ–ಶ್ರುತಿಯು, ಜಹೌ–ತ್ಯಜಿಸಿತು ; ಅಸ್ಯ ಸರ್ವಸ್ಯ–ಈ ಎಲ್ಲದರ, ವಿಸ್ತರಸ್ತು–ವಿಸ್ತಾರವಾದರೋ, ಮೂಲಶಾಸ್ತ್ರ ಮಹಾರ್ಣವೇ–ಮೂಲಶಾಸ್ತ್ರವೆಂಬ ಮಹಾಸಮುದ್ರದಲ್ಲಿ, ದ್ರಷ್ಟವ್ಯಃ–ನೋಡತಕ್ಕದ್ದು (ಕಾಣಬಹುದಾಗಿರುತ್ತದೆ); ಮಯಾ–ನನ್ನಿಂದ, ಏತಾವತ್ – ಇಷ್ಟುಮಾತ್ರ, ಚಿತ್ತಶುದ್ಧ್ಯರ್ಥಂ – ಚಿತ್ತಶುದ್ಧಿಗಾಗಿ (ಮನೋನೈರ್ಮಲ್ಯಕ್ಕಾಗಿ–ಸಂಶಯರೂಪದ ಮಲವು ಮನಸ್ಸಿನಿಂದ ತೊಲಗಿಸಲು ಅನುಕೂಲವಾಗುವಂತೆ), ಚರ್ಚಿತಂ–ಚರ್ಚಿಸಲ್ಪಟ್ಟಿತು.

---

ವೈಕುಂಠದಲ್ಲಿ, ಅದಕ್ಕೆ ಬೇರೆ ಅರ್ಥವು ಬಾಧಿತವಾಗುತ್ತದೆ; ಆದ್ದರಿಂದಲೇ ಅನುಚಿತವಾದ ಅನ್ಯಾರ್ಥವನ್ನು ಶ್ರುತಿಯು ತ್ಯಜಿಸಿ, ಸರ್ವವೂ ಆನಂದಮಯವೇ (ಸುಖರೂಪವೇ) ಎಂದು ಉಪಪಾದಿಸಿರುತ್ತದೆ; ಮೂಲಶಾಸ್ತ್ರವೆಂಬ ಮಹಾಸಾಗರದಲ್ಲಿ (ಭಾಷ್ಯಾದಿ ಗ್ರಂಥಗಳಲ್ಲಿ) ಇದರ ವಿಸ್ತಾರವನ್ನು ಕಾಣಬಹುದು ; ಚಿತ್ತಶುದ್ಧಿಗಾಗಿ ಮಾತ್ರ ಈವರೆಗಿನ ಚರ್ಚೆಯನ್ನು ನಡೆಸಿದ್ದಾಗಿದೆ (೪೩೪–೪೩೯).

---

1 ಇದೇ ಸೌರಭದ ಶ್ಲೋಕ ೩೧೩ ರಿಂದ ೩೧೫ ರವರೆಗಿನ ಭಾಗವನ್ನು ಇಲ್ಲಿ ಗಮನಿಸಬಹುದು.

**ಅತೋ ಯೋಗ್ಯೋರುಸೌಭಾಗ್ಯಾಪೇಕ್ಷೀ ಮುಕ್ತೋಽನುಮೀಯತೇ ।**
**ಮುಕ್ತತ್ವಾನ್ನಿತ್ಯಮುಕ್ತೋಽಸೌ ಯಥಾಸ್ವಾನಂದನಿರ್ಭರಃ ॥ ೪೪೦ ॥**

ಮುಕ್ತನಿಗೆ ಸ್ವಯೋಗ್ಯ ಸಕಲಸೌಭಾಗ್ಯವು ದೊರೆಯುವುದೆಂಬಲ್ಲಿ ಅನುಮಾನವನ್ನು (ತರ್ಕವನ್ನು) ರಚಿಸಿ ನಿರೂಪಿಸುತ್ತಾರೆ :—

ಅತಃ–ಆದ್ದರಿಂದ, ಮುಕ್ತಃ–ಮುಕ್ತನು, ಯೋಗ್ಯೋರು ಸೌಭಾಗ್ಯಾಪೇಕ್ಷೀ–ಸ್ವಯೋಗ್ಯವಾದ ಸಕಲ ಉತ್ಕೃಷ್ಟ ಸೌಭಾಗ್ಯವನ್ನು ಇಚ್ಛಿಸಿ ಪಡೆದವನು, (ಎಂದು), ಅನುಮೀಯತೇ–ಅನುಮಾನಿಸಲ್ಪಡುತ್ತಾನೆ (ತರ್ಕಿಸಲ್ಪಡುತ್ತಾನೆ) ; ಮುಕ್ತತ್ವಾತ್–ಮುಕ್ತತ್ವವಿರುವುದರಿಂದ, ಯಥಾ–ಹೇಗೆಂದರೆ, (ದೃಷ್ಟಾಂತವನ್ನು ಹೇಳುತ್ತಾರೆ), ಸ್ವಾನಂದನಿರ್ಭರಃ–ಸ್ವಾನಂದಪೂರ್ಣನಾದ, ಅಸೌ ನಿತ್ಯಮುಕ್ತಃ–ನಿತ್ಯಮುಕ್ತನಾದ ಭಗವಂತನಂತೆ ;.

**ತಸ್ಮಾಚ್ಛೂನ್ಯತ್ವಮೋಕ್ಷಾಯ ನಾಕಾಂಕ್ಷಾ ಜಾಯತೇ ನೃಣಾಂ ।**
**ಅನಾಕಾಂಕ್ಷಿತಮೋಕ್ಷಾಯ ನ ಪರೋಕ್ತಾ ಭವೇಚ್ಛ್ರುತಿಃ ॥೪೪೧॥**

**ತಸ್ಮಾಚ್ಛುಭಜನಾಕೀರ್ಣಾ ದಿವ್ಯಭೋಗವತೀ ಸ್ಥಿತಿಃ ।**
**ಮುಕ್ತಿರುಕ್ತಶ್ರುತಿಶತೈರಪ್ಯಾಮ್ನಾನಾದಿತಿ ಸ್ಥಿತಿಂ ॥ ೪೪೨ ॥**

ತಸ್ಮಾತ್–ಆದ್ದರಿಂದ (ಯುಕ್ತಿವಿರುದ್ಧವಾದ್ದರಿಂದ), ಶೂನ್ಯತ್ವಮೋಕ್ಷಾಯ–ಶೂನ್ಯತ್ವವನ್ನು ಪಡೆಯುವುದೆಂಬ ಮೋಕ್ಷಕ್ಕಾಗಿ, ನೃಣಾಂ–ಮಾನವರಿಗೆ, ಆಕಾಂಕ್ಷಾ–ಇಚ್ಛೆಯು, ನ ಜಾಯತೇ–ಉಂಟಾಗುವುದಿಲ್ಲ ;

---

ಸ್ವಯೋಗ್ಯವಾದ ಉತ್ಕೃಷ್ಟ ಸೌಭಾಗ್ಯವನ್ನು ಇಚ್ಛಿಸುವ ಮುಮುಕ್ಷುವು ಈ ಪ್ರಮೇಯವನ್ನು ಅನುಮಾನ ಪ್ರಮಾಣದಿಂದಲೂ ಹೀಗೆ ತಿಳಿಯಬಹುದಾಗಿದೆ; ಮುಕ್ತನು ಸ್ವಯೋಗ್ಯವಾದ ಮಹಾ ಸೌಭಾಗ್ಯವುಳ್ಳವನಾಗಿದ್ದಾನೆ; ಮುಕ್ತತ್ವವಿರುವುದರಿಂದ (ಮುಕ್ತನಾದ್ದರಿಂದ); ಯಥಾ (ದೃಷ್ಟಾಂತ) ಸ್ವಾನಂದಪೂರ್ಣನಾದ, ನಿತ್ಯಮುಕ್ತ ಭಗವಂತನಂತೆ (೪೪೦). ಹೀಗೆ ಯುಕ್ತಿ ವಿರುದ್ಧವೂ ಆದ್ದರಿಂದ ಪರನು ಹೇಳುವ ಸರ್ವಶೂನ್ಯತ್ವ ಪ್ರಾಪಕವಾದ ಮೋಕ್ಷವು, ಯಾವ ವಿವೇಕಿ ಮಾನವರಿಂದಲೂ ಅಪೇಕ್ಷಿತವಾಗುವುದಿಲ್ಲ; ಪರನು ತೋರಿಸುವ

ಅನಾಕಾಂಕ್ಷಿತಮೋಕ್ಷಾಯ–ಅನಪೇಕ್ಷಿತವಾದ ಮೋಕ್ಷಪ್ರತಿಪಾದನೆಗೆ, ಪರೋಕ್ತಾ–ಪರನು (ಮಾಯಾವಾದಿಯು), ಹೇಳುವ, ಶ್ರುತಿಃ-(ತತ್ತ್ವಮಸ್ಯಾದಿ) ಶ್ರುತಿಯು, ನ ಭವೇತ್ – ಪ್ರಮಾಣವಾಗುವುದಿಲ್ಲ (ವಿರಕ್ತನಿಗೆ ವಾಣಿಜ್ಯೋಪದೇಶದಂತೆ, ಅನಪೇಕ್ಷಿತವಾದುದನ್ನು ಹೇಳುವ ವಾಕ್ಯಕ್ಕೆ ಪ್ರಾಮಾಣ್ಯವೇ ಸಿದ್ಧವಾಗುವುದಿಲ್ಲ); ತಸ್ಮಾತ್–ಯುಕ್ತಿವಿರುದ್ಧವಾದ್ದರಿಂದಲೇ, ಶುಭಜನಾಕೀರ್ಣಾ–ಮುಕ್ತಪ್ರಜೆಗಳಿಂದ ಪೂರ್ಣವಾದ, ದಿವ್ಯಭೋಗವತೀ–ಅಲೌಕಿಕವಾದ ನಿತ್ಯಭೋಗವುಳ್ಳ, ಸ್ಥಿತಿಃ–ಸ್ಥಿತಿಯೇ ಮುಕ್ತಿಃ–ಮುಕ್ತಿ ಎಂಬುದು ; ಆಮ್ನಾನಾತ್–ಪೂರ್ಣಪ್ರಮಾಣವಾದ್ದರಿಂದ, ಉಕ್ತಶ್ರುತಿಶತೈಃ ಅಪಿ–ಉದಾಹರಿಸಲಾದ ನೂರಾರು ಶ್ರುತಿಗಳಿಂದಲೂ, ಇತಿಸ್ಥಿತಂ–ಹೀಗೆಂದೇ ಸಿದ್ಧವಾಗುತ್ತದೆ.

**ಯತ್ರ ಮುಕ್ತೌ ಮುಕ್ತವರ್ಗಾದ್ಧರೇರ್ದ್ವೈತಮಿವ ಪ್ರಭೋಃ ।**
**ದ್ವೈತೋಪಮೋ ವಿಶೇಷಶ್ಚ ಭವತಿ ಸ್ವಗುಣಾದಿನಾ ॥ ೪೪೩ ॥**

**ಮುಕ್ತಾನಾಂ ಚ ಮಿಥಃ ಸರ್ವೇಶಾಚ್ಚ ದ್ವೈತಮಿವಾಂಜಸಾ ।**
**ದ್ವೈತೋಪಮೋ ವಿಶೇಷಶ್ಚ ಭವತಿ ಸ್ವಗುಣಾದಿಭಿಃ ॥ ೪೪೪ ॥**

**ತತ್ರೈವ ಮೋಕ್ಷೇ ವೈಕುಂಠಪೂರ್ವಕೇ ಸ್ವಂ ವಿಜಾನತೇ ।**
**ಪರಾನ್ ಜಾನಂತಿ ಭೋಗಾಂಶ್ಚ ಭುಂಜತೇನುಭವಂತಿ ಚ ॥ ೪೪೫ ॥**

---

ಶ್ರುತಿಯು ಅನಪೇಕ್ಷಿತ ಮೋಕ್ಷ ಪ್ರತಿಪಾದಕವೆಂಬುದೂ ಯುಕ್ತಿ ವಿರುದ್ಧವೇ ಆಗುತ್ತದೆ; ವಿರಕ್ತನಿಗೆ ವಾಣಿಜ್ಯವನ್ನು ಉಪದೇಶಿಸುವಂತೆ; ಆದ್ದರಿಂದ ಮುಕ್ತಪ್ರಜೆಗಳಿಂದ ಪೂರ್ಣವಾದ, ಸಕಲ ಭೋಗಗಳಿಂದಲೂ ಸದಾ ಪೂರ್ಣವಾದ ವೈಕುಂಠ ಸ್ಥಿತಿಯೇ ಸರ್ವಾಪೇಕ್ಷಿತವಾದ ಮಹಾಮುಕ್ತಿಯು; ಉಕ್ತವಾದ ಬಹು ಶ್ರುತಿ ಸ್ಮೃತಿಗಳು ಈ ವಿಷಯದಲ್ಲಿ ಪೂರ್ಣ ಪ್ರಮಾಣಗಳಾಗಿವೆ (೪೪೧–೪೪೨). 'ಯತ್ರತ್ವಸ್ಯ' ಎಂಬ ಶ್ರುತಿಯು, ಮುಕ್ತನ ಸ್ಥಿತಿಯನ್ನು ವರ್ಣಿಸಿ, ಅಂತಹ ಲೋಕದಲ್ಲಿ ನನ್ನನ್ನು ಇಟ್ಟು ಮುಕ್ತನನ್ನಾಗಿ ಮಾಡು, ಎಂದು (ಮಾಂ ಅಮೃತಂ ಕೃಧಿ) ಪ್ರಾರ್ಥನಾ ರೂಪವಾಗಿದೆ; ಅಲ್ಲಿರುವ ಮುಕ್ತರಿಗೆ ಭಗವಂತನಿಂದ ಭೇದವಿದ್ದಂತೆಯೇ ಇದೆ (ಅಭೇದವೆಂಬುದಿಲ್ಲ); ಈ ಭೇದವು 'ವಿಶೇಷ'ವೆಂಬ ಸರ್ವಚೇತನರ (ಪರಮಾತ್ಮನು ಸಹ) ಸ್ವರೂಪ ಗುಣದಿಂದ ಶಕ್ಯವಾಗಿವೆ; ಈ

**ಸ್ವಾನಂದಮಪಿ ತೇ ಬಹ್ವೀ ಭವಂತ್ಯೇಕೀಭವಂತಿ ಚ ।**
**ಯಾನ್ಯೈಶ್ಚ ರಂತಿ ಶ್ಲಿಷ್ಯಂತಿ ಕ್ರೀಡಂತಿ ಚ ಹಸಂತಿ ಚ ॥ ೪೪೬ ॥**
**ಯತ್ರ ಮೋಕ್ಷೇ ಸರ್ವಮಾತ್ಮೈವಾಭೂದನ್ಯನ್ನ ಕಿಂಚನ ।**
**ನ ದ್ವೈತಂ ನ ವಿಶೇಷೋ ವಾ ತವ ಜ್ಞಾತೃತ್ವಮೇವ ನ ॥ ೪೪೭ ॥**

'ಯತ್ರ ತ್ವಸ್ಯ' ಎಂಬ ಶ್ರುತಿವಾಕ್ಯವು ಭೇದಕಾರ್ಯೋಪಯೋಗಿಯಾದ ವಿಶೇಷವನ್ನು ಸಮರ್ಥಿಸುತ್ತದೆಂಬುದನ್ನು ವಿಶದಪಡಿಸುತ್ತಾರೆ :—

ಯತ್ರ ಮುಕ್ತೌ—ಯಾವ ಮುಕ್ತಿಯಲ್ಲಿ, ಪ್ರಭೋಃ—ಸ್ವಾಮಿಯಾದ, ಹರೇಃ—ಶ್ರೀಹರಿಗೆ, ಮುಕ್ತವರ್ಗಾತ್—ಮುಕ್ತಜೀವಸಮೂಹದಿಂದ, ದ್ವೈತಂ ಇವ—ಭೇದವಿದ್ದಂತೆಯೋ, ವಿಶೇಷಶ್ಚ—'ವಿಶೇಷ' ವಾದರೂ, ದ್ವೈತೋಪಮಃ—ಭೇದಸದೃಶವಾದುದು, ಭವತಿ—ಆಗುತ್ತದೆಯೋ (ಹಾಗೂ), ಸ್ವಗುಣಾದಿನಾ—ತಂತಮ್ಮ ಗುಣಾದಿಗಳಿಂದ (ಸ್ವರೂಪಗುಣಾದಿಗಳಿಂದ), ಮುಕ್ತಾನಾಂ—ಮುಕ್ತರಿಗೆ, ಮಿಥಃ—ಪರಸ್ಪರವಾಗಿಯೂ, ಚ—ಹಾಗೂ, ಸರ್ವೇಶಾತ್—ಸರ್ವೇಶ್ವರನಿಂದಲೂ, ಅಂಜಸಾ—ಸ್ಪಷ್ಟವಾಗಿ, ದ್ವೈತಂ ಇವ—ಭೇದವಿದ್ದಂತೆ, ವಿಶೇಷಃ—ವಿಶೇಷವು, ದ್ವೈತೋಪಮಃ—ಭೇದಸದೃಶವೇ, ಸ್ವಗುಣಾದಿಭಿಃ—ಸ್ವಸ್ವಗುಣಗಳಿಂದ, ಭವತಿ—ಆಗುತ್ತದೆಯೋ, ತತ್ರ ಏವ — ಅಲ್ಲಿಯೇ, ವೈಕುಂಠಪೂರ್ವಕೇ — ವೈಕುಂಠಾದಿ ಸ್ಥಲಗಳಲ್ಲಿ (ನನ್ನನ್ನು ಸ್ಥಾಪಿಸೆಂದು ಪ್ರಾರ್ಥನೆ) (ತತ್ರೈವ — ಅಲ್ಲಿಯೇ, ವೈಕುಂಠಾದಿ ಮೋಕ್ಷದಲ್ಲಿ), ಸ್ವಂ—ತನ್ನನ್ನು, ವಿಜಾನತೇ—(ಚೇತನನು) ತಿಳಿಯುತ್ತಾರೆ ; ಪರಾನ್—ಅನ್ಯಚೇತನರನ್ನು, ಜಾನಂತಿ—ತಿಳಿಯುತ್ತಾರೆ ; ಭೋಗಾನ್ ಚ—(ವಿವಿಧ) ಭೋಗಗಳನ್ನು, ಭುಂಜತೇ—ಭೋಗಿಸುತ್ತಾರೆ ; ಅನುಭವಂತಿ ಚ—ಅನುಭವಗಳನ್ನು ಹೊಂದುತ್ತಾರೆ ; ಸ್ವಾನಂದಂ ಅಪಿ—ಸ್ವರೂಪಾನಂದವನ್ನು ಸಹ (ಅನುಭವಿಸುತ್ತಾರೆ); ಬಹ್ವೀ ಭವಂತಿ—(ಮುಕ್ತರು) ಬಹುವಾಗಿಯೂ ಇರುವರು;

---

ವಿಶೇಷವು ಮುಕ್ತರಲ್ಲಿ ಪರಸ್ಪರವಾಗಿಯೂ, ಪರಮಾತ್ಮನಿಂದಲೂ ಭಿನ್ನರಂತೆ ನಡೆದುಕೊಳ್ಳಲು ಸಹಾಯಕವಾಗುತ್ತದೆ ; ವೈಕುಂಠಾದಿ ಮುಕ್ತಲೋಕಗಳಲ್ಲಿ, ಮುಕ್ತನು, ತನ್ನನ್ನು ತಾನು ತಿಳಿಯುತ್ತಾನೆ ; ಅನ್ಯರನ್ನು ತಿಳಿಯುತ್ತಾನೆ ; ನಾನಾ ಭೋಗಗಳನ್ನು (ಕಾಮಗಳನ್ನು) ಭೋಗಿಸುತ್ತಾನೆ ; ಸ್ವಸ್ವರೂಪದ ಆನಂದವನ್ನು ಅನುಭವಿಸುತ್ತಾರೆ ; ಬಹುವಾಗಿರುತ್ತಾರೆ — ಏಕೀಭಾವವನ್ನು

ಏಕೀಭವಂತಿ ಚ – ಏಕೀಭಾವವನ್ನು ಹೊಂದುತ್ತಾರೆ (ಸಾಯುಜ್ಯಮುಕ್ತರು ಭಗವಂತನನ್ನು ಪ್ರವೇಶಿಸುತ್ತಾರೆ ಅಥವಾ–ಸ್ವಸ್ತ್ರೀಯರೊಂದಿಗೆ ಏಕಭಾವವುಳ್ಳವರೂ ಆಗುತ್ತಾರೆ); ಯಾನೈಃ – ವಿವಿಧ ಯಾನಗಳಿಂದ (ವಾಹನಗಳಿಂದ), ಚರಂತಿ–ಸಂಚರಿಸುತ್ತಾರೆ; ಶ್ಲಿಷ್ಯಂತಿ–ಕೂಡುತ್ತಾರೆ (ಆಲಿಂಗನ ಮಾಡುತ್ತಾರೆ); ಕ್ರೀಡಂತಿ–ಕ್ರೀಡಿಸುತ್ತಾರೆ; ಚ–ಮತ್ತು, ಹಸಂತಿ–ನಗೆಯಾಡುತ್ತಾರೆ (ವಿನೋದವಾಗಿರುತ್ತಾರೆ) (ಈ ಶ್ರುತಿಯು); ಯತ್ರ ಮೋಕ್ಷೇ–ಎಲ್ಲಿ (ಯಾವ) ಮೋಕ್ಷದಲ್ಲಿ, ಸರ್ವಂ–ಎಲ್ಲವೂ, ಆತ್ಮೈವಾಭೂತ್–ಆತ್ಮವೇ (ಆತ್ಮವ್ಯಾಪಾರವೇ–ಅನ್ಯಪ್ರಾಕೃತ ದೇಹೇಂದ್ರಿಯಗಳ ಸಹಾಯವಿಲ್ಲದೇ, ಚೇತನನ ಕಾರ್ಯವೇ ಆಗುತ್ತದೆಯೋ) ಆಯಿತೋ (ಭಿನ್ನವಸ್ತುವೇ ಇಲ್ಲವೋ ಗಂಧಾದಿಗಳೂ ಸುಖರೂಪಗಳೇ ಆಗಿರುವುವೋ), ಅನ್ಯತ್ – ಬೇರೆಯಾದುದು ನ ಕಿಂಚನ–ಯಾವುದೂ ಇಲ್ಲವೋ (ಎಂದು ಹೇಳುವ ಶ್ರುತಿಯು 'ಭೇದನಿರ್ವಾಹಯಕ' 'ವಿಶೇಷ'ವೆಂಬ ಶಕ್ತಿಯನ್ನು ಮುಕ್ತರಿಗೆ ಸಮರ್ಥಿಸುತ್ತದೆ) (ಇತ್ಯಾದಿಯಾಗಿರುವ ಸ್ಥಾನದಲ್ಲಿಡೆಂದು ಪ್ರಾರ್ಥನೆಯನ್ನು ಅರ್ಪಿಸುತ್ತದೆ) ತವ–ನಿನಗಾದರೋ, ದ್ವೈತಂ–ಭೇದವು, ನ–(ಮೋಕ್ಷದಲ್ಲಿ) ಇರುವುದಿಲ್ಲ; ವಾ–ಅಥವಾ (ಮತ್ತು), ವಿಶೇಷಃ ನ–'ವಿಶೇಷ'ವೂ ಇಲ್ಲ; ತತ್ರ–ಅಲ್ಲಿ (ಮೋಕ್ಷದಲ್ಲಿ), ಜ್ಞಾತೃತ್ವಂ ಏವ ನ–ಜ್ಞಾತೃತ್ವವೂ (ತಿಳಿಯುವುದೆಂಬ ಶಕ್ತಿಯೂ, ಧರ್ಮವೂ, ಚೇತನನಿಗೆ) ಇರುವುದಿಲ್ಲ (ಹೀಗೆಂದರೆ ಈ ಶ್ರುತಿಯು ಮೋಕ್ಷವನ್ನು ಇವೆಲ್ಲವನ್ನು ಮುಕ್ತರು ಮಾಡುವರೆಂದು ಹೇಳುತ್ತಿದೆಯಲ್ಲವೇ? ಬೇರೆ ಮೋಕ್ಷವೆಲ್ಲಿದೆ? ಅದಕ್ಕೆ ಪ್ರಮಾಣವೇನು? (ಯಾವುದೂ ಇಲ್ಲ).

---

ಹೊಂದುತ್ತಾರೆ; (ಸಾಯುಜ್ಯ ಮುಕ್ತರು ಪರಮಾತ್ಮನಲ್ಲಿ ಪ್ರವೇಶಿಸುವಂತೆ); ವಾಹನಗಳನ್ನೇರಿ ಸಂಚರಿಸುತ್ತಾರೆ; ಪರಸ್ಪರ ಆಲಿಂಗನಾದಿಗಳಿಂದ ಕ್ರೀಡಿಸುತ್ತಾರೆ; ನಗುತ್ತಾರೆ–ವಿನೋದದಿಂದ ವಿಹರಿಸುತ್ತಾರೆ; ಎಲ್ಲಿ ಸರ್ವವೂ ಆತ್ಮವೇ ಆಗಿರುವುದೋ, ಇಂದ್ರಿಯ, ಮನಸ್ಸು, ದೇಹಭೋಗ್ಯ ವಿಷಯಗಳಿಂದ ಗಂಧಾದಿಗಳು, ಎಲ್ಲವೂ ಚೇತನಾತ್ಮಕವೇ ಸುಖರೂಪಗಳೇ ಆಗಿರುತ್ತವೆಯೋ, ಅಲ್ಲಿ ಎಲ್ಲವೂ 'ವಿಶೇಷ ಬಲದಿಂದ ಭೇದ ಕಾರ್ಯಗಳು ನಡೆಯುತ್ತಿರಲು, ನಿನ್ನ (ಪರನಂತೆ) ಮುಕ್ತಿಯಲ್ಲಿ ಭೇದವೂ ಇಲ್ಲ–ಭೇದಕಾರ್ಯ ಸಾಧಕ ವಿಶೇಷವೂ ಇಲ್ಲ; ತನ್ನ ಜ್ಞಾನವೇ ತನಗಿರುವುದಿಲ್ಲ–ಬೇರಾವುದೂ ಇಲ್ಲದ ಅದ್ವಿತೀಯತ್ವದ ಅವಸ್ಥೆಯಲ್ಲಿ ಅನ್ಯವೆನ್ನುವುದಾವುದೂ ಇಲ್ಲ–ಇದ್ದರೂ ಅದನ್ನು ತಿಳಿಯಲೂ

**ದೂರೇಭೂದ್ಭೋಕ್ತೃತಾ ತಸ್ಮಾದವಿದ್ಯಾಸ್ತಮಯೋ ನ ಸಃ ।**
**ವಿದ್ಯಾಸ್ತಮಯ ಏವಾಭೂತ್ ಸ್ವಜ್ಞಾನಂ ಚ ಯತೋಽಸ್ಯ ನ ॥೪೪೮॥**

ಸಃ – ಆ (ನಿನ್ನ) ಮೋಕ್ಷವು, ಅವಿದ್ಯಾಸ್ತಮಯೋ ನ – ಅವಿದ್ಯಾರಹಿತವಾದುದಲ್ಲ; ವಿದ್ಯಾಸ್ತಮಯಃ ಏವ–ವಿದ್ಯಾ(ಜ್ಞಾನ) ರಹಿತವಾದುದೇ, ಅಭೂತ್–ಆಯಿತು ; ತಸ್ಮಾತ್–ಆದ್ದರಿಂದ, ಭೋಕ್ತೃತಾ–(ಮೋಕ್ಷದಲ್ಲಿ) ಭೋಕ್ತೃತ್ವವು, (ಭೋಗಗಳನ್ನು ಭೋಗಿಸುವುದೆಂಬುದು), ದೂರೇ ಅಭೂತ್–ದೂರದಲ್ಲಿಯೇ ಉಳಿಯಿತು ; ಯತಃ–ಏಕೆಂದರೆ, ಅಸ್ಯ–ಈ ಮುಕ್ತನಿಗೆ, ಸ್ವಜ್ಞಾನಂ ಚ–ತನ್ನ ಜ್ಞಾನವೇ, ನ–ಇಲ್ಲ (ತನ್ನನ್ನೇ ತಾನು ತಿಳಿಯನು) ;

**ನಾಪಿ ದುಃಖಸ್ಯ ವಿಧ್ವಂಸಃ ಸುಖಸ್ಯ ಧ್ವಂಸ ಏವ ಸಃ ।**
**ಏಕಾಕೀ ರಮತೇ ನಾಸೌ ಕಥಂ ಕಾಮಾಂಶ್ಚ ಸೋಽಶ್ನುತೇ ॥ ೪೪೯ ॥**

ಮೋಕ್ಷದಿಂದ ಸುಖಧ್ವಂಸವನ್ನೇ ಉಪಪಾದಿಸುತ್ತಾರೆ :—

ಸಃ–ಆ ಮೋಕ್ಷವು, ದುಃಖಸ್ಯ–ದುಃಖದ, ವಿಧ್ವಂಸಃ ಅಪಿ–ನಾಶರೂಪವಾದುದೂ, ನ–ಅಲ್ಲ ; (ಪ್ರತ್ಯುತ) ಸುಖಸ್ಯ–ಸುಖದ, ಧ್ವಂಸ ಏವ–ನಾಶವೇ (ಆಗಿದೆ) ; ಏಕಾಕೀ – ಏಕಾಕಿಯಾದ, ಅಸೌ – ಈ ಮುಕ್ತನು, ನ ರಮತೇ – ಸುಖಿಸುವುದಿಲ್ಲ ; ('ತಸ್ಮಾದೇಕಾಕೀ ನ ರಮತೇ' ಎಂಬ ಶ್ರುತಿಯು ಸೂಚಿತವಾಯಿತು) ; ಕಥಂ–ಹೇಗೆ, ಕಾಮಾನ್ ಚ–ಇಚ್ಛಿತಭೋಗಗಳನ್ನು, ಸಃ–ಆ ಮುಕ್ತನು, ಅಶ್ನುತೇ – ಅನುಭವಿಸುವನು ( ಉಣ್ಣುವನು ? ) ('ಸೋಽಶ್ನುತೇ ಸರ್ವಾನ್ ಕಾಮಾನ್' ಎಂಬ ಶ್ರುತಿಯನ್ನು ನೆನಪಿಗೆ ತರಲು 'ಅಶ್ನುತೇ' ಎಂಬ ಪದವನ್ನು ಉಪಯೋಗಿಸಲಾಗಿದೆ.)

---

ಮುಕ್ತನು ಅಸಮರ್ಥನು (೪೪೩–೪೪೭). ಕಾಮಗಳನ್ನು ಭೋಗಿಸುವುದೆನ್ನುವುದು (ನಿನ್ನ ಮುಕ್ತಿಯಲ್ಲಿ) ದೂರವೇ ಉಳಿಯಿತು (ಸರ್ವಾತ್ಮನಾ ಇಲ್ಲವೆಂದೇ ಆಯಿತು ; ಪರನ ಮುಕ್ತಿಯಲ್ಲಿ ಅವಿದ್ಯೆಯ ನಾಶವೂ ಇಲ್ಲ ; ಪ್ರತಿಯಾಗಿ ವಿದ್ಯಾನಾಶವೇ ಇದೆ ; ಏಕೆಂದರೆ ತನ್ನ ಜ್ಞಾನವೇ ತನಗಿಲ್ಲ (೪೪೮). ಇಷ್ಟು ಮಾತ್ರವಲ್ಲ ; ಮೋಕ್ಷದಿಂದ ದುಃಖ ನಾಶವೂ ಇಲ್ಲ ; ಪ್ರತ್ಯುತ, ಸುಖದ ಧ್ವಂಸವೇ ಇದೆ ; ಏಕಾಕಿಯಾದ ಮುಕ್ತನು ಯಾವ ಸುಖವನ್ನು

**ಇತ್ಯಾಕ್ಷಿಪಂತೀ ಶೂನ್ಯತ್ವಮೋಕ್ಷಂ ಸರ್ವಾನಪೇಕ್ಷಿತಂ ।**
**ವೈಕುಂಠಾಖ್ಯಂ ಮಹಾಮೋಕ್ಷಂ ಯತ್ರದ್ವೈತಮಿವೇತಿ ವಾಕ್ ।**
**ನಿರಣೇನಯದೇವೇಯಂ ಯತೋ ನಾವರ್ತತೇ ಯತಿಃ ॥ ೪೫೦ ॥**

ಇತಿ–ಹೀಗೆ ; ಸರ್ವಾನಪೇಕ್ಷಿತಂ–ಯಾರಿಂದಲೂ ಇಚ್ಛಿತವಲ್ಲದ, ಶೂನ್ಯತ್ವಮೋಕ್ಷಂ – ಸರ್ವಶೂನ್ಯರೂಪದ ಮೋಕ್ಷವನ್ನು, ಆಕ್ಷಿಪಂತೀ – ಆಕ್ಷೇಪಿಸುವ ( ವಿರೋಧಿಸುವ ) ಪ್ರಮಾಣಗಳು ( 'ಯತ್ರ ನಾರಾಯಣೋ ಸಾಕ್ಷಾತ್' – 'ಯತೋ ನಾವರ್ತತೇ ಯತಿಃ' ಇತ್ಯಾದಿ ಪ್ರಮಾಣಗಳು) ಇರುತ್ತಿರಲು, (ಮತ್ತು 'ಇದೇ ಪ್ರಮಾಣಗಳು)[1] ವೈಕುಂಠಾಖ್ಯಂ – ವೈಕುಂಠವೆಂಬ, ಮಹಾಮೋಕ್ಷಂ – ಮಹಾಮೋಕ್ಷವನ್ನು ಯತ್ರ ದ್ವೈತಮಿವೇತಿ ವಾಕ್–('ಯತ್ರ ದ್ವೈತಮಿವ ! ಎಂಬ ಶ್ರುತಿವಾಕ್ಯವು) ಎಲ್ಲಿ ಭೇದವಿದ್ದಂತೆ ಸರ್ವಮೋಕ್ಷಾನಂದವೂ, ಎಂದು ಹೇಳುವ ವಾಕ್ಯವು, ಯತೋ ನಾವರ್ತತೇ ಯತಿಃ–ಎಲ್ಲಿಂದ ಮುನಿಯು (ಸಂಸಾರಕ್ಕೆ) ತಿರುಗುವುದಿಲ್ಲವೋ ಇತಿ ಇಯಂ–ಎಂಬ ಈ ವಾಕ್ಯವೂ, ನಿರಣೇನಯತ್ ಏವ–ನಿಶ್ಚಯಿಸಿ ಹೇಳುತ್ತದೆಯೇ ಸರಿ. (ಅದೇ ಮಹಾಮೋಕ್ಷವು – ಅವಾಂತರ ಮೋಕ್ಷವಲ್ಲ–ಬೇರೆ ಮಹಾಮೋಕ್ಷವೆಂಬುದಿಲ್ಲ).

---

ಅನುಭವಿಸುವುದಿಲ್ಲ–ವಿವಿಧ ಕಾಮಗಳನ್ನು ಅನುಭವಿಸುವುದು ಎಲ್ಲಿಂದ ? 'ತಸ್ಮಾದೇಕಾಕೀ ನ ರಮತೇ', ಎಂದೂ 'ಸೋಶ್ನುತೇ ಕಾಮಾನ್'ಎಂಬ ಶ್ರುತಿಗಳನ್ನು ಇಲ್ಲಿ ನೆನಪಿಗೆ ತರುವುದಿಚಿತವಾಗುತ್ತದೆ (೪೪೯). ಯಾರಿಗೂ ಇಚ್ಛಿತವಲ್ಲದ ಶೂನ್ಯತ್ವರೂಪದ ಮೋಕ್ಷವನ್ನು, ವೈಕುಂಠ ಪ್ರಾಪ್ತಿಯೆಂಬ ಮಹಾ ಮೋಕ್ಷವೂ, ಅದನ್ನು ಪ್ರತಿಪಾದಿಸುವ 'ಯತ್ರ ದ್ವೈತಮಿವ' ಎಂಬ ಶ್ರುತಿಯೂ, ಆಕ್ಷೇಪಿಸುತ್ತದೆ (ವಿರೋಧಿಸುತ್ತದೆ) ; ವೈಕುಂಠದಿಂದ ಮತ್ತೆ ಸಂಸಾರಕ್ಕೆ ಬರುವುದಿಲ್ಲವೆಂದು 'ಯತೋ ನಾವರ್ತತೇ ಯತಿಃ'ಎಂಬ ವಾಕ್ಯವೂ, ಇದನ್ನೇ ನಿರ್ಣಯಿಸಿ ಹೇಳುತ್ತದೆ; (೪೫೦).

[1] 'ನಾಸ್ತಿ ವಿಷ್ಣೋಃ ಪರಂ ಸ್ಥಾನಂ | 'ನಾಸ್ತಿ ವಿಷ್ಣೋಃ ಪರಂ ಧ್ಯಾನಂ '| 'ನಾಸ್ತಿ ಮೋಕ್ಷೋ ಹ್ಯವೈಷ್ಣವೇ |' ಎಂಬ ವಾಸುದೇವ ಸಹಸ್ರ ನಾಮದಲ್ಲಿರುವ ರುದ್ರವಾಕ್ಯದಿಂದ, ವಿಷ್ಣು ಸಂಬಂಧರಹಿತವಾದ ಮೋಕ್ಷವು ದೂಷಿತವಾಗಿರುತ್ತದೆಯಾಗಿ, ಸಹ ವೈಕುಂಠವೇ ಮಹಾಮೋಕ್ಷವು–ಬೇರಾವ ಮೋಕ್ಷವೂ ಇರುವುದಿಲ್ಲವೆಂದು ಸಿದ್ಧವಾಗುತ್ತದೆ.

**ವಿಶೇಷವೀಕ್ಷಿತಾತ್ಮೇತಿ ಯತೋ ಭಾಗವತೇ ರಮಾ ।**
**ವಿಶೇಷಾಣಾಂ ಚಾಧಿಪತಿಂ ಗೃಣೀತೇ ಸ್ವಪತಿಂ ಸ್ಫುಟಂ ॥ ೪೫೧ ॥**

ಭಾಗವತದಲ್ಲಿರುವ ರಮಾಸ್ತುತಿಯಿಂದಲೂ, ಭಗವಂತನಲ್ಲಿ 'ವಿಶೇಷವು' ಸಮರ್ಥಿತವಾಗಿರುವುದೆಂದು ಶ್ರುತಿಸಮಾಖ್ಯೆಯನ್ನು ತೋರಿಸುತ್ತಾರೆ :—

ಯತಃ_ಯಾವ ಕಾರಣದಿಂದ, ಭಾಗವತೇ–ಭಾಗವತದಲ್ಲಿ, ರಮಾ–ರಮಾದೇವಿಯು, ವಿಶೇಷ ವೀಕ್ಷಿತಾತ್ಮಾ [1] ಇತಿ–ವಿಶೇಷ ವೀಕ್ಷಿತಸ್ವರೂಪವುಳ್ಳವನೆಂದು (ವಿಶೇಷ ಬಲದಿಂದಲೇ ಸ್ವರೂಪಭೂತವಾದ ವೀಕ್ಷಣಕರ್ತೃವೆಂಬ ಸ್ವರೂಪವುಳ್ಳವನೆಂದು), ವಿಶೇಷಾಣಾಂ_ಸರ್ವರಲ್ಲಿರುವ ಸರ್ವವಿಶೇಷಗಳ, ಅಧಿಪತಿಂ ಚ–ಅಧಿಪತಿಯನ್ನಾಗಿಯೇ, ಸ್ಫುಟಂ–ಸ್ಪಷ್ಟವಾಗಿ, ಸ್ವಪತಿಂ–ತನ್ನ ಪತಿಯನ್ನು, ಗೃಣೀತೇ–ಸ್ತುತಿಸಿರುವರೋ (ಆದ್ದರಿಂದ ಸಹ, 'ಭೇದವ್ಯವಹಾರ ನಿರ್ವಾಹಕರಾದ' 'ವಿಶೇಷ'ನಾಮಕ ವಿಶೇಷಶಕ್ತಿಯು, ಸರ್ವಜೀವರಲ್ಲಿದೆ – ಆವೆಲ್ಲ ವಿಶೇಷಗಳ ಒಡೆಯನಾದ ಭಗವಂತನಲ್ಲಿಯೂ, 'ವಿಶೇಷ'ವಿದೆ, ಎಂದು ಸಿದ್ಧವಾಗುತ್ತದೆ).

**ಅತೋ ಹರೌ ವಿಶೇಷೋಽಸ್ತಿ ತನ್ನಿಯಮ್ಯೇಷ್ವ ದೇಹಿಷು ।**
**ಕಥಂ ನಾಭೂದ್ವಿಶೇಷೋಽಯಂ ಯೋ ವಿಶಿಷ್ಯೈವ ಗೀಯತೇ ।**
**ಅತೋ ದ್ವೈತಮಿಮೋತ್ಯುಕ್ತೋ ದ್ವೈತಪ್ರತಿನಿಧಿರ್ಹಿ ಸಃ ॥ ೪೫೨ ॥**

---

ವಿಶೇಷ ಬಲದಿಂದ, 'ವಿಶೇಷ'ಗಳುಳ್ಳ ಸರ್ವಚೇತನ ಸ್ವರೂಪಗಳ ಅಧಿಪತಿಯಾದ ಶ್ರೀಹರಿಯು, ಸರ್ವರ ಸ್ವರೂಪಗಳನ್ನು ಕಾಣುತ್ತಿರುವನೆಂದು, ಶ್ರೀಲಕ್ಷ್ಮೀದೇವಿಯು, ಸ್ವಪತಿಯನ್ನು ಸ್ತುತಿಸಿರುವುದು, ಸ್ಪಷ್ಟವಾಗಿ ಭಾಗವತದಲ್ಲಿ ಉಕ್ತವಾಗಿದೆ; ಆದ್ದರಿಂದ ಸರ್ವಚೇತನರ ಸ್ವರೂಪ ಧರ್ಮವೇ ಆದ ವಿಶೇಷ ಬಲದಿಂದ, ಭೇದವಿದ್ದಂತೆಯೇ, ಸರ್ವವೂ ಮೋಕ್ಷದಲ್ಲಿರುತ್ತದೆಂದು ಸಿದ್ಧವಾಗುತ್ತದೆ (೪೫೧). ಹೀಗೆ, ಶ್ರೀಹರಿಯಲ್ಲಿಯೂ ವಿಶೇಷವಿದೆ; ಮುಕ್ತ ಜೀವರ

---

[1] 'ಓಂ ನಮೋ ಭಗವತೇ ಹೃಷಿಕೇಶಾಯ ಸರ್ವವಿಶೇಷ ವೀಕ್ಷಿತಾತ್ಮನೇ ।' ಇತ್ಯಾದಿ ಭಾಗವತ ವಾಕ್ಯವಿದೆ; 'ವಿಶೇಷ ವೀಕ್ಷಿತಾತ್ಮಾ' ಎಂಬ ಪದವು ಈ ಶ್ಲೋಕದ ಜ್ಞಾಪಕವು; ಇದರ ಅರ್ಥವನ್ನು ಶ್ಲೋಕಾರ್ಥಭಾಗದಲ್ಲಿ ನೋಡಿರಿ (ವಿಶೇಷಬಲೇನ, ವೀಕ್ಷಿತಃ—ಸ್ವರೂಪಭೂತ ವೀಕ್ಷಣಕರ್ತಾ ಆತ್ಮಾಸ್ವರೂಪಂ ಯಸ್ಯ ಸ ತಥೋಕ್ತಃ).

ಅತಃ–ಸ್ಪಷ್ಟಸ್ಮೃತಿ ಸಿದ್ಧವಾದ್ದರಿಂದ, ಹರೌ–ಶ್ರೀಹರಿಯಲ್ಲಿ, ವಿಶೇಷಃ–ವಿಶೇಷವು, ಅಸ್ತಿ–ಇದೆ; ದೇಹಿಷು–ಜೀವರಲ್ಲಿ, ತನ್ನಿಯಮ್ಯಃ ಚ–ಅದರಿಂದ ನಿಯಮ್ಯವಾದ ವಿಶೇಷವೇ (ಭಗವಂತನ ವಿಶೇಷದ ಅಧೀನವಾದುದೇ) (ಇರುತ್ತದೆ); ಅಯಂ–ಈ (ಜೀವಗತವಾದ), ವಿಶೇಷಃ–ವಿಶೇಷವು, ಕಥಂ ನ ಅಭೂತ್–ಹೇಗೆ ಆಗಲಿಲ್ಲ? (ನಿಯಮ್ಯವಾದ ಮಾತ್ರಕ್ಕೆ ಅದು ವಿಶೇಷ ವಲ್ಲವೇ?), ಯಃ–ಯಾವ ಜೀವಗತ ವಿಶೇಷವು, ವಿಶಿಷ್ಯೈವ–ವಿಶೇಷ ಯುಕ್ತ ವಾದುದಾಗಿಯೇ, ಗೀಯತೇ – ಹೇಳಲ್ಪಡುತ್ತದೆಯಷ್ಟೆ; ಹಿ – (ಯಸ್ಮಾತ್) ಯಾವ ಕಾರಣದಿಂದ, ಸಃ–ಆ ವಿಶೇಷವು, ದ್ವೈತಪ್ರತಿನಿಧಿಃ–ಭೇದಪ್ರತಿನಿಧಿಯೋ (ಭೇದವಿದ್ದಂತೆ ಭೇದಕಾರ್ಯವನ್ನು ನಿರ್ವಹಿಸುವುದೋ), ಅತಃ–ಆದ್ದರಿಂದ, ದ್ವೈತಂ ಇವ ಇತ್ಯುಕ್ತಿಃ–ಭೇದದಂತೆ ಎಂದು ಶ್ರುತಿಯು ಹೇಳಿತು.

**ಸಾರೂಪ್ಯಂ ಚೈವ ಸಾಲೋಕ್ಯಂ ಸಾಮೀಪ್ಯಂ ಯೋಗ ಏವ ಚ ।**
**ಮುಕ್ತಿಶ್ಚತುರ್ವಿಧಾ ಪ್ರೋಕ್ತಾ ಭೇದಾಪೇಕ್ಷಾಹಿ ಸಾಽಖಿಲಾ ॥೪೫೩॥**

ಸಾಯುಜ್ಯಮುಕ್ತಿಗೆ ಐಕ್ಯಪರವಾದ ಅರ್ಥವನ್ನು ನಿರಾಕರಿಸಲು, ಸಾಯುಜ್ಯ ಪದದ ಸ್ಥಾನದಲ್ಲಿ ಯೋಗವೆಂಬ ಪದವನ್ನು ಪ್ರಯೋಗಿಸಿ ಪೂರ್ವಾರ್ಧದಲ್ಲಿಯೇ ಸೂಚಿಸಿರುವರು :—

ಸಾರೂಪ್ಯಂ–ಸಾರೂಪ್ಯವು, ಸಾಲೋಕ್ಯಂ ಏವ ಚ–ಸಾಲೋಕ್ಯವೂ, ಸಾಮೀಪ್ಯಂ–ಸಾಮೀಪ್ಯವೂ, ಯೋಗಃ ಏವ ಚ–(ಕೂಡಿರುವುದೆಂಬ ಅರ್ಥವನ್ನು ಹೇಳುವ) ಸಾಯುಜ್ಯವೂ, ಚತುರ್ವಿಧಾ ಮುಕ್ತಿಃ – ನಾಲ್ಕುವಿಧವಾದ ಮುಕ್ತಿ ಯೆಂದು, ಪ್ರೋಕ್ತಾ–ಹೇಳಲಾಗುತ್ತದೆ; ಸಾ ಅಖಿಲಾ–ಅದೆಲ್ಲವೂ (ನಾಲ್ಕು

---

ಸ್ವರೂಪ ದೇಹಗಳಲ್ಲಿಯೂ ಇದೆ–ಈ ಎಲ್ಲ ವಿಶೇಷಗಳೂ, ಶ್ರೀಹರಿಯ ವಿಶೇಷದಿಂದ ನಿಯಮ್ಯಗಳೇ ಆಗಿವೆ; ವಿಶೇಷ ಸಹಿತವಾಗಿಯೇ ಜೀವರು ವ್ಯವಹರಿಸಲ್ಪಡುವ ರಾದ್ದರಿಂದ, ಜೀವಸ್ವರೂಪಗತ ವಿಶೇಷವು ವಿಶೇಷವಲ್ಲೇನು? (ವಿಶೇಷವೇ ಆಗಿದೆ); ಈ ವಿಶೇಷವು, ಭೇದ ಪ್ರತಿನಿಧಿಯಾಗಿದ್ದು, ಭೇದ ಕಾರ್ಯವನ್ನು ತಾನು ನಿರ್ವಹಿಸುತ್ತದೆ; ಆದ್ದರಿಂದಲೇ ಶ್ರುತಿಯು 'ಯತ್ರ ದ್ವೈತಮಿವ'–ವೋಕ್ಷದಲ್ಲಿ ಭೇದವಿದ್ದಂತೆಯೇ, ಇತ್ಯಾದಿಯಾಗಿ ಹೇಳುತ್ತದೆ (೪೫೨). ಸಾರೂಪ್ಯ, ಸಾಲೋಕ್ಯ ಸಾಮೀಪ್ಯ ಮತ್ತು ಯೋಗವೆಂದು, ಮುಕ್ತಿಯು

ಮುಕ್ತಿಗಳು), ಭೇದಾಪೇಕ್ಷಾ ಹಿ–ಭೇದವನ್ನೇ ಇಚ್ಛಿಸುತ್ತವೆ (ಪ್ರತಿಯೊಂದೂ ಭೇದ ಯುಕ್ತವಾದುದೇ ಆಗಿದೆ).

**ಕುಚೋದ್ಯಕೃದವದ್ಯಾರ್ಥೀ ದೃಶ್ಯಮರ್ಥಂ ನ ಪಶ್ಯತಿ**
**ಕಿಂ ಯೋಗಾರ್ಥಕಧಾತೂತ್ಥಾಂ ಸಾಯುಜ್ಯಾಖ್ಯಾಂ ವಿದುಃ ಖಲಾಃ**
**॥ ೪೫೪ ॥**

ಕುಚೋದ್ಯಕೃತ್ – ಕುಚೋದ್ಯಪ್ರವೃತ್ತನು, ಅನವದ್ಯಾರ್ಥೀ – ದೋಷವನ್ನೇ ಹುಡುಕುವವನಾಗಿ, ದೃಶ್ಯಂ ಅರ್ಥಂ–ಕಾಣಲು ಯೋಗ್ಯವಾದ ಅರ್ಥವನ್ನು, ನ ಪಶ್ಯತಿ–ಕಾಣುವುದಿಲ್ಲ; ಯೋಗಾರ್ಥಕ ಧಾತೂತ್ಥಾಂ–ಯೋಗವೆಂಬ ಅರ್ಥವುಳ್ಳ ಧಾತುವಿನಿಂದ ಉದ್ಭವಿಸಿದ, ಸಾಯುಜ್ಯಾಖ್ಯಾಂ–ಸಾಯುಜ್ಯವೆಂಬ ಪದವನ್ನು, ಖಲಾಃ–ದುರ್ಜನರು (ಮಾಯಾವಾದಿಗಳು), ವಿದುಃ ಕಿಂ–ತಿಳಿಯುವರೇನು ?

**ಯುಜಿರ್ಯೋಗೇ ಸಹ ಯುಜೌ ಸಯುಜೌ ಶಬ್ದವಿನ್ಮತೇ ।**
**ತಯೋರ್ಭಾವಶ್ಚ ಸಾಯುಜ್ಯಂ ಕಥಮೈಕ್ಯಮಿಹೋಚ್ಯತೇ ॥ ೪೫೫ ॥**

ಸಾಯುಜ್ಯಪದ ನಿಷ್ಪತ್ತಿಯನ್ನು ತೋರಿಸುತ್ತಾರೆ :—

ಶಬ್ದವಿನ್ಮತೇ – ವ್ಯಾಕರಣಜ್ಞರ ಅಭಿಪ್ರಾಯದಂತೆ (ಸಹ), ಯುಜಿಃ ಯೋಗೇ–ಯುಜಿ ಧಾತುವು ಯೋಗವೆಂಬರ್ಥದಲ್ಲಿದೆ; ಸಹಯುಜೌ–ಒಟ್ಟು ಕೂಡಿರೋಣವು, ಸಯುಜೌ–ಸಯುಜರೆನಿಸುವರು ; ತಯೋಃ ಭಾವಃ–ಅವುಗಳ ಭಾವವು ; ಸಾಯುಜ್ಯಂ–ಸಾಯುಜ್ಯವು (ಸಯುಜದ ಭಾವಾರ್ಥತ್ವವು) ; ಕಥಂ–

---

ನಾಲ್ಕುವಿಧ ; ಯೋಗವೆಂಬುದೇ ಸಾಯುಜ್ಯವು ; ಸಾಯುಜ್ಯದ ಅರ್ಥವೇ ಯೋಗ–ಕೂಡಿರುವುದು–ಸೇರುವುದು ಎಂದಾಗಿದೆ ; ಈ ಎಲ್ಲ ಪ್ರಕಾರದ ಮುಕ್ತಿಯೂ ಭೇದವನ್ನು ಅಪೇಕ್ಷಿಸುತ್ತದೆ–ಎಲ್ಲದರಲ್ಲಿ ಭೇದವಿದೆ (೪೫೩). ಕುಚೋದ್ಯದಲ್ಲಿ ಆಸಕ್ತನಾದವನು, ದೋಷವನ್ನೇ ಸದಾ ಹುಡುಕುತ್ತಿರುವನು ; ಆತನು ಸ್ಪಷ್ಟವಾಗಿ ತೋರುವ ಅರ್ಥವನ್ನು ನೋಡುವುದಿಲ್ಲ ; ಸಾಯುಜ್ಯವೆಂಬ ಪದವು, ಯೋಗವೆಂಬ ಅರ್ಥವುಳ್ಳ ಧಾತುವಿನಿಂದ ಹುಟ್ಟಿದ್ದೆಂಬುದನ್ನು, ಈ ದುರ್ಜನರು ತಿಳಿಯುವರೇ ? (ಇಲ್ಲ) (೪೫೪). 'ಯುಜಿರ್ಯೋಗೇ' ಎಂದು

*

(ಹೀಗಿರಲು) ಹೇಗೆ, ಇಹ–ಇಲ್ಲಿ (ಈ ಪ್ರಸಿದ್ಧ ಧಾತುನಿಷ್ಪನ್ನವಾದ ಪದದಲ್ಲಿ), ಐಕ್ಯಂ ಉಚ್ಯತೇ–ಐಕ್ಯ (ಏಕೀಭಾವ) ವೆಂಬರ್ಥವು ಹೇಳಲಾಗುತ್ತದೆ? (ಶಕ್ಯವಲ್ಲ–ವ್ಯಾಕರಣಸಮ್ಮತವೂ ಅಲ್ಲ).

**ಉಕ್ತಂ ಪುರೈವ ಯದ್ವ್ಯಾಪ್ತಿಂ ವಕ್ತ್ಯೈಕ್ಯಪದಮಿತ್ಯಪಿ ।**
**ಮುಖ್ಯತ್ವಾನ್ಯತ್ವಾರ್ಥಕಂ ತತ್ಕಿಲಾತೋ ಹತೋಽಸ್ಯಹೋ ।**
**ಅತಃ ಸಯುಕ್ತತೈವಾಸೀತ್ಸಾಯುಜ್ಯಂ ನ ತ್ವಭಿನ್ನತಾ ॥ ೪೫೬ ॥**

ಐಕ್ಯಂ ಪದಂ – ಐಕ್ಯಪದಂ, ಯದ್ವ್ಯಾಪ್ತಿಂ – ಯಾವ ವ್ಯಾಪ್ತಿಯನ್ನು, ವಕ್ತಿ–ಹೇಳುತ್ತದೆ, ಇತ್ಯಪಿ–ಎಂಬುದೂ ಸಹ, ಪುರಾ ಏವ–ಪೂರ್ವದಲ್ಲಿಯೇ, ಉಕ್ತಂ–ಹೇಳಲಾಯಿತು; ಮುಖ್ಯತ್ವ ಅನ್ಯತ್ವಾರ್ಥಕಂ–ಮುಖ್ಯಾರ್ಥದಲ್ಲಿಯೂ, ಬೇರೆ ಅರ್ಥದಲ್ಲಿಯೂ ಹೇಗೆ ಉಪಯೋಗಿಸಲಾಗುತ್ತದೆಂಬುದೂ, ಕಿಲ–ಹೇಳಲಾಯಿತಷ್ಟೆ; ಅತಃ–ಆದ್ದರಿಂದ (ಸಾಯುಜ್ಯ ಮತ್ತು ಐಕ್ಯ ಪದಗಳು ಭಿನ್ನಾರ್ಥವುಳ್ಳದ್ದಾದ್ದರಿಂದ), ಹತೋಽಸಿ – ನಷ್ಟನಾಗಿರುವಿ (ನಿನ್ನ ಐಕ್ಯವೆಂಬರ್ಥವು ಭಗ್ನವಾಗಿರುತ್ತದೆ), ಅಹೋ–ಆಶ್ಚರ್ಯವು (ಇಷ್ಟೂ ತಿಳಿಯದೇ ವಾದವನ್ನು ಮುಂದಿಟ್ಟಿಯಲ್ಲವೇ !); ಅತಃ–ಆದ್ದರಿಂದಲೇ, ಸಾಯುಜ್ಯಂ–ಸಾಯುಜ್ಯವು, ಸಯುಕ್ತತಾ ಏವ–ಯುಕ್ತಿಯುಕ್ತವಾದುದೇ, ಆಸೀತ್–ಆಯಿತು; ಸಾಯುಜ್ಯಂ–ಸಾಯುಜ್ಯವು, ಅಭಿನ್ನತಾ – ಅಭೇದವು (ಐಕ್ಯವು), ನ ತು – ಅಲ್ಲವೆಂದೇ ಸಿದ್ಧವಾಯಿತು.

---

ಧಾತ್ವರ್ಥವಿದೆ; ಕೂಡಿರುವ ಇಬ್ಬರು ಸಯುಜೌ ಎನಿಸುತ್ತಾರೆ; ವ್ಯಾಕರಣಜ್ಞರಂತೆ, ಸಯುಜರ ಭಾವವು ಸಾಯುಜ್ಯವು; ಹೀಗೆ ಸಾಯುಜ್ಯ ಶಬ್ದ ನಿಷ್ಪತ್ತಿ ಇದೆ; ಹೀಗಿದ್ದರೂ ಇಲ್ಲಿ ಐಕ್ಯವೆಂಬ ಅರ್ಥವನ್ನು ಹೇಗೆ ಪರನು ಹೇಳುವನು? ಆಶ್ಚರ್ಯವು; (೪೫೫). ಐಕ್ಯಪದದ ವ್ಯಾಪ್ತಿಯನ್ನು, ಅದು ಯಾವ ಮುಖ್ಯಾರ್ಥದಲ್ಲಿ ಮತ್ತು ಅನ್ಯಾರ್ಥದಲ್ಲಿ ಉಪಯೋಗಿಸಲ್ಪಡುತ್ತದೆಂಬುದನ್ನು ಈ ಹಿಂದೆ ಹೇಳಲಾಗಿದೆಯಷ್ಟೆ; ಆದ್ದರಿಂದ ನಿನ್ನ ವಾದವು ಭಗ್ನವಾಯಿತು; ಸಾಯುಜ್ಯ ಪದದ ಅರ್ಥವು ನಾವು ಹೇಳುವುದು ಯುಕ್ತಿ ಯುಕ್ತವೇ ಆಗಿದೆ; ಸಾಯುಜ್ಯ ಮತ್ತು ಐಕ್ಯಗಳಲ್ಲಿ ವ್ಯತ್ಯಾಸವನ್ನು ತಿಳಿಯದ ನೀನು ವಾದ ಮಾಡುವುದು ಆಶ್ಚರ್ಯವೇ ಸರಿ; ಅಭೇದವು ಸಾಯುಜ್ಯ ಪದದ ಅರ್ಥವೇ

**ಇಹಾಚ್ಯುತಾಂಗಗಾ ದೇವಾ ಯನ್ಮುಕ್ತೌ ಚ ತದಂಗಗಾಃ ।**
**ಸಾರೂಪ್ಯಂ ಚೈವ ಸಾಮೀಪ್ಯಂ ಸಾಲೋಕ್ಯಂ ಚ ಹರೇರ್ಬಹಿಃ ।**
**ಸದಾ ಹರ್ಯಂಗಸಂಗಸ್ತು ಸಾಯುಜ್ಯಮಿತಿ ಸಿದ್ಧ್ಯತಿ ॥ ೪೫೭ ॥**

ಇಹ–ಸಂಸಾರದಶಾದಲ್ಲಿ, ಅಚ್ಯುತಾಂಗಗಾಃ–ವಿಶ್ವರೂಪನಾದ ಶ್ರೀಹರಿಯ ಪಾದಾದಿ ಅವಯುವಗಳನ್ನು ಆಶ್ರಯಿಸಿಕೊಂಡಿರುವ, ದೇವಾಃ–ದೇವತೆಗಳು, ಯತ್–ಯಾವ ಕಾರಣದಿಂದ, ಮುಕ್ತೌ ಚ–ಮುಕ್ತಿಯಲ್ಲಿ ಸಹ, ತದಂಗಗಾಃ–ಆಯಾ ಅವಯುವಗಳನ್ನೇ ಆಶ್ರಯಿಸಿಕೊಂಡಿರುವರೋ, ಹರೇಃ ಬಹಿಃ – ಭಗವಂತನ ಅಂಗಗಳ ಹೊರಗೆ (ಇರುವುದರಲ್ಲಿ), ಸಾರೂಪ್ಯಂ–ಸಾರೂಪ್ಯವೂ, ಸಾಮೀಪ್ಯಂ ಚೈವ–ಸಾಮೀಪ್ಯಮುಕ್ತಿಯೂ, ಸಾಲೋಕ್ಯಂ ಚ–ಸಾಲೋಕ್ಯ ಮುಕ್ತಿಯೂ (ಇರುತ್ತವೆ) ; ಸದಾ–ಸರ್ವದಾ, ಹರ್ಯಂಗ ಸಂಗಸ್ತು–ಶ್ರೀಹರಿಯ ದೇಹದ (ಅವಯುವಗಳ) ಸಂಗವಾದರೋ, ಸಾಯುಜ್ಯಂ–ಸಾಯುಜ್ಯ ಮುಕ್ತಿಯು, ಇತಿ ಸಿದ್ಧ್ಯತಿ–ಎಂದು ಸಿದ್ಧವಾಗುತ್ತದೆ.

**ನಿತ್ಯಮುಕ್ತಾಪಿ ಯಸ್ಯ ಶ್ರೀರ್ನಿತ್ಯಂ ವಕ್ಷಸಿ ಲಕ್ಷ್ಯತೇ ।**
**ಅನಿತ್ಯಮುಕ್ತೇಃ ಕೋ ಮುಕ್ತೋ ತದೈಕ್ಯಂ ಪ್ರಾಪ್ನುಯಾದ್ವದ ॥ ೪೫೮ ॥**

ಮುಕ್ತರಿಗೆ ಐಕ್ಯಾಭಾವವೆಂಬಲ್ಲಿ ಕೈಮುತ್ಯವನ್ನು ಪ್ರದರ್ಶಿಸುತ್ತಾರೆ :—

ಶ್ರೀಃ–ಲಕ್ಷ್ಮೀದೇವಿಯು, ನಿತ್ಯಮುಕ್ತಾ ಅಪಿ–ನಿತ್ಯಮುಕ್ತಳೇ ಆದರೂ, ಯಸ್ಯ – ಶ್ರೀಹರಿಯ, ವಕ್ಷಸಿ – ವಕ್ಷಸ್ಥಲದಲ್ಲಿ, ನಿತ್ಯಂ ಲಕ್ಷ್ಯತೇ – ನಿತ್ಯವೂ

---

ಅಲ್ಲ (೪೫೬). ಸಂಸಾರ ದಶಾದಲ್ಲಿ ದೇವತೆಗಳು (ಅವರೇ ಸಾಯುಜ್ಯ ಮುಕ್ತಿಗೆ ಅರ್ಹರು), ವಿಶ್ವರೂಪನಾದ ಶ್ರೀಹರಿಯ ಪಾದಾದಿ ಅವಯುವಗಳನ್ನಾಶ್ರಯಿಸಿ ಕೊಂಡಿರುವರು ; ಅವರು ಮುಕ್ತಿಯಲ್ಲಿಯೂ ಆಯಾ ಭಗವದಂಗಗಳನ್ನೇ ಆಶ್ರಯಿಸಿಕೊಂಡಿರುವರು ; ಸಾರೂಪ್ಯ, ಸಾಲೋಕ್ಯ, ಸಾಮೀಪ್ಯ ಮುಕ್ತಿಗಳು, ಭಗವದಂಗಗಳ ಹೊರಗಿದ್ದು ಆನಂದಿಸುವುದು ; ಸದಾ ಭಗವದಂಗಗಳ ಸಂಗ ವಿರುವುದು ಸಾಯುಜ್ಯವು ; ಎಂದು ಸಿದ್ಧವಾಗುತ್ತದೆ (೪೫೭). ನಿತ್ಯ ಮುಕ್ತಳಾದ ಶ್ರೀದೇವಿಯು ನಿತ್ಯವೂ ಭಗವಂತನ–ವಕ್ಷದಲ್ಲಿ ಕಾಣುತ್ತಿರುವಳು. ಸಂಸಾರದಲ್ಲಿದ್ದು

ಕಾಣಲ್ಪಡುವಳೋ (ಐಕ್ಯವನ್ನು ಹೊಂದುವುದಿಲ್ಲವೋ), ಅನಿತ್ಯಮುಕ್ತಃ–ಅನಿತ್ಯಮುಕ್ತನಾದ (ಸಂಸಾರದಲ್ಲಿದ್ದು ಮುಕ್ತಿಯನ್ನು ಹೊಂದಿದ), ಕೋ ಮುಕ್ತಃ–ಯಾವ ಮುಕ್ತನು (ಜೀವನು), ತದೈಕ್ಯಂ–ಶ್ರೀಹರಿಯ ಐಕ್ಯವನ್ನು, ಪ್ರಾಪ್ನುಯಾತ್–ಹೊಂದಬಹುದು?, ವದ–ಹೇಳು (ನಿತ್ಯಮುಕ್ತಚೇತನಕ್ಕೆ ಐಕ್ಯವಿಲ್ಲದಿರಲು, ಈಗ ಮಾತ್ರ ಮುಕ್ತನಾದ ಜೀವನಿಗೆ ಐಕ್ಯವು ಹೇಗೆ ಸಂಭಾವ್ಯವಾಗುತ್ತದೆ? ಕೈಮುತ್ಯ ನ್ಯಾಯವು ಶಕ್ಯವಿಲ್ಲೆಂದು ಸಾಧಿಸುತ್ತದೆ).

**ಪ್ರಲಯೇ ನ ಲಯೋ ಯಸ್ಯಾಃ ಪ್ರೋದ್ಭವೇ ಚಾಸ್ತಿ ನೋದ್ಭವಃ ।**
**ಪ್ರಕೃತಿಃ ಕಿಲ ಯಾ ದೇವೀ ನಿತ್ಯಮುಕ್ತಾ ಕಥಂ ನ ಸಾ ॥ ೬೫೯ ॥**

ಲಕ್ಷ್ಮೀದೇವಿಯ ನಿತ್ಯಮುಕ್ತತ್ವವನ್ನು ಉಪಪಾದಿಸುತ್ತಾರೆ :—

ಯಸ್ಯಾಃ–ಯಾವ ಲಕ್ಷ್ಮೀದೇವಿಗೆ, ಪ್ರಲಯೇ–(ಈ ಜಗತ್ತಿನ) ಪ್ರಲಯದಲ್ಲಿ, ನ ಲಯಃ–ಲಯವಿಲ್ಲವೋ (ನಾಶವಿಲ್ಲವೋ), ಪ್ರೋದ್ಭವೇ ಚ–(ಜಗತ್ತಿನ) ಉತ್ಪತ್ತಿಯಲ್ಲಿ ಸಹ, ಉದ್ಭವಃ–ಉತ್ಪತ್ತಿಯು (ಜನನವು), ನಾಸ್ತಿ–ಇಲ್ಲವೋ (ಮತ್ತು), ಯಾ ದೇವೀ–ಯಾವ ದೇವಿಯು (ಪ್ರಕೃತಿಗೂ ಅಭಿಮಾನಿಯಾಗಿದ್ದು, ಜಗತ್ತಿನ ಲಯಾನಂತರ ಅವಶಿಷ್ಟವಾಗುವ ಮೂಲಪ್ರಕೃತಿಯ ಅಭಿಮಾನಿಯೂ, ನಿಯಾಮಕಳೂ ಆದ್ದರಿಂದ), ಪ್ರಕೃತಿಃ ಕಿಲ–(ನಿತ್ಯವಾದ) ಪ್ರಕೃತಿಯೇ (ಅಭಿಮಾನಿ ಚೇತನವೇ) ಆಗಿರುವಳಷ್ಟೆ (ಶ್ರುತಿಪ್ರಸಿದ್ಧಿಯೂ ಇದೆ); ಸಾ–ಆಕೆಯು (ಲಕ್ಷ್ಮೀದೇವಿಯು), ಕಥಂ–ಹೇಗೆ, ನಿತ್ಯಮುಕ್ತಾ ನ–ನಿತ್ಯಮುಕ್ತಳಲ್ಲ?

**ಆದ್ಯಃ ಪ್ರಲಯೋಯತೋಬ್ರಾಹ್ಮೋಯದ್ಬ್ರಹ್ಮಪ್ರಲಯೋಲಯಃ।**
**ಅತೋ ರಮಾರಮೇಶೌ ದ್ವೌ ಸರ್ಗಪ್ರಲಯವರ್ಜಿತೌ ॥ ೬೬೦ ॥**

---

ಮುಕ್ತನಾದ (ಅನಿತ್ಯ) ಮುಕ್ತನು ಭಗವಂತನಿಂದ ಐಕ್ಯವನ್ನು ಹೊಂದುವುದಿಲ್ಲವೆಂದು ಹೇಳಲೇನು? (೬೫೮). ಶ್ರೀದೇವಿಯು ನಿತ್ಯ ಮುಕ್ತಳೆಂಬಲ್ಲಿ ಸಂಶಯವಿಲ್ಲ; ಮಹಾ ಪ್ರಲಯದಲ್ಲಿ ಆಕೆಗೆ ಲಯವಿಲ್ಲ ; ಯಾವ ಸೃಷ್ಟಿಯಲ್ಲಿಯೂ ಉತ್ಪತ್ತಿಯಿಲ್ಲ; ಜಗತ್ತೆಲ್ಲವೂ ನಷ್ಟವಾದ ನಂತರ ನಿಲ್ಲುವ ಮೂಲ ಪ್ರಕೃತಿಗೆ ಅಭಿಮಾನಿಯಾಗಿ ಪ್ರಕೃತಿ ಶಬ್ದವಾಚ್ಯಳೇ ಆಗಿರುವ ಲಕ್ಷ್ಮೀದೇವಿಯು ನಿತ್ಯಮುಕ್ತಳೇ ಸರಿ (೬೫೯). ಸೃಷ್ಟಿಯ ಆದಿಯಲ್ಲಿ ಜನಿಸುವನಾದ್ದರಿಂದ ಬ್ರಹ್ಮನು ಆದ್ಯ ಬ್ರಹ್ಮನು ; ಆತನ

ಆದ್ಯಸೃಷ್ಟಿ ಮತ್ತು ಅಂತಿಮ ಪ್ರಲಯಗಳೆ ಪ್ರತಿಪಾದಕಗಳೆಂದು ಸರ್ಗಲಯ ಗಳನ್ನು ವಿವೇಚಿಸಿದರೂ (ಪ್ರವಾಹತ್ವದೃಷ್ಟಿಯಿಂದ ಆದಿಸರ್ಗ, ಅಂತಿಮ ಲಯ ಗಳೆಂಬವು ಇಲ್ಲವೇ ಇಲ್ಲ) ಬ್ರಹ್ಮನಿಗೇ ಲಯವಲ್ಲದೇ (ಚತುರ್ಮುಖನಿಗೆ), ರಮಾ ರಮೇಶರಿಗೆ ಇಲ್ಲವೆಂದು ಹೇಳುತ್ತಾರೆ :—

ಯತ್ (ಯಸ್ಮಾತ್)—ಯಾವ ಕಾರಣದಿಂದ, ಬ್ರಹ್ಮಪ್ರಲಯಃ—ಬ್ರಹ್ಮ ಪ್ರಲಯವು, ಲಯಃ—ಮಹಾಪ್ರಲಯವೆಂಬುದೋ, ಯತಃ—ಏಕೆಂದರೆ, ಆದ್ಯಃ—ಸೃಷ್ಟಿಯಲ್ಲಿ ಮೊದಲು ಜನಿಸಿದ, ಬ್ರಾಹ್ಮಪ್ರಲಯಃ—ಬ್ರಹ್ಮನ ಪ್ರಲಯವೋ (ವಸ್ತುತಃ ಆದ್ಯಬ್ರಹ್ಮನೆಂಬ ಒಬ್ಬ ಬ್ರಹ್ಮನು ಇಲ್ಲವೇ ಇಲ್ಲ; ಪ್ರತಿಮಹಾಪ್ರಲಯದ ನಂತರ ಆರಂಭವಾಗುವ ಸೃಷ್ಟಿಯಲ್ಲಿಯೂ ಒಬ್ಬೊಬ್ಬ ಬೇರೆ ಬ್ರಹ್ಮಜೀವರ ಸೃಷ್ಟಿಯೇ ಆಗುತ್ತದೆ); ಅತಃ—ಈ ಕಾರಣದಿಂದ (ಶ್ರುತಿಯು), ರಮಾರಮೇಶೌ—ಲಕ್ಷ್ಮೀನಾರಾಯಣರೆಂಬ, ದ್ವೌ—ಇಬ್ಬರೂ, ಸರ್ಗಪ್ರಲಯವರ್ಜಿತೌ—ಸೃಷ್ಟಿ ಲಯಗಳಿಲ್ಲದವರು (ಎಂದು ಹೇಳುತ್ತದೆ).

**ಯೌ ಹಿ ಸರ್ವಲಯೇ ಸಂತೌ ತಯೋರಂತೋ ನ ಯೌಕ್ತಿಕಃ ।**
**ಅತಃ ಪ್ರಾಗಸತಃ ಸತ್ತಾ ಸಂಬಂಧಶ್ಚ ನ ಯೌಕ್ತಿಕಃ ॥ ೪೬೧ ॥**
**ಯಯೋಃ ಸೃಷ್ಟಿಶ್ಚ ನಷ್ಟಿಶ್ಚ ನ ಶ್ರುತಾ ನಾಪಿ ಯೌಕ್ತಿಕೀ ।**
**ಲಕ್ಷ್ಮೀನಾರಾಯಣೌ ತೌ ದ್ವೌ ನಿತ್ಯಮುಕ್ತೌ ನ ಸಂಶಯಃ ॥ ೪೬೨ ॥**

ಹಿ—ಯಾವ ಕಾರಣದಿಂದ, ಯೌ—ಯಾರಿಬ್ಬರು, ಸರ್ವಲಯೇ—ಸರ್ವ ಬ್ರಹ್ಮಪ್ರಲಯಗಳಲ್ಲಿ, ಸಂತೌ — ವಿದ್ಯಮಾನರಾಗಿರುವರೋ (ಇರುವರೋ),

---

ಲಯವೇ ಮಹಾ ಪ್ರಲಯವು; ಸೃಷ್ಟಿ ಲಯಗಳು ಬ್ರಹ್ಮನಿಗಲ್ಲದೇ ರಮಾ ರಮೇಶರಿಗಿಲ್ಲವೆಂದು ಶ್ರುತಿಯೂ ಹೇಳುತ್ತಿದೆ (೪೬೦). ಯಾರಿಬ್ಬರು (ಲಕ್ಷ್ಮೀ ನಾರಾಯಣರು) ಪ್ರತಿ ಮಹಾ ಪ್ರಲಯದಲ್ಲಿಯೂ ಇರುವರೋ (ಲಯಹೊಂದ ದವರೋ), ಅವರ ಲಯವು ಯುಕ್ತಿ ಯುಕ್ತವೂ ಆಗುವುದಿಲ್ಲ; ಹಿಂದಿಲ್ಲದ ವಸ್ತುವಿನ (ಸತ್ತೆಯು) ಇರುವಿಕೆಯು, ಮತ್ತು ಅದರ ಅನ್ಯ ಸಂಬಂಧವೂ ಯುಕ್ತ ವಾಗುವುದಿಲ್ಲ; ಯಾರಿಬ್ಬರ ಸೃಷ್ಟಿಲಯಗಳು ಶ್ರುತ್ಯುಕ್ತವೂ ಅಲ್ಲವೋ ಮತ್ತು ಯುಕ್ತಿ ಯುಕ್ತವೂ ಅಲ್ಲವೋ, ಆ ಲಕ್ಷ್ಮೀನಾರಾಯಣರು ನಿತ್ಯ ಮುಕ್ತರೆಂಬಲ್ಲಿ ಯಾವ ಸಂಶಯವೂ ಇಲ್ಲ ಶ್ರುತಿಯೂ ಹಾಗೆಯೇ ಹೇಳುತ್ತದೆ (೪೬೧—೪೬೨).

ತಯೋಃ—ಅವರ, ಅಂತಃ—ವಿನಾಶವು, ನ ಯೌಕ್ತಿಕಃ—ಯುಕ್ತಿಪ್ರಾಪ್ತವಲ್ಲವೋ; ಅತಃ—ಆದ್ದರಿಂದಲೇ, ಪ್ರಾಗಸತಃ—ಪೂರ್ವದಲ್ಲಿಲ್ಲದ (ಹಿಂದೆ ಇಲ್ಲದ) ವಸ್ತುವಿಗೆ, ಸತ್ತಾ – ಇರುವಿಕೆಯು, ಸಂಬಂಧಶ್ಚ – ಸಂಬಂಧವೂ (ಅನ್ಯಸಂಬಂಧವೂ), ನ ಯೌಕ್ತಿಕಃ—ಯುಕ್ತಿ ಲಭ್ಯವಲ್ಲವೋ, ಯಯೋಃ—ಯಾರಿಬ್ಬರ, ಸೃಷ್ಟಿಶ್ಚ—ಉತ್ಪತ್ತಿಯೂ, ನಷ್ಟಿಶ್ಚ— ನಾಶವೂ, ನ ಶ್ರುತಾ—ಶ್ರುತಿ ಪ್ರೋಕ್ತವಲ್ಲವೋ, ನಾಪಿ ಯೌಕ್ತಿಕಃ—ಯುಕ್ತಿಸಮ್ಮತವೂ ಆಗುವುದಿಲ್ಲವೋ, ತೌ ದ್ವೌ—ಆ ಇಬ್ಬರಾದ, ಲಕ್ಷ್ಮೀನಾರಾಯಣೌ—ಲಕ್ಷ್ಮೀನಾರಾಯಣರು, ನಿತ್ಯಮುಕ್ತೌ—ನಿತ್ಯಮುಕ್ತರು; ಸಂಶಯಃ ನ—ಸಂಶಯವಿಲ್ಲ (ನಿಶ್ಚಯವು).

**ಅತಸ್ತ್ವಾಂ ಶಬ್ದಮರ್ಯಾದಾ ಬಾಧತೇ ಬುಧಸಂಸದಿ ।**
**ಉಕ್ತರೀತ್ಯಾರ್ಥಮರ್ಯಾದಾಪ್ಯನರ್ಥಂ ಕುರುತೇ ವದ ॥ ೪೬೩ ॥**

ಅತಃ—ಆದ್ದರಿಂದ, ಬುಧಸಂಸದಿ—ವಿದ್ವತ್ಸಭೆಗಳಲ್ಲಿ, ಶಬ್ದಮರ್ಯಾದಾ—ಸಾಯುಜ್ಯಾದಿ ಶಬ್ದಮರ್ಯಾದೆಯೂ, ಉಕ್ತರೀತ್ಯಾ—ಹಿಂದೆ ಹೇಳಿದಂತೆ ಅರ್ಥಮರ್ಯಾದಾ—(ನಿತ್ಯಮುಕ್ತ ಲಕ್ಷ್ಮೀದೇವಿಗೆ ಐಕ್ಯವಿಲ್ಲದಿರಲು ಅನ್ಯರ ಪಾಡೇನು, ಇತ್ಯಾದಿ) ಅರ್ಥಮರ್ಯಾದೆಯೂ, ತ್ವಾಂ—ನಿನ್ನನ್ನು, ಬಾಧತೇ—ಬಾಧಿಸುತ್ತದೆ (ಬಾಯಿಬಿಡದಂತೆ ಮಾಡುತ್ತದೆ); ಅನರ್ಥಂ ಅಪಿ – ಅರ್ಥಶೂನ್ಯನೆಂದೂ, ಕುರುತೇ—ಮಾಡುತ್ತದೆ (ಸಾರುತ್ತದೆ); ವದ—(ಇದಕ್ಕೇನು ಹೇಳುವಿ ?) ಹೇಳು.

**ಪ್ರಾಗುಕ್ತಶ್ರುತಯಶ್ಚ ತ್ವಾಂ ನಿಘ್ನಂತ್ಯಜ್ಞ ಪದೇ ಪದೇ ।**
**ಅತೋ ಮುಕ್ತಾಶ್ರಯೋ ಬ್ರಹ್ಮರುದ್ರಾದ್ಯುತ್ಕೃಷ್ಟಚೇತನಃ ॥ ೪೬೪ ॥**

ಪ್ರಾಗುಕ್ತ ಶ್ರುತಯಃ—('ಸಹ ಬ್ರಹ್ಮಣಾ' ಇತ್ಯಾದಿ) ಹಿಂದೆ ಹೇಳಲಾದ ಶ್ರುತಿಗಳೂ (ಉಪಲಕ್ಷಣದಿಂದ 'ಭೇಜೇ ಖಗೇಂದ್ರ ಧ್ವಜಪಾದಮೂಲಂ' ಇತ್ಯಾದಿ

---

ಹೀಗೆ ಸಾಯುಜ್ಯಾದಿ ಶಬ್ದಗಳ ಮತ್ತು ಅವುಗಳ ಅರ್ಥ ಗೌರವವನ್ನು ತಿಳಿಯದ ಮೂಢನೆಂದು ವಿದ್ವತ್ಸಭೆಗಳಲ್ಲಿ ಹೇಳಲ್ಪಡುವಿ ; ಇದಕ್ಕೇನು ಹೇಳುವಿ ? ಇದು ಅನರ್ಥಕರವಲ್ಲವೇ ? ನಿನಗೆ ಇಚ್ಛಿತವಲ್ಲವಷ್ಟೆ (೪೬೩). 'ಸಹ ಬ್ರಹ್ಮಣಾ', 'ದ್ವಾ ಸುಪರ್ಣಾ' ಇತ್ಯಾದಿ ಈ ಹಿಂದೆ ಬಹುಪರಿಯಿಂದ ವಿವಕ್ಷಿತವಾಗಿ ವಿಸ್ತರಿಸಲ್ಪಟ್ಟ ಶ್ರುತಿಗಳೂ, 'ಭೇಜೇ ಖಗೇಂದ್ರ ಧ್ವಜಪಾದ ಮೂಲಂ' ಎಂಬ

ಸ್ಮೃತಿಗಳೂ), ಅಜ್ಞ–ಹೇ ಮೂರ್ಖ! ಪದೇ ಪದೇ–ಮೇಲಿಂದ ಮೇಲೆ, ನಿಘ್ನಂತಿ–(ನಿನ್ನನ್ನು) ಭಂಗಗೊಳಿಸುತ್ತವೆ (ಸಂಹರಿಸುತ್ತವೆ–ತಲೆ ಎತ್ತದಂತೆ ಮಾಡುತ್ತವೆ – ಮುಕ್ತಿಯಲ್ಲಿಯೂ ಭೇದವನ್ನು ಪ್ರಮಾಣೀಕರಿಸುತ್ತವೆ); ಅತಃ – ಆದ್ದರಿಂದ, ಮುಕ್ತಾಶ್ರಯಃ – ಮುಕ್ತರಿಗೆ ಆಶ್ರಯನಾದವನು, ಬ್ರಹ್ಮರುದ್ರಾದ್ಯುತ್ಕೃಷ್ಟಚೇತನಃ–ಬ್ರಹ್ಮರುದ್ರಾದಿಗಳಕ್ಕಿಂತ ಶ್ರೇಷ್ಠನಾದ ಚೇತನನೇ ಆಗಿರುವನು.[1]

**ದ್ವಿತೀಯಾದ್ವೈ ಭಯಮಿತಿ ಸದೃಶಾದ್ಭೀತಿರುಚ್ಯತೇ ।**
**ನ ಚೇತ್ ದ್ವಿತೀಯಾದ್ವಚನಾದ್ಭೀಃ ಸ್ವಸ್ಯೈವ ಭವೇದ್ಧ್ರುವಂ ।**
**ಯದೇಕಾಕೀ ನರಮುತ ಇತ್ಯಸ್ಯನ್ಯಾರ್ಥಶೂನ್ಯವಾಕ್ ॥ ೪೬೫ ॥**

'ದ್ವಿತೀಯಾದ್ವೈ ಭಯಂ ಭವತಿ' ಎಂಬ ಶ್ರುತಿಗೆ ಸ್ವಾಭಿಮತವಾದ ಅರ್ಥವನ್ನು ಹೇಳಿ, ಪರಾಭಿಮತ ಅರ್ಥವನ್ನು ದೂಷಿಸುತ್ತಾರೆ:—

ದ್ವಿತೀಯಾದ್ವೈ ಭಯಂ–'ದ್ವಿತೀಯಾದ್ವೈ ಭಯಂ' ಎಂಬ ('ಎರಡನೆ ವಸ್ತು ಇದ್ದಲ್ಲಿ ಅದರಿಂದ ಭಯವು') ಶ್ರುತಿಯು, ಸದೃಶಾತ್ – ಸದೃಶನಿಂದ (ಪರಾಧೀನನಾದ ಅನ್ಯನೀಚನಿಂದಲ್ಲ), ಭೀತಿಃ ಇತಿ–ಭೀತಿಯು ಎಂದು, ಉಚ್ಯತೇ–ಹೇಳುತ್ತದೆ; ನ ಚೇತ್–ಶ್ರುತ್ಯರ್ಥವು ಹೀಗಲ್ಲದಿದ್ದರೆ, ದ್ವಿತೀಯಾತ್ ವಚನಾತ್–ದ್ವಿತೀಯಮಾತ್ರ ವಚನದಿಂದ, ಭೀಃ–ಭಯಗೊಳ್ಳುವವನು (ಭಯಜನಕವೆಂದು

---

ಮುಂತಾದ ಸ್ಮೃತಿಗಳೂ, ಭಗವಂತನು ಮುಕ್ತಾಶ್ರಯನೆಂದೂ, ಬ್ರಹ್ಮರುದ್ರಾದಿ ಚೇತನರಿಂದ ಸರ್ವೋತ್ಕೃಷ್ಟನೆಂದೂ, ನಿನ್ನ ವಾದವನ್ನು ಪ್ರತಿ ಹೆಜ್ಜೆಯಲ್ಲಿಯೂ ಭಗ್ನಗೊಳಿಸುತ್ತವೆ (೪೬೪). 'ದ್ವಿತೀಯಾದ್ವೈ ಭಯಂ' ಎಂಬ ಶ್ರುತಿಯು, ದ್ವಿತೀಯ ಪದದಿಂದ, ತನಗೆ ಸದೃಶನಾದ ಅನ್ಯನಿಂದ ಭಯವೆಂದು ಹೇಳುತ್ತದೆ; ತನಗಿಂತ ನೀಚವಾದ ತನ್ನ ಅಧೀನವಾದ ವಸ್ತುವಿನಿಂದ ಭಯಕಾರಣವಿಲ್ಲ;

1 'ಮುಕ್ತಾನಾಂ ಪರಮಾ ಗತಿಃ' ಎಂಬ ವಿಷ್ಣುಸಹಸ್ರನಾಮಸ್ಥವಾದ ನಾಮವೂ, ಮುಕ್ತಾಶ್ರಯತ್ವವನ್ನೂ, 'ಬ್ರಹ್ಮರುದ್ರಾದ್ಯುತ್ಕೃಷ್ಟ ಚೇತನಃ' ಎಂಬ ವಾಸುದೇವ ಸಹಸ್ರನಾಮದಲ್ಲಿರುವ ನಾಮವು, ಬ್ರಹ್ಮರುದ್ರಾದ್ಯುತ್ಕೃಷ್ಟಚೇತನತ್ವವನ್ನೂ, ಶ್ರೀವಿಷ್ಣುವಿಗೆ ಸ್ಥಾಪಿಸುತ್ತಾರೆ.

ಹೇಳುವವನು), ಸ್ವಸ್ಯ ಏವ – ತನಗೇ, ಭವೇತ್ – ಭಯಕಾರಣನಾಗುವನು, ಧ್ರುವಂ–ನಿಶ್ಚಯವು; ಯತ್–ಏಕೆಂದರೆ (ಯಸ್ಮಾತ್), ಏಕಾಕೀ ನ ರಮತೇ ಇತಿ–(ಅದೇ, 'ದ್ವಿತೀಯಾದ್ವೈ ಭಯಂ' ಎಂಬ ಪ್ರಕರಣದಲ್ಲಿರುವ) 'ತಸ್ಮಾದೇ-ಕಾಕೀ ನ ರಮತೇ' (ಆದ್ದರಿಂದ ಏಕಾಕಿಗೆ ಯಾವ ಸುಖವೂ ಇಲ್ಲವೆಂದು) ಎಂದು ಹೇಳುವ, ಅನ್ಯಾರ್ಥಶೂನ್ಯವಾಕ್–ಬೇರೆ ಅರ್ಥಕ್ಕೆ ಅವಕಾಶವೇ ಇಲ್ಲದ (ನಿರವಕಾಶವಾದ) ಶ್ರುತಿವಾಕ್ಯವು (ಭಯಗೊಳಿಸುವುದಿಲ್ಲವೇ? 'ದ್ವಿತೀಯಾದ್ವೈ' ಎಂಬ ಸಾವಕಾಶವಾಕ್ಯಕ್ಕೆ ನಿರವಕಾಶ ವಾಕ್ಯಾನುಸಾರವಾಗಿ ಅರ್ಥವನ್ನು ಹೇಳಬೇಕಲ್ಲವೇ?)

**ದ್ವಿತೀಯಾದಾಶ್ರಮಾನ್ನ್ಯಾಣಾಂ ಭಯಂ ಸ್ಯಾದ್ಬಹು ಸಂಸೃತೇಃ ।**
**ಅತಸ್ತೃತೀಯಂ ತುರ್ಯಂ ವಾ ಪ್ರಥಮಾದಾಶ್ರಮಾದ್ವ್ರಜೇತ್** ॥ ೪೬೬ ॥

**ಇತಿ ವಾ ಸಾ ಶ್ರುತಿರ್ವಕ್ತಿ ಪುಣ್ಯಪಾಪಾಖ್ಯಯೋರ್ದ್ವಯೋಃ ।**
**ದ್ವಿತೀಯಾದ್ಧಿ ಭಯಂ ದುಃಖಂ ನರಕಾದ್ಯಂ ತತಃ ಸುಧೀಃ ।**
**ಪ್ರಥಮಂ ಧರ್ಮಮೇವೈಕಂ ಭಜೇದ್ದ್ವಂದ್ವಸಹೋನ್ನಹಂ ॥ ೪೬೭ ॥**

ಹೀಗೆ ಶ್ರುತಿಯಿಂದಲೇ ('ದ್ವಿತೀಯಾದ್ವೈ ಭಯಂ' ಎಂಬ ಶ್ರುತಿಯಿಂದಲೇ) ಪರಾಭಿಮತವಾದ ಅರ್ಥವು ದೂಷಿತವಾದರೂ, ಚಮತ್ಕಾರಕ್ಕಾಗಿ, ಎರಡರ್ಥಗಳನ್ನು ಹೇಳಿ, ಈಗ ಸ್ವಾನುಭವಸಿದ್ಧವಾದ 'ದ್ವಿತೀಯ' ಪದ ಸ್ವಾರಸ್ಯದಿಂದಲೇ ಲಭ್ಯವಾಗುವ, ಅನ್ಯಾರ್ಥವನ್ನೂ ಹೇಳುತ್ತಾರೆ:—

---

ಶ್ರುತ್ಯರ್ಥವು ಹೀಗಲ್ಲದಿದ್ದರೆ, ತನಗೆ ತಾನೇ ಭಯಕಾರಣವೆಂದು (ಅನ್ಯವಸ್ತುವೇ ಇಲ್ಲವೆಂದಾದರೆ ಪ್ರಾಪ್ತವಾಗುತ್ತದೆ; 'ಏಕಾಕೀ ನ ರಮತೇ', ನಿರವಕಾಶವಾಗಿದೆ (ಅನ್ಯಾರ್ಥಕ್ಕೆ ಅವಕಾಶವಿಲ್ಲದ್ದಾಗಿದೆ); ಈ ನಿರವಕಾಶ ಶ್ರುತಿಯು ಏಕಾಕಿಗೆ ಯಾವ ಸುಖವೂ ಇಲ್ಲೆಂದು ಪ್ರಾಪ್ತವಾಗುತ್ತದೆ (೪೬೫). ದ್ವಿತೀಯ ಪದದಿಂದ ಚತುರಾಶ್ರಮಗಳಲ್ಲಿ ಎರಡನೆಯದಾದ ಗೃಹಸ್ಥಾಶ್ರಮವು, ಪತ್ನೀಪುತ್ರಾದಿ ನಿಮಿತ್ತವಾಗಿ ಬಹು ಸಂಸಾರಕ್ಕೆ ಭಯಕ್ಕೆ ಕಾರಣವಾಗುವುದರಿಂದ, ತೃತೀಯವಾದ ವಾನಪ್ರಸ್ಥ ಅಥವಾ ಚತುರ್ಥವಾದ ಯತ್ಯಾಶ್ರಮವನ್ನಾಗಲಿ, ಪ್ರಥಮಾಶ್ರಮದಿಂದಲೇ ಹೊಂದಬಹುದೆಂಬ ಅರ್ಥವನ್ನಾದರೂ ಈ ಶ್ರುತಿಯು ಹೇಳುತ್ತದೆಂದು

ದ್ವಿತೀಯಾತ್ ಆಶ್ರಮಾತ್–ಗೃಹಸ್ಥಾಶ್ರಮದಿಂದ, ನೃಣಾಂ–ಮನುಷ್ಯರಿಗೆ, ಸಂಸೃತೇಃ – (ಪುತ್ರಕಲತ್ರವಿತ್ತಗೇಹಾದಿರೂಪ) ಸಂಸಾರನಿಮಿತ್ತದಿಂದ, ಬಹು ಭಯಂ ಸ್ಯಾತ್–ಬಹಳ ಭಯವು ಉಂಟಾಗುತ್ತದೆ; ಅತಃ–ಅದ್ದರಿಂದ, ಪ್ರಥಮಾತ್ ಆಶ್ರಮಾತ್–ಪ್ರಥಮ (ಬ್ರಹ್ಮಚರ್ಯದಿಂದ) ಆಶ್ರಮದಿಂದಲೇ, ತೃತೀಯಂ–ಮೂರನೇ ಆಶ್ರಮವಾದ ವಾನಪ್ರಸ್ಥವನ್ನಾಗಲಿ, ವಾ–ಅಥವಾ, ತುರ್ಯಂ–(ನಾಲ್ಕನೆಯದಾದ) ಯತ್ಯಾಶ್ರಮವನ್ನಾಗಲಿ, ವ್ರಜೇತ್–ಹೊಂದತಕ್ಕದ್ದು; ಇತಿ ವಾ–ಎಂಬ ಅರ್ಥವನ್ನಾಗಲಿ, ಸಾ ಶ್ರುತಿಃ–ಆ ಶ್ರುತಿಯು ('ದ್ವಿತೀಯಾದ್ವೈ ಭಯಂ' ಎಂಬ ಶ್ರುತಿಯು), ವಕ್ತಿ – ಹೇಳುತ್ತದೆ; (ವಾ–ಅಥವಾ), ಪುಣ್ಯಪಾಪಾಖ್ಯಯೋಃ–ಪುಣ್ಯಪಾಪಗಳೆಂಬ, ದ್ವಯೋಃ–ಎರಡರಲ್ಲಿ, ದ್ವಿತೀಯಾತ್ ಹಿ–ಎರಡನೆಯದಾದ ಪಾಪದಿಂದಲೇ ಅಷ್ಟೆ; ಭಯಂ–ಭಯವೂ, ದುಃಖಂ–ದುಃಖವೂ, ನರಕಾದ್ಯಂ–ನರಕಾದಿ ಅನಿಷ್ಟವೂ, ತತಃ–ಆ ಕಾರಣದಿಂದ, ಸುಧೀಃ–ವಿವೇಕಿಯು, ಪ್ರಥಮಂ–ಮೊದಲಿನದಾದ, ಧರ್ಮಂ ಏವ–ಪುಣ್ಯವನ್ನೇ, ಏಕಂ–ಒಂದನ್ನೇ, ಭಜೇ–ಸೇವಿಸುವೆನು, ಅನ್ವಹಂ–ನಿತ್ಯವೂ, ದ್ವಂದ್ವ ಸಹಃ–ಸುಖದುಃಖಗಳೆರಡನ್ನು ಸಮಚಿತ್ತನಾಗಿ ಅನುಭವಿಸುವೆನು; (ಇತಿ ವಕ್ತಿ–ಹೀಗೆಯೂ ಹೇಳುತ್ತದೆ).

**ಇತಿ ವಾ ವಕ್ತಿ ಸತ್ಸಂಗಂ ಶಂಸತೀ ಮೋಕ್ಷಕಾರಣಂ ।**
**ದ್ವಯೋಃ ಸದಸತೋರ್ನೄಣಾಂ ದ್ವಿತೀಯಾದ್ವಾಭಯಂ ಜಗೌ**
**॥ ೪೬೮ ॥**

ವಾ–ಅಥವಾ, ಸತ್ಸಂಗಂ–ಸಜ್ಜನ ಸಹವಾಸವನ್ನು, ಮೋಕ್ಷಕಾರಣಂ–ಮೋಕ್ಷಕಾರಣವನ್ನಾಗಿ, ಶಂಸತೀ–ಪ್ರಶಂಶಿಸುವುದಾಗಿ, ಇತಿ ವಕ್ತಿ–ಹಾಗೆಂದು

---

ತಿಳಿಯಬಹುದಾಗಿದೆ; ಅಥವಾ ಪುಣ್ಯಪಾಪಗಳೆಂಬ ಎರಡರಲ್ಲಿ ಎರಡನೆಯದಾದ ಪಾಪದಿಂದ ಭಯವಾದ್ದರಿಂದ (ದುಃಖವೂ, ನರಕಾದಿಗಳೂ ಲಭಿಸುವುದರಿಂದ), ವಿವೇಕಿಯು, ಮೊದಲಿನ ಪುಣ್ಯವನ್ನೇ (ಧರ್ಮ) ಸೇವಿಸಬೇಕು; ನಿತ್ಯವೂ ಬರುವ ಸುಖದುಃಖಗಳನ್ನು ಸಮಚಿತ್ತನಾಗಿ ಅನುಭವಿಸುತ್ತ, ಭಯಕಾರಣವಾದ ಪಾಪ (ಅಧರ್ಮಾಚರಣೆ)ಯಿಂದ ದೂರನಾಗಿರಬೇಕೆಂದು ಹೇಳುತ್ತದೆಂದು ತಿಳಿಯಲು ಬರುತ್ತದೆ (೪೬೬–೪೬೭). ಅಥವಾ ಸತ್ಸಂಗ ದುಸ್ಸಂಗಗಳಲ್ಲಿ,

ಹೇಳುತ್ತದೆ; ನೃಣಾಂ – ಮನುಷ್ಯರಿಗೆ, ಸದಸತೋಃ ದ್ವಯೋಃ – ಸತ್ಸಂಗ, ದುಸ್ಸಂಗಳೆಂಬ ಎರಡರಲ್ಲಿ, ದ್ವಿತೀಯಾತ್ – ಎರಡನೆಯದರಿಂದ (ದುಸ್ಸಂಗದಿಂದ), ಭಯಂ – ಭಯವನ್ನು (ಮೋಕ್ಷವಿಘ್ನವೆಂಬ ಭಯವನ್ನು), ಜಗೌ – ಹೇಳಿತು (ಹೇಳಿರುತ್ತದೆ).

**ಏವಂ ದ್ವಿತೀಯಾಜ್ಜಗತೋ ಭಯಂ ಮೃತ್ಯುರ್ಯತೋ ನೃಣಾಂ ।**
**ತನ್ಮೃತ್ಯುಭಯಭಂಗಾಯ ಪ್ರಥಮಂ ಪುರುಷೋತ್ತಮಂ ॥೪೬೯॥**
**ಭಜೇದನನ್ಯಭಕ್ತಃ ಸನ್ನಿತಿ ವಾ ಶಾಸ್ತಿ ಸಜ್ಜನಾನ್ ।**
**ಇತಿ ಸಾಮಾನ್ಯವಾಗ್ವಕ್ತಿ ಮೋಕ್ಷಹೇತುಪರಂಪರಾಂ ॥ ೪೭೦ ॥**

ಏವಂ – ಹೀಗೆ, ಯತಃ – ಯಾವ ಕಾರಣದಿಂದ, ನೃಣಾಂ – ಮನುಷ್ಯರಿಗೆ, ದ್ವಿತೀಯಾತ್ – ಎರಡನೆಯ (ಬ್ರಹ್ಮರುದ್ರಾದಿ), ಜಗತಃ – ಲೋಕದಿಂದ (ವೈಕುಂಠಾದಿಯಿಂದಲ್ಲ), ಭಯಂ – ಭಯವೂ, ಮೃತ್ಯುಃ – ಮೃತ್ಯುವೂ (ಮರಣವೂ – ಎರಡೂ), (ಭವತಿ – ಇರುವುದೋ), ತನ್ಮೃತ್ಯು ಭಯ ಭಂಗಾಯ – ಆದ್ದರಿಂದ, ಮೃತ್ಯು ಭಯನಾಶಕ್ಕಾಗಿ (ಬ್ರಹ್ಮರುದ್ರಾದಿಗಳಾರೂ ಮೃತ್ಯು ಭಯ ನಿವಾರಕರಲ್ಲ ವಾದ್ದರಿಂದ), ಪ್ರಥಮಂ – ಮೊದಲಿನವನಾದ, ಪುರುಷೋತ್ತಮಂ – ಶ್ರೀಹರಿಯನ್ನು, ಅನನ್ಯ ಭಕ್ತಃ ಸನ್ – ಅನ್ಯರಲ್ಲಿ ಆ ವಿಧ (ಪುರುಷೋತ್ತಮನೆಂಬ ಬುದ್ಧಿಯಿಂದ) ಭಕ್ತಿ ಮಾಡದೇ, ಭಜೇತ್ – ಸೇವಿಸತಕ್ಕದ್ದು, ಇತಿ ವಾ – ಎಂದಾಗಲಿ, ಸಜ್ಜನಾನ್ – ಸುಜೀವಿಗಳನ್ನು, ಶಾಸ್ತಿ – ಶಾಸನ ಮಾಡುತ್ತದೆ (ಆಜ್ಞೆಮಾಡಿ ವಿಧಿಸುತ್ತದೆ);

---

ಎರಡನೆಯದಾದ ದುಸ್ಸಂಗದಿಂದ ಭಯವನ್ನು ಹೇಳುತ್ತದೆ; ಮಾನವರಿಗೆ ಸತ್ಸಂಗವನ್ನು ಮೋಕ್ಷ ಹೇತುವೆಂದು ಪ್ರಶಂಸಿಸುತ್ತದೆ (೪೬೮). ಬ್ರಹ್ಮರುದ್ರಾದಿ ಲೋಕಗಳು ಮೃತ್ಯುಭಯವುಳ್ಳವಾದ್ದರಿಂದ, ಮನುಷ್ಯರು, ಮೃತ್ಯುಭಯ ವಿನಾಶ ಕ್ಕಾಗಿ, ಪುರುಷೋತ್ತಮನಾದ ಶ್ರೀಹರಿಯನ್ನು ಸೇವಿಸಬೇಕು (ಶ್ರೀಹರಿಯು ಪ್ರಥಮನು, ಬ್ರಹ್ಮಾದಿಗಳು ದ್ವಿತೀಯರು; ಅನನ್ಯ ಭಕ್ತಿಯಿಂದ ಪ್ರಥಮನನ್ನೇ ಸೇವಿಸಲು ಈ ಶ್ರುತಿಯು ವಿಧಿಸುತ್ತದೆಂದು ತಿಳಿಯಬಹುದಾಗಿದೆ; ಹೀಗೆ ಸಜ್ಜನರಿಗೆ ಮೋಕ್ಷ ಸಾಧಕವಾದ ಉಪದೇಶವನ್ನು ನೀಡುತ್ತಾ, ಮೋಕ್ಷ ವಿಘ್ನ ಕಾರಿಗಳನ್ನು, 'ದ್ವಿತೀಯ'ವೆಂಬ ಸಾಮಾನ್ಯಪದದಿಂದ ನಿರ್ದೇಶಿಸಿ, ಆ ಶಬ್ದದಿಂದ

ಇತಿ – 'ದ್ವಿತೀಯಾತ್ ವೈ ಭಯಂ' ಎಂದು ಸಾಮಾನ್ಯವಾಕ್ – ದ್ವಿತೀಯ ವಸ್ತುವನ್ನು ನಿರ್ದೇಶಿಸದೇ ಅವಧಿಯಿಲ್ಲದಂತೆ, ಸಾಮಾನ್ಯವಾಕ್ಯವು, ಮೋಕ್ಷ ಹೇತು ಪರಂಪರಾಂ–ಮೋಕ್ಷಕಾರಣದ ಪರಂಪರೆಯನ್ನು (ಮೋಕ್ಷ ವಿಘ್ನಕಾರಕ ದ್ವಿತೀಯ ವಸ್ತುವನ್ನು ಯೋಗ್ಯರೀತಿಯಿಂದ ಊಹಿಸಿ ತಿಳಿಯಲು ಅವಕಾಶ ವಿರುವಂತೆ, ಯಾವ ಅವಧಿಯನ್ನು ಹೇಳದೇ), ವಕ್ತಿ–ಹೇಳುತ್ತದೆ ;

**ನ ಚೇದ್ದ್ವಿತೀಯಾದ್ವಚನಾತ್ ಸ್ವಸ್ಯಾಭಯಮಿತೀರಿತಂ ॥ ೪೭೧ ॥**

ಹೀಗೆ ಅರ್ಥವನ್ನು ಆ ಶ್ರುತಿಗೆ ತಿಳಿಯದಿದ್ದರೆ, ಬಾಧಕವನ್ನು ಹೇಳು ತ್ತಾರೆ :—

ನ ಚೇತ್–ಉಕ್ತಾರ್ಥವು ಗ್ರಾಹ್ಯವಲ್ಲದಿದ್ದರೆ, ದ್ವಿತೀಯಾತ್ ವಚನಾತ್– ದ್ವಿತೀಯವೆಂಬ ವಚನದಿಂದ (ಶಬ್ದದಿಂದ), (ತನಗೆ ಅಪೇಕ್ಷಿತವಲ್ಲದ ಅರ್ಥವನ್ನು ಹೇಳುವ 'ಏಕಾಕೀ ನ ರಮತೇ' ಎಂಬ ವಚನದಿಂದ), ಸ್ವಸ್ಯಾಃ–ತನಗೇ ('ದ್ವಿತೀಯಾದ್ವೈ ಭಯಂ ಭವತಿ' ಎಂಬ ವಾಕ್ಯಕ್ಕೇ), ಭಯಂ–(ಪರಸ್ಪರ ವಿರೋಧ ರೂಪ) ಭಯವು, (ದ್ವಾಸುಪರ್ಣಾ ಇತ್ಯಾದಿ ಅನ್ಯ ಶ್ರುತಿಗಳಿಂದಲೂ), ಇತಿ ಈರಿತಂ–ಉಂಟಾಗುವುದೆಂದು (ಹೇಳಿದಂತಾಗುತ್ತದೆ).

**ಏಕದ್ವಿತೀಯತೋ ಭೀತಾ ಸಾತಿಭೀತೇತಿ ಮೇ ಮತಿಃ ।**
**ಬಹೂನಾಂ ಭೇದವಾಕ್ಯಾನಾಂ ಯುಕ್ತೀನಾಂ ಚ ಪರಾಕ್ರಮಾತ್**
**॥ ೪೭೨ ॥**

---

ಯೋಗ್ಯಾರ್ಥವನ್ನು ತಿಳಿಯಲು ಅವಕಾಶವಿರುವಂತೆ, ಯಾವ ಅವಧಿಯನ್ನು ಇಡದೇ (ಇಂಥದ್ದರಿಂದ ಭಯವೆಂದು ಸ್ಪಷ್ಟಪಡಿಸದೇ), ಮೋಕ್ಷಹೇತು ಪರಂಪರೆ ಯನ್ನು ಧರ್ಮ, ಸತ್ಸಂಗ ಇತ್ಯಾದಿ (ಈ ಶ್ರುತಿಯು ಹೇಳುವುದೆಂದು ತಿಳಿಯುವುದು ಉಚಿತವಾಗುತ್ತದೆ) (೪೬೯–೪೭೦). ಈ ಅರ್ಥವನ್ನು ತಿಳಿಯದಿದ್ದರೆ, ದ್ವಿತೀಯ ಪದಕ್ಕೆ ಎರಡನೇ ವಸ್ತು ಸಾಮಾನ್ಯ ಮಾತ್ರದಿಂದ ಭಯವೆಂಬರ್ಥವನ್ನು ತಿಳಿಯುವುದಾದರೆ, ತನ್ನಿಂದ ತನಗೇ ಭಯವೆಂಬ ವಿರುದ್ಧಭಾವವೂ ತೋರುತ್ತದೆ; 'ಏಕಾಕೀ ನ ರಮತೇ' ಮತ್ತು 'ದ್ವಾ ಸುಪರ್ಣಾ' ಇತ್ಯಾದಿ ತನಗೆ ಅಪೇಕ್ಷಿತವಲ್ಲದ ಅರ್ಥವನ್ನು ಹೇಳುವ ಶ್ರುತಿ ವಿರೋಧ ಭಯವೂ ತಪ್ಪುವುದಿಲ್ಲ (೪೭೧). ಇನ್ನೊಂದೆಂಬ ಅನ್ಯವಸ್ತು ಮಾತ್ರದಿಂದ ಭೀತಿಗೊಂಡ ಈ ಶ್ರುತಿಯು, ಜೀವೇಶ

ಜಾತ್ಯೇಕ ವಚನ ನಿಯಮದಂತೆ, ದ್ವಿತೀಯ ಶಬ್ದವು ಬಹು ವಸ್ತುಗಳನ್ನು ಪ್ರತಿನಿಧಿಸುವುದರಿಂದ, ದ್ವಿತೀಯ ವಸ್ತು ಮಾತ್ರದಿಂದಲ್ಲ, ಅನ್ಯ ಸರ್ವವಸ್ತುಗಳಿಂದ ಭಯವೆಂಬ ಅರ್ಥವನ್ನು ತಿಳಿಯಬೇಕಾಗುತ್ತದೆನ್ನುತ್ತಾರೆ:—

ಏಕದ್ವಿತೀಯತಃ–ಒಂದೆಂಬ ಅನ್ಯ ವಸ್ತುವಿನಿಂದ, ಭೀತಾ–ಭಯಗೊಂಡ ಸಾ – ಈ ಶ್ರುತಿಯು, ಬಹೂನಾಂ – ಬಹೂಸಂಖ್ಯೆಯ, ಭೇದವಾಕ್ಯಾನಾಂ–ಜೀವೇಶ ಭೇದಪ್ರತಿಪಾದಕ) ಭೇದವಾಕ್ಯಗಳ, ಚ–ಹಾಗು, ಯುಕ್ತೀನಾಂ–ಯುಕ್ತಿಗಳ, ಪರಾಕ್ರಮಾತ್–ಬಲದಿಂದ, ಅತಿ ಭೀತಾ ಇತಿ–ಅತ್ಯಂತ ಭೀತವಾಗಿರುತ್ತದೆಂದು, ಮೇ–ನನ್ನ, ಮತಿಃ–ನಿಶ್ಚಯವು.

**ಚಿದಚಿದ್ರೂಪಜಗತಾ ಸರ್ವೇಣೈಕ್ಯಂ ಯದೀಷ್ಯತೇ ।**
**ದ್ವಿತೀಯತೋ ಭಯಂ ತರ್ಹಿ ದ್ವಿತೀಯಾರ್ಥಾಚ್ಚ ಪೂರ್ವಭೀಃ**

॥ ೪೭೩ ॥

ಪರಾಭಿಮತವಾದ ಸರ್ವೈಕ್ಯವನ್ನು ಈ ಶ್ರುತಿಯು ವಿರೋಧಿಸುವುದೆನ್ನುತ್ತಾರೆ:—

ಚಿದಚಿದ್ರೂಪ ಜಗತಾ–ಚೇತನ, ಜಡಾತ್ಮಕ ಜಗತ್ತಿನಿಂದ, ಸರ್ವೇಣ–ಎಲ್ಲದರಿಂದ, ಐಕ್ಯಂ–ಐಕ್ಯವನ್ನು, ಯದಿ ಇಷ್ಯತೇ–ಹೇಳುವುದಾದರೆ, (ಐಕ್ಯವು ಇಚ್ಛಿತವಾದರೆ) ತರ್ಹಿ–ಆಗ, ದ್ವಿತೀಯತಃ–(ಚಿತ್, ಅಚಿತ್‌ಗಳಲ್ಲಿ) ಎರಡನೆಯದಾದ ಅಚಿತ್ (ಜಡ) ಜಗತ್ತಿನಿಂದ, ಭಯಂ–ಭಯವು (ಜಡ ಜಗತ್ತು ಮಿಥ್ಯೆಯಾದ್ದರಿಂದ–ಅದರಿಂದ ಐಕ್ಯವೆಂದರೆ, ಬ್ರಹ್ಮನೂ ಮಿಥ್ಯೆ ಎಂದಾಗುವುದರಿಂದ) ತಪ್ಪಿದ್ದಲ್ಲ; ದ್ವಿತೀಯಾರ್ಥಾತ್ – ನಂತರ ಹೇಳಿದ 'ಏಕಾಕೀ ನ ರಮತೇ'

---

ಭೇದವನ್ನು ಘೋಷಿಸುವ, ಭೇದ ವಾಕ್ಯಗಳಿಂದಲೂ, ಯುಕ್ತಿಗಳಿಂದಲೂ (ಅವುಗಳ ಪರಾಕ್ರಮದಿಂದ) ಅತ್ಯಂತ ಭಯಗ್ರಸ್ತವೆಂದು ನನ್ನ ನಿಶ್ಚಯವಾಗಿದೆ (೪೭೨). ಜಗತ್ತು ಚಿದಚಿದಾತ್ಮಕವಾದುದು (ಚೇತನ ಜೇತನಗಳಿಂದ ಯುಕ್ತವಾದುದು); ಸರ್ವೈಕ್ಯವು ನಿನಗೆ ಇಚ್ಛಿತವಾದರೆ, ದ್ವಿತೀಯದಿಂದ (ಅಚೇತನದಿಂದ) ಭಯವೆಂದಾದರೆ, ಮಾಯಾವಾದಿಯು ಬಹುವಿಪತ್ತುಗಳಿಗೆ ಗುರಿಯಾಗುತ್ತಾನೆ; ಜಡ ಜಗತ್ತು ಮಿಥ್ಯೆಯಾದ್ದರಿಂದ, ಅದರಿಂದ ಐಕ್ಯವುಳ್ಳ ಭಗವಂತನೂ

ಎಂಬುದರಿಂದ, ಪೂರ್ವಾರ್ಥಃ–ಪ್ರಥಮೋಕ್ತ ಚಿದ್ರೂಪ ಜಗದೈಕ್ಯವೂ ಬಾಧಿತ ವೆಂಬ ಭಯವು.[1]

**ಅರ್ಥದ್ವಯೇ ದ್ವಿತೀಯಾರ್ಥಾದ್ವಿರಮ್ಯ ವ್ಯಾಪೃತಿರ್ಭಯಂ ॥೪೭೪॥**

ಅರ್ಥದ್ವಯೇ–(ಸ್ವರೂಪೈಕ್ಯ ಮತ್ತು ತಾನಲ್ಲದ ಅನ್ಯವಸ್ತುವಿನ ಅಭಾವ ಗಳೆಂಬ) ಎರಡು ಅರ್ಥಗಳಲ್ಲಿ, ದ್ವಿತೀಯಾರ್ಥಾತ್–ಎರಡನೇ ಅರ್ಥದಿಂದ, ವಿರಮ್ಯ–ವಿರಾಮಹೊಂದಿ (ಬಿಟ್ಟು), ವ್ಯಾಪೃತಿಃ–ವ್ಯಾಪಾರ ಮಾಡುವುದೆಂಬ, ಭಯಂ–ಭಯವು (ಸ್ಯಾತ್–ಉಂಟಾಗುತ್ತದೆ). (ಸ್ವರೂಪೈಕ್ಯವೇ ಭಯಪ್ರದ ವೆಂಬರ್ಥಕ್ಕೂ ಅವಕಾಶವಾಗುತ್ತದೆ).

**ಮುಚ್ಯಮಾನಾಣುನಾ ಚೈಕ್ಯಮುಚ್ಯಮಾನಮನೀದೃಶಿ ।**
**ದ್ವಿತೀಯಾ ತೇ ಭಯಂ ಪದ್ಯಾತ್ತಸ್ಮಾದಸ್ಮಾದ್ವಿಲಕ್ಷಣಾತ್ ॥ ೪೭೫ ॥**

ಮುಚ್ಯಮಾನಾಣುನಾ–ಮುಕ್ತನಾಗುವ ಅಣುಸ್ವರೂಪನಾದ ಜೀವನಿಂದ, ಅನೀದೃಶಿ–(ನಿತ್ಯಮುಕ್ತನೂ ವ್ಯಾಪ್ತನೂ ಆದ) ಪರಬ್ರಹ್ಮನಲ್ಲಿ, ಉಚ್ಯ ಮಾನಂ–ಹೇಳಲ್ಪಡುವ, ಐಕ್ಯಂ–ಐಕ್ಯವು, ಅಸ್ಮಾತ್–(ಅಣುವಾದ) ಜೀವನಿಂದ, ವಿಲಕ್ಷಣಾತ್–(ಮೇಲೆ ಹೇಳಿದಂತೆ) ವಿಲಕ್ಷಣನಾದ, ತಸ್ಮಾತ್–ಪರಬ್ರಹ್ಮನಿಂದ,

---

ಮಿಥ್ಯೆ ಎಂದಾಗುತ್ತದೆ; ಚೇತನಾತ್ಮಕ ಜಗತ್ತಿನ ಐಕ್ಯವೂ ಬಾಧಿತವಾಗುತ್ತದೆ ('ಏಕಾಕೀ ನ ರಮತೇ' ಎಂಬ ಶ್ರುತಿಯಿಂದ ಬಾಧಿತವಾಗುತ್ತದೆ); ಏತೇನ ಸರ್ವೈಕ್ಯಪರವಾದ ಅರ್ಥವು, 'ದ್ವಿತೀಯಾದ್ವೈ ಭಯಂ' ಎಂಬ ಶ್ರುತಿಯಿಂದ ಸಿದ್ಧವಾಗುವುದಿಲ್ಲ (೪೭೩). ಸ್ವರೂಪೈಕ್ಯ ಮತ್ತು ಅನ್ಯವಸ್ತುವಿನ ಅಭಾವಗಳೆಂಬ ಎರಡರಲ್ಲಿ, ದ್ವಿತೀಯವನ್ನು ಬಿಟ್ಟು, 'ಭಯಂ' ಎಂಬುದು ಪ್ರಥಮಾರ್ಥದಲ್ಲಿ ವ್ಯಾಪಾರವುಳ್ಳದ್ದೆಂದು ತಿಳಿಯಲು ಸಹ ಅವಕಾಶವಿರುತ್ತದೆಂಬುದನ್ನು ಗಮನಿಸ ಬಹುದು (೪೭೪). ಮುಕ್ತನಾಗಲಿರುವ ಜೀವನು ಅಣು ಸ್ವರೂಪನು; ಈತನಿಂದ ವಿಲಕ್ಷಣನಾದ, ನಿತ್ಯಮುಕ್ತನೂ, ವ್ಯಾಪ್ತನೂ ಆದ ಬ್ರಹ್ಮನಿಂದ ಐಕ್ಯವನ್ನು ಹೇಳುವುದು ಉಚಿತವಲ್ಲ; ವಿಲಕ್ಷಣನಾದ ಬ್ರಹ್ಮನಿಂದ ಐಕ್ಯವನ್ನು ಹೇಳುವವನಿಗೆ

---

[1] ಘಟಗರ್ದಭಾದಿಗಳ ಜೊತೆಯಲ್ಲಿರುವ ದೇವದತ್ತನು, ಏಕಾಕಿಯಾಗುವುದಿಲ್ಲ ವಷ್ಟೆ; ಅವುಗಳೂ ಭಯ ಹೇತುಗಳೇ? (ಅಲ್ಲವಷ್ಟೆ).

ತೇ–ನಿನ್ನ (ಮಾಯಾವಾದಿಯ), ದ್ವಿತೀಯಾ–ಮತ್ತೆ ಹೇಳಲ್ಪಟ್ಟ ಆ ಪರಬ್ರಹ್ಮನು, (ತೇ–ನಿನಗೆ), ಭಯಂ–(ಐಕ್ಯ ವಿರೋಧರೂಪದ) ಭಯವನ್ನು, ದದ್ಯಾತ್– ಕೊಡುತ್ತಾನೆ.

**ಸತ್ರೈವಿಧ್ಯಂ ಯದಿಷ್ಟಂ ತೇ ದ್ವಿತೀಯಾದ್ಭೈ ಭಯಂತದಾ ।**
**ಸ್ಯಾದಾದ್ಯಬ್ರಹ್ಮಣೋ ನೋಚೇದ್ವಿತೀಯಾದ್ವಾದಿನೋ ಭಯಂ**
॥ ೪೭೬ ॥

ಯತ್–ಯಾವ ಕಾರಣದಿಂದ, ಸತ್ರೈವಿಧ್ಯಂ–ತ್ರಿವಿಧ ಸಹಿತವಾದ ನಿರೂಪಣೆಯು, ತೇ–ನಿನಗೆ, ಇಷ್ಟಂ–ಅಭಿಮತವಾದುದೋ (ವಿಶ್ವಸತ್ಯತ್ವ ಪ್ರತಿಪಾದಕ ಶ್ರುತಿಯ ವಿರೋಧ ಪರಿಹಾರಕ್ಕಾಗಿ ಇಷ್ಟವಾದುದೋ), ತದಾ–ಆಗ, ದ್ವಿತೀಯಾತ್–ಜಗತ್ತಿನಿಂದ (ವ್ಯಾವಹಾರಿಕ ಸತ್ಯವೆಂದು ಅಂಗೀಕೃತವಾದ ಜಗತ್ತಿನಿಂದ), ಭಯಂ–ಭಯವು (ಸತ್ಯತ್ವ ಶ್ರುತಿಯು ವ್ಯಾವಹಾರಿಕ ಸತ್ಯತ್ವವನ್ನು ಹೇಳುವುದೆಂದರೆ, ಬ್ರಹ್ಮನೂ ವ್ಯಾವಹಾರಿಕನೆಂದು ಪ್ರಾಪ್ತವಾಗಿ ಬ್ರಹ್ಮಾಭಾವದ ಭಯವು) ; ಆದ್ಯ ಬ್ರಹ್ಮಣಃ–ಶುದ್ಧಬ್ರಹ್ಮನ (ಪಾರಮಾರ್ಥಿಕ ಸತ್ಯವೆಂದು ಅಂಗೀಕೃತನಾದ ಬ್ರಹ್ಮನ), ಭಯಂ–ಅಭಾವ ರೂಪದ ಭಯವು, ಸ್ಯಾತ್–ಉಂಟಾಗುತ್ತದೆ ; ನೋ ಚೇತ್–ಹಾಗಲ್ಲದಿದ್ದರೆ (ತ್ರಿವಿಧ ನಿರೂಪಣೆಯು–'ಭಯ' ಪದದ ಮೂರು ಪ್ರಕಾರದ ನಿರೂಪಣೆಯು), ದ್ವಿತೀಯಾತ್ ವಾದಿನಃ–'ವಿಶ್ವಂ ಸತ್ಯಂ' ಇತ್ಯಾದಿ ಶ್ರುತಿಬಲದಿಂದ ಜಗತ್ಸತ್ಯತ್ವವನ್ನು ಹೇಳುವ ವಾದಿಯಿಂದ (ಸಕಾಶಾತ್), ಭಯಂ–(ಪ್ರತ್ಯುತ್ತರದ ಅಭಾವವೆಂಬ) ಭಯವು (ಸ್ಯಾತ್–ಉಂಟಾಗುತ್ತದೆ).

---

ಭಯವು (ಐಕ್ಯವಿರೋಧ ರೂಪದ ಭಯವು), ತಪ್ಪಿದ್ದಲ್ಲವೆಂಬ ಅರ್ಥವೂ ಈ ಶ್ರುತಿಯಿಂದಲೇ ಸಿದ್ಧವಾಗುತ್ತದೆ 'ದ್ವಿತೀಯಾತ್' ಎಂಬುದಕ್ಕೆ 'ಅನೀದೃಶಂ' ಎಂದು ಎರಡನೆಯವನಾಗಿ ಹೇಳಲ್ಪಟ್ಟ ಬ್ರಹ್ಮನಿಂದ, ಎಂಬರ್ಥವನ್ನು ತಿಳಿಯಬೇಕಾಗುವುದು (೪೭೫). ಈ ತ್ರಿವಿಧ ಭಯ ನಿರೂಪಣೆಯಲ್ಲಿ, ನಿನಗೆ, ವಿಶ್ವಸತ್ಯತ್ವ ಪ್ರತಿಪಾದಕ ಶ್ರುತಿ ವಿರೋಧಕ್ಕಾಗಿ (ವಿಶ್ವವು ಮಿಥ್ಯೆ ಎಂಬುದು ಪರನ ಮತವಷ್ಟೆ) ಯಾವುದು ಇಷ್ಟವಾಗುವುದೋ ಅದನ್ನೇ ಗ್ರಹಿಸು ; ಜಗತ್ತು ವ್ಯಾವಹಾರಿಕವೆಂದು ಹೇಳಿದರೆ, ಆಗ ಜಗತ್ತಿನಿಂದಲೇ ಭಯವು ; ಬ್ರಹ್ಮನೂ

**ಇತ್ಥಂ ರಜ್ಜುಭ್ರಮಾತ್ಸರ್ಪಗ್ರಾಹೀ ತ್ವಂ ಹಾ ಹತೋಽಸ್ಯಹೋ ॥ ೪೭೭**

ಇತ್ಥಂ–ಹೀಗೆ, ರಜ್ಜುಭ್ರಮಾತ್–ಹಗ್ಗವೆಂಬ ಭ್ರಮದಿಂದ, ಸರ್ಪಗ್ರಾಹೀ–ಸರ್ಪವನ್ನು ಹಿಡಿದುಕೊಳ್ಳುವನಂತೆ (ಆಪಾತತಃ ನಿನಗೆ ಅಭಿಮತವಾದ ಅರ್ಥವನ್ನು ಹೇಳುವುದೆಂದು ತೋರುವ ಶ್ರುತಿವಾಕ್ಯಗಳನ್ನು ಆಶ್ರಯಿಸಿ–ವಸ್ತುಗತ್ಯಾ ಸರ್ಪದಂತೆ ನಿನಗೆ ವಿರುದ್ಧವಾದ ಅರ್ಥಗಳನ್ನೇ ಹೇಳುವುದರಿಂದ), ತ್ವಂ–ನೀನು, ಹಾ–ಅಯ್ಯೋ!, ಅಹೋ–ಪಾಪ!, ಹತಃ ಅಸಿ–ಮೃತನಾಗಿರುವಿ ; (ಅಭಿಮತವು ಭಗ್ನವಾಯಿತು).

**ದ್ವಿತೀಯಾದ್ದೇಹಗೇಹಾದೇರ್ಭಯಂ ಸ್ಯಾತ್ತೇನ ತಂ ತ್ಯಜೇತ್ ।**
**ಇತ್ಯೇವಾರ್ಥಃ ಶ್ರುತೇರ್ವಾಚ್ಯೋ ಬಂಧೋಚ್ಛಿತ್ತ್ಯೈ ದೃಗರ್ಥಿಭಿಃ ।**
**ಗುರುಮೇವಾಭಿಗಚ್ಛೇದಿತ್ಯಾದಿವಾಕ್ಯಾರ್ಥವೇದಿಭಿಃ ॥ ೪೭೮ ॥**

ದ್ವಿತೀಯಾತ್ – ಎರಡನೆಯದಾದ, ದೇಹಗೇಹಾದೇಃ – ದೇಹಗೇಹಾದಿಗಳಿಂದ (ದ್ವಿತೀಯ ಶಬ್ದಬೋಧ್ಯವಾದ ದೇಹಗೇಹಾದಿಬಂಧಕವಸ್ತುಗಳಿಂದ), ಭಯಂ–ಸಂಸಾರವೆಂಬ ಭಯವು, ಸ್ಯಾತ್–ಉಂಟಾಗುತ್ತದೆ ; ತೇನ–ಆ ಕಾರಣದಿಂದ, ತಂ–ಅವುಗಳನ್ನು, ತ್ಯಜೇತ್–(ಅವುಗಳಲ್ಲಿ ಅಭಿಮಾನವನ್ನು) ಬಿಡಬೇಕು ; ಇತ್ಯೇವಾರ್ಥಃ–ಹೀಗೆಂಬ ಅರ್ಥವೇ, ಶ್ರುತೇಃ–'ದ್ವಿತೀಯಾದ್ವೈ ಭಯಂ ಭವೇತ್' ಎಂಬ ಶ್ರುತಿಗೆ, ವಾಚ್ಯಃ–ಹೇಳತಕ್ಕದ್ದು, ಬಂಧೋಚ್ಛಿತ್ತ್ಯೈ–ಸಂಸಾರಬಂಧದ

---

ವ್ಯಾವಹಾರಿಕ ಸತ್ಯನೆಂದು ಪ್ರಾಪ್ತವಾಗಿ, ಬ್ರಹ್ಮಾಭಾವದ ಭಯವೇ ಉಗ್ರವಾಗಿ ನಿನ್ನನ್ನು ಎದುರಿಸುತ್ತದೆ (ಬ್ರಹ್ಮ ಸತ್ಯಂ ಎಂಬುದಕ್ಕೆ ಧಕ್ಕೆ ಬರುತ್ತದೆ) ; ಜಗತ್ತಿಗೆ ಪಾರಮಾರ್ಥಿಕತ್ವವನ್ನು ಹೇಳುವ ವಾದಿಯಿಂದ ಭಯವಂತೂ ಇದ್ದೇ ಇದೆ (೪೭೬). ಹೀಗೆ, ಹಗ್ಗವೆಂಬ ಭ್ರಮದಿಂದ ಸರ್ಪವನ್ನು ಹಿಡಿದವನಂತೆ, ನಿನಗೆ ಅಭೀಷ್ಟವಾದ ಅರ್ಥವು ಸಿದ್ಧಿಸುವ ಬದಲಾಗಿ, ತದ್ವಿರುದ್ಧವಾಗಿ ನಿನ್ನ ಮತವೇ ಭಗ್ನವಾಯಿತು; ಅಯ್ಯೋ! ಎಂಬ ಪರಿಸ್ಥಿತಿಯನ್ನು ಹೊಂದಿರುವಿ (೪೭೭). 'ಸಮಿತ್ಪಾಣಿಃ ಗುರುಮೇವಾಭಿಗಚ್ಛೇತ್' ಇತ್ಯಾದಿ ವೇದತಾತ್ಪರ್ಯವನ್ನು ತಿಳಿದ ವಿವೇಕಿಗಳಿಂದ, ಈ ಶ್ರುತಿಯಲ್ಲಿರುವ ದ್ವಿತೀಯ ಶಬ್ದದಿಂದ, ದೇಹಗೇಹಾದಿ ಬಂಧಕ ವಸ್ತುಗಳನ್ನು ಗ್ರಹಿಸಿ, ಮೋಕ್ಷಾರ್ಥಿಯು, ಅವುಗಳಿಂದ ಪ್ರಾಪ್ತವಾಗುವ ಬಂಧದ ಭಯ ನಿವೃತ್ತಿಗಾಗಿ, ಅವುಗಳಲ್ಲಿ ಅಭಿಮಾನವನ್ನು ತ್ಯಾಗಮಾಡಬೇಕೆಂಬ ಅರ್ಥವನ್ನೇ ಈ ಶ್ರುತಿಗೆ ತಿಳಿಯಬೇಕಾದುದು ಯೋಗ್ಯವಾಗುತ್ತದೆ (೪೭೮).

ಬಿಡುಗಡೆಗಾಗಿ, ದೃಗರ್ಥಿಭಿಃ—ಅಪರೋಕ್ಷಜ್ಞಾನಾರ್ಥಿಗಳಿಂದ, ಗುರುಮೇವಾಭಿಗಚ್ಛೇತ್–ಗುರುವನ್ನು ಹೊಂದಿ ಸೇವಿಸತಕ್ಕದ್ದು, ಇತ್ಯಾದಿ ವಾಕ್ಯಾರ್ಥವೇದಿಭಿಃ—ವೇದವಾಕ್ಯಗಳ ಅರ್ಥವನ್ನು ತಿಳಿದವರಿಂದ (ವಾಚ್ಯಃ—ಈ ಶ್ರುತ್ಯರ್ಥವು ಹೇಳಲ್ಪಡತಕ್ಕದ್ದು).

**ದ್ವಿತೀಯಾದ್ಬ್ರಹ್ಮವಿಜ್ಞಾನಾದ್ಭಯಂ ಭವತಿ ಸಂಸೃತೇಃ ।**
**ಇತ್ಯರ್ಥೋವಾತ್ರ ತಚ್ಛ್ಲಾಘ್ಯಃ ಸಮಿತ್ಪುಸ್ತಕಪಾಣಿಭಿಃ ॥ ೪೭೯ ॥**

ದ್ವಿತೀಯಾತ್ — ಬಂಧನಾಶಕವೆಂದು ಹೇಳಲ್ಪಡುವ (ಕಾರಣವೆಂಬ ಎರಡನೆಯದಾದ—ಕಾರ್ಯ—ಸಂಸಾರ, ಕಾರಣ—ಬಂಧಛೇದನಕಾರಣ—ಎರಡನೆಯದಾದ), ಬ್ರಹ್ಮವಿಜ್ಞಾನಾತ್—ಬ್ರಹ್ಮನ ಅಪರೋಕ್ಷಜ್ಞಾನದಿಂದ, ಸಂಸೃತೇಃ—ಸಂಸಾರಕ್ಕೆ, ಭಯಂ—ಭಯವು (ತನ್ನ ನಾಶನಿಮಿತ್ತವಾದ ಭಯವು), ಭವತಿ—ಉಂಟಾಗುತ್ತದೆ; ಇತ್ಯರ್ಥಃ ವಾ—ಹೀಗೆಂಬ ಅರ್ಥವಾಗಲಿ, ತತ್—ಆದ್ದರಿಂದ, ಸಮಿತ್ಪುಸ್ತಕಪಾಣಿಭಿಃ—ಸಮಿತ್ತು, ಪುಸ್ತಕಗಳನ್ನು ಕೈಯಲ್ಲಿವುಳ್ಳವರಿಂದ (ಮೋಕ್ಷಸಾಧನೆಗೆ ಇರುವ ಪರಂಪರ ಮತ್ತು ಸಾಕ್ಷಾತ್ಸಾಧನಗಳೆಂಬ ಎರಡರಲ್ಲಿ, ಸಾಕ್ಷಾತ್ಸಾಧನೆಯಲ್ಲಿ ತೊಡಗಿರುವವರಿಂದ), ಅತ್ರ—ಈ ಶ್ರುತಿಯಲ್ಲಿ, ಶ್ಲಾಘ್ಯಃ—ಪ್ರಶಂಸಿಸಲ್ಪಡುತ್ತದೆ.

**ಕಿಂಚಾಬಿಭದಿತಿ ಬ್ರಹ್ಮಭಯಮುಕ್ತ್ವಾ ಪುನಃ ಶ್ರುತಿಃ ।**
**ತೇನೈಕಾಕೀ ಬಿಭೇತೀತಿ ತತ್ರ ಕಾರಣಮಾಹ ಚ ॥ ೪೮೦ ॥**

ಕಿಂಚ—ಮತ್ತೇನೆಂದರೆ, ಅಬಿಭೇತ್ ಇತಿ ಶ್ರುತಿಃ—'ಸೋಬಿಭೇತ್' ಎಂಬ ಶ್ರುತಿಯು, ಬ್ರಹ್ಮಭಯಂ—ಬ್ರಹ್ಮಭಯವನ್ನು (ಚತುರ್ಮುಖನ ಭಯವನ್ನು),[1]

---

ಬಂಧ ಮತ್ತು ಬಂಧನಾಶಕಗಳೆಂಬ ಎರಡರಲ್ಲಿ, ಬಂಧನಾಶಕವಾದ ಬ್ರಹ್ಮನ ಅಪರೋಕ್ಷ ಜ್ಞಾನದಿಂದ, ಸಂಸಾರಕ್ಕೆ (ಬಂಧಕ್ಕೆ) ಭಯವು ತಪ್ಪಿದ್ದಲ್ಲವೆಂಬ ಅರ್ಥವೇ ಪ್ರಶಸ್ತವೆಂದು, ಸಮಿತ್ಪುಸ್ತಕಪಾಣಿಗಳಾದ ಸಾಧಕರು ತಿಳಿಯುತ್ತಾರೆ (೪೭೯). 'ಸೋಬಿಭೇತ್' ಎಂಬ ಶ್ರುತಿಯು ಚತುರ್ಮುಖ ಬ್ರಹ್ಮನ ಭಯವನ್ನು ನಿರೂಪಿಸಿ, ಮುಂದೆ, ಪ್ರಲಯ (ಸಮುದ್ರದಲ್ಲಿ) ಏಕಾಂಗಿಯಾಗಿದ್ದರಿಂದ ಭಯ

---

1 ಚತುರ್ಮುಖ ಬ್ರಹ್ಮನಿಗೂ ಭಯದುಃಖಾದಿ ದೋಷಗಳಿಲ್ಲ; ಪ್ರಲಯ ಜಲದಲ್ಲಿ ಕಮಲದಲ್ಲಿ ಕುಳಿತ ಬ್ರಹ್ಮನು ಭಯಪ್ರದರ್ಶನ ಮಾತ್ರ ಮಾಡಿದನೆಂದು ಬೇರೆ ಪ್ರಮಾಣಗಳಿಂದ ಸಿದ್ಧವಾಗುತ್ತದೆ.

ಉಕ್ತ್ವಾ–ಹೇಳಿ, ಪುನಃ–ಮುಂದೆ, ತೇನ – ಆತನಿಂದ, ಏಕಾಕೀ – ಏಕಾಕಿಯಾದವನು (ಅನ್ಯರಿಲ್ಲವೆಂಬ ಏಕಾಕಿತ್ವಭಯ ಕಾರಣವನ್ನು), ಬಿಭೇತಿ ಇತಿ–ಹೆದರುವವನು ಎಂದು, ತತ್ರ–ಭಯ ವಿಷಯದಲ್ಲಿ, ಕಾರಣಂ–ಕಾರಣವನ್ನು, ಆಹ ಚ–ಹೇಳಿಯೇ ಇದೆ ('ಏಕಾಕೀ ನ ರಮತೇ' ಎಂಬ ಶ್ರುತಿವಾಕ್ಯವೂ ಇದನ್ನು ಸಮರ್ಥಿಸುತ್ತದೆ).

**ತಸ್ಮಾದೇಕಾಕಿತಾಯಾಂ ಚ ಭೀತ್ಯುಕ್ತ್ಯಾ ತಾಂ ಚ ಸಂತ್ಯಜ ।**
**ದ್ವಿತೀಯಮೈಚ್ಛದಿತಿ ಚ ವಚೋ ಹಂತಿ ತವೇಪ್ಸಿತಂ ॥ ೪೮೧ ॥**

ತಸ್ಮಾತ್ – ಆದ್ದರಿಂದ, ಏಕಾಕಿತಾಯಾಂ ಚ – ಏಕಾಂತತ್ವದಲ್ಲಿಯೇ, ಭೀ–ಭಯವು, ಇತ್ಯುಕ್ತ್ಯಾ–ಎಂದು ಹೇಳಿರುವುದರಿಂದ, ತಾಂ ಚ–ಅದನ್ನು (ಏಕಾಕಿತ್ವವನ್ನೇ), ಸಂತ್ಯಜ–ತ್ಯಜಿಸು (ಅದಕ್ಕಾಗಿ ಯತ್ನಿಸಬೇಡ); ದ್ವಿತೀಯಮೈಚ್ಛತ್ – 'ದ್ವಿತೀಯಮೈಚ್ಛತ್' ಎರಡನೆ ವಸ್ತುವನ್ನು ಅಪೇಕ್ಷಿಸಿದನು, ಇತಿವಚಃ ಚ – ಎಂಬ ಮಾತಾದರೂ, ತವೇಪ್ಸಿತಂ – ನಿನಗೆ ಅಭೀಷ್ಟವಾದ ಅದ್ವಿತೀಯತ್ವವನ್ನು, ಹಂತಿ–ನಷ್ಟಗೊಳಿಸುತ್ತದೆ (ಭಂಗಗೊಳಿಸುತ್ತದೆ).

**ಅನುಕೂಲಂ ದ್ವಿತೀಯಂ ತಚ್ಛ್ರುತಿರ್ಶ್ಚ ನ ನಿಷೇಧತಿ ।**
**ರಕ್ಷೋಭೂತಪಿಶಾಚಾದಿ ದ್ವಿತೀಯಂ ಭಯದಂ ಜಗೌ ।**
**ಕಸ್ಮಾನ್ನ್ವಹಂ ಬಿಭೇಮೀತಿ ಭೀಷಕಾಭಾವವಾಙ್ನ ಕಿಂ ॥ ೪೮೨ ॥**

ತತ್–ಆದ್ದರಿಂದ, ಶ್ರುತಿಶ್ಚ–'ದ್ವಿತೀಯಾದ್ವೈ ಭಯಂ' ಎಂಬ ಶ್ರುತಿಯು, ಅನುಕೂಲಂ–(ತನಗೆ) ಅನುಕೂಲವಾದ (ಸಹಾಯಕವಾದ), ದ್ವಿತೀಯಂ –

---

ಪಟ್ಟನೆಂದು, ಭಯಕಾರಣವು ಏಕಾಕಿತ್ವವೆಂದೂ ಹೇಳಲಾಗಿದೆ; (೪೮೦), ಆದ್ದರಿಂದ, ಏಕಾಕಿತ್ವವು ಭಯಕಾರಣವೆಂದು ಹೇಳಿರುವುದರಿಂದ, ಅದ್ವಿತೀಯತ್ವಕ್ಕಾಗಿ ಮಾಡುವ ಯತ್ನವನ್ನು ತ್ಯಜಿಸು; 'ದ್ವಿತೀಯಮೈಚ್ಛತ್' ಎಂಬ ಮುಂದಿನ ವಾಕ್ಯವೂ ನಿನ್ನ (ಏಕಾಕಿತ್ವದ – ಅದ್ವಿತೀಯತ್ವದ) ಆಕಾಂಕ್ಷೆಯನ್ನು ನಷ್ಟಗೊಳಿಸುತ್ತದೆ; ಅಯುಕ್ತವೆಂದು ಸ್ಪಷ್ಟಗೊಳಿಸುತ್ತದೆ (೪೮೧). 'ದ್ವಿತೀಯಾದ್ವೈ ಭಯಂ' ಎಂಬ ಶ್ರುತಿಯು ತನಗೆ ಅನುಕೂಲವಾದ ಎರಡನೆ ವಸ್ತುವನ್ನು ನಿಷೇಧಿಸುವುದಿಲ್ಲ; ಕಿಂತು, ರಾಕ್ಷಸ, ಭೂತ, ಪಿಶಾಚಾದಿ ಭಯಕಾರಣ ವಸ್ತುಗಳನ್ನು ನಿಷೇಧಿಸುತ್ತದೆ; 'ಕಸ್ಮಾನ್ನ್ವಹಂ ಬಿಭೇಮಿ' ಎಂಬ

ಎರಡನೆ ವಸ್ತುವನ್ನು, ನ ನಿಷೇಧತಿ – ನಿಷೇಧಿಸುವುದಿಲ್ಲ; ರಕ್ಷೋಭೂತ ಪಿಶಾಚಾದಿ ದ್ವಿತೀಯಂ–ರಾಕ್ಷಸ, ಭೂತ, ಪಿಶಾಚಾದಿ ಅನ್ಯವಸ್ತುವನ್ನು, ಭಯದಂ – ಭಯಕಾರಣವನ್ನಾಗಿ, ಜಗೌ – ('ದ್ವಿತೀಯಾದ್ವೈ ಭಯಂ' ಎಂಬ ಶ್ರುತಿಯು), ಹೇಳುತ್ತದೆ; ಕಸ್ಮಾನ್ನ್ವಹಂ ಬಿಭೇಮೀತಿ – 'ಕಸ್ಮಾನ್ನ್ವಹಂ ಬಿಭೇಮಿ' ಎಂಬ ಶ್ರುತಿಯು, ಭೀಷಕಾವಾಕ್ ನ ಕಿಂ – ಭಯಕಾರಣವಾದ ರಾಕ್ಷಸಾದ್ಯಭಾವವನ್ನು ಹೇಳುವುದಿಲ್ಲವೇನು? (ಭಯಕಾರಣವಾದ ಅನ್ಯವಸ್ತುವೇ ದ್ವಿತೀಯವು – ಅದರಿಂದಲೇ ಭಯವು – ಅದನ್ನು ಶ್ರುತಿಯು ನಿಷೇಧಿಸುತ್ತದೆ; ಸಹಾಯಭೂತವಾದ ಭಿನ್ನವಸ್ತುವನ್ನಲ್ಲ; ಹಾಗಲ್ಲದಿದ್ದರೆ 'ಸದ್ವಿತೀಯಮೈಚ್ಛತ್' ಎಂಬ ಶ್ರುತಿವಿರೋಧವು ನಿಲ್ಲುತ್ತದೆ; ಮತ್ತು 'ಕಸ್ಮಾನ್ನ್ವಹಂ ಬಿಭೇಮಿ' ಎಂಬುದೂ ಸಹಾಯಭೂತವಾದ ಅನ್ಯವಸ್ತುವಿನಿಂದ ಭಯವಿಲ್ಲವೆಂದೂ ಸೂಚಿತವೇ ಆಗಿದೆ.)

**ಏಕಾಕೀ ಚೇನ್ನ ರಮತೇ ತೇನೈಚ್ಛತ್ಸ ದ್ವಿತೀಯಕಂ।**
**ಇತಿ ವಾಗುಪಸಂಹರ್ತ್ರೀ ಸಂಹರ್ತ್ರೀ ತವ ದುರ್ಧಿಯಃ ॥ ೪೮೩ ॥**

ಸಃ–ಬ್ರಹ್ಮನು, ಏಕಾಕೀ ಚೇತ್–ಏಕಾಕಿಯಾದರೆ, ನ ರಮತೇ–ಸುಖಿಸುವುದಿಲ್ಲ; ತೇನ–ಈ ಕಾರಣದಿಂದ, ದ್ವಿತೀಯಕಂ–ದ್ವಿತೀಯನಾಗಿರುವಿಕೆಯನ್ನು (ಅನ್ಯನಿಂದ ಕೂಡಿರುವಿಕೆಯನ್ನು), ಐಚ್ಛತ್–ಇಚ್ಛಿಸಿದನು; ಇತಿ–ಹೀಗೆಂಬ, ಉಪಸಂಹರ್ತ್ರೀ – ಉಪಸಂಹಾರದ (ಕಡೆಯಲ್ಲಿ ಬರುವ), ವಾಕ್ – ವಾಕ್ಯವು, ತವ–ನಿನ್ನ, ದುರ್ಧಿಯಃ–ದುರ್ಬುದ್ಧಿಯನ್ನು ('ದ್ವಿತೀಯಾದ್ವೈಭಯಂ' ಎಂಬ ಶ್ರುತಿಯ ಅಪವ್ಯಾಖ್ಯಾನದ – ಅದ್ವಿತೀಯತ್ವ ಪ್ರತಿಪಾದಕವೆಂಬ ದುರ್ಬುದ್ಧಿಯನ್ನು), ಸಂಹರ್ತ್ರೀ–ನಷ್ಟಗೊಳಿಸುವುದು (ಆಗುತ್ತದೆ).

---

ಶ್ರುತಿಯು, ಸಹಾಯ ಭೂತವಾದ ಅನ್ಯವಸ್ತುವಿನಿಂದ ಏಕೆ ಭಯವೆಂದು ಭಯಾಭಾವವನ್ನೇ ಹೇಳುತ್ತದೆ; 'ಸ ದ್ವಿತೀಯಮೈಚ್ಛತ್' ಎಂಬ ವಾಕ್ಯದ ವಿರೋಧವೂ ಪರಿಹಾರವಾಗುತ್ತದೆ; ಈ ಅರ್ಥವೇ ಗ್ರಾಹ್ಯವು (೪೮೨). 'ಏಕಾಕೀ ಚೇನ್ನ ರಮತೇ ತೇ ನೈಚ್ಛತ್ಸ ದ್ವಿತೀಯಕಂ' ಎಂಬ ಉಪಸಂಹಾರ ವಾಕ್ಯವು, ಏಕಾಕಿತ್ವದಿಂದ ಸುಖವಿಲ್ಲೆಂದೇ ಎರಡನೇ ವಸ್ತುವನ್ನು ಇಚ್ಛಿಸಿದನೆಂದು, ಹೇಳಿ, ನಿನ್ನ 'ದ್ವಿತೀಯಾದ್ವೈ ಭಯಂ' ಎಂಬ ಶ್ರುತಿಯ ಅಪವ್ಯಾಖ್ಯಾನಕ್ಕೆ ಕಾರಣವಾದ, (ಅದ್ವಿತೀಯತ್ವವನ್ನು ಪ್ರತಿಪಾದಿಸುವುದೆಂಬ) ದುರ್ಬುದ್ಧಿಯನ್ನು

**ಅತಃ ಪ್ರಕರಣಂ ಮಂದ ಹಂತಿ ವಾದರಣಂ ತವ ।**
**ಜಿಹ್ವಾರೂಪಂ ಪ್ರಕೃಷ್ಟಂ ತೇ ಕರಣಂ ವಾ ನಿಹಂತ್ಯಹೋ ।**
**ಭಯಂ ದ್ವಿತೀಯಾದ್ವಚನಾದಿತ್ಯುಕ್ತಂ ಸೂಕ್ತಮೇವ ತತ್ ॥ ೪೬೪ ॥**

ಅತಃ–ಆದ್ದರಿಂದ, ಮಂದ–ಹೇ ಮೂರ್ಖ!, ತವ–ನಿನ್ನ, ವಾದರಣಂ–ವಾದರೂಪದ ಯುದ್ಧವನ್ನು, ಹಂತಿ ಚ–(ನಿನಗೆ ಇಷ್ಟವಾದ ಅರ್ಥವು, ಪ್ರಕರಣ ವಿರುದ್ಧವಾದ್ದರಿಂದ) ಭಂಗಗೊಳಿಸುತ್ತದೆ (ಪ್ರಕರಣ [1] ವಿರುದ್ಧಾರ್ಥ ಸಾಧನೆಗಾಗಿ ಈ ಶ್ರುತಿಯನ್ನು ಅವಲಂಬಿಸಿ ಹೇಗೆ ವಾದವನ್ನು ಮುಂದುವರೆಸುವಿ?); ವಾ–ಅಥವಾ, ತೇ–ನಿನ್ನ, ಜಿಹ್ವಾರೂಪಂ–ಜಿಹ್ವೆಯೆಂಬ (ನಾಲಿಗೆಯೆಂಬ), ಪ್ರಕೃಷ್ಟಂ ಕರಣಂ – ಉತ್ತಮ ಸಾಧನಸಾಮಗ್ರಿಯನ್ನು, ನಿಹಂತಿ – ನಷ್ಟಗೊಳಿಸುತ್ತದೆ (ವಿದ್ವತ್ಸಭೆಯಲ್ಲಿ ಬಾಯಿಬಿಡದಂತೆ ಮಾಡುತ್ತದೆ); ಅಹೋ–ಏನುಗತಿ ನಿನಗೆ!; ದ್ವಿತೀಯಾದ್ವಚನಾತ್–ದ್ವಿತೀಯ ಶಬ್ದದಿಂದ, ಭಯಂ–ಭಯವು, ಇತ್ಯುಕ್ತಂ–ಎಂದು ಹೇಳಲಾದುದು, ತತ್–ಆದ್ದರಿಂದಲೇ, ಸೂಕ್ತಂ ಏವ–(ಭಯ ಕಾರಣವಾದ ಎರಡನೆಯ ವಸ್ತುವೆಂದು) ಹೇಳಿದುದು ಸರಿಯಾಗಿಯೇ ಹೇಳಿದೆ.

**ಸ್ವಾಖಂಡವಾದಖಡ್ಗೇನ ಮೃತಮೃತ್ಯೈ ನ ನೋ ಕೃತಿಃ ।**
**ಸ್ವಯೂಥ್ಯಾನಾಂ ಮನಸ್ತೃಪ್ತ್ಯೈ ಭಕ್ತ್ಯೈ ಮುಕ್ತ್ಯೈ ಚ ಕೇವಲಂ ॥ ೪೬೫**

---

ನಷ್ಟಗೊಳಿಸುತ್ತದೆ (೪೬೩). ಆದ್ದರಿಂದ, 'ದ್ವಿತೀಯಾದ್ವೈ ಭಯಂ' ಎಂಬ ವಾಕ್ಯವಿರುವ ಪ್ರಕರಣವು ನಿನ್ನ ಅಪಾರ್ಥವನ್ನು ವಿರೋಧಿಸುತ್ತದೆ; ನಿನ್ನ ವಾದಯುದ್ಧವನ್ನು ತಡೆಯುತ್ತದೆ; ಉತ್ತಮಕರಣವಾದ ಜಿಹ್ವಾ ರೂಪದ ಇಂದ್ರಿಯವು ವ್ಯರ್ಥವಾಗುತ್ತದೆ; ಪ್ರಕರಣವನ್ನು ಗಮನಿಸಿ, ನಿನ್ನ ದುರರ್ಥವು ವಿದ್ವಜ್ಜನರಿಗೆ ಸರ್ವಥಾ ಹಿಡಿಸುವುದಿಲ್ಲ; ನೀನು ಬಾಯಿ ಮುಚ್ಚಿಕೊಳ್ಳಬೇಕಾಗುತ್ತದೆ ಅಥವಾ ವ್ಯರ್ಥಭಾಷಿಯಾಗುತ್ತೀ; ದ್ವಿತೀಯ ವಸ್ತುವಿನಿಂದ ಭಯವೆಂದು ಶ್ರುತಿಯು ಹೇಳಿರುವುದು, ಈವರೆಗೆ ನಿರೂಪಿಸಿದಂತೆ ಸಾಧುವೇ ಆಗಿರುತ್ತದೆ (೪೬೪). ಸರ್ವವೇದಗಳು ಅಖಂಡಾರ್ಥ ಪ್ರತಿಪಾದಕವೆಂದು (ಬ್ರಹ್ಮಸ್ವರೂಪ ಮಾತ್ರ ಪರವೆಂದು) ಪರನು ಹೇಳುವುದರಿಂದಲೇ, ಐಕ್ಯ, ನಿರ್ಗುಣತ್ವ, ಮಿಥ್ಯಾತ್ವ ಪ್ರತಿಪಾದಕವೆಂಬ ವಾಕ್ಯ ಭಾವಗಳನ್ನು ತ್ಯಜಿಸಿದಂತಾಗಿದೆ; ಆದ್ದರಿಂದ

---

[1] 'ಪ್ರಕರಣ'ವೆಂದರೆ, ಏಕಾರ್ಥಪ್ರತಿಪಾದಕ ಬಹುವಾಕ್ಯಗಳ ಸಮುದಾಯವು—ವಿವರ, ಪುಷ್ಟೀಕರಣವಾಕ್ಯಗಳಿಂದ ಸಹಿತವಾದ ಶಾಸ್ತ್ರಭಾಗ.

**ಸಾಮಾನಾಧಿಕರಣ್ಯಾದ್ವಾ ನಾನಾತ್ವಕ್ಷೇಪತೋಽಪಿ ವಾ ।**
**ಐಕ್ಯಸಿದ್ಧಿಸ್ತ್ವಖಂಡಾರ್ಥವಾದೇನಾಭೂತ್ತನೈವ ಹಿ ॥ ೪೮೬ ॥**
**ಸರ್ವಜ್ಞಾಲ್ಪಜ್ಞಯೋರೈಕ್ಯಂ ನಾಸ್ತ್ಯೇವೇತಿ ತು ಯೋ ವದೇತ್ ।**
**ಐಕ್ಯಸ್ಯ ಬ್ರಹ್ಮರೂಪತ್ವಾದ್ಬ್ರಹ್ಮವಾಗೈಕ್ಯವಾಗಿತಿ ।**
**ಕಥಂ ತಂ ಪ್ರತ್ಯುತ್ತರಂ ಸ್ಯಾನ್ನಿರ್ಮೂಲೋಽಸ್ತಿ ನ ವೈ ತರುಃ ॥೪೮೭॥**
**ಅನ್ಯಥಾ ಶಶಶೃಂಗಸ್ಯ ವಿದೂಷಿತ್ವಾಚ್ಚಿದುಕ್ತಿತಃ ।**
**ಶಶಶೃಂಗಂ ಚ ಸ ಕಥಂ ತ್ವಾಂ ಪ್ರತ್ಯೇವ ನ ಸಾಧಯೇತ್ ॥ ೪೮೮ ॥**
**ಐಕ್ಯಸ್ಯ ಬ್ರಹ್ಮರೂಪತ್ವಂ ಮಾಯಾವಾದೀ ವದೇದಪಿ ।**
**ಪರಂ ಪ್ರತ್ಯೈಕ್ಯಸಿದ್ಧ್ಯರ್ಥಂ ನೈವಮಾಹ ಸುಧೀರ್ಹ್ಯಸೌ ॥ ೪೮೯ ॥**

ಮತ್ತೇನೆಂದರೆ, ಐಕ್ಯ, ನಿರ್ಗುಣತ್ವ, ಮಿಥ್ಯಾತ್ವಗಳನ್ನು ಪ್ರತಿಪಾದಿಸುತ್ತವೆಂದು ಅಭಿಮತವಾದ, ಎಲ್ಲ ವಾಕ್ಯಗಳಿಗೆ, ಬ್ರಹ್ಮಸ್ವರೂಪ ಮಾತ್ರ ಪರವೆಂಬ ಅಖಂಡಾರ್ಥ (ಒಂದೇ) ನಿಷ್ಠ ಪರಗಳೆಂದೂ ಹೇಳಿ, ಪರನೇ (ಮಾಯಾವಾದಿಯೇ), ಐಕ್ಯಾದಿ ಸಕಲಾರ್ಥಗಳನ್ನು ಪ್ರತಿಪಾದಿಸುವುವೆಂಬುದನ್ನು ತ್ಯಜಿಸಿದಂತಾಗಿರುವುದರಿಂದ, ನಾವು ಅದಕ್ಕಾಗಿ ಪ್ರಯತ್ನಿಸುವುದು ಅವಶ್ಯಕವಲ್ಲವೆಂದು ಹೇಳಿ, ಹಾಗಾದರೆ, ಖಂಡನ ಗ್ರಂಥರಚನಾ ಕೃತಿಯು,-ಯಾರ ಪ್ರಯೋಜನಕ್ಕಾಗಿ, ಎಂಬುದನ್ನು ವಿವರಿಸಲು ಹೇಳುತ್ತಾರೆ :—

ಸ್ವಾಖಂಡವಾದ ಖಡ್ಗೇನ – ತನ್ನ ಅಖಂಡವಾದವೆಂಬ ಖಡ್ಗದಿಂದ, ಮೃತಮೃತ್ಯೈ–ಮೃತನ ಮರಣಕ್ಕಾಗಿ (ಮಾಯಾವಾದಿಯ ನಿಗ್ರಹಕ್ಕಾಗಿ), ಮೇ ಕೃತಿಃ–ನನ್ನ ಈ ಗ್ರಂಥರೂಪದ ಕೃತಿಯು, ನ–ಆಗಿರುವುದಿಲ್ಲ; (ಹಾಗಾದರೆ

---

ಮೃತನಾದವನ ಮರಣಕ್ಕಾಗಿ ನಾವು ಈ ಗ್ರಂಥರಚನಾರೂಪ ಕೃತಿಯನ್ನು ಕೈಗೊಂಡಿಲ್ಲ ; ಮತ್ತೇನೆಂದರೆ, ನಮ್ಮ ಗುಂಪಿನ (ಸಜ್ಜನರ)ವರ ಮನಸ್ಸಮಾಧಾನಕ್ಕಾಗಿಯೂ, ಅವರಲ್ಲಿ ಅಧಿಕವಾದ ಭಕ್ತಿಯನ್ನು ಉತ್ಪಾದಿಸಲು, ಮೋಕ್ಷಮಾತ್ರ ಫಲಭಾಗಿಗಳನ್ನಾಗಿ ಮಾಡಲು ಮಾತ್ರ ಈ ಕೃತಿಯಾಗಿದೆ ; ಸಮಾನ ಸಂಶಯಗಳ (ಮಾಯಾವಾದಿ ಸದೃಶ) ಪರಿಹಾರಕ್ಕಾಗಿಯೂ, ಭೇದವನ್ನು (ಜೀವ, ಜಡ, ಈಶರ ಭೇದವನ್ನು) ಆಕ್ಷೇಪಿಸುವವರನ್ನು ಉತ್ತರಿಸಲಿಕ್ಕಾಗಿಯೂ ಈ ಯತ್ನವಾಗಿದೆ; ವೇದಗಳು ಅಖಂಡಾರ್ಥ ನಿಷ್ಠಗಳೆಂಬ ವಾದದಿಂದ ಸಿದ್ಧವಾಗುವುದೆಂಬ

ಯಾರ ಉಪಯೋಗಕ್ಕಾಗಿ ಎಂದರೆ), ಸ್ವಯೂಥ್ಯಾನಾಂ– ನಮ್ಮ ಗುಂಪಿನ ಜನರ, ಮನಸ್ತೃಪ್ತ್ಯೈ–ಮನಸ್ಸಿನ ಸಮಾಧಾನಕ್ಕಾಗಿ, ಭಕ್ತ್ಯೈ–(ಅವರ) ಭಕ್ತಿಗಾಗಿ, ಮತ್ತು ಮುಕ್ತ್ಯೈ ಚ ಕೇವಲಂ–ಮೋಕ್ಷಕ್ಕಾಗಿ ಮಾತ್ರವೇ (ಆಗಿರುತ್ತದೆ); ಸಮಾನಾಧಿಕರಣ್ಯಾತ್ ವಾ–ಸಮಾನ (ಮಾಯಾವಾದಿ ಸದೃಶ) ಸಂಶಯಗಳಿಂದಾಗಲಿ, ನಾನಾತ್ವಕ್ಷೇಪತಃ ಅಪಿ ವಾ–ಭೇದವನ್ನು (ಅವರು) ಆಕ್ಷೇಪಿಸುವುದರಿಂದಾಗಲಿ, ಅಖಂಡಾರ್ಥವಾದೇ–ಅಖಂಡಾರ್ಥ (ಬ್ರಹ್ಮಸ್ವರೂಪ ಮಾತ್ರ ನಿಷ್ಠತ್ವವೆಂಬ) ಅಖಂಡಾರ್ಥವಾದದಲ್ಲಿ, ತವೈವ–ನಿನಗೇ (ಮಾಯಾವಾದಿಗೇ), ಐಕ್ಯಸಿದ್ಧಿಃ–ಜೀವಬ್ರಹ್ಮೈಕ್ಯ ಸಿದ್ಧಿಯು, ನ–ಹಿ–ಆಗುವುದಿಲ್ಲವಾದ್ದರಿಂದಲೂ, ಸರ್ವಜ್ಞಾಲ್ಪಜ್ಞಯೋಃ–ಸರ್ವಜ್ಞ ಅಲ್ಪಜ್ಞರಲ್ಲಿ, ಐಕ್ಯಂ–ಐಕ್ಯವು (ಅತ್ಯಂತಾಭೇದವು) ನಾಸ್ತಿ ಏವ–ಇರುವುದೇ ಇಲ್ಲ, ಇತಿ ತು–ಎಂದೇ, ಯಃ ವದೇತ್–ಯಾರು ಹೇಳುವರೋ, (ಅವರ ದಾರ್ಢ್ಯಾರ್ಥವಾಗಿಯೂ), (ಚ–ಮತ್ತು), ಐಕ್ಯಸ್ಯ–ಐಕ್ಯಕ್ಕೆ, ಬ್ರಹ್ಮರೂಪತ್ವಾತ್–ಬ್ರಹ್ಮಸ್ವರೂಪತ್ವವೇ ಇರುವುದರಿಂದ, ಬ್ರಹ್ಮವಾಕ್–ವೇದವಾಕ್ಯವು (ಎಲ್ಲವೂ), ಐಕ್ಯವಾಕ್ ಇತಿ–ಐಕ್ಯವನ್ನೇ ಹೇಳುತ್ತದೆಂದರೆ, ತಂ ಪ್ರತಿ–ಅತನನ್ನು ಕುರಿತು, ಕಥಂ–ಹೇಗೆ, ಉತ್ತರಂ ಸ್ಯಾತ್–ಉತ್ತರವನ್ನು ಹೇಳತಕ್ಕದ್ದೆಂದೂ ನಿರ್ಮೂಲಃ ಅಸ್ತಿ ನ ವೈ ತರುಃ-(ಮಾಯಾವಾದವೆಂಬ) ವೃಕ್ಷವು,ಬುಡವಿಲ್ಲದ್ದಾಗುವದಿಲ್ಲವೇ (ಎಂಬ ಸಂಶಯವನ್ನು ಸ್ಥಿರಗೊಳಿಸಿ ಅದನ್ನು ನಿರ್ಮೂಲವೆಂದೇ ಸ್ಥಾಪಿಸಲೂ), ಅನ್ಯಥಾ–

---

ಐಕ್ಯವು ನಿನಗೇ (ಪರನಿಗೇ) ಇರಲಿ; ಸರ್ವಜ್ಞತ್ವ, ಅಲ್ಪಜ್ಞತ್ವಾದಿವಿರುದ್ಧ ಬಹು ಧರ್ಮಗಳುಳ್ಳವರಲ್ಲಿ ಐಕ್ಯವು ಎಂದೂ ಶಕ್ಯವಿಲ್ಲೆಂಬ ವಾದವೇ ನಮ್ಮದಾಗಿದೆ; (ನಿನ್ನಂತೆ) ಐಕ್ಯವೂ ಬ್ರಹ್ಮಸ್ವರೂಪವೇ ಆದ್ದರಿಂದ, ಎಲ್ಲ ವೇದವೂ ಐಕ್ಯವನ್ನು ಮಾತ್ರ ಪ್ರತಿಪಾದಿಸುವುದೆಂಬ ವಾದವನ್ನು ಎದುರಿಸಿ ಉತ್ತರವನ್ನು ಹೇಳುವ ಪ್ರಕಾರವನ್ನು ಬೋಧಿಸುವುದೂ ನಮ್ಮ ಉದ್ದೇಶವಾಗಿದೆ; ನಿನ್ನ (ಪರನ) ಐಕ್ಯತ್ವ, ಮಿಥ್ಯಾತ್ವಾದಿವಾದಗಳು ಸಜ್ಜನರನ್ನು ಬಾಧಿಸಲಾರವು; ಅವರು ಸ್ವರೂಪದಿಂದಲೇ ವಿವೇಕಿಗಳಾಗಿರುವರು; ಆದರೂ ನಿನ್ನ ವಾದಗಳಿಗೆ ಮನಸೋಲದಂತೆ ಸ್ಥಿರತೆಯಿಂದಿರಲು ಅವಶ್ಯಕವಾದ ಎಚ್ಚರಿಕೆಯನ್ನೀಯುವುದೂ ಅವಶ್ಯಕವೇ ಆಗಿದೆ; ಜ್ಞಾನವಿಷಯವಾದ್ದರಿಂದ ಜ್ಞಾನಾಕಾರವುಳ್ಳದ್ದೆಂಬ ಶಶವಿಷಾಣಾದಿಗಳಿಗೆ ವಸ್ತುತ್ವವನ್ನು ಸಾಧಿಸಲೂ (ಪರನು) ಯತ್ನಿಸಬಹುದು; ಆದ್ದರಿಂದ

ಹಾಗಲ್ಲದಿದ್ದರೆ, ಚಿದುಕ್ತಿತಃ-ಜ್ಞಾನವಿಷಯುವೆಂದು ಹೇಳುವುದರಿಂದ, ಶಶಶೃಂಗಸ್ಯ-ಶಶವಿಷಾಣಕ್ಕೆ, ಚಿದ್ರೂಪತ್ವಾತ್-ಜ್ಞಾನಾಕಾರವಿರುವುದರಿಂದ, ಸಃ-ಆ ಮಾಯಾವಾದಿಯು, ತ್ವಾಂ ಪ್ರತಿ-ನಿನ್ನನ್ನು (ನಮ್ಮ ಗುಂಪಿನ ಸುಜೀವನನ್ನು) ಕುರಿತು, ಶಶಶೃಂಗಂ-ಶಶವಿಷಾಣವನ್ನು, ಕಥಂ-ಹೇಗೆ, ನ ಸಾಧಯೇತ್-(ವಸ್ತುತ್ವವನ್ನು) ಸಾಧಿಸದಿರುವನು? (ಆದ್ದರಿಂದ ನೀವು ಜಾಗ್ರತರಾಗಿರಬೇಕು, ಎಂದು ಎಚ್ಚರಿಸಲಿಕ್ಕೂ), ಮಾಯಾವಾದೀ-ಮಾಯಾವಾದಿಯು, ಐಕ್ಯಸ್ಯ-ಐಕ್ಯಕ್ಕೆ ಬ್ರಹ್ಮರೂಪತ್ವಂ-ಬ್ರಹ್ಮಸ್ವರೂಪತ್ವವನ್ನು ವದೇತ್ ಅಪಿ-ಹೇಳಿದರೂ, ಪರಂ ಪ್ರತಿ-ತನ್ನ ವಿರೋಧಿ ಎಂಬ ನಿಮ್ಮನ್ನು ಕುರಿತು, ಐಕ್ಯ ಸಿದ್ಧ್ಯರ್ಥಂ-ಜೀವ ಬ್ರಹ್ಮೈಕ್ಯವನ್ನು ಸಾಧಿಸಿಕೊಡಲು, (ಅಥವಾ ತನಗಾಗಿಯೇ ಐಕ್ಯವನ್ನು ಸ್ಥಾಪಿಸಲು), ಏವಂ ನ ಆಹ-ಹೀಗೆ ಹೇಳುವುದಿಲ್ಲ; ಅಸೌ-ಈ ಮಾಯಾವಾದಿಯು, ಸುಧೀಃ ಹಿ-ವೇದ ಜ್ಞಾನಿಯೆಂದು ತನ್ನನ್ನು ಹೇಳಿಕೊಳ್ಳುವನಷ್ಟೆ (ಅಸೌ ಸುಧೀಃ-ಈ ಸಜ್ಜನನು ಸ್ವರೂಪದಿಂದ ವಿವೇಕಿಯು-ಐಕ್ಯವನ್ನು ಅಂಗೀಕರಿಸುವುದಿಲ್ಲವಷ್ಟೆ).

**ಅತಃ ಸರ್ವಗುಣೈರ್ವಿಷ್ಣುರ್ಮುಕ್ತಂ ಕುರ್ಯಾತ್ಕಥಂ ಸಮಂ ।**
**ತತೋಽಪಿ ನೈಕ್ಯಂ ಸಾಮ್ಯಂ ತು ಕಿಂಚಿತ್ಸಾಮ್ಯಮಿತೀರಿತಂ ॥ ೪೯೦ ॥**

ಅತಃ-ಆದ್ದರಿಂದ (ನಿತ್ಯಮುಕ್ತನಾದ ವಿಷ್ಣುವು, ಕದಾಚಿತ್ ಮುಕ್ತನಾಗುವ ಅಲ್ಪಜೀವನಿಗೆ ನಿತ್ಯಮುಕ್ತತ್ವವನ್ನು ಪ್ರದಾನಮಾಡುವುದು ಯತ್ನಶತದಿಂದ, ಶಕ್ಯವೂ ಇಲ್ಲದ್ದರಿಂದ), ಸರ್ವಗುಣೈಃ-(ತನ್ನಂತೆ) ಸರ್ವಗುಣಗಳಿಂದ, ಮುಕ್ತಂ-ಮುಕ್ತಜೀವನನ್ನು, ಕಥಂ - ಹೇಗೆ, ಸಮಂ - ಸಮನನ್ನಾಗಿ, ಕುರ್ಯಾತ್-ಮಾಡುವನು? (ಶಕ್ಯವಿಲ್ಲ), ತತಃ ಅಪಿ - ಆದ್ದರಿಂದ (ಸರ್ವಧರ್ಮಭಾವ, ಅಭಾವಗಳೆಂಬ ವಿರುದ್ಧಸ್ವಭಾವವುಳ್ಳ ವಿಷ್ಣುಜೀವರಲ್ಲಿ), ಐಕ್ಯಂ-ಐಕ್ಯವೆಂಬುದು, ನ-(ಸರ್ವಥಾ) ಇಲ್ಲವೇ ಇಲ್ಲ; ಸಾಮ್ಯಂತು - ಸಾಮ್ಯವಾದರೂ, ಕಿಂಚಿತ್ ಸಾಮ್ಯಂ - ಅಲ್ಪಸಾಮ್ಯವೆಂದು (ಜನನ ಮರಣರಾಹಿತ್ಯ, ದುಃಖರಾಹಿತ್ಯ

---

ಸಜ್ಜನರು ಬಹು ಜಾಗರೂಕರಾಗಿರಬೇಕು; ಐಕ್ಯಕ್ಕೆ ಬ್ರಹ್ಮರೂಪತ್ವವನ್ನು ಹೇಳುವ ಮಾಯಾವಾದಿಯು, ತನಗಾಗಿ ಸಹ ಐಕ್ಯವನ್ನು ಸಾಧಿಸಿಕೊಳ್ಳಲು ಶಕ್ಯವಿಲ್ಲ; ಇನ್ನು ನಿಮ್ಮನ್ನು (ಸಜ್ಜನರನ್ನು) ಅಂಗೀಕರಿಸುವಂತೆ ಮಾಡಲು ಶಕ್ತನಾಗುವನೇ? (ಶಕ್ಯವಿಲ್ಲ) (೪೮೫-೪೮೯). ವಿಷ್ಣುವು ನಿತ್ಯಮುಕ್ತನು, ಜೀವನು ಕದಾಚಿತ್ ಮುಕ್ತನಾಗುವವನು; ವಿಷ್ಣುವು ಸರ್ವಗುಣ ಪೂರ್ಣನು; ನಿತ್ಯಮುಕ್ತನಾದ ತನ್ನಂತೆ ಅಲ್ಪಗುಣವುಳ್ಳ ಜೀವನನ್ನು ಹೇಗೆ ನಿತ್ಯಮುಕ್ತನನ್ನಾಗಿ ಮಾಡುವನು? ಆದ್ದರಿಂದ, ಆತನಿಂದ, ಐಕ್ಯವೂ ಸಾಮ್ಯವೂ ಎಂದಿಗೂ ಇಲ್ಲ;

ಮೊದಲಾದ ಅಲ್ಪಸಮಾನಧರ್ಮಗಳು), ಇತಿ ಈರಿತಂ– ಈ ಹಿಂದೆ (ಸಪ್ರಮಾಣ ವಾಗಿ) ಹೇಳಲಾಯಿತು (ಹಾಗಲ್ಲದಿದ್ದರೆ ಮುಕ್ತಿಯೇ ಇಲ್ಲವೆಂದಾದೀತು–ಶ್ರುತಿ ಯಾದರೋ ಸಾಮ್ಯವನ್ನೂ ಮುಕ್ತಿಯನ್ನೂ ಹೇಳುತ್ತದೆ).

**ಕಿಲಾಮೃತಸ್ಯೈಷ ಸೇತುರ್ಮುಕ್ತಾನಾಂ ಪರಮಾ ಗತಿಃ ।**
**ಸೋಽಮೃತಸ್ಯಾಭಯಸ್ಯೇಶಃ ಕೃಷ್ಣೋ ಮುಕ್ತೈಃ ಕಿಲೇಜ್ಯತೇ ॥ ೪೯೧**
**ಇತಿ ಶ್ರುತಿಪುರಾಣಾನಿ ಸೇತಿಹಾಸಾನಿ ಸರ್ವತಃ ।**
**ಗರ್ಜಂತ್ಯನ್ಯೇ ಮಹಿತ್ವಂ ತೇ ನಾಶ್ನುವಂತೀತಿ ಹಿ ಶ್ರುತಿಃ ।**
**ಅಪ್ಯರ್ವಾಗ್ವೃತ್ತಯೋ ಯಸ್ಯ ಮಹಿತ್ವೇ ಸ್ವಭುವಾದಯಃ ॥೪೯೨॥**

ಪುನಃ ಮುಕ್ತಿಯಲ್ಲಿ ಭೇದಪ್ರತಿಪಾದಕ ಶ್ರುತಿಸ್ಮೃತಿಗಳನ್ನು ತೋರಿಸುತ್ತಾರೆ :

ಅಮೃತಸ್ಯ ಏಷ ಸೇತುಃ – 'ಅಮೃತಸ್ಯೈಷ ಸೇತುಃ' ಎಂಬ ಶ್ರುತಿಯು, ಮುಕ್ತವರ್ಗದ ಆಧಾರನು (ಆಶ್ರಯನು–ಅವಧಿಯು) ಎಂದೂ, ಮುಕ್ತಾನಾಂ ಪರಮಾಗತಿಃ–ಮುಕ್ತರಿಗೆ ಸರ್ವವಿಧದಿಂದ ಗತಿಯು('ಮುಕ್ತಾನಾಂಪರಮಾಗತಿಃ'– ಎಂಬುದು ಭಾರತಾಂತರ್ಗತ ವಿಷ್ಣುಸಹಸ್ರನಾಮದ ವಾಕ್ಯವು) ; ಸೋಽಮೃತ-ಸ್ಯಾಭಯಸ್ಯೇಶಃ–'ಅಮೃತಸ್ಯೇಶಾನಃ'–ಇತ್ಯಾದಿ ಶ್ರುತಿಯು, ಮುಕ್ತವರ್ಗದವರ ಸ್ವಾಮಿಯು ಸರ್ವಅಭಯಪ್ರದನು (ಸರ್ವಭಯಪರಿಹಾರಕನು, ಸಮೀಪಿಸಿದಂತೆ ನಿರೋಧಿಸುವವನು), ಕಿಲ – ಈ ಶ್ರುತಿಸ್ಮೃತಿಗಳು ಪ್ರಸಿದ್ಧವಷ್ಟೆ ; ಕೃಷ್ಣಃ– ಶ್ರೀಕೃಷ್ಣನು, ಮುಕ್ತೈಃ–ಮುಕ್ತರಿಂದ, ಇಜ್ಯತೇ ಕಿಲ–ಪೂಜಿಸಲ್ಪಡುವನೆಂಬುದೂ ಪ್ರಸಿದ್ಧ ಸ್ಮೃತಿವಾಕ್ಯವೇ ಆಗಿದೆ (ಮುಕ್ತಿಯಲ್ಲಿಯೂ ಶ್ರೀಕೃಷ್ಣರೂಪವಿರುತ್ತ ದೆಂದೂ ತಿಳಿದುಬರುತ್ತದೆ) ; ಇತಿ – ಹೀಗೆಂದು, ಶ್ರುತಿಸ್ಮೃತಿ ಪುರಾಣಾನಿ

---

ಸಾಮ್ಯವನ್ನಾದರೂ ಮುಕ್ತಜೀವನಿಗೆ ಶ್ರುತಿಯು ಹೇಳುತ್ತದೆ; ಜನನ ಮರಣ ರಾಹಿತ್ಯಾದಿ ಅಲ್ಪ ಸಾಮ್ಯವನ್ನು ಈ ಕಾರಣದಿಂದ ತಿಳಿಯತಕ್ಕದ್ದು (೪೯೦).

'ಅಮೃತಸ್ಯೈಷ ಸೇತುಃ' (ಮುಕ್ತವರ್ಗದ) ಸೇತುವಾಗಿರುವನು, ಈ ವಿಷ್ಣುವು; 'ಮುಕ್ತಾನಾಂ ಪರಮಾ ಗತಿಃ'–ಮುಕ್ತರಿಗೆ ಶ್ರೇಷ್ಠಗತಿಯು, 'ಸೋಽಮೃತಸ್ಯಾ-ಭಯಸ್ಯೇಶಃ'–ಸಂಸಾರದಿಂದ ಪೂರ್ಣ ಮುಕ್ತರಾದ ಮುಕ್ತರಿಗೆ ಸ್ವಾಮಿಯು– ನಿಯಾಮಕನೂ ಆಗಿರುವನು ; ಶ್ರೀಕೃಷ್ಣಮೂರ್ತಿಯು ಮುಕ್ತರಿಂದಲೂ ಪೂಜಿತ ನಾಗಿರುವನು ; ಹೀಗೆಂದು ಭಾರತ ರಾಮಾಯಣಗಳಿಂದ ಸಹಿತವಾದ, ಶ್ರುತಿ ಪುರಾಣಾದಿಗಳು, ಎಲ್ಲಿ ನೋಡಿದರೂ ಗರ್ಜಿಸುತ್ತವೆ ; 'ನ ತೇ ಮಹಿತ್ವಮನ್ವಶ್ನು-ವಂತಿ' ಎಂದು–ನಿನ್ನ ಮಹಿಮೆಯಂತೆ ಮಹಿಮೆವುಳ್ಳವರು ಯಾರೂ ಇಲ್ಲವೆಂದು ಪ್ರಸಿದ್ಧ ಶ್ರುತಿಯು ಸಾರುತ್ತದೆ; ಬ್ರಹ್ಮಾದಿ ದೇವತೆಗಳೂ ಶ್ರೀವಿಷ್ಣುವಿನಿಂದ

ಸೇತಿಹಾಸಾನಿ–ಇತಿಹಾಸ (ಭಾರತ, ರಾಮಾಯಣ) ಸಹಿತವಾದ ಶ್ರುತಿಸ್ಮೃತಿ ಪುರಾಣಾದಿಗಳು, ಗರ್ಜಂತಿ–ಘೋಷಿಸುತ್ತವೆ ; ಸರ್ವತಃ–ಎಲ್ಲಿಯೂ (ಎಲ್ಲೆಲ್ಲಿ ನೋಡಿದರೂ), ಅನ್ಯೇ–ಬೇರೆಯವರು ಯಾರೂ, ತೇ–ನಿನ್ನ, ಮಹಿತ್ವಂ–ಮಹಾತ್ಮ್ಯಯನ್ನು, ನ ಅಶ್ನುವಂತಿ–ಹೊಂದುವುದಿಲ್ಲ (ಪೂರ್ಣಗುಣಾನುಭವವು ನಿನ್ನ ಹೊರತು ಬೇರೆ ಯಾರಿಗೂ ಇಲ್ಲ), ಇತಿ ಹಿ ಶ್ರುತಿಃ–('ನ ತೇ ಮಹಿತ್ವಂ ಅನ್ವಶ್ನುವಂತಿ' ಎಂಬ ಶ್ರುತಿಯು) ಎಂದು ಸಾರುತ್ತದಷ್ಟೆ ; ಸ್ವಯಂಭವಾದಯಃ ಅಪಿ–ಬ್ರಹ್ಮಾದಿ ದೇವತೆಗಳೂ ಸಹ, ಮಹಿತ್ವೇ–ಮಹಿಮೆಗಳ ವಿಷಯದಲ್ಲಿ, ಯಸ್ಯ–ಭಗವಂತನ, ಅರ್ವಾಗ್ವೃತ್ತಯಃ–ಕೆಳಗಿರುವವರಾಗಿರುವರು.

**ಬ್ರಹ್ಮೇಶಾನಾದಿಭಿರ್ದೇವೈರ್ಯತ್ಪ್ರಾಪ್ತುಂ ನೈವ ಶಕ್ಯತೇ ।**
**ತದ್ಯತ್ಸ್ವಭಾವಃ ಕೈವಲ್ಯಂ ಸ ಭವಾನ್ ಕೇವಲೋ ಹರಿಃ ॥ ೪೯ ॥**

ಬ್ರಹ್ಮೇಶಾನಾದಿಭಿಃ – ಬ್ರಹ್ಮರುದ್ರಾದಿ, ದೇವೈಃ – ದೇವತೆಗಳಿಂದ, ಯತ್ಪ್ರಾಪ್ತುಂ–ಯಾವುದನ್ನು ಹೊಂದಲು, ನೈವ ಶಕ್ಯತೇ–ಎಂದೂ ಶಕ್ಯವಲ್ಲವೋ, ತತ್–(ಆದ್ದರಿಂದ), ತತ್ಸ್ವಭಾವಃ–ಆ ವಿಧದ (ಅನಾದ್ಯನಂತಕಾಲದಿಂದ ಜಗದ್ಭಿನ್ನ–ಜರಾದಿರಹಿತನಿತ್ಯ ನಿರ್ವಿಕಾರ ಸ್ವರೂಪನೂ ನಿತ್ಯಮುಕ್ತನೂ ಆದ) ಸ್ವಭಾವವುಳ್ಳ, ಸಃ ಭವಾನ್–ಆ ನೀನು, ಕೇವಲಃ–('ಕೇವಲೋ ನಿರ್ಗುಣಶ್ಚ' ಎಂಬ ಶ್ರುತಿಯು ಹೇಳುವಂತೆ) ಕೇವಲ ಶಬ್ದವಾಚ್ಯನೂ (ಅಮಿಶ್ರನೂ ಶುದ್ಧನೂ), ಹರಿಃ–ಶ್ರೀಹರಿಯು (ಆಗಿರುತ್ತೀ).

**ಇತಿ ಭಾಗವತೋಕ್ತ್ಯಾ ಚ ಬ್ರಹ್ಮಾದ್ಯೈರ್ನೈವ ಲಭ್ಯತೇ ।**
**ಯಸ್ಯ ಸ್ವಭಾವಃ ತದ್ಭಾವಂ ಮರ್ತ್ಯಃ ಕೋ ಗಂತುಮರ್ಹತಿ ॥೫೦॥**

ಇತಿ–ಹೀಗೆಂಬ (ಹಿಂದಿನ ಶ್ಲೋಕದಲ್ಲಿ ಹೇಳಿದ), ಭಾಗವತೋಕ್ತ್ಯಾ–ಭಾಗವತ ವಾಕ್ಯದಿಂದ, ಯಸ್ಯ–ಯಾರ (ಭಗವಂತನ), ಸ್ವಭಾವಃ–ಸ್ವಭಾವವು,

---

ಅವರರೇ (ಕೆಳಗಿನವರೇ) ಆಗಿರುವರು (೪೧–೪೭). ನಿನ್ನ ಸ್ವಭಾವವು, (ಸ್ವಭಾವ ಸಿದ್ಧ ಮಹಿಮೆಗಳು) ಬ್ರಹ್ಮರುದ್ರಾದಿ ದೇವತೆಗಳಿಂದಲೂ ಎಂದಿಗೂ ಹೊಂದಲಾಗದುದು ; 'ಕೇವಲೋ ನಿರ್ಗುಣಶ್ಚ' ಎಂಬ ಶ್ರುತ್ಯುಕ್ತ ಕೇವಲ ನಾಮವುಳ್ಳ (ಕೇವಲ ಶಬ್ದವಾಚ್ಯನು) ವನು ನೀನಾಗಿರುತ್ತೀ (೪೯). ಹೀಗೆ ಹೇಳುವ ಭಾಗವತ ವಾಕ್ಯದಿಂದ ಭಗವಂತನ ಸ್ವಭಾವವನ್ನು (ಸ್ವರೂಪ ಮಹಿಮೆಯನ್ನು) ಬ್ರಹ್ಮಾದಿ ದೇವತೆಗಳಾರೂ ಎಂದೂ ಹೊಂದಲಾರರು ; ಈ ಸ್ವಭಾವದ ಭಗವಂತನ ಐಕ್ಯವನ್ನು ಯಾವ ಮನುಷ್ಯನು (ಸಂಸಾರದಲ್ಲಿದ್ದು ಕದಾಚಿತ್ ಆತನ ಅನುಗ್ರಹದಿಂದಲೇ ಮುಕ್ತನಾಗುವ ಯಾವ ಜೀವನು) ಹೊಂದಲು

ಬ್ರಹ್ಮಾದ್ಯೈಃ–ಬ್ರಹ್ಮಾದಿಗಳಿಂದ, ನೈವ ಲಭ್ಯತೇ–ಹೊಂದಲಾಗುವುದಿಲ್ಲವೋ, ತದ್ಭಾವಂ–ಆತನ ಐಕ್ಯವನ್ನು ಕಃ ಮರ್ತ್ಯಃ–ಯಾವ ಮನುಷ್ಯನು (ಸಂಸಾರ ದಲ್ಲಿದ್ದು, ಕಾಲ ವಿಶೇಷದಲ್ಲಿ ಆತನ ಪ್ರಸಾದದಿಂದಲೇ ಮುಕ್ತನಾಗುವ ಜೀವನು), ಗಂತುಂ–ಹೊಂದಲು ಅರ್ಹತಿ–ಯೋಗ್ಯನಾಗುತ್ತಾನೆ? (ಶಕ್ಯವಿಲ್ಲ).

**ಗಿರೋ ನಿರವಕಾಶಾಯಾಃ ಸಾವಕಾಶಾ ಹಿ ಕಿಂಕರೀ ।**
**ಅತಸ್ತದಧ್ವನೈವಾಸೌ ಗಚ್ಛೇನ್ನ ತು ಕದಧ್ವನಾ ॥ ೪೯೫ ॥**

ನಿರವಕಾಶಾಯಾಃ–ನಿರವಕಾಶವಾದ, (ಅನ್ಯಾರ್ಥಕ್ಕೆ ಅವಕಾಶವಿಲ್ಲದ), ಗಿರಃ–ಶ್ರುತಿವಾಕ್ಯಕ್ಕೆ, ಸಾವಕಾಶಾ– ಸಾವಕಾಶ ವಾಕ್ಯವು, ಹಿ–ಯಾವ ಕಾರಣದಿಂದ, ಕಿಂಕರೀ–ಅಧೀನವೋ ಅತಃ–ಆದ್ದರಿಂದ, ಅಸೌ–'ಏಕೀಭವಂತಿ' ಇತ್ಯಾದಿ ಸಾವಕಾಶವಾಕ್ಯವು, ತದಧ್ವನೈವ–ನಿರವಕಾಶ ಶ್ರುತಿಯ ಮಾರ್ಗ ದಿಂದಲೇ ಗಚ್ಛೇತ್–ಹೋಗುತ್ತದೆ (ಸಾವಕಾಶ ಶ್ರುತಿಯು ಅನುಸರಿಸುತ್ತದೆ); ಕದಧ್ವನಾ–ಕೀಳುಮಾರ್ಗದಿಂದ, ನತು–ಅಲ್ಲವೇ ಅಲ್ಲ.

**ತಸ್ಮಾತ್ಸರ್ವೇಶ್ವರೋ ವಿಷ್ಣುರ್ಭೂತಭವ್ಯಭವತ್ಪ್ರಭುಃ ।**
**ಮುಕ್ತಾಮುಕ್ತಜಗನ್ನಾಥೋ ಭಕ್ತ್ಯಾರಾಧ್ಯ ಇತಿ ಸ್ಥಿತಂ ॥ ೪೯೬ ॥**

ತಸ್ಮಾತ್–ಆದ್ದರಿಂದ, ವಿಷ್ಣುಃ–ಶ್ರೀ ಮಹಾವಿಷ್ಣುವು, ಸರ್ವೇಶ್ವರಃ–ಸರ್ವ ಸ್ವಾಮಿಯು, ಮುಕ್ತಾಮುಕ್ತ ಜಗನ್ನಾಥಃ–ಮುಕ್ತಾಮುಕ್ತ ವಿಶ್ವದ ನಾಥನು (ಸ್ವಾಮಿಯು); ಭೂತಭವ್ಯ ಭವತ್ಪ್ರಭುಃ–ತ್ರಿಕಾಲಗಳಲ್ಲಿಯೂ ಆತನೇ ಪ್ರಭುವು (ಭೂತ, ಭವಿಷ್ಯ, ವರ್ತಮಾನ ಕಾಲಗಳಲ್ಲಿ ಸಹ ಆತನೇ ಸ್ವಾಮಿಯು); ಭಕ್ತ್ಯಾ–ಭಕ್ತಿಯಿಂದ, ಆರಾಧ್ಯಃ–ಸೇವಿಸಲ್ಪಡಲರ್ಹನು; ಇತಿ ಸ್ಥಿತಂ–ಎಂದು ಸಿದ್ಧವು (ನಿಶ್ಚಯವು).

---

ಅರ್ಹನಾಗುತ್ತಾನೆ? (ಎಂದೂ ಶಕ್ಯವಿಲ್ಲ) (೪೯೪). ನಿರವಕಾಶವಾದ (ನಿಶ್ಚಿತಾರ್ಥವುಳ್ಳ–ಅರ್ಥಾಂತರಕ್ಕೆ ಅವಕಾಶವಿಲ್ಲದ) ಶ್ರುತಿವಾಕ್ಯದ ಅಧೀನವು–ಕಿಂಕರಿಯು (ಸಾವಕಾಶ ವಾಕ್ಯಗಳು), ಸಾವಕಾಶ ವಾಕ್ಯವು, ಆದ್ದರಿಂದ ನಿರವಕಾಶ ಶ್ರುತಿ ಮಾರ್ಗವನ್ನೇ ಅನುಸರಿಸುತ್ತವೆ; ಅನ್ಯಮಾರ್ಗ (ಹೀನ ಮಾರ್ಗದಿಂದ) ಪ್ರವೃತ್ತಿಸುವುದಿಲ್ಲ (೪೯೫). ಶ್ರೀಹರಿಯು ಸರ್ವೇಶ್ವರನು, ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿಯೂ ಸರ್ವೇಶ್ವರನು, ಮುಕ್ತಾನಾಂ ಪರಮಾ ಗತಿಃ–ಎಂದು ವಿಷ್ಣುಸಹಸ್ರನಾಮದಲ್ಲಿ ಹೇಳಿದಂತೆ ಸರ್ವಮುಕ್ತರಿಗೆ ಆತನೇ ಉತ್ತಮ ಗತಿಯು; ಆದ್ದರಿಂದ ಆತನೇ ಭಕ್ತಿಯಿಂದ ಆರಾಧ್ಯನೆಂದು ಸಿದ್ಧವು (೪೯೬).

**ಯಾ ಧಾತ್ರಾದಿಜಗದ್ಧಾತ್ರೀ ಖ್ಯಾತಾ ತೈರ್ವಂದಿತಾರ್ಚಿತಾ ।**
**ಮುಕ್ತಾಮುಕ್ತಜಗನ್ಮಾತಾ ಸಾ ಶ್ರೀರ್ಮಂಗಲದೇವತಾ ॥ ೪೯೭ ॥**

ಈ ಗ್ರಂಥಕ್ಕೆ ಶ್ರೀಕರತ್ವವನ್ನು ಸಾಧಿಸಲು ಸಕಲ ವಾಙ್ಮನಸ ದೇವತೆಯಾದ ಲಕ್ಷ್ಮೀದೇವಿಯನ್ನು, ಉಪಸಂಹಾರದಲ್ಲಿ, ಸ್ತುತಿಸಿ ಐಕ್ಯವಾದಿಯು ಮಾತೃಗಾಮೀ ಆಗುವನೆಂದು ಯುಕ್ತಿಯಿಂದಲೂ ದೂಷಿಸುತ್ತಾರೆ:—

ಧಾತ್ರಾದಿ ಜಗದ್ಧಾತ್ರೀ—ಬ್ರಹ್ಮಾದಿ ಜಗತ್ತಿನ ಮಾತೆಯೆಂದು (ಧಾರಣ ಪೋಷಣಕರ್ತಳೆಂದು), ಯಾ—ಯಾವ, ಶ್ರೀಃ—ಲಕ್ಷ್ಮೀದೇವಿಯು, ಖ್ಯಾತಾ—ಪ್ರಸಿದ್ಧಳೋ, ತೈಃ – ಬ್ರಹ್ಮಾದಿಗಳಿಂದ, ವಂದಿತಾ – ವಂದಿಸಲ್ಪಡುವವಳೂ, ಅರ್ಚಿತಾ – ಪೂಜಿಸಲ್ಪಡುವವಳೂ, ಆಗಿರುವ, ಮುಕ್ತಾಮುಕ್ತಜಗನ್ಮಾತಾ – ಮುಕ್ತ, ಅಮುಕ್ತ ಜಗತ್ತಿನ ತಾಯಿಯೋ, ಸಾ—ಆಕೆಯೇ, ಮಂಗಲ ದೇವತಾ—ಮಂಗಲದೇವತೆಯು (ಗ್ರಂಥವು ಪರಮಮಂಗಲಕರವೆಂದು ಸೂಚಿಸಲು 'ಮಂಗಲ ದೇವತಾ' ಎಂದು ಪದಪ್ರಯೋಗ ಮಾಡಲಾಗಿದೆ).

**ಜಯತಿ ಶ್ರೀರಮಾಕಾಂತೋ ಜಯತಿ ಶ್ರೀಶ್ಚ ತತ್ಪ್ರಿಯಾ ।**
**ಶ್ರೀಶ್ರೀಶಭಕ್ತೋ ಜಯತಿ ಮಧ್ವೋ ವಿಧ್ವಸ್ತಸಾಧ್ವಸಃ ॥ ೪೯೮ ॥**

ಈ ಮುಂದೆ ಶ್ರೀಮಧ್ವರ ಕಥೆಯನ್ನು ನಿರೂಪಣ ಮಾಡಲು ಪ್ರಸ್ತಾಪವನ್ನು ಕಲ್ಪಿಸುತ್ತಾರೆ :—

ಶ್ರೀರಮಾಕಾಂತಃ – ಶ್ರೀನಾರಾಯಣನು, ಜಯತಿ – ಉತ್ಕೃಷ್ಟನಾಗಿ ವಿರಾಜಿಸುತ್ತಾನೆ ; ತತ್ಪ್ರಿಯಾ—ಆತನ ಪತ್ನಿಯಾದ, ಶ್ರೀಶ್ಚ—ಲಕ್ಷ್ಮೀದೇವಿಯೂ, ಜಯತಿ—ಪ್ರಕಾಶಿಸುತ್ತಾಳೆ ; ಶ್ರೀಶ್ರೀಶಭಕ್ತಃ—ರಮಾನಾರಾಯಣರ ಭಕ್ತರಾದ, ಮಧ್ವಃ – ಶ್ರೀಮಧ್ವರೂ, ಜಯತಿ – ವಿರಾಜಿಸುತ್ತಾರೆ ; ವಿಧ್ವಸ್ತಸಾಧ್ವಸಃ – (ಅವರೇ) ಭಯಶ್ರಮಾದಿರಹಿತರು.

---

ಬ್ರಹ್ಮಾದಿ ಜಗತ್ತಿನ ಮಾತೆಯಾದ, ಆ ಎಲ್ಲರಿಂದ ವಂದ್ಯಳೂ ಪೂಜ್ಯಳೂ ಆದ ಶ್ರೀ ಲಕ್ಷ್ಮೀದೇವಿಯು, ಮುಕ್ತಾಮುಕ್ತ ಜಗತ್ತಿನ ಮಾತೆಯೂ ಸರ್ವವಿಧದಿಂದ ರಕ್ಷಕಳೂ ಆಗಿರುವಳು ; ಆ ಪ್ರಸಿದ್ಧ ದೇವಿಯೇ ಪರಮಮಂಗಲ ದೇವತೆಯು (೪೯೭). ಶ್ರೀ ರಮಾಕಾಂತನಾದ ನಾರಾಯಣನು ಉತ್ಕೃಷ್ಟನಾಗಿ ವಿರಾಜಿಸುತ್ತಾನೆ ; ಆತನ ಭಾರ್ಯಳಾದ ಶ್ರೀದೇವಿಯೂ (ಜಯತಿ) ವಿರಾಜಿಸುತ್ತಾಳೆ ; ರಮಾ ನಾರಾಯಣರ ಮುಖ್ಯ ಭಕ್ತನಾದ ಶ್ರೀಮಧ್ವದೇವನೂ ಮಂಗಲ ಮೂರ್ತಿಯಾಗಿ ಶೋಭಿಸುತ್ತಾನೆ—ಶ್ರೀಮಧ್ವರೇ ಸಕಲ ಭಯಶ್ರಮಾದಿ ರಹಿತರು—ಅನ್ಯರಲ್ಲ (೪೯೮).

**ಷಷ್ಠೇಽಷ್ಟಕೇಽಂತಿಮಾಧ್ಯಾಯದ್ವಯಮಾರಭ್ಯ ಸಪ್ತಮೇ ।**
**ಪವಮಾನಃ ಪೂಯಮಾನಃ ಸೋಮಶ್ಚೋಕ್ತಃ ಪದೇಪದೇ ॥೪೯॥**

**ಅರ್ಥ**—ಷಷ್ಠೇಽಷ್ಟಕೇ–ಋಗ್ವೇದದ ಷಷ್ಠಾಷ್ಟಕದಲ್ಲಿ (ಅಷ್ಟಾಧ್ಯಾಯಗಳುಳ್ಳದ್ದರಲ್ಲಿ ಒಂದು ಭಾಗವು ಷಷ್ಠಾಷ್ಟಕವೆಂದು ಕರೆಯಲ್ಪಡುತ್ತದೆ); ಅಂತಿಮಾಧ್ಯಾಯದ್ವಯಂ ಆರಭ್ಯ–ಕಡೆಯ ಎರಡು ಅಧ್ಯಾಯಗಳನ್ನು ಆರಂಭಿಸಿ, ಸಪ್ತಮೇ–(ಸಪ್ತಮಾಷ್ಟಕದಲ್ಲಿ ಐದು ಅಧ್ಯಾಯಗಳು ಸೇರಿ ಆದ್ಯಂತಗಳಲ್ಲಿ ಸ್ವಲ್ಪ ಕಡಿಮೆ) ಏಳು ಅಧ್ಯಾಯಗಳಲ್ಲಿ, ಪೂಯಮಾನಃ–ಪವಿತ್ರೀಕರಣ ಸಮರ್ಥನಾದ, ಸೋಮಶ್ಚ–ಸೋಮನಾಮಕನೂ ಆದ, ಪವಮಾನಃ–ವಾಯುದೇವನು,[1] ಪದೇ ಪದೇ–ಪ್ರತಿಪದದಲ್ಲಿಯೂ, ಉಕ್ತಃ–ಹೇಳಲ್ಪಟ್ಟಿರುವನು.

---

**ತಾತ್ಪರ್ಯ :**—ಋಗ್ವೇದದ ಷಷ್ಠಾಷ್ಟಕದಲ್ಲಿ ಕಡೆಯ ಎರಡು ಅಧ್ಯಾಯಗಳಿಂದ ಆರಂಭಿಸಿ, ಸಪ್ತಮಾಷ್ಟಕದ ಐದು ಅಧ್ಯಾಯಗಳೂ ಸೇರಿ ಏಳು ಅಧ್ಯಾಯಗಳಲ್ಲಿ, ಪ್ರತಿಪದವೂ, ಪವಿತ್ರೀಕರಣ ಶಕ್ತನಾದ, ಸೋಮನಾಮಕ ಪವಮಾನನ (ವಾಯುದೇವನ) ಮಹಿಮೆಯು ಉಕ್ತವಾಗಿದೆ (೪೯).

1 'ವಾಯುರ್ಬಹಿಶ್ಚ್ಯುಚಿಃಶ್ರೇಷ್ಠಃ' ಎಂಬ ಸ್ಮೃತಿಯು ಬಾಹ್ಯದಲ್ಲಿ ಸಹ ಶುದ್ಧವಾದ ವಸ್ತುಗಳಲ್ಲಿ ವಾಯುವು ಶ್ರೇಷ್ಠನೆಂದು ಹೇಳುತ್ತದೆ; ಈ ಕಾರಣದಿಂದಲೇ 'ಪಾಂಸವೋಽಸ್ಮಾನ್ ಪುನಂತು' ಎಂಬ ಪ್ರಾರ್ಥನೆಯಿದೆ; ವಾಯುದೇವನು ಸೋಮನಾಮಕನು; ಜಾಗ್ರತ್ ಸ್ವಪ್ನಸುಷುಪ್ತಿಗಳೆಂಬ ಎಲ್ಲ ಅವಸ್ಥೆಗಳಲ್ಲಿ ದೇಹಿಗಳ ದೇಹದಲ್ಲಿ ಶ್ವಾಸರೂಪದಿಂದ ಇರುವುದರಿಂದ 'ಸೋಮ' ನೆನಿಸುವನು; 'ಷುಪ್ರಸವೈಶ್ವರ್ಯಯೋಃ' ಎಂಬ ಧಾತುವಿನಿಂದ, 'ಸು' ಎಂಬ ಧಾತುವು, ಪ್ರಸವ ಮತ್ತು ಐಶ್ವರ್ಯಗಳನ್ನು ಹೇಳುತ್ತದೆ; ಜಗತ್ಪ್ರಸವಿತನೂ, ಐಶ್ವರ್ಯವಂತನೂ ಆದ್ದರಿಂದ 'ಸೋಮ'ನು, 'ಮ' ಪ್ರತ್ಯಯದ ಪ್ರಭಾವದಿಂದ 'ಸೋಮ' ಶಬ್ದದ ನಿರುಕ್ತಿಯು ಮಾಡಲ್ಪಡುತ್ತದೆ; ಆದ್ದರಿಂದಲೇ 'ಪಿತರ ಕುಲಗುರೋ', 'ಪೀಠೇ ರತ್ನೋಪಕ್ಲೃಪ್ತೇ ರುಚಿರರುಚಿಮಣಿಜ್ಯೋತಿಷಾ ಸನ್ನಿಷಣ್ಣಂ' ಎಂಬ ವಚನಗಳೂ ವಾಯುದೇವನಲ್ಲಿ ಯುಕ್ತವಾಗುತ್ತವೆ; ವಾಯುದೇವನು, ಜಗತ್ತನ್ನು ಐದು ಭೇದಗಳುಳ್ಳದ್ದೆಂದು ಸ್ಥಾಪಿಸಿದನೆಂದೂ 'ವೇವಿಜಾನಃ' ಎಂಬ ಪದದಿಂದ ನಿರೂಪಿಸಲ್ಪಟ್ಟಿದೆ; ವಿಜೇಃ (ವಿಜೃ) ಎಂಬುದು ಈ ಧಾತುವಿನಿಂದ ನಿಷ್ಪನ್ನವಾದ ಪದವಾಗಿದೆ; ಈ ಧಾತುವು ಭೇದಭಾವದ ಅತಿಶಯವನ್ನು ಹೇಳುತ್ತದೆ; ಆದ್ದರಿಂದ ಈ ಅರ್ಥವು.

**ಸ ಮಧ್ವ ಇತಿ ತತ್ರೈವ ಪವಮಾನಸ್ಯ ಮಧ್ವತಾ ।**
**ಯತ್ಸ್ಪಷ್ಟಂ ಶ್ರೂಯತೇ ತಸ್ಮಾನ್ಮಧ್ವಾಖ್ಯಾ ಮಾರುತೀ ತನುಃ ॥ ೫೦೦ ॥**

**ವೇವಿಜಾನಃ ಪೃಥಕ್ಕುರ್ವನ್ ಸ ಮಧ್ವಃ ಪಂಚಧಾ ಜಗತ್ ।**
**ಪೃಥಗ್ಭಾವಾತಿಶಯವಾಗ್ವಿಜೇರೂಪಮಿದಂ ಯತಃ ॥ ೫೦೧ ॥**

ತತ್ರೈವ–ಅಲ್ಲಿಯೇ (ಆ ಋಗ್ವೇದಭಾಗದಲ್ಲಿ), ಸ ಮಧ್ವ ಇತಿ–'ಸ ಮಧ್ವ' ಎಂಬುದರಿಂದ ಆರಂಭವಾಗುವ ಎರಡು ಋಕ್ಕುಗಳಲ್ಲಿ[1] ಪವಮಾನಸ್ಯ–ವಾಯು ದೇವನ, ಮಧ್ವತಾ–ಮಧ್ವತ್ವವು (ಮಧ್ವರೂಪವೂ ವಾಯುದೇವನದೇ ಎಂಬುದು),

---

'ಸಮಧ್ವ ಇತಿ' ಎಂದು ಆರಂಭವಾಗುವ ವೇದಮಂತ್ರದಲ್ಲಿ ಪವಮಾನನು, ಮಧ್ವ ನಾಮಕ (ಅವತಾರವುಳ್ಳವ)ನೆಂದೂ (ಮಂತ್ರದಲ್ಲಿಯೇ) ಹೇಳಲಾಗಿದೆ; ಹೀಗೆ ಸ್ಪಷ್ಟವಾದ ನಿರೂಪಣೆಯು, ಮಧ್ವನಾಮಕ ರೂಪವು ವಾಯುದೇವನ ರೂಪ ವೆಂದು ಸಿದ್ಧವಾಗುತ್ತದೆ; ಆ ರೂಪವು (ಮಧ್ವರೂಪವು) ಸ್ಪಷ್ಟವಾಗಿದೆ (ಹಿಂದಿನ ಶ್ಲೋಕದ ಅಡಿಟಿಪ್ಪಣಿಯಲ್ಲಿ, ಋಗ್ವೇದದ ಋಕ್ಕು (ಮಂತ್ರ)ಗಳೂ,

---

[1] ಆ ಎರಡು ಋಕ್ಕುಗಳು ಹೀಗಿವೆ:—'ಸ ಪೂರ್ವ್ಯಃ ಪವತೇ ಯಂ ದಿವಸ್ಪರಿ ಶ್ಯೇನೋ ಮಥಾಯದಿಷಿತಸ್ತಿರೋ ರಜಃ । ಸ ಮಧ್ವ ಆಯುವತೇ ವೇವಿಜಾನಃ ಇತ್ಕೃಶಾನೋರಸ್ತು ಮನಸಾ ಹ ಬಿಭ್ಯುಷಾ । ತೇ ನಃ ಪೂರ್ವಾಸ ಉಪರಾಸ ಇಂದವೋ ಮಹೇವಾಜಾಯ ಧನ್ವಂತು'ಗೋಮತೇ । ಈಕ್ಷೇಣ್ಯಾಸೋ ಅಹ್ಯೋಽನಚಾರವೋ ಬ್ರಹ್ಮ ಬ್ರಹ್ಮಯೇ ಜುಜುಷು ಹವಿರ್ಹವಿರಿತಿ॥' ಇವುಗಳ ಅಭಿಪ್ರಾಯ ಸೂಚಕವಾದ ಕ್ಲಿಷ್ಟಪದ ವಿವರಣೆಯು ಈ ಕೆಳಗೆ ಕಂಡಂತೆ ಇದೆ:—

ಪೂರ್ವ್ಯಃ–ಸರ್ವಜೀವರ ಮೊದಲಿಗನು (ಜ್ಯೇಷ್ಠನು) ('ನಾಯಕಾಯ್ರೈರಿಹಾದ್ಯ'– ವಾಯುಸ್ತುತಿ); ಆ ವಾಯುದೇವನು; ಪವತೇ ಶ್ವಾಸರೂಪದಿಂದ ಸರ್ವಜೀವರನ್ನು ಪವಿತ್ರೀಕರಿಸುವವನು, ಯಂ – ಯಾವ ಪವನಕರ್ತನನ್ನು (ದಿವಸ್ಪರಿ – ವೈಕುಂಠದ ಸುತ್ತಲೂ) ಇರುವನೆಂದು (ಆನಂದಾನ್ಮಂದಮಂದಾ ದದತಿ–ವಾ. ಸ್ತು.), ಶ್ಯೇನಃ–ಯಾರ ನಿರವಧಿಕಾನಂದ ಸ್ವರೂಪನಾದ 'ಶೀ' ಪದವಾಚ್ಯನಾದ ನಾರಾಯಣನೇ ಎಲ್ಲ ವಿಧದಿಂದಲೂ ಪ್ರಭುವಾಗಿ ಉಳ್ಳ ವಾಯುದೇವನು (ತ್ರಾತಾ ಯಸ್ಯ ತ್ರಿಧಾಮಾ–ವಾ. ಸ್ತು.), ಇಷಿತಃ– ಸಜ್ಜನೇಷ್ಟನು (ಭ್ರಾತರಿಷ್ಟೇತಿ–ವಾ. ಸ್ತು.), ತಿರೋರಜಃ–ರಜಸ್ತಮೋ ಗುಣರೂಪದ ದುರ್ಭಾಷ್ಯಗಳನ್ನು ತಿರಸ್ಕರಿಸಿ (ದುರ್ಭಾಷ್ಯಂ ವ್ಯಸ್ಯದಸ್ಯೋಃ–ವಾ. ಸ್ತು.), ಮಥಾಯತ್– ವಿಚಾರರೂಪ ಮಥನವನ್ನು ಮಾಡಿದನು (ಅಸುಕುರಮಕರೋತ್ ಬ್ರಹ್ಮಸೂತ್ರಸ್ಯ

ಯತ್ – ಯಾವ ಕಾರಣದಿಂದ, ಸ್ಪಷ್ಟಂ–ಸ್ಪಷ್ಟವಾಗಿ, ಶ್ರೂಯತೇ – ಕೇಳಿ ಬರುತ್ತದೆಯೋ(ಪ್ರತಿಪಾದಿಸಲ್ಪಟ್ಟಿದೆಯೋ), ತಸ್ಮಾತ್–ಆದ್ದರಿಂದ, ಮಧ್ವಾಖ್ಯಾ–ಮಧ್ವನಾಮವುಳ್ಳದ್ದು, ಮಾರುತೀ ತನುಃ–ವಾಯುಸಂಬಂಧವಾದ (ವಾಯುವಿನ ಅವತಾರವೇ) ರೂಪವೇ (ಆಗಿದೆ); ಸ ಮಧ್ವಃ– ಆ ಮಧ್ವರು, ಜಗತ್–ಜಗತ್ತನ್ನು, ಪಂಚಧಾ–ಐದು ಪ್ರಕಾರವಾಗಿ, ಪೃಥಕ್‌ಕುರ್ವನ್–ವಿಭಾಗಿಸುವರಾಗಿ, ವೇವಿಜಾನಃ–ಅತಿಶಯವಾಗಿ ಭೇದವನ್ನು ಸ್ಥಾಪಿಸಿದವರು ('ವಿಜ್ರೃ–ಪೃಥಗ್ಭಾವೇ' ಎಂಬ ಧಾತುವಿನಿಂದ) (ಆದರು); ಯತಃ–ಯಾವ ಕಾರಣದಿಂದ (ಏಕೆಂದರೆ), ಇದಂ–'ವೇವಿಜಾನಃ' ಎಂಬ ಪದವು, ಪೃಥಗ್ಭಾವಾತಿಶಯ–ವಾಗ್ವಿಜೇಃ – ಭೇದಭಾವವನ್ನು ಅತಿಶಯವಾಗಿ ಹೇಳುವ, 'ವಿಜೇಃ' ಎಂಬ ಧಾತುವಿನಿಂದ ನಿಷ್ಪನ್ನವಾದ, ರೂಪಂ–ರೂಪವುಳ್ಳದ್ದಾಗಿದೆ.

**ಮಿಶ್ರೋಽಮಿಶ್ರಶ್ಚ ಭವತಿ ಸದಾ ಸುಜನದುರ್ಜನೈಃ ।**
**ಯುಮಿಶ್ರಣಾಮಿಶ್ರಣಯೋರಿತಿ ಧಾತ್ವರ್ಥತಾ ದ್ವಯೋಃ ।**
**ಸಖ್ಯಂ ನಾವೈಷ್ಣವೈರ್ಯಸ್ಯ ಪ್ರತೀಪೋ ನೈವ ವೈಷ್ಣವೇ ॥ ೫೦೨ ॥**

(ಯತಃ–ಯಾವ ಕಾರಣದಿಂದ), ಸುಜನದುರ್ಜನೈಃ–ಸಜ್ಜನ ದುರ್ಜನರಿಂದ, ಸದಾ–ಯಾವಾಗಲೂ, ಮಿಶ್ರೋಽಮಿಶ್ರಶ್ಚ–(ಕ್ರಮವಾಗಿ) ಅನುಗ್ರಾಹಕ

---

ಕ್ಲಿಷ್ಟ ಪದಗಳ ಅರ್ಥವಿವರಣೆಯನ್ನು ಕೊಡಲಾಗಿದೆ) (೫೦೦–೫೦೧). 'ಯು ಮಿಶ್ರಣಾಮಿಶ್ರಣಯೋಃ' ಎಂಬ ಧಾತ್ವರ್ಥದಿಂದ, 'ಯು' ಧಾತುವಿಗೆ, ಎರಡರ್ಥ

---

ಭಾಷ್ಯಂ – ವಾ. ಸ್ತು.), ಸಃ – ಮಧ್ವಃ–ಆ ಸಚ್ಛಾಸ್ತ್ರಕರ್ತರಾದ ಮಧ್ವನಾಮಕ, ಆ ವಾಯುದೇವನು ಆಯುವತೇ–ಸಜ್ಜನರಲ್ಲಿ ಮಿಶ್ರನಾಗಿದ್ದು ಅವರನ್ನು ಆನಂದಗೊಳಿಸುವ (ಸಜ್ಜನಾನ್ ಮೋದಯಂತಿ–ವಾ. ಸ್ತು), (ದುರ್ಜನರಲ್ಲಿ ಅಮಿಶ್ರಿತನೂ ಆಗಿರುವನು) (ಪ್ರಮುದರ ಸುಧಿಯಾಂ ಮೋಹಕ ದ್ವೇಷಭಾಜಾಂ–ವಾ. ಸ್ತು.), (ಯು ಮಿಶ್ರಣಾ–ಮಿಶ್ರಣಯೋರಿತಿ ಧಾತೋಃ) (ಯುತ–ಎಂಬುದಕ್ಕೆ ಬದಲಾಗಿ ಯುವತ ಇತಿ ಬಹುವಚನಂ ಸಕಲ ಸಜ್ಜನರ ಹೃದಯದಲ್ಲಿರುವ ರೂಪಬಾಹುಲ್ಯದಿಂದ); ಇತ್–ಈ ಮಧ್ವರೂಪವುಳ್ಳದ್ದೇ ; ಕೃಶಾನೋಃ–ಅಗ್ನಿಯ (ಪ್ರಲಯಾಗ್ನಿಯ–ಜಲಾವರಣದ ಮೇಲಿನ ತೇಜೋ ಆವರಣದ – ಅಗ್ನಿಯನ್ನು ಸಂಹರಿಸುವ ರೂಪವುಳ್ಳ ವಾಯುದೇವನು, ಬಿಭ್ಯುಷಾ – ಭಯಂಕರವಾದ ರೂಪವುಳ್ಳವನು (ದಂಷ್ಟ್ರ ಮೊದಲಾದ ಕರಾಳರೂಪವುಳ್ಳ ಬಹುರೂಪ

*

ನಾಗಿ ಸೇರಿಕೊಂಡಿರುವವನೂ, ಸೇರದವನೂ, ಭವತಿ – (ವಾಯುದೇವನು) ಆಗಿರುವನೋ, 'ಯು' ಮಿಶ್ರಣಾಮಿಶ್ರಣಯೋಃ ಇತಿ – ಮಿಶ್ರಣ ಮತ್ತು ಅಮಿಶ್ರಣಗಳೆಂಬ, ಧಾತ್ವರ್ಥತಾದ್ವಯೋಃ–ಧಾತುವಿನ ಎರಡರ್ಥಗಳಿರುವುದರಿಂದ (ಯಾವ ಕಾರಣದಿಂದ, ವಿಭಕ್ತಿ ಪ್ರತ್ಯಯಾದಿಗಳ ವ್ಯತ್ಯಾಸವು ವೇದದಲ್ಲಿರುತ್ತದೆಂಬ ನಿಯಮವೂ ಇರುವುದೋ, ಆ ಕಾರಣದಿಂದ), (ಹೀಗೆಯೇ, ಮಂತ್ರದಲ್ಲಿ

---

ಗಳಿವೆ; ಆದ್ದರಿಂದ ಪವಮಾನನು (ಮುಖ್ಯವಾಯುವು) ಸದಾ ಸಜ್ಜನರಿಂದ ಮಿಶ್ರನಾಗಿ (ಅವರ ಹೃದಯದಲ್ಲಿದ್ದು), ದುರ್ಜನರೊಂದಿಗೆ ಮಿಶ್ರನಾಗದೇ (ಅನುಗ್ರಾಹಕನಾಗಿ ಅವರಲ್ಲಿರದೇ) ಇರುವನೆಂಬ ಎರಡು ರೂಪಗಳು ಸೂಚಿತ

---

ಗಳುಳ್ಳವನು) (ಯೇನ ಭ್ರೂವಿಭ್ರಮುಸ್ತೇ ಇತ್ಯಾದಿ) ; ನಃ–ನಮ್ಮಗಳಿಗೆ, ಪೂರ್ವಾಸಃ–ಉಪದೇಶಕವೂ ಪರಪ್ರೇರಕವೂ ಆದ ಹಿಂದಿನಿಂದ ಇರುವ, ಇಂದವಃ–ಇಷ್ಟದಾನಶೀಲಗಳಾದ ವಾಯುದೇವನ ಅವತಾರರೂಪಗಳು ; ಉಪರಾಸಃ–ಮೋಕ್ಷೋಪಯೋಗಿಯಾದ ಸಂಹಾರಕರ್ತನೂ, ಜ್ಞಾನೋದಯದ (ಅಪರೋಕ್ಷಜ್ಞಾನದ) ನಂತರವೂ ಅನುಗ್ರಾಹಕತ್ವೇನ ಇರುವ ವಾಯುದೇವನ ರೂಪಗಳು ; (ತತ್ವಜ್ಞಾನ್ ಮುಕ್ತಿಭಾಜಃ ಸುಖಯಸಿ ಹಿ ಗುರೋ ಇತ್ಯಾದಿ) ; ಗೋಮತೇ–ಜ್ಞಾನವಂತನಾದ (ಸರ್ವಜ್ಞನಾದ), ಮಹೇ – ಪೂಜ್ಯನಾದ, ವಾಜಾಯ – ಅನ್ನಕ್ಕಾಗಿ, ಹೋತೃಗಳ ಮತ್ತು ಸಚ್ಛಾಸ್ತ್ರ ವ್ಯಾಖ್ಯಾತೃಗಳ ಅನ್ನಕ್ಕಾಗಿ, ಧನ್ವಂತು–ಧನಪ್ರದಾನಮಾಡುವನಾಗಲಿ (ಧನಧಾನ್ಯ ಇತಿ ಧಾತೋಃ) (ಭೂರಿ ಮೇ ಭೂತಿಹೇತುಃ–ಎಂಬುದು ಇದೇ ಅರ್ಥವನ್ನು ವಿವರಿಸುತ್ತದೆ) ; ಅಹೋಃನ–ಸರ್ಪಸಂಬಂಧಿಗಳಾದ–ನಾಗಫಣಗಳಲ್ಲಿ ದೊರೆಯುವ, ರತ್ನಗಳಂತೆ (ನ–ಇವ), ಈಕ್ಷೇಣ್ಯಾಸಃ–ಈ ಅವತಾರಗಳು ಈಕ್ಷಣೀಯಗಳಾಗಿವೆ (ಭೂಮಿ ಭೂಷಾಮಣಿಃ ಇತ್ಯಾದಿ), ಚಾರವಃ–ಅಗಣ್ಯ ಲಾವಣ್ಯ ಯುಕ್ತ ಮನೋಹರರೂಪಗಳು ; (ಸಂದ್ರಷ್ಟೄೀ ಸುಂದರಂ ಇತ್ಯಾದಿ) ; ಯೇ ಬ್ರಹ್ಮಬ್ರಹ್ಮ–ಬ್ರಹ್ಮಾದಿ ಪ್ರತಿಯೊಬ್ಬ ದೇವತೆಗಳ ದೇಹದಲ್ಲಿರುವ (ಅಂತರ್ಯಾಮಿಯಾಗಿರುವ) ಪರಮಾತ್ಮನನ್ನು (ಯುಗಯುಗಗಳಲ್ಲಿ ಅವತರಿಸುವ ರಾಮಕೃಷ್ಣಾದಿರೂಪಗಳನ್ನು), ಜುಜುಷುಃ–ಸೇವಿಸುತ್ತವೆ; (ಜುಷೀಪ್ರೀತಿಸೇವನಯೋರಿತಿ ಧಾತೋಃ) (ಜುಷ್ಟಂ ಮಾತರಿಶ್ವಾ ಜಗಾಮ–ಆಸೇವ್ಯೋದ್ಧಯಾದ್ರಃ-ಯಾಭ್ಯಾಂ ಶುಶ್ರೂಷುಃ ಇತ್ಯಾದಿ) ; ಹವಿರ್ಹವಿ – ಪ್ರತಿಯಜ್ಞದಲ್ಲಿ ವೈದಿಕರಿಂದ 'ವಾಯುವೇ ಸ್ವಾಹಾ' ಎಂದು ಅರ್ಪಿಸುವ ಹವಿಸ್ಸನ್ನು ಸ್ವೀಕರಿಸುವ ; ವೇವಿಜಾನಃ–ವಿಶೇಷವಾಗಿ (ಅತಿಶಯವಾಗಿ) ಭೇದಕ್ಕೆ ಪಾರಮಾರ್ಥಿಕವನ್ನು ಸಾಧಿಸಿ ಪಂಚಭೇದ ತಾರತಮ್ಯಗಳನ್ನು ಸಾಧಿಸಿದ ಶ್ರೀ ವಾಯುದೇವನು ; ಇತ್ಯಾದಿ ಬಹ್ವರ್ಥಗಳುಳ್ಳ ಶ್ರೀ ವಾಯುದೇವನ ಮಹಿಮಾ ಪ್ರತಿಪಾದಕ ವೇದವಾಕ್ಯಗಳಾಗಿವೆ.

'ಆಯುವತೇ' ಎಂಬ ಬಹುವಚನ ಪ್ರಯೋಗವೂ ಯುಕ್ತವಾಗುತ್ತದೆ); ಸಖ್ಯಂ– ಸಖ್ಯವು (ಪ್ರೀತಿಯು), ಅವೈಷ್ಣವೈಃ–ವಿಷ್ಣುಭಕ್ತರಲ್ಲದವರಿಂದ ಕೂಡಿ, ನ– ಇರುವುದಿಲ್ಲ; ಯಸ್ಯ–ಪವಮಾನನಿಗೆ, ವೈಷ್ಣವೇ–ವಿಷ್ಣುಭಕ್ತನಲ್ಲಿ, ಪ್ರತೀಪಃ ನೈವ–ವಿರೋಧವೂ (ವೈರವೇ) ಇರುವುದಿಲ್ಲ.

**ಇತ್ಥಂ ಕೃಶಾನೋರಸನಶೀಲೋಽಸ್ತು ಪ್ರಲಯೇ ಸತಿ ।**
**ಮನಸಾಭೀಷಕೇಣೋಗ್ರೋಽವಾಯಾವಾಯುವತೇ ಸಹ ।**
**ಸತ್ಯರ್ಥೇಽಬಹುತ್ವೈಕಸ್ಯೈವಾಸ್ತಿ ಯದ್ವ್ಯತ್ಯಯಸ್ತತಃ ॥ ೫೦೩ ॥**

ಇತ್ಥಂ – ಹೀಗೆ, ಪ್ರಲಯೇ ಸತಿ – ಮಹಾಪ್ರಲಯವಾಗುತ್ತಿರಲು, ಕೃಶಾನೋಃ – (ಬಹಿರಾವರಣದ ತೇಜಸ್ಸಿನ) ಅಗ್ನಿಯ, ಅಸನಶೀಲಃ – ಗ್ರಾಸ ಮಾಡುವ (ಲಯಗೊಳಿಸುವ) ಸ್ವಭಾವದವನೂ (ವಾಯುದೇವನು), ಅಸ್ತು– ಇರಲಿ (ಉಗ್ರರೂಪವುಳ್ಳ ಸಂಹಾರಕನೂ) ಆಗಿರುವನು; ಮನಸಾ ಸಹ–ಸರ್ವ ಜೀವರ ಹೃದಯದಲ್ಲಿ ವಿವಿಧ ರೂಪಗಳಿಂದ ಇದ್ದು, ಭೀಷಕೇಣ–ಭಯಂಕರವಾದ, ಉಗ್ರಃ–ಉಗ್ರ (ದಂಷ್ಟ್ರಾಕರಾಲಾದಿ) ರೂಪಗಳುಳ್ಳವನೂ ಆದ ಆಯುವತೇ– (ಸಜ್ಜನರಲ್ಲಿದ್ದು ಆನಂದಗೊಳಿಸುವ ಸೌಮ್ಯರೂಪಗಳುಳ್ಳವನೂ), (ವಾಯು ದೇವನಿಗೆ), (ಪ್ರಾರ್ಥನೆಯು) (ವ್ಯಾಪಾರ ಮಾಡುತ್ತಿರುವನು); ಅರ್ಥೇ ಸತಿ–

---

ವಾಗಿವೆ; ಅವೈಷ್ಣವರಲ್ಲಿ ಪ್ರೀತಿಯಾಗಲಿ (ವಿಷ್ಣುಭಕ್ತಿರಹಿತರಲ್ಲಿ ಸ್ನೇಹ ವಿರುವುದಿಲ್ಲ), ವೈಷ್ಣವರಲ್ಲಿ ವಿರೋಧವೂ ಇರುವುದಿಲ್ಲವೆಂದೂ ಇದರಿಂದ ಸಿದ್ಧ ವಾಗುತ್ತದೆ (೫೦೨). ಬ್ರಹ್ಮಾಂಡದ ಪ್ರಲಯವಾಗುತ್ತಿರಲು, ಬ್ರಹ್ಮಾಂಡದ ಬಹಿರಾವರಣಗಳಲ್ಲಿ ಒಂದಾದ ತೈಜಸಾವರಣವನ್ನು, (ಜಲಾವರಣದ ನಂತರ, ಮೇಲೆ ತೇಜೋ ಆವರಣ, ಅದರ ಮೇಲೆ ವಾಯುವಿನ ಆವರಣ) ಲಯಗೊಳಿಸುವ (ಮುಖ್ಯ) ವಾಯುದೇವನು, ಭಯಂಕರವಾದ ಉಗ್ರ ರೂಪವುಳ್ಳವನಾಗಿರುವನು; ಉಗ್ರರೂಪದಿಂದ ಸಂಹಾರಕನಾದ ಈ ವಾಯುದೇವನೇ ದುರ್ಜನರ ಮನಸ್ಸಿನಲ್ಲಿದ್ದು ನಿಗ್ರಹ ಮಾಡುತ್ತಿರುವನು; ಆತನೇ ಸಜ್ಜನರ ಮನಸ್ಸಿನಲ್ಲಿ ಸೌಮ್ಯ ರೂಪದಿಂದಿರುತ್ತಾ ಅನುಗ್ರಹಮಾಡುತ್ತಿರುವನು; ಕಾರ್ಯಾರ್ಥವಾಗಿ, ತದನು ಸಾರವಾದ ಭಿನ್ನರೂಪಗಳಿಂದ ಸರ್ವತ್ರ ಇರುವ ಬಹುರೂಪಿಯಾದ ವಾಯು ದೇವನಿಗೆ ಈ ಪ್ರಾರ್ಥನೆಯೆಂದು ಶ್ರುತಿಯು ಹೇಳುತ್ತದೆ; ಈ ಕಾರಣದಿಂದಲೇ

ಕಾರ್ಯವು (ಪ್ರಯೋಜನವು) ಇರುತ್ತಿರಲು, ಯತ್–ಯಾವ ಕಾರಣದಿಂದ, ಏಕಸ್ಯ ಏವ–ಒಬ್ಬ (ವಾಯುದೇವ) ನಿಗೇ, ಬಹುತಾ–ಬಹುತ್ವವು (ಬಹುರೂಪಗಳಿಂದಿರುವಿಕೆಯು), ಅಸ್ತಿ–ಇರುತ್ತದೆಯೋ (ಯುಕ್ತವಾಗುತ್ತದೆಯೋ), ತತಃ–ಆದ್ದರಿಂದ, ವ್ಯತ್ಯಯಃ–(ಆಯುವತೇ–ಬಹುರೂಪಗಳಿಂದ ಸಕಲಜೀವ ಹೃದಯದಲ್ಲಿರುವವರು ಶ್ರೀಮಧ್ವರು) ಎಂಬ ಬಹುವಚನ ಪ್ರಯೋಗವು (ವಾಯುದೇವನು ಒಬ್ಬನಾಗಿದ್ದು ಏಕವಚನ ಪ್ರಯೋಗವಾಗಬೇಕಾಗಿದ್ದರೂ) ಯುಕ್ತವಾಗುತ್ತದೆ.

**ತೇ ವಾಯೋರವತಾರಾ ನಃ ಪೂರ್ವಾಸೋ ಗುರುತಾಂ ಗತಾಃ ।**
**ಉಪರಾಸೋಽಪರಾಸಶ್ಚ ಪ್ರಲಯೇ ಮುಕ್ತಿದಾಯಕಾಃ ॥ ೫೦೪ ॥**

ತೇ–(ಹೀಗೆ ವೇದಪ್ರಸಿದ್ಧಗಳಾದ) ಆ, ವಾಯೋಃ–ವಾಯುದೇವನ, ಅವತಾರಾಃ – ರೂಪವಿಶೇಷಗಳೇ, ನಃ – ನಮಗೆ (ಸುಜನರಿಗೆ), ಪೂರ್ವಾಸಃ–ಹಿಂದಿನಿಂದ (ಅನಾದಿಯಿಂದಲೂ) ಇದ್ದ, ಗುರುತಾಂ–ಗುರುತ್ವವನ್ನು, ಗತಾಃ–ಹೊಂದಿವೆ (ಗೋಮತೇ – ಎಂಬ ಋಕ್ಕಿನ ಶಬ್ದಾರ್ಥದ ವಿವರಣೆಯಿದು); ಉಪರಾಸಃ – (ಮೋಕ್ಷೋಪಯೋಗಿಯಾದ ಸಂಹಾರಕರ್ತನು – ಲಿಂಗದೇಹ ಭಂಗವನ್ನು ಕಡೆಯ ದೇಹತ್ಯಾಗಕ್ಕೆ ಕಾರಣನು), ಅಪರಾಸಶ್ಚ – ಆತನೇ (ವಾಯುದೇವನೇ) ಅಪರಾಸನೂ ಆಗಿರುವನು (ಉಪರಾಸಶಬ್ದದ ತಾತ್ಪರ್ಯವನ್ನೇ ಅಪರಾಸಶಬ್ದವೂ ನಿರೂಪಿಸುತ್ತದೆ) (ಮೋಕ್ಷಪ್ರದನೂ ಆಗಿರುವನು); ಪ್ರಲಯೇ–ಮಹಾಪ್ರಲಯ (ಬ್ರಹ್ಮಪ್ರಲಯವು) ಸಂಭವಿಸುತ್ತಿರಲು, ಮುಕ್ತಿ-ದಾಯಕಾಃ–ಮೋಕ್ಷಪ್ರದರೂಪಗಳೂ ಇವೇ ಆಗಿರುತ್ತವೆ.[1]

---

ಮುಖ್ಯ ವಾಯುದೇವನು ಒಬ್ಬನೇ ಆದರೂ 'ಆಯುವತೇ' ಎಂಬ ಬಹುವಚನದಿಂದ ಹೇಳಲ್ಪಡುವುದು ಯುಕ್ತವಾಗುತ್ತದೆ; ಹೀಗೆ ಶ್ರುತಿಗಳಲ್ಲಿ ವಿಭಕ್ತಿವಚನಗಳ ವ್ಯತ್ಯಾಸವನ್ನು ಯೋಗ್ಯರೀತಿಯಿಂದ ಅರ್ಥಮಾಡಿಕೊಳ್ಳಬೇಕು (೫೦೩). ಪ್ರಸಿದ್ಧರಾದ ಆ ವಾಯುದೇವರ ಅವತಾರಗಳೇ ಹಿಂದಿನಿಂದಲೂ (ಅನಾದಿಯಿಂದಲೂ) ನಮಗೆ (ಸುಜನರಿಗೆ) ಜ್ಞಾನೋಪದೇಶಕಾರಿಯಾದವರು;

---

[1] ಬ್ರಹ್ಮನೊಡನೆ ಜೀವರು ಮುಕ್ತರಾಗಿ ಭಗವದುದರ ಪ್ರವೇಶ ಮಾಡುವರು; ಹಿಂದಿನ ಕಲ್ಪದ ವಾಯುವೇ ಈಗಿನ ಬ್ರಹ್ಮನಷ್ಟೆ; ಈ ಪ್ರಮೇಯವು ಹಿಂದೆ ಬಹುವಾಗಿ ಪ್ರಸಕ್ತವಾಗಿ ವಿಸ್ತರಿಸಲ್ಪಟ್ಟಿದೆ.

**ಇಂದವಶ್ಚೇಷ್ಟದಾತೃತ್ವಾತ್ ಪರಮೈಶ್ವರ್ಯತೋಽಪಿ ವಾ ।**
**ಮಹೇತಿ ಮಹತೇ ವಾಜಾಯಾಮ್ನಾಯ ಜ್ಞಾನಗೋಮತೇ ।**
**ಧನ್ವಂತು ಧನದಾಃ ಸಂತು ಧನಧಾನ್ಯ ಇತೀರಣಾತ್ ॥ ೫೦೫ ॥**

ಇಷ್ಟದಾತೃತ್ವಾತ್ – (ಮಹದೈಶ್ವರ್ಯವಂತಗಳಾದ್ದರಿಂದ) ಸರ್ವಭಕ್ತರ ಇಷ್ಟದಾನಮಾಡುವುದರಿಂದ, ಇಂದವಃ – (ವಾಯುವಿನ ಅವತಾರರೂಪಗಳು) ಇಂದುಗಳೆನಿಸುತ್ತವೆ; ಪರಮೈಶ್ವರ್ಯತಃ ಅಪಿವಾ–ಮಹದೈಶ್ವರ್ಯವುಳ್ಳವಾದ್ದರಿಂದ ಸಹ ಇಂದವಗಳೆನಿಸುತ್ತವೆ; ('ಇದಿಪರಮೈಶ್ವರ್ಯೇ' ಎಂಬ ಧಾತುವಿನ ಇಂದ್ರ ಶಬ್ದದಂತೆ ಇಲ್ಲಿ ಶಬ್ದನಿಷ್ಪತ್ತಿಯನ್ನು, ಅನುಸ್ವಾರಪ್ರಯೋಗವನ್ನೂ ತಿಳಿಯಬೇಕು); ಮಹೇತಿ–ಮಹ ಎಂಬುದು, ಮಹತೇ–ಪೂಜ್ಯಗಳೆಂಬ ಅರ್ಥವನ್ನು (ಹೇಳುತ್ತದೆ); ವಾಜಾಯ–ಅನ್ನಕ್ಕಾಗಿ (ಹವಿಸ್ಸಿಗೆ ಮತ್ತು ವೇದವಾಖ್ಯಾತೃಗಳ ಜೀವನಕ್ಕೆ ಅನ್ನವನ್ನು ಒದಗಿಸುವ ವಾಯುವಿಗೆ), ಜ್ಞಾನ ಗೋಮತೇ–ಜ್ಞಾನ ಕಿರಣಗಳಿಂದ ಶೋಭಿಸುವ ವಾಯುದೇವನಿಗೆ (ಗೋಮತೇ ಶಬ್ದಾರ್ಥವಿದು); ಧನ್ವಂತು–ಧಾನ್ಯಪ್ರದನಾಗಲಿ (ಮಂತ್ರಗತ ಧನ್ವಂತು ಶಬ್ದಾರ್ಥದ ವಿವರಣೆಯಿದು), ಧನದಾಃ–ಧಾನ್ಯಪ್ರದಗಳು, ಸಂತು–ಆಗಲಿ (ಆಗಿರಲಿ); ಧನಧಾನ್ಯ ಇತಿ–ಧನಧಾನ್ಯವೆಂದು, ಈರಣಾತ್–ಹೇಳುವುದರಿಂದ.

---

ಈ ಕಾರಣದಿಂದ 'ಗೋಮತಿ' ಶಬ್ದವಾಚ್ಯರಾದ ಆ ಗುರುಗಳಿಗೆ ಈ ಪ್ರಾರ್ಥನೆಯಾಗಿರುತ್ತದೆ; ಆ ವಾಯುದೇವನೇ, ಸಜ್ಜನರ ಜ್ಞಾನೋತ್ತರ ಕಾಲದಲ್ಲಿ (ಅಪರೋಕ್ಷ ಜ್ಞಾನಾನಂತರ) ಲಿಂಗದೇಹ ಲಯಕ್ಕೂ ಕಾರಣನಾಗಿರುವನು–ಕೊನೆಯ ದೇಹದ ಸಂಹಾರಕರ್ತನು; ಆತನೇ (ಸಜ್ಜನಾಂತರ್ಯಾಮಿ ರೂಪಗಳೇ) ಅಪರಾಸನೂ, ಎಂದರೆ ಅನ್ಯಲೋಕವಾದ ಮುಕ್ತಲೋಕವನ್ನು, (ಮೋಕ್ಷಪ್ರದವು) ಹೊಂದಿಸುವಾತನೂ ಆಗಿರುತ್ತಾನೆ; ಉಪರಾಸ ಶಬ್ದದ ತಾತ್ಪರ್ಯವನ್ನೇ ಅಪರಾಸ ಶಬ್ದವೂ ನಿರೂಪಿಸುತ್ತದೆ (೫೦೪). ವಾಯುರೂಪಗಳು 'ಇಂದು'ಗಳೆಂದೂ ಕರೆಯಲ್ಪಡುತ್ತವೆ; ಇಷ್ಟಪ್ರದಗಳಾದ್ದರಿಂದ ಇಂದುಗಳು; ಪರಮೈಶ್ವರ್ಯವುಳ್ಳವುಗಳಾದ್ದರಿಂದಲೂ ಇಂದುಗಳು; (ಇಂದ್ರ ಶಬ್ದದಂತೆ (ಇದಿಪರಮೈಶ್ವರ್ಯೇ ಎಂಬ ಧಾತು ರೂಪದಿಂದ ನಿಷ್ಪನ್ನವೆಂದೂ ತಿಳಿಯಬೇಕು); ಸುಜನ ಪೂಜ್ಯನಾದ್ದರಿಂದ, 'ಮಹೇ' ಎಂಬ ಶಬ್ದವಿದೆ; ಜ್ಞಾನ

**ಪ್ರಸಿದ್ಧಿಂ ಲೌಕಿಕೀಂ ಸೌತ್ರೀಂ ಚಾಹ ರೂಪದ್ವಯೇಽಸ್ಯ ಹಾ ।**
**ಇತ್ಯರ್ಥೋಽತ್ರ ಯತಃ ಸ್ಪಷ್ಟಂ ದೃಶ್ಯತೇ ಪದಸಂಪದಾ ॥ ೫೦೬ ॥**

ಹಾ–ಆಶ್ಚರ್ಯವು ! (ಹಾ ಎಂಬುದು ಅವ್ಯಯವು) ; ಅಸ್ಯ ರೂಪದ್ವಯೇ ಈತನ–(ಉಪದೇಶಕ ಮತ್ತು ಸಂಹಾರಕಗಳೆಂಬ) ಎರಡು ರೂಪಗಳಲ್ಲಿಯೂ, ಲೌಕಿಕೀಂ–(ಕ್ರಮವಾಗಿ) ಲೋಕ ಪ್ರಸಿದ್ಧ ರೂಪವನ್ನು (ಉಪದೇಶಕ ರೂಪವನ್ನು), ಸೌತ್ರೀಂ–(ಬ್ರಹ್ಮಸೂತ್ರಗತ) ತೇಜೋಲಯಕರ್ತೃಕ ರೂಪವನ್ನು, ಪ್ರಸಿದ್ಧಿಂ ಚ ಇವುಗಳ ಪ್ರಸಿದ್ಧಿಯನ್ನೂ, ಆಹ–(ಹಿಂದೆ ಉದಾಹೃತ ಎರಡು ಋಕ್ಕುಗಳು) ಹೇಳಿರುತ್ತವೆ ; ಯತಃ–ಯಾವ ಕಾರಣದಿಂದ ಎಂದರೆ, ಇತ್ಯರ್ಥಃ– ಹೀಗೆಂಬ ಅರ್ಥವು, ಅತ್ರ–ಈ ಋಕ್ಕುಗಳಲ್ಲಿ, ಪದಸಂಪದಾ–(ಋಕ್ಕುಗಳ) ಶಬ್ದ ಸಂಪತ್ತಿನಿಂದ, ಸ್ಪಷ್ಟಂ–ಸ್ಪಷ್ಟವಾಗಿ, (ವಿಶೇಷ ಶ್ರಮವಿಲ್ಲದೆ), ದೃಶ್ಯತೇ–ತಿಳಿದು ಬರುತ್ತದೆ.

**ಪವಮಾನೇತಿ ಸೋಮೇತಿ ಪ್ರಾಕ್ ಪ್ರಸ್ತಾವ್ಯೈವ ಯಂ ಶ್ರುತಿಃ ।**
**ಸೋಮಃ ಪವತ ಇತ್ಯಾಹ ಸ ಸೋಮೋ ಮಾರುತೋ ಧ್ರುವಂ ।**
**ಪವತೇ ಯಃ ಸ ಕಿಂ ನಾಭೂತ್ಪವಮಾನೋ ವಿದಾಂವುತೇ ॥ ೫೦೭ ॥**

ಪವಮಾನೇತಿ – ಪವಮಾನನೆಂದೂ, ಸೋಮೇತಿ – ಸೋಮನೆಂದೂ, ಪ್ರಾಕ್–ಹಿಂದೆ (ಮೊದಲಿಗೆ), ಪ್ರಸ್ತಾವ್ಯೈವ–ಪ್ರಸ್ತಾವಿಸಿಯೇ (ಸಂಗ್ರಹದಿಂದ

---

ಕಿರಣಗಳಿಂದ ಶೋಭಿಸುವುವಾದ್ದರಿಂದ 'ಗೋಮತೇ' ಎಂದಿದೆ ; ಯಜ್ಞಾದಿಗಳಲ್ಲಿ ಅರ್ಪಿಸಲು ಅವಶ್ಯಕವಾದ ಅನ್ನನಿಗೂ (ಅನ್ನಶಬ್ದ ವಾಚ್ಯನಿಗೂ) ಸಚ್ಛಾಸ್ತ್ರ ವ್ಯಾಖ್ಯಾತೃಗಳ ಜೀವನಾಧಾರವಾದ ಅನ್ನಪ್ರದರೂ ಆದ್ದರಿಂದ 'ವಾಜಾಯ' ಎಂಬ ಶಬ್ದವಿದೆ; 'ಧನ್ವಂತು' ಎಂಬ ಋಗ್ಗತ ಶಬ್ದವು, ಧಾನ್ಯಪ್ರದನಾಗಲಿ ಎಂಬರ್ಥದಲ್ಲಿದೆ (ಧನಧಾನ್ಯ ಇತಿಧಾತೋಃ) (೫೦೫). ಉದಾಹೃತ ಎರಡು ಋಕ್ಕುಗಳಲ್ಲಿ ವಾಯುದೇವನ ಜ್ಞಾನೋಪದೇಶಕವಾದ ಲೋಕಪ್ರಸಿದ್ಧ ಲೌಕಿಕ ರೂಪವೂ, ಸೂತ್ರ ಪ್ರಸಿದ್ಧವಾದ, ತೇಜೋಲಯಕಾರಕ ಸಂಹಾರಕ ರೂಪವೂ ಪ್ರತಿಪಾದಿಸಲ್ಪಟ್ಟಿವೆ ; ಈ ಅರ್ಥವು, ವೇದಮಂತ್ರಗಳ ಶಬ್ದ ಸಂಪತ್ತಿನಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ (೫೦೬). ಶ್ರುತಿಯು ಪ್ರಸ್ತಾವನೆಯಲ್ಲಿ, ವಾಯು

ನಿರೂಪಿಸಿಯೇ), ಶ್ರುತಿಃ–ಶ್ರುತಿಯು (ಋಗ್ವೇದ ವಾಕ್ಯವು),[1] ಯಂ–ಯಾರನ್ನು, ಸೋಮಃ–ಸೋಮನು, ಪವತೇ–ಪವಿತ್ರೀಕರಿಸುವನು, ಇತ್ಯಾಹ–ಹೇಳಿತೋ, ಸಃ ಸೋಮಃ– ಆ ಸೋಮನು, ಧ್ರುವಂ–ನಿಶ್ಚಯವಾಗಿ, ಮಾರುತಃ–ಮುಖ್ಯ ವಾಯುದೇವನೇ; ವಿದಾಂ–ವಿದ್ವಜ್ಜನರ, ಮತೇ–ಅಭಿಪ್ರಾಯದಲ್ಲಿ, ಯಃ ಪವತೇ–ಯಾವಾತನು ಪವಿತ್ರೀಕರಿಸುವನೋ, ಸಃ–ಆತನು, ಪವಮಾನಃ–ಪವಮಾನನು, (ಪವಮಾನ ಶಬ್ದವಾಚ್ಯನು), ನಾಭೂತ್ ಕಿಂ–ಆಗಲಿಲ್ಲವೇನು? (ಸಿದ್ಧವೇ ಆಗುತ್ತದೆ).

---

ದೇವನನ್ನು ಪವಮಾನನೆಂದೂ, ಸೋಮನೆಂದೂ ಉದ್ದೇಶಿಸಿ, 'ಸೋಮಃಪವತೇ' ಎಂದು ಹೇಳಿರುವುದರಿಂದ, ಸೋಮಶಬ್ದವಾಚ್ಯನು ಪವಮಾನನೆಂಬಲ್ಲಿ ಸಂಶಯವಿಲ್ಲ; ಪವತೇ ಯಸ್ಮಾತ್–ಪವಿತ್ರೀಕರಣ ಸಾಮರ್ಥ್ಯದಿಂದ, ವಾಯುದೇವನೇ,

[1] ಪ್ರಸಕ್ತವಾದ ಶ್ರುತಿವಾಕ್ಯವು ಹೀಗಿದೆ:–'ಅಜೀತಯೇಽಹತಯೇ ಪವಸ್ವ ಸ್ವಸ್ತಯೇ ಸರ್ವತಾತಯೇ ಬೃಹತೇ । ತದುಶಂತಿ ವಿಶ್ವ ಇಮೇ ಸಖಾಯಸ್ತದಹಂ ವಶ್ಮಿ ಪವಮಾನ ಸೋಮ ॥'; ಇದರ ಅರ್ಥ ವಿವರಣೆಯು ಈ ಮುಂದೆ ನಿರೂಪಿಸಲಾಗಿದೆ; ಹೇ ಸೋಮ ಪವಮಾನ–ಹೇ ಸೋಮನಾಮಕ ಪವಮಾನ! (ಮುಖ್ಯವಾಯೋ!), ಪವಸ್ವ–ನೀನು ಸದಾ (ಎಲ್ಲ ಅವತಾರಗಳಲ್ಲಿಯೂ) ಸಂಚಾರಶೀಲನಾಗಿರು: ಅಜೀತಯೇ–ಅಸುರಜಾತಿಯವರಿಂದ ನಾವು ಜಯಿಸಲ್ಪಡದಿರಲು, ಅಹತಯೇ–ಅವರಿಂದ ನಾವು ಸಂಹೃತರಾಗದಂತಿರಲು; ಸ್ವಸ್ತಯೇ–ನಮ್ಮಗಳ ಕ್ಷೇಮಕ್ಕಾಗಿ, (ತುಭ್ಯಂ ಚ ಕ್ಷೇಮದೇಭ್ಯಃ), ಸರ್ವತಾತಯೇ–ಸರ್ವತ್ರ ವ್ಯಾಪ್ತನಾದ (ಸರ್ವಾಭೀಷ್ಟಕರನಾಗಿರಲು), ಬೃಹತೇ–ಸರ್ವಗುಣಪೂರ್ಣನಾದ ಪರಮಾತ್ಮನಿಗೋಸ್ಕರ (ಆತನ ಸೇವಾರ್ಥವಾಗಿ), ಉಶಂತಿ ಚ-ಇಚ್ಛಿಸುತ್ತಿರುವ ನಾನು, ವಶ್ಮಿ–ಹೇಳುತ್ತೇನೆ ಮತ್ತು ಇಚ್ಛಿಸುತ್ತೇನೆ; ರಾಮಾವತಾರನಾದ ಪರಮಾತ್ಮನನ್ನು, ಹೊತ್ತು ಆಂಜನೇಯನಾದ ನೀನು, ಸುಗ್ರೀವನ ಬಳಿಗೆ ಕರೆದೊಯ್ದಿರುವಿ: ಸೀತಾನ್ವೇಷಣಕ್ಕಾಗಿ ಮೇರುಪರ್ವತದ ದಕ್ಷಿಣ ಭಾಗವನ್ನೆಲ್ಲಾ ಸುತ್ತಿರುವಿ; ಲಂಕೆಗೆ ಹೋಗಿ ಸೀತೆಯನ್ನು ಕಂಡುಬಂದಿ; ಯುದ್ಧದಲ್ಲಿ ಸಂಜೀವನಕ್ಕಾಗಿ ಸಂಚರಿಸಿರುವಿ: ಯುದ್ಧದಲ್ಲಿ ರಥಸ್ಥಾನೀಯನಾಗಿ ಶ್ರೀರಾಮನನ್ನು ಹೊತ್ತಿರುವಿ; ಭೀಮಾವತಾರದಲ್ಲಿ ಯುಧಿಷ್ಠಿರಾದಿಗಳನ್ನು ಹೊತ್ತು ಗುಹಾದ್ವಾರದಿಂದ ಹೊರಗೆ ತಂದಿರುವಿ. ಏಕಚಕ್ರ ನಗರದಲ್ಲಿ ಬಕಾಸುರನ ವಧಾರ್ಥವಾಗಿಯೂ, ಜರಾಸಂಧನ ವಧೆಗಾಗಿ ಶ್ರೀಕೃಷ್ಣನೊಂದಿಗೆ ಸಹ ಸಂಚರಿಸಿರುವಿ; ವನವಾಸದಲ್ಲಿ ಸೌಗಂಧಿಕಾಪುಷ್ಪಕ್ಕಾಗಿಯೂ, ಯುದ್ಧದಲ್ಲಿ ದುರ್ಯೋಧನಾದಿಗಳ ಸಂಹಾರಕ್ಕಾಗಿ ಗದಾಧಾರಿಯಾಗಿಯೂ, ರಾಮಕೃಷ್ಣಾದಿ ಶ್ರೀಹರಿಯ ರೂಪಗಳ ಸೇವಾರ್ಥವಾಗಿ ಬಹು ಪರಿಸಂಚಾರವನ್ನು ಮಾಡಿರುವಿ; ೩ನೇ ಮಧ್ವರೂಪದಿಂದ, ಬಾಲ್ಯದಲ್ಲಿ ದುರ್ಗಾ

**ಪ್ರಸೇನಾನೀರಿತಿ ಶ್ರುತ್ಯಾ ಯದ್ಭೀಮಹನುಮತ್ಕಥಾ ।**
**ಸ್ಪಷ್ಟಂ ನಿರೂಪಿತಾತ್ರೈವ ತತ್ಸೋಮಃ ಸೋಮವಂಶಜಃ ॥ ೫೦೮ ॥**

ಪ್ರಸೇನ್ನಾನೀಃ ಇತಿಶ್ರುತ್ಯಾ[1]–'ಪ್ರಸೇನಾನೀಃ' – ಎಂಬ ಶ್ರುತಿಯಿಂದ, ಯತ್–ಯಾವ ಕಾರಣದಿಂದ, ಸ್ಪಷ್ಟಂ–ಸ್ಪಷ್ಟವಾಗಿ, ಭೀಮಹನುಮತ್ಕಥಾ–ಭೀಮ, ಹನುಮದವತಾರ ಕಥೆಯು, ನಿರೂಪಿತಾ–ನಿರೂಪಿಸಲ್ಪಟ್ಟಿರುತ್ತದೆಯೋ, ತತ್–ಆ ಕಾರಣದಿಂದ, ಅತ್ರ ಏವ–ಇಲ್ಲಿಯೇ ಇರುವ, ಸೋಮಃ–ಸೋಮನು,

---

ವಿದ್ವಜ್ಜನಾಭಿಪ್ರಾಯದಲ್ಲಿ, ಪವಮಾನಶಬ್ದವಾಚ್ಯನಲ್ಲವೇ? ಬೇರಾರು ಆ ಪದವಾಚ್ಯನು ?. (೫೦೭). 'ಪ್ರಸೇನಾನೀಃ' ಎಂದು ಪ್ರಾರಂಭವಾಗುವ

---

ಲಯಕ್ಕೂ, ಗೋರಕ್ಷಣಾರ್ಥವಾಗಿ ವನದಲ್ಲಿಯೂ ಸಂಚರಿಸಿರುವಿರಿ ; ಜ್ಞಾನದಾನಕ್ಕಾಗಿ (ಈ ರೂಪದರದ ಶ್ರೀಹರಿ ಸೇವಾರ್ಥವಾಗಿ) ಬಹುವಾಗಿ ಸಂಚರಿಸಿರುವಿರಿ ; ಕೃಷ್ಣ ಸೇವಾರ್ಥವಾಗಿ, ಜ್ಞಾನದೃಷ್ಟಿಯಿಂದ ತಿಳಿದು ದ್ವಾರಕಾದಿಂದ ಪ್ರಾಪ್ತನಾದ ಶ್ರೀಕೃಷ್ಣ ಮೂರ್ತಿಯನ್ನು ಕರೆತರಲು (ಉಡುಪಿಯಿಂದ) ಸಮುದ್ರದ ಕಡೆ ಸಂಚರಿಸಿದಿರಿ ; ದುರ್ಮತಗಳ ಖಂಡನೆಗಾಗಿ, ದುರ್ವಾದಿಗಳ ಸಭೆಗಳಿಗೆ ಬಹುಪರಿಯಿಂದ ಸುತ್ತಿ ಅವರ ಮತವನ್ನು ತಲೆ ಎತ್ತದಂತೆ ಮಾಡಿದಿರಿ–ಅವರ ಸೂತ್ರ ಭಾಷ್ಯವೆಂಬ ಅಪವ್ಯಾಖ್ಯಾನವನ್ನು ನಿಮ್ಮ ಭಾಷ್ಯದಿಂದ ಖಂಡನೆಮಾಡಿ ಅದರ ಪ್ರಚಾರಕ್ಕಾಗಿ, ಸಂಚರಿಸಿದಿರಿ ; 'ವಾಯುಶ್ಚ ಯತಿರೂಪೇಣ ಕೃತ್ವಾ ದುಃಶಾಸ್ತ್ರ ಖಂಡನಂ' ಇತ್ಯಾದಿ ವಾಯುಪುರಾಣ ಪ್ರೋಕ್ತವಾದಂತೆ, ದುಃಶಾಸ್ತ್ರವನ್ನು ಖಂಡಿಸಿ, ಸಚ್ಛಾಸ್ತ್ರವನ್ನು ಪ್ರಚಾರ ಮಾಡಿದಿರಿ ; ಇತ್ಯಾದಿ ನಿಮ್ಮ ಅವತಾರ ತ್ರಯಗಳ ಗಮನ (ಪವನ) ವ್ಯಾಪಾರವು, 'ಪ್ರಾಕ್ ಪಂಚಾಶತ್ಸಹಸ್ರೈಃ ವ್ಯವಹಿತಮಮಿತಂ ಯೋಜನೈಃ ಪರ್ವತಂ ತ್ವಂ| ; 'ಮುಷ್ಟಿರಿಷ್ಟಂ ಪ್ರವೇಷ್ಟುಂ ಕಿಂ ನೇಷ್ಟೇ'|, 'ದೇವ್ಯಾದೇಶ ಪ್ರಣೋತೀ'|, ಜಘ್ನೇ ನಿಘ್ನೇನ ವಿಘ್ನಃ'| ; 'ಕ್ಷ್ವೇಲಾ ಕ್ಷೀಣಾಟ್ಟಹಾಸಂ| ; ಗಚ್ಛನ್ ಸೌಗಂಧಿಕಾರ್ಥಂ ಪಥಿ|' ಬಕ್ಹಿಡಿಂಬಕೀಚಕಃ| 'ಬ್ರಹ್ಮಾಹಂ ನಿರ್ಗುಣೋಽಹಂ ವಿತಥಮಿದಮಿತಿ ಹ್ಯೇಷ ಪಾಷಂಡವಾದಃ|' ತದ್ವ್ಯಕ್ತ್ಯಾಭಾಸಜಾಲ ಪ್ರಸರ ವಿಷತರೂದ್ದಾಹದಕ್ಷ|' ಸ್ವಚ್ಛಃ ಸ್ವಚ್ಛಂದ ಮೃತ್ಯುಃ ಸುಖಯಸಿ ಸುಜನಂ ದೇವ ಕಿಂ ಚಿತ್ರಮತ್ರ| 'ಪಾರಿವ್ರಾಜ್ಯಾಧಿರಾಜಃ ಪುನರಪಿ ಬದರೀಂ ಪ್ರಾಪ್ಯ ಕೃಷ್ಣಂಚ ನತ್ವಾ ಕೃತ್ವಾ ಭಾಷ್ಯಾಣಿ|' ಇತ್ಯಾದಿ ವಾಕ್ಯಗಳು ಮುಖ್ಯಪ್ರಾಣನ ಪವನ ಪ್ರಾರ್ಥನೆಯನ್ನು ನಿರೂಪಿಸುತ್ತವೆ ; ಈ ಎಲ್ಲ ಪವನನ ವ್ಯಾಪಕ ವ್ಯಾಪಾರಗಳು ಶ್ರುತಿಯ ಪ್ರಸ್ತಾವ ಭಾಗದಲ್ಲಿ ಸಂಗ್ರಹವಾಗಿ ಸೂಚಿತವಾಗಿವೆ.

[1] ಪ್ರಸಕ್ತವಾದ ಶ್ರುತಿಯು ಹೀಗಿದೆ:–'ಪ್ರಸೇನಾನೀಃ ಶೂರೋ ಅಗ್ರೇ ರಥಾನಾಂ ಗವ್ಯಂನೇತಿ ಹರ್ಷತೇ ಅಸ್ಯಸೇನಾಃ| ಭದ್ರಾನ್ ಕೃಣ್ವನ್ನಿಂದ್ರ ಹವಾಂತ್ಸಖಿಭ್ಯ ಆಸೋಮೋ

ಸೋಮವಂಶಜಃ–ಚಂದ್ರಕುಲೋತ್ಪನ್ನನಾದ ಭೀಮನೆಂಬುದೂ (ಸ್ಪಷ್ಟವಾಗುತ್ತದೆ).

---

ಶ್ರುತಿಯು ಭೀಮಸೇನ ಹಾಗೂ ಹನುಮಂತನ ಕಥೆಯನ್ನು ನಿರೂಪಿಸುತ್ತದೆ– ಸ್ಪಷ್ಟವಾದ ನಿರೂಪಣೆಯಿಂದ ಸಹ ಅಲ್ಲಿ ಉಕ್ತನಾದ 'ಸೋಮ'ನು, ಸೋಮ ವಂಶಜನಾದ (ಚಂದ್ರಕುಲೋತ್ಪನ್ನನಾದ ಭೀಮಸೇನನೆಂದೂ) ಸಿದ್ಧವಾಗುತ್ತದೆ;

---

ವಸ್ತ್ರಾ ರಭಸಾನಿ ದತ್ತೇ।' ಎಂಬುದಾಗಿದೆ ; ಅದರ ಅರ್ಥವು ಈ ಮುಂದಿನಂತಿದೆ–ಶೂರಃ- ಶೌರ್ಯವಂತನಾದ ಈತನು (ಭೀಮನು), ಗವ್ಯಂನೇತಿ-ರಥವಿಲ್ಲದೇ ಭೂಮಿಯಲ್ಲಿ ಪಾದ ಚಾರಿಯಾಗಿ ಹೋಗುವವನಾಗಿ, (ಇದು ಭೀಮನಲ್ಲಿ ಅಸಾಧರಣ ಧರ್ಮಸೂಚಕವು), ಸೇನಾನೀಃ–ಪಾಂಡವ ಸೇನಾನಾಯಕನಾದ ಭೀಮಸೇನನು) (ಭೀಮಾ ಸೇನಾ ಯಸ್ಯ ಎಂಬ ವ್ಯುತ್ಪತ್ತಿಯಿಂದ, ಭೀಮಸೇನ ಮತ್ತು ಸೇನಾನೀ ಪದಗಳು ಸಮಾನಾರ್ಥಕವಾಗುತ್ತವೆ ಸ್ಯಂದನನ್ನು ಇಟ್ಟುಕೊಳ್ಳುವುದು ಪ್ರಸ್ತಾವಕ್ಕೆ ಹೊಂದಿಕೆಯಾಗುವುದಿಲ್ಲ); ಅಸ್ಯ ಸೇನಾಃ- ಈತನ ಸೇನೆಗಳು, ರಥಾನಾಂ ಅಗ್ರೇ–ವೈರಿರಥಗಳ, ಮುಂದೆ, (ಹೋಗುವುದನ್ನು ಕಂಡು) ಹರ್ಷತೇ–ಹರ್ಷಪಡುತ್ತವೆ ; (ಕಾಲು ನಡಿಗೆಯಿಂದ ವೈರಿರಥಗಳ ಕಡೆಗೆ ಹೀಗೆ ನಿರ್ಭಯದಿಂದ ಯುದ್ಧಕ್ಕಾಗಿ ನುಗ್ಗುವುದು ಭೀಮಸೇನನ ಲಕ್ಷಣವೆಂಬುದು ಭಾರತದಿಂದಲೂ ಸ್ಪಷ್ಟವಾಗುತ್ತದೆ) ; ಇಂದ್ರಹವಾನ್–ಭದ್ರಾನ್–(ಇಂದ್ರೇಣ ಆಹ್ವಯಂತಃ) ಕವೀಂದ್ರರಾದ ವೇದವ್ಯಾಸರಿಂದ ಮತ್ತು ಯಾದವೇಂದ್ರನಾದ ಶ್ರೀಕೃಷ್ಣನಿಂದ ಸ್ತುತಿಸಲ್ಪಡಲರ್ಹಗಳಾದ ಪರಾಕ್ರಮಗಳುಳ್ಳ, (ಶೋಭನಕರಗಳಾದ ಪರಾಕ್ರಮಗಳನ್ನು, ಕೃಣ್ವನ್–(ಕುರ್ವನ್) ಮಾಡುವವನಾಗಿ, ಸೋಮಃ–ಸೋಮ (ಚಂದ್ರ) ಕುಲೋತ್ಪನ್ನನಾದ ಭೀಮಸೇನನು, (ಯುವರಾಜ ಪದವಿಯನ್ನು ಅಲಂಕರಿಸಿ), ಸಖಿಭ್ಯಃ–ವೈಷ್ಣವರಿಗೆ (ವಿಷ್ಣುಭಕ್ತರಿಗೆ), ರಭಸಾನಿ–ಸಂಭ್ರಮವುಳ್ಳ (ಚಿತ್ರಗಳಿಂದ ಅಲಂಕೃತಗಳಾದ) ವಸ್ತ್ರಾಃ–ವಸ್ತ್ರಗಳು (ಇದು ಉಪಲಕ್ಷಣದಿಂದ ಧನಭೂಷಾಭರಣಾದಿಗಳನ್ನು ಹೇಳುತ್ತದೆ), ದತ್ತಃ–ಕೊಡಲ್ಪಟ್ಟಿತು ; (ಇದು ಭೀಮಪರವಾದ ಅರ್ಥವು) ; ಶೂರತ್ವಾದಿ ಸಕಲ ವಿಶೇಷಣಗಳುಳ್ಳ ಕಪಿಸೇನಾ ನಾಯಕನಾದ ಹನುಮಂತನು, ರಾಕ್ಷಸರ ಸೇನೆಗಳ ಕಡೆಗೆ ಪಾದಚಾರಿಯಾಗಿ ಯುದ್ಧಕ್ಕಾಗಿ ಹೋಗುವುದನ್ನು ಕಂಡು ಕಪಿನಾಯಕರು ಅತ್ಯಂತವಾಗಿ ಹರ್ಷಿಸುತ್ತಾರೆ ; ಇಂದ್ರಹವಾನ್– ಸೀತಾಪ್ರತಿಕೃತಿಯಲ್ಲಿದ್ದ ಇಂದ್ರನ ಸ್ತುತಿರೂಪದ ಪ್ರಶಂಸೆಗೆ ಅರ್ಹಗಳಾದ, ಶೋಭನ ಕರಗಳಾದ ಸಮುದ್ರೋಲ್ಲಂಘನ, ವನಭಂಗ, ಲಂಕಾದಹನಾದಿ ಪರಾಕ್ರಮಗಳನ್ನು, ಕೃಣ್ವನ್–ಮಾಡುವವನಾಗಿ, ಸೋಮಃ–ಹನುಮಂತನೆಂಬ ವಾಯುದೇವನು, ಅ–ಸಮಸ್ತವಾದ, ರಭಸಾನಿವಸ್ತ್ರಾಃ–(ತನ್ನ ಬಾಲದಲ್ಲಿ ಬಿಗಿಯಲ್ಪಟ್ಟ ನಾನಾ ಅಲಂಕೃತ ಚಿತ್ರ ವಸ್ತ್ರಗಳು, ಸಖಿಭ್ಯಃ–(ವಾಯುವು ಅಗ್ನಿಸಖನಾದ್ದರಿಂದ) ಅಗ್ನಿಜ್ವಾಲೆಗಳಿಗೆ (ಲಂಕಾದಹನ ಕಾಲದಲ್ಲಿ), ದತ್ತಃ-(ವಿಷ್ಣು ಪ್ರೀತಿಕರಗಳಾದ ಆಹುತಿಗಳೆಂಬಂತೆ) ಕೊಡಲ್ಪಟ್ಟವು.

**ಅಗ್ರೇ ರಥಾನಾಂ ಸೇನಾನೀಃ ಶೂರೋಽಸೌ ಭುವಿ ಯಸ್ತದಾ ।**
**ಏತಿ ಪ್ರಹರ್ಷತೇ ಭೀಮಸೇನಸೇನಾ ತದಾ ಕಿಲ ।**
**ಭೀಮಸೇನೋಹ್ಯಸೌ ಸೇನಾನೀತ್ವಂ ಯತ್ತಸ್ಯ ಶೋಭತೇ ॥ ೫೧ ॥**

ಅಸೌ–ಈ, ಸೇನಾನೀಃ–ಸೇನಾನಾಯಕನಾದ, ಶೂರಃ–ಪರಾಕ್ರಮಿಯು, ರಥಾನಾಂ–ವೈರಿರಥಗಳ ಅಗ್ರೇ–ಎದುರಿನಲ್ಲಿ, ಭುವಿ-ಭೂಮಿಯಲ್ಲಿ (ವಾಹನವಿಲ್ಲದೇ ಪಾದಚಾರಿಯಾಗಿ), ಯಃ–ಯಾರು ಏತಿ–ಹೋಗುವನೋ, ತದಾ–ಆಗ, ಭೀಮಸೇನ ಸೇನಾ–ಭೀಮನ ಸೇನೆಯು, ಪ್ರಹರ್ಷತೇ ಕಿಲ–ಹರ್ಷಧ್ವನಿಯನ್ನು ಮಾಡುತ್ತದೆಂಬುದು (ಭಾರತಾದಿಗಳಲ್ಲಿ) ಪ್ರಸಿದ್ಧವು (ಈತನ ಪರಾಕ್ರಮವು ಆಶ್ಚರ್ಯಕರವು); ಯತ್–ಯಾವ ಕಾರಣದಿಂದ, ಅಸೌ ಭೀಮಸೇನಃ–ಈ (ಶೂರನಾದ) ಭೀಮಸೇನನು (ಭಯಂಕರವಾದ ಸೇನಾನಾಯಕನು ಆಗಿರುವನೋ), ಹಿ–ಆ ಕಾರಣದಿಂದಲೇ, ತಸ್ಯ–ಆ ಭೀಮಸೇನನಿಗೆ, ಸೇನಾನೀತ್ವಂ–ಸೇನಾ ನಾಯಕತ್ವವು, ಶೋಭತೇ–ಶೋಭಿಸುತ್ತದೆ.

**ಕವೀಂದ್ರಯಾದವೇಂದ್ರಾದ್ಯಾನೋಚಿತಾನ್ ಸುರರಾಟ್‌ಸ್ತುತಾನ್ ।**
**ಭದ್ರಾನ್ ಪರಾಕ್ರಮಾನ್ ಕುರ್ವನ್ ಯುವರಾಜಪದೇ ಸ್ಥಿತಃ ॥೫೧೦॥**

---

ಆದ್ದರಿಂದ ಭೀಮಸೇನನು ವಾಯುದೇವನ ಅವತಾರನೆಂದೂ ಸ್ಥಿರಪಡುತ್ತದೆ. (೫೦೮). ಈ ಶ್ಲೋಕದ ಭಾವಾರ್ಥವು, ಹಿಂದಿನ ೫೦೭ ನೇ ಶ್ಲೋಕದಲ್ಲಿ ಪ್ರಸಕ್ತವಾಗಿ, ಅಡಿ ಟಿಪ್ಪಣಿ (೧) ರಲ್ಲಿ ವಿವರವಾಗಿ ಶ್ರುತ್ಯರ್ಥವು ನಿರೂಪಿಸಲಾಗಿದೆ; ಅದನ್ನು ಗಮನಿಸಿದರೆ, ಆ ಶ್ರುತ್ಯರ್ಥದ ವಿವರಣಾತ್ಮಕವಾದ ಮುಂದಿನ ಶ್ಲೋಕಗಳ ಭಾವಾರ್ಥವು ಸುಲಭವಾಗಿ ಗ್ರಾಹ್ಯವಾಗುತ್ತದೆ (ತಿಳಿಯಲು ಬರುತ್ತದೆ); ಶ್ರುತಿಯು, ಶೂರನಾದ ಆ ಸೇನಾನಿಯು, ವೈರಿರಥಿಕರನ್ನು ಎದುರಿಸಲು, ಅವರ ರಥಗಳ ಮುಂಭಾಗದಲ್ಲಿ, ನಿರ್ಭಯದಿಂದ ಪಾದಚಾರಿಯಾಗಿ, ಭೂಮಿಯಲ್ಲಿ ನಡೆದು ನುಗ್ಗುವನೆಂಬುದು, ಅದನ್ನು ಕಂಡ ಆತನ ಸೇನೆಯು ಹರ್ಷದಿಂದ ಗರ್ಜಿಸುವುದೆಂದೂ, ಹೇಳುತ್ತದೆ; ಈ ಸೇನಾನಿಯ ಸೈನ್ಯವು ಶತ್ರು ಭಯಂಕರವಾಗಿರಬೇಕೆಂಬುದೂ ಸಿದ್ಧವಾಗುತ್ತದೆ; ಈ ವರ್ಣನೆಯು, ಪಾಂಡವ ಸೇನಾನಾಯಕನಾದ ಭೀಮಸೇನನಿಗೆ ಮಾತ್ರ, ಭಾರತಾದಿ ಗ್ರಂಥಗಳ ನಿರೂಪಣೆಯಿಂದ ಶೋಭಿಸುತ್ತದೆ; ಈ ಅಸಾಧಾರಣ ಲಕ್ಷಣದಿಂದ ವರ್ಣಿತನಾದ ಶ್ರುತ್ಯುಕ್ತ ಸೇನಾನಿಯು, ಭೀಮಸೇನನೇ ಎಂದೂ ಸಿದ್ಧವಾಗುತ್ತದೆ (೫೦೯). ಈ ಶ್ರುತಿಯು

**ಸಖಿಭ್ಯೋ ವಿಷ್ಣುಭಕ್ತೇಭ್ಯೋ ವಸ್ತ್ರಾವಸ್ತ್ರಾಣಿ ಸಂಭ್ರಮಾಃ ।**
**ಯುತಾನಿ ಚ ಸಮಂತಾತ್ಸ ದತ್ತೇ ಕಿಲ ದಿನೇ ದಿನೇ ॥ ೫೧೧ ॥**

**ಇತಿ ಭೀಮಂ ಸ್ತೌತಿ ಸೈವ ಹನೂಮಂತಂ ಚ ಶಂಸತಿ ।**
**ಏಕಪ್ರಕಾರಕಾರ್ಯತ್ವಾದೇಕರೂಪತ್ವತೋಽಪಿ ವಾ ॥ ೫೧೨ ॥**

**ಭದ್ರಾನ್ ಕುರ್ವನ್ ಕವೀಂದ್ರಸ್ಯ ರಾಘವೇಂದ್ರಸ್ಯ ವಾ ಪ್ರಭೋಃ ।**
**ಆಹ್ವಾನಾರ್ಹಾನ್ನಿಜಗುಣಾನ್ ಸಖಿಭ್ಯೋಽರ್ಥೇ ರಿಪೋಃ ಪುರೀಂ ।**
**ಗತ್ವಾ ವಸ್ತ್ರಾಣಿ ಚಾದತ್ತೇ ರಭಸಾನಿ ಕಿಲ ದ್ವಿಷಾಂ ॥ ೫೧೩ ॥**

ಕವೀಂದ್ರ ಯಾದವೇಂದ್ರಾದ್ಧಾನೋಚಿತಾನ್ — ವೇದವ್ಯಾಸರು (ಕವೀಂದ್ರರು) ಮತ್ತು ಶ್ರೀಕೃಷ್ಣ (ಯಾದವೇಂದ್ರ)ರಿಗೆ, ಚೆನ್ನಾಗಿ ಅನ್ವಯಿಸದ (ಯೋಗ್ಯವಲ್ಲದ), ಸುರರಾಟ್ ಸ್ತುತಾನ್–ದೇವೇಂದ್ರನಿಂದ ಸ್ತುತ್ಯಗಳಾದ, ಭದ್ರಾನ್–ಮಂಗಲಕರಗಳಾದ, ಪರಾಕ್ರಮಾನ್–ಪರಾಕ್ರಮಗಳನ್ನು, ಕುರ್ವನ್–ಮಾಡುವನಾಗಿ, ಯುವರಾಜ ಪದೇ–ಯುವರಾಜನ ಅಧಿಕಾರದಲ್ಲಿ, ಸ್ಥಿತಃ–ಇದ್ದವನಾಗಿ; ಸಖಿಭ್ಯೋಃ–ತನಗೆ ಪ್ರಿಯರಾದ, ವಿಷ್ಣುಭಕ್ತೇಭ್ಯಃ–ವಿಷ್ಣುಭಕ್ತರಿಗೋಸ್ಕರ, ವಸ್ತ್ರಾವಸ್ತ್ರಾಣಿ – ವಸ್ತ್ರಗಳು, ಧನಗೃಹಾದಿ ರೂಪದ,

---

ಸರ್ವಜ್ಞ ಶ್ರೇಷ್ಠರಾದ ವೇದವ್ಯಾಸರ (ಕವೀಂದ್ರ) ಶ್ರೀಕೃಷ್ಣರಲ್ಲಿ (ಯಾದವೇಂದ್ರ) ಉಚಿತವಾಗದ, ದೇವೇಂದ್ರನಿಂದಲೂ ಸ್ತುತ್ಯವಾದ ಪವಮಾನನ ಮಹಿಮೆಗಳನ್ನು ವರ್ಣಿಸುತ್ತದೆ; ಆತನ ಅವತಾರ ಪ್ರಸಿದ್ಧಗಳಾದ ಮಂಗಲಪ್ರದಗಳಾದ ಕಾರ್ಯಗಳನ್ನು ವರ್ಣಿಸುತ್ತದೆ; ಭೀಮಸೇನನು ಯುವರಾಜ ಪಟ್ಟದಲ್ಲಿದ್ದು ಬಹುವಾಗಿ ಶೂರರಿಗೆ ಸಹ ಸಾಧಿಸದ ಕರ್ಮಗಳನ್ನು ಸಾಧಿಸಿರುವನು; ತನಗೆ ಪ್ರಿಯರಾದ ವಿಷ್ಣುಭಕ್ತರಿಗೆ, ದಿವ್ಯ ವಸ್ತ್ರಗಳನ್ನು (ಅವಸ್ತ್ರಗಳನ್ನು) ಧನಗೃಹಾದಿಗಳನ್ನು ಪ್ರದಾನ ಮಾಡುವನು; ಈತನಿಂದ ಬಹುಸಂಭ್ರಮದ ಕಾರ್ಯಗಳು ನಡೆಯುತ್ತವೆಂದೂ ಶ್ರುತಿಯು ಹೇಳುತ್ತದೆ; ಭೀಮಸೇನನನ್ನು ಸ್ತುತಿಸುವ ಅದೇ ಶ್ರುತಿಯು, ಹನುಮಂತನ ಕೃತಿಗಳನ್ನು ಪ್ರಶಂಸಿಸುತ್ತದೆ; ಏಕಪ್ರಕಾರವಾದ ಕೃತಿಗಳಾದ್ದರಿಂದಲೂ, ವೇದವ್ಯಾಸರ ಮತ್ತು ರಾಮಚಂದ್ರನ ಸೇವಾರೂಪದ ಕಾರ್ಯವು, ಮಧ್ವರು ಮತ್ತು ಆಂಜನೇಯರಲ್ಲಿ ಒಂದೇ ರೀತಿಯಿರುವುದರಿಂದಲೂ, ಈ

ಸಂಭ್ರಮಾಃ-ಸಂಭ್ರಮಗಳಿಂದ, ಯುತಾನಿ-ಯುಕ್ತವಾದವುಗಳನ್ನು, ದಿನೇ ದಿನೇ-ಪ್ರತಿದಿನದಲ್ಲಿ, ಸಮಂತಾತ್-ತನ್ನ ಇಚ್ಛಾನುಸಾರವಾಗಿ (ಸರ್ವಪ್ರಕಾರದಿಂದ), ಸಃ-ಭೀಮಸೇನನು, ದತ್ತೇ ಕಿಲ-ಕೊಡುತ್ತಿರುವನೆಂಬುದು ಪ್ರಸಿದ್ಧವಷ್ಟೆ; ಇತಿ-ಹೀಗೆಂದು, ಭೀಮಂ-ಭೀಮಸೇನನನ್ನು, ಸ್ತೌತಿ-(ಆ ಶ್ರುತಿಯು) ಸ್ತುತಿಸುತ್ತದೆ; ಸಾ ಏವ-ಅದೇ ಶ್ರುತಿಯು, ಹನುಮಂತಂ ಚ-ಹನುಮಂತನನ್ನು, ಶಂಸತಿ-ಸ್ತುತಿಸುತ್ತದೆ; ಏಕಪ್ರಕಾರ ಕಾರ್ಯತ್ವಾತ್ - ಏಕಪ್ರಕಾರವಾದ (ವಿಷ್ಣು ಸೇವಾರೂಪದ) ಕಾರ್ಯವಾದ್ದರಿಂದ, ಏಕರೂಪತ್ವತಃ-ಒಂದೇರೂಪದ ಸೇವೆಯಾದ್ದರಿಂದಲೂ, ಭದ್ರಾನ್-ಮಂಗಲಕರವಾದ ಕರ್ಮಗಳನ್ನು, ಕೃಣ್ವನ್-ಮಾಡುವವನಾಗಿ ಪ್ರಭೋಃ-ಪ್ರಭುವಾದ, ಕವೀಂದ್ರಸ್ಯ-ವೇದವ್ಯಾಸರ, ವಾ-ಮತ್ತು, ರಾಘವೇಂದ್ರಸ್ಯ-ರಾಮಚಂದ್ರನ, ಆಹ್ವಾನಾರ್ಹಾನ್-ಕೀರ್ತ್ಯನೀಯವಾದ, ನಿಜಗುಣಾನ್-ತನ್ನ (ಪ್ರಭುವಿನ) ಗುಣಗಳನ್ನು, (ಮತ್ತೆ) ಆದತ್ತೇ-ತೆಗೆದು ವಿವರಿಸುತ್ತಾ ಸಖಿಭ್ಯೋರ್ಥೇ-ಪ್ರಿಯರಾದ ವಿಷ್ಣುಭಕ್ತರ ಪ್ರಯೋಜನಕ್ಕಾಗಿ, ರಿಪೋಃ-ಶತ್ರುವಿನ, ಪುರೀಂ-ಪಟ್ಟಣವನ್ನು, ಗತ್ವಾ-ಹೊಂದಿ (ಪಟ್ಟಣಕ್ಕೆ ಹೋಗಿ), ದ್ವಿಷಾಂ-ವಿಷ್ಣುದ್ವೇಷಿಗಳ, ರಭಸಾನಿ ವಸ್ತ್ರಾಣಿ-ಚಿತ್ರವಿಚಿತ್ರ ವಸ್ತ್ರಗಳನ್ನು, ಆದತ್ತೇ-ತೆಗೆದುಕೊಳ್ಳುತ್ತಾನೆ. (ಲಂಕಾದಹನ ಕಾರ್ಯವು, ಅದರಂತೆ, ದುಷ್ಟ ಪ್ರಮೇಯಗಳ ಖಂಡನೆಯು, ವಿಷ್ಣುಭಕ್ತರ ಪ್ರಿಯಕರಗಳಾಗಿರುತ್ತವೆ).

**ಸ್ವಬಾಲಾಸಕ್ತವಸ್ತ್ರಾಣಿ ಸಖಿಭ್ಯೋಽಗ್ನಿಭ್ಯ ಏವ ವಾ ।**
**ಆಸಮಂತಾದ್ವಿಭುರ್ದತ್ತೇ ಪ್ರಾಗಾದತ್ತೇ ಚ ತತ್ಕೃತೇ ॥ ೫೧೪ ॥**

---

ಅವತಾರಗಳೂ ಆ ಪವಮಾನನ ಅವತಾರಗಳೇ ಸರಿ; ಉಭಯ ಭಗವದ್ರೂಪಗಳ ಅಗಣ್ಯಗುಣಗಳನ್ನು ವಿವರಿಸುತ್ತವೆ ಮತ್ತು (ಆಂಜನೇಯನು) ಶತ್ರುಪುರವನ್ನು (ಲಂಕೆಯನ್ನು) ಪ್ರವೇಶಿಸಿ, ಚಿತ್ರ ವಿಚಿತ್ರಗಳಾದ ರಾಕ್ಷಸ ಸ್ತ್ರೀಯರ ವಸ್ತ್ರಗಳನ್ನು, ತಂದು ಆ ಎಲ್ಲವನ್ನು ಲಂಕಾದಹನ ಕಾಲದಲ್ಲಿ (ಬಾಲದಿಂದ ತೆಗೆದು) ಅಗ್ನಿ ದ್ವಾರಾ ಶ್ರೀರಾಮಚಂದ್ರನ ಪ್ರೀತ್ಯರ್ಥವಾಗಿ ಅರ್ಪಿಸುವನಾಗುತ್ತಾನೆ; ದುಷ್ಟ ಪ್ರಮೇಯಗಳ ಖಂಡನೆಯೂ (ಶ್ರೀಮಧ್ವರ ಕೃತಿಯೂ) ವಿಷ್ಣುಪ್ರಿಯಕರಕೃತಿಗಳೇ ಆಗಿವೆ ಮತ್ತು ವಿಷ್ಣು ಭಕ್ತರ ತೃಪ್ತಿಗಾಗಿಯೂ ಆಗುತ್ತವೆ; ಅತ್ಯಂತ ಸಂಭ್ರಮ ಯುಕ್ತವಾದ ಈ ಉಭಯ ಅವತಾರ ಕೃತಿಗಳು ಅನ್ಯಾಸಾಧ್ಯವಾದ ಅಸಾಧಾರಣ ಕೃತಿಗಳಾಗಿವೆ (೫೧೦-೫೧೩). ಲಂಕಾದಹನ ಕಾಲದಲ್ಲಿ ಪ್ರಸರವಾದ, ತನ್ನ

**ದ್ವಿಟ್ಪುರೀದಾಹಪೂರ್ವಾಂಶ್ಚ ಸೀತಾಸ್ಥೇಂದ್ರಸ್ಯ ತೋಷದಾನ್ ।**
**ಭದ್ರಾನ್ ಪರಾಕ್ರಮಾನ್ ಕುರ್ವನ್ ವನಭಂಗಾದಿಕಾನ್ ಪ್ರಭುಃ**
**॥ ೫೧೫ ॥**

ಸ್ವಬಾಲಾಸಕ್ತ ವಸ್ತ್ರಾಣಿ–ತನ್ನ ಬಾಲವನ್ನು ಬಿಗಿದಿರುವ (ಕಟ್ಟಿರುವ) ವಸ್ತ್ರಗಳನ್ನು ಆಸಮಂತಾತ್ – ಸುತ್ತಲೂ ಅಗ್ನಿಭ್ಯಃ ಏವ – ಅಗ್ನಿಜ್ವಾಲೆಗಳಿಗೆ (ಲಂಕಾದಹನ ಕಾಲದ ಅಗ್ನಿಜ್ವಾಲೆಗಳಿಗೆ), ವಾ–ಅಥವಾ (ಮತ್ತು) ಸಖಿಭ್ಯಃ–ತನ್ನ ಮಿತ್ರರಿಗೆ, ವಿಭುಃ–ಸಮರ್ಥನಾದ ಆಂಜನೇಯನು ದತ್ತೇ–ಕೊಡುತ್ತಾನೆ; ಪ್ರಾಕ್–ಮೊದಲು, ತತ್ಕೃತೇ–ಅಗ್ನಿಗಾಗಿ (ಅಗ್ನಿಗೆ ಅರ್ಪಿಸಲು), ಆದತ್ತೇಚ–(ಬಾಲದಲ್ಲಿ ರಾಕ್ಷಸರು ಬಿಗಿಯುತ್ತಿರುವ ವಸ್ತ್ರಗಳನ್ನು ತನ್ನ ಬಾಲದಲ್ಲಿ) ಸ್ವೀಕರಿಸುತ್ತಾನೆ; ಸೀತಾಸ್ಥ ಇಂದ್ರಸ್ಯ–ಸೀತೆಯಲ್ಲಿದ್ದ ಇಂದ್ರನ, ತೋಷದಾನ್–ತೃಪ್ತಿಕರಗಳಾದ, ದ್ವಿಟ್ ಪುರೀದಾಹ ಪೂರ್ವಾನ್ ಚ–ಶತ್ರುಪುರದ (ಲಂಕಾಪಟ್ಟಣದ ದಾಹಕ್ಕೆ ಮೊದಲು) ದಾಹದ ಮೊದಲು ಸಹ, ವನಭಂಗಾದಿಕಾನ್–(ಅಶೋಕವನ ಭಂಗಾದಿ), ಭದ್ರಾನ್ – ಮಂಗಲಕರ, ಪರಾಕ್ರಮಾನ್–ಪರಾಕ್ರಮದ (ಶೌರ್ಯದ), ಕಾರ್ಯಗಳನ್ನು, ಕುರ್ವನ್–ಮಾಡುವವನಾಗಿ ಪ್ರಭುಃ–ಆಂಜನೇಯನು (ಶೋಭಿಸುವನು)

**ಅಗ್ರೇ ರಥಾನಾಮಿತ್ಯಾದಿ ಯೋಜ್ಯಮಸ್ಮಿಂಶ್ಚ ಪೂರ್ವವತ್ ।**
**ಸಸೋಮಃ ಪವನೋಽಸ್ಮದ್ಧನೂಮಾನ್ವಾ ಭವಿಷ್ಯತಿ ॥೫೧೬॥**

ರಥಾನಾಂ–ವೈರಿರಥಗಳ, ಅಗ್ರೇ–ಎದುರಿನಲ್ಲಿ, ಇತ್ಯಾದಿ– ಈ ಮೊದಲಾದ ಶ್ರುತಿ ಪದಗಳನ್ನು, ಅಸ್ಮಿನ್–ಹನುಮಂತನಲ್ಲಿಯೂ (ರಾಕ್ಷಸರ ಯುದ್ಧದಲ್ಲಿಯೂ),

---

ಸಖನಾದ (ಅಗ್ನಿಯು ವಾಯುಸಖನು) ಅಗ್ನಿಯ ವಿವಿಧ ಜ್ವಾಲೆಗಳಿಗೆ ಅರ್ಪಿಸಲು, ರಾಕ್ಷಸರು ತನ್ನ ಬಾಲಕ್ಕೆ ಸುತ್ತಿದ್ದ ವಸ್ತ್ರಗಳನ್ನು ದಾನಮಾಡುವನು; ಲಂಕಾಪುರಿಯ ದಹನದ ಮೊದಲೇ ಅಶೋಕವನ ಭಂಗ, ರಾಕ್ಷಸ ಸಂಹಾರಾದಿ ಬಹು ಮಂಗಲಕರವಾದ ಶೌರ್ಯದ ಕಾರ್ಯಗಳನ್ನು, ಸೀತಾಸ್ಥಿತನಾದ ಇಂದ್ರನ ತೃಪ್ತಿಗಾಗಿ ಸಾಧಿಸಿ, ವಿರಾಜಿಸುವನು (೫೧೪–೫೧೫). 'ಅಗ್ರೇರಥಾನಾಂ' ಎಂಬ ಶ್ರುತಿಭಾಗವನ್ನು ಭೀಮಸೇನನ ಪರವಾಗಿ ಯೋಜನೆ ಮಾಡಿಕೊಂಡಂತೆ, ಹನುಮಂತನ ವಿಷಯದಲ್ಲಿಯೂ ಯೋಜನೆ ಮಾಡಿಕೊಳ್ಳಬೇಕು; ಆಯುಧ

ಪೂರ್ವವತ್–ಹಿಂದಿನಂತೆ (ಭೀಮಸೇನ ಪರವಾಗಿ ಅರ್ಥಮಾಡಿದಂತೆ,–ಪಾದ ಚಾರಿಯಾಗಿ ನಿರ್ಭಯದಿಂದ ನುಗ್ಗುವ ಶೌರ್ಯವನ್ನು ಸೈನ್ಯವು ಕಂಡು ಹರ್ಷೋದ್ಗಾರಗಳನ್ನು ಮಾಡುತ್ತಿದ್ದಾರೆಂಬಂತೆ), ಯೋಜ್ಯಂ–ಯೋಜಿಸಿ (ಉಪ ಯೋಗಿಸಿ ಅರ್ಥಮಾಡಿಕೊಳ್ಳಬೇಕು); ಅಸ್ಮದ್ಧನೂಮಾನ್ ವಾ–ನಮ್ಮ ಹನುಮಂತನೂ ಸಹ, ಸೋಮಃ – ಸೋಮನಾಮಕ, ಸ ಪವಮಾನಃ–ಆ ವಾಯುದೇವನೇ, ಭವಿಷ್ಯತಿ–ಆಗಿರುತ್ತಾನೆ (ಆಗುತ್ತಾನೆ).

**ಮತೀನಾಂ ಜನಿತಾ ವಿಷ್ಣೋರ್ಜನಿತಾ ಯಃ ಶ್ರುತೌ ಶ್ರುತಃ ।**
**ವಿಪ್ರಾಣಾಮೃಷಿರಿತ್ಯುಕ್ತಃ ಸ ಮಧ್ವ ಇತಿ ಚ ಶ್ರುತಃ ॥ ೫೧೭ ॥**

**ಏಕ ಏವ ಭವೇದ್ವಿಷ್ಣುರ್ಮತಿಂ ವಿಪ್ರೇಷು ಯೋದಿಶತ್ ।**
**ವಿಷ್ಣೋಃ ಪ್ರಮಾಪನಾಲ್ಲೋಕೇ ಸ ವಿಷ್ಣೋರ್ಜನಿತಾ ಶ್ರುತಃ**
**॥ ೫೧೮ ॥**

---

ವಾಹನಾದಿಗಳಿಲ್ಲದೇ, ವೈರಿರಥಿಕರನ್ನು ಎದುರಿಸಲು, ಪಾದಚಾರಿಯಾಗಿ, ನಿರ್ಭಯವಾಗಿ ನುಗ್ಗುವ ಆಂಜನೇಯನನ್ನು ಕಂಡು ಕಪಿ ಸೈನ್ಯವು ಆನಂದದಿಂದ ಸಿಂಹನಾದ ಮಾಡುತ್ತಿದ್ದವು; ಆದ್ದರಿಂದ ನಮ್ಮ ಹನುಮಂತನ ಶೌರ್ಯದ ಕೃತಿಗಳನ್ನೇ ಶ್ರುತಿಯು ವರ್ಣಿಸುತ್ತದೆಂದು ತಿಳಿಯಲು ಬರುತ್ತದೆ (೫೧೬). ಶ್ರುತಿಯು ಪವಮಾನನನ್ನು ಜನಕನೆಂದು ವಿವಿಧವಾಗಿ ವರ್ಣಿಸುತ್ತದೆ; ಉಪದೇಶ ಗಳಿಂದ ಜನರ ಬುದ್ಧಿಯನ್ನು ಹುಟ್ಟಿಸುತ್ತಾನೆ; ವಿಷ್ಣುವಿನ ಜನಕನೆಂದೂ ('ಜನಿತೋತ ವಿಷ್ಣೋಃ' ಎಂದೂ) ಶ್ರುತಿಯು ಹೇಳುತ್ತದೆ; ವಿಪ್ರರ ಮಧ್ಯದಲ್ಲಿ ಜ್ಞಾನೋಪದೇಶಕನಾದ (ಗುರು) ಋಷಿ ಎಂದೂ ಹೇಳುತ್ತದೆ; ಅವರೇ ಈ ಶ್ರೀಮಧ್ವರು; ವಿಷ್ಣುವೇ ಸರ್ವೋತ್ತಮನೆಂಬ ಬುದ್ಧಿಯನ್ನು ವಿಪ್ರರಲ್ಲಿ ಉತ್ಪಾದನೆ ಮಾಡುವವನೇ, ವಿಷ್ಣು ಜನಕನು–ಅನ್ಯನಲ್ಲ; 'ಯಸ್ತಾವಿಜಾನಾತ್‌ಸಪಿತುಃ ಪಿತಾ' ಎಂಬ ಶ್ರುತಿಯೂ ಹೀಗೆಂದೇ ಹೇಳುತ್ತದೆ; ಶ್ರೀವಿಷ್ಣುನಾಮವೂ ಹೇಳುವಂತೆ, ದೇಶ, ಕಾಲ, ಗುಣಗಳಿಂದ ವ್ಯಾಪ್ತನಾದವನಿಗೆ ಬೇರೆ ವಿಧದ ಉತ್ಪತ್ತಿಯು ಕೂಡುವುದೇ ಇಲ್ಲ; ಕಾಲದಿಂದ ವ್ಯಾಪ್ತನಿಗೆ ಮೊದಲು ಇಲ್ಲದ್ದು ನಂತರ ಹುಟ್ಟುವುದೆಂಬ ಜನ್ಮವು ಹೇಗೆ ಯುಕ್ತವಾಗುತ್ತದೆ? (ಆಗುವುದೇ ಇಲ್ಲ;

**ಯಸ್ಮಾದ್ವಿಜಾನಾತ್ ಸಪಿತುಃ ಪಿತೇತ್ಯಸ್ತಿ ಯತಃ ಶ್ರುತಿಃ ।**
**ದೇಶಕಾಲಗುಣವ್ಯಾಪ್ತವಿಷ್ಣೋರ್ಜನ್ಮೇದಮೇವ ಹಿ ।**
**ಯತಃ ಪ್ರಾಗಸತಃ ಸತ್ತಾಕಾಲವ್ಯಾಪ್ತ್ಯೇನ ಶೋಭತೇ ॥ ೫೧೯ ॥**

'ಸೋಮಃ ಪವತೇ' ಇತ್ಯಾದಿ, 'ಬ್ರಹ್ಮಾ ದೇವಾನಾಂ' ಇತ್ಯಾದಿ ಎರಡು ಶ್ರುತಿಗಳ ಅರ್ಥಪರ್ಯಾಲೋಚನೆಯಿಂದಲೂ, ಶ್ರೀ ಮಧ್ವರಿಗೇ ಅಲ್ಲಿ ಹೇಳಲಾದ 'ಸೋಮ'ತ್ವವು ಯುಕ್ತವಾಗುತ್ತದೆಂದು ಹೇಳುತ್ತಾರೆ :—[1]

ಮತೀನಾಂ—(ಉಪದೇಶಾದಿಗಳಿಂದ) ಬುದ್ಧಿಗಳ, ಜನಿತಾ—ಉತ್ಪಾದಕನೂ ವಿಷ್ಣೋಃ—ವಿಷ್ಣುವಿನ, ಜನಿತಾ—ಜನಕನೂ (ಎಂದು), ಯಃ—ಯಾರು, ಶ್ರುತೌ—

---

ಆದ್ದರಿಂದ ಆತನ ಸರ್ವೋತ್ತಮತ್ವ ಜ್ಞಾನೋದಯವೇ ಆತನ ಉತ್ಪತ್ತಿಯು) (೫೧೭–೫೧೯).

[1] ಪ್ರಸಕ್ತವಾದ ಶ್ರುತಿಗಳು ಹೀಗಿವೆ :—'ಸೋಮಃ ಪವತೇ ಜನಿತಾ ಮತೀನಾಂ ಜನಿತಾದಿ ಯೋ ಜನಿತಾ ಪೃಥಿವ್ಯಾಃ । ಜನಿತಾಗ್ನೇರ್ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೋತ ವಿಷ್ಣೋಃ ।'; 'ಬ್ರಹ್ಮಾ ದೇವಾನಾಂ ಪದವೀಃ ಕವೀನಾಮೃಷಿರ್ವಿಪ್ರಾಣಾಂ ಮಹಿಷೋ ಮೃಗಾಣಾಂ । ಶ್ಯೇನೋ ಗೃಧ್ರಾಣಾಂ ಸ್ವಧಿತಿರ್ವನಾನಾಂ ಸೋಮಃ ಪವಿತ್ರಮತ್ಯೇತಿ ರೇಭನ್ ।'; ಈ ಶ್ರುತಿಗಳ ಅರ್ಥವಿವರಣೆಯು ಹೀಗಿದೆ :—ಸೋಮಃ—ಸೋಮನಾಮಕ ವಾಯುದೇವನು (ಪವಮಾನನು), ಪವತೇ—(ಜಗತ್ತನ್ನು) ಪವಿತ್ರಗೊಳಿಸುತ್ತಾನೆ ; ಮತೀನಾಂ—(ಉಪದೇಶಾದಿಗಳಿಂದ) ಬುದ್ಧಿಗಳನ್ನು, ಜನಿತಾ—ಉತ್ಪಾದನೆ ಮಾಡುತ್ತಾನೆ ; ಜನಿತಾದಿ—ಜ್ಞಾನೋತ್ಪತ್ತಿ ಮೊದಲಾದುದನ್ನು (ಅಪರೋಕ್ಷವನ್ನು ಸಹ); ಯಃ—ಯಾರು, ಪೃಥಿವ್ಯಾಃ—ಪೃಥಿವ್ಯಾದಿಗಳ, ಜನಿತಾ—ಜನಕನು ; (ಜೀವ ಜಡಾತ್ಮಕ ಪ್ರಪಂಚದ—ದ್ಯು, ಭೂ ಸ್ವರ್ಗ ಭೂಮ್ಯಾದಿಗಳ ಅಭಿಮಾನಿಗಳನ್ನು, ಇಂದ್ರಪರ್ಯಂತರಾದ ಜೀವರನ್ನು ದೇಹಾದಿಗಳನ್ನಿತ್ತು ಹುಟ್ಟಿಸುವವನೂ) (ಉನ್ಮಥ್ಯಾತಸ್ಯಮಿಥ್ಯಾತ್ವವಚನವಚನಾನುತ್ಪತಸ್ಥಾನ್ ಇತ್ಯಾದಿ) (ಸಾಭ್ರೋಷ್ಣಾಭೀಶು ಶುಭ್ರ ಪ್ರಭಮುಭಯನಭ ಇತ್ಯಾದಿ ವಾಕ್ಯಗಳಿಂದಲೂ, 'ವಾಯುನಾಗೌತಮ' ಇತಿ ಶ್ರುತಿಯಿಂದಲೂ, ಮಹತ್ತತ್ವಾಭಿಮಾನಿಯಾದ ವಾಯುವಿಗೆ ಅಹಂಕಾರ ಸೃಷ್ಟ್ಯೃತ್ವವಿರುವುದರಿಂದ, ಮೂಲರೂಪಾಪೇಕ್ಷೆಯಿಂದ ಮಧ್ಯದ ದ್ಯುಲೋಕಜನಕತ್ವವೂ ಕೂಡುತ್ತದೆ) ; ಜನಿತೋತ ವಿಷ್ಣೋಃ—ಸರ್ವೋತ್ತಮತ್ವಾದಿ ಮಹಿಮೆಯ ಜ್ಞಾಪನದಿಂದ ವಿಷ್ಣುವಿಗೂ (ಒಂದು ವಿವಕ್ಷೆಯಿಂದ) ಜನಕನೇ ಆಗಿರುವನು; (ಸೋಮನಂತೆ ಶಾಂತಮೂರ್ತಿಯಾದ ಶ್ರೀಮಧ್ವರೂ ಪವಮಾನನ ಅವತಾರರೆಂದೂ ಸೂಚಿತವಾಗಿದೆ) (ಹಂಸಮಂತ್ರ ಜಪಾದಿಗಳಿಂದ ಹರಿಸೇವಾರ್ಥವಾಗಿ

ಶ್ರುತಿಯಲ್ಲಿ, ಶ್ರುತಃ–ಉಕ್ತರಾಗಿರುವರೋ (ಪ್ರಸಿದ್ಧರಾಗಿರುವರೋ) ವಿಪ್ರಾಣಾಂ–ವಿಪ್ರರ ಮಧ್ಯದಲ್ಲಿ ಋಷಿಃ–ಜ್ಞಾನೋಪದೇಶಕನು, ಇತ್ಯುಕ್ತಃ–ಹೀಗೆ ಹೇಳಲಾದ, ಸಃ–ಆತನು, ಮಧ್ವಃ ಇತಿ ಚ–ಮಧ್ವರೆಂದೇ, ಶ್ರುತಃ–ಪ್ರಸಿದ್ಧರು. ವಿಪ್ರೇಷು–ವಿಪ್ರರಲ್ಲಿ, ಯಃ–ಯಾರು, ವಿಷ್ಣುಃ–ಶ್ರೀವಿಷ್ಣುವು, ಏಕ ಏವ ಭವೇತ್–ಒಬ್ಬನೇ (ಸರ್ವೋತ್ತಮನೆಂದು) ಆಗಿರುವನೆಂದು, ಅದಿಶತ್–ಉಪದೇಶಿಸಿದರೋ (ಅವರೇ ಮಧ್ವರು) ; ಲೋಕೇ–ಜಗತ್ತಿನಲ್ಲಿ ವಿಷ್ಣೋಃ–ಶ್ರೀವಿಷ್ಣುವಿನ, ಪ್ರರೂಪನಾತ್–ಉತ್ಕೃಷ್ಟತ್ವ ಜ್ಞಾನವನ್ನುಂಟುಮಾಡುವುದರಿಂದ, ಸಃ–ಅವರೇ, ವಿಷ್ಣೋಃ–ಶ್ರೀವಿಷ್ಣುವಿನ, ಜನಿತಾ–ಜನಕನು, (ಎಂದು), ಶ್ರುತಃ–ಪ್ರಸಿದ್ಧನು, ಯತಃ–ಏಕೆಂದರೆ, ಯಸ್ತಾವಿಜಾನಾತ್ಸಪಿತುಃ ಪಿತೇತಿ–ಯಾರು ತಂದೆಯ ಜ್ಞಾನವನ್ನು ತಿಳಿಸಿಕೊಡುವನೋ ಆತನೇ ತಂದೆಯ ತಂದೆಯು (ಉತ್ಪಾದಕನು) ಎಂದು, ಶ್ರುತಿಃ ಅಸ್ತಿ–ಶ್ರುತಿಯು ಇದೆ ; ದೇಶಕಾಲಗುಣವ್ಯಾಪ್ತವಿಷ್ಣೋಃ–ದೇಶಕಾಲ ಗುಣಗಳಿಂದ ವ್ಯಾಪ್ತನಾದ ಶ್ರೀವಿಷ್ಣುವಿನ, ಜನ್ಮ–ಜನನವು, ಇದಂಏವಹಿ–ಇದೇ ತಾನೇ ? (ಇಷ್ಟುಮಾತ್ರವೇ) ; (ಮತ್ತು) ಯತಃ–ಏಕೆಂದರೆ, ಕಾಲವ್ಯಾಪ್ತೇ–ಕಾಲವ್ಯಾಪ್ತನಲ್ಲಿ (ತ್ರಿಕಾಲಗಳಲ್ಲಿಯೂ ಇರುವನಿಗೆ), ಪ್ರಾಗಸತಃ ಸತ್ತಾ–ಹಿಂದಿಲ್ಲದ್ದು ಈಗಿರುವುದೆಂಬ ಜನ್ಮವು, ನ ಶೋಭತೇ–ಶೋಭಿಸುವುದಿಲ್ಲ (ಸರ್ವ ಕಾಲಗಳಲ್ಲಿರುವ ಶ್ರೀವಿಷ್ಣುವಿಗೆ ಉತ್ಪತ್ತಿಯೆಂಬುದು ಕೂಡುವುದಿಲ್ಲ).

**ದ್ಯಾವಾಪೃಥಿವ್ಯಾದಿಜನ್ಮಹೇತುತ್ವಂ ಬ್ರಹ್ಮಣೋ ಗುಣಂ ।**
**ಐಕ್ಯಾದ್ಘಟಯಿತುಂ ಬ್ರಹ್ಮಾ ದೇವಾನಾಮಿತಿ ತಂ ಜಗೌ ॥ ೫೨೦ ॥**

ದ್ಯಾವಾಪೃಥಿವ್ಯಾದಿ ಜನ್ಮ ಹೇತುತ್ವಂ–ದ್ಯು, ಭೂಮ್ಯಾದಿಗಳ ಸೃಷ್ಟಿ ಕಾರಣತ್ವವೆಂಬುವ, ಬ್ರಹ್ಮಣಃ – ಚತುರ್ಮುಖನ, ಗುಣಂ – ಗುಣವನ್ನು,

---

ದ್ಯಾವಾ ಪೃಥಿವ್ಯಾದಿಗಳ ಜನಕನೆಂಬುದು (ಸೃಷ್ಟಿಕರ್ತನೆನಿಸುವ) ಬ್ರಹ್ಮನ ಗುಣವು ; ಬ್ರಹ್ಮಾದೇವಾನಾಂ–ದೇವತೆಗಳ ಮಧ್ಯದಲ್ಲಿ ವಾಯುವೇ

---

ಸುಜನರನ್ನು ಪವಿತ್ರಗೊಳಿಸುವುದರಿಂದಲೂ, ಸೋಮಃ ಪವತೇ – ಎಂದಿರುತ್ತದೆ) ; ಬ್ರಹ್ಮಾ ದೇವಾನಾಂ–ದೇವತೆಗಳ ಮಧ್ಯದಲ್ಲಿ ಬ್ರಹ್ಮನೇ ಪವನನು; ದೇವಾನಾಂ–ದೇವತೆಗಳ, ಪದವೀಃ – ಪದವಿಗಳನ್ನು ಅನುಗ್ರಹಿಸುವವನು, ಕವೀನಾಂ – ಜ್ಞಾನಿಗಳಲ್ಲಿ; ಪದವೀಃ – ಆಸ್ಥಾನದಾತನು ; ವಿಪ್ರಾಣಾಂ–ವಿಪ್ರರಮಧ್ಯದಲ್ಲಿ, ಋಷಿಃ–ಜ್ಞಾನೋಪದೇಶಕ ಗುರುವೂ

ಐಕ್ಯಾತ್-ಐಕ್ಯದಿಂದ (ವಾಯುವೇ ಬ್ರಹ್ಮನೆಂದು ಐಕ್ಯವನ್ನು ಹೇಳುವುದರಿಂದ), ಘಟಯಿತುಂ-ಸಾಧಿಸುವುದಕ್ಕಾಗಿ, ಬ್ರಹ್ಮಾದೇವಾನಾಂ ಇತಿ-'ಬ್ರಹ್ಮಾದೇವಾನಾಂ' (ವಾಯುದೇವನು, ದೇವತೆಗಳಲ್ಲಿ ಮಧ್ಯದಲ್ಲಿ ಬ್ರಹ್ಮನು) ಎಂದು, ತಂ- ಆ ಮಧ್ವರನ್ನೇ, ಜಗೌ-ಸ್ತುತಿಸಿದೆ.

**ಬಾಧಾಭಾವೇ ತು ವಾಕ್ಯಾನಾಮರ್ಥೋ ವಾಚ್ಯೋ ಯಥಾಶ್ರುತಃ ।**
**ಬಾಧಿತಾರ್ಥಂ ತು ಯದ್ವಾಕ್ಯಂ ತತ್ಸಂಬಂಧಾದಿಕಂ ವದೇತ್ ॥೫೨೧॥**

ವಾಕ್ಯಾನಾಂ-(ವೇದ) ವಾಕ್ಯಗಳಿಗೆ, ಬಾಧಾಭಾವೇ-ಬಾಧವಿಲ್ಲದಿದ್ದರೆ (ಅನ್ಯ ಪ್ರಮಾಣಗಳ ವಿರೋಧವಿಲ್ಲದಿದ್ದಲ್ಲಿ), ಯಥಾಶ್ರುತಃ-ಯಥಾಶ್ರುತವಾದಂತೆ (ಸ್ಪಷ್ಟವಾಗಿ ತೋರುವಂತೆ ಪದವಾಕ್ಯಗಳ), ಅರ್ಥಃ-ಅರ್ಥವು, ವಾಚ್ಯಃ-

---

ಬ್ರಹ್ಮನು, ಎಂದು ಐಕ್ಯದಿಂದ ನಿರೂಪಿಸುವುದರಿಂದ, ಈ ಗುಣವೂ ವಾಯು ದೇವನಲ್ಲಿ ಯುಕ್ತವಾಗುವ ಉದ್ದೇಶದಿಂದ ಆಗಿರುತ್ತದೆಂದು ತಿಳಿಯಬೇಕು; (ವಾಯುದೇವನೂ ಮಹತ್ತತ್ವಾಭಿಮಾನಿಯಾದ್ದರಿಂದ, ಮುಂದಿನ ಅಹಂಕಾರ ತತ್ವದಿಂದ ಜನ್ಯವಾದ ದ್ಯಾವಾ ಪೃಥ್ವಿಗಳೂ ವಾಯುಜನ್ಯವೇ ಆಗುತ್ತವೆ); (೫೨೧). ಶ್ರುತಿವಾಕ್ಯಗಳಿಗೆ ಯಾವ ಬಾಧಿತವಾದ (ಪ್ರಮಾಣ ಬಾಧಿತಾರ್ಥವೂ) ತೋರದಿರುವಾಗ, ಯಥಾಶ್ರುತವನ್ನೇ (ಪದಾನುಸಾರವಾಗಿ) ತಿಳಿಯತಕ್ಕದ್ದು;

---

ಆತನೇ (ಅಂತರ್ಯಾಮಿಯಾಗಿದ್ದು ಉಪದೇಶಮಾಡುವವನು ಪವನನೇ), ಮೃಗಾಣಾಂ-ಪಶುಗಳ ಮಧ್ಯದಲ್ಲಿ, ಮಹಿಷಃ-ಬಲದೇವನಾದ್ದರಿಂದ ಮಹಿಷದಲ್ಲಿ ಸ್ಥಿತನಾಗಿ ಬಲಪ್ರದನು; ಗೃಧ್ರಾಣಾಂ-ಗೃಧ್ರ (ಹದ್ದುಗಳ) ಮಧ್ಯದಲ್ಲಿ, ಶ್ಯೇನಃ-ಶ್ಯೇನಪಕ್ಷಿಯಲ್ಲಿ ಬಲದಾತನಾಗಿ ಸ್ಥಿತನೂ ಆತನೇ; ವನಾನಾಂ-ವನಗಳ ಛೇದದಲ್ಲಿ ಕುಠಾರದಲ್ಲಿ ಆಬಲಕಾರಣನಾಗಿ ಸ್ಥಿತನೂ ಆತನೇ (ಕುಠಾರಃ ಸ್ವಧಿತಿಃ ಪರಶುಶ್ಚ ಪರಶ್ವಧಃ-ಅಮರಕೋಶ); ಪವಿತ್ರಂ ಅತ್ಯೇತಿ-ಸಕಲಪವಿತ್ರಗಳನ್ನು ಅತಿಕ್ರಮಿಸಿದ ಪವಿತ್ರಸ್ವರೂಪನಾಗಿ ಶೋಭಿಸುವವನು, ರೇಭನ್-ಹೀಗೆಂದು ಗರ್ಜನೆಯನ್ನು ಮಾಡುತ್ತಿರುವವನು (ಭ ಶಬ್ದ ಇತಿಧಾತೋಃ-ಭ ಎಂಬುದಕ್ಕೆ ಶಬ್ದವೆಂಬರ್ಥವಿರುತ್ತದೆ); (ವಾಯುವು ಸಕಲ ಜ್ಯೋತಿಶ್ಚಕ್ರಗಳನ್ನು ಅತಿಕ್ರಮಿಸಿ ಸ್ಥಿತನಾಗಿರುವನು; ಅರ್ಚಿರಾದಿಮಾರ್ಗದಲ್ಲಿ ಅಂತಿಮ ಗಮ್ಯಲೋಕದ ಮುಖ್ಯ ವಾಯು ಲೋಕದ ಒಡೆಯನೂ ಆಗಿರುವುದರಿಂದ, ಎಲ್ಲವನ್ನು ಅತಿಕ್ರಮಿಸಿ ನಿಂತಿರುವವನು-'ಸ ಏನಾನ್ ಬ್ರಹ್ಮ ಗಮಯತಿ' ಇತ್ಯಾದಿ ಶ್ರುತ್ಯುಕ್ತ ಮಹಿಮೆಗಳನ್ನೂ ತಿಳಿಸುವವನೂ ಆತನೇ ಆದ್ದರಿಂದ 'ಮತೀನಾಂ ಜನಿತಾ' ಎಂದು ಮುಖ್ಯಾರ್ಥದಲ್ಲಿ ಪವನನಿಗೆ ಹೇಳಲಾಗಿದೆ.

*

ಹೇಳಲ್ಪಡಬೇಕು ; ಯದ್ವಾಕ್ಯಂ–ಯಾವ ವಾಕ್ಯದ ಅರ್ಥವು, ಬಾಧಿತಾರ್ಥಂ–ಬಾಧಿತವಾದ ಅರ್ಥವುಳ್ಳದ್ದೋ, ತತ್ಸಂಬಂಧಾದಿಕಂ–ಅಲ್ಲಿ (ವಾಯುದೇವನ) ಸನ್ನಿಧಾನ, ಸಾದೃಶ್ಯಾದಿಗಳನ್ನು, ವದೇತ್–ಹೇಳತಕ್ಕದ್ದು.

**ಅಥವಾ ಪವನಂ ನಾಮ ಮರುತೋ ಗಮನಂ ಕಿಲ ।**
**ಮತೀನಾಂ ಜನ್ಮ ಕಿಂ ತೇನ ದಿವೋ ಜನ್ಮ ಭುವಶ್ಚ ಕಿಂ ।**
**ವಿಷ್ಣೋರ್ಜನ್ಮ ತತಃ ಕಿಂ ಸ್ಯಾತ್ತತ್ರತತ್ರೋಪದೇಶನಾತ್ ॥೫೨॥**

**ಮಧ್ವಾಖ್ಯದಿವ್ಯರೂಪೇಣ ಮತೀನಾಂ ಜನಕೋಽಪ್ಯಭೂತ್ ।**
**ದ್ಯುಭ್ವಾದೇರ್ಜನಕಶ್ಚಾಭೂನ್ಮಿಥ್ಯಾತ್ವಪ್ರವಿಮೋಚನಾತ್ ॥ ೫೩ ॥**

'ದಿವೋಜನಿತಾ' ಇತ್ಯಾದಿ ವಾಕ್ಯಗಳಿಗೆ ಸಯುಕ್ತಿಕವಾದ ಅರ್ಥಾಂತರವನ್ನು ಹೇಳಲು ಉಪಕ್ರಮಿಸಿ, ಹೇಳುತ್ತಾರೆ :—

ಅಥವಾ – ಬೇರೆ ರೀತಿಯಿಂದಲೂ, ಪವನಂ ನಾಮ – ಪವನನೆಂದರೆ, ಮರುತಃ–ವಾಯುವಿನ, ಗಮನಂ ಕಿಲ–ಸಂಚಾರವಷ್ಟೆ (ಶ್ವಾಸೋಚ್ಛ್ವಾಸರೂಪದಿಂದ ಜೀವನ ಹೇತುವಷ್ಟೆ) ; ತೇನ–ಆ ಕಾರಣದಿಂದ, ದಿವಃ–ದ್ಯುಲೋಕದ, ಜನ್ಮ–

---

ಅರ್ಥವು ಅನ್ಯಪ್ರಮಾಣ ಬಾಧಿತವಾದರೆ, ಆಗ, ಆ ಪದ (ವಾಕ್ಯ) ಬೋಧಿತ ವಸ್ತುವಿನಲ್ಲಿ ಅನ್ಯವಸ್ತುವಿನ ಸನ್ನಿಧಾನ ಸಾದೃಶ್ಯಾದಿಗಳನ್ನು ತಿಳಿಯಬೇಕೆಂಬ ನಿಯಮವನ್ನು ಅನುಸರಿಸಬೇಕು (೫೧). ಹೀಗೂ ತಿಳಿಯಬಹುದು ; ಪವನನೆಂಬ ನಾಮವು ಸಂಚಾರವನ್ನು ಹೇಳುತ್ತದೆ ; ಆದ್ದರಿಂದ ಮತಿಗಳ (ಬುದ್ಧಿಗಳ), ದ್ಯುಭ್ವಾದಿಗಳ, ಮತ್ತು ವಿಷ್ಣುವಿನ ಜನಕನೆಂಬುದು ಯುಕ್ತವಲ್ಲ, ಎಂಬ ಸಂಶಯವನ್ನು ಪರಿಹರಿಸಲಿಕ್ಕಾಗಿ, ವಾಯುದೇವನು ಜ್ಞಾನೋಪದೇಶಕನಾದ್ದರಿಂದ ಅವುಗಳ ಉತ್ಪತ್ತಿಯು ಯುಕ್ತವಾಗುತ್ತದೆ ; ಮಧ್ವನಾಮಕ ದಿವ್ಯರೂಪದಿಂದ ಮಾಡಿದ (ಮಾಡುವ) ಉಪದೇಶದಿಂದ, ಸದ್ಬುದ್ಧಿಗಳ ಉದಯವಾಗುತ್ತದೆ ; ವಿಷ್ಣುವೇ ಸರ್ವೋತ್ತಮನೆಂಬ ಜ್ಞಾನವು ಹುಟ್ಟುವುದರಿಂದ, ವಿಷ್ಣು ಜನಕನೂ, ದ್ಯುಭೂರಾದಿ ಲೋಕಗಳು ಸತ್ಯವಾದವುಗಳು (ಸತ್ಯ ಜಗತ್ತಿನ ಭಾಗವಾದ್ದರಿಂದ) ಜಗನ್ಮಿಥ್ಯಾತ್ವವನ್ನು ಪರಿಹರಿಸಿ ಅವುಗಳ ಸತ್ಯತ್ವವನ್ನು ಸ್ಥಾಪಿಸುವುದರಿಂದ ಅವುಗಳ ಜನಕನೂ ಆಗುವನೆಂದು ಶ್ರುತಿಯ ಭಾವವು : (೫೨–೫೩).

ಉತ್ಪತ್ತಿಯೂ, ಕಿಂ–ಏನು (ಹೇಗೆ ಕೂಡುತ್ತದೆ?) ಆಲೋಕಕ್ಕೆ ಶ್ವಾಸೋಚ್ಛ್ವಾಸಗಳು ಇಲ್ಲವಷ್ಟೆ); ಭುವಶ್ಚ ಜನ್ಮ ಕಿಂ–ಭೂಲೋಕದ ಉತ್ಪತ್ತಿಯೂ ಹೇಗೆ ಕೂಡುತ್ತದೆ (ಯುಕ್ತವಾಗುವುದಿಲ್ಲ); ಮತೀನಾಂ–ಬುದ್ಧಿಗಳ, ಜನ್ಮ ಕಿಂ–ಉತ್ಪತ್ತಿಯೂ ಹೇಗೆ ಯುಕ್ತವಾಗುತ್ತದೆ? ತತ್ರ ತತ್ರ – ಆಯಾವಾಕ್ಯದಲ್ಲಿ, ಉಪದೇಶನಾತ್–ಹೇಳಿರುವುದರಿಂದ, ವಿಷ್ಣೋಃ–ಶ್ರೀವಿಷ್ಣುವಿನ, ಜನ್ಮ–ಜನ್ಮವು, ತತಃ–ಉಪದೇಶದಿಂದ, ಸ್ಯಾತ್ ಕಿಂ–ಆಗುವುದೇನು? (ಎಂದರೆ ಹೇಳುತ್ತಾರೆ) ಮಧ್ವಾಖ್ಯ ದಿವ್ಯರೂಪೇಣ–ಮಧ್ವನಾಮಕದೇವತಾ ರೂಪದಿಂದ (ತತ್ರ ತತ್ರ ಉಪದೇಶನಾತ್–ಅಲ್ಲಲ್ಲಿ, ಆಯಾ ಶಿಷ್ಯರಲ್ಲಿ ಉಪದೇಶ ಮಾಡುವುದರಿಂದ) ಮತೀನಾಂ–ಬುದ್ಧಿಗಳ, ಜನಕಃ ಅಪಿ–ಉತ್ಪಾದಕರೂ, ಅಭೂತ್–ಆಗಿರುವರು; ಮಿಥ್ಯಾತ್ವ ಪ್ರವಿಮೋಚನಾತ್ – ಮಿಥ್ಯಾತ್ವವನ್ನು ಮೋಚನೆ ಮಾಡಿಸಿದ್ದರಿಂದ (ದ್ಯುಭೂ ಮೊದಲಾವುಗಳಿಲ್ಲವೆಂದು ಸ್ಥಾಪನೆ ಮಾಡಿದ್ದರಿಂದ) (ಅಥವಾ ಅಲ್ಲಿರುವ ಪ್ರಜರಿಗೆ ಮಿಥ್ಯಾಜ್ಞಾನ ಪರಿಹಾರಕರಾದ್ದರಿಂದ), ದ್ಯುಭ್ವಾದೇಃ–ದ್ಯು, ಭೂಲೋಕಗಳ, ಜನಕಶ್ಚ–ಜನಕರೂ, ಅಭೂತ್–ಆಗಿರುವರು.

**ನೀಚೈಕ್ಯನಿರ್ಗುಣತ್ವಾದೇರ್ನಿರಾಕರಣತಃ ಪ್ರಭೋಃ ।**
**ವಿಷ್ಣೋಶ್ಚ ಜನಕೋಽಪ್ಯಾಸೀದ್ಭಯತ್ರಾತಾ ಪಿತಾ ಕಿಲ ॥ ೫೨೪ ॥**

ಪ್ರಭೋಃ–(ಸರ್ವೋತ್ತಮನಾದ) ಶ್ರೀಹರಿಗೆ, ನೀಚೈಕ್ಯ ನಿರ್ಗುಣತ್ವಾದೇಃ–ನೀಚರಿಂದ (ಜೀವರಿಂದ) ಐಕ್ಯದ ಮತ್ತು (ಗುಣಪೂರ್ಣನಿಗೆ) ಗುಣಶೂನ್ಯತ್ವದ, ನಿರಾಕರಣತಃ – ನಿರಾಕರಿಸುವುದರಿಂದ, ವಿಷ್ಣೋಃ – ವಿಷ್ಣುವಿನ, ಜನಕಶ್ಚ – ಜನಕನೇ, ಆಸೀತ್ ಕಿಲ–ಆದರಷ್ಟೆ;[1] ಭಯತ್ರಾತಾ–ಭಯದಿಂದ ರಕ್ಷಿಸುವವನು, ಪಿತಾ ಕಿಲ–ತಂದೆಯಷ್ಟೇ (ಜನಕನೇ ಸರಿ).

---

ನೀಚನಾದ ಜೀವನೊಂದಿಗೆ, ಗುಣಪೂರ್ಣನ ಐಕ್ಯವನ್ನು, ಗುಣಪೂರ್ಣನ ನಿರ್ಗುಣತ್ವವನ್ನು, ನಿರಾಕರಣಮಾಡಿ, ತನ್ನಿಮಿತ್ತಕವಾದ ಭಯ ಪರಿಹಾರಕ

---

[1] ಜನಿತಾ ಚೋಪನೇತಾ ಚ ಯಸ್ತು ವಿದ್ಯಾಂ ಪ್ರಯಚ್ಛತಿ। ಅನ್ನದಾತಾ ಭಯಾತ್ ತ್ರಾತಾ ಪಂಚೈತೇ ಪಿತರಃ ಸ್ಮೃತಾಃ।' ಎಂಬ ಪ್ರಮಾಣದಂತೆ ಭಯದಿಂದ ರಕ್ಷಣ ಮಾಡಿದವನೂ, ಪಿತನೇ (ಜನಕನೇ); ವಿಷ್ಣು ವಿಷಯಕವಾದ (ಅನ್ಯರ) ಭಯಪರಿಹಾರಕರು–ಶ್ರೀಮಧ್ವರಷ್ಟೆ; ಹೀಗೆಯೇ ಸತ್ಯವಾದ ದಿವಾದಿಲೋಕಗಳ ಭಯವನ್ನು–ಮಿಥ್ಯಾತ್ವ ಪ್ರಾಪ್ತ ಭಯವನ್ನು ಪರಿಹರಿಸಿರುವರು–ಆದ್ದರಿಂದ ಉಭಯ ಜನಕರೂ ಆಗಿರುವರು.

**ಸ್ವಸ್ಯ ಸ್ವಜಗತಶ್ಚೇತ್ಥಂ ಸ್ಥಾಪನಾತ್ ಪರಿತುಷ್ಯತಾ ।**
**ಸತ್ಯಲೋಕಾಧಿಪತ್ಯೇ ಚ ದತ್ತೇ ಬ್ರಹ್ಮಾಪಿ ಸೋಭವತ್ ॥ ೫೨೫ ॥**

ಹೀಗೆ ಅರ್ಥಮಾಡುವುದರಿಂದ, 'ಬ್ರಹ್ಮಾದೇವಾನಾಂ' ಎಂಬ ಉತ್ತರ ವಾಕ್ಯದ ಗತಿಯೇನೆಂದರೆ ಹೇಳುತ್ತಾರೆ :—

ಸ್ವಸ್ಯ–ತನ್ನ, ಸ್ವಜಗತಶ್ಚ–ತನ್ನ ಜಗತ್ತಿನ, ಇತ್ಥಂ–ಹೀಗೆ, ಸ್ಥಾಪನಾತ್–ಸ್ಥಿರಗೊಳಿಸುವುದರಿಂದ, (ಉಭಯಸ್ಥಾಪಕರಾದ್ದರಿಂದ), ಪರಿತುಷ್ಯತಾ–ಸಂತುಷ್ಟನಾದ ಶ್ರೀಹರಿಯಿಂದ, ಸತ್ಯಲೋಕಾಧಿಪತ್ಯೇ – ಸತ್ಯಲೋಕಾಧಿಪತ್ಯವು, ದತ್ತೇ–ಕೊಡಲ್ಪಡುತ್ತಿರಲು, ಸಃ–ಮಧ್ವರು, ಬ್ರಹ್ಮ ಅಪಿ–ಬ್ರಹ್ಮನೂ ಸಹ, ಅಭವತ್–ಆದರು (ಆದಂತೆ ಅಲ್ಲವೇ ? ಹಾಗೆಯೇ ಸರಿ).

**ವಿಪ್ರಾಣಾಮೃಷಿರಪ್ಯಾಸೀದ್ಯಸ್ತಾನಿತ್ಥಮಶಿಕ್ಷಯತ್ ।**
**ಸ ಏವ ಬಲದೇವೋಭೂತ್ ಯದ್ಬಲಾದ್ಬಲಿನಾಂ ಬಲಂ ॥ ೫೨೬ ॥**

ವಿಪ್ರಾಣಾಂ–ವಿಪ್ರರಿಗೆ, ಋಷಿಃ ಅಪಿ–ಉಪದೇಶಕರಾದ ಮಹರ್ಷಿಗಳೂ, ಆಸೀತ್–ಆದರು ; ಯಃ–ಯಾರು (ಶ್ರೀಮಧ್ವರು), ತಾನ್–ವಿಪ್ರರನ್ನು, ಇತ್ಥಂ–ಹೀಗೆ, ಅಶಿಕ್ಷಯತ್ – ಉಪದೇಶಿಸಿದರೋ (ಸನ್ಮಾರ್ಗದಲ್ಲಿಟ್ಟರೋ ಅವರೇ ಮಹರ್ಷಿಗಳು); ಸ ಏವ – ಆ ಮಧ್ವರೇ, ಯತ್–ಯಾವ ಕಾರಣದಿಂದ, ಬಲಾತ್–ತಮ್ಮ ಬಲದಿಂದ, ಬಲಿನಾಂ–ಬಲಿಷ್ಠರ, ಬಲಂ–ಬಲಿಷ್ಠರು (ಬಲಪ್ರದರು) (ಆದರೋ), ಬಲದೇವಃ – ಬಲದೇವನೂ (ಮಹಿಷ, ಶ್ಯೇನ, ಕುಠಾರಾದಿಗಳಿಗೂ ಬಲಪ್ರದನೆಂದು ಶ್ರುತಿಯು ಹೇಳುವುದರಿಂದ), ಅಭೂತ್–ಆದರು.

---

ರಾದ್ದರಿಂದ ಶ್ರೀಮಧ್ವರು, ಶ್ರೀವಿಷ್ಣುಪಿತರೇ ಸರಿ; ಭಯತ್ರಾತನೂ, ಪಂಚ ಪಿತರರಲ್ಲಿ ಒಬ್ಬ ಪಿತನಷ್ಟೆ (೫೨೪). ತನ್ನ ಅಸ್ತಿತ್ವವನ್ನು ಮತ್ತು ಜಗತ್ತಿನ ಮಿಥ್ಯಾತ್ವವನ್ನು ನಿರಾಕರಿಸಿ ಸತ್ಯತ್ವವನ್ನೂ ಸ್ಥಾಪಿಸುವುದರಿಂದ ಸಂತುಷ್ಟನಾದ ಶ್ರೀಹರಿಯು, ಶ್ರೀಮಧ್ವರಿಗೆ ಸತ್ಯಲೋಕಾಧಿಪತ್ಯವನ್ನೇ ಕರುಣಿಸುವನಾದ್ದರಿಂದ ಅವರೇ ಬ್ರಹ್ಮದೇವನೂ ಆದರು (ಭಾವಿಬ್ರಹ್ಮನು) (೫೨೫). ಶ್ರುತಿಯು, ಮಹಿಷ, ಶ್ಯೇನ, ಕುಠಾರಾದಿಗಳ ಬಲಕ್ಕೂ ಬಲಪ್ರದನೆಂದು ಹೇಳಿ, ಬಲಿಷ್ಠರಿಗೂ ಬಲಪ್ರದನೆಂದು ವಾಯುದೇವನನ್ನೇ ಬಲದೇವನೆಂದು ಸಾಧಿಸಿದೆ; ವಿಪ್ರರಿಗೆ ಈ ಪ್ರಕಾರವಾದ ಸದುಪದೇಶ ಮಾಡಿದ್ದರಿಂದ ವಿಪ್ರಮಧ್ಯದಲ್ಲಿ ಮಹರ್ಷಿಗಳೇ

**ಅತ್ಯೇತಿ ಮೋಕ್ಷಪದವೀರ್ಯನ್ಮೋಕ್ಷಾಧ್ವಸು ಷೋಡಶಃ ।**
**ಕಾಲಚಕ್ರಂ ಚ ಸೇತ್ಯೇತಿ ಯತಃ ಸರ್ವೋಚ್ಚಲೋಕಗಃ ॥**
**ಸ ರೇಭನ್ ಮೇಘಗಂಭೀರನಾದೀ ಯ(ತ್ರ)ತಿ)ಗರ್ಜತಿ ॥ ೫೨೭ ॥**

ಯತ್–ಯಾವ ಕಾರಣದಿಂದ, ಮೋಕ್ಷಾಧ್ವಸು – ಮೋಕ್ಷಮಾರ್ಗಸ್ಥ ಲೋಕಗಳಲ್ಲಿ, ಷೋಡಶಃ–ಹದಿನಾರನೇ [1] ಮುಖ್ಯವಾಯುಲೋಕಾಧಿಪತಿಯಾಗಿ ರುವನೋ, ಮತ್ತು ಮೋಕ್ಷಪದವೀಃ–ಮೋಕ್ಷಸ್ಥಾನಗಳನ್ನು (ಮಾರ್ಗಸ್ಥಲೋಕ ಗಳನ್ನು ), ಅತ್ಯೇತಿ–ಅತಿಕ್ರಮಿಸಿ (ಮೀರಿ–ಅವುಗಳ ಮೇಲೆ ಇರುತ್ತ), ಕಾಲ ಚಕ್ರಂ ಚ –(ಕಾಲಪ್ರವರ್ತಕ ಜ್ಯೋತಿಶ್ಚಕ್ರವನ್ನು), ಸಾ – ಆ ಪದವಿಯು ( ಮುಖ್ಯವಾಯುಲೋಕಾಧಿಪತ್ಯವು ), ಅತ್ಯೇತಿ – ಅತಿಕ್ರಮಿಸಿರುತ್ತದೆಯೋ, (ಜ್ಯೋತಿಗಳನ್ನು ಅತಿಕ್ರಮಿಸಿದ ಜ್ಯೋತಿಯಾಗಿರುವನೋ), (ಮತ್ತು)ಯತಃ– ಯಾವ ಕಾರಣದಿಂದ, ಸರ್ವಲೊಕೋಚ್ಚಲೋಕಗಃ–ಸರ್ವಲೋಕಗಳ ಮೇಲಿನ

---

(ಶ್ರೀಮಧ್ವರು) ಆಗಿರುವರು (೫೨೬). ಮೋಕ್ಷಮಾರ್ಗದಲ್ಲಿ ಉತ್ಕ್ರಮಣ ಹೊಂದಿದ ಬ್ರಹ್ಮಜ್ಞಾನಿಗೆ ದೊರೆಯುವ ಲೋಕಗಳಲ್ಲಿ, ೧೬ನೇ ಲೋಕಾಧಿಪತಿ ಯಾಗಿದ್ದಾನೆ,–ಮುಖ್ಯ ವಾಯುದೇವನು ; ಎಲ್ಲ ಜ್ಯೋತಿಶ್ಚಕ್ರಗಳ ಮೇಲೆ (ಅತಿಕ್ರಮಿಸಿ) ಸ್ಥಿತನಾಗಿದ್ದಾನೆ ; ಆತನ ಲೋಕವೇ ಎಲ್ಲಕ್ಕಿಂತ ಮೇಲಿನದು ;

---

[1] ' ಉತ್ಕ್ರಾಂತಸ್ತು ಶರೀರಾತ್ ಸ್ವಾತ್ ಗಚ್ಛತ್ಯರ್ಚಿಷಮೇವ ತು । ತತೋ- ತಿವಾಯೋಃ ಪುತ್ರಂ ನಾಮ್ನಾತಿವಾಹಿಕಃ । ತತೋಽಹಃ ಪೂರ್ವಪಕ್ಷಂ ಚಾಪ್ಯುದ ಕ್ಸಂವತ್ಸರಂ ತಥಾ । ತಟಿತಂ ವರುಣಂ ಚೈವ ಪ್ರಜಾಪಂ ಸೂರ್ಯಮೇವ ಚ । ಸೋಮಂ ವೈಶ್ವಾನರಂ ಚೇಂದ್ರಂ ಧ್ರುವಂ ದೇವೀಂ ದಿವಂ ತಥಾ । ತತೋ ವಾಯುಪರಂ ಪ್ರಾಪ್ಯ ತೇನೈತಿ ಪುರುಷೋತ್ತಮಂ ', ಎಂಬ ಬ್ರಹ್ಮತರ್ಕವಾಕ್ಯವು, ವಾಯುಲೋಕವು ೧೬ನೇ ಲೋಕವೆಂದು ಹೇಳಲಾಗಿದೆ ; ಇದರ ಭಾವಾರ್ಥವು ಹೀಗಿದೆ: —ಚರಮದೇಹದಿಂದ ಬ್ರಹ್ಮ ಜ್ಞಾನಿಯು, ಬ್ರಹ್ಮನಾಡಿಯಿಂದ ಹೊರಟು, ಕ್ರಮವಾಗಿ, ಅರ್ಚಿಷ, ವಾಯುಪುತ್ರ, ಆತಿವಾಹಕ ವಾಯು, ಅಹರಭಿಮಾನಿ, ಶುಕ್ಲಪಕ್ಷಾಭಿಮಾನಿ, ಉತ್ತರಾಯಣಾಭಿಮಾನಿ, ಸಂವತ್ಸರಾಭಿಮಾನಿ, ತಟಿದಭಿಮಾನಿ, ವರುಣ, ಪ್ರಜಾಪ, ಸೂರ್ಯ, ಸೋಮ, ವೈಶ್ವಾನರ, ಇಂದ್ರ, ಧ್ರುವ, ಭಾರತೀ, ದೇವತೆಗಳಿಂದ ಅಧಿಷ್ಠಿತವಾದ ೧೫ ಲೋಕಗಳ ನಂತರ, ೧೬ನೇ ಮುಖ್ಯವಾಯುವಿನ ಲೋಕವನ್ನು ಹೊಂದಿ, ಅಲ್ಲಿಂದ (ಮುಖ್ಯವಾಯುವಿನಿಂದ) ಪುರುಷೋತ್ತಮನನ್ನು ಹೊಂದುವನು.

ಲೋಕದಲ್ಲಿರುವನೋ, ಸಃ–ವಾಯುವು, ಯತ್–ಯಾವ ಕಾರಣದಿಂದ, ಮೇಘ ಗಂಭೀರನಾದೀ – ಮೇಘಗರ್ಜನೆಯಂತೆ [1] ಗಂಭೀರವಾದ ನಾದವುಳ್ಳವನಾಗಿ, ರೇಭನ್ – ನಾದಮಾಡುತ್ತ, ಪ್ರತಿಗರ್ಜತಿ – ಧ್ವನಿಮಾಡುತ್ತಿರುವನೋ (ಈ ಕಾರಣಗಳಿಂದ, ಪ್ರಸಕ್ತ ಶ್ರುತಿಪ್ರತಿಪಾದ್ಯನೆಂದು ಸಿದ್ಧವಾಗುತ್ತದೆ).

**ಏವಂ ಪ್ರತ್ಯುಕ್ತಿಸದ್ರತ್ನಮಾಲಾಲಂಕುರುತೇ ಗುರುಂ ।**
**ಇತಿ ವಾಕ್ಯಸಂದರ್ಭಸ್ಯಾರ್ಥೋ ಯೌಕ್ತೋ ಭವಿಷ್ಯತಿ ॥ ೫೨೮ ॥**

ಏವಂ–ಹೀಗೆ, ಪ್ರತ್ಯುಕ್ತ ಸದ್ರತ್ನಮಾಲಾ–(ವಾಯುದೇವನ ವಿಷಯಕ್ಕೆ) ಶ್ರುತ್ಯುಕ್ತ ಮಹಿಮಾರೂಪದ ರತ್ನಮಾಲೆಯು, ಅಲಂಕುರುತೇ ಗುರುಂ–ಶ್ರೀಮಧ್ವ ಗುರುಗಳನ್ನು ಅಲಂಕರಿಸುತ್ತದೆ; ಇತಿ–ಹೀಗೆ, ವಾಕ್ಯ ಸಂದರ್ಭಸ್ಯ ಶ್ರುತಿ ವಾಕ್ಯಗಳ ಸಂದರ್ಭಾನುಸಾರವಾದ, ಅರ್ಥಃ–ಅರ್ಥವು, ಯೌಕ್ತಃ–ಯುಕ್ತಿಯುಕ್ತವೂ (ಉಪಪನ್ನವೂ), ಭವಿಷ್ಯತಿ–ಆಗುತ್ತದೆ.

---

ಮೇಘ ಗಂಭೀರ ಧ್ವನಿಯಿಂದ ಸದಾ ವಾಯುದೇವನು, ವಿಷ್ಣು ಸರ್ವೋತ್ತಮತ್ವವನ್ನು ಘೋಷಿಸುತ್ತಾನೆ; ಈ ಎಲ್ಲ ಕಾರಣಗಳನ್ನು ಶ್ರುತಿಯೇ ನಿರೂಪಿಸಿ, ಆತನ ಉತ್ತಮತ್ವವನ್ನು ಸಾರುತ್ತದೆ (೫೨೭). ಹೀಗೆ ಶ್ರುತ್ಯುಕ್ತ ವಾಯುದೇವನ ಮಹಿಮೆಗಳೆಂಬ ರತ್ನಮಾಲೆಯು ಶ್ರೀಮಧ್ವರೆಂಬ ಲೋಕ ಗುರುವನ್ನು ಅಲಂಕರಿಸುತ್ತದೆ; ಈ ಎಲ್ಲ ಮಹಿಮೆಗಳೂ, ಶ್ರುತಿವಾಕ್ಯಗಳ ಸಂದರ್ಭೋಚಿತವಾದ ಅರ್ಥದಿಂದಲೇ ಸಿದ್ಧವಾಗುತ್ತವೆ ; ಮತ್ತು ಅವು ಯುಕ್ತಿ ಯುಕ್ತವೂ

---

[1] ಸರ್ವಘೋಷಗಳೂ ವಿಷ್ಣುವಾಚಕಗಳೆಂದು ಸ್ಥಾಪಿಸುವ ಐತರೇಯೋಪನಿಷತ್ತಿನ ಅಧ್ಯಾಯ ೨, ಖಂಡ ೨ ರಲ್ಲಿ (ಭಾಷ್ಯದಲ್ಲಿ ಬೃಹತ್ಸಂಹಿತೆ ಎಂಬ ಗ್ರಂಥವನ್ನು ಪ್ರಮಾಣೀಕರಿಸಿ) ಸಕಲ ಧ್ವನ್ಯಾತ್ಮಕಶಬ್ದಗಳು ವಿಷ್ಣು ಮಹಿಮೆಗಳನ್ನೇ ಕೊಂಡಾಡುತ್ತವೆಂದು ಸಾಧಿಸಲಾಗಿದೆ; ಅಲ್ಲಿ ಮೇಘಗಳಲ್ಲಿರುವ ವಾಯುದೇವನು, 'ಓಂ' ಎಂಬ ವರ್ಣವ್ಯಂಜಕವಾದ ಅದರ ಧ್ವನಿಯಿಂದ, ಸರ್ವಾಧಿಕ ಉತ್ತಮತ್ವವೆಂಬರ್ಥವನ್ನು ತಿಳಿಸುವನೆಂದು ಹೇಳಲಾಗಿದೆ; ಇದರಿಂದ, ಮೇಘಘೋಷವು ತಮ್ಮ ಪ್ರಬಲನಾದದಿಂದ, ವಿಷ್ಣುವೇ ಸರ್ವೋತ್ತಮನೆಂದು ಸಾರುತ್ತವೆಂದು ಸಿದ್ಧವಾಗುತ್ತದೆ; ಅದರಿಂದ ಮೇಘಧ್ವನಿಯು, ವಾಯುಕೃತವೆಂದೂ ಅದು ವಿಷ್ಣುವಿನ ಸರ್ವೋತ್ತಮತ್ವವನ್ನು ಸಾರುತ್ತದೆಂದೂ ತಿಳಿದುಬರುತ್ತದೆ.

**ಪವಮಾನಃ ಪೂಯಮಾನೋ ವಾಯುಃ ಸರ್ವಸ್ಯ ಸಂಮತಃ ।**
**ತತ್ಸೂಕ್ತೇ ಸಹ ತೇನೋಕ್ತಃ ಸೋಮೋಽನ್ಯೋ ನ ಪದೇಪದೇ ।**
**ಸಮಾನಾಧಿಕೃತತ್ವಂ ಯದ್ವಸ್ತ್ವೈಕ್ಯಸ್ಯ ಪ್ರಮಾಪಕಂ ॥ ೫೨೯ ॥**

ಪವಮಾನಃ-ಪವಮಾನನು ಪೂಯಮಾನಃ-ಪವಿತ್ರೀಕರಿಸುವ, ವಾಯುಃ-ವಾಯುವು, (ಎಂಬುದು), ಸರ್ವಸ್ಯ-ಸರ್ವರಿಗೂ, ಸಂಮತಃ-ಒಪ್ಪಿಗೆಯಾದುದೇ (ಆಗಿದೆ); ತತ್ಸೂಕ್ತೇ-ಪವಮಾನ ಸೂಕ್ತದಲ್ಲಿ, ತೇನ ಸಹ-ಪವಮಾನನೊಡನೆ, ಉಕ್ತಃ-ಹೇಳಲ್ಪಡುವ ಸೋಮಃ-ಸೋಮನೆಂಬುವನು, ಅನ್ಯೋ ನ-ವಾಯು ಭಿನ್ನನು ಅಲ್ಲ; ಯತ್ (ಯಸ್ಮಾತ್)-ಏಕೆಂದರೆ, ಪದೇ ಪದೇ-ಪ್ರತಿ ಪದದಲ್ಲಿ, ಸಮಾನಾಧಿಕೃತತ್ವಂ-ಸಮಾನಾಧಿಕರಣವು (ಏಕವಿಭಕ್ತಿಕವಾಗಿ ಹೇಳುವುದು), ವಸ್ತ್ವೈಕ್ಯಸ್ಯ-ಒಂದೇ ವಸ್ತುವು (ಅದರ ಬೋಧ್ಯವಾದುದೆಂಬುದರ), ಪ್ರಮಾಪಕಂ - ಅದು (ಸಮಾನಾಧಿಕರಣವು) ಪ್ರಮಾಣೀಕರಿಸುತ್ತದೆ (ಆ ಐಕ್ಯದ ಪ್ರಮಾಣವಾಗಿರುತ್ತದೆ).

**ಪ್ರಾವೀವಿಷದಿತಿ ಶ್ರುತ್ಯಾಪ್ಯೇಷೋಽರ್ಥಃ ಸ್ಪಷ್ಟಮೀರ್ಯತೇ ।**
**ಗಿರಃ ಸಿಂಧುಃ ಸ ಮಧ್ವಾಖ್ಯೋ ಮುನೀಷಾಶ್ಚ ಮತೋಽರಮಾಃ ॥೫೩೦॥**
**ವಾಚಶ್ಚೋರ್ಮಿರ್ನೋರ್ಮಿಮಿವ ಸೋಮಃ ಸೋಮಾಭಿಮಾನವಾನ್**
**ಪವಮಾನೋ ಮುಖ್ಯವಾಯುರವತೀರ್ಣೋ ಮಹೀತಲೇ ॥೫೩೧॥**

---

ಆಗಿರುತ್ತವೆ (೫೨೮). ಪವಮಾನನೆಂಬ ನಾಮವು ಪವಿತ್ರೀಕರಣ ಶಕ್ತಿಯಿಂದಲೇ ಆಗಿದೆ; ಪವಮಾನನೇ ವಾಯುವೆಂದು ಸರ್ವಸಂಮತವಾಗಿದೆ; ಪವಮಾನ ಸೂಕ್ತದಲ್ಲಿ ಆತನೊಂದಿಗೇ ಹೇಳಲ್ಪಡುವ ಸೋಮನೂ ವಾಯುವೇ ಆಗಿರುವನು, ವಾಯುಭಿನ್ನನಾದ ಮತ್ತೊಬ್ಬನಲ್ಲ; ಏಕೆಂದರೆ, ಸೂಕ್ತದ ಪ್ರತಿಪದದಲ್ಲಿ, ಏಕ ವಿಭಕ್ತಿಕ ಪದದಿಂದ ಇಬ್ಬರೂ (ಪವಮಾನ ಸೋಮರೆಂಬ ಇಬ್ಬರೂ) ಹೇಳಲ್ಪಟ್ಟಿರುವರು; ಸಮಾನಾಧಿಕರಣತ್ವವು ಐಕ್ಯವನ್ನು ಸ್ಥಾಪಿಸುವ ಪ್ರಮಾಣ ವಾಗಿದೆ (೫೨೯). 'ಪ್ರಾವೀವಿಷತ್' ಇತ್ಯಾದಿ ಶ್ರುತಿಯು, ಶ್ರೀಮಧ್ವರೇ ಜ್ಞಾನೋಪದೇಶಕ ಜಗದ್ಗುರುಗಳೆಂಬುದನ್ನು ಸ್ಪಷ್ಟವಾಗಿ ಪ್ರತಿಪಾದಿಸುತ್ತದೆ;

ಪ್ರಾವೀವಿಶದ್ವಿಶೇಷೇಣ ಪ್ರಾವರ್ತಯದಿತಿ ಸ್ಫುಟಂ ।
ಅರ್ಥಃ ಪ್ರತೀಯತೇ ಸರ್ವೈಃ ಪ್ರವೃತ್ತ್ಯರ್ಥೋ ಯತೋ ವಿಶಿಃ
|| ೫೩೨ ||

ಗೋಷು ವಿದ್ಯಾಸು ಸರ್ವಾಸು ಯಾನೀಮಾನ್ಯವರಾಣಿ ಚ ।
ಜನ್ಯೈಃ ಸರ್ವೈಃ ಸಬಹುಶೋ ವೃತತ್ವಾದ್ವೃಜನಾನಿ ಚ || ೫೩೩ ||

ರಾಜಸಾನಿ ಕುಶಾಸ್ತ್ರಾಣಿ ತಾಮಸಾನ್ಯಪಿ ಸರ್ವಶಃ ।
ಜಾನಂಸ್ತದರ್ಥದೋಷಂ ಚ ಪಶ್ಯನ್ ಸುಜನಚೇತಸಾಂ || ೫೩೪ ||

ಶ್ರೀಮಧ್ವರು, ವಾಯುದೇವನ ಮೂರನೇ ಅವತಾರವೆಂಬಲ್ಲಿ ವಾದ ವಿವಾದಗಳನ್ನು ಪರಿಹರಿಸಲು, ಮತ್ತೆಯೂ ಶ್ರುತಿ ಪ್ರಮಾಣಗಳನ್ನೇ ತೋರಿಸುತ್ತಾರೆ :—[1]

ಪ್ರಾವೀವಿಶತ್ – (ಸಜ್ಜನರ ಹೃದಯದಲ್ಲಿ) ಪ್ರವೇಶಗೊಳಿಸಿದನು, ಇತಿ ಶ್ರುತ್ಯಾ – ಎಂಬ ಶ್ರುತಿಯಿಂದ, ಅಪಿ – ಸಹ, ಏಷಃ ಅರ್ಥಃ – ಈ ಅರ್ಥವು

---

ಆ ಶ್ರುತಿಯಲ್ಲಿ ಶ್ರೀಮಧ್ವರೆಂಬ ಸಮುದ್ರದ ತರಂಗಗಳೇ ಅವರ ಮುಖದಿಂದ ನಿರಂತರವಾಗಿ ಹೊರ ಹೊರಡುವ ಉಪದೇಶ ವಾಕ್ಯಗಳೆಂದು 'ಗಿರಃ' ಎಂಬ ಶಬ್ದವು ಸೂಚಿಸುತ್ತದೆ ; ಮನೀಷಾಃ ಎಂಬುದು ಸಜ್ಜನರ ಮನಸ್ಸಿಗೆ ಪ್ರಿಯವಾದ ಅಭಿಪ್ರಾಯಗಳೆಂಬುದನ್ನು ಹೇಳುತ್ತದೆ ; ಸೋಮಾಭಿಮಾನಿಯಾದ ಇವರನ್ನು ಸೋಮನಾಮಕನೆಂದೂ ಹೇಳಲಾಗಿದೆ (ಸೋಮಲತಾಭಿಮಾನಿ ದೇವತೆಯನ್ನು ಸೋಮನೆಂದೇ ಕರೆಯುವಂತೆ, ಯಜ್ಞಾದಿಗಳ ಮುಖ್ಯಾಭಿಮಾನಿಯಾದ್ದರಿಂದ ಇವರನ್ನು ಸೋಮನೆಂದು ಕರೆದಿರುತ್ತದೆಂದೂ ತಿಳಿಯಬಹುದಾಗಿದೆ) ; ಪವಮಾನನೆಂಬ ಅನ್ವರ್ಥನಾಮಕ ಮುಖ್ಯವಾಯುವು, ಭೂಮಿಯಲ್ಲಿ ಅವತರಿಸಿ, ತನ್ನ

---

1 'ಪ್ರವೀವಿಶದ್ವಾಚ ಊರ್ಮಿನ ಸಿಂಧುರ್ಗಿರಃ ಸೋಮಃ ಪವಮಾನೋ ಮನೀಷಾಃ । ಅಂತಃ ಪಶ್ಯನ್ವೃಜನೇಮಾವರಾಣ್ಯಾತಿಷ್ಠತಿ ವೃಷಭೋಗೋಷು ಜಾನನ್ನಿತಿ' ಶ್ರುತಿಯನ್ನು ಈ ಶ್ಲೋಕಗಳಲ್ಲಿ ಅರ್ಥತಃ ಸಂಗ್ರಹ ಮಾಡಿದ್ದಾರೆ ; ಈ ಶ್ರುತ್ಯರ್ಥವು ಹೀಗಿದೆ :—ಗಿರಃ – ಪ್ರತಿಕ್ಷಣದಲ್ಲಿ ಮುಖದಿಂದ ಹೊರಡುವ ತರಂಗ ಸದೃಶವಾಕ್ಯ ಸಮುದಾಯದ (ಜಾತ್ಯೇಕವಚನಾದ್ದರಿಂದ ಏಕವಚನವಿದೆ) ; ಸಿಂಧುರ್ನ–ಸಮುದ್ರದಂತೆ (ಸದ್ಯೋರಚನಪಟವಮಥಾಪಾದ್ಯವಿದ್ಯಾಸಮುದ್ರ ಎಂಬ ವಾಯುಸ್ತುತಿವಚನದಿಂದ),

(ಶ್ರೀಮಧ್ವರೂಪೀ ವಾಯುದೇವನು ಸದ್ವಿದ್ಯಾಪ್ರಾಪಕರೆಂಬರ್ಥವು), ಸ್ಪಷ್ಟಂ— ಸ್ಪಷ್ಟವಾಗಿ (ಸಂಶಯವಿಲ್ಲದೇ), ಈರ್ಯತೇ—ಹೇಳಲ್ಪಡುತ್ತದೆ; ಗಿರಃ—ಗಿರಃ ಎಂಬ ಶಬ್ದವು, (ವಾಕ್ಯತರಂಗಗಳುಳ್ಳ), ಸಿಂಧುಃ—ಸಮುದ್ರವು, ಸಃ ಮಧ್ವಾಖ್ಯಃ—ಆ ಮಧ್ವರೂಪದ ವಾಯುದೇವನೇ, ಮನಿಷಾಃ ಚ—ಮನಿಷಾಃ ಎಂಬುದು, ಮತೋ ರಮಾಃ—ಪ್ರಿಯವಾದ ಅಭಿಪ್ರಾಯಗಳೆಂಬರ್ಥವನ್ನು (ಹೇಳುತ್ತದೆ); ವಾಚಶ್ಚ—

---

ಜ್ಞಾನಕಾರ್ಯದಿಂದ ಪ್ರಸಿದ್ಧನಾಗಿರುವನು; 'ವಿಷಿ' ಎಂಬ ಧಾತುವು ಪ್ರವರ್ತಿಸು, ಎಂಬರ್ಥದಲ್ಲಿರುವುದರಿಂದ, ಸಜ್ಜನರನ್ನು ವಿಶೇಷವಾಗಿ, ಸದ್ವಿದ್ಯೆಗಳಲ್ಲಿ ಪ್ರವರ್ತಿಸಿದ ನೆಂಬರ್ಥವನ್ನು 'ಪ್ರಾವೀವಿಷತ್' ಎಂಬ ಶಬ್ದವು ಹೇಳುತ್ತದೆ; ಜಗತ್ತಿನಲ್ಲಿ, ಬಹಳವಾಗಿ ಬಹುವಿದ್ಯೆಗಳು ಪ್ರಸಾರದಲ್ಲಿರುತ್ತವೆ; ಅವುಗಳಲ್ಲಿ ಮಧ್ಯಮ,

---

ಸೋಮಃ – ಸೋಮನಾಮಕನಾದ, ಪವಮಾನಃ – ಮಧ್ವರೂಪೀ ವಾಯುದೇವನು, ಮನೀಷಾಃ—ವೇದಬ್ರಹ್ಮಸೂತ್ರಾದಿ ಮನಸ್ಸಿಗೆ ಇಷ್ಟವಾದ (ಪ್ರಿಯಗಳಾದ) ವಾಚಃ—ಬ್ರಹ್ಮ ಸೂತ್ರಾದಿ ವಾಕ್ಯಗಳು, ಊರ್ಮಿಣೋ – ತರಂಗಗಳಂತೆ, ಪ್ರಾವೀವಿಷತ್ – ಚೆನ್ನಾಗಿ ಪ್ರವೇಶಗೊಳಿಸಿದನು; (ಸಕಲಸಜ್ಜನರಲ್ಲಿ ಪ್ರವರ್ತಿಸಿದನು) (ವಿಷ ಪ್ರವರ್ತನ ಇತಿ ಧಾತೋಃ) ಹೀಗೆ ಸ್ವಮುಖದಿಂದ ಮಧ್ವಾಖ್ಯ ಸಮುದ್ರದಿಂದ ತರಂಗಗಳಾಗಿ ಸೋಮರಸವು ಹರಿಯುತ್ತಿರುವುದೆಂಬುದನ್ನು (ಅಮೃತಕಿರಣಗಳನ್ನು ಪ್ರವಿಸುವ ಸೋಮನೇ ಶಕ್ತನಾದ್ದರಿಂದ ಸೋಮಶಬ್ದವೂ ಇದನ್ನು ಸೂಚಿಸುತ್ತದೆ); (ಭಗವದ್ದತ್ತಸಾಮರ್ಥ್ಯದಿಂದ ವಾಕ್ ತರಂಗಗಳು ಉದ್ಯೋದಕವೆಂದು ಭಾವ); (ಮನಿಷಾ ಎಂಬುದು ಅನಿಷ್ಟವಾದ—ಅಪ್ರಿಯ ಗಳಾದ ದುಃಶಾಸ್ತ್ರ ವಾಕ್ಯಗಳ ಅಭಾವವನ್ನು ಸೂಚಿಸುತ್ತದೆ); (ತ್ವದ್ವಾಖ್ಯಾಸಿಂಹನಾದೇ ಸಪದಿ ದದೃಶಿರೇ ಮಾಯಿಗೋಮಾಯವಃ, ವೈದಿಕಾದ್ಯಾ ಹಿ ವಿದ್ಯಾಃ ಸೇವಂತೇ ಇತ್ಯಾದಿ ವಾಯುಸ್ತುತಿವಾಕ್ಯಗಳು) ಗೋಷು—ವಿದ್ಯೆಗಳಲ್ಲಿ; ವೃಜನಾ—ಅವೃತರಾದ ಸಜ್ಜನರಿಂದ ಕೂಡಿದ, ಸಭೆಗಳಲ್ಲಿ ಈ ಮಧ್ವರೂಪವು ಪ್ರಚಾರಮಾಡಿತು; ಇಮಾ (ನಿ) ಅವರಾಣಿ— ಈ ಅನುತ್ತಮಗಳಾದ (ಮಧ್ವಮಾನ್ಯಧಮಾನಿ ಚ—ಪುರಾಣಶಾಸ್ತ್ರಾದಿಗಳನ್ನು) ಗೋಷು— ವಿದ್ಯೆಗಳಲ್ಲಿ (ಅವರತ್ವವೆಂಬುದರಿಂದ ದುರ್ವಿದ್ಯಾತ್ವವನ್ನು), ಅಂತಃ ಪಶ್ಯನ್—ನಿರ್ಣಯಾ ತ್ಮಕವಾಗಿ ತಿಳಿದು, (ಪರಮಾತ್ಮನನ್ನು ಚಿಂತಿಸಿ) ಜಾನನ್—ಯೋಗ್ಯೋಪದೇಶದ ವಿವೇಕ ವುಳ್ಳವರಾಗಿ, ವೃಷಭಃ – ಶ್ರೇಷ್ಠರಾದ ಶ್ರೀಮಧ್ವರು (ಉಪದೇಶಕ ಅಧಿಕಾರಿಗಳಲ್ಲಿ ಶ್ರೇಷ್ಠರಾದ ಪವಮಾನನು), ಆತಿಷ್ಠತಿ—(ಎಲ್ಲ ದೃಷ್ಟಿಯಿಂದ) ಅವರವರ ಶುಭ ಬುದ್ಧಿ ಪ್ರೇರಕತ್ವೇನ ಇರುತ್ತಾರೆ) (ಮನಿಷಾ, ಗಿರಃ ಎಂಬ ಪದಗಳೂ ಪೂರ್ವೋತ್ತರ ವಿರೋಧ ಪರಿಹಾರಕವಾದ ಅಭಿಪ್ರಾಯವನ್ನು ಸೂಚಿಸುತ್ತವೆ—ಸದ್ವಿದ್ಯಾಪ್ರೇರಕರೂ ಪ್ರಾಪಕರೂ ಎಂದು ಶ್ರುತಿಯೂ ಸಮರ್ಥಿಸುತ್ತದೆ).

(ಶ್ರೀಮಧ್ವದೇವನ) ವಾಕ್ಯಗಳಾದರೂ, ಊರ್ಮಿನೋರ್ಮಿವ–(ಊರ್ಮಿನ–ತರಂಗಗಳಂತೆ) ಅಲೆಗಳಂತಿರುವ (ಎಂಬರ್ಥವನ್ನು), ಸೋಮಃ–ಸೋಮನು (ಎಂಬುದು) ಸೋಮಾಭಿಮಾನವಾನ್–(ಸೋಮಲತೆಯ ಅಭಿಮಾನಿಯಾದ ವನನ್ನು, ಸೋಮನೆಂದೇ ಕರೆಯುವಂತೆ), (ಇದರಿಂದ ಕರ್ಮಮೀಮಾಂಸಾತ್ಮಕ ವಾಕ್ಯಗಳ ಪ್ರವರ್ತಕರೆಂದೂ ಸೂಚಿಸಿದಂತಾಗುತ್ತದೆ) ಸೋಮಾಭಿಮಾನಿಗಳಾದ್ದರಿಂದ ಸೋಮನಾಮಕರೂ, (ಆದ) ಪವಮಾನಃ ಮುಖ್ಯವಾಯುಃ–ಪವಮಾನ ನಾಮಕ ಮುಖ್ಯವಾಯುವು, ಮಹೀತಲೇ–ಮಹೀತಲದಲ್ಲಿ (ಭೂಮಿಯಲ್ಲಿ), ಅವತೀರ್ಣಃ – ಅವತರಿಸಿರುವನು ; ಪ್ರವೀವಿಷತ್ – ಪ್ರವೀವಿಷತ್ ಎಂದರೆ, ವಿಶೇಷೇಣ–ವಿಶೇಷವಾಗಿ (ಯೋಗ್ಯತೆಯನ್ನು ತಿಳಿದು ಯೋಗ್ಯತಾನುಸಾರವಾಗಿ ಪ್ರಾವರ್ತಯತ್–ಪ್ರವರ್ತಿಸಿದನು, ಇತಿ–ಎಂದು, ಸ್ಫುಟಂ–ಸ್ಫುಟವಾದ, ಅರ್ಥಃ–ಅರ್ಥವು, ಪ್ರತೀಯತೇ–ತೋರುತ್ತದೆ (ತಿಳಿಯಬರುತ್ತದೆ) ಯತಃ–ಏಕೆಂದರೆ, ವಿಷಿಃ–'ವಿಷಿ' ಎಂಬ ಧಾತುವು, ಪ್ರವೃತ್ತ್ಯರ್ಥಃ–ಪ್ರವರ್ತಿಸುವುದೆಂಬ ಅರ್ಥವುಳ್ಳದ್ದು ; ಸರ್ವಾಸು ಗೋಷು ವಿದ್ಯಾಸು–ವಾಕ್ಸಮುದಾಯಗಳಾದ ಸರ್ವವಿದ್ಯೆಗಳಲ್ಲಿ, ಯಾನಿ ಇಮಾನಿ ಅವರಾಣಿ ಚ–ಶ್ರೇಷ್ಠಗಳಲ್ಲದ (ಅವರ)ಗಳಾದ (ಇತಿಹಾಸ ಪುರಾಣಗಳೋ), ವೃಜನಾನಿ ಚ–ವೃಜನಾನಿ ಎಂಬುದರ ಅರ್ಥವು, ಸರ್ವೈಃ ಜನೈಃ–ಸರ್ವಜನರಿಂದ, ಸಬಹುಶಃ–ಬಹಳವಾಗಿ, ವೃತತ್ವಾತ್–ವ್ಯಾಪಿಸಿರುವುದರಿಂದ, ರಾಜಸಾನಿ–ಆ ರಾಜಸಗಳೂ, ಕುಶಾಸ್ತ್ರಾಣಿ–ದುಃಶಾಸ್ತ್ರಗಳೂ, ತಾಮಸಾನ್ಯಪಿ–ತಾಮಸಗಳೂ ಆದ, ಸರ್ವಶಃ–ಎಲ್ಲವೂ (ಇತಿಹಾಸ ಪುರಾಣಗಳೂ, ದುಃಶಾಸ್ತ್ರಗಳೂ ಅಧಿಕವಾಗಿ ಜನರಲ್ಲಿ ಪ್ರಚಾರವಾಗಿರುವುದನ್ನು) ಜಾನನ್–ತಿಳಿದವನಾಗಿ, ತದರ್ಥದೋಷಂ–ಅವುಗಳ ಅರ್ಥದೋಷಗಳನ್ನು, ಪಶ್ಯನ್–ಕಂಡು, (ಭಗವಚ್ಚಿಂತನೆಯಿಂದ), ಸುಜನಚೇತಸಾಂ–ಸಜ್ಜನರ ಮನಸ್ಸುಗಳಿಗೆ, (ಪ್ರಾವೀವಿಷತ್–ವಿಶೇಷವಾಗಿ ಪ್ರವರ್ತಿಸಿದನು).

---

ಅಧಮಗಳೂ ಇವೆ ; ಬಹುಜನರಲ್ಲಿ ಇವು ವ್ಯಾಪಿಸಿರುವುದರಿಂದ, 'ವೃಜನಾನಿ' ಎಂದೂ ಕರೆಯಲ್ಪಡುತ್ತವೆ ; ರಾಜಸಗಳಾದ ಮತ್ತು ತಾಮಸಗಳಾದ ಇತಿಹಾಸ ಪುರಾಣಾದಿ ಶಾಸ್ತ್ರಗಳೂ ಇವೆ ; ಈ ವಿದ್ಯೆಗಳ ಅರ್ಥದೋಷವನ್ನು ತಿಳಿದು, ಸಜ್ಜನರ ಮನಸ್ಸಿಗೆ ಪ್ರಿಯಕರವಾದ ಶಾಸ್ತ್ರಾದಿಗಳನ್ನು, ಭಗವದ್ಧ್ಯಾನಪರನಾದ

**ಅಂತರಾತಿಷ್ಠತಿ ಹರಿಂ ಪಶ್ಯಂಶ್ಚ ವೃಷಭಃ ಕಿಲ ।**
**ವಾಗೂರ್ಜಿತಾ ವಾಕ್‌ಪ್ರದತ್ವಂ ಬುದ್ಧಿದತ್ವಾದಯೋ ಗುಣಾಃ** ॥ ೫೩೫ ॥
**ಸಾರಾಸಾರವಿವೇಕಶ್ಚ ಯದ್ಗುರುತ್ವಪ್ರರೂಪಕಾಃ ।**
**ಅಂತಃಪ್ರಾಗುಕ್ತಮಧ್ವಾಖ್ಯರೂಪವಾಗೇವ ವಾಗಿಯಂ ॥ ೫೩೬ ॥**

ಅಂತಃ–ಒಳಗೆ (ನಿರ್ಣಯಾತ್ಮಕವಾಗಿ), ಹರಿಂ ಪಶ್ಯನ್–ಶ್ರೀಹರಿಯನ್ನು ಕಾಣುವವನಾಗಿ, ಆ ತಿಷ್ಠತಿ–ಸರ್ವತ್ರ ಸ್ಥಿತನಾಗಿರುವ, ವೃಷಭಃ ಕಿಲ–ಶ್ರೇಷ್ಠನೆಂಬುದು ಪ್ರಸಿದ್ಧವು ; ವಾಗೂರ್ಜಿತಾ–ವಾಗೂರ್ಜಿತ್ವವು, ವಾಕ್ಪ್ರದತ್ವಂ–ವಾಕ್ಶಕ್ತಿಪ್ರದತ್ವ, ಬುದ್ಧಿದತ್ವಾದಯಃ ಗುಣಾಃ – ಬುದ್ಧಿಪ್ರದತ್ವ ಮೊದಲಾದ ಗುಣಗಳು, ಸಾರಾಸಾರವಿವೇಕಶ್ಚ–ಸಾರ ಅಸಾರಗಳನ್ನು ವಿವೇಕಿಸಿ ತಿಳಿಯುವ ಶಕ್ತಿಯೂ, ಯತ್–ಯಾವ ಕಾರಣದಿಂದ, ಗುರುತ್ವಪ್ರರೂಪಕಾಃ–ಗುರುತ್ವಜ್ಞಾಪಕ ಧರ್ಮಗಳೋ, ಅತಃ–ಆದ್ದರಿಂದ, ಪ್ರಾಗುಕ್ತಮಧ್ವಾಖ್ಯರೂಪವಾಕ್ ಇವ – ಹಿಂದೆ ಹೇಳಲಾದ ಮಧ್ವನಾಮಕರೂಪದ (ವಾಯುದೇವರೂಪದ) ಪ್ರತಿಪಾದಕ ವಾಣಿಯಂತೆ, ಇಯಂ ವಾಕ್–ಈ ಶ್ರುತಿ ವಾಕ್ಯವೂ (ಅರ್ಥಪೂರ್ಣವಾಗಿರುತ್ತದೆ).

**ಹೃದಂತಃಪ್ರಾಣರೂಪಸ್ಯ ಬಹಿಶ್ಚ ಗುರುರೂಪಿಣಃ ।**
**ಪವಮಾನಸ್ಯ ಚರಿತಂ ಶ್ರುತಿರಿತ್ಥಮಬೋಧಯತ್ ॥ ೫೩೭ ॥**

---

ತಾನು, ಅವರಲ್ಲಿ ವಿಶೇಷವಾಗಿ ಪ್ರವರ್ತಿಸಿದನು ; ಇವು ವಾಯುದೇವನ ತೃತೀಯಾವತಾರದ ಕಾರ್ಯವಿಶೇಷಗಳನ್ನೇ ನಿರೂಪಿಸಿದೆ (೫೩೦–೫೩೪). ಈ ಸರ್ವಶ್ರೇಷ್ಠನಾದ (ವೃಷಭನಾದ) ವಾಯುದೇವನು, ಸರ್ವತ್ರ ಸರ್ವವಸ್ತುಗಳ ಅಂತರ್ಯಾಮಿಯಾಗಿ, ಸರ್ವರೂಪಗಳಲ್ಲಿ ಶ್ರೀಹರಿಯ ಸಾಕ್ಷಾದ್ದರ್ಶನವುಳ್ಳವನಾಗಿ, ಇರುವನೆಂದೂ, ಸಜ್ಜನರಿಗೆ ವಾಕ್ಪಟುತ್ವವನ್ನು ವಾಕ್‌ಶಕ್ತಿಯನ್ನು ಕೊಡುವವನೂ ಸಾರಾಸಾರ ವಿವೇಕಪ್ರದನೂ ಎಂದೂ ಗುರುತ್ವಜ್ಞಾಪಕ ಸಕಲ ಸಲ್ಲಕ್ಷಣಗಳುಳ್ಳವನಾಗಿ ಶೋಭಿಸುವನು ; ಆದ್ದರಿಂದ, ಈ ಹಿಂದೆ ಪ್ರಸಕ್ತವಾಗಿ, ಮಧ್ವನಾಮಕ ವಾಯುದೇವನ ರೂಪದ ಮಹಿಮೆಯನ್ನು ಪ್ರತಿಪಾದಿಸಿದ ಶ್ರುತಿಯಂತೆ, ಈ ಶ್ರುತಿಯಾದರೂ ಮಧ್ವಮಹಿಮೆಯನ್ನೇ ಪ್ರತಿಪಾದಿಸುತ್ತದೆಂದು ಸಿದ್ಧವಾಗುತ್ತದೆ (೫೩೫–೫೩೬). ನಿಯಾಮಕ ರೂಪದಿಂದ ಹೃದಯದಲ್ಲಿಯೂ ಗುರು ರೂಪನಾಗಿ

'ಅಂತರಾತಿಷ್ಠತಿ' ಎಂದು (ಹಿಂದಿನ ಶ್ಲೋಕದಲ್ಲಿ) ಹೇಳಿದುದರ ಭಾವವನ್ನು, ವಿಶದಗೊಳಿಸುತ್ತಾರೆ:—

ಹೃದಂತಃ–ಹೃದಯದಲ್ಲಿ (ಮನಸ್ಸಿನಲ್ಲಿ), ಪ್ರಾಣರೂಪಸ್ಯ–ನಿಯಾಮಕರೂಪನೂ, ಬಹಿಶ್ಚ–ಹೊರಗೆ, ಗುರುರೂಪಿಣಃ–ಗುರುರೂಪನೂ (ಜ್ಞಾನೋಪದೇಶಕನೂ) ಆದ, ಪವಮಾನಸ್ಯ–ಪವಮಾನನ (ಮುಖ್ಯವಾಯುದೇವನ), ಚರಿತಂ–ವ್ಯಾಪಾರವನ್ನು (ಸಜ್ಜನಾನುಗ್ರಹ ಚರಿತ್ರೆಯನ್ನು), ಶ್ರುತಿಃ–ಶ್ರುತಿಯು, ಇತ್ಥಂ–ಹೀಗೆ, ಅಬೋಧಯತ್–ತಿಳಿಸಿತು.

**ಉನ್ಮಧ್ವ ಇತಿ ಚಾನ್ಯಾ ವಾಕ್ ಸೂಕ್ತೇಽಸ್ಮಿಂಸ್ತ್ಯಾತಿ ಮದ್ಗುರುಂ ।**
**ವಸಾನೋ ಭೂತಲೇ ಮಧ್ವೋ ಮಹಿಷಃ ಸರ್ವತೋ ಮಹಾನ್ ।**
**ಊರ್ಮಿರುತ್ಕೃಷ್ಟಮತಿಮಾನೂರ್ಮಿವದ್ವಾ ಸದೋಽನ್ನದನ್ ॥ ೫೩೮ ॥**

**ವನನಾ ಭಜನಾರ್ಹತ್ವಾದಪೋ ಜ್ಞಾನಪ್ರದತ್ವತಃ ।**
**ಋಗಾದಿವಿದ್ಯಾಃ ಸರಿತ ಇವ ವಿದ್ವಾನ್ ವಿಗಾಹತೇ ॥ ೫೩೯ ॥**

ಉನ್ಮಧ್ವ ಇತಿ ಚ–'ಉನ್ಮಧ್ವ ಊರ್ಮಿರ್ವನನಾ' ಎಂಬ, ಅನ್ಯಾವಾಕ್–ಬೇರೊಂದು ಶ್ರುತಿಯೂ,[1] ಅಸ್ಮಿನ್ ಸೂಕ್ತೇ–ಈ (ಶ್ರುತಿವಾಕ್ಯವಿರುವ) ಸೂಕ್ತ

ಹೊರಗಿದ್ದು ಉಪದೇಶಿಸುವುದರಿಂದಲೂ, ಅಂತಃ ಮತ್ತು ಬಹಿಃಗಳೆಂಬ ರೂಪಗಳಿಂದ ಸಜ್ಜನರನ್ನು ಅನುಗ್ರಹಿಸುವ, ಮುಖ್ಯ ವಾಯುದೇವನ (ಪವಮಾನನ) ವ್ಯಾಪಾರವನ್ನು 'ಅಂತರಾತಿಷ್ಠತಿ' ಇತ್ಯಾದಿ ಪದಗಳಿಂದ ಶ್ರುತಿಯು ತಿಳಿಸಿರುತ್ತದೆ (೫೩೭). 'ಉನ್ಮಧ್ವಃ–' ಇತ್ಯಾದಿ ಶ್ರುತಿವಾಕ್ಯವಿರುವ ಸೂಕ್ತವೂ ವಾಯುದೇವನ ಮಹಿಮೆಗಳನ್ನೇ ನಿರೂಪಿಸುತ್ತದೆ; ಸತ್ಯಲೋಕದಿಂದ ಬಂದು

[1] ಇಲ್ಲಿ ಪ್ರಸಕ್ತವಾದ ಶ್ರುತಿವಾಕ್ಯವು ಹೀಗಿದೆ:—'ಉನ್ಮಧ್ವ ಊರ್ಮಿರ್ವನನಾ ಅತಿಷ್ಠದಪೋವಸಾನೋ ಮಹಿಷೋ ವಿಗಾಹತೇ । ರಾಜಾ ಪವಿತ್ರರಥೋವಾಜಮಾರುಹತ್ಸಹಸ್ರಭೃಷ್ಟಿರ್ಜಯತಿಶ್ರವೋಬೃಹದಿತಿ' । ಎಂಬ ಶ್ರುತಿಯನ್ನು ಅರ್ಥತಃ ಸಂಗ್ರಹಿಸಲಾಗುತ್ತದೆ; ಇದರ ಅರ್ಥವು ಹೀಗಿದೆ:—ವಸಾನಃ–ಸತ್ಯಲೋಕದಿಂದ ಬಂದು ಭೂಮಿಯಲ್ಲಿ ವಾಸಿಸುವ ಮಹಿಷಃ–ಅಧಿಕಾರಿ ಶ್ರೇಷ್ಠನಾದ ವಾಯುದೇವನು; ಉನ್ಮಧ್ವಃ–ಉತ್ಕೃಷ್ಟವಾದ ಮಧ್ವರೂಪವು, ವಿಗಾಹತೇ–ಮುಳುಗಿ ಸ್ನಾನಮಾಡುತ್ತದೆ; ಊರ್ಮಿಃ–

ದಲ್ಲಿಯೂ, ಮದ್ಗುರುಂ–ನನ್ನ ಗುರುಗಳಾದ ಶ್ರೀಮಧ್ವರನ್ನು, ಸ್ತೌತಿ–ಸ್ತುತಿಸುತ್ತದೆ; ಮಧ್ವಃ – ಆ ಮಧ್ವರೂಪೀ ವಾಯುವು, ಭೂತಲೇ–(ಸತ್ಯಲೋಕದಿಂದ ಬಂದು) ಭೂಮಿಯಲ್ಲಿ, ವಸಾನಃ–ವಾಸಮಾಡುತ್ತಿರುವನು; ಸರ್ವತಃ–ಸಕಲ ಅಧಿಕಾರಿಗಳಲ್ಲಿ, ಮಹಾನ್–ಶ್ರೇಷ್ಠರೂ, ಮಹಿಷಃ–(ಅದರಿಂದಲೇ ಮಹಿಷರೆಂದು ಕರೆಸುವರು) ಮಹಿಷರೂ (ಆಗಿರುವರು); ಉತ್ಕೃಷ್ಟಮತಿಮಾನ್–ಶ್ರೇಷ್ಠಜ್ಞಾನಿಗಳು (ಆದ್ದರಿಂದ), ಊರ್ಮಿಃ–ಊರ್ಮಿಪದವಾಚ್ಯರು; ಸದಾ–ನಿರಂತರವಾಗಿ, ಊರ್ಮಿವತ್–(ಸಮುದ್ರದ) ತೆರೆಗಳಂತೆ (ಅಲೆಗಳಂತೆ), ಉನ್ನದನ್–ಘೋಷಿ

---

(ಅವತರಿಸಿ) ಭೂಮಿಯಲ್ಲಿ ವಾಸಿಸುತ್ತಾನೆ; ಮಧ್ವನಾಮಕನಾಗಿ ಪ್ರಸಿದ್ಧನಾಗುತ್ತಾನೆ; ಸರ್ವಶ್ರೇಷ್ಠನಾದ್ದರಿಂದ ಮಹಿಷನೆಂದೂ, ಉತ್ಕೃಷ್ಟ ಜ್ಞಾನಿಗಳಾದ್ದರಿಂದ 'ಊರ್ಮಿ'ಯೆಂದೂ, ಸಮುದ್ರದ ತೆರೆಗಳಂತೆ ಪರಮಾತ್ಮನ ಅಚಿಂತ್ಯ ಶಕ್ತಿಯನ್ನು ಘೋಷಿಸುವವನು ಆದ್ದರಿಂದ ಸಹ 'ಊರ್ಮಿ' ಎಂದೂ, ಸೇವ್ಯ ಶ್ರೇಷ್ಠನಾದ್ದರಿಂದ, 'ವನನಾ' (ವನನೀಯ) ಎಂದೂ, ಜ್ಞಾನಪ್ರದನಾದ್ದರಿಂದ 'ಅಪಃ' ಎಂದೂ,

---

* ಸರ್ವರಿಂದ ಅಧಿಕವಾಗಿ (ಮೇಲೆ) ಜ್ಞಾನದಿಂದ ಪ್ರಕಾಶಿಸುವವನೂ, ವನನಾಃ–ಭಜನೀಯಗಳಾದ ರೂಪಗಳುಳ್ಳವನೂ (ವನ್ಯತೇ ಸೇವ್ಯತೇ ಭಗವಾನಾಭಿಃ–ಎಂದು, ಸರ್ವರೂಪಗಳಿಂದ ಸೇವ್ಯನಾದ ಭಗವಂತನನ್ನುಳ್ಳವನು); ಅಪಃ–('ಆಪಯಂತಿ ಜ್ಞಾಪಯಂತಿ ಪರಮಾತ್ಮಾನಂ' ಎಂಬ ವ್ಯುತ್ಪತ್ತಿಯಿಂದ) ಅಪ್‌ಪದ ವಾಚ್ಯಗಳಾದ ಋಗಾದಿವೇದಗಳಲ್ಲಿ, ಅತಿಷ್ಠತ್ – ನಿಲ್ಲುವುದಾಗಿ (ತಿಳಿಯುವುದಾಗಿ), (ವಿಗಾಹತಿ–ಸ್ನಾನಮಾಡುತ್ತದೆ– ವಿಚಾರಮಾಡುತ್ತದೆ); ಪವಿತ್ರರಥಃ–ಸುದರ್ಶನ ಚಕ್ರವನ್ನೇರಿದ, ಸಹಸ್ರಭೃಷ್ಟಿಃ–ಚಕ್ರದ ಸಹಸ್ರದಲಗಳಲ್ಲಿ ಸಹ ವ್ಯಾಪ್ತವಾದ ರೂಪವುಳ್ಳ (ಯಸ್ಯ), ರಾಜಾ–ಯಾವ ವಾಯುದೇವನ ರಾಜನಾದ ಭಗವಾನ್ ನಾರಾಯಣನು ಬೃಹತ್–ಸರ್ವಶ್ರೇಷ್ಠವಾದ, ವಾಜಂ–ಅನ್ನದಂತೆ ಅತಿಪ್ರಿಯವಾದ ಶ್ರವಃ–ಸಾಕ್ಷಾತ್ತಾಗಿ ಭಗವನ್ಮುಖದಿಂದ ಶ್ರವಣಮಾಡಿದ, ವೇದ ಪಂಚರಾತ್ರಾದಿಸ್ತುತಿರೂಪದ ಅರ್ಥವಿಶೇಷವನ್ನು, ಆರುಹತ್–ವಿಷಯತ್ವೇನ ಅಲ್ಲಿ ಸನ್ನಿಹಿತನಾದನು (ಮಧ್ವಾಚಾರ್ಯರಿಂದ ಸ್ತುತ್ಯವಾದ–ವಿವರಿಸಲಾದ ಈ ಶಾಸ್ತ್ರಾರ್ಥಗಳಲ್ಲಿ ಸನ್ನಿಹಿತನಾಗಿ), ಜಯತಿ–ಉತ್ಕೃಷ್ಟನಾಗಿ ವಿರಾಜಿಸುತ್ತಾನೆ (ಪರೋಕ್ತ ಅರ್ಥಗಳನ್ನು ತಿರಸ್ಕರಿಸುವವನೂ–ಅತಿಕ್ರಮಿಸುವವನೂ ಆಗಿರುತ್ತಾನೆ).

ಸ್ವಕೃತಶ್ರವಣ ಪರಿತುಷ್ಟನಾದ ಶ್ರೀಹರ್ಯನುಗ್ರಹದಿಂದ ಲಭ್ಯವಾದ ಸಕಲ ದುರ್ಮತ ನಿರಾಕರಣ ಸಾಮರ್ಥ್ಯವನ್ನು ಕೊಟ್ಟು ತಾನೇ ಆ ಕಾರ್ಯವನ್ನು ಮಾಡಿಸುವ ಶ್ರೀಹರಿಯು, ವಾಯುದೇವನ ಈ ಅವತಾರದಲ್ಲಿ ನಿಂತು ಉತ್ಕೃಷ್ಟವಾಗಿ ವಿರಾಜಿಸುವನು.

ಸುವವನು, [1] ವಾ–(ಆದ್ದರಿಂದಲೂ ಊರ್ಮಿಯು) ಊರ್ಮಿ ಎನಿಸುವನು; ಭಜನಾರ್ಹತ್ವಾತ್–ಸೇವ್ಯಶ್ರೇಷ್ಠನಾದ್ದರಿಂದ, ವನನಾ–ವನನೀಯನೂ ಆಗಿರುವನು; ಜ್ಞಾನಪ್ರದತ್ವತಃ–(ಋಗಾದಿವೇದಗಳಲ್ಲಿ ಸನ್ನಿಹಿತನಾಗಿ ಭಗವಂತನ ಜ್ಞಾನವನ್ನು ಪ್ರದಾನಮಾಡುವುದರಿಂದ), ಅಪಃ–ಅಪ್‌ಶಬ್ದವಾಚ್ಯನೂ (ಆಗಿರುವನು); ಋಗಾದಿವಿದ್ಯಾಃ–ಋಗಾದಿವಿದ್ಯೆಗಳನ್ನು, ವಿದ್ವಾನ್–ಈ ಸರ್ವಜ್ಞನು, ಸರಿತಃ ಇವ–ನದಿಗಳಲ್ಲಿ ಎಂಬಂತೆ, ವಿಗಾಹತೇ–ವಿಚಾರರೂಪದ, ಸ್ನಾನಮಾಡುತ್ತಾನೆ (ಮುಳುಗಿ – ಒಳಹೊಕ್ಕು) ಸ್ನಾನಮಾಡುತ್ತಾನೆ (ಹೀಗಿದೆ–ಶ್ರುತಿಗತ ಪದಗಳ ಭಾವಗಳು).

**ಯಸ್ಮಾದುದಸ್ಥಾಪಯತ್ತಾಸ್ತಸ್ಮಾತ್ಸೋಽತಿಷ್ಠಯತ್ಪ್ರಭುಃ ।**
**ಅನ್ಯಾರ್ಥೇ ಪಾತನಂ ಪಾತಃ ಸ್ವಸ್ವಾರ್ಥೇ ಪ್ರಾಪ್ತಿರುತ್ಥಿತಿಃ ॥ ೫೪೦ ॥**

ಯಸ್ಮಾತ್–ಯಾವ ಕಾರಣದಿಂದ, ತಾಃ–ಆ ಋಗಾದಿ ವಿದ್ಯೆಗಳನ್ನು, ಉದಸ್ಥಾಪಯತ್–ಎತ್ತಿ ಹಿಡಿದರೋ (ಸ್ಥಿರವಾಗಿ ಸ್ಥಾಪಿಸಿದರೋ), ತಸ್ಮಾತ್–ಆದ್ದರಿಂದ, ಸಃ ಪ್ರಭುಃ–ಆ ಮಧ್ವರೂಪೀ ವಾಯುದೇವನು, ಅತಿಷ್ಠಯತ್–ಅತಿಷ್ಠಯತ್ (ಶ್ರುತಿಯಲ್ಲಿ ಅತಿಷ್ಠತ್) ಎಂದು ಹೇಳಲಾಗಿದೆ; ಅನ್ಯಾರ್ಥೇ–(ಶ್ರುತಿ ತಾತ್ಪರ್ಯಕ್ಕೆ) ವಿರುದ್ಧವಾದ ಬೇರೆ ಅರ್ಥವನ್ನು ತಿಳಿದಲ್ಲಿ, ಪಾತನಂ–ಜಾರುವಿಕೆಯು, ಪಾತಃ–ಬಿದ್ದಂತೆ; ಸ್ವಸ್ವಾರ್ಥೇ–ಅದರ ಸರಿಯಾದ ಅರ್ಥವಾದಲ್ಲಿ, ಪ್ರಾಪ್ತಿಃ–ಅದರ ಪ್ರಾಪ್ತಿಯು, ಉತ್ಥಿತಿಃ–ಉತ್ಥಿತಿಯೆಂದು (ಮೇಲೇಳುವುದೆಂದು) ಹೇಳಲ್ಪಡುತ್ತದೆ.

---

ಋಗಾದಿ ವಿದ್ಯೆಗಳಲ್ಲಿ ಲೀಲೆಯಿಂದ ಅವಗಾಹ ಸ್ನಾನಮಾಡುವುದರಿಂದ (ಒಳಹೊಕ್ಕು ವಿಚಾರದಿಂದ ಸತ್ಯಾರ್ಥಗಳನ್ನು ತಿಳಿಯುವುದರಿಂದ ಸಹ ಜ್ಞಾನಪ್ರದತ್ವವು ಸಿದ್ಧವೆಂದೂ) ಕರೆಯಲ್ಪಡುವನು (೫೩೮–೫೩೯). ಋಗಾದಿ ವಿದ್ಯೆಗಳಿಗೆ ವಿರುದ್ಧಗಳಾದ ಅರ್ಥಗಳನ್ನು ತಿಳಿಯುವುದು ಅವುಗಳಿಂದ ಜಾರಿಬಿದ್ದಂತೆ

---

1 ಐತರೇಯಉಪನಿಷದ್ಭಾಷ್ಯದ ಅಧ್ಯಾಯ ೨, ಖಂಡ ೨ರಲ್ಲಿ ಸಮುದ್ರಘೋಷದಿಂದ ವ್ಯಂಗ್ಯವಾಗುವ ಹುಂಕಾರದಿಂದ, ವಿಷ್ಣುವಿಗೆ ಸರ್ವತಿರಸ್ಕಾರ ಸಾಮರ್ಥ್ಯದ ಅನಂತ ಶಕ್ತಿಯನ್ನು ಹೇಳುತ್ತದೆಂದು ಹೇಳಲಾಗಿದೆ. ಈ ಅನಂತಶಕ್ತಿಯು ಶ್ರೀಲಕ್ಷ್ಮೀನಾರಾಯಣರ ನಂತರ ಶ್ರೀಮಧ್ವರಲ್ಲಿಯೂ ಇದೆ.

**ಯಸ್ಯ ರಾಜಾ ಪವಿತ್ರಾಖ್ಯಸುದರ್ಶನರಥೋ ಹರಿಃ ।**
**ಸಹಸ್ರಾರೇಷು ಯದ್ಭೃಷ್ಟಿರ್ಜ್ವಾಲಾಚಾಗ್ನೇಃ ಸಹಸ್ರಧಾ ॥ ೫೪೧ ॥**

ಯಸ್ಯ–ಯಾವ ಮಧ್ವರ, ರಾಜಾ–ರಾಜನು, ಪವಿತ್ರಾಖ್ಯ ಸುದರ್ಶನರಥಃ–ಪವಿತ್ರನಾಮಕಸುದರ್ಶನವೇ (ಚಕ್ರವೇ) ರಥವಾಗಿವುಳ್ಳ (ಎಂದರೆ ಚಕ್ರೋಪರಿಸ್ಥಿತನಾದ) ಹರಿಃ–ಶ್ರೀಹರಿಯೋ, ಸಹಸ್ರಾರೇಷು–ಚಕ್ರದ ಸಹಸ್ರ ಅರಗಳಲ್ಲಿ, (ದಲಗಳಲ್ಲಿ), ಯದ್ಭೃಷ್ಟಿಃ–ಯಾರು ಕರಣಚರಣಾದ್ಯವಗಳಿಂದ ವ್ಯಾಪ್ತನಾಗಿರುವನೋ, (ಭೃಷ್ಟಿಪದದ ಅರ್ಥವನ್ನು ಹೇಳುತ್ತಾರೆ), ಸಹಸ್ರಧಾ–ಸಹಸ್ರವಿಧದ, ಅಗ್ನೇಃ–ಅಗ್ನಿಯ, ಜ್ವಾಲಾ ಚ–ಜ್ವಾಲೆಗಳೇ ಆಗಿರುವುವೋ (ದುರ್ಮತಗಳನ್ನು

(ಪಾತವೆಂದೂ) ; ಸರಿಯಾದ ಅಭಿಪ್ರಾಯವನ್ನು ತಿಳಿದು ಉಪದೇಶಿಸುವುದು, (ಉತ್ಥಿತಿ) ಮೇಲೆದ್ದಂತೆ ಹೇಳಲ್ಪಡುತ್ತದೆಯಾಗಿ, ಶ್ರುತಿಯು, ಋಗಾದಿ ಸಕಲ ವಿದ್ಯೆಗಳೂ ವಿಷ್ಣು ಮಹಿಮೆಗಳನ್ನೇ ಘೋಷಿಸುತ್ತವೆಂದು ತೋರಿಸಿ ಎತ್ತಿ ಹಿಡಿದ ಕಾರಣದಿಂದ 'ಅತಿಷ್ಠತ್' ಎಂದು ಸಮರ್ಥನಾದ ವಾಯುದೇವನನ್ನು ವರ್ಣಿಸಿದೆ (೫೪೦). ಈ ಮಧ್ವರೂಪೀ ವಾಯುದೇವನ ಪ್ರಭುವು (ರಾಜನು) ಚಕ್ರೋಪರಿಸ್ಥಿತನಾದ ಶ್ರೀಹರಿಯೇ ಆಗಿರುವನು : ಸುದರ್ಶನವು ಸಹಸ್ರ ದಲಗಳುಳ್ಳದ್ದು ; ಪ್ರತಿದಲದಲ್ಲಿ, ಕರಚರಣಾದ್ಯವಯವ ಯುಕ್ತನಾದ ಶ್ರೀಹರಿಯು ವ್ಯಾಪಿಸಿ ಸ್ಥಿತನಾಗಿ ಅಗ್ನಿಜ್ವಾಲೆಯಂತೆ ಪ್ರಖರವಾದ ತೇಜಸ್ಸುಳ್ಳವನಾಗಿರುವನು; ಸುದರ್ಶನವೇ 'ಪವಿತ್ರ' ನಾಮಕವು[1] ; ಈ ಕಾರಣದಿಂದಲೇ ಸಕಲ ದುರ್ಮತ ನಿರಾಕರಣೆ

---

1 'ಪವಿತ್ರಂ ಚರಣಂ ನೇಮೀ ಪವಿಶ್ಚಕ್ರಂ ಸುದರ್ಶನಂ । ಸಹಸ್ರಾರಂ ಪ್ರಾಕೃತಘ್ನಂ ಲೋಕಾಧಾರಂ ಮಹೌಜಸಂ ॥' ಎಂಬಲ್ಲಿ ಶ್ರೀಹರಿಚಕ್ರದ ಮಹಿಮೆಗಳನ್ನು ಹೇಳುವ (ಯೌಗಿಕಾರ್ಥಗಳುಳ್ಳ) ನಾಮಗಳೆಂದು ಹೇಳಲಾಗಿದೆ ; ಪವಿತ್ರ (ಪಾವನಕರ), ಚರಣ (ರಥಚರಣ, ಚಕ್ರ), ನೇಮೀ (ಚಕ್ರಾಕಾರದ ಆಯುಧ ; ಪವಿ–ಇಂದ್ರನ ವಜ್ರಾಯುಧವನ್ನೂ ಮೀರಿದುದು), ಚಕ್ರ (ಚಕ್ರ), ಸುದರ್ಶನ (ಜ್ಞಾನದಾನದಿಂದ ಸಜ್ಜನರನ್ನು ರಕ್ಷಿಸುವುದು, ಸಹಸ್ರಾರ–(ನಿಶಿತವಾದ, ಶತ್ರುಗಳನ್ನು ಸೀಳುವುದರಲ್ಲಿ ಶಕ್ತವಾದ, ಸಹಸ್ರ ಅರಗಳುಳ್ಳದ್ದು), ಪ್ರಾಕೃತಘ್ನಂ–(ಪ್ರಕೃತಿಯನ್ನು ನಿವಾರಿಸುವುದರಲ್ಲಿ ಸಮರ್ಥವು), ಲೋಕಾಧಾರಂ–(ಸಕಲಲೋಕಗಳಿಗೆ ಆಧಾರವಾದುದು–ವ್ಯಾಪ್ತವಾದುದು), ಮಹೌಜಸಂ–(ಅಚಿಂತ್ಯಸಾಮರ್ಥ್ಯವುಳ್ಳದ್ದು).

ದಹಿಸಲು ಸಮರ್ಥವಾದ ಅಗ್ನಿಜ್ವಾಲೆಗಳಂತಿರುವ ಚಕ್ರಸ್ಥಿತ ಶ್ರೀಹರಿಯೇ ಶ್ರೀಮಧ್ವರ ರಾಜನಾಗಿರುವನೆಂದೂ ಶ್ರುತಿಯು ನಿರೂಪಿಸುತ್ತದೆ).

**ಸಹಸ್ರಭೃಷ್ಟಿಃ ಸ ಬೃಹಚ್ಛ್ರವಃ ಶ್ರವಣಮಾತ್ಮನಃ ।**
**ಕೃತಂ ವಾಜಂ ಸ್ವೇಷ್ಟದತ್ವಾದನ್ನಮನ್ನಸಮಂ ಸದಾ ॥ ೫೪೨ ॥**

**ಆರುಹದ್ವಿಷಯೀಭೂಯ ಸದಾ ತತ್ರೈವ ಸಂಸ್ಥಿತಃ ।**
**ಜಯತ್ಯಖಿಲದುರ್ವೃತ್ತಾಂಸ್ತಸ್ಯಾಸಾಧ್ಯಂ ನ ಕಿಂಚನ ॥ ೫೪೩ ॥**

**ಯಸ್ಯ ಶ್ರವಣಸಂಪತ್ತ್ಯಾ ವಿಷ್ಣುಃ ಪ್ರೀತೋಭವತ್ಪ್ರಭುಃ ।**
**ನಾಪೂರ್ವೋ ನಿಗಮೋದ್ಧಾರಸ್ತಸ್ಯೇತಿ ಹೃದಯಶ್ರುತೇಃ ॥ ೫೪೪ ॥**

ಸಹಸ್ರಭೃಷ್ಟಿಃ–ಸಹಸ್ರದಲಗಳಲ್ಲಿರುವ (ಚಕ್ರದ ಮೇಲೆ ಕುಳಿತಿರುವ) ಸಃ– ಶ್ರೀಹರಿಯು, ಬೃಹತ್‌ಶ್ರವಃ –(ಸರ್ವಶ್ರೇಷ್ಠವಾದ, ಭಗವಂತನ ಮುಖದಿಂದ ಪ್ರಾಪ್ತವಾದ ಶಾಸ್ತ್ರಶ್ರವಣವುಳ್ಳವರು ಶ್ರೀಮಧ್ವರು) ಉತ್ತಮ ಕೀರ್ತಿಯು; ಆತ್ಮನಃ–ತನ್ನಿಂದ (ಶ್ರೀಹರಿಯಿಂದ), ಕೃತಂ–ಮಾಡಲ್ಪಟ್ಟ, ಶ್ರವಣಂ–ಶಾಸ್ತ್ರ ಶ್ರವಣವೆಂಬ, ಸ್ವೇಷ್ಟದತ್ವಾತ್–ಸರ್ವೋತ್ತಮನಿಂದ (ಇಷ್ಟದೇವತೆಯಿಂದ ಉಪ ದೇಶಿಸಲ್ಪಟ್ಟದ್ದರಿಂದ, ಅನ್ನಸಮಂ–ಅನ್ನಸಮವಾದ, ವಾಜಂ ಅನ್ನಂ–ವಾಜವೆಂಬ

---

ಯಲ್ಲಿಯೂ ದಕ್ಷರಾಗಿರುವರು (೫೪೧). ಸಹಸ್ರ ಭೃಷ್ಟಿಯಾದ (ಸುದರ್ಶನದ ಸಹಸ್ರಾರಗಳಲ್ಲಿ ಮಹಾ ತೇಜಸ್ಸಿನಿಂದ ಪ್ರಜ್ವಲಿಸುವ) ಶ್ರೀಹರಿಯು 'ಬೃಹಚ್ಛ್ರವ'ನು–ಉತ್ತಮ ಕೀರ್ತಿಯು; ಮಧ್ವರೂಪೀ ವಾಯುದೇವನು, ಈತನ ಮುಖದಿಂದ, ಋಗಾದಿ ಸಕಲ ವಿದ್ಯೆಗಳನ್ನು ಶ್ರವಣಮಾಡಿರುವನು (ಹಾಗೂ ಶ್ರೇಷ್ಠವಾದ ಶ್ರವಣವನ್ನು ತನ್ನ ಶಿಷ್ಯರಿಗೂ ಮಾಡಿಸುತ್ತಿರುವನು); ವಾಯುದೇವನು, ಭಗವಂತನಿಂದ ಮಾಡಿದ ಶ್ರವಣವನ್ನು ಇಷ್ಟದೇವತಾ ದತ್ತವಾದ, ಅನ್ನದಂತೆ, ವಾಜವನ್ನು, ಸದಾ ಆಶ್ರಯಿಸಿರುವನು ; ಆ ಅನ್ನದಲ್ಲಿ (ಋಗಾದಿ ವಿದ್ಯೆಗಳಲ್ಲಿ) ಶಾಸ್ತ್ರ ವಿಷಯನಾಗಿ (ಪ್ರತಿಪಾದ್ಯನಾಗಿ) ಸದಾ ಸ್ಥಿತ ನಾಗಿರುವನು (ಅವುಗಳಿಂದ ಪ್ರತಿಪಾದ್ಯನು ಶ್ರೀವಿಷ್ಣುವೇ ಆಗಿರುವನು); ಅವು (ಅವುಗಳ ತಾತ್ಪರ್ಯವನ್ನೇ ನಿರೂಪಿಸುವ ಮಧ್ವಭಾಷ್ಯಾದಿಗಳು) ಸಕಲ

ಅನ್ನವನ್ನು, ಸದಾ–ಸರ್ವದಾ (ಸರ್ವಾವತಾರಗಳಲ್ಲಿ), ಆರುಹತ್–ಹೊಂದಿ ಸ್ಥಿತನಾಗುತ್ತಿದ್ದನು ; ವಿಷಯೀಭೂಯ–ಶಾಸ್ತ್ರಗಳ ವಿಷಯಭೂತನಾಗಿದ್ದು, ಸದಾ–ಸರ್ವದಾ, ತತ್ರೈವ – ಅಲ್ಲಿಯೇ ಸಂಸ್ಥಿತಃ – (ಶ್ರೀಹರಿಯು ಪ್ರತಿಪಾದ್ಯನಾಗಿ) ಇರುವನು (ಮಧ್ವಶಾಸ್ತ್ರಗಳಲ್ಲಿ ಪ್ರತಿಪಾದ್ಯನಾಗಿ ಸದಾ ಶ್ರೀಹರಿಯು ಸನ್ನಿಹಿತನಾಗಿರುವನು) ; ಸಕಲ ದುರ್ವೃತ್ತಾನ್–ಸರ್ವ ದುಷ್ಟರನ್ನು (ದುಶ್ಶಾಸ್ತ್ರಗಳನ್ನು), ಜಯತಿ–ಜಯಿಸುತ್ತದೆ ; ತಸ್ಯ– ಆ ಮಧ್ವರಿಗೆ (ಮಧ್ವಶಾಸ್ತ್ರಕ್ಕೆ), ಅಸಾಧ್ಯಂ–ಅಸಾಧ್ಯವಾದುದು, ಕಿಂಚನ ನ–ಯಾವುದೊಂದೂ ಇಲ್ಲ (ಯಾವ ದುಃಶಾಸ್ತ್ರವೂ ಅದನ್ನು ಎದುರಿಸಿ ನಿಲ್ಲಲು ಶಕ್ತವಲ್ಲ) ; ಯಸ್ಯ–ಶ್ರೀಮಧ್ವಶಾಸ್ತ್ರದ, (ಮಧ್ವ ಮಹಿಮೆಯ) ಶ್ರವಣಸಂಪತ್ತ್ಯಾ–ಶ್ರವಣಪೂರ್ತಿಯಿಂದ (ಭಕ್ತಿಯಿಂದ ಮಾಡುವ ಶ್ರವಣರೂಪದ ಸೇವೆಯೆಂಬ ಪುಣ್ಯದಿಂದ), ಪ್ರಭುಃ–ಜಗತ್ಪ್ರಭುವಾದ, ವಿಷ್ಣುಃ–ಶ್ರೀವಿಷ್ಣುವು, ಪ್ರೀತಃ–ಸಂತುಷ್ಟನು, ಅಭವತ್–ಆದನು (ಆಗುತ್ತಾನೆ) ; ತಸ್ಯ–ಮಧ್ವಶಾಸ್ತ್ರಕ್ಕೆ ( ಸದೃಶವಾದ ) – ನಿಗಮೋದ್ಧಾರಃ – ಶ್ರುತಿತಾತ್ಪರ್ಯವನ್ನು ನಿರೂಪಿಸುವ, ಅಪೂರ್ವಃ – ನೂತನ ಪ್ರಮೇಯಗಳ ನಿರೂಪಣೆಯು, ನ – ಇರುವುದಿಲ್ಲ, ಇತಿ ಎಂದು, ಶ್ರುತೇಃ ಹೃದಯಃ – ಶ್ರುತಿಯ ತಾತ್ಪರ್ಯವೂ (ಆಗಿದೆ).

**ಸಪ್ತಸ್ವಸ್ರಾರಿತಿಶ್ರುತ್ಯಾ ಮಧ್ವಃ ಪ್ರಸ್ತೂಯತೇ ಸ್ಫುಟಂ ॥ ೫೪೫ ॥**

---

ದುಃಶಾಸ್ತ್ರಗಳನ್ನು ಜಯಿಸುತ್ತವೆ ; ಅವುಗಳ ಶ್ರವಣದಿಂದ (ತಜ್ಜನ್ಯಪುಣ್ಯದಿಂದ) ವಿಷ್ಣುವು ಪರಮ ಪ್ರೀತನಾಗುವನು; ವಾಯುದೇವನ ವಿಷಯದಲ್ಲಿ ಪ್ರೀತನಾಗಿರುವನೆಂದು ಹೇಳಲೇನು ? ಇವುಗಳೇ (ಮಧ್ವಶಾಸ್ತ್ರವೇ) ಋಗಾದಿ ಶ್ರುತಿತಾತ್ಪರ್ಯಗಳನ್ನು ಎತ್ತಿ ಹಿಡಿಯುವ ಅಪೂರ್ವತ್ವವು ಸಿದ್ಧವೆಂದೂ ಪ್ರಸಕ್ತ ಶ್ರುತಿಯ ಹೃದಯವೂ ಆಗಿದೆ (೫೪೨–೫೪೪). 'ಸಪ್ತಸ್ವಸ್ರಾಃ' ಎಂಬ ಶ್ರುತಿಯು ಸ್ಪಷ್ಟವಾಗಿ ಶ್ರೀಮಧ್ವರನ್ನೇ ಸ್ತುತಿಸುತ್ತದೆ; ಋಗಾದಿ ವೇದಗಳು ನಾಲ್ಕು, ಪಂಚರಾತ್ರ, ಪುರಾಣ, ಭಾರತಗಳೂ ಸೇರಿ ಏಳು ಭಗವತ್ಸ್ವರೂಪ ಪ್ರತಿಪಾದಕಗಳಾದ ವಿದ್ಯೆಗಳೆಂಬ ಮಹಾ ಗೌರವನಾಮದಿಂದ ಪ್ರಸಿದ್ಧವಾಗಿವೆ; ಇವುಗಳ ನಿಜವಾದ ಭಾವವನ್ನು ಭಗವನ್ಮುಖದಿಂದಲೇ ಶ್ರವಣಮಾಡಿ ತಿಳಿದವರು ಶ್ರೀಮಧ್ವರು ; ಶ್ರುತಿಯಲ್ಲಿರುವ ವಾವಶಾನಃ ಎಂಬ ಪದವು ಮಹಾ ಕಾಂತಿಯುಕ್ತರಾದ ಶ್ರೀಮಧ್ವರನ್ನು ಜ್ಞಾನಲಭ್ಯವಾದ ತೇಜಸ್ಸುಳ್ಳವರೆಂದು ಹೇಳುತ್ತದೆ;

*

**ವಾವಶಾನೋತಿಶಯಿತಕಾಂತಿಯುಕ್ತಃ ಸುಖಾತ್ಮಕಂ ।**
**ಕಂ ಬ್ರಹ್ಮ ಪರಮಂ ವಿದ್ವಾನ್ ಮಧ್ವೋ ಜ್ಞಾನದೃಶೇ ಸತಾಂ॥೫೪೬॥**

'ಸಪ್ತಸ್ವಸ್ರಾಃ' ಇತ್ಯಾದಿ ಶ್ರುತಿಯನ್ನು ಸಂಗ್ರಹಿಸಿ, ತಾತ್ಪರ್ಯವನ್ನು ನಿರೂಪಿಸುತ್ತಾರೆ ;–[1] ಸಪ್ತಸ್ವಸ್ರಾಃ – ಸಪ್ತಸ್ವಸ್ರಾಃವೆಂಬ, ಇತಿಶ್ರುತ್ಯಾ – ಈ ಶ್ರುತಿಯಿಂದ, ಸ್ಫುಟಂ–ಸ್ಪಷ್ಟವಾಗಿ, ಮಧ್ವಃ–ಮಧ್ವರೂಪೀವಾಯುದೇವನೇ, ಪ್ರಸ್ತೂಯತೇ – ಸ್ತುತಿಸಲ್ಪಡುತ್ತಾನೆ ; ವಾವಶಾನಃ – ವಾವಶಾನಃ ಎಂದರೆ,

---

ಆನಂದರೂಪಿಯಾದ 'ಕಂ ಬ್ರಹ್ಮ' ಎಂಬ ಶ್ರುತಿಯು ಹೇಳುವಂತೆ, ಪರಬ್ರಹ್ಮನನ್ನು ಶ್ರೀಮಧ್ವರು ಪರಮಾತ್ಮನ ಮುಖದಿಂದಲೇ ಶ್ರವಣಮಾಡಿದರು ; ಈ ಜ್ಞಾನವನ್ನು

---

[1] ಪ್ರಸಕ್ತ ಶ್ರುತಿಯು ಹೀಗಿದೆ :—'ಸಪ್ತಸ್ವಸ್ರಾರರುಷೀರ್ವಾವಶಾನೋ ವಿದ್ವಾನ್ ಮಧ್ವಉಜ್ಜಭಾರಾದೃಶೇಕಂ । ಅಂತರ್ಯೇಮೇ ಅಂತರಿಕ್ಷೇಷು ರಾಜಾ ಇಚ್ಛನ್ವಪ್ರಿಮವಿದತ್ ಪೂಷಣಸ್ಯ ।'; ಇದರ ಅರ್ಥವೇನೆಂದರೆ :—ವಾವಶಾನಃ–ಅತಿಶಯ ಕಾಂತಿಯುಕ್ತನಾದ ಶ್ರೀಮಧ್ವರು (ದೀಪ್ತ್ಯಂಗುಷ್ಠಃ ಎಂದು ಅಣುಮಧ್ವವಿಜಯದಲ್ಲಿಯೂ ಇದೆ) ; ಕಂ–ಆನಂದರೂಪನಾದ ಪರಮಾತ್ಮನನ್ನು ('ಕಂ ಬ್ರಹ್ಮ ಖಂ ಬ್ರಹ್ಮ' ಎಂದು ಶ್ರುತಿಯೂ ಇದೆ) ('ಶ್ರುತೋಪನಿಷತ್ಕಗತ್ಯಭಿಧಾನಾತ್' ಎಂದು ಸೂತ್ರವೂ ಇದೆ; ಇದರ ಅರ್ಥ ಹೀಗಿದೆ ; ಶ್ರುತೋಪನಿಷದಾಂ–ಶ್ರವಣ, ಮನನ, ಧ್ಯಾನಗಳಿಂದ ಉಂಟಾದ ಜ್ಞಾನ (ಅಪರೋಕ್ಷ) ವುಳ್ಳವರಿಗೆ, ತೇನ–ಮುಖ್ಯವಾಯುವಿನಿಂದ, ಕಯೋಃ–ಕಶಬ್ದವಾಚ್ಯರಾದ ಕಾರ್ಯಬ್ರಹ್ಮ (ಚತುರ್ಮುಖ), ಪರಬ್ರಹ್ಮರ, ಗತೇಃ – (ಯಥಾ ಯೋಗ್ಯವಾದ) ಪ್ರಾಪ್ತಿಯು, ಅಭಿಧಾನಾತ್ ಚ–ಹೇಳಲ್ಪಟ್ಟಿರುವುದರಿಂದ (ಅಕ್ಷಿಸ್ಥಿತನು ವಿಷ್ಣುವೇ–ಅಗ್ನಿಯಲ್ಲ), ವಿದ್ವಾನ್ ಮಧ್ವಃ–ಸಕಲ ವೇದಾರ್ಥಜ್ಞಾನಿಯಾದ ಶ್ರೀಮಧ್ವರು, ಅರುಷೀಃ–ಭಗವದ್ಭಿನ್ನಋಷಿ ಇಲ್ಲದ (ಅಕಾರವಾಚ್ಯ ಹಯಗ್ರೀವರೂಪೀ ಶ್ರೀಹರಿಯೇ ಋಷಿಯಾಗಿವುಳ್ಳ) ವರಾಗಿ, ಸಪ್ತಸ್ವಸ್ರಾಃ–ಭಗವನ್ಮುಖದಿಂದಲೇ ನಿಃಸೃತವಾದ ಏಳು ವಿದ್ಯೆಗಳುಳ್ಳವರೂ (ಋಗಾದಿ ನಾಲ್ಕುವೇದಗಳು, ಪಂಚರಾತ್ರ, ಪುರಾಣ, ಭಾರತಗಳೆಂಬ ಸಪ್ತ ಸಂಖ್ಯೆಯ ವಿದ್ಯೆಗಳನ್ನು, ದೃಶೇ–ಸಜ್ಜನರ ಜ್ಞಾನಾರ್ಥವಾಗಿ, ಉಜ್ಜಭಾರ–ಉಜ್ಜಹಾರ, ಮೇಲೆ ತಂದರು (ಸ್ಪಷ್ಟವಾಗಿ ಅವುಗಳ ಅರ್ಥಗಳನ್ನು ಬೋಧಿಸಿದರು) (ವ್ಯಾಕರಣಾನುಸಾರ ಹಕಾರಕ್ಕೆ ಭಕಾರದ ಆದೇಶವು) ; (ಅಪ್ರಮಾಣತ್ವ ಪೌರುಷೇಯತ್ವ, ಮಿಥ್ಯಾತ್ವ ; ಅವೇದಕತ್ವಾದಿಗಳಿಂದ ಕೆಳಗೆ ಬಿದ್ದವುಗಳನ್ನು ಉದ್ಧರಿಸಿದರು) ; (ಸಪ್ತಸ್ವಸಾರಗಳು ಈ ಏಳು ವಿದ್ಯೆಗಳೆಂಬಲ್ಲಿ ಸಮಾಖ್ಯಾಶ್ರುತಿಯೂ ಇದೆ; ಅದು ಯಾವುದೆಂದರೆ 'ಸಪ್ತಸ್ವಸಾರೋ ಅಭಿಸಂನವಂತೇ ಯತ್ರ ಗವಾಂ ನಿಹಿತಾ ಸಪ್ತನಾಮಾ ।' ಎಂದಿದೆ ; ಸಂನವಂತೇ–ಸ್ತುತಿಸುವರು, ಗವಾಂ–ವಿದ್ಯಾನಾಂ, ನಿಹಿತಾ–ನಿಹಿತಾನಿ) ; ಯಾರ ಸಾಮರ್ಥ್ಯದಿಂದ ಏತಕ್ಕಾಗಿ

ಅತಿಶಯಿತಕಾಂತಿಯುಕ್ತಃ – ಅತ್ಯಧಿಕವಾದ ಕಾಂತಿಯುಳ್ಳವರಾದ, ಮಧ್ವಃ – ಶ್ರೀಮಧ್ವರು, ಸುಖಾತ್ಮಕಂ – ಆನಂದರೂಪನಾದ, ಕಂಬ್ರಹ್ಮ ಪರಮಂ – ಕಶಬ್ದವಾಚ್ಯನಾದ ಪರಬ್ರಹ್ಮನನ್ನು, ಸತಾಂ–ಸಜ್ಜನರ, ಜ್ಞಾನವೃತೇ–ಜ್ಞಾನಕ್ಕಾಗಿ (ಶ್ರುತಿಗತ 'ದೃಶೀಕಂ' ಎಂಬುದರ ಅರ್ಥವಿದು), ವಿದ್ವಾನ್–ಭವನ್ಮುಖದಿಂದಲೇ ತಿಳಿದವನಾಗಿ (ನಿಜವಾದ ವೇದಾದಿ ಸಪ್ತವಿದ್ಯೆಗಳ ತಾತ್ಪರ್ಯವನ್ನು ಉಪದೇಶಿಸಿದರು).

**ಋಗಾದ್ಯಾಃ ಸಪ್ತಸದ್ವಿದ್ಯಾಃ ಸ್ವತಂತ್ರೇಶಸ್ಯತತ್ವತಃ ।**
**ಸ್ವಸ್ಯಾಃ ಸ್ವತಃಪೂರ್ವಜಾ ವಾ ಪರಮಾತ್ಮಮುಖಾಂಬುಜಾತ್ ॥೫೪೭॥**

ಋಗಾದ್ಯಾಃ–ಋಗ್ವೇದ ಮೊದಲಾದ (ನಾಲ್ಕು ವೇದಗಳು, ಪಂಚರಾತ್ರ, ಪುರಾಣ, ಭಾರತ) ಏಳು ವಿದ್ಯೆಗಳು (ಬ್ರಹ್ಮಜ್ಞಾನಸಾಧಕ ಪ್ರಮಾಣಗಳು),

---

ಸಜ್ಜನರ ಜ್ಞಾನಾರ್ಥವಾಗಿ ಉಪದೇಶಿಸಿದರು (೫೪೫–೫೪೭). ಋಗಾದಿ ಸಪ್ತ ವಿದ್ಯೆಗಳೇ ಸಪ್ತ ಸದ್ವಿದ್ಯೆಗಳು ; (ಅನ್ಯವಾದ, ತದ್ವಿರುದ್ಧವಾದ ಅರ್ಥವನ್ನು

---

ಉದ್ಧರಿಸಿದರು ಎಂಬ ಪ್ರಶ್ನೆಗಳ ಪರಿಹಾರಕ್ಕಾಗಿ ಉತ್ತರಾರ್ಧದ ಶ್ರುತಿವಾಕ್ಯವು ಪ್ರವೃತ್ತವಾಗಿದೆ ; ಪೂಷಣಸ್ಯ–ಶ್ರೀಹರಿಯ (ಪುಷಪುಷ್ಟೌ ಎಂಬ ಧಾತ್ವರ್ಥದಿಂದ, ಪೂಷಾ ಪೂರ್ಣಃ ಆನಂದೋ ಯಸ್ಯ, ಎಂಬ ವ್ಯುತ್ಪತ್ತಿಯು ; 'ಣಶ್ಚನಿರ್ವೃತಿವಾಚಕಃ' ಣಕಾರವು ಆನಂದವಾಚಕವು ; ವವ್ರಿಂ–(ವೃಧಾತುವಿನಿಂದ) ವರಣಾರ್ಥದಿಂದ ವವ್ರಿಃ) ಪ್ರಸಾದವನ್ನು, ಇಚ್ಛನ್–ಅಪೇಕ್ಷಿಸಿ, (ಈ ಸಪ್ತವಿದ್ಯೆಗಳನ್ನು ಉದ್ಧರಿಸಿದುದು) (ನಿಖಿಲ ಮುಖಭುಜಂ ತರ್ಪಯಾಮಾಸ ಇತ್ಯಾದಿ) ಅಂತರಿಕ್ಷೇಷುರಾಜಾಃ–ಜಗತ್ಸೃಷ್ಟಿಗೆ ಪೂರ್ವದಿಂದ ಇರುವ (ವೇದಗಳು—ಉತ್ಪತ್ತಿರಹಿತಗಳು—ಅಪೌರುಷೇಯಗಳಾಗಿ ಕರ್ತೃರಹಿತಗಳಾದ್ದರಿಂದ), (ಅವ್ಯಾಕೃತಾಕಾಶಾಭಿಮಾನಿಯಾದ ದುರ್ಗಾದೇವಿಯು ಪ್ರಲಯಾನಂತರ ಸೃಷ್ಟಿಕಾಲ ಸಮೀಪಿಸಲು ವೇದಗಳನ್ನು ಉಚ್ಚರಿಸಿ, ಒಂದು ವಿವಕ್ಷೆಯಿಂದ ವೇದಗಳ ಉತ್ಪತ್ತಿಕಾರಣಗಳಾದ್ದರಿಂದ, ದುರ್ಗೆಗಿಂತ ಮೊದಲೇ ಇದ್ದ ವೇದಗಳು ಅಜಗಳು) ('ಅಂತಃ ಈಕ್ಷತೇ ಸರ್ವಂ' ಎಂಬ ವ್ಯುತ್ಪತ್ತಿಯಿಂದ ಅಂತರಿಕ್ಷನಲ್ಲಿ–ಪರಮಾತ್ಮನಲ್ಲಿ ಮೊದಲು ಇದ್ದವುಗಳು ; ಪ್ರಲಯಕಾಲದಲ್ಲಿ ಸಹ ಪರಮಾತ್ಮನ ಬುದ್ಧಿಸ್ಥಿತಗಳಾದ್ದರಿಂದ 'ಅಂತರಿಕ್ಷೇಷು ರಾಜಾಃ' ಎಂಬುದರ ಅಭಿಪ್ರಾಯವನ್ನು ತಿಳಿಯಬಹುದು). ಅವಿದತ್–ಉಕ್ತವೇದಾದಿ ವಿದ್ಯೆಗಳನ್ನು ತಿಳಿದರು (ಅದನ್ನೇ ಸಜ್ಜನರಲ್ಲಿ ನಿಂತು ಪ್ರೇರಿಸಿ ತಿಳಿಸಿಕೊಟ್ಟರು, ಈ ತಮ್ಮ ವ್ಯಾಪಾರವನ್ನು ಪರಮಾತ್ಮನಲ್ಲಿಯೇ ಅರ್ಪಿಸಿದರು) (ಸ್ವಾಮಿನ್ ಸರ್ವಾಂತರಾತ್ಮನ್ ಶ್ರಾವಯಾಸ್ಮಾಂಶ್ಚಕಿಂಚಿತ್ ಇತ್ಯಾದಿಗಳಲ್ಲಿ ಇದೇ ಅರ್ಥವನ್ನೇ ಹೇಳಿರುವರು—ಅದನ್ನೇ ಈ ಮುಂದಿನ 'ವ್ಯಾವಶಾನ' ಇತ್ಯಾದಿಗಳೂ ಹೇಳುತ್ತವೆ.

ಸಪ್ತಸದ್ವಿದ್ಯಾಃ–ಏಳು ಸದ್ವಿದ್ಯೆಗಳು, (ಸಪ್ತಸ್ವಸೃಗಳು), (ಏಕೆಂದರೆ) ಸ್ವತಂತ್ರೇಶಸೃತತ್ವತಃ – ಸ್ವತಂತ್ರನಾದ ಸ್ವಾಮಿಯ ಮುಖದಿಂದ ಹೊರಬೀಳುವುದರಿಂದ), ಸ್ವಸ್ವಾಃ–ಸ್ವಸೃಗಳೆನಿಸುತ್ತವೆ; (ಏಕೆಂದರೆ) ಸ್ವಸ್ವಾಃ ತಮಗೆ ತಾವೇ ಇದ್ದವು; (ಪರಮಾತ್ಮನ ಉಚ್ಚಾರದಿಂದ ಪ್ರಕಟವಾದವು), ವಾ–ಮತ್ತು, ಪೂರ್ವಜಾಃ–ಮೂಲರೂಪದಿಂದಲೇ ಸೃಷ್ಟಿಪೂರ್ವದಲ್ಲಿಯೇ ವ್ಯಕ್ತವಾದ್ದರಿಂದ, (ಚತುರ್ಮುಖ ಸೃಷ್ಟಿಗಿಂತ ಮೊದಲು ಹುಟ್ಟಿದವು) ಸ್ವತಃ – ಸ್ವತಂತ್ರನಾದ ಶ್ರೀಹರಿಯ ಪರಮಾತ್ಮಮುಖಾಂಬುಜಾತ್ – ಸ್ವತಂತ್ರನಾದ ಪರಮಾತ್ಮನ ಇಚ್ಛೆಯಂತೆ, ಆತನ ಮುಖ ಕಮಲದಿಂದ ಹೊರಬಂದವಾದ್ದರಿಂದಲೂ (ಪೂರ್ವಜಗಳು).

**ಅರುಷೀಃ ಸರ್ವಭಿನ್ನಾಖ್ಯಹಯಗ್ರೀವರ್ಷಿಸಂಯುತಾಃ ।**
**ತದನ್ಯದ್ರಷ್ಟೃಶೂನ್ಯಾ ವಾ ಲಯೇಽಪ್ಯಚ್ಯುತಬುದ್ಧಿಗಾಃ ॥ ೫೪೮ ॥**

ಅಋಷೀಃ–ಎಂಬುದರ ಅರ್ಥವೇನೆಂದರೆ (ಈ ಸಪ್ತವಿದ್ಯೆಗಳು ಅಋಷಿಗಳು, ಎನಿಸುತ್ತವೆ; ಏಕೆಂದರೆ), ಸರ್ವಭಿನ್ನಾಖ್ಯ ಹಯಗ್ರೀವ ಸಂಯುತಾಃ–('ಅ' ಎಂದರೆ ಸರ್ವಭಿನ್ನನು), ಸರ್ವಭಿನ್ನನಾದ 'ಅ' ಶಬ್ದವಾಚ್ಯನಾದ ಹಯಗ್ರೀವನ (ಶ್ರೀಹರಿಯ) ನೆಂಬ ಋಷಿಯ ಸಂಬಂಧವುಳ್ಳ (ಪ್ರತಿಪಾದ್ಯನೆಂಬ ಸಂಬಂಧ), ವಾ–ಮತ್ತು, ತದನ್ಯ ದ್ರಷ್ಟೃಶೂನ್ಯಾಃ–ಹಯಗ್ರೀವಭಿನ್ನ ಮಂತ್ರದ್ರಷ್ಟನೆಂಬ ಋಷಿ ಇಲ್ಲದವುಗಳು, ಲಯೇ ಅಪಿ – ಮಹಾಪ್ರಲಯದಲ್ಲಿ ಸಹ, ಅಚ್ಯುತ ಬುದ್ಧಿಗಾಃ – (ತಾವು ನಾಶವಾಗದೇ – ತಮ್ಮ ನಾಶವಿಲ್ಲದೇ) ಅಚ್ಯುತನ ಬುದ್ಧಿ ಸ್ಥಿತವಾಗಿರುತ್ತದೆ.

---

ಹೇಳುವವು ವಿದ್ಯೆಗಳೇ ಅಲ್ಲ); ಸ್ವತಂತ್ರನಾದ ಶ್ರೀಹರಿಯ ಮುಖ ನಿಃಸೃತಗಳಾದ್ದರಿಂದ ಅವು, ಸ್ವಸೃಗಳೆಂದೂ ಪ್ರಸಿದ್ಧವಾಗಿವೆ; ಅವು 'ಪೂರ್ವಜಾಃ' ಎಂದೂ ಕರೆಯಲ್ಪಡುತ್ತವೆ; ಅನಾದಿಯಿಂದ ಇದ್ದ ಪ್ರಯುಕ್ತವೂ, ಮೂಲರೂಪದಿಂದಲೇ ಸ್ವತಂತ್ರನಾದ ಶ್ರೀಹರಿಯ ಮುಖ ಪದ್ಮದಿಂದ ಅಭಿವ್ಯಕ್ತವಾದ್ದರಿಂದಲೂ, ಪೂರ್ವಜಗಳೆನಿಸುತ್ತವೆ; (೫೪೭). ಅಋಷೀಃ ಎಂಬುದು ಸರ್ವಜಗದ್ಭಿನ್ನನಾದ ಹಯಗ್ರೀವನೇ (ಸ್ವಾರ್ಥವನ್ನು ಪೂರ್ಣವಾಗಿಬಲ್ಲ) ಮಂತ್ರದ್ರಷ್ಟ ಋಷಿಯಾಗಿವುಳ್ಳ, ಅನ್ಯ ದ್ರಷ್ಟಾರನಿಲ್ಲದ್ದರಿಂದ, ಮಹಾ ಪ್ರಲಯದಲ್ಲಿ ಸಹ ನಾಶವಾಗದ (ನಿತ್ಯವಾದ) ಶ್ರುತಿಯು, ಸಪ್ತವಿದ್ಯೆಗಳು, ಸದಾ ಅಚ್ಯುತ

**ವರ್ಣವ್ಯತ್ಯಾಸತೋಽಸ್ತ್ವಿತ್ಥಂ ನೋಽಚೇದಕ್ರೂರರೂಪಿಣಃ ।**
**ಉಜ್ಜಭಾರೋದ್ದಧಾರಾತ್ಮಭಾಷ್ಯಾದಿಗ್ರಂಥವಿಸ್ತರೇ ॥ ೫೪೯ ॥**

ವರ್ಣವ್ಯತ್ಯಾಸತಃ–(ಅಕಾರವು ಮೊದಲು ಇದ್ದು ಋಷೀಃ ಎಂಬುದಕ್ಕೆ ಬದಲಾಗಿ ರುಷೀಃ ಎಂದಿರುವುದರಿಂದಲೂ, 'ರುಷದಾಹೇ' ಎಂದಿರುವುದರಿಂದ, ಅರುಷೀಃ ಎಂಬುದಕ್ಕೆ ದಾಹವಿಲ್ಲದ ಎಂಬರ್ಥವಾಗಬಹುದೆಂದರೂ) ವರ್ಣವ್ಯತ್ಯಾಸದಿಂದ, ಇತ್ಥಂ–ಉಕ್ತವಾದ (ಹಯಗ್ರೀವನಲ್ಲದೇ ಅನ್ಯಋಷಿ ಇಲ್ಲದವುಗಳೆಂಬ) ಅರ್ಥವು ; ಅಸ್ತು–ಆಗಲಿ, ನೋಽಚೇತ್–(ವರ್ಣವ್ಯತ್ಯಾಸವಿಲ್ಲದೇ 'ಅರುಷೀಃ' ಎಂದೇ ಇದ್ದರೂ), ಹಾಗಲ್ಲದಿದ್ದರೆ, ಅಕ್ರೂರರೂಪಿಣಃ–ಶಾಂತರೂಪದವುಗಳೆಂದು (ತಾಪವಿಲ್ಲದ ಶಾಂತರೂಪಗಳುಳ್ಳ ಮತ್ತು ಶಾಂತಿಪ್ರಾಪಕಗಳಾದ್ದರಿಂದಲೂ) (ಆಗಲಿ–ಆಗುತ್ತದೆ) ; ಉಜ್ಜಭಾರ–ಉಜ್ಜಭಾರ ಎಂದರೆ, ಉದ್ದಧಾರ–ಉದ್ಧರಿಸಿದರು, ಆತ್ಮಭಾಷ್ಯಾದಿ ಗಂಥವಿಸ್ತರೇ–(ಶ್ರೀಮಧ್ವರು) ತಮ್ಮ ಸಪ್ತವಿದ್ಯೆಗಳ ಭಾಷ್ಯಾದಿ ಗ್ರಂಥಗಳ ವಿವರಣೆಯಲ್ಲಿ (ಹೇಳಿರುವರು).

**ಅಸದಸ್ಯಾಂಧಕೂಪೇಭ್ಯ ಉಜ್ಜಹ್ರೇ ವಾ ಬಲಾತ್ಪ್ರಭುಃ ।**
**ಹಭೌ ನಿಭೌ ಹೃಞಿ ಛಂದೋಭಾಗೇ ಕ್ವಾಪೀತಿ ಶಾಬ್ದಿಕಾಃ ।**
**ಜ್ಞಾನಾಯಾಸಾಮುದ್ಧಾರಸ್ತಾ ವಿದ್ಯಾನಾತ್ರಸಂಶಯಃ ॥ ೫೫೦ ॥**

ಪ್ರಭುಃ–ಶ್ರೀಮಧ್ವರು, ಬಲಾತ್–ಯುಕ್ತಿಬಲದಿಂದ, ಅಸದಸ್ಯಾಂಧಕೂಪೇಭ್ಯಃ–ಅಸಜ್ಜನರ (ಮಾಯಾವಾದಿ ಮೊದಲಾದವರ), ಮುಖವೆಂಬ ಅಂಧಕೂಪದಿಂದ, ವಾ–ಸಜ್ಜನರನ್ನು ಸಹ, ಉಜ್ಜಹ್ರೇ–ಉದ್ಧರಿಸಿದರು (ಬೀಳದಂತೆ

---

ಬುದ್ಧಿಸ್ಥಗಳೆಂದೂ ಹೇಳಿದೆ (೫೪೮). 'ಋ' ಕಾರವಿರುವಲ್ಲಿ 'ರು' ಕಾರವಿರುತ್ತದೆಂದ ವರ್ಣ ವ್ಯತ್ಯಾಸವನ್ನು ಗಮನಿಸದೇ 'ಅಋಷೀಃ' ಎಂದೇ ಇಟ್ಟುಕೊಂಡರೂ, ಹಯಗ್ರೀವನೇ ಋಷಿ ಎಂಬ ಅರ್ಥವಾಗುವುದಾದರೂ ಇರಲಿ ; 'ಅರುಷೀಃ' ಎಂದೇ ಇದ್ದರೂ, 'ರುಷ ದಾಹೇ' ಎಂಬ ಧಾತ್ವರ್ಥದಿಂದ, ದಾಹ (ತಾಪವಿಲ್ಲದ) ಶಾಂತಿಪ್ರಾಪಕ ಶ್ರುತಿಯೆಂಬರ್ಥವನ್ನು ತಿಳಿಯಲು ಬರುತ್ತದೆ ; 'ಉಜ್ಜಭಾರ' ಎನ್ನುವುದಕ್ಕೆ 'ಉದ್ದಧಾರ' ಎಂಬರ್ಥವನ್ನು ತಿಳಿಯಬೇಕು ; ಹೀಗೆ ಮಧ್ವರೂಪೀ ವಾಯುದೇವನೇ ಸಪ್ತ ವಿದ್ಯೆಗಳ ತನ್ನ ಭಾಷ್ಯಾದಿ ವ್ಯಾಖ್ಯಾನಗಳಲ್ಲಿ ಸ್ಪಷ್ಟಗೊಳಿಸಿರುವನು (೫೪೯). ಯುಕ್ತಿಬಲದಿಂದ, ಶ್ರೀಮಧ್ವರು, ಸಜ್ಜನರನ್ನು

ಅನುಗ್ರಹಿಸಿದರು) ; ಹಭೌ–ಹಕಾರ ಭಕಾರಗಳು, ನಿಭೌ–ಸಮಾನಗಳೆಂದೂ ಹೃಞ್–ಹೃಞ್ ಎಂಬ ಧಾತುವಿನಲ್ಲಿ, ಛಂದೋಭಾಗೇ–ವೇದಭಾಗದಲ್ಲಿ, ಕ್ವಾಪಿ–ಕೆಲವೆಡೆಯಲ್ಲಿ, (ಹಕಾರ ಭಕಾರಗಳ ವ್ಯತ್ಯಾಸದ ಪ್ರಯೋಗವು ಕಂಡುಬರುತ್ತದೆಂದು), ಶಾಬ್ದಿಕಾಃ–ಶಬ್ದಶಾಸ್ತ್ರಜ್ಞರು (ತಿಳಿಯುವರು) ; ಜ್ಞಾನಾಯ–ಜ್ಞಾನಾರ್ಥವಾಗಿ (ಸಜ್ಜನರ ಜ್ಞಾನಕ್ಕಾಗಿ), ಆಸಾಂ–ಇವುಗಳ, ಉದ್ಧಾರಃ–ಉದ್ಧಾರವೂ, ತಾಃ–ಅವು, ವಿದ್ಯಾಃ–ಸಪ್ತವಿದ್ಯೆಗಳೇ, ನಾತ್ರ ಸಂಶಯಃ–ಎಂಬಲ್ಲಿ ಸಂಶಯವಿಲ್ಲ.

**ಪೂಷಣಸ್ಯ ಹರೇಃ ಪೂರ್ಣಬಲಪ್ರೇರಣಕರ್ಮಣಃ ।**
**ವಪ್ರಿಂ ವರಣಮಿಚ್ಛನ್ ಸ ಪ್ರಸಾದಾಭಿದಮುತ್ತಮಂ ॥ ೫೫೦ ॥**

ಬಲಪ್ರೇರಣಕರ್ಮಣಃ–ಬಲ, ಮತ್ತು ಪ್ರೇರಣಕರ್ಮವುಳ್ಳ, ಪೂಷಣಸ್ಯ–ಶ್ರೀಹರಿಯ, (ಪೂಷಣಶಬ್ದ ನಿರ್ವಚನವೂ ಸೂಚಿತವಾಗಿದೆ), ವಪ್ರಿಂ–ವಪ್ರಿಂ ಎಂದರೆ, ವರಣಂ–ಆಶ್ರಯವನ್ನು, ಇಚ್ಛನ್–ಇಚ್ಛಿಸುವನಾದನು ಸಪ್ರಸಾದಾಭಿದಮುತ್ತಮಂ–ಶ್ರೀಹರಿಪ್ರಸಾದವೆಂಬ ಉತ್ತಮಾಶ್ರಯವನ್ನು, (ಶ್ರೀಮಧ್ವರು ಇಚ್ಛಿಸಿದರು–ಬೇರಾವ ಫಲವನ್ನು ಅಲ್ಲ).

**ಅಂತರಿಕ್ಷೇಂತರಿಕ್ಷಾಖ್ಯಾ ವ್ಯಾಕೃತಾಕಾಶಮಾನಿನಿ ।**
**ದುರ್ಗಾನನಾಂಬುಜೇ ಪೂರ್ವಂ ಸರ್ವಸ್ಯ ಜಗತಃ ಪುರಾ ।**
**ಜಾಜಾತಾಃ ಸಪ್ತವಿದ್ಯಾಸ್ತಾ ಅಂತಸ್ಸುಜನಚೇತಸಾಂ ॥ ೫೫೨ ॥**

---

ಮಾಯಾವಾದಿಗಳ ಮುಖವೆಂಬ ಅಂಧರೂಪದಿಂದ ರಕ್ಷಿಸಲಿಕ್ಕಾಗಿ, ಈ ಅನುಗ್ರಹವನ್ನು ಮಾಡಿರುವರು ; ಹಕಾರ ಭಕಾರಗಳು ಸಮಾನಗಳೆಂದೂ, 'ಹೃಞ್' ಧಾತುವಿನಲ್ಲಿ, ಭಕಾರವು, ವೇದಗಳ ಕೆಲವೆಡೆಗಳಲ್ಲಿ ವ್ಯತ್ಯಾಸದ ಪ್ರಯೋಗವು ಕಂಡುಬರುತ್ತದೆ ( ಇದನ್ನು ಛಾಂದಸವೆಂದು ) ಶಾಬ್ದಿಕರು (ವ್ಯಾಕರಣಜ್ಞರು) ಹೇಳಿರುವರು ; ಶ್ರೀಮಧ್ವರ ಸಪ್ತವಿದ್ಯೆಗಳ ಭಾಷ್ಯಾದಿಗಳು ಸಜ್ಜನಾನುಗ್ರಹಕ್ಕಾಗಿಯೇ ಎಂಬಲ್ಲಿ ಯಾವ ಸಂಶಯವೂ ಇಲ್ಲ (೫೫೦). ಸರ್ವರ ಜ್ಞಾನಾದಿ ಕರ್ಮಶಕ್ತಿಯ ಸ್ವತಂತ್ರ ಪ್ರೇರಕನಾದ ಶ್ರೀಹರಿಯು 'ಪೂಷಣ' ನಾಮಕನು ; ಆತನ ಉತ್ತಮ ಪ್ರಚಾರವನ್ನು (ವಪ್ರಿಯನ್ನು) ಆಶ್ರಯಿಸಿಯೇ ಈ ಭಾಷ್ಯಾದಿಗಳನ್ನು ಮಾಡಿದರೆಂದೂ ಹೇಳಲಾಗಿದೆ (೫೫೧). ಅವ್ಯಾಕೃತಾಕಾಶಭಿಮಾನಿಯಾದ ದುರ್ಗಾದೇವಿಯು, ಅಂತರಿಕ್ಷದಲ್ಲಿರುವಳು–ಅಂತರಿಕ್ಷ

**ಮಧ್ಯೇ ಯೋ ಮೋಸ್ಯಯಮುಯತ್ಸ್ವಯಂ ಚಾವಿದದಂಜಸಾ ।**
**ಆಹಾಂತರಿಕ್ಷೇ ಜಾತತ್ವಮನಾದಿತ್ವಂ ಚ ಸೂಚಯನ್ ॥ ೫೫೩ ॥**

ಅಂತರಿಕ್ಷೇ – ಆಕಾಶದಲ್ಲಿರುವ ಅಂತರಿಕ್ಷಾಖ್ಯಾ – ಅಂತರಿಕ್ಷನಾಮಕಳಾದ, ಅವ್ಯಾಕೃತಾಕಾಶಮಾನಿನಿ–ಅವ್ಯಾಕೃತಾಕಾಶದ ಅಭಿಮಾನಿಯಾದ, ದುರ್ಗಾನ–ನಾಂಬುಜೇ–ದುರ್ಗಾನಾಮಕ ಲಕ್ಷ್ಮೀರೂಪದ ಮುಖಪದ್ಮದಲ್ಲಿ, ಪೂರ್ವಂ–ಪೂರ್ವವೆಂದರೆ, ಸರ್ವಜಗತಃ–ಪುರಾ–ಸರ್ವಜಗತ್ತಿನ ಮೊದಲು, ಜಾ–ಜಾಎಂದರೆ, ಜಾತಾಃ–ಹುಟ್ಟಿದವುಗಳು (ಪ್ರಲಯಕಾಲವು ಮುಗಿಯುತ್ತ ಬರಲು, ಸೃಷ್ಟಿಗಾಗಿ ಪರಮಾತ್ಮನನ್ನು ದುರ್ಗಾದೇವಿಯು, ಸ್ತುತಿಸುತ್ತಿರುವಾಗ–ಸೃಷ್ಟಿಯ ಮೊದಲೇ, ವೇದಾದಿವಿದ್ಯೆಗಳು ಪ್ರಕಟವಾದವು–ಹುಟ್ಟಿದವು) ; ಸಪ್ತವಿದ್ಯಾಃ–ವೇದಾದಿಸಪ್ತ ವಿದ್ಯೆಗಳು ಸುಜನಚೇತಸಾಂ–ಸಜ್ಜನರ ಮನಸ್ಸುಗಳಿಗೆ, ಅಂತಃ–ಹಿತಕರವು (ನಿಶ್ಚಿತತತ್ವವನ್ನು ಬೋಧಿಸುವುದರಿಂದ–ಜ್ಞಾನಸಂಪಾದನೆಯಲ್ಲಿ ಅಂತಿಮಸಾಧನೆಗಳೂ ಆಗಿವೆ) : ಅನಾದಿತ್ವಂ ಚ – ಅನಾದಿತ್ವವನ್ನು (ಸಪ್ತವಿದ್ಯೆಗಳಿಗೆ), ಸೂಚಯನ್–ಸೂಚಿಸುವುದಾಗಿ, ಅಂತರಿಕ್ಷೇ ಜಾತತ್ವಂ–ಅಂತರಿಕ್ಷದಲ್ಲಿ ಹುಟ್ಟಿದ್ದೆಂದು, ಆಹ–(ಶ್ರುತಿಯು), ಹೇಳಿತು ; (ಸಪ್ತಸ್ವಸ್ರಾಃ ಎಂಬ ಶ್ರುತಿಯು ಹೇಳಿತು–ಇದರ ಅರ್ಥ ವಿವರಣೆಯು ಸಂಗ್ರಹವಾಗಿ ೪೪೫ನೇ ಶ್ಲೋಕದ ಅಡಿಟಿಪ್ಪಣಿಯಲ್ಲಿ ನಿರೂಪಿಸಲಾಗಿದೆ) ; ಸ್ವಯಂ–ತಾನೇ (ಶ್ರೀಮಧ್ವರೂಪೀವಾಯು

---

ನಾಮಕಳೇ ಆಗಿರುವಳು ; ಆಕೆಯು ಸೃಷ್ಟಿಕಾಲವು ಪ್ರಾಪ್ತವಾಗಲು (ಪ್ರಲಯಕಾಲದ ಏಳನೇ ಭಾಗವು ಉಳಿದಿರುವಾಗ) ವೇದಾಭಿಮಾನಿಯು ಆದ ತಾನೇ ಸೃಷ್ಟ್ಯರ್ಥವಾಗಿ ಪ್ರವೃತ್ತನಾಗೆಂದು ಭಗವಂತನನ್ನು ಪ್ರಾರ್ಥಿಸಿರುವಳು–ಆದ್ದರಿಂದ ಸರ್ವಜಗತ್ತಿನ ಸೃಷ್ಟಿಗೆ ಮೊದಲೇ ವೇದಗಳ ಅಭಿವ್ಯಕ್ತಿಯು ; ಹೀಗೆ ದುರ್ಗಾ ಮುಖಪದ್ಮದಿಂದ ಈ ಸಪ್ತ ವಿದ್ಯೆಗಳು ಉತ್ಪನ್ನವಾದ್ದರಿಂದಲೇ 'ಪೂರ್ವಜಾಃ' ಎಂದು ಹೇಳಲ್ಪಟ್ಟಿವೆ ; ಈ ವೇದಾದಿ ಸಪ್ತವಿದ್ಯೆಗಳನ್ನು ಸಜ್ಜನ ಹೃದಯದಲ್ಲಿ ನಿಂತು, ಶ್ರೀಮಧ್ವರೂಪೀ ವಾಯುದೇವನು, ತಾನು ಅವುಗಳ ಪೂರ್ಣವಾದ ಯಥಾರ್ಥಗಳನ್ನು ತಿಳಿದವನಾಗಿದ್ದು, ಅವರ ಯೋಗ್ಯತೆಯಂತೆ, ಪ್ರೇರಿಸಿ ತಿಳಿಸಿ ಕೊಟ್ಟಿರುತ್ತಾನೆ ; ಅಂತರಿಕ್ಷದಲ್ಲಿ ಉತ್ಪನ್ನವಾದವುಗಳೆಂದೂ ಅನಾದಿತ್ವವನ್ನು ಯಥಾಯೋಗ್ಯಾರ್ಥ ವಿನಿಮಯದಿಂದ ತಿಳಿಸಿಕೊಟ್ಟಿರುವರು (೫೫೨–೫೫೩).

ದೇವನೇ, ಅಂಜಸಾ-ಪೂರ್ಣವಾಗಿ (ಯಥಾರ್ಥವಾಗಿ), ಅವಿಂದತೇ-ತಿಳಿದವನಾಗಿ ಮಧ್ಯೇ-ಸಜ್ಜನಹೃದಯದಲ್ಲಿ ನಿಂತು, ಯೇಮೇ-(ಎಂದು ಶ್ರುತಿಯಲ್ಲಿರುವ ಶಬ್ದಕ್ಕೆ) ನ್ಯಯಮಯತ್-ಯಥಾಯೋಗ್ಯವಾಗಿ, ತಿಳಿಸಿಕೊಟ್ಟರು ಎಂದರ್ಥ.

**ಇತ್ಯಸ್ತೌತ್ಪವಮಾನಸ್ಯ ಸೂಕ್ತೇ ಯಂ ಸ್ಪಷ್ಟವಾಗಿಯಂ ।**
**ಸ ಮಧ್ವಃ ಪವಮಾನಾಂಶಃ ಸಿದ್ಧೋ ವಿದ್ವಚ್ಛಿರೋಮಣಿಃ ॥೫೫೪॥**

ಪ್ರಸಕ್ತಶ್ರುತಿಪ್ರತಿಪಾದ್ಯನು ಮಧ್ವನಾಮಕನಾಗಲಿ; ಆ ಮಧ್ವನಿಗೆ ಪವಮಾನತ್ವವು ಹೇಗೆಂದರೆ ಹೇಳುತ್ತಾರೆ :—

ಇತಿ-ಹೀಗೆ, ಪವಮಾನಸ್ಯ ಸೂಕ್ತೇ-ಪವಮಾನ ಸೂಕ್ತದಲ್ಲಿ, ಯಂ-ಯಾರನ್ನು, ಇಯಂ ಸ್ಪಷ್ಟವಾಕ್-ಈ ಸ್ಪಷ್ಟವಾದ ಮಧ್ವನಾಮವು, ಅಸ್ತೌತ್-ಸ್ತುತಿಸಿರುತ್ತದೆಯೋ, ಸ ಮಧ್ವಃ-ಆ ಮಧ್ವನು, ಪವಮಾನಾಂಶಃ-ಪವಮಾನಾಂಶನೆಂದು, ಸಿದ್ಧಃ - ಸಿದ್ಧವಾಯಿತು ; ವಿದ್ವಚ್ಛಿರೋಮಣಿಃ - ವಿದ್ವಚ್ಛಿರೋಮಣಿಗಳಾದ (ಪ್ರಸಿದ್ಧ ಶ್ರೀಮಧ್ವರೇ ಅವರು).

**ವಿಷ್ಟಂಭೋದಿವ ಇತ್ಯತ್ರಾಪ್ಯುಕ್ತೋ ಮಧ್ವೋ ಗುರುರ್ನಮ ।**
**ವಿಷ್ಟಂಭೋ ಧಾರಕೋ ಯೋಽಸೌ ದಿವೋಧಾರಣಶೀಲವಾನ್॥೫೫೫॥**

**ಧರುಣೋಽಸ್ಯಾಃ ಪೃಥಿವ್ಯಾಶ್ಚ ವಿಶ್ವಾಶ್ಚ ಕ್ಷಿತಯೋಽಸ್ಯ ಹಿ ।**
**ಹಸ್ತೇ ಹಸ್ತವಶಾ ಮಿಥ್ಯಾತ್ವಾಖ್ಯಬಾಧವಿಮೋಚನಾತ್ ॥ ೫೫೬ ॥**

---

ಪವಮಾನ ಸೂಕ್ತದಲ್ಲಿರುವ ಈ ಶ್ರುತಿವಾಕ್ಯವು ಸ್ಪಷ್ಟವಾಗಿ ಹೀಗೆ ಶ್ರೀಮಧ್ವರ ಕೃತಿಯನ್ನು ಸ್ತುತಿಸಿರುವುದರಿಂದ, ವಿದ್ವದಗ್ರೇಸರರಾದ ಇವರು ಪವಮಾನಾಂಶರವೆಂಬುದನ್ನು ಸಾಧಿಸುತ್ತದೆ (೫೫೪.) 'ವಿಷ್ಟಂಭೋದಿವೋಧರುಣಃ....' ಇತ್ಯಾದಿ ಶ್ರುತಿಯಲ್ಲಿ ಸಹ, ನಮ್ಮ ಗುರುಗಳಾದ ಶ್ರೀಮಧ್ವರೇ ಉಕ್ತರಾಗಿರುವರು; ವಿಷ್ಟಂಭರೆಂದರೆ ಧಾರಕರೆಂದರ್ಥ ; ಸ್ವರ್ಗಲೋಕವನ್ನು ಧರಿಸುವ ಸಹಜ ಶಕ್ತಿಯುಳ್ಳವರೇ, ಭೂಲೋಕ ಧಾರಕರೂ ಆಗಿದ್ದಾರೆ ; ಈ ಲೋಕಗಳಲ್ಲಿರುವ ಸಜ್ಜನರ, ಅಜ್ಞಾನವನ್ನು ಪರಿಹರಿಸಿ, ಮಾಯಾವಾದಿಗಳ ಮಿಥ್ಯಾತ್ವಬಾಧೆಯಿಂದ (ಆ ಲೋಕಗಳ ಸತ್ಯತ್ವವನ್ನು ಸಾರಿ) ಪರಿಹರಿಸಿದ್ದರಿಂದ, ಆ ಲೋಕಗಳು ಮತ್ತು

**ವಾಯೋ ತವಾಂಶುರಂಶೋಽಸೌ ಮಧ್ವಸ್ತಚ್ಛೀಲಶೀಲವಾನ್ ।**
**ನಿತರಾಂ ಯೋಗಯುಕ್ತತ್ವಾನ್ನಿಯುತ್ವಾನುತ್ಸ ಉತ್ಸುಕಃ ॥ ೫೫೭ ॥**

ವಿಷ್ಟಂಭ ಎಂಬ ಈ ಶ್ಲೋಕದಲ್ಲಿ, ಈ ಕೆಳಗಿನ, [1] 'ವಿಷ್ಟಂಭೋದಿವೋ ಧರುಣಃ ಪೃಥಿವ್ಯಾ' ಇತ್ಯಾದಿ ಶ್ರುತ್ಯರ್ಥವನ್ನು ಸಂಗ್ರಹಿಸುತ್ತಾರೆ :—

ವಿಷ್ಟಂಭೋ ಇತ್ಯತ್ರಾಪಿ–'ವಿಷ್ಟಂಭೋ' ಎಂಬ ಶ್ರುತಿಯಲ್ಲಿಯೂ, ಮಮ ಗುರುಃ–ನನ್ನ ಗುರುಗಳಾದ (ಜ್ಞಾನಿಗಳಾದ ಹಿರಿಯರು), ಮಧ್ವಃ–ಶ್ರೀಮಧ್ವರು, ಉಕ್ತಃ – ಹೇಳಲ್ಪಟ್ಟಿರುವರು ; ವಿಷ್ಟಂಭಃ – ವಿಷ್ಟಂಭವೆಂದರೆ, ಧಾರಕಃ – ಧರಿಸಿರುವರೆಂದರ್ಥ ; ಅಸೌ ಯಃ–ಈ ಮಧ್ವರೂಪೀ ವಾಯುದೇವನೇ, ದಿವಃ– ಸ್ವರ್ಗಲೋಕದ, ಧಾರಣಶೀಲವಾನ್–ಧರಿಸುವ ಸ್ವಾಭಾವಿಕ ಶಕ್ತಿಯುಳ್ಳವನೋ (ಅತನೇ), ಅಸ್ಯಾಃ–ಈ, ಪೃಥಿವ್ಯಾಃ ಚ–ಭೂಲೋಕದ ಧರುಣಃ–ಧಾರಕನೂ (ಆಗಿರುವನು) ; ವಿಶ್ವಾಶ್ಚ–ಸರ್ವ, ಕ್ಷಿತಯಃ–ಪೃಥಿವ್ಯಾದಿಲೋಕಗಳೂ, ಅಸ್ಯ ಹಿ ಹಸ್ತೇ–ಈತನ ಕೈಯಲ್ಲಿರುತ್ತವೆ (ಎಂದರೆ), ಹಸ್ತವಶಾಃ–ಹಸ್ತದಂತೆ ವಶದಲ್ಲಿರುತ್ತವೆ;

---

ಸಕಲ ಜಗತ್ತಿನ, ಸತ್ಯತ್ವವನ್ನು ಸ್ಥಾಪಿಸಿದ್ದರಿಂದ, ಅವರೇ ಸಕಲ ಲೋಕಧಾರಕ ವೆಂದು, ಶ್ರುತಿಯು 'ಹಸ್ತೇ' ಎಂದರೆ, ಕೈವಶಗಳೆಂಬ ಅರ್ಥವನ್ನು ಹೇಳಿರುತ್ತದೆ ; ಹೇ ವಾಯುದೇವ! ನಿನ್ನ ಅಂಶವನ್ನೇ ಶ್ರುತಿಯು 'ಅಂಶು'ವೆಂದು, ಮೂಲರೂಪದ ಸಹಜ ಶಕ್ತಿಗಳುಳ್ಳ ನಿನ್ನ ಅವತಾರಗಳನ್ನು ವಿವರಿಸಿದೆ (ಉಕಾರವು ತಾಚ್ಛೀಲ್ಯಾ- ರ್ಥಕವಷ್ಟೆ) ; ಅತಿಶಯವಾಗಿ ಯೋಗಯುಕ್ತನಾದ್ದರಿಂದ 'ನಿಯುತ್ವಾನ್' ಎಂದೂ, ಉತ್ಸಾಹಿಯಾದ್ದರಿಂದ, 'ಉತ್ಸ'ನೆಂದೂ ಆ ವಾಯುದೇವನನ್ನೇ

---

[1] ಪ್ರಸಕ್ತಶ್ರುತಿಯು ಹೀಗಿದೆ :—'ವಿಷ್ಟಂಭೋದಿವೋಧರುಣಃ ಪೃಥಿವ್ಯಾವಿಶ್ವಾ ಉತಕ್ಷಿತಯೋ ಹಸ್ತೇ ಅಸ್ಯ । ಅಸತ್ತ ಉತ್ಸೋ ಗೃಣತೇ ನಿಯುತ್ವಾನ್ಮಧ್ವೋ ಅಂಶುಃ ಪವತ ಇಂದ್ರಿಯಾಯ' ಎಂಬ ಶ್ರುತಿಯು ; ಇದರ ಅರ್ಥವು ಹೀಗಿದೆ :—(ಹೇ ಪವಮಾನ – ಎಲೈ ವಾಯುದೇವನೆ) ; ದಿವಃ–ಸ್ವರ್ಗಲೋಕದ, ವಿಷ್ಟಂಭಃ – ಆಧಾರ ಭೂತನು ; ಪೃಥಿವ್ಯಾಃ–ಭೂಲೋಕದ, ಧರುಣಃ–ಧಾರಣಮಾಡುವ ಸ್ವಭಾವವುಳ್ಳವನು; (ಎರಡೂ ಲೋಕಗಳ ಮಿಥ್ಯಾತ್ವವನ್ನು ನಷ್ಟಗೊಳಿಸಿದ್ದರಿಂದ (ಸಜ್ಜನರ ಗುರುತ್ವದಿಂದ) ಅವುಗಳ ಆಧಾರಕನಾಗಿ ಸತ್ಯತ್ವವನ್ನು ಸ್ಥಾಪಿಸಿದ್ದರಿಂದ), ('ಶ್ರೀಮದಾನಂದತೀರ್ಥ ತ್ರೈಲೋಕ್ಯಾಚಾರ್ಯಃ', ಎಂದು ವಾ. ಸ್ತು. ಯಲ್ಲಿ ಹೇಳಿದಂತೆ), ಉತ್ಸಃ–(ಶ್ರೀಹರಿ ಸ್ತೋತ್ರ ಮತ್ತು ಸರ್ವಕ್ರಿಯೆಗಳಿಂದ ಶ್ರೀಹರಿ ತುಷ್ಟಿಕರಣಗಳಲ್ಲಿ) ಮಹಾಉತ್ಸಾಹವುಳ್ಳ,

(ಯಾವ ಪ್ರಕಾರದಿಂದ ವಶವೆಂದರೆ); ಮಿಥ್ಯಾತ್ವಾಖ್ಯಬಾಧ ವಿಮೋಚನಾತ್–(ಸಮಸ್ತಜಗತ್ತು) ಮಿಥ್ಯೆಯಾದ್ದರಿಂದ ಬಾಧವುಳ್ಳದ್ದೆಂಬ ಬಾಧದಿಂದ ವಿಮೋಚನ ಮಾಡಿದ್ದರಿಂದ; ವಾಯೋ – ಹೇ ವಾಯುದೇವ!, ತವ – ನಿನ್ನ, ಅಂಶುಃ–ಅಂಶುವು; ಅಸೌ ಮಧ್ವಃ–ಈ ಶ್ರೀಮಧ್ವರು, ಅಂಶಃ–ಅಂಶನು (ಅಂಶುಃ ಎಂಬ ಉಕಾರವು), ತಾಚ್ಛೀಲ ಶೀಲತ್ವಾತ್–ಮೂಲರೂಪದ ಸ್ವಭಾವಶಕ್ತಿಯುಳ್ಳದ್ದಾದ್ದರಿಂದ (ಅಂಶನಾದವನು ಅಂಶುವಾದನು); ನಿತರಾಂ–ಅತಿಶಯವಾಗಿ, ಯೋಗ-ಯುಕ್ತತ್ವಾತ್ –ಯೋಗವುಳ್ಳವನಾದ್ದರಿಂದ, ನಿಯುತ್ವಾನ್ – ನಿಯುತ್ವಾನ್ ಎಂದು ಕರೆಸುವಿ; ಉತ್ಸುಕಃ–ಉತ್ಸಾಹಿಯು (ಆದ್ದರಿಂದ), ಉತ್ಸಃ–ಉತ್ಸನೆಂದೂ ಕರೆಯಲ್ಪಡುವಿ).

**ಹರಿಸ್ತುತಿಂ ಶ್ರೋತುಕಾಮಃ ಸರ್ವೈಶ್ಚಾದೃಶ್ಯರೂಪತಃ ।**
**ಅಸತ್ಸಂಜ್ಞಂ ಪರಂಬ್ರಹ್ಮ ಗೃಣತೇ ಸ್ತೋತ್ರಸಂಚಯೈಃ ॥ ೫೫೮ ॥**

ಹರಿಸ್ತುತಿಂ–ಶ್ರೀಹರಿಯ ಸ್ತುತಿಯನ್ನು, ಶ್ರೋತುಕಾಮಃ–ಕೇಳಲಿಚ್ಛಿಸಿದವನಾಗಿ, ಸರ್ವೈಶ್ಚ – ಎಲ್ಲರಿಂದಲೂ, ಅದೃಶ್ಯರೂಪತಃ – ಅದೃಶ್ಯವಾದ

---

(ಮಧ್ವರೂಪವನ್ನೇ) ನಿರೂಪಿಸಿರುತ್ತದೆ (೫೫೫–೫೫೭). ವಾಯುದೇವನು, ಶ್ರೀಹರಿಸ್ತುತಿಯನ್ನು ಸದಾ ಕೇಳುತ್ತಿರಬೇಕೆಂಬ ಇಚ್ಛೆಯಿಂದಲೇ ಸರ್ವಜೀವರಲ್ಲಿ ಅಂತರ್ಯಾಮಿರೂಪಗಳಿಂದ ಅದೃಶ್ಯನಾಗಿದ್ದುಕೊಂಡು, ಸಜ್ಜನರಿಂದ ಸಹ ಸಾಕಲ್ಯೇನ (ಪೂರ್ಣವಾಗಿ) ಗ್ರಾಹ್ಯನಲ್ಲದ್ದರಿಂದ 'ಅಸತ್' ಎಂಬ ನಾಮವುಳ್ಳ ಪರಬ್ರಹ್ಮನನ್ನು, ಸ್ತೋತ್ರ ಸಮೂಹಗಳಿಂದ ತಾನೇ ಸ್ತುತಿಸುತ್ತಿರುವನು (೫೫೮).

---

ನಿಯುತ್ವಾನ್–(ನಿತರಾಂ–ಅತಿಶಯವಾಗಿ, ಯುತ್–ಯೋಗವು, ತದ್ವಾನ್–ವುಳ್ಳವನಾದ), ಮಧ್ವಃ–ಮಧ್ವರೂಪಿ ವಾಯುದೇವನು, ಅಂಶುಃ–ನಿನ್ನ ಅಂಶನು (ಅಂಶಃ ಎಂಬುದಕ್ಕೆ ಬದಲಾಗಿ ಅಂಶುಃ ಎಂದು ತಾಚ್ಛೀಲಿಕ ಉತ್ವದಿಂದ ಮೂಲರೂಪದ ಸ್ವಭಾವವೇವುಳ್ಳದ್ದೆಂದು ಸೂಚಿಸುತ್ತದೆ) ಅಸತ್–(ದುರ್ಜನರಿಗೆ ಅಜ್ಞೇಯನಾದ್ದರಿಂದ ಅಸತ್ ಶಬ್ದವಾಚ್ಯನಾದ) ಪರಬ್ರಹ್ಮನನ್ನು, ಗೃಣತೇ - ಸ್ವಯಂ ಸ್ತುತಿಸುತ್ತಾನೆ (ಬಹುರೂಪಗಳ ನಿಮಿತ್ತವಾಗಿ ಬಹುವಚನ ಪ್ರಯೋಗವಿದೆ); ಇಂದ್ರಿಯಾಯ - (ತನ್ನ ವಾಗಿಂದ್ರಿಯ ವ್ಯಾಪಾರದಿಂದ ಹರಿಯನ್ನು ಸ್ತುತಿಯನ್ನು ಮಾಡಿರೆಂದು ಸಜ್ಜನರಿಗೆ ಬೋಧಿಸಿ) ಇಂದ್ರಿಯದ ಸಾರ್ಥಕತ್ವವನ್ನು ಪ್ರಕಟಮಾಡಲು; ಪವತೇ - ದೇಶದೇಶದಲ್ಲಿ ಸಂಚರಿಸುತ್ತಾನೆ (ಪವತೇ - ಗಮನವುಳ್ಳವನಾಗುತ್ತಾನೆ); (ರಚನಪಟುಮಥಾಪಾದ್ಯವಿದ್ಯಾಸಮುದ್ರ ವಾಗ್ದೇವೀ ಸಾ ಸು-

(ಅಂತರ್ಯಾಮಿ) ರೂಪಗಳಿಂದ, ಅಸತ್ಸಂಜ್ಞಂ – (ಸಜ್ಜನರಿಂದ ಸಾಕಲ್ಯೇನ ಗ್ರಾಹ್ಯನಲ್ಲದ್ದರಿಂದ ಅಸತ್ ಎಂದೂ) ಅಸತ್ ಶಬ್ದವಾಚ್ಯನಾದ, ಪರಂಬ್ರಹ್ಮ– ಪರಬ್ರಹ್ಮನನ್ನು, ಸ್ತೋತ್ರಸಂಚಯೈಃ – ಸ್ತುತಿಸಮೂಹಗಳಿಂದ, ಗೃಣತೇ – ಸ್ತುತಿಸುತ್ತಾನೆ.

**ವಾಗಿಂದ್ರಿಯಾಖ್ಯೇಂದ್ರಿಯಾಯ ಪವತೇ ಪ್ರೇರಣೇಚ್ಛಯಾ ।**
**ಸತ್ಸು ವಾಗ್ವೈಖರೀದಿತ್ಸುರೇವ ಸಂಚರತಿ ಕ್ಷಿತೌ ।**
**ಇತ್ಯರ್ಥೋಽತ್ರ ಯತಃ ಸಮ್ಯಗ್ದೃಶ್ಯತೇ ಪದಸಂಪದಾ ॥ ೫೪ ॥**

'ಇಂದ್ರಿಯಾಯಪವತೇ' ಎಂಬುದರ ಅರ್ಥವನ್ನು ವಿಶದವಾಗಿ ನಿರೂಪಿಸುತ್ತಾರೆ:—

ವಾಗಿಂದ್ರಿಯಾಖ್ಯೇಂದ್ರಿಯಾಯ – ವಾಗಿಂದ್ರಿಯವೆಂಬ ಇಂದ್ರಿಯದ, ಪ್ರೇರಣೇಚ್ಛಯಾ – ಪ್ರೇರಣೆಯನ್ನು ಇಚ್ಛಿಸಿ, ಪವತೇ – (ವಾಯುದೇವನು – ಶ್ರೀಮಧ್ವರು) ಸಂಚರಿಸುತ್ತಾನೆ; ಕ್ಷಿತೌ–ಭೂಮಿಯಲ್ಲಿ, ಸತ್ಸು–ಸಜ್ಜನರಲ್ಲಿ, ವಾಗ್ವೈಖರೀದಿತ್ಸುಃ – (ಶ್ರೀಹರಿಸ್ತುತಿಯಲ್ಲಿನ ಸಜ್ಜನರ) ವಾಗ್ವೈಖರಿಯನ್ನು (ವಾಗ್ವಿಸ್ತಾರವನ್ನು) ಕರುಣಿಸಲಿಕ್ಕಾಗಿ, ಏವ – (ವಿರಕ್ತಶಿರೋಮಣಿಗಳಾದ ಇವರಿಗೆ ಅನ್ಯಪ್ರಯೋಜನವಿಲ್ಲದ್ದರಿಂದ) ಇದಕ್ಕಾಗಿಯೇ, ಸಂಚರತಿ–ಸಂಚಾರ ಮಾಡುತ್ತಾರೆ; ಇತ್ಯರ್ಥಃ–ಹೀಗೆಂಬ ಅರ್ಥವು, ಪದಸಂಪದಾ–ಶಬ್ದಸಂಪತ್ತಿನಿಂದ, ಯತಃ–ಯಾವ ಕಾರಣದಿಂದ, ಸಮ್ಯಕ್–ಸ್ಪಷ್ಟವಾಗಿ, ಅತ್ರ–ಈ ಶ್ರುತಿಯಲ್ಲಿ,

---

ಮತ್ತು ಸಜ್ಜನರಿಗೆ ಶ್ರೀಹರಿ ಸ್ತುತಿಯಲ್ಲಿ ವಾಗ್ವೈಖರಿಯನ್ನು ಕರುಣಿಸಲಿಕ್ಕಾಗಿ, ಭೂಮಿಯಲ್ಲಿ ಸಂಚರಿಸಿ, ಅವರ ವಾಗಿಂದ್ರಿಯವನ್ನು ಯೋಗ್ಯ ಪ್ರೇರಣೆಯಿಂದ ಪವಿತ್ರಗೊಳಿಸುವರೆಂಬರ್ಥವನ್ನು 'ಇಂದ್ರಿಯಾಯ ಪವತೇ' ಎಂಬ ಶ್ರುತಿ ಶಬ್ದವು

---

ವಿದ್ಯಾದ್ರವಿಣದರೆಂದೂ ಕೇಶವಾನಂದತೀರ್ಥ ಭಗವತ್ಪಾದಾಬ್ಜ ಭಕ್ತಸ್ತುತಿಮುಕೃತ ಹರೇಃ- ಇತ್ಯಾದಿ, ವಾ.ಸ್ತು); (ಈ ಎಲ್ಲವೂ ಶ್ರೀಮಧ್ವರ) ವಿಶ್ವಾಃ - ಸಮಸ್ತ, ಕ್ಷಿತಯಉತ - ಭೂಲೋಕಾದಿಗಳೂ, ಅಸ್ಯ - ಶ್ರೀವಾಯುದೇವನ, ಹಸ್ತೇ–ಕೈಯಲ್ಲಿ (ವಶದಲ್ಲಿ), ತಿಷ್ಠಂತಿ - ಇರುತ್ತವೆ (ಮೂರೂ ಲೋಕಗಳ ಸುಜನರ ಗುರುಗಳಾದ್ದರಿಂದ) ('ಜಗದುತ- ವಶಗಂ' ಇತ್ಯಾದಿ ವಚನದಿಂದ ಸಹ), ಎಂದು ಈ ಅರ್ಥ ವಿಶೇಷಗಳನ್ನೇ ಶ್ರುತಿಯೂ ಹೇಳುತ್ತವೆ.

ದೃಶ್ಯತೇ – ತಿಳಿದುಬರುವುದೋ (ಅದರಿಂದ, ಮಮ ಗುರುಃ ಎಂದು ೫೫೫ನೇ ಶ್ಲೋಕಭಾಗದಲ್ಲಿ ಹೇಳಿದುದು ವರ್ಣಿಸಿದುದು ಯುಕ್ತವೇ ಆಗಿದೆ).

**ಸಿಂಹಂ ನ ಸಂತೇತಿ ವಾಕ್ಯೇ ಮಧ್ವಸ್ಯ ಚರಿತಂ ಜಗೌ ॥ ೫೬೦ ॥**

**ಸಿಂಹಂ ನೃಸಿಂಹಂ ವಿವೃತನಸೋಂತೋ ಯಸ್ಯ ತಂ ಸುಪಃ ।**
**ಲೋಪೇ ನ ಸಂತೇತಿ ಪದಸ್ಯಾರ್ಥಂ ದುರ್ಜನಸಂಹೃತೇಃ ॥ ೫೬೧ ॥**

**ಹರಿಂ ಭಕ್ತೇಷು ಶಾಂತತ್ವಾದರುಷಂ ರೋಷವರ್ಜಿತಂ ।**
**ಅಯಾಸಮಾಗತಂ ಸ್ತಂಭಾತ್ ಪ್ರಹ್ಲಾದಾರ್ಥಂ ಸಭಾಂತರೇ ।**
**ಅಸ್ಯ ಸಜ್ಜನವರ್ಗಸ್ಯ ದಿವೋ ಜ್ಞಾನದ್ಯುತೇಃ ಪತಿಂ ॥ ೫೬೨ ॥**

'ಸಿಂಹಂ ನ' ಎಂಬುದರಿಂದ 'ಸಿಂಹಂ ನ ಸಂತ ಮಧ್ವೋ' ಇತ್ಯಾದಿ ಶ್ರುತಿ ವಾಕ್ಯವನ್ನು ಸಂಗ್ರಹಿಸುತ್ತಾರೆ :—[1]

---

ಬೋಧಿಸುತ್ತದೆ ; ಈ ಅರ್ಥವಿಶೇಷವು ಶ್ರುತಿಶಬ್ದ ಸಂಪದದಿಂದ, ಸಿದ್ಧವಾಗುತ್ತದೆ; ವಿರಕ್ತ ಶಿರೋಮಣಿಗಳಾದ ಶ್ರೀಮಧ್ವರಿಗೆ ಅನ್ಯ ಪ್ರಯೋಜನವಿಲ್ಲ (೫೫೯). 'ಸಿಂಹಂನಸಂತ' ಎಂಬ ಶ್ರುತಿವಾಕ್ಯವೂ, ಶ್ರೀಮಧ್ವರ ಚರಿತ್ರೆಯನ್ನೇ ಕೀರ್ತಿಸಿರುತ್ತದೆ ; ಆ ಶ್ರುತಿಯಲ್ಲಿ 'ಸಿಂಹಂ' ಎಂಬುದಕ್ಕೆ 'ನೃಸಿಂಹ'ನೆಂದೂ, 'ನಸಂತ' ಎಂಬುದು, 'ಸುಪಾಂಸುಲುಕ್' ಎಂಬ ವ್ಯಾಕರಣ ನಿಯಮದಂತೆ, ನಸಂತಂ–ಎಂದರೆ ವಿವೃತವಾದ ನಾಸಾಪುಟಗಳುಳ್ಳ, ಎಂಬ ಅರ್ಥದಲ್ಲಿರುತ್ತದೆ ; ದುರ್ಜನ ಸಂಹಾರಕನಾದ್ದರಿಂದ 'ಹರಿ' ಎಂಬುದು ನೃಸಿಂಹನ ಅನ್ವರ್ಥವಾದ

---

[1] ಇಲ್ಲಿ ಪ್ರಸಕ್ತವಾದ ಶ್ರುತಿಯು, 'ಸಿಂಹಂ ನ ಸಂತ ಮಧ್ವೋ ಅಯಾಸಂ ಹರಿಮರುಷಂ ದಿವೋ ಅಸ್ಯ ಪತಿಂ। ಶೂರೋ ಯುತ್ಸು ಪ್ರಥಮಃ ಪೃಚ್ಛತೇ ಗಾ ಅಸ್ಯ ಚಕ್ಷಸಾ ಪರಿಪಾತ್ಯುಕ್ಷೇತಿ ಶ್ರುತಿಂ' ಎಂಬ ಶ್ರುತ್ಯರ್ಥವನ್ನು ಸಂಗ್ರಹಿಸಲಾಗಿದೆ ; ಶ್ರುತ್ಯರ್ಥವು ಹೀಗಿದೆ :—ಯುತ್ಸು - ವಾಗ್ಯುದ್ಧದಲ್ಲಿ (ವಾಗ್ಯುದ್ಧ ಪ್ರವೀಣರಲ್ಲಿ), ಶೂರಃ - ಶೌರ್ಯವುಳ್ಳವನೂ, ಪ್ರಥಮಃ - (ನೃಹರಿ ಶಿಷ್ಯರಲ್ಲಿ ಆದ್ಯರಾದ) ಶ್ರೀಮಧ್ವಾಚಾರ್ಯರು, ಅಸ್ಯ - ಸಜ್ಜನವರ್ಗದ, ದಿವಃ - ಜ್ಞಾನದ, ಪತಿಂ - ಒಡೆಯನಾದ (ದಾತಾರರಾದ), ಅರುಷಂ - (ಸಜ್ಜನರಲ್ಲಿ) ಕೋಪರಹಿತನಾದ, ಅಯಾಸಂ - (ಸ್ತಂಭದಿಂದ) ಪ್ರಾಪ್ತನಾದ, ಹರಿಂ - ದುರ್ಜನ ಸಂಹಾರಕನಾದ ಶ್ರೀಹರಿನಾಮಕ, ನ ಸಂತ - (ನ ಸಂತಂ) ವಿವೃತವಾದ

ಸಿಂಹಂನಸಂತೇತಿವಾಕ್ ಚ–‘ ಸಿಂಹಂನಸಂತಮಧ್ವೋ ’ ಇತ್ಯಾದಿ ವೇದ ವಾಕ್ಯವೂ, ಮಧ್ವಸ್ಯ–ಶ್ರೀಮಧ್ವಾಚಾರ್ಯರ, ಚರಿತಂ–ಚರಿತ್ರೆಯನ್ನು, ಜಗೌ–ಗಾನಮಾಡಿತು (ಹೇಳಿರುತ್ತದೆ) ; ಸಿಂಹಂ–ಸಿಂಹವೆಂದರೆ, ನೃಸಿಂಹಂ–ನೃಸಿಂಹ ರೂಪೀ ಶ್ರೀಹರಿಯನ್ನು, ವಿವೃತನಸಂತಃ ಯಸ್ಯ ತಂ–ವಿವೃತವಾದ (ಅಗಲವಾಗಿ ತೆರೆದ) ನಾಸಾಪುಟವುಳ್ಳವನು ಯಾವಾತನೋ ಅವನನ್ನು, ಸುಪಃ–ಲೋಪೇ–ಸುಪಾಂಸುಲುಗಿತಿ, ಸುಪೋಲ್ಲೋಪಃ).ನಸಂತಂ ಎಂಬುದು ನಸಂತ ಎಂದಾಗಿದೆ, ನಸಂತ ಇತಿಪದಸ್ಯ ಅರ್ಥಂ–ನಸಂತ ಎಂಬ ಪದದ ಅರ್ಥವನ್ನು (ತಿಳಿಯತಕ್ಕದ್ದು); ದುರ್ಜನಸಂಹೃತೇಃ ದುರ್ಜನಸಂಹಾರಕನಾದ್ದರಿಂದ, ಹರಿಂ–‘ ಹರಿ ’ ಶಬ್ದ ಮುಖ್ಯ ವಾಚ್ಯನಾದವನು ; ಭಕ್ತೇಷು – ಭಕ್ತರಲ್ಲಿ, ಶಾಂತತ್ವಾತ್ – ಶಾಂತನಾದ್ದರಿಂದ, ಅರುಷಂ–ಅರುಷನೆಂದರೆ, ರೋಷವರ್ಜಿತಂ – ಕ್ರೋಧರಹಿತನು ; ಅಯಾಸಂ – ಅಯಾಸಂ ಎಂದರೆ, ಸ್ತಂಭಾತ್–ಕಂಭದಿಂದ, ಪ್ರಹ್ಲಾದಾರ್ಥಂ–ಪ್ರಹ್ಲಾದನಿಗಾಗಿ ಸಭಾಂತರೇ – ಸಭಾಮಧ್ಯದಲ್ಲಿ (ಎಲ್ಲರೂ ನೋಡುತ್ತಿರುವಂತೆ), ಆಗತಂ – ಪ್ರಾಪ್ತನಾದವನು (ಎಂದರ್ಥ) ; ಅಸ್ಯ – ಅಸ್ಯ ಎಂದರೆ, ಸಜ್ಜನವರ್ಗಸ್ಯ – ಸಜ್ಜನ ಸಮೂಹದ, ದಿವಃ – ಜ್ಞಾನ ಪ್ರಕಾಶನಕ್ಕೆ, ಪತಿಂ – ನಿಯಾಮಕನಾದ (ಎಂದರ್ಥ).

---

ನಾಮವಾಗಿದೆ; ಭಕ್ತರಲ್ಲಿ ಸರ್ವದಾಶಾಂತನಾದ್ದರಿಂದ, ನೃಸಿಂಹನು‘ಅರುಷ’ನೆಂದೂ ಕರೆಯಲ್ಪಡುವನು ; ‘ಅಯಾಸಂ’ ಎಂದರೆ, ಪ್ರಹ್ಲಾದನಿಗಾಗಿ ಸಭಾಮಧ್ಯದಲ್ಲಿ, ಕಂಭದಿಂದ ಪ್ರಾಪ್ತನಾದನು – ಪ್ರಕಟನಾದನೆಂದರ್ಥ ; ಈ ನೃಸಿಂಹನು ಸಕಲ ಸಜ್ಜನ ಸಮೂಹದ ಜ್ಞಾನಪ್ರಕಾಶದ ನಿಯಾಮಕನಾಗಿರುವನು (೫೬೦–೫೬೨).

---

ನಾಸಾ ಪುಟಗಳುಳ್ಳ, ಸಿಂಹಂ - ನೃಸಿಂಹನನ್ನು, ಗಾಃ - ವಿದ್ಯೆಗಳನ್ನು, ಪೃಚ್ಛತೇ - (ಶಿಷ್ಯರಾಗಿ ವೇದಾದಿ ಸಕಲ ಸಚ್ಛಾಸ್ತ್ರಗಳ ಅರ್ಥವಿಚಾರವನ್ನು ಕುರಿತು) ವಿಚಾರ ಮಾಡು ತ್ತಾರೆ ; (ನರಸಿಂಹೋಽಖಿಲಾಜ್ಞಾನಮತಧ್ವಾಂತದಿವಾಕರಃ ; ಜಯತ್ಯಾನಂದತೀರ್ಥೇಷ್ಟ-ದೇವತಾನರಕೇಸರೀ ; ದೂರಪ್ರಧ್ವಸ್ತಧ್ವಾಂತಶಾಂತಪ್ರವಿತತಮನಸಾ ಭಾವಿತಾ ಭೂರಿ ಭಾಗೈಃ ; ಇತ್ಯಾದಿಗಳು ನೃಸಿಂಹ ಶಿಷ್ಯತ್ವವನ್ನು ಸಾಧಿಸುತ್ತವೆ) ; ಅಸ್ಯ - ನೃಸಿಂಹನ, ಚಕ್ಷಸಾ - ಜ್ಞಾನಚಕ್ಷುವಿನಿಂದ (ನೃಸಿಂಹೋಪದಿಷ್ಟ ಜ್ಞಾನದಿಂದ), ಉಕ್ಷಾ - ಜ್ಞಾನ ಪ್ರೋಕ್ಷಣೆಯನ್ನು ಮಾಡಿ, ಪರಿಪಾತಿ - ಸರ್ವತಃ ಸಜ್ಜನವರ್ಗವನ್ನು ರಕ್ಷಿಸುತ್ತಾರೆ.

**ಶೂರೋತಿಶೌರ್ಯವಾನ್ಯುತ್ಸು ವಾಗ್ಯುದ್ಧೇಷು ಮಹೀತಲೇ ।**
**ಮಧ್ವೋ ಮಧ್ವಾಭಿಧೋ ಯೋಗೀ ಶ್ರೋತೃಷು ಪ್ರಥಮಃ ಸದಾ ।**
**ಗಾ ಗೋಪದೋಕ್ತಸದ್ವಿದ್ಯಾವ್ಯಕ್ತ್ಯುತ್ಕರ್ಷಾಯ ಪೃಚ್ಛತೇ ॥ ೫೬೩ ॥**

**ಅಸ್ಯ ಪ್ರಸಾದಾದಾಪ್ತೇನ ಚಕ್ಷುಸಾ ಜ್ಞಾನಚಕ್ಷುಷಾ ।**
**ಸತ್ಸುಬೋಧೋಕ್ಷಣಂ ಕುರ್ವನ್ನುಕ್ಷಾ ಭಿಕ್ಷುಗಣಾಗ್ರಣೀಃ ।**
**ಪರಿಪಾತಿ ಸತಾಂ ಬೃಂದಮಿತ್ಯರ್ಥೋತ್ರ ಸ್ಫುಟೋ ಯತಃ ॥ ೫೬೪ ॥**

ಯುತ್ಸು–ಯುತ್ಸು (ಯುದ್ಧಮಾಡುವವರಲ್ಲಿ) ಎಂದರೆ, ವಾಗ್ಯುದ್ಧೇಷು–ವಾದದಲ್ಲಿ ಪ್ರಬಲರಾದವರಲ್ಲಿ, ಮಹೀತಲೇ–ಭೂಮಿಯಲ್ಲಿ ಶೂರಃ–ಶೂರನು ಎಂದರೆ, ಅತಿ ಶೌರ್ಯವಾನ್-ಮಹಾ ಪರಾಕ್ರಮಿಯು; ಮಧ್ವಃ-ಮಧ್ವನಾಮಕನೆಂದರೆ, ಮಧ್ವಾಭಿಧೋ ಯೋಗೀ–ಮಧ್ವ ಎಂಬ ನಾಮವುಳ್ಳ ಋಜುಯೋಗಿಯು, ಸದಾ–ಸರ್ವದಾ, ಶ್ರೋತೃಷು–ಶ್ರೋತೃಗಳಲ್ಲಿ, ಪ್ರಥಮಃ–ಮೊದಲಿಗರು (ಸರ್ವ ವಿದ್ಯೆಗಳನ್ನು ಭಗವನ್ಮುಖದಿಂದ ಶ್ರವಣಮಾಡಿದವರಲ್ಲಿ ಪ್ರಥಮರು); ಗಾಃ–ಗಾಎಂದರೆ, ಗೋಪದೋಕ್ತ ಸದ್ವಿದ್ಯಾವ್ಯಕ್ತ್ಯುತ್ಕರ್ಷಾಯ–ಗೋಪದದಿಂದ ಹೇಳಲಾಗುವ ಸದ್ವಿದ್ಯೆಗಳ ಅಭಿವ್ಯಕ್ತಿಯ ಉತ್ಕರ್ಷಕ್ಕಾಗಿ (ಋಜುಗಳು ಅನಾದಿ ಜ್ಞಾನವಂತರಾದ್ದರಿಂದ), ಪೃಚ್ಛತೇ–(ಅಶೇಷವಿಶೇಷಗಳನ್ನೂ) ಕೇಳಿ (ವಿಚಾರ

---

ಭೂಮಿಯಲ್ಲಿ ವಾಗ್ಯುದ್ಧದಲ್ಲಿ (ವಾದದಲ್ಲಿ) ಪ್ರವೀಣರೆಂಬುವರಲ್ಲಿ ಶ್ರೀಮಧ್ವರು ಅತಿಶೂರರು (ಅವರನ್ನು ಜಯಿಸುವವರಾರೂ ಇಲ್ಲ); ಮಧ್ವರೆಂಬ ನಾಮವುಳ್ಳ ಋಜುಯೋಗಿಗಳು, ಸಾಕ್ಷಾತ್ತಾಗಿ ಭಗವನ್ಮುಖದಿಂದ ವಿದ್ಯೆಗಳನ್ನು ಶ್ರವಣ ಮಾಡುವವರಲ್ಲಿ ಸದಾ ಪ್ರಥಮರು; ಯದ್ಯಪಿ ಅವರು (ಋಜುವರ್ಗದ ಜೀವರಾದ್ದರಿಂದ) ಸದಾ (ಅನಾದಿ) ಜ್ಞಾನವುಳ್ಳವರೇ; ಆದರೂ ಗೋಪದದಿಂದ ಹೇಳಲ್ಪಡುವ ಸದ್ವಿದ್ಯೆಗಳ ಉತ್ಕೃಷ್ಟವಾದ ಅಭಿವ್ಯಕ್ತಿಗಾಗಿ, ಭಗವಂತನಿಂದ ಪ್ರಶ್ನೆಮಾಡಿ ಆತನ ಪ್ರಸಾದದಿಂದ ಸಕಲ ವಿಶೇಷಗಳನ್ನು ತಿಳಿಯುತ್ತಾರೆ; ನೃಸಿಂಹನ ಪ್ರಸಾದದಿಂದ ಹೊಂದಿದ ದಿವ್ಯಜ್ಞಾನ ಚಕ್ಷುಗಳಾಗಿ, ಯತಿಶ್ರೇಷ್ಠರಾದ ತಾವು ಸಜ್ಜನರಲ್ಲಿ ಜ್ಞಾನವನ್ನು ವೃದ್ಧಿಗೊಳಿಸಲು ಸಂಕಲ್ಪಿಸಿ, ಸಂಚರಿಸಿ, ಸಜ್ಜನವೃಂದವನ್ನು ಸಲಹುವರೆಂಬರ್ಥವು ಈ ಶ್ರುತಿಯಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ (೫೬೩–೫೬೪).

ಮಾಡಿ) ತಿಳಿಯುತ್ತಾರೆಂದರ್ಥ ; ಅಸ್ಯ–ನೃಸಿಂಹನ, ಪ್ರಸಾದಾತ್–ಅನುಗ್ರಹ ದಿಂದ, ಆಪ್ತೇನ–ಹೊಂದಲ್ಪಟ್ಟ, ಚಕ್ಷುಸಾ–(ನರಸಿಂಹೋಪದಿಷ್ಟ) ಜ್ಞಾನದಿಂದ, ಜ್ಞಾನಚಕ್ಷುಷಾ-ಜ್ಞಾನಪೂರ್ತಿಯುಳ್ಳವರಾಗಿ, ಸತ್ಸು–ಸಜ್ಜನರಲ್ಲಿ, ಬೋಧಾಯ–ಉಪದೇಶಕ್ಕಾಗಿ, ಕ್ಷಣಂಕುರ್ವನ್–ಸಂಕಲ್ಪಮಾಡುವವರಾಗಿ (ನಿಶ್ಚಯಿಸಿದವ ರಾಗಿ), ಉಕ್ಷಾ–ಉಕ್ಷಾ ಎಂಬುದರ ಅರ್ಥವಿದು ; ಭಿಕ್ಷುಗಣಾಗ್ರಣೀಃ–ಯತಿ ಶ್ರೇಷ್ಠರಾದ ಶ್ರೀಮಧ್ವರು, ಸತಾಂ ವೃಂದಂ–ಸಜ್ಜನಸಮೂಹವನ್ನು, ಪರಿಪಾತಿ–ರಕ್ಷಿಸುತ್ತಾರೆ (ಜ್ಞಾನದಾನದಿಂದ ಸರ್ವ ವಿಧದ ರಕ್ಷಣೆಯನ್ನು ಮಾಡುತ್ತಾರೆ ; ಯತಃ–ಏಕೆಂದರೆ, ಇತ್ಯರ್ಥಃ–ಎಂಬರ್ಥವು, ಅತ್ರ–ಈ ಶ್ರುತಿಯಲ್ಲಿ, ಸ್ಫುಟಃ–ಸ್ಪಷ್ಟವಾಗಿದೆ.

**ಪ್ರಧಾರಾಮಧ್ವ ಇತ್ಯತ್ರಾಪ್ಯುಕ್ತೋ ಮಧ್ವಸ್ಯ ವಿಕ್ರಮಃ ॥ ೫೬೫ ॥**

ಪ್ರಧಾರಮಧ್ವ ಇತ್ಯತ್ರಾಪಿ–'ಪ್ರಧಾರಮಧ್ವೋ ಅಗ್ರಿಯೋ' ಎಂಬ ಶ್ರುತಿಯಲ್ಲಿಯೂ, ಮಧ್ವಸ್ಯ-ಶ್ರೀಮಧ್ವರ, ವಿಕ್ರಮಃ-ವಿಶೇಷಕೃತಿಗಳು, ಉಕ್ತಃ-ಹೇಳಲಾಗಿದೆ.[1]

**ಅಗ್ರ್ಯೋ ಮಧ್ವೋ ಮಧ್ವಮುನಿಃ ಪ್ರಕೃಷ್ಟಜ್ಞಾನಧಾರಯಾ ।**
**ಸಹಿತಾಃ ಸಪ್ತವಿದ್ಯಾಖ್ಯಾ ಮಹೀಃ ಸಮಹತೀರಪಃ ॥ ೫೬೬ ॥**

---

'ಪ್ರಧಾರಾ ಮಧ್ವೋ ಅಗ್ರಿಯೋ....' ಇತ್ಯಾದಿ ಶ್ರುತಿಯಲ್ಲಿಯೂ ಶ್ರೀಮಧ್ವರ ಕೃತಿವಿಶೇಷಗಳು ವರ್ಣಿಸಲ್ಪಟ್ಟಿವೆ (೫೬೫). 'ಅಗ್ರಿಯಃ ಮಧ್ವಃ' ಎಂದರೆ ಶ್ರೀಮಧ್ವ ಮುನಿಗಳು ಪ್ರಧಾರರೆನಿಸುವರು – ಪ್ರಕೃಷ್ಟವಾದ ಜ್ಞಾನಧಾರೆ ಯಿಂದ ಶೋಭಿಸುವುದರಿಂದ ; ಮಹೀರಪಃ' ಎಂದರೆ ಮಹತ್ತಾದ ಸಪ್ತ ವಿದ್ಯೆಗಳೆಂಬ ಜ್ಞಾನಧಾರೆಯುಳ್ಳವರು ; ವಂದ್ಯರಾದ್ದರಿಂದ ಅವರು 'ಹವಿ'ಗಳು ;

---

1 ಪ್ರಸಕ್ತವಾದ ಶ್ರುತಿಯು ಹೀಗಿದೆ ;—'ಪ್ರಧಾರಾಮಧ್ವೋ ಅಗ್ರಿಯೋ ಮಹೀ ರಪೋ ವಿಗಾಹತೇ । ಹವಿರ್ಹವಿಷ್ಣುವಂದ್ಯಃ ।'; ಇದರ ಅರ್ಥವೇನೆಂದರೆ :—ಅಗ್ರಿಯಃ–ಶ್ರೇಷ್ಠನು, ಹವಿಃ – ವಿಷ್ಣುವಿಗೆ ಹವಿಸ್ಸಿನಂತೆ ಪ್ರಿಯನು ; ಹವಿಷ್ಟು–ಹವಿರ್ಭೂತರಾದ ದೇವತೆಗಳಲ್ಲಿ, ವಂದ್ಯಃ–ಸ್ತುತ್ಯನು ; ಜ್ಞಾನಯಜ್ಞದಲ್ಲಿ, ವಿಷ್ಣುವಿನ ಪರಿವಾರ ರೂಪರಾದ (ಧ್ಯಾನಾರ್ಥವಾಗಿ ಆಹ್ವಾನಿಸಲ್ಪಡುವವ) ದೇವತೆಗಳಲ್ಲಿ ಶ್ರೇಷ್ಠನೆಂದರ್ಥ) ; ಹವಿಃ–ಯಜ್ಞ ವೇದಿಕೆಗೆ, 'ವಾಯುವಾಯಾಹಿ' ಎಂಬ ಮಂತ್ರದಿಂದ ಆಹ್ವಾನಿಸಲ್ಪಡುವ ದೇವತೆಗಳಲ್ಲಿ

**ಹವಿರ್ವಂದ್ಯಃ ಸ್ವಯಂ ವಿಷ್ಣೋರ್ಹವಿಃ ಪ್ರಿಯತಮತ್ವತಃ ।**
**ಧ್ಯಾತೃಭಿರ್ಜ್ಞಾನಯಜ್ಞೇಷು ಹೂಯಮಾನತ್ವತೋಽಪಿ ವಾ ॥೫೬೭॥**

ಅಗ್ರ್ಯೋಮಧ್ವಃ–ಮಧ್ವರು ಶ್ರೇಷ್ಠರು (ಎಂದು ಹೇಳಿರುವುದು), ಮಧ್ವ ಮುನಿಃ-ಶ್ರೀಮಧ್ವಮುನಿಗಳೇ (ಆಗಿರುವವರು), (ಪ್ರಧಾರಃ, ಎಂಬುದರ ಅರ್ಥವು), ಪ್ರಕೃಷ್ಟಜ್ಞಾನಧಾರಯಾ–ಉತ್ಕೃಷ್ಟಜ್ಞಾನಧಾರೆಯುಳ್ಳವರಾದ್ದರಿಂದ, (ಮಹೀರಪಃ ಎಂಬುದರ ಅರ್ಥವು), ಸಹಿತಾಃ ಸಪ್ತವಿದ್ಯಾಖ್ಯಾಮಹೀಃ – ಸಪ್ತವಿದ್ಯೆಗಳೆಂಬ ಭೂಧರಗಳಿಂದ ಸಹಿತವಾದುದು, ಸಮುಹತೀಃ–ಪರ್ವತಾದಿವಿಷಮಭೂಪ್ರದೇಶ ಗಳಿಂದ ಕೂಡಿದ, ಅಪಃ–ಸಪ್ತವಿದ್ಯೆಗಳನ್ನು (ಸಪ್ತವಿದ್ಯೆಗಳೆಂಬ ನದೀ ಜಲಗಳನ್ನು, (ವಿಗಾಹತಿ – ದಾಟುತ್ತಾರೆ – ವಿಚಾರಮಾಡುತ್ತಾರೆ) ; ಹವಿಃ – ಹವಿ, ಎಂದರೆ, ವಂದ್ಯಃ–ಸ್ತುತ್ಯರು, ಸ್ವಯಂ–ತಾವು, ವಿಷ್ಣೋಃ–(ಸಾಕ್ಷಾತ್) ವಿಷ್ಣುವಿಗೆ,

---

ಸಾಕ್ಷಾತ್ ಶ್ರೀಹರಿಗೆ ಪ್ರಿಯತಮರಾದ್ದರಿಂದ, ಆತನಲ್ಲಿ ಅರ್ಪಿಸುವ ಹವಿಸ್ಸಿ ನಂತೆಯೂ, ಜ್ಞಾನಯಜ್ಞದಲ್ಲಿ ಧ್ಯಾತೃಗಳಿಂದ ಆಹ್ವಾನಿಸಲ್ಪಡುವ ದೇವತೆಗಳಲ್ಲಿ ಶ್ರೇಷ್ಠರಾದ್ದರಿಂದಲೂ, 'ಹವಿಃ' ಎನಿಸುವರು ; ಸದಾ ವಂದ್ಯರಾದ್ದರಿಂದ ಅವರು

---

ಶ್ರೇಷ್ಠನು ; ಮಧ್ವಃ–ಮಧ್ವಾಚಾರ್ಯರು, ಪ್ರಧಾರಾಃ–ಪ್ರಕೃಷ್ಟವಾದ (ಉತ್ತಮವಾದ ಜ್ಞಾನಧಾರೆಯುಳ್ಳವರು, ಮಹೀಃ – ಮಹತ್ತರವಾದ (ಅತಿಶಯವಾದ ಮಹತ್ವವುಳ್ಳ), ಅಪಃ–ಋಗಾದಿಸಪ್ತವಿದ್ಯೆಗಳನ್ನು, ವಿಗಾಹತೇ–ಸ್ವಬುದ್ಧಿಯಿಂದ (ಸೂತ್ರಭಾಷ್ಯ ರಚನೆ ಗಾಗಿ) ವಿಚಾರ ಮಾಡುತ್ತಾರೆ.

ಅಥವಾ : ಅಗ್ರಿಯಃ–ಸ್ವಶಿಷ್ಯರ ಅಗ್ರದಲ್ಲಿ ಹೋದವರು, ಮುಂಭಾಗದಲ್ಲಿ ನಾಯಕ ರಾಗಿ ಹೋಗಿ), ಹವಿಃ–(ತುರುಷ್ಕರಾಜನಿಂದ ಗಂಗಾತರಣ ಮಹಿಮೆಯನ್ನು ಕುರಿತು ಪ್ರಶ್ನಿಸಲ್ಪಟ್ಟು, ಸದುತ್ತರದಿಂದ ತುಷ್ಟನಾದ ಆತನಿಂದ) ಸ್ತುತ್ಯನಾದ, ಮಹೀಃ–ಮಹಿಮಾತಿಶಯವುಳ್ಳ, ಅಪಃ–ಗಂಗಾಪ್ರವಾಹವನ್ನು (ಶಿಷ್ಯಸಮೇತ–ಅವರನ್ನು ಧರಿಸಿ) ದಾಟಿದವರಾದ ; ಅಥವಾ ಪ್ರಧಾರಾಃ–ಉತ್ಕೃಷ್ಟ ಸೂರ್ಯಧಾರಸಹಿತವಾದ ಮಾರ್ಗಸ್ಥ ವಿಷಮಭೂಪ್ರದೇಶಗಳನ್ನು, ಅಪಃ–ಸಂಚಾರಕ್ಕೆ ಪ್ರತಿಬಂಧಕಗಳಾದ ನದೀ ಪ್ರವಾಹಾದಿ ಗಳನ್ನು, ವಿಗಾಹತೇ–ದಾಟುತ್ತಾರೆ (ಈಶ್ವರದೇವನು ನಿಯಮವನ್ನು ಅತಿಕ್ರಮಿಸಿ, ಖನನ ಮಾಡದೇ ಮುಂದೆ ಹೋದುದನ್ನು, ಕೊಲ್ಲಲು ಬಂದ ಚೋರರಿಂದ ವಿಚಿತ್ರರೀತಿಯಿಂದ ಪಾರಾದುದನ್ನು ಮುಂತಾದ ಸುಮಧ್ವವಿಜಯೋಕ್ತ ಮಹಿಮೆಗಳೂ ಈ ಶ್ರುತಿಪದಗಳಿಂದ ಸೂಚಿತವಾಗಿವೆ ; ಅಣುಮಧ್ವವಿಜಯ ಸಂಗ್ರಹವಾಕ್ಯಾರ್ಥದ್ಯೋತಕಗಳಂತಿವೆ ; ಈ ಅರ್ಥವನ್ನೇ ಮುಂದಿನ ಶ್ಲೋಕಗಳು ಮನಸ್ಸಿನಲ್ಲಿಟ್ಟು ಪ್ರವೃತ್ತವಾಗಿವೆ).

ಪ್ರಿಯತಮತ್ವತಃ–ಪ್ರಿಯತಮರಾದ್ದರಿಂದ, ಹವಿಃ–ಹವಿಸ್ಸುಗಳಂತೆ (ಪ್ರಿಯತಮರು) ಜ್ಞಾನಯಜ್ಞೇಷು–ಜ್ಞಾನಯಜ್ಞಗಳಲ್ಲಿ, ಧ್ಯಾತೃಭಿಃ–ಉಪಾಸಕರಿಂದ, ಹೂಯಮಾನತ್ವತಃ ಅಪಿ ವಾ – ಆಹ್ವಾನಿಸಲ್ಪಡತಕ್ಕವರಾದ್ದರಿಂದ ಸಹ (ಹವಿಶ್ಶಬ್ದವಾಚ್ಯರು).

**ಹವಿರ್ಜ್ಞಾನಘೃತಸ್ರಾವೀ ತೇಷು ತತ್ಪ್ರತಿಮಾತ್ವತಃ ।**
**ಸ್ತುತ್ಯೋ ವಾ ತಾಃ ಸ್ಫುಟೀಕರ್ತುಂ ಸ್ವಬುದ್ಧ್ಯೇತ್ಥಂ ವಿಗಾಹತೇ**
|| ೫೬೮ ||

**ಪ್ರಕೃಷ್ಟಸೂರ್ಯಧಾರಾದಿಧಾರಾ ವಿಷಮಭೂಮಯಃ ।**
**ಯಾಸು ತಾಃ ಪರ್ವತಮುಹೀಃ ಸರ್ವಾಃ ಪಥಿ ಪಥಿ ಪ್ರಭುಃ ।**
**ಪ್ರಕೃಷ್ಟೋಗ್ರಪ್ರವಾಹಾಖ್ಯಧಾರಾಶ್ಚ ಸರಿತಾಮಪಃ || ೫೬೯ ||**

ತೇಷು – ಉಪಾಸನೆಗಾಗಿ ಆಹ್ವಾನಿಸಲ್ಪಡತಕ್ಕ ದೇವತೆಗಳಲ್ಲಿ, ತತ್ಪ್ರತಿಮಾತ್ವತಃ –(ದೇವತೆಗಳ ಮಧ್ಯದಲ್ಲಿ) ಧ್ಯೇಯನಾದ ವಿಷ್ಣುವಿನ ಪ್ರತಿಮೆಯಾಗಿರುವುದರಿಂದ (ಶ್ರೀಮಧ್ವರ ಹೃತ್ಕಮಲದಲ್ಲಿಯೇ ಸಜ್ಜನರು ವಿಷ್ಣುವನ್ನು ಧ್ಯಾನಿಸುತ್ತಾರೆ), ಜ್ಞಾನಘೃತಸ್ರಾವೀ–ಜ್ಞಾನವೆಂಬ ಘೃತವನ್ನು ಸ್ರವಿಸುವ, ಹವಿಃ–ಶ್ರೀಮಧ್ವರೇ ಹವಿಸ್ಸಿನಂತೆ (ವಿಷ್ಣುವಿಗೆ ಅತಿ ಪ್ರಿಯರು) ; ವಾ–ಅಥವಾ, ಸ್ತುತ್ಯಃ–ಅನ್ಯದೇವಾದಿಸಕಲರಿಂದ ವಂದ್ಯರು ; ತಾಃ–ಸಪ್ತವಿದ್ಯೆಗಳನ್ನು, ಸ್ಫುಟೀಕರ್ತುಂ–ಸ್ಪಷ್ಟಗೊಳಿಸಿಕೊಳ್ಳಲು, ಸ್ವಬುಧ್ಯಾ–ತಮ್ಮ ಮನಸ್ಸಿನಿಂದಲೇ, ಇತ್ಥಂ–

---

'ಹವಿ'ಗಳೇ (೫೬೬–೫೬೭). ಹವಿಸ್ಸು (ಅಗ್ನಿಯಲ್ಲಿ ಅರ್ಪಿಸಲು ಸಿದ್ಧವಾದ ಹವಿಸ್ಸು) ಘೃತದಂತೆ, ಘೃತವನ್ನು ಸ್ರವಿಸುವಂತೆ, ಶ್ರೀಮಧ್ವರು ಜ್ಞಾನಘೃತವನ್ನು ಸದಾ ಸ್ರವಿಸುತ್ತಿರುವರು ; ಯಜ್ಞದಲ್ಲಿ ಆಹ್ವಾನಿಸಲ್ಪಡುವ ದೇವತೆಗಳಲ್ಲಿ ಶ್ರೀವಿಷ್ಣುವಿನ ಉತ್ತಮ ಪ್ರತಿಮೆಯಂತಿರುವುದರಿಂದ, ಇವರೇ ಶ್ರೇಷ್ಠರು ; ಮತ್ತು ಅನ್ಯ ಸಕಲ ದೇವತೆಗಳಿಂದ ವಂದ್ಯರು ; ಸಪ್ತ ವಿದ್ಯೆಗಳ ಅರ್ಥವನ್ನು ಸ್ಪಷ್ಟಗೊಳಿಸಲು, ತಮ್ಮ ಮನಸ್ಸಿನಿಂಧ ವಿಚಾರ ಮಾಡುತ್ತಿರುವರು ; ಪ್ರಧಾರಾಃ ಎಂಬುದು ಇವರ ಶ್ರೀಮಧ್ವಾವತಾರದ ಮಹಿಮೆಯನ್ನು ಸೂಚಿಸುತ್ತದೆ ; ಪ್ರಕೃಷ್ಟವಾದ ಗಂಗಾದಿ ಜಲಧಾರೆಗಳುಳ್ಳ ನದಿಗಳಿಂದ ತುಂಬಿದ ಪರ್ವತಾದಿ ವಿಷಮ ಭೂಪ್ರದೇಶದಲ್ಲಿ, ಸಂಚರಿಸುವರಾಗಿ, ಲೀಲೆಯಿಂದ ಮುಂದೆ ಸಾಗುವಂತೆ;

*

ಹೀಗೆ, ವಿಗಾಹತೇ–ವಿಚಾರಮಾಡುತ್ತಾರೆ; (ಪ್ರಧಾರಾಃ ಎಂಬುದರ ವಿವರಣೆಯನ್ನು ನಿರೂಪಿಸುತ್ತಾರೆ), ಪ್ರಕೃಷ್ಟ ಸೂರ್ಯಧಾರಾದಿಧಾರಾಃ–ಉತ್ಕೃಷ್ಟವಾದ ಸೂರ್ಯಕಿರಣಗಳ ಧಾರೆಯನ್ನು–ಪ್ರವಾಹವನ್ನು ಧರಿಸುವ, ವಿಷಮಭೂಮಯಃ–ಹಳ್ಳಗುಡ್ಡಗಳುಳ್ಳಭೂಪ್ರದೇಶಗಳು, ಯಾಸು–ಯಾವ ಪ್ರದೇಶಗಳಲ್ಲಿ, ತಾಃ–ಆ (ಸಪ್ತವಿದ್ಯೆಗಳೆಂಬ) ನದಿಗಳು, ಪರ್ವತಮಹೀಃ–ಪರ್ವತಪ್ರದೇಶಗಳಾದ, ಸರ್ವಾಃ–ಎಲ್ಲವನ್ನೂ, ಪ್ರಭುಃ–ಶ್ರೀಮಧ್ವರು, ಪಥಿಪಥಿ–ಪ್ರತಿಮಾರ್ಗದಲ್ಲಿ, ಪ್ರಕೃಷ್ಟೋಗ್ರ ಪ್ರವಾಹಾಖ್ಯಧಾರಾಶ್ಚ–ಉಗ್ರಪ್ರವಾಹಗಳೆಂಬ ಧಾರೆಗಳುಳ್ಳ ಸರಿತಾಂ–ನದಿಗಳ, ಅಪಃ–ಜಲವನ್ನು (ಬದರಿಕಾಶ್ರಮಮಾರ್ಗದಲ್ಲಿ ಎದುರಿಸುತ್ತಿದ್ದರು–ಸಪ್ತವಿದ್ಯೆಗಳ ಭಾಷ್ಯಾದಿರಚನೆಯಲ್ಲಿ ಉಗ್ರವಾದ ವಿರೋಧಗಳನ್ನು ಲೀಲೆಯಿಂದ ಪರಿಹರಿಸಿಕೊಂಡು ಮುಂದರಿಯುತ್ತಿದ್ದರೆಂಬ ಅರ್ಥವನ್ನು ಸೂಚಿಸುತ್ತವೆ).

**ಅಗ್ರ್ಯೋ ಮಧ್ವೋ ಮಧ್ವಮುನಿರ್ಗಚ್ಛನ್ ಬದರಿಕಾಶ್ರಮಂ ।**
**ಅಗ್ರೀಭೂತ್ವಾ ವ್ರಜನ್ ವ್ಯಾಸಾವಗ್ರಿಯೋಗ್ರೇಸರಸ್ತದಾ ॥ ೫೭೦ ॥**
**ನೇತ್ಯಾಹೂತೋ ವ್ಲೇಚ್ಛಭಟೈಸ್ತ್ಯೈರಾಹೂತಸ್ವಸೇವಿಷು ।**
**ವಂದ್ಯಃ ಸ್ತುತ್ಯಚರಿತ್ರಶ್ಚ ಲೀಲಯೈವ ವಿಗಾಹತೇ ॥ ೫೭೧ ॥**
**ಇದಂ ಚ ನಾದ್ಭುತಂ ತಸ್ಯ ಯೋ ಹವಿರ್ವಾಯುರೂಪತಃ ।**
**ಆಹೂಯತೇ ಯಜ್ಞವೇದ್ಯಾಂ ತತ್ರಾಹೂತಸುರೇಷು ಚ ॥ ೫೭೨ ॥**

ಅಗ್ರ್ಯಃ ಮಧ್ವಃ–ಶ್ರೇಷ್ಠರಾದ ಮಧ್ವನಾಮಕ, ಮಧ್ವಮುನಿಃ–ಶ್ರೀಮಧ್ವಮುನಿಗಳು, ಬದರಿಕಾಶ್ರಮಂ ಗಚ್ಛನ್–ಬದರಿಕಾಶ್ರಮಕ್ಕಾಗಿ ಹೊರಟು, ಅಗ್ರೀಭೂತ್ವಾ–ಮುಂದಾಳಾಗಿ (ನಾಯಕರಾಗಿ), ವ್ರಜನ್–ಪ್ರಯಾಣಮಾಡುವವರಾಗಿ,

---

ಸಪ್ತವಿದ್ಯೆಗಳ ವ್ಯಾಖ್ಯಾನಗಳನ್ನು ರಚಿಸುವುದರಲ್ಲಿ, ಉಗ್ರವಾದ ವಿರುದ್ಧವಾದಗಳನ್ನು ಲೀಲೆಯಿಂದ ಅತಿಕ್ರಮಿಸಿ–ಪರಿಹರಿಸಿ, ಸಜ್ಜನರನ್ನು ಅನುಗ್ರಹಿಸಿರುವ ಸಮರ್ಥರಿವರು (೫೬೮–೫೬೯). ಅಗ್ರ್ಯ ಮಧ್ವರೆಂಬುವರೇ ಶ್ರೀಮಧ್ವಮುನಿಗಳು; ಬದರಿಕಾಶ್ರಮಕ್ಕೆ ಪ್ರಯಾಣ ಮಾಡುವಾಗ, ಎಲ್ಲರಿಗೂ ಮುಂಭಾಗದಲ್ಲಿ ನಾಯಕರಾಗಿ ಸ್ವಶಿಷ್ಯರ ಸಮೇತ ಹೋಗುತ್ತಿರುವಾಗ, ಗಂಗಾಪ್ರವಾಹವನ್ನು ಲೀಲೆಯಿಂದ ಶಿಷ್ಯ ಸಮೇತರಾಗಿ ದಾಟಿದ್ದರಿಂದ, ಆಶ್ಚರ್ಯ

ಅಸೌ ವಾ – ಇವರೇನೇ, ಸದಾ – ಸರ್ವದಾ, ಅಗ್ರಿಯಃ – ಮುಂದಿರುವವರು, ಅಗ್ರೇಸರಃ–ಆದ್ದರಿಂದಲೇ ಶ್ರೇಷ್ಠನಾಯಕರು; ಮ್ಲೇಚ್ಛಭಟೈಃ–ತುರುಷ್ಕಭಟರಿಂದ, ನೇತ್ಯಾಹೂತಃ–(ರಾಜನನ್ನು ಕಾಣದೇ ಹೋಗಕೂಡದೆಂದು ನಿರ್ಬಂಧಿಸಲ್ಪಟ್ಟು) ರಾಜನ ಬಳಿಗೆ ಕರೆಯಲ್ಪಟ್ಟು, ತೈಃ–ಆ ಭಟರಿಂದ, ಆಹೂತಸ್ವಸೇವಿಷು–ಕರೆಯಲ್ಪಟ್ಟ ತಮ್ಮ ಶಿಷ್ಯರಲ್ಲಿ, ವಂದ್ಯಃ – ವಂದ್ಯರೆಂದರೆ, ಸ್ತುತ್ಯಚರಿತ್ರಃ – ಸ್ತೋತ್ರಾರ್ಹವಾದ ಚರಿತ್ರೆಯುಳ್ಳವರು (ಸ್ತುತಿಯೋಗ್ಯವಾದ ಚರಿತೆಯುಳ್ಳವರು), ಲೀಲಯಾ ಏವ–ಆಯಾಸವಿಲ್ಲದೇ (ತುರುಷ್ಕಭಾಷೆಯಲ್ಲಿಯೇ ರಾಜನೊಂದಿಗೆ ವ್ಯವಹರಿಸಿ), ವಿಗಾಹತೇ–(ಗಂಗೆಯನ್ನು ದಾಟಿದ ಪರಿಯನ್ನು ವಿವರಿಸಿ) ವಿಚಾರದಿಂದ ಸಂತೃಪ್ತಿಗೊಳಿಸಿದರು ; ತಸ್ಯ – ಶ್ರೀಮಧ್ವರಿಗೆ, ಇದಂ ಚ – ಇದಾದರೋ (ಹೀಗೆ ಗಂಗಾತರಣವೂ, ರಾಜನಸಂತೃಪ್ತಿಯೂ), ಅದ್ಭುತಂ ನ–ಆಶ್ಚರ್ಯವಲ್ಲ ; ಯಃ–ಯಾವ ಇವರು, ವಾಯುರೂಪದಿಂದ (ಪವಮಾನರಾಗಿ), ಹವಿಃ–ದೇವವಂದ್ಯರಾಗಿದ್ದು, ಯಜ್ಞವೇದ್ಯಾಂ–ಯಜ್ಞವೇದಿಯಲ್ಲಿ (ವೇದಿಕೆಗೆ), ಆಹೂಯತೇ–ಆಹ್ವಾನಿಸಲ್ಪಡುವರೋ ಚ–ಮತ್ತು, ತತ್ರ–ಅಲ್ಲಿಗೆ (ಯಜ್ಞಕ್ಕೆ), ಆಹೂತಸುರೇಷು–ಆಹ್ವಾನಿತರಾದ ದೇವತೆಗಳಲ್ಲಿ (ಹವಿಷ್ಷು–ಸ್ತುತ್ಯರಲ್ಲಿ ವಂದ್ಯಃ ಇತ್ಯಾದಿ ಮುಂದಿನ ಶ್ಲೋಕದಿಂದ ಅನ್ವಯಪೂರ್ಣವಾಗುತ್ತದೆ).

**ಹವಿಷ್ಷು ವಂದ್ಯಸ್ತಸ್ಯೇದೃಙ್ಮಹಾತ್ಮ್ಯಂ ಯುಕ್ತಮೇವ ಹಿ ।**
**ಇತಿ ವಾ ಸಾ ಶ್ರುತಿಃ ಸತ್ಸು ಪ್ರಸಿದ್ಧಾಂ ತತ್ಕಥಾಂ ಜಗೌ ॥ ೫೭೩ ॥**

ಹವಿಷ್ಷು–ಸರ್ವವಂದ್ಯರಲ್ಲಿ, ವಂದ್ಯಃ–ಮುಖ್ಯವಂದ್ಯರು; ತಸ್ಯ–ಆ ಮಧ್ವರೂಪೀವಾಯುದೇವನಿಗೆ, ಈದೃಕ್ – ಈ ಪ್ರಕಾರವಾದ, ಮಹಾತ್ಮ್ಯಂ –

---

ಚಕಿತನಾದ ತುರುಷ್ಕರಾಜನೊಂದಿಗೆ, ಆತನ ಭಾಷೆಯಲ್ಲಿಯೇ ವ್ಯವಹರಿಸಿ ಸಂತೃಪ್ತಿಗೊಳಿಸಿ ಅಭಿವಂದಿತರಾದ ಮುಂತಾದ ಶ್ರೀಮಧ್ವರ ಲೀಲೆಗಳನ್ನು ಸೂಕ್ಷ್ಮವಾಗಿಯೇ ವರ್ಣಿಸುತ್ತದೆ ; ಈವಿಧ ಲೀಲೆಗಳು ವಾಯ್ವವತಾರರಾದ ಶ್ರೀಮಧ್ವರಲ್ಲಿ ಏನೂ ಅದ್ಭುತವಲ್ಲ; ಸ್ವಶಿಷ್ಯರಮಧ್ಯದಲ್ಲಿ ಇವರ ತೇಜಸ್ಸನ್ನು ಕಂಡು ಬೆರಗಾಗಿ, ಇವರನ್ನೇ ಪ್ರಶ್ನಿಸಿದ ತುರುಷ್ಕ ರಾಜನಂತೆ, ಇವರು ಸರ್ವಸ್ತುತ್ಯರು ; ಯಜ್ಞವೇದಿಕೆಗೆ ಆಹ್ವಾನಿಸಲ್ಪಡುವ ದೇವತೆಗಳ ಮಧ್ಯದಲ್ಲಿ ಸರ್ವವಂದ್ಯರಾದ ವಾಯುದೇವನ ಅವತಾರರಲ್ಲವೇ ? (೫೭೦–೫೭೨). ಹವಿಸ್ವೀಕಾರ

ಮಹಿಮೆಯು, ಯುಕ್ತಂ ಏವ ಹಿ–ಯೋಗ್ಯವೇ ಆಗಿದೆ ; ಇತಿ ವಾ–ಹೀಗೆಂದೂ, ಶ್ರುತಿಃ–'ಪ್ರಧಾರಾಮಧ್ವೋ' ಎಂಬ ಶ್ರುತಿಯು, ಸತ್ಸು–ಸಜ್ಜನರಲ್ಲಿ, ಪ್ರಸಿದ್ಧಾಂ–(ಮಧ್ವವಿಜಯಾದಿಗಳಲ್ಲಿ) ಪ್ರಸಿದ್ಧವಾದ, ತತ್ಕಥಾಂ–ಆ ಶ್ರೀಮಧ್ವರ ಕಥೆಯನ್ನು, ಜಗೌ–ಕೀರ್ತಿಸಿರುತ್ತದೆ.

**ಅಸ್ಮಭ್ಯಮಿಂದವಿತ್ಯತ್ರಾಪ್ಯಸ್ಮದ್ಗುರುರಭಿಷ್ಟುತಃ ॥ ೫೭೪ ॥**

ಅಸ್ಮಭ್ಯಮಿಂದವಿತಿ – 'ಅಸ್ಮಭ್ಯಮಿಂದವಿಂದ್ರ' ಎಂಬ, ಅತ್ರಾಪಿ – ಈ ಶ್ರುತಿಯಲ್ಲಿಯೂ, ಅಸ್ಮದ್ಗುರುಃ–ನಮ್ಮ ಗುರುಗಳಾದ ಶ್ರೀಮಧ್ವರು, ಅಭಿಷ್ಟುತಃ–ವಿಶೇಷವಾಗಿ ಸ್ತುತಿಸಲ್ಪಟ್ಟಿರುವರು. [1]

**ಅಭೀಷ್ಟದಾನಶೀಲತ್ವಾದಿಂದೋ ಹೇ ಪವಮಾನ ತೇ ।**
**ಯೋಽವತಾರೋ ಮಹೈಶ್ವರ್ಯವಂತಂ ನಾರಾಯಣಂ ಸದಾ ।**
**ಯುನಕ್ತೀತೀಂದ್ರಯುರ್ನಾಮ್ನಾ ಮಧ್ವೋ ಮಧ್ವ ಇತೀರಿತಃ**
**॥ ೫೭೫ ॥**

---

ಕ್ಕಾಗಿ ಯಜ್ಞಗಳಲ್ಲಿ ಆಹ್ವಾನಿತರಾಗುವ ಹವಿಃಶಬ್ದವಾಚ್ಯರಾದ ದೇವತೆಗಳಲ್ಲಿ ಶ್ರೇಷ್ಠರಾದ ಶ್ರೀಮಧ್ವರಲ್ಲಿ ಈವಿಧ ಮಾಹಾತ್ಮ್ಯೆಯು ಯುಕ್ತವೇ ಆಗುತ್ತದೆ; ಈ ಮುಂತಾದ ಸಜ್ಜನರಲ್ಲಿ ಪ್ರಸಿದ್ಧವಾಗಿರುವ ಶ್ರೀಮಧ್ವರ ಮಹಿಮೆಗಳನ್ನು (ಕಥೆಗಳನ್ನು) ಸತ್ಯವೆಂದು ಪ್ರಸಕ್ತ ಶ್ರುತಿಯು ಸ್ಥಾಪಿಸಿ ಕೀರ್ತಿಸಿರುತ್ತದೆ (೫೭೩). 'ಅಸ್ಮಭ್ಯಮಿಂದವಿಂದ್ರಿಯುರ್ಮಧ್ವಃ ಪವಸ್ಯಧಾರಯಾ,' ಇತ್ಯಾದಿ ಶ್ರುತಿಯಲ್ಲಿ ಸಹ ನಮ್ಮ ಗುರುಗಳಾದ ಶ್ರೀಮಧ್ವರೇ ಸ್ತುತಿಸಲ್ಪಟ್ಟಿರುವರು (೫೭೪). ಹೇ ಪವಮಾನ; ವಾಯುದೇವ ! ಅಭೀಷ್ಟ ಪ್ರದನಾದ್ದರಿಂದ ನೀನೇ ಇಂದು ಶಬ್ದ ವಾಚ್ಯನು ; ಮಹೈಶ್ವರ್ಯವಂತನಾದ ನಾರಾಯಣನು (ಮುಖ್ಯ) ಇಂದ್ರ ಶಬ್ದ ವಾಚ್ಯನು ; ಸದಾ ಆತನಿಂದ ಕೂಡಿಯೇ ಇರುವನಾದ್ದರಿಂದ, ಇಂದ್ರಿಯು

[1] ಪ್ರಸಕ್ತಶ್ರುತಿಯು 'ಅಸ್ಮಭ್ಯಮಿಂದವಿಂದ್ರಯುರ್ಮಧ್ವಃ ಪವಸ್ವಧಾರಯಾ । ಪರ್ಜನ್ಯೋ ವೃಷ್ಟಿಮಾಂ ಇವ ।' ಎಂದಿರುತ್ತದೆ ; ಈ ಶ್ರುತಿಯ ಅರ್ಥವೇನೆಂದರೆ:— ಹೇ ಇಂದೋ – ಇಷ್ಟದಾನಶೀಲನಾದ್ದರಿಂದ ಇಂದುನಾಮಕನಾದ ಹೇ ಪವಮಾನ !, ಇಂದ್ರಯುಃ–ಇಂದ್ರಯುನಾಮಕನಾದ (ಪರಮೈಶ್ವರ್ಯಸಂಪನ್ನನಾದ ಪರಮಾತ್ಮನನ್ನು

**ತೇನ ರೂಪೇಣ ವಿಜ್ಞಾನಧಾರಯಾ ಸಹ ಸರ್ವದಾ ।**
**ಅಸ್ಮಭ್ಯಮಸ್ಮಾನುದ್ದಿಶ್ಯ ಪರ್ಜನ್ಯ ಇವ ವೃಷ್ಟಿಮಾನ್**
**ಪವಸ್ವೇತಿ ಯತಃ ಸ್ಪಷ್ಟಮರ್ಥೋಽತ್ರಾಪಿ ಪ್ರತೀಯತೇ ॥ ೫೭೬ ॥**

**ಮಧ್ವಃ ಸ ತ್ವಂ ಪವಸ್ವೇತಿ ವಾಶಾಸ್ತೇ ಮುನಿಮಂಡಲೀ ।**
**ಇತ್ಯರ್ಥೋಽತ್ರ ಯತಃ ಸ್ಪಷ್ಟಂ ದೃಶ್ಯತೇ ಪದಸಂಪದಾ ॥ ೫೭೭ ॥**

ಶ್ರುತ್ಯರ್ಥವನ್ನು ವಿಶದಗೊಳಿಸುತ್ತಾರೆ :—

ಅಭೀಷ್ಟದಾನಶೀಲತ್ವಾತ್–ಅಭೀಷ್ಟಪ್ರದಾನದ ಸ್ವಭಾವವುಳ್ಳವನಾದ್ದರಿಂದ, ಇಂದೋ–ಹೇ ಇಂದೋ ! ಹೇಪವಮಾನ–ಹೇಪವಮಾನ ! ತೇ–ನಿನ್ನ, ಯಃ ಅವತಾರಃ–ಯಾವ ಅವತಾರವು, ಸದಾ–ನಿರಂತರವಾಗಿ, ಮಹದೈಶ್ವರ್ಯವಂತಂ–ಮಹದೈಶ್ವರ್ಯವಂತನಾದ, ನಾರಾಯಣಂ – ನಾರಾಯಣನನ್ನು, (ಸದಾ – ಸರ್ವದಾ), ಯುನಕ್ತಿ–ಕೂಡಿಯೇ (ಹೊಂದಿಕೊಂಡೇ) ಇರುತ್ತದೆ, ಇತಿ–ಎಂಬ ಕಾರಣದಿಂದ, ನಾಮ್ನಾ – ನಾಮದಿಂದ, ಇಂದ್ರಿಯಃ – ಇಂದ್ರಿಯವೆಂದು ಪ್ರಸಿದ್ಧವೋ, ಮಧ್ವಃ–(ಆನಂದಪ್ರದವಾದ) ಮಧ್ವರೂಪವು, ಮಧ್ವಃ ಇತೀರಿತಃ–'ಮಧ್ವ' ಎಂದು ಕರೆಯಲ್ಪಡುವುದೋ, ತೇನ – ಆ ರೂಪೇಣ – ರೂಪದಿಂದ,

---

ನಾಮಕನೂ ಆಗಿರುವಿ ; ಸರ್ವಭಕ್ತರಿಗೆ ಆನಂದಪ್ರದನಾದ್ದರಿಂದ, 'ಮಧ್ವ'ಎಂಬ ಅನ್ವರ್ಥನಾಮವುಳ್ಳವನೂ ಆಗಿರುವಿ ; ಈ ನಿನ್ನ ವಿಜ್ಞಾನಧಾರೆಯಿಂದ, ಮಳೆಗರೆಯಲುದ್ಯುಕ್ತವಾಗಿರುವ ಮೇಘದಂತೆ ನಮ್ಮನ್ನು ತೃಪ್ತಿಗೊಳಿಸಿ, ಅನುಗ್ರಹಿಸೆಂಬ ಸ್ಪಷ್ಟವಾದ ಅರ್ಥವು ಆ ಶ್ರುತಿಯಲ್ಲಿ ತಿಳಿಯಬರುತ್ತದೆ ; ಮುನಿಮಂಡಲಿಯು, ಶ್ರೀಮಧ್ವರನ್ನು, ಪವಿತ್ರಗೊಳಿಸಿರೆಂದು, ಪ್ರಾರ್ಥಿಸುತ್ತದೆಂಬ ಇಲ್ಲಿಯ ಶಬ್ದ ಸಂಪತ್ತಿನಿಂದ ಸ್ಪಷ್ಟವಾಗಿ ತಿಳಿಯುತ್ತದೆ (೫೭೫–೫೭೭).

---

ಸದಾ 'ಯುನಕ್ತಿ' ಕೂಡಿಯೇ ಇರುವನಾದ್ದರಿಂದ ಇಂದ್ರಿಯು ಶಬ್ದವಾಚ್ಯನಾದ), ಮಧ್ವಃ–ಮಧ್ವನಾಮಕ ನಿನ್ನ ಅವತಾರವು, ವೃಷ್ಟಿಮಾನ್ ಪರ್ಜನ್ಯಃ–ಮಳೆಯುಳ್ಳ (ಮಳೆಗರೆಯುವ) ಮೇಘದಂತೆ, ಧಾರಯಾ–ಜ್ಞಾನಧಾರಯಿಂದ ಸಹಿತನಾಗಿ, ಅಸ್ಮಭ್ಯಂ–ನಮ್ಮನ್ನು (ನಮಗಾಗಿ) ಪವಸ್ವ–ಪವಿತ್ರಗೊಳಿಸುವನಾಗು (ಮಧ್ವರೂಪದಿಂದ ಜ್ಞಾನೋಪದೇಶವನ್ನು ಮಾಡಲು, ನಮ್ಮ ಲೋಕವನ್ನು ಕುರಿತು ಪ್ರಾಪ್ತನಾಗು).

ವಿಜ್ಞಾನಧಾರಯಾ ಸಹ – ವಿಜ್ಞಾನಧಾರೆಯೊಡನೆ, ಸರ್ವದಾ – ಎಲ್ಲ ಕಾಲದಲ್ಲಿ, ಅಸ್ಮಭ್ಯಂ–ಅಸ್ಮಭ್ಯಂ, ಎಂದರೆ, ಅಸ್ಮಾನುದ್ದಿಶ್ಯ–ನಮಗಾಗಿ, ಪರ್ಜನ್ಯ ಇವ ವೃಷ್ಟಿಮಾನ್–ಮಳೆಗರೆಯುವ ಮೇಘದಂತೆ, ಪವಸ್ಯ–(ಜ್ಞಾನಧಾರೆಯಿಂದ) ಪವಿತ್ರಗೊಳಿಸು, ಇತಿ–ಎಂದು, ಯತಃ–ಯಾವ ಕಾರಣದಿಂದ, ಅತ್ರಾಪಿ–ಈ ಶ್ರುತಿಯಲ್ಲಿಯೂ, ಸ್ಪಷ್ಟಂ ಅರ್ಥಃ–ಸ್ಪಷ್ಟವಾದ ಅರ್ಥವು, ಪ್ರತೀಯತೇ–ತೋರುತ್ತದೆಯೋ, (ಆದ್ದರಿಂದ), ಸ ತ್ವಂ–ಈ (ಮಹಿಮೆಯುಳ್ಳ) ನೀನು, ಮಧ್ವಃ–ಮಧ್ವನಾಮಕನಾಗಿ, ಪವಸ್ವ–ಪವಿತ್ರಗೊಳಿಸು, ಇತಿ ವಾ–ಎಂದೇ, ಮುನಿಮಂಡಲೀ–ಋಷಿಸಮೂಹವು, ಆಶಾಸ್ತೇ–ಪ್ರಾರ್ಥಿಸುತ್ತದೆ; ಇತ್ಯರ್ಥಃ–ಎಂಬ ಅರ್ಥವು, ಯತ್ರ–ಯಾವ ಈ ಶ್ರುತಿಯಲ್ಲಿ, ಯತಃ–ಆದ್ದರಿಂದಲೇ ಪದ ಸಂಪದಾ–ಶಬ್ದಸಂಪತ್ತಿನಿಂದ, ಸ್ಪಷ್ಟಂ–ಸ್ಪಷ್ಟವಾಗಿ, ದೃಶ್ಯತೇ–ತಿಳಿದುಬರುತ್ತದೆ.

**ಯೇನ ದೇವಾಃ ಪವಿತ್ರೇಣ ಆತ್ಮಾನಂ ಪುನತೇ ಸದಾ ।**
**ತೇನ ಸಹಸ್ರಧಾರೇಣ ಪಾವಮಾನ್ಯಃ ಪುನಂತು ಮಾ ।**
**ಇತಿ ಶ್ರುತಿಃ ಪ್ರಾಕ್ ಪವಿತ್ರಮಾಹ್ವಾಹೂಯ ಪುನಶ್ಚ ತತ್ ।**
**ಸಹಸ್ರಧಾರಂ ಯತ್ಪ್ರಾಹ ತತ್ಸಹಸ್ರಾರಮೇವ ತತ್ ॥ ೩೭೮ ॥**

ಈ ಮುಂದೆ ತಪ್ತಸುದರ್ಶನಧಾರಣೆಗೆ ಶ್ರುತಿಮೂಲತ್ವವನ್ನು ಸಾಧಿಸುತ್ತಾರೆ :—

---

'ಯೇನದೇವಾಃ'–ಇತ್ಯಾದಿ ಶ್ರುತಿವಾಕ್ಯಗಳು, ಸುದರ್ಶನದಿಂದ (ಶ್ಲೋಕ ೫೪ರ ತಾತ್ಪರ್ಯದ ಟಿಪ್ಪಣಿ ೧ನ್ನು ಇಲ್ಲಿ ನೋಡಬಹುದು), ದೇವತೆಗಳು, ತಮ್ಮ ದೇಹವನ್ನು (ಮನಸ್ಸನ್ನು) ಪವಿತ್ರಗೊಳಿಸಿಕೊಳ್ಳುವರೋ, ಆ ಸಹಸ್ರಧಾರ (ಪವಿತ್ರ-ಚಕ್ರ) ದಿಂದ ವಾಯುದೇವನ ಅವತಾರಗಳಾದ ಮಧ್ವರೂಪಗಳು, ನಮ್ಮನ್ನು ಪವಿತ್ರೀಕರಿಸಲಿ; ಶ್ರುತಿಯು ಮೊದಲಿಗೆ ಪವಿತ್ರ ಶಬ್ದದಿಂದ 'ಪವಿತ್ರ'ವನ್ನು ಆಹ್ವಾನಿಸಿ, ಮತ್ತೆ ಸಹಸ್ರಾರವೆಂದು ಉದ್ದೇಶಿಸಿದ್ದರಿಂದ, ಆ ಪವಿತ್ರವೇ ಸಹಸ್ರಾರವೆಂಬ ನಾಮವುಳ್ಳದ್ದು; ಅದೇ ಸಹಸ್ರಾರವು; ಇಂದ್ರನ ವಜ್ರವು,

ಯೇನ ದೇವಾಃ— [1] 'ಯೇನದೇವಾಃ' ಇತ್ಯಾದಿ ಶ್ರುತಿಯು ಹೇಳುವಂತೆ, ಯೇನ—ಯಾವ ಸುದರ್ಶನದಿಂದ, ದೇವಾಃ—ಬ್ರಹ್ಮಾದಿದೇವತೆಗಳು, ಪವಿತ್ರೇಣ—ವಿಷ್ಣು ಚಕ್ರದಿಂದ, ಸದಾ—ನಿತ್ಯವೂ (ಪ್ರತಿದಿನವೂ ಸ್ವಹಸ್ತದಿಂದ ದ್ವಾದಶ್ಯಾದಿ ಪುಣ್ಯತಿಥಿಗಳಲ್ಲಿ ಗುರುಹಸ್ತದಿಂದಲೂ), ಆತ್ಮಾನಂ-ತಮ್ಮ ದೇಹವನ್ನು, ಪುನತೇ-ಪವಿತ್ರೀಕರಿಸಿಕೊಳ್ಳುವರೋ, ತೇನ—ಆ ವಿಧ ಮಹಿಮೆಯುಳ್ಳ, ಸಹಸ್ರಧಾರೇಣ—ಸುದರ್ಶನದಿಂದ (ಇಂದ್ರನ ವಜ್ರಾಯುಧವು ಶತಧಾರೆಯುಳ್ಳದ್ದು ಮಾತ್ರ), ಪಾವಮಾನ್ಯಃ—ಪವಮಾನಾವತಾರರಾದ ಗುರುಗಳು (ಪ್ರತಿಯುಗದಲ್ಲಿ—ನಿಯತ ಕಾಲದಲ್ಲಿ ಮಧ್ವಾವತಾರವಾಗುವುದರಿಂದ, ಶ್ರೀಮಧ್ವನಾಮಕಗುರುಗಳು), ಮಾ — ನನ್ನನ್ನು, ಪುನಂತು — ಪವಿತ್ರಗೊಳಿಸಲಿ ; ಇತಿಶ್ರುತಿಃ — ಹೀಗೆ ಹೇಳುವ ಶ್ರುತಿಯು, ಪ್ರಾಕ್ಪವಿತ್ರಂ—ಪೂರ್ವಾರ್ಧದಲ್ಲಿ ಪವಿತ್ರವೆಂದು ಹೇಳಲಾದ ಚಕ್ರ ವನ್ನು, ಆಮ್ನಾಹೂಯ—ವೇದಶಬ್ದದಿಂದ ಆಹ್ವಾನಿಸಿ (ಕರೆದು), ಪುನಶ್ಚ—ಮತ್ತೆ ಉತ್ತರಾರ್ಧದಲ್ಲಿ, ತತ್—ಅದನ್ನು, ಸಹಸ್ರಧಾರಂ—ಸಹಸ್ರಧಾರವೆಂದು, ಯತ್—ಯಾವ ಕಾರಣದಿಂದ ಪ್ರಾಹ—ಕರೆಯಿತೋ, ತತ್—ಆ ಕಾರಣದಿಂದ, ತತ್—ಅದು, ( ಆ ಪವಿತ್ರನಾಮಕವಾದುದೇ ), ಸಹಸ್ರಾರಂ ಏವ — ಸಹಸ್ರಾರವೇ (ಶತಧಾರಾ ಎಂದು ಪ್ರಸಿದ್ಧವಾದ ಇಂದ್ರನ ವಜ್ರವಲ್ಲ).

**ದೇವಾಶ್ಚ ಯೇನ ಚಕ್ರೇಣ ಲಾಂಛಿತೇನ ಭುಜೇ ಸದಾ ।**
**ಸ್ವಸ್ವದೇಹಂ ಮನಶ್ಚಾಪಿ ಪುನತೇ ವೈಷ್ಣವೋತ್ತಮಾಃ ॥ ೫೭೯ ॥**

ಶ್ರುತಿಯ ಪೂರ್ವಾರ್ಧದ ಅರ್ಥವನ್ನು ವಿವರಿಸುತ್ತಾರೆ :—

---

ಶತಧಾರಾವುಳ್ಳದ್ದು(೫೭೮). ವೈಷ್ಣವೋತ್ತಮರಾದ ಯಾವ ದೇವತೆಗಳು, ಯಾವ ವಿಷ್ಣು ಚಕ್ರದಿಂದ ಚಿನ್ಹಿತವಾದ ಭುಜಗಳುಳ್ಳವರಾಗಿ, ತಮ್ಮ ದೇಹವನ್ನು

---

[1] ಇಲ್ಲಿ ಪ್ರಸಕ್ತಗಳಾದ ಶ್ರುತಿವಾಕ್ಯಗಳು ಹೀಗಿವೆ :—'ಯೇನ ದೇವಾಃ ಪವಿತ್ರೇಣ ಆತ್ಮಾನಂ ಪುನತೇ ಸದಾ । ತೇನ ಸಹಸ್ರಧಾರೇಣ ಪಾವಮಾನ್ಯಃ ಪುನಂತು ಮಾ । ಪ್ರಾಜಾಪತ್ಯಂ ಪವಿತ್ರಂ ಶತೋದ್ಯಾಮಂ ಹಿರಣ್ಮಯಂ । ತೇನ ಬ್ರಹ್ಮವಿದೋ ವಯಂ ಪೂತಂ ಬ್ರಹ್ಮ ಪುನೀಮಹೇ ॥' ಎಂಬ ಈ ಎರಡು ವಾಕ್ಯಗಳ ಅರ್ಥವೇನೆಂದರೆ ; ದೇವಾಃ—ಬ್ರಹ್ಮಾದಿದೇವತೆಗಳು, ಪವಿತ್ರೇಣ—ಪವಿತ್ರವೆಂಬ ತಪ್ತಸುದರ್ಶನದಿಂದ, ಆತ್ಮಾನಂ—ತಮ್ಮ ದೇಹವನ್ನು, ಸದಾ—ನಿಯಮೇನ ಶ್ರವಣದ್ವಾದಶ್ಯಾದಿ ಪುಣ್ಯದಿನಗಳಲ್ಲಿ, ಪುನತೇ—ಪವಿತ್ರೀ ಕರಿಸುತ್ತಾರೆ; (ಗೋಪೀಚಂದನಾದಿಗಳಿಂದ ಸ್ವಹಸ್ತದಿಂದಲೂ ನಿತ್ಯವೂ, ತಪ್ತಮುದ್ರೆಗಳನ್ನು

ದೇವಾಶ್ಚ–ಬ್ರಹ್ಮಾದಿ ದೇವತೆಗಳೂ, ಯೇನ–ಯಾವ, ಚಕ್ರೇಣ–ವಿಷ್ಣು ಚಕ್ರದಿಂದ, ಲಾಂಛಿತೇನ – ಚಿಹ್ನಿತವಾದ, ಭುಜೇನ – ಬಾಹುಗಳಿಂದ, ಸದಾ–ನಿಯಮವಾಗಿ, ಸ್ವದೇಹಂ – ತಮ್ಮ ದೇಹವನ್ನು, ಮನಶ್ಚಾಪಿ – ಮನಸ್ಸನ್ನು, (ಆತ್ಮ ಶಬ್ದಕ್ಕೆ ದೇಹ ಮತ್ತು ಮನಸ್ಸುಗಳೆಂಬ ಎರಡು ಅರ್ಥವೂ ಇದೆ–ಶ್ರುತಿಯಲ್ಲಿ 'ಆತ್ಮಾನಂ' ಎಂದಿದೆ), ಪುನತೇ – ಪವಿತ್ರಗೊಳಿಸಿಕೊಳ್ಳುವರೋ, ವೈಷ್ಣವೋತ್ತಮಾಃ–ಅವರೇ ವೈಷ್ಣವೋತ್ತಮರು (ದೇಹದಲ್ಲಿ ಸುದರ್ಶನ ಚಿಹ್ನೆಯನ್ನು ಧರಿಸಿ, ಮನಸಾ ವಿಷ್ಣು ಭಕ್ತಿಯುಳ್ಳವರೇ ವೈಷ್ಣವರು ಎಂಬ ಅರ್ಥವೂ ಸೂಚಿತವಾಗಿದೆ).

---

ಮನಸ್ಸನ್ನು ಪವಿತ್ರಗೊಳಿಸಿಕೊಳ್ಳುವರೋ, ಆ ಚಕ್ರದ ಲಾಂಛನವನ್ನು ವೈಷ್ಣವೋತ್ತಮರಲ್ಲಿ ಅಗ್ರೇಸರರಾದ ಶ್ರೀಮಧ್ವಮುನಿಗಳು ನನ್ನ ದೇಹದಲ್ಲಿ

ಗುರುಗಳ ಕೈಯಿಂದಲೂ ವಿಶೇಷ ತಿಥಿಗಳಲ್ಲಿಯೂ ತಮ್ಮ ದೇಹದಲ್ಲಿ ಧರಿಸಿ ಪುನೀತರಾಗುತ್ತಾರೆ) ; ತೇನ ಸಹಸ್ರಧಾರೇಣ–(ಷಟ್ಕೋಣಾಕಾರದ ಚಕ್ರವನ್ನು ಸುತ್ತಲೂ ಸಹಸ್ರ ದಲರೂಪದಿಂದಿರುವ ಸುದರ್ಶನವು, ಇಂದ್ರನ ವಜ್ರಾಯುಧವು 'ಶತಧಾರಾ' ಯುಕ್ತವಾದ್ದರಿಂದ, ಅತ್ಯುಗ್ರವಾದುದು) ಸುದರ್ಶನದಿಂದ, ಪಾವಮಾನ್ಯಃ–ವಾಯ್ವವತಾರಭೂತರಾದ ಶ್ರೀಮಧ್ವರ ಕರಗಳು (ಯುಗಯುಗದಲ್ಲಿ ಶ್ರೀಮಧ್ವರ ಅವತಾರವು ಸಂಭವಿಸುವುದರಿಂದ ಬಹುವಚನವು), ಮಾ–ನನ್ನನ್ನು, ಪುನಂತು–(ಭುಜಗಳಲ್ಲಿ ತಪ್ತಮುದ್ರಾಧಾರಣದಿಂದ) ಪವಿತ್ರೀಕರಿಸಲಿ ; ಪ್ರಾಜಾಪತ್ಯಂ–ನಾರಾಯಣ ಸಂಬಂಧವಾದ (ಮೊದಲಿಗೆ ಶ್ರೀವಿಷ್ಣುವು ತನ್ನ ಕರದಿಂದಲೇ ಬ್ರಹ್ಮದೇವನ ಭುಜದಲ್ಲಿ ಚಕ್ರಾಂಕನವನ್ನು ಮಾಡಿದ್ದರಿಂದ, ಸುದರ್ಶನವು ಪ್ರಾಜಾಪತ್ಯವು – ಪ್ರಜಾಪತಿ, ನಾರಾಯಣನ ಸಂಬಂಧಿಯು), ಪವಿತ್ರಂ – ಸುದರ್ಶನವು, ಶತೋದ್ಯಾಮಂ–ಬಹು ಉದ್ಯಮವುಳ್ಳ (ಪ್ರಯೋಗಕಾಲದಲ್ಲಿ ಅದರ ಭ್ರಮಣಕ್ರಿಯೆಯಿಂದ), ಹಿರಣ್ಮಯಂ–ಸುವರ್ಣಾತ್ಮಕವಾದುದು (ಸುವರ್ಣ ನಿರ್ಮಿತತ್ವವು ವೈದಿಕವಾದುದು) ; ತೇನ–ಆ ಸುದರ್ಶನದಿಂದ, ಬ್ರಹ್ಮವಿದಃ ವಯಂ–ವೇದಜ್ಞಾನಿಗಳಾದ ('ಅತಪ್ತತನೂರ್ನತದಾಮೋ ಅಶ್ನುತ' ಎಂಬ ತಪ್ತಚಕ್ರಧಾರಣಮಾಡದಿರುವುದಕ್ಕೆ ಪ್ರತ್ಯವಾಯವನ್ನು (ದೋಷವನ್ನು) ಪ್ರತಿಪಾದಿಸುವ ವೇದವಾಕ್ಯವನ್ನು ತಿಳಿದ) ನಾವು, ಪೂತಂ ಬ್ರಹ್ಮ–ಸ್ವಭಾವವಾಗಿಯೇ ಪವಿತ್ರವಾದ ವೇದವನ್ನು, ಪುನೀಮಹೇ–ಪವಿತ್ರೀಕರಿಸುತ್ತೇವೆ (ವಿಷ್ಣು ಚಕ್ರಾಂಕರಹಿತನಾದ ವಿಪ್ರನು ವೇದವನ್ನು ಪಠನ ಮಾಡಿದರೆ ಶೂದ್ರಸ್ಪೃಷ್ಟ ಬ್ರಾಹ್ಮಣನಂತೆ ವೇದವು ಅಪವಿತ್ರವಾಗುವುದಾದ್ದರಿಂದ, ಚಕ್ರಾಂಕವನ್ನು ಧರಿಸಿ ವೇದಪಠನ ಮಾಡುವುದರಿಂದ ವೇದವನ್ನು ಪವಿತ್ರೀಕರಿಸುತ್ತೇವೆ).

**ತೇನ ಚಕ್ರೇಣ ಮರುತೋ ಮೂರ್ತಯೋ ಮಾಂ ಪುನಂತ್ವಿತಿ ।**
**ಮುನಿಃ ಪ್ರಾರ್ಥಯತೇ ಕಶ್ಚಿದಿತ್ಯರ್ಥೋತ್ರ ಪ್ರದೃಶ್ಯತೇ ।**
**ಶಬ್ದಾನನುಪಮೃದ್ಯೈವ ಶಬ್ದಶಬ್ದಾರ್ಥವೇದಿಭಿಃ ॥ ೫೮೦ ॥**

ಶ್ರುತಿಯ ಉತ್ತರಾರ್ಧದ ಅರ್ಥವನ್ನು ವಿವರಿಸುತ್ತಾರೆ :—

ತೇನ ಚಕ್ರೇಣ – ಆ ವಿಷ್ಣುಚಕ್ರದಿಂದ, ಮರುತಃ – ವಾಯುದೇವನ, ಮೂರ್ತಯಃ–ರೂಪಗಳು (ಪಾವಮಾನ್ಯಃ–ಎಂಬುದರ ವಿವರಣೆಯಿದು), ಮಾಂ–ನನ್ನನ್ನು, ಪುನಂತು–ಪವಿತ್ರಗೊಳಿಸಲಿ ; ಇತಿ–ಎಂದೂ, ಕಶ್ಚಿತ್ ಮುನಿಃ–ಒಬ್ಬ ಋಷಿಯು (ಈ ಶ್ರುತಿಯ ದ್ರಷ್ಟಾರನಾದ ಋಷಿಯು), ಪ್ರಾರ್ಥಯತೇ–ಪ್ರಾರ್ಥಿಸುತ್ತಾನೆ, ಇತ್ಯರ್ಥಃ–ಎಂಬ ಅರ್ಥವು, ಅತ್ರ–ಈ ಶ್ರುತಿಯಲ್ಲಿ, ಪ್ರದೃಶ್ಯತೇ–ಸ್ಪಷ್ಟವಾಗಿ ಗೋಚರವಾಗುತ್ತದೆ ; (ಯಾರು ಈ ಅರ್ಥವನ್ನು ತಿಳಿಯುವರೆಂದರೆ), ಶಬ್ದಾನ್–ಶಬ್ದಗಳನ್ನು, ಅನುಪಮೃದ್ಯೈವ–ಉಪಮರ್ದಗೊಳಿಸದೇ (ಸಂಕೋಚಗೊಳಿಸದೇ), ಶಬ್ದಶಬ್ದಾರ್ಥವೇದಿಭಿಃ–ಶಬ್ದ ಮತ್ತು ಅವುಗಳ ಅರ್ಥಗಳನ್ನು ತಿಳಿದವರಾದ ಜ್ಞಾನಿಗಳು (ಈ ಉಕ್ತಾರ್ಥವನ್ನು ತಿಳಿಯುತ್ತಾರೆ).

**ಏವಂ ಚ ಸರ್ವದೇವಾನಾಂ ಕಾರ್ಯಂ ಚಕ್ರಾದಿಧಾರಣಂ ।**
**ಪ್ರಾರ್ಥ್ಯಂ ಮಹರ್ಷಿಭಿಃ ಕೋವಾ ಮಾನವೋನ್ಯೋ ನ ಮಾನ-**
**ಯೇತ್ ॥ ೫೮೧ ॥**

ಫಲಿತಾರ್ಥವನ್ನು ಹೇಳುತ್ತಾರೆ :—

---

ಅನುಗ್ರಹಿಸಲಿ (೫೭೯). ವಿಷ್ಣುಚಕ್ರ ಲಾಂಛಿತವಾದ ದೇಹಮನಸ್ಸುಗಳುಳ್ಳವರೇ ವೈಷ್ಣವರು–ವಿಷ್ಣುಭಕ್ತರು ; ಆ ಚಕ್ರಲಾಂಛನವನ್ನು ವಾಯುದೇವನು ಪ್ರತಿ ಮಧ್ವಾವತಾರದಲ್ಲಿಯೂ (ಪ್ರತಿದಿನ ಕಲ್ಪದಲ್ಲಿಯೂ ಈ ಅವತಾರವು ಸಂಭವಿಸುತ್ತದೆ) ಅನುಗ್ರಹಿಸಲೆಂದು ಈ ಶ್ರುತಿಯು ಮಂತ್ರದ್ರಷ್ಟ ಋಷಿಯು ಯಾಚಿಸುತ್ತಾನೆ (ಎಲ್ಲ ಸಜ್ಜನರೂ ಪ್ರಾರ್ಥಿಸಬೇಕೆಂದು ಶ್ರುತಿಯು ವಿಧಿಸುತ್ತದೆ) ; ಶ್ರುತಿಪದಗಳನ್ನು ಸಂಕೋಚಗೊಳಿಸದೇ ಅರ್ಥಗಳನ್ನು ಗ್ರಹಿಸುವ ಶಬ್ದಾರ್ಥಜ್ಞಾನಿಗಳು ಉಕ್ತಾರ್ಥವನ್ನು ಸ್ಪಷ್ಟವಾಗಿ ತಿಳಿಯುವರು (೫೮೦). ಶ್ರುತ್ಯರ್ಥವಿಚಾರದಿಂದ ದೇವತೆಗಳೂ ಅವಶ್ಯವಾಗಿ ತಪ್ತ ಚಕ್ರಧಾರಣವನ್ನು ಮಾಡುವರೆಂದೂ, ಮಹರ್ಷಿಗಳು, ಅದಕ್ಕಾಗಿ ಪ್ರಾರ್ಥಿಸುವರೆಂದೂ ತಿಳಿದುಬರುವುದರಿಂದ,

ಏವಂಚ – ಹೀಗೆ (ಶ್ರುತ್ಯರ್ಥವಿಚಾರದಿಂದ), ಸರ್ವದೇವಾನಾಂ – ಸಕಲ ದೇವತೆಗಳಿಗೆ, ಚಕ್ರಾದಿಧಾರಣಂ–ವಿಷ್ಣು ಚಕ್ರಾದಿ ಧಾರಣವು, ಕಾರ್ಯಂ–ಅವಶ್ಯಕ ವಾದ ಕರ್ತವ್ಯವು; ಮಹರ್ಷಿಭಿಃ–ಮಹರ್ಷಿಗಳಿಂದ, ಪ್ರಾರ್ಥ್ಯಂ–ವಿಶೇಷವಾಗಿ ಅರ್ಥಿಸಬೇಕಾದುದು (ಇಚ್ಛಿಸಿ ಹರ್ಷಿಸಬೇಕಾದುದು), ಅನ್ಯಃ –(ದೇವರ್ಷಿ ಭಿನ್ನನಾದ) ಬೇರೆ, ಕೋವಾ ಮಾನವಃ–ಯಾವ ಮನುಷ್ಯನು, ನ ಮಾನಯೇತ್– (ಚಕ್ರಧಾರಣೆಯನ್ನು) ಗೌರವಿಸುವುದಿಲ್ಲ? (ಆದರದಿಂದ ಈ ಶ್ರೇಷ್ಠರ ಆಚಾರ ವನ್ನು ಅನುಕರಿಸತಕ್ಕದ್ದೇ ಸರಿ) (ಸರ್ವರೂ ಧಾರಣಮಾಡತಕ್ಕದ್ದೇ ಸಾಧು ವಾದುದು).

**ಸದೇತ್ಯುಕ್ತ್ಯಾ ಚ ಯದ್ಗೋಪೀಚಂದನೈಶ್ಚಕ್ರಲಾಂಛನಮ್ ।**
**ಅದ್ಯಾಪಿ ಕುರ್ವತೇ ವೃದ್ಧಾಸ್ತಚ್ಚ ಶ್ರುತಿರಸೂಚಯತ್ ॥ ೫೮೨ ॥**

ಸದೇತ್ಯುಕ್ತ್ಯಾ –'ಆತ್ಮಾನಂ ಪುನತೇ ಸದಾ' ಎಂಬಲ್ಲಿ ಸದಾ ಎಂದು ಹೇಳಿದ್ದರಿಂದ, ಯತ್–ಯಾವ ಕಾರಣದಿಂದ, ಗೋಪೀಚಂದನೈಃ – ಗೋಪೀ ಚಂದನಗಳಿಂದ, ಚಕ್ರಲಾಂಛನಂ–ಚಕ್ರಗಳ ಚಿನ್ಹೆಯನ್ನು, ಅದ್ಯಾಪಿ–ಈಗಲೂ ಸಹ, ವೃದ್ಧಾಃ – ಜ್ಞಾನವೃದ್ಧರು, ಕುರುತೇ–ಧಾರಣಮಾಡುತ್ತಾರೆಂಬುದನ್ನು, ತತ್–ಆದ್ದರಿಂದಲೇ, ಶ್ರುತಿಃ–ಶ್ರುತಿಯು, ಅಸೂಚಯತ್–ಸೂಚಿಸಿದೆ.

**ದೇವಾಸ್ತು ತಪ್ತಚಕ್ರಾಂಕಯೋಗ್ಯೇ ಶುಭದಿನೇ ಸದಾ ।**
**ತಪ್ತೇನ ತೇನ ಪುನತೇ ಮೃದಾ ತಲ್ಲಾಂಛನೈಃ ಸದಾ ॥ ೫೮೩ ॥**

ತಪ್ತಚಕ್ರಧಾರಣ ವಿಷಯದಲ್ಲಿ ಸಹ ಅಲ್ಲಿರುವ ಸದಾ ಶಬ್ದವನ್ನು ಯೋಚಿಸುವ ಪ್ರಕಾರವನ್ನು ತಿಳಿಸುತ್ತಾರೆ :—

---

ಮಹಾ ಪಾವಿತ್ರ್ಯ ಸಾಧಕವಾದ ಚಕ್ರಮುದ್ರೆಯ ಧಾರಣವನ್ನು ಯಾವ ಅಲ್ಪ ಮಾನವನು ಶ್ರೇಷ್ಠ ಆಚರಣೆಯನ್ನು ಅನುಸರಿಸಿರುವನು? ಗೌರವಿಸಿ ಆದರದಿಂದ ಧರಿಸುವುದೇ ಕರ್ತವ್ಯನಾಗಿದೆ (೫೮೧). ಶ್ರುತಿಯು 'ಆತ್ಮಾನಂ ಪುನತೇ ಸದಾ' ಎಂದು ಸದಾಪದ ಪ್ರಯೋಗದಿಂದ, ಈಗಲೂ ವೃದ್ಧರು ಗೋಪೀ ಚಂದನಗಳಿಂದ ಚಕ್ರವನ್ನು ದೇಹದಲ್ಲಿ ಮುದ್ರಿಸಿಕೊಂಡು ಹರ್ಷಿಸುತ್ತಿರುವರೆಂಬ ಶುದ್ಧ ಆಚಾರವನ್ನು ಸೂಚಿಸುತ್ತದೆ (೫೮೨). ದೇವತೆಗಳಾದರೂ ಏಕಾದಶಿ, ದ್ವಾದಶ್ಯಾದಿ ಪುಣ್ಯ ತಿಥಿಗಳಲ್ಲಿ ತಪ್ಪದೇ ತಪ್ತ ಚಕ್ರದಿಂದಲೂ, ಗೋಪೀಚಂದನ

ದೇವಾಸ್ತು – ದೇವತೆಗಳಾದರೋ, ತಪ್ತಚಕ್ರಾಂಕಯೋಗ್ಯೇ – ತಪ್ತ ಚಕ್ರಾಂಕನಕ್ಕೆ ಯೋಗ್ಯವಾದ, ಶುಭದಿನೇ–ಶ್ರವಣದ್ವಾದಶೀ ಆಷಾಢ ಏಕಾದಶೀ ತಿಥಿಗಳಲ್ಲಿ, ಸದಾ–ತಪ್ಪದೇ (ನಿಯಮೇನ), ಮತ್ತು ಸದಾ–ಪ್ರತಿದಿನವೂ, ಮೃದಾ – ಗೋಪೀಮಣ್ಣಿನಿಂದ, ತಲ್ಲಾಂಛನ್ಯೈಃ – ಆ ಚಿನ್ಹೆಗಳಿಂದ, ತೇನ – ಆದರಿಂದ (ಚಕ್ರಾಂಕ ಧಾರಣಮಾಡುವುದರಿಂದ), ತಪ್ತೇನ–ತಪ್ತಧಾರಣದಿಂದ, ಪುನತೇ–ಪವಿತ್ರರಾಗುತ್ತಾರೆ.

**ಇತಿ ಪೂರ್ವಾರ್ಧವಾಕ್ಯಾರ್ಥೋ ಲಭ್ಯತೇ ಪದಸಂಪದಾ ।**
**ಉತ್ತರಪ್ರಾರ್ಥನಾಹೇತುರೂಪಯಾ ಚಾರ್ಥಸಂಪದಾ ॥ ೫೮೪ ॥**

ಇತಿ–ಹೀಗೆಂದು, ಪೂರ್ವಾರ್ಧವಾಕ್ಯಾರ್ಥಃ–ಶ್ರುತಿಯ ಪೂರ್ವವಾಕ್ಯದ ಅರ್ಥವು, ಪದಸಂಪದಾ–ಶಬ್ದಸಂಪತ್ತಿನಿಂದ, ಲಭ್ಯತೇ–ಲಭಿಸುತ್ತದೆ ; ಉತ್ತರ ಪ್ರಾರ್ಥನಾಹೇತು ರೂಪಯಾ–ಉತ್ತರವಾಕ್ಯವು ಗುರುಹಸ್ತದಿಂದ ಚಕ್ರಧಾರಣೆ ಯನ್ನು ಪ್ರಾರ್ಥಿಸುವ ಹೇತು (ಕಾರಣವನ್ನು) ನಿರೂಪಿಸುವುದರಿಂದ, ಅರ್ಥ ಸಂಪದಾ–ಶಬ್ದಗಳ ಅರ್ಥಸಂಪತ್ತಿನಿಂದ, (ಈ ವಾಕ್ಯವು ತಪ್ತಸುದರ್ಶನ ಧಾರಣ ಪರವೆಂದು ಸಿದ್ಧವಾಗುತ್ತದೆ–ಲಭ್ಯತೇ, ಲಭಿಸುತ್ತದೆ).[1]

**ಅರ್ಥ್ಯಮಾನಂ ತು ಮುನಿನಾ ತಪ್ತಚಕ್ರಸ್ಯ ಲಾಂಛನಂ ।**
**ಗುರೂಣಾಂ ಕರಕಂಜೇನ ಧಾರ್ಯಂ ಚಕ್ರಂ ತದೇವ ಹಿ ।**
**ಅತಃ ಪೂರ್ವಾರ್ಧವಾಕ್ಯೇಪಿ ತಪ್ತಾಂಕಪ್ರಸ್ತುತಿರ್ಬಲಾತ್ ॥ ೫೮೫ ॥**

---

ಮೃತ್ತಿಕೆಯಿಂದ ನಿತ್ಯದಲ್ಲಿಯೂ ಮುದ್ರೆಗಳನ್ನು ಧರಿಸುವರೆಂಬರ್ಥವನ್ನು ಸದಾ ಶಬ್ದವು ಸೂಚಿಸುತ್ತದೆ (೫೮೩). ಪ್ರಸಕ್ತ ಶ್ರುತಿಯು ಪೂರ್ವಾರ್ಧ ವಾಕ್ಯದ ಶಬ್ದಸಂಪತ್ತಿನಿಂದ ಉಕ್ತಾರ್ಥವೂ, ಅದೇ ಅರ್ಥವು, ಉತ್ತರಾರ್ಧವಾಕ್ಯದ ಅರ್ಥ ಸಂಪತ್ತಿನಿಂದಲೂ, ಲಭಿಸುತ್ತದೆ (ಉತ್ತರ ವಾಕ್ಯವು ಋಷಿಯ ಪ್ರಾರ್ಥನೆಯ ಹೇತುವನ್ನು (ಕಾರಣವನ್ನು) ಹೇಳುತ್ತದೆ; ಆದ್ದರಿಂದ ಶ್ರುತಿಯು ತಪ್ತ ಸುದರ್ಶನ ಮುದ್ರಾಧಾರಣ ಪರವೆಂದು ಸಿದ್ಧವಾಗುತ್ತದೆ (೫೮೪). ಮಂತ್ರ

---

1 ಗೋಪೀಚಂದನದಿಂದ ಚಕ್ರಧಾರಣಮಾಡುವ ವಿಷಯದಲ್ಲಿ 'ಸದಾ' ಎಂಬ ಪದವನ್ನು ಯೋಚಿಸುವುದು ಅಸಂಭವವಾಗುತ್ತದೆ ; ಮತ್ತು ಉತ್ತರವಾಕ್ಯದಲ್ಲಿ ಪ್ರಾರ್ಥನೆಯ ಹೇತುವೂ ಉಕ್ತವಾಗಿದೆ.

ಮುನಿನಾ–ಋಷಿಯಿಂದ, ಅರ್ಥ್ಯಮಾನಂ ತು – ಪ್ರಾರ್ಥಿಸಲ್ಪಡಬೇಕಾದು ದಾದರೋ, ತಪ್ತಚಕ್ರಸ್ಯ-ತಪ್ತಸುದರ್ಶನದ, ಲಾಂಛನಂ–ಅಂಕನವು (ಚಿನ್ಹವು-ದೇಹದಲ್ಲಿ ಗುರ್ತಿಸುವಿಕೆಯು), ಗುರೂಣಾಂ–ಗುರುಗಳ, ಕರಕಂಜೇನ–ಕರಪದ್ಮ ದಿಂದ, ಧಾರ್ಯಂ–ಧರಿಸಬೇಕಾದ, ಚಕ್ರಂ–ಚಕ್ರವು, ತದೇವ ಹಿ–ಅದೇ ಆಗಿರುತ್ತದೆ; ಅತಃ–ಆದ್ದರಿಂದ, (ಪೂರ್ವಾರ್ಧ ಉತ್ತರಾರ್ಧ ವಾಕ್ಯಗಳಲ್ಲಿ ವಿರೋಧ ವಿಲ್ಲದಂತೆ ಅರ್ಥವನ್ನು ತಿಳಿಯಬೇಕಾದುದು ಅವಶ್ಯಕವಾದ್ದರಿಂದ), ಪೂರ್ವಾರ್ಧ ವಾಕ್ಯೇ – ಪೂರ್ವಾರ್ಧವಾಕ್ಯದಲ್ಲಿ, ಬಲಾತ್ – ಯುಕ್ತಿಬಲದಿಂದ, ತಪ್ತಾಂಕ ಪ್ರಸ್ತುತಿಃ–ತಪ್ತಮುದ್ರೆಯ ಪ್ರಸಕ್ತವಾಗುತ್ತದೆ.

**ಮುನೀಂಶ್ಚ ದೇವದೇಹಾಂಶ್ಚ ಶುದ್ಧಿಕುರ್ವತ್ಸುದರ್ಶನಂ ।**
**ಪರಂ ಪವಿತ್ರಮತ್ರಸ್ಯಾನ್ನಾನ್ಯತ್ಪುಂಮತಿನಿರ್ಮಿತಂ ॥ ೫೮೬ ॥**

ಮುನೀನ್ ಚ-ಋಷಿಗಳನ್ನು, ದೇವ ದೇಹಾನ್–ದೇವತಾ ದೇಹಗಳನ್ನೂ, ಶುದ್ಧಿಕುರ್ವತ್ – ಪವಿತ್ರಗೊಳಿಸುವ, ಸುದರ್ಶನಂ – ವಿಷ್ಣುಚಕ್ರವೇ, ಪರಂ–ಕೇವಲವಾಗಿ (ಮಾತ್ರವೇ) ('ಪವಿತ್ರಂತೇ' ಎಂಬ ಮಂತ್ರದಲ್ಲಿ, ಪ್ರಸಕ್ತವಾದ ಚಕ್ರವು), ಅತ್ರ–ಈ ಶ್ರುತಿಯಲ್ಲಿ, ಸ್ಯಾತ್–ಆಗುತ್ತದೆ; ಪುಂಮತಿನಿರ್ಮಿತಂ–ಪುರುಷ ಬುದ್ಧಿಕಲ್ಪಿತವಾದ, ಅನ್ಯತ್–ಬೇರಾವುದೂ, ನ–ಅಲ್ಲ. [1]

---

ದ್ರಷ್ಟನಾದ ಋಷಿಯಿಂದ ಪ್ರಾರ್ಥಿತವಾದುದು, ಗುರುಹಸ್ತದಿಂದ ಧರಿಸತಕ್ಕದ್ದೆಂಬುದರಿಂದ, ಅದೇ ಸುದರ್ಶನ ಲಾಂಛನ ಧಾರಣವೇ ಪೂರ್ವಾರ್ಧದಲ್ಲಿಯೂ ಪ್ರಸ್ತಕವೆಂಬುದು ಯುಕ್ತಿ ಬಲದಿಂದಲೂ ಸಿದ್ಧವಾಗುತ್ತದೆ (ಪೂರ್ವೋತ್ತರ ವಿರೋಧವಿಲ್ಲದಂತೆ ಶ್ರುತಿಗಳಿಗೆ ಅರ್ಥಮಾಡಬೇಕಾದುದು ಅವಶ್ಯಕ [2] ದೇವ ದೇಹ ಮನಗಳನ್ನು, ಋಷಿಗಳನ್ನು ಶುದ್ಧೀಕರಿಸುವ, ಸುದರ್ಶನವೇ, ಕೇವಲ

---

[1] ಸೋಮರಸವನ್ನು ಕುದಿಸುವ (ಶ್ರವಣ) ದಶಾದಲ್ಲಿ, ಅಥವಾ ಸೋಮರಸ ಸನ್ನಿಧಾನವುಳ್ಳ ವಸ್ತ್ರದಲ್ಲಿಯೂ, ಪವಿತ್ರ ಶಬ್ದವು ಔಪಚಾರಿಕವು–ವಿಷ್ಣುಚಕ್ರವೇ ಮುಖ್ಯವಾಚ್ಯವಾಗಿದೆ.

[2] ತಪ್ತಚಕ್ರದ ಲಾಂಛನಧಾರಣೆಯು, ನಿತ್ಯವೂ ತಾನೇ ಮಾಡಿಕೊಳ್ಳುವುದು, ಶಕ್ಯವಲ್ಲ; ವಿಧ್ಯುಕ್ತವೂ ಅಲ್ಲ; ಏವಂಚ–ಉತ್ತರಾರ್ಧ ಶ್ರುತಿಯಿಂದ ಶ್ರುತಿಯು ತಪ್ತ ಚಕ್ರಧಾರಣ ಪರವೆಂದು ಲಭಿಸುತ್ತದೆ.

**ಅತೋಽಪ್ಯನ್ಯಾರ್ಥಕಥನಂ ವ್ಯರ್ಥಮಾಸೀದ್ದುರಾತ್ಮನಾಂ ।**
**ಸದೇತಿ ಚ ಪದಂಕುಪ್ಯೇತ್ಪವಿತ್ರಾಂತರಕಲ್ಪನೇ ॥ ೫೮೭ ॥**

ಅತಃ–ಆದ್ದರಿಂದ (ಉಕ್ತಯುಕ್ತಿಗಳಿಂದ ಸಹ), ಅನ್ಯಾರ್ಥಕಥನಂ ಅಪಿ–(ಶ್ರುತ್ಯುಕ್ತಸುದರ್ಶನ ಪದಕ್ಕೆ) ಬೇರೆ ಅರ್ಥವನ್ನು ಹೇಳುವುದೂ, ದುರಾತ್ಮನಾಂ–(ಅನ್ಯಾರ್ಥವನ್ನು ಹೇಳುವ) ದುರ್ಬುದ್ಧಿಗಳಿಗೆ, ವ್ಯರ್ಥಂ–ಪ್ರಯೋಜನವಿಲ್ಲದುದೂ, ಆಸೀತ್–ಆಯಿತು (ಆಗುತ್ತದೆ) ; ಚ–ಮತ್ತು, ಸದಾ ಇತಿ ಪದಂ–ಸದಾ ಎಂಬ ಪದವೂ, ಪವಿತ್ರಾಂತರ ಕಲ್ಪನೇ–ಪವಿತ್ರವೆಂಬ ಅನ್ಯವಸ್ತುವನ್ನು ಕಲ್ಪಿಸಿದರೆ, ಕುಪ್ಯೇತ್–ಸಿಟ್ಟಾಗುತ್ತದೆ (ಅನ್ಯಾರ್ಥವನ್ನು ವಿರೋಧಿಸುತ್ತದೆ).

**ಅತಃ ಶ್ರುತಿಃ ಪವಿತ್ರಂ ತ ಇತ್ಯತ್ರಾಪಿ ಸುದರ್ಶನಂ ।**
**ಪ್ರಭೋರಾಯುಧಮೇವಾಹ ನಿಯೋಗಸ್ತಸ್ಯ ಸನ್ನಿಧೇಃ ।**
**ಅನ್ಯತ್ರಾಪಿ ಭವೇದನ್ನಮಂತ್ರಣೇ ಸೌರಮಂತ್ರವತ್ ॥ ೫೮೮ ॥**

ಅತಃ–ಆದ್ದರಿಂದ, ಪವಿತ್ರಂತೇ ಇತಿ ಶ್ರುತಿಃ–ಪವಿತ್ರಂತೇ ಎಂಬ ಶ್ರುತಿಯು, ಅತ್ರಾಪಿ–ಅಲ್ಲಿಯೂ, ಪ್ರಭೋಃ–ಶ್ರೀಹರಿಯ, ಆಯುಧಂ ಏವ–ಚಕ್ರವನ್ನೇ, ಸುದರ್ಶನಂ – ( ಪವಿತ್ರ ಪದದಿಂದ ) ಸುದರ್ಶನವನ್ನೇ, ಆಹ – ಹೇಳಿದೆ ;

---

(ಮಾತ್ರವೇ) ಪವಿತ್ರ ಶಬ್ದವಾಚ್ಯವಾದುದಾಗಿದೆ ; ಪುರುಷ ಕಲ್ಪಿತವಾದ ಅನ್ಯ ಚಕ್ರವಲ್ಲ (೫೮೫–೫೮೬). ಈ ಮುಂತಾದ ಯುಕ್ತಿಗಳ ಬಲದಿಂದ ಶ್ರುತ್ಯುಕ್ತ 'ಸುದರ್ಶನ' ಪದಕ್ಕೆ ಅನ್ಯಾರ್ಥವನ್ನು ಹೇಳುವ ದುರ್ಬುದ್ಧಿಗಳಿಗೆ ಅದರಿಂದ ಯಾವ ಪ್ರಯೋಜನವೂ ಇಲ್ಲ ಮತ್ತು, ಪವಿತ್ರವೆಂಬುದಕ್ಕೆ ಬೇರೆ ಅರ್ಥವನ್ನು (ವಿಷ್ಣು ಚಕ್ರವೆಂಬ ಅರ್ಥವನ್ನಲ್ಲದೇ ಬೇರೆ ಅರ್ಥವನ್ನು) ತಿಳಿದರೆ, ಪವಿತ್ರ ಶಬ್ದವು ವಿರೋಧಿಸುತ್ತದೆ (ಕುಪಿತವಾಗುತ್ತದೆ) (ಪವಿತ್ರೀಕರಣ ಸಾಮರ್ಥ್ಯವು ಪುರುಷಕಲ್ಪಿತ ಅನ್ಯ ಚಕ್ರಕ್ಕೆ ಸಲ್ಲುವುದೂ ಇಲ್ಲ) (೫೮೭). ಆದ್ದರಿಂದ 'ಪವಿತ್ರಂತೇ' ಎಂಬ ಶ್ರುತಿಯಲ್ಲಿ ವಿಷ್ಣುವಿನ ಆಯುಧವಾದ ಚಕ್ರವೇ (ಸುದರ್ಶನವೇ ಹೇಳಲ್ಪಡುತ್ತದೆ; ದಶಾ ಪವಿತ್ರದಲ್ಲಿ ಸುದರ್ಶನದ ಸನ್ನಿಧಾನಕ್ಕಾಗಿಯೇ ಅಲ್ಲಿ ಪವಿತ್ರಶಬ್ದವು ಪ್ರಯೋಗಿಸಲ್ಪಡುತ್ತದೆ; ಅನ್ನವನ್ನು ಅಭಿಮಂತ್ರಿಸುವುದರಲ್ಲಿ ಸೂರ್ಯ ಪ್ರತಿಪಾದಕ ಸೌರಮಂತ್ರವನ್ನು ( ಗಾಯತ್ರೀಮಂತ್ರವನ್ನು )

ಅನ್ಯತ್ರಾಪಿ–ದಶಾಪವಿತ್ರದಲ್ಲಿಯೂ, 1 ತಸ್ಯ–ಸುದರ್ಶನದ, ಸನ್ನಿಧೇಃ–ಸನ್ನಿಧಾನವಿರುವುದರಿಂದ, ನಿಯೋಗಃ–(ಆ ಶಬ್ದದ) ವಿನಿಯೋಗವು (ಉಪಯೋಗವು); ಅನ್ಯತ್ರಾಪಿ–ಬೇರೆ ಸ್ಥಳಗಳಲ್ಲಿ (ಉಪಯೋಗವು), ಅನ್ನ ಮಂತ್ರಣೇ–ಅನ್ನಮಂತ್ರದಂತೆ (ಅನ್ನವನ್ನು ಅಭಿಮಂತ್ರಿಸುವಲ್ಲಿ), ಸೌರಮಂತ್ರವತ್–ಗಾಯತ್ರೀ ಮಂತ್ರವನ್ನು ಉಪಯೋಗಿಸುವಂತೆ).

**ಪವಿತ್ರಂ ಚರಣಂ ನೇಮಿರರಿಶ್ಚಕ್ರಂ ಸುದರ್ಶನಂ ।**
**ಸಹಸ್ರಾರಂ ಪ್ರಾಕೃತಘ್ನಂ ಲೋಕದ್ವಾರಂ ಮಹೌಜಸಂ ॥ ೫೮೯ ॥**
**ವಿಷ್ಣುಚಕ್ರಸ್ಯ ನಾಮಾನಿ ಪರ್ಯಾಯೇಣ ನಿಬೋಧ ಮೇ ।**
**ಇತಿ ಪಾದ್ಮೋಕ್ತಗೌರೀಶವಾಕ್ಯಿ ಲಿಂಗಾನುಶಾಸನಂ ॥ ೫೯೦ ॥**

ವ್ಯಾಸನಿಘಂಟುವಿನ ಪರ್ಯಾಲೋಚನೆಯಿಂದ ಸಹ ಸುದರ್ಶನವೇ ಪವಿತ್ರ ಶಬ್ದವಾಚ್ಯವೆಂದು ಹೇಳುತ್ತಾರೆ :—

ಪವಿತ್ರಂ – ಪವಿತ್ರವೂ, ಚರಣಂ – ಚರಣವೂ, ನೇಮಿಃ – ನೇಮಿಯು, ಅರಿಶ್ಚ–'ಅರಿ' ಎಂದೂ, ಚಕ್ರಂ – ಚಕ್ರವೂ, ಸುದರ್ಶನಂ – ಸುದರ್ಶನವೂ, ಸಹಸ್ರಾರಂ – ಸಹಸ್ರಾರವೂ, ಪ್ರಾಕೃತಘ್ನಂ–ಪ್ರಾಕೃತಘ್ನವು (ಪ್ರಾಕೃತಬಂಧ

---

ಪ್ರಯೋಗಿಸುವಂತೆ (೫೮೮). ಪವಿತ್ರ, ಚರಣ, ನೇಮಿ, ಅರಿ, ಚಕ್ರ, ಸುದರ್ಶನ, ಸಹಸ್ರಾರ, ಪ್ರಾಕೃತಘ್ನ, ಲೋಕದ್ವಾರಗಳೆಂಬ ಶಬ್ದಗಳು ವಿಷ್ಣು ಚಕ್ರವನ್ನೇ ಹೇಳುವ ಪರ್ಯಾಯ (ಒಂದು ವಸ್ತು ಬೋಧಕ) ಪದಗಳು ; ಪದ್ಮ ಪುರಾಣದಲ್ಲಿ ಗೌರೀ ಶಂಕರರ ಸಂಭಾಷಣೆಯಲ್ಲಿ ಉಕ್ತವಾದ ಈ ವಿಷ್ಣು ಚಕ್ರದ ನಾಮಗಳು ವ್ಯಾಸ ನಿಘಂಟುಗತವಾಗಿ ಪ್ರಮಾಣಗಳೆನಿಸಿವೆ – ಅಮರಸಿಂಹನಕೋಶಕ್ಕಿಂತ ಮಹಾಪ್ರಮಾಣವುಳ್ಳ ಕೋಶವಿದು ; (ಲಿಂಗಾನುಶಾಸನವು – ಅಮರದಂತೆ) (೫೮೯–೫೯೦).

1 ದಶಾ–ಶಬ್ದವು ಛಿದ್ರ ವಸ್ತ್ರವನ್ನು ಹೇಳುತ್ತದೆ ; ಛಿದ್ರ ವಸ್ತ್ರದಲ್ಲಿ ಪವಿತ್ರೀಕರಣ ಸಾಮರ್ಥ್ಯವನ್ನು ಉಂಟುಮಾಡಲು ಸಹಸ್ರ ಛಿದ್ರವುಳ್ಳ ಸುದರ್ಶನದ ಸನ್ನಿಧಾನವು ಅವಶ್ಯಕ ; ಸೋಮರಸದ ಸನ್ನಿಧಾನವುಳ್ಳ ದಶಾವು 'ದಶಾಪವಿತ್ರ'ವೆಂದೇ ಕರೆಯಲಾಗುತ್ತದೆ ; 'ದಶಾ' ಎಂದರೆ ಚಕ್ರದ ಅರಗಳಂತೆ ಛಿದ್ರವಾದ ತುದಿಯುಳ್ಳ ಯಜ್ಞೋಪಯುಕ್ತ ವಸ್ತ್ರ ವಿಶೇಷವು.

ಪರಿಹಾರಕವೂ), ಲೋಕದ್ವಾರಂ–ಲೋಕದ್ವಾರವೂ (ವಿಷ್ಣುಲೋಕ ಪ್ರಾಪ್ತಿಗೆ ದ್ವಾರವು – (ಅನಂತಾಸನಕ್ಕೆ ಹೋಗಲು, ಅಂಧತಮಸ್ಸನ್ನು ಸೀಳಿಕೊಂಡು ಹೋಗುವ, ಎಂಬರ್ಥವನ್ನು ತಿಳಿಯಬಹುದು); (ತಮಸ್ಸನ್ನು ದಾಟಿದನಂತರ ಅನಂತಾಸನಪ್ರಾಪ್ತಿಯಷ್ಟೆ). ಮಹೌಜಸಂ–ಮಹಾ ತೇಜಸ್ಸುಳ್ಳದ್ದು, (ಹೀಗೆ ಈ ಎಲ್ಲವೂ), ವಿಷ್ಣುಚಕ್ರಸ್ಯ–ಶ್ರೀವಿಷ್ಣು ಚಕ್ರದ, ನಾಮಾನಿ–ಹೆಸರುಗಳು.[1] ಮೇ–ನನ್ನಿಂದ, ಪರ್ಯಾಯೇಣ–ಪರ್ಯಾಯದಿಂದ (ಏಕವಸ್ತುಬೋಧಕಶಬ್ದಗಳಿಂದು), ನಿಬೋಧ–ತಿಳಿಯುವಳಾಗು; ಇತಿ–ಹೀಗೆಂದು, ಪಾದ್ಮೋಕ್ತ–ಗೌರೀಶವಾಕ್ – ಪದ್ಮಪುರಾಣೋಕ್ತವಾದ, ಗೌರೀಶಂಕರರ ಸಂಭಾಷಣೆಯೇ, ಲಿಂಗಾನುಶಾಸನಂ – ಲಿಂಗಾನುಶಾಸನವೆಂದು, ಹಿ – ಪ್ರಸಿದ್ಧವು (ಅಮರಸಿಂಹನ ಲಿಂಗಾನುಶಾಸನಕ್ಕಿಂತ ಅಧಿಕವಾದ ಮಹಾಲಿಂಗಾನುಶಾಸನವೇ ಸರಿ) (ಶಬ್ದಲಿಂಗಗಳನ್ನು ಕ್ರೋಢೀಕರಿಸುವ ಕೋಶವು).

**ಪಾವಮಾನೀ ತನುಶ್ಚೇಯಂ ಸ್ಯಾದಾಚಾರ್ಯಸ್ವರೂಪಿಣೀ ।**
**ಯಾಸ್ಯ ವೈಷ್ಣವಧರ್ಮಸ್ಯ ಸರ್ವತ್ರಾಪಿ ಪ್ರವರ್ತಿಕಾ ॥ ೫೯೧ ॥**
**ಸಾ ಚ ಪ್ರಸಿದ್ಧೇರ್ಬದರೀಮಧ್ಯೇ ಮುನಿಮನಃಪ್ರಿಯಾ ।**
**ವ್ಯಾಸಕೈಂಕರ್ಯಧುರ್ಯಾ ಚ ಮಾಧ್ವೀ ಭವಿತುಮರ್ಹತಿ ॥ ೫೯೨ ॥**

ಆಚಾರ್ಯ ಸ್ವರೂಪಿಣೀ – ಜಗದ್ಗುರು ಸ್ವರೂಪದ, ತನುಃ – ರೂಪವು (ಶ್ರೀಮದಾಚಾರ್ಯರರೂಪವೇ), ಇಯಂ–ಇದೇ ಪಾವಮಾನೀ (ತನುಃ)–ಪವಮಾನನ (ವಾಯುದೇವನ) ರೂಪವು, ಸ್ಯಾತ್–ಆಗುತ್ತದೆ (ಆಗಿದೆ);

---

ಆದ್ದರಿಂದಲೂ ಪವಿತ್ರವೆಂಬುದು ಸುದರ್ಶನದ ನಾಮವೇ ಆಗಿದೆ; ವಾಯುದೇವನ ತನುವೇ (ರೂಪವೇ) ಜದ್ಗುರುಗಳಾದ ಶ್ರೀಮದಾಚಾರ್ಯರು; ಈ ರೂಪವೇ ವೈಷ್ಣವ ಧರ್ಮವನ್ನು ಸರ್ವ ದೇಶದಲ್ಲಿ ಪ್ರವರ್ತನ ಮಾಡಿದ ಶ್ರೀಮಧ್ವರೂಪವು – ತಪ್ತಚಕ್ರಾಂಕನವು ವಿಷ್ಣು ಪ್ರೀತಿಕರವೂ ಸಚ್ಛಾಸ್ತ್ರ ಪಠನಾದಿಗಳಿಗೆ ಅಧಿಕಾರವನ್ನೊದಗಿಸುವುದೂ, ಎಂದು ಘೋಷಿಸಿ ಪ್ರಸಾರ ಮಾಡಿದವರು ಅವರೇ; ಬದರೀ ಕ್ಷೇತ್ರದಲ್ಲಿದ್ದ ಸಕಲ ಋಷಿಗಳಿಗೆ

1 ಶ್ಲೋಕ ೫೪೧ನೇ ತಾತ್ಪರ್ಯಭಾಗದ ಅಡಿಟಿಪ್ಪಣಿಯನ್ನು ಇಲ್ಲಿ ನೋಡಬಹುದು.

ಯಾ–ಯಾವ ಶ್ರೀಮಧ್ವರೂಪವು, ಅಸ್ಯ–(ಶ್ರುತ್ಯುಕ್ತವಾದ) ಈ, ವೈಷ್ಣವ ಧರ್ಮಸ್ಯ – ತಪ್ತಚಕ್ರಾಂಕನ ಧರ್ಮದ, ಸರ್ವತ್ರಾಪಿ – ಸರ್ವದೇಶದಲ್ಲಿಯೂ, ಪ್ರವರ್ತಿಕಾ–ಪ್ರಚಾರ ಮಾಡಿರುವುದೋ, ಸಾ ಚ–ಅದೇ ತನುವೇ (ರೂಪವೇ), ಬದರೀಮಧ್ಯೇ – ಬದರಿಕಾಶ್ರಮದ ಮಧ್ಯದಲ್ಲಿ, ಮುನಿಮನಃಪ್ರಿಯಾ–ಋಷಿ ಜನರ ಮನಸ್ಸಿಗೆ ಅತಿ ಪ್ರಿಯವಾದುದು, ವ್ಯಾಸಕೈಂಕರ್ಯಧುರ್ಯಾ ಚ– ಶ್ರೀವ್ಯಾಸರ ಸೇವಾಧುರೀಣವಾದುದು, ಪ್ರಸಿದ್ಧೇಃ-(ಹೀಗೆಂದು) ಪ್ರಸಿದ್ಧಿಯಿಂದಲೂ (ಮುನಿಜನರಿಂದ ಚಕ್ರಧಾರಣೆಗಾಗಿ ಪ್ರಾರ್ಥಿತರೆಂದು ಶ್ರುತಿ ಪ್ರಸಿದ್ಧಿ ಇರುವುದ ರಿಂದಲೂ), ಮಾಧ್ವೀ–ಶ್ರೀಮಧ್ವರೂಪವೇ, ಭವಿತುಂ–ಎಂದು ತಿಳಿಯಲು, ಅರ್ಹತಿ–ಉಚಿತವಾಗುತ್ತದೆ.

**ಯುಗೇ ಯುಗೇಽವತೀರ್ಣಾನಾಂ ಬಹುತ್ವಮಪಿ ಯುಕ್ತಿಮತ್ ।**
**ದ್ವಿವಿಧಸ್ಯಾಸ್ಯ ಧರ್ಮಸ್ಯ ಮೌಲ್ಯಂ ಸಾ ಮೂರ್ತಿರರ್ಹತಿ ॥ ೫೩ ॥**

ಯುಗೇ ಯುಗೇ–ಪ್ರತಿ ಯುಗದಲ್ಲಿ, ಅವತೀರ್ಣಾನಾಂ–ಅವತಾರವಾಗುವ (ಕಲ್ಪದಲ್ಲಿ ಬಹುವಾರ ಮಧ್ವಾವತಾರವಾಗುವುದರಿಂದ) ಮಧ್ವರೂಪಗಳಿಗೆ, ಬಹುತ್ವಂ ಅಪಿ–ಬಹುತ್ವವು (ಪಾವಮಾನ್ಯಃ ಎಂಬ ಶ್ರುತಿಯ ಬಹುವಚನ ಪ್ರಯೋಗವೂ), ಯುಕ್ತಿಮತ್–ಯುಕ್ತಿ ಯುಕ್ತವೇ (ಆಗುತ್ತದೆ) ; ದ್ವಿವಿಧಸ್ಯ ಧರ್ಮಸ್ಯ–ಎರಡೂ ವಿಧದ ಧರ್ಮಗಳ (ಜ್ಞಾನಕಾರ್ಯ, ಬಲಕಾರ್ಯಗಳೆಂಬ ಎರಡೂ ಧರ್ಮಗಳ), ಅಸ್ಯ ಮೌಲ್ಯಂ–ಧರ್ಮದ ಮೂಲಕಾರಣತ್ವವನ್ನು, ಸಾ ಮೂರ್ತಿಃ – ಆ ಶ್ರೀಮಧ್ವರೂಪದ ಮೂಲರೂಪವು ( ವಾಯುದೇವನು ), ಅರ್ಹತಿ–ಹೊಂದಿದೆ (ಎರಡೂ ಧರ್ಮಗಳಿಗೆ ಆಕರವಾದ ಕಾರಣತ್ವಕ್ಕೆ ಯೋಗ್ಯವೇ ಆಗಿದೆ).

---

ಪ್ರಿಯತಮವಾದ ರೂಪವೂ ಅದೇ ; ಶ್ರೀವಾಸಸೇವಾಧುರೀಣರಾದ, ಪ್ರಸಿದ್ಧ ಶ್ರೀಮಧ್ವರೂಪವೇ ಆಗಿದೆ ; ಹೀಗೆ ತಿಳಿಯುವುದೇ ಯೋಗ್ಯವಾದ ಶ್ರುತ್ಯರ್ಥವು (೫೧–೫೨). ಮಧ್ವರೂಪವು ಜಗತ್ತಿನಲ್ಲಿ ದೃಶ್ಯವಾಗುವ ಪ್ರತಿಯುಗದಲ್ಲಿ, ವಾಯುದೇವನೇ (ಪವಮಾನನೇ) ಈ ರೂಪದಿಂದ ಬಹುವಾರ ಅವತರಿಸುವನು ; ಈ ವಾಯುದೇವನ ಅವತಾರಗಳಿಗೆ ಬಲಕಾರ್ಯ, ಜ್ಞಾನಕಾರ್ಯಗಳೆಂಬ ದ್ವಿವಿಧ ಧರ್ಮಗಳಿರುತ್ತವೆ ; ಈ ಉಭಯಕ್ಕೂ ಮೂಲವಾದ ರೂಪವು ವಾಯುದೇವನದೇ

**ಬಲಕಾರ್ಯಾಣಿ ರೂಪಾಣಿ ವಾಯೋಃ ಸಂತು ಸಹಸ್ರಶಃ ।**
**ಜ್ಞಾನಕಾರ್ಯಂ ತು ತದ್ರೂಪಮಿದಮೇವ ಪ್ರದೃಶ್ಯತೇ ॥ ೫೯ ॥**

ವಾಯೋಃ – ಶ್ರೀವಾಯುದೇವನ, ಬಲಕಾರ್ಯಾಣಿ – ಬಲಕಾರ್ಯಗಳು ಇರುವ, ರೂಪಾಣಿ–ರೂಪಗಳು (ಅವತಾರಗಳೂ), ಸಹಸ್ರಶಃ–ಸಹಸ್ರಾರು (ಬಹುವಾಗಿ), ಸಂತು–ಇರುತ್ತವೆ (ಇರಲಿ), ತು–ಆದರೆ, ಜ್ಞಾನಕಾರ್ಯಂ–ಜ್ಞಾನವೇ ಕಾರ್ಯವಾಗುಳ್ಳ, ತದ್ರೂಪಂ–ಆ (ವಾಯುದೇವನ) ರೂಪವು; ಇದಂ ಏವ–ಈ ಮಧ್ವರೂಪವೇ, ಪ್ರದೃಶ್ಯತೇ–(ದುಷ್ಟಜನ ಶಿಕ್ಷಾರ್ಥವಾಗಿ ಬಲಪ್ರಯೋಗ ಮಾಡದ ರೂಪವು) ಎಂದು ತಿಳಿಯಬರುತ್ತದೆ.

**ಯತ್ತೇ ಪವಿತ್ರಮರ್ಚಿಷ್ಯಗ್ನೇ ವಿತತಮಂತರಾ ।**
**ಬ್ರಹ್ಮ ತೇನ ಪುನೀಹೀತಿ ತಸ್ಯೈವ ಪ್ರಾರ್ಥನಾಂತರಂ ॥ ೬೦ ॥**

'ಪುನೀಹಿನ' ಎಂಬ ಶ್ರುತಿಯಿಂದ, ಅಗ್ನಿಶಬ್ದವಾಚ್ಯನಾದ ವಾಯುದೇವನೇ ಸ್ತುತಿಸಲ್ಪಟ್ಟಿರುವನು ; ಎನ್ನುತ್ತಾರೆ :—[1]

---

ಆಗಿದೆ (೫೮). ಬಲಕಾರ್ಯ ಪ್ರವೃತ್ತಗಳಾದ ವಾಯುದೇವನ ಅವತಾರಗಳು ಬಹುವಾಗಿವೆ (ಅಸಂಖ್ಯವಾಗಿವೆ) : ಆದರೆ ಜ್ಞಾನಕಾರ್ಯ ಮಾತ್ರದಲ್ಲಿ (ದುಷ್ಟ ಶಿಕ್ಷೆಯನ್ನು ಬಲಪ್ರಯೋಗದಿಂದ ಮಾಡದಿರುವ) ಪ್ರವೃತ್ತವಾದುದು, ಶ್ರೀಮಧ್ವ ರೂಪವೆಂದೇ ಸ್ಪಷ್ಟವಾಗಿ ತಿಳಿಯುತ್ತದೆ (೫೯). 'ಯತ್ತೇ ಪವಿತ್ರ ಮರ್ಚಿಷ್ಯಗ್ನೇ ವಿತತಮಾಂತರಾ । ಬ್ರಹ್ಮತೇನ ಪುನೀಹಿ' ಎಂಬ ಶ್ರುತಿಯೂ, ಈ ವಾಯುದೇವನ

[1] ಪ್ರಸಕ್ತ ಶ್ರುತಿಯು, ಸಹ, ಪೂರ್ವೋಕ್ತ ಶ್ರುತಿವಾಕ್ಯಗಳು ತಪ್ತಸುದರ್ಶನ ಧಾರಣವನ್ನೇ ಸ್ತುತಿಸುತ್ತವೆಂದು, ಸಮರ್ಥಿಸುವುದಲ್ಲದೇ ತಪ್ತಮುದ್ರಾಧಾರಣೆಯನ್ನೇ ಪ್ರತಿಪಾದಿಸುತ್ತದೆಂದು ಉದಾಹರಿಸಿ ಸಂಗ್ರಹಿಸಿರುವರು :—ಶ್ರುತ್ಯರ್ಥವು ಮುಂದಿನಂತಿದೆ ; ಇದು ಹಿಂದಿನ ಶ್ರುತಿಗಳಿರುವ ಸಂಹಿತೆಯ ಅವಶಿಷ್ಟವಾಕ್ಯವೇ ಆಗಿದೆ :—ಹೇ ಅಗ್ನೇ–ಹೇ ಪವಮಾನ ! ಅಂಗಭೂತರಾದ ರುದ್ರಾದಿದೇವತೆಗಳ ನೇತಾರನಾದ್ದರಿಂದಲೂ (ನಾಯಕನಾದ) ಮತ್ತು ಅಗ್ನಿಯಲ್ಲಿ ಸನ್ನಿಹಿತನಾದ್ದರಿಂದಲೂ, ಪವಮಾನನು ಅಗ್ನಿಪದವಾಚ್ಯನು (ಕುಂಡಸ್ಥಿತ ಲಕ್ಷ್ಮಿಯಲ್ಲಿ ನಾರಾಯಣ ಸಮಾಗಮದಿಂದ, ಜನಿಸಿದ 'ಅಗ್ನಿ' ಯಲ್ಲಿ ತಾಂತ್ರಿಕರು ಪವಮಾನನ ಸನ್ನಿಧಾನವನ್ನು ಚಿಂತಿಸಿ ಆಹುತಿಗಳನ್ನು ಅರ್ಪಿಸುತ್ತಾರೆ) ;

*

ಅಗ್ನೇ – ಹೇ ಪವಮಾನ !, ತೇ–ನಿನ್ನ, ಅರ್ಚಿಷಿ–ಅಗ್ನಿಜ್ವಾಲೆಯಲ್ಲಿ, ಅಂತರಾ–ಒಳಗೆ, ವಿತತಂ – ವಿಸ್ತಾರವಾಗಿ ಹಬ್ಬಿದ, ಯತ್ – ಯಾವ ಪವಿತ್ರ ನಾಮಕ ಚಕ್ರವೋ, ತೇನ – ಅದರಿಂದ (ಲಾಂಛಿತವಾದ ಭುಜಗಳುಳ್ಳ) ನಃ– ನಮಗೆ, ಬ್ರಹ್ಮ – ವೇದವನ್ನು ಪುನೀಹಿ – ಶುದ್ಧವನ್ನಾಗಿ ಮಾಡು (ನಮ್ಮಿಂದ ಪಠನಯೋಗ್ಯವಾದುದನ್ನಾಗಿ ಮಾಡು) ; ಇತಿ–ಹೀಗೆ ಹೇಳುವ, ಶ್ರುತಿವಾಕ್ಯವು, ತಸ್ಯ ಏವ–ತಪ್ತಸುದರ್ಶನದ, ಪ್ರಾರ್ಥನಾಂತರಂ–ಮತ್ತೊಂದು ಪ್ರಾರ್ಥನೆಯೂ (ಆಗಿದೆ).

**ಸಖ್ಯುರಗ್ರೇ ಹೃದಿಗತಮಗ್ನ್ಯಾಖ್ಯಂ ತಂ ಗುರುಂ ಪ್ರತಿ ।**
**ಸ್ಪಷ್ಟೀಕರ್ತುಂ ಮಹಾಧರ್ಮಂ ತಪ್ತಚಕ್ರಾಂಕಧಾರಣಂ ॥ ೫೯ ॥**

ಸಖ್ಯುಃ–ಪರಮಮಿತ್ರನ, ಅಗ್ರೇ – ಮುಂದೆ, ಹೃದಿಗತಂ–ಮನಸ್ಸಿನಲ್ಲಿರುವುದನ್ನು, ಸ್ಪಷ್ಟೀಕರ್ತುಂ–ಸ್ಪಷ್ಟವಾಗಿ ನಿರೂಪಿಸಲು, ಅಗ್ನ್ಯಾಖ್ಯಂ–ಅಗ್ನಿನಾಮಕ,

---

ರೂಪದ (ಶ್ರೀಮಧ್ವರ) ಪ್ರಾರ್ಥನೆಯೇ ಆಗಿದೆ ; ಅಗ್ನಿಜ್ವಾಲೆಯಲ್ಲಿ ಇವರು ವ್ಯಾಪ್ತರು ; ಅಗ್ನಿ ಶಬ್ದವಾಚ್ಯರೂ ಆಗಿರುವರು, ರುದ್ರಾದಿ ದೇವತೆಗಳ ನೇತಾರರೂ ಆಗಿರುವುದರಿಂದ ಅಗ್ನಿ ಶಬ್ದವಾಚ್ಯರು ; ಅಗ್ನಿಜ್ವಾಲೆಯಲ್ಲಿ ವಿಷ್ಣು ಚಕ್ರವೂ ವ್ಯಾಪ್ತವಾಗಿದೆ ; ತಪ್ತ ಸುದರ್ಶನವನ್ನು, ವೇದಪಠನಾಧಿಕಾರವನ್ನು ದೊರಕಿಸುವಂತೆ ಈ ವಾಕ್ಯದಲ್ಲಿ ಪ್ರಾರ್ಥಿಸಲಾಗಿದೆ ; ವೈಷ್ಣವತ್ವವಿಲ್ಲದೇ ವೇದ ಪಠನದಲ್ಲಿ ಅಧಿಕಾರವಿಲ್ಲ ; ತಪ್ತಚಕ್ರವನ್ನು ಭುಜಗಳಲ್ಲಿ ಧರಿಸದೇ ವೈಷ್ಣವತ್ವ ಸಿದ್ಧವಲ್ಲ (೫೮). ವಾಯುದೇವನೂ ಅಗ್ನಿಶಬ್ದವಾಚ್ಯನು ; ಅಗ್ನಿಯು

---

ತೇ–ನಿನ್ನ, ಅರ್ಚಿಷಿ–ಜ್ವಾಲೆಯಲ್ಲಿ, ಅಂತರಾ–ಅಂತಃ (ಒಳಗೆ), ವಿತತಂ–ವಿಶೇಷವಾಗಿ ವ್ಯಾಪ್ತನಾದ (ವಿಸ್ತಾರವಾದ ತಾಪವುಳ್ಳವನಾಗಿ), ಯತ್ ಪವಿತ್ರಂ–(ಪವಿವತ್–ಇಂದ್ರನ ವಜ್ರದಂತೆ ರಕ್ಷಕವಾದ್ದರಿಂದ) ಪವಿತ್ರಶಬ್ದವಾಚ್ಯವಾದ ಸುದರ್ಶನವು (ದಶಾಪವಿತ್ರದಲ್ಲಿ ಈ ಮಹಿಮೆ ಇಲ್ಲ–ಅಗ್ನಿಯಲ್ಲಿ ಹಾಕಿದೊಡನೆಯೇ ಆ ವಸ್ತ್ರವು ದಹಿಸಿಹೋಗುತ್ತದೆ), ನಃ– ನಮಗೆ, ಬ್ರಹ್ಮ–ವೇದವನ್ನು ಪಠಿಸಲು ಅವಶ್ಯಕವಾದ ಶುದ್ಧತೆಯನ್ನು, ಪುನೀಹಿ–ಕೊಟ್ಟು ನಮ್ಮನ್ನು ಪವಿತ್ರಗೊಳಿಸು (ವಿಷ್ಣು ಚಕ್ರದಿಂದ ಲಾಂಛಿತವಾದ ವಿಷ್ಣುಭಕ್ತನೇ ವೇದಪಠನದಲ್ಲಿ ಅಧಿಕಾರಿಯು ; 'ಅವೈಷ್ಣವಸ್ಯ ವೇದೇಪಿ ಹ್ಯಧಿಕಾರೋ ನ ವಿದ್ಯತೇ' ಎಂಬ ಪ್ರಮಾಣವೂ ಇದೆ) ನಮ್ಮ ಭುಜದಲ್ಲಿ ಸುಸಂಸ್ಕೃತ ತಪ್ತಸುದರ್ಶನದ ಮುದ್ರೆಯು ಶೋಭಿಸಿ, ನಮ್ಮನ್ನು ವೇದಾಧಿಕಾರಿಗಳನ್ನಾಗಿ ಮಾಡಿ ರಕ್ಷಿಸಲಿ ; ಈ ಶ್ಲೋಕವೇ ಪ್ರಸಕ್ತ ಶ್ರುತಿಯನ್ನು ಉದಹರಿಸುತ್ತದೆ.

ತಂ—ಆ ಪ್ರಸಿದ್ಧ, ಗುರುಂ ಪ್ರತಿ—(ಶ್ರೀಮಧ್ವರೆಂಬ ವಾಯುದೇವನನ್ನು) ಗುರುವನ್ನುದ್ದೇಶಿಸಿ, ತಪ್ತಚಕ್ರಧಾರಣಂ — ತಪ್ತಸುದರ್ಶನವನ್ನು ಭುಜದಲ್ಲಿ ಧಾರಣ ಮಾಡುವುದೆಂಬ, ಮಹಾಧರ್ಮಂ-ಶ್ರೇಷ್ಠಧರ್ಮವನ್ನು (ವಿಜ್ಞಾಪಿಸಿ ಕೊಳ್ಳುವುದು), ಮಂತ್ರದ್ರಷ್ಟಋಷಿಯ ಅಭಿಪ್ರಾಯವೂ ಸೂಚಿತವಾಗುತ್ತದೆ).

**ಅಗ್ನಿಶ್ಚ ದಹ್ಯಾತ್ತ್ವಾಂ ನೋ ಚೇತ್ ಪೂರ್ವಾವಾಕ್ಯಪ್ರಧಕ್ಷ್ಯತಿ ।**
**ಅನ್ಯಥಾ ವಾಕ್ಯಭೇದಃ ಸ್ಯಾತ್ಸೂಕ್ತಂ ಚೈತತ್ಪ್ರಕುಪ್ಯತಿ ॥ ೫೭೭ ॥**

ನೋ ಚೇತ್ — (ಪವಿತ್ರಪದವಾಚ್ಯವಾದುದು ಸುದರ್ಶನವಲ್ಲದಿದ್ದರೆ), ಹಾಗಲ್ಲದಿದ್ದರೆ, ತ್ವಾಂ—ನಿನ್ನನ್ನು (ನಿನಗೆ ಅಭಿಮತವೆಂಬ ದಶಾಪವಿತ್ರವನ್ನು), ಪೂರ್ವಾ-ಪೂರ್ವದಲ್ಲಿ ಉದಾಹೃತವಾದ ('ಯೇನ ದೇವಾ'—ಎಂಬ ವಾಕ್ಯ—ವಾಕ್ಯವು, ಪ್ರಧಕ್ಷ್ಯತಿ-(ಅದನ್ನು-ದಶಾಪವಿತ್ರವನ್ನು) ಸುಟ್ಟುಹಾಕುತ್ತದೆ (ಅಥವಾ ತನ್ನನ್ನು ವಿಷ್ಣುಚಕ್ರವೆಂದು ಕರೆದುದರಿಂದ ಲಜ್ಜೆಗೊಂಡು ತಾನೇ ಅಗ್ನಿಯಲ್ಲಿ ಬಿದ್ದು ದಹಿಸಿಹೋಗುತ್ತದೆ); ಅನ್ಯಥಾ—ಬೇರೆ ರೀತಿಯಾದಲ್ಲಿ (ಪೂರ್ವ ವಾಕ್ಯದಲ್ಲಿಯೂ ಪವಿತ್ರವೆಂಬುದಕ್ಕೆ ಚಕ್ರವೆಂಬ ಅರ್ಥವನ್ನು ತಿಳಿಯದಿದ್ದರೆ, ವಾಕ್ಯಭೇದಃ—(ಉದ್ದಿಷ್ಟಪರಿಶಿಷ್ಟವಾಕ್ಯಗಳಲ್ಲಿ) ಅರ್ಥಭೇದವು, ಸ್ಯಾತ್—ಉಂಟಾಗುತ್ತದೆ; ಚ—ಹಾಗೂ, ಏತತ್ ಸೂಕ್ತಂ —(ಏಕಾರ್ಥಪ್ರತಿಪಾದಕ ವಾಕ್ಯಸಮೂಹವಾದ) ಈ ಸೂಕ್ತವು, ಪ್ರಕುಪ್ಯತಿ — (ದಶಾಪವಿತ್ರವೆಂಬರ್ಥವನ್ನು ಪ್ರಬಲವಾಗಿ) ವಿರೋಧಿಸುತ್ತದೆ.

---

ವಾಯುಸಖನೂ ಆಗಿರುವನು; ಮಂತ್ರದ್ರಷ್ಟನಾದ ಋಷಿಯು, ತನ್ನ ಹೃದ್ಗತವಾದ, ತಪ್ತ ಚಕ್ರವನ್ನು ಭುಜದಲ್ಲಿ ಧಾರಣಮಾಡುವುದು ಮಹಾಧರ್ಮವೆಂಬುದನ್ನು, ತನ್ನ ಸಖನಾದ (ಶ್ರೀಮಧ್ವರೂಪದ) ವಾಯುದೇವನ ಎದುರಿಗೆ, ವಿಜ್ಞಾಪಿಸಿಕೊಳ್ಳುವ ಕರ್ತವ್ಯವನ್ನು ಇಲ್ಲಿ ಸೂಚಿಸಿರುವನು—ಈ ಪ್ರಾರ್ಥನೆಯಿಂದ (೫೭೬). ಪವಿತ್ರ ಶಬ್ದವಾಚ್ಯವಾದುದು ದಶಾಪವಿತ್ರವಾದರೆ, ಅಗ್ನಿಯು ಅದನ್ನು (ವಸ್ತ್ರವಿಶೇಷವಾದ್ದರಿಂದ) ದಹಿಸಿಬಿಡುತ್ತದೆ; ಶ್ರುತಿಯ 'ಯೇನ ದೇವಾ' ಎಂಬ ವಾಕ್ಯವು ಆ ಅರ್ಥವನ್ನು ನಾಶಮಾಡುತ್ತದೆ; ಪವಿತ್ರಶಬ್ದಕ್ಕೆ ಚಕ್ರವೆಂಬರ್ಥವನ್ನು ತಿಳಿಯದಿದ್ದರೆ ಶ್ರುತಿಯ ವಿವಿಧ ವಾಕ್ಯಗಳಲ್ಲಿ ಅರ್ಥಭೇದವೂ ಉಂಟಾಗುತ್ತದೆ; ಪೂರ್ವೋತ್ತರ ವಾಕ್ಯಗಳ ವಿರೋಧವೂ, ಸೂಕ್ತ ಸಂಗತಿಯೂ ತಪ್ಪಿ, ಪ್ರಸಕ್ತ

**ಅಗ್ನೇ ತೇऽರ್ಚಿಷಿ ಯಚ್ಚಕ್ರಮಂತರಾ ವಿತತಂ ಕೃತಂ ।**
**ತಪ್ತೇನ ತೇನ ಚಕ್ರೇಣ ಬ್ರಹ್ಮ ವೇದಂ ಪುನೀಹಿ ನಃ ॥ ೫೯೮ ॥**

ಯತ್ (ಯಸ್ಮಾತ್)–ಯಾವ ಕಾರಣದಿಂದ, ತೇ–ನಿನ್ನ, ಅಗ್ನೇ–ಅಗ್ನಿ ಸಂಬಂಧವಾದ, ಅರ್ಚಿಷಿ–ಜ್ವಾಲೆಯಲ್ಲಿ, ಚಕ್ರಂ–ವಿಷ್ಣುಚಕ್ರವು, ಅಂತರಾಕೃತಂ–ಒಳಗಿಟ್ಟುಕೊಂಡಿರುವೆಯೋ, ತೇನ–(ಆ ಕಾರಣದಿಂದ) ಆ ಜ್ವಾಲೆಯಿಂದ, ತಪ್ತೇನ–ದಹಿಸಲ್ಪಟ್ಟ, ಚಕ್ರೇಣ–ಚಕ್ರದಿಂದ, ನಃ–ನಮ್ಮ (ನಾವು ಪಠಿಸುವ), ಬ್ರಹ್ಮ–ಬ್ರಾಹ್ಮಣರಿಂದ ಪಠಿಸಲ್ಪು ಯೋಗ್ಯವಾದ, ವೇದ–ವೇದವನ್ನು, ಪುನೀಹಿ–ಶುದ್ಧತೆಯನ್ನು ರಕ್ಷಿಸು. (ನಮ್ಮ ಪಠನದಿಂದ ಅಶುದ್ಧವಾಗದಂತೆ ರಕ್ಷಿಸೆಂದು ಚಕ್ರವನ್ನು ಪ್ರಾರ್ಥಿಸುವುದು).

**ಇತಿ ಪ್ರಾರ್ಥನರೂಪೋऽರ್ಥೋ ಯಃ ಸ್ಪಷ್ಟೋऽತ್ರ ಪ್ರತೀಯತೇ ।**
**ಅತಶ್ಚಕ್ರಾಂಕಶೂನ್ಯಾನಾಂ ವೇದಾಭ್ಯಾಸೋ ವೃಥಾ ಭವೇತ್॥೫೯೯॥**

ಇತಿ–ಹೀಗೆಂಬ, ಪ್ರಾರ್ಥನರೂಪಃ–ಪ್ರಾರ್ಥನರೂಪದ, ಅರ್ಥಃ–ಅರ್ಥವು, ಯಃ–ಯಾವುದು, ಅತ್ರ–ಈ ಶ್ರುತಿಯಲ್ಲಿ, ಸ್ಪಷ್ಟಃ–ಸ್ಪಷ್ಟವಾದುದು, ಪ್ರತೀಯತೇ–ತಿಳಿದುಬರುತ್ತದೆಯೋ, ಅತಃ–ಈ ಕಾರಣದಿಂದ (ಚಕ್ರಾಂಕನವಿಲ್ಲದೇ ಪಠಿತವಾದ ವೇದವು ಅಪವಿತ್ರವಾಗುವುದೆಂಬುದೂ ಶ್ರುತಿಪ್ರತಿಪಾದ್ಯವೇ ಆದ್ದರಿಂದ–ಪಠಿಸುವನಿಗೆ ಅಧಿಕಾರವಿಲ್ಲದ್ದರಿಂದ, ಅದರಿಂದ ಆಗಬೇಕಾದ ಜ್ಞಾನಲಾಭಾದಿ ಪ್ರಯೋಜನವಾಗುವುದಿಲ್ಲವಾದ್ದರಿಂದ) ಚಕ್ರಾಂಕ ಶೂನ್ಯಾನಾಂ–ಚಕ್ರಾಂಕನವಿಲ್ಲದವರಿಗೆ, ವೇದಾಭ್ಯಾಸಃ–ವೇದಾಭ್ಯಾಸವು, ವೃಥಾ–ವ್ಯರ್ಥವು, ಭವೇತ್–ಆಗುತ್ತದೆ.

---

ವಾಕ್ಯವು ಅಸಂಬದ್ಧವೂ, ಆಗುತ್ತದೆ. (೫೯೭). ಅಗ್ನಿಜ್ವಾಲೆಯಲ್ಲಿ ಚಕ್ರವು ಧರಿಸಲ್ಪಟ್ಟು ದಹಿಸಲ್ಪಡುವುದರಿಂದ, ಆ ಚಕ್ರದಿಂದ ನಮ್ಮ ಭುಜಗಳಲ್ಲಿ ಗುರ್ತಿಸಿ, ಅದರಿಂದ ವೇದ ಪಠನಕ್ಕೆ ಅಧಿಕಾರವನ್ನುಂಟುಮಾಡಿ, ಅದಿಲ್ಲದೇ ವೇದವನ್ನು ಪಠಿಸುವುದರಿಂದ ಸಂಭವಿಸುವ ದೋಷವನ್ನು (ಶೂದ್ರ ಪಠನದಂತೆ ವೇದವು ಅಪವಿತ್ರವಾಗುವುದರಿಂದ) ಪರಿಹರಿಸೆಂದು ಅಗ್ನಿ ತಪ್ತವಾದ ಚಕ್ರವನ್ನು ಪ್ರಾರ್ಥಿಸುವ ವೇದಮಂತ್ರವಿದು (೫೯೮). ಈ ಪ್ರಾರ್ಥನಾರೂಪದ ಅರ್ಥವು ಇಲ್ಲಿ ಸ್ಪಷ್ಟವಾಗಿ ತೋರುವುದರಿಂದ, ಚಕ್ರಾಂಕನ ರಹಿತರಿಗೆ ವೇದಾಭ್ಯಾಸವು

**ಯದಾ ಚಕ್ರಾಂಕಶೂನ್ಯೋಕ್ತವೇದಸ್ಯಾಪ್ಯಪವಿತ್ರತಾ ।**
**ತದಾ ತೇಷಾಂ ತು ಮೂರ್ಖಾಣಾಂ ಹೀನಾದಪಿ ಚ ಹೀನತಾ ।**
**ಕಿಂ ವಾಚ್ಯಾ ತೇನ ಚಂಡಾಲಾದಧಮಂ ತಂ ಸ್ಮೃತಿರ್ಜಗೌ ॥ ೬೦೦ ॥**

ಯದಾ–ಯಾವಾಗ, ಚಕ್ರಾಂಕಶೂನ್ಯೋಕ್ತ ವೇದಸ್ಯ ಅಪಿ–ಚಕ್ರವನ್ನು ಧರಿಸಿದವನಿಂದ ಉಚ್ಚರಿತವಾದ ವೇದಕ್ಕೆ ಸಹ, ಅಪವಿತ್ರತಾ–ಅಪವಿತ್ರತ್ವವೋ (ಅಶುದ್ಧತ್ವವೋ), ತದಾ–ಆಗ, ಮೂರ್ಖಾಣಾಂ–ಅಜ್ಞಾನಿಗಳಿಗೆ (ಚಕ್ರಾಂಕನ ರಹಿತರಾಗಿ, ವೇದಶ್ರವಣಮಾಡುವವರ, ಅಥವಾ ಚಕ್ರವನ್ನು ಧರಿಸಬೇಕೆಂಬ ಅರ್ಥವನ್ನೇ ತಿಳಿಯದವರಿಗೆ), ಹೀನಾತ್ ಅಪಿ ಚ–ಕೀಳರಿಗಿಂತಲೂ, ಹೀನತಾ–ಕೀಳುತನವು (ನೀಚತ್ವವು), ಕಿಂ ವಾಚ್ಯಾ – ಹೇಳಲೇನು ? (ಕೈಮುತ್ಯದಿಂದ ನೀಚತ್ವವು ಸಿದ್ಧವಾಗುತ್ತದೆ); ತೇನ ತು–ಈ ಕಾರಣದಿಂದಲೇ, ತಂ–ಅಂಥವನನ್ನು, ಸ್ಮೃತಿಃ–ಸ್ಮೃತಿಯು (ಅಧಮಾಧಮತ್ವವನ್ನು–'ಅವೈಷ್ಣವಸ್ತು ಯೋ ವಿಪ್ರಶ್ಚಂಡಾಲಾದಧಮಃ ಸ್ಮೃತಃ' ಇತ್ಯಾದಿ ಸ್ಮೃತಿವಾಕ್ಯಗಳು), ಚಂಡಾಲಾತ್ ಅಧಮಂ–ಚಂಡಾಲನಗಿಂತ ಕೀಳೆಂದು (ನೀಚನೆಂದು), ಜಗೌ–ಹೇಳಿರುತ್ತದೆ.

**ಪ್ರತಪ್ತಂ ಬಿಭೃಯಾಚ್ಚಕ್ರಂ ಶಂಖಂ ಚ ಭುಜಮೂಲಯೋಃ ।**
**ಶ್ರೌತಸ್ಮಾರ್ತಾದಿಸಿದ್ಧ್ಯರ್ಥಂ ಮಂತ್ರಸಿದ್ಧ್ಯರ್ಥಮೇವ ಚ ॥ ೬೦೧ ॥**
**ಅಚಕ್ರಧಾರಿಣಂ ವಿಪ್ರಂ ದೂರತಃ ಪರಿವರ್ಜಯೇತ್ ।**
**ಶ್ವಪಾಕಮಿವ ನೇಕ್ಷೇತ ಲೋಕೇ ವಿಪ್ರಮವೈಷ್ಣವಂ ॥ ೬೦೨ ॥**

---

ವ್ಯರ್ಥವೆಂದು (ಫಲಕಾರಿಯಲ್ಲವೆಂದು) ಸಿದ್ಧವಾಗುತ್ತದೆ (೫೯೯). ಚಕ್ರಾಂಕನವಿಲ್ಲದ ಮನುಷ್ಯನು ಉಚ್ಚರಿಸುವುದರಿಂದ, ವೇದಕ್ಕೇ ಅಶುದ್ಧತೆಯುಂಟಾಗುತ್ತಿರಲು, ಈ ಜ್ಞಾನವೇ ಇಲ್ಲದ ಮೂರ್ಖರಿಗೆ, ಅತಿ ನೀಚತ್ವವುಂಟಾಗುವುದೆಂದು ಕೈಮುತ್ಯ ನ್ಯಾಯದಿಂದ ಸಿದ್ಧವಾಗುತ್ತದೆ; ಆದ್ದರಿಂದಲೇ ಸ್ಮೃತಿಗಳೂ, ಈ ವಿಧ ಮೂರ್ಖರು ಚಂಡಾಲನಗಿಂತ ಕೀಳೆಂದು ಹೇಳುತ್ತವೆ (೬೦೦). ಮುಂದಿನ (೬೦೪ ರ ವರೆಗಿನ) ಶ್ಲೋಕಗಳಲ್ಲಿ ಪದ್ಮಪುರಾಣ ಮತ್ತು ವಸಿಷ್ಠ ಸ್ಮೃತಿ ವಾಕ್ಯಗಳನ್ನು ಉದಹರಿಸುತ್ತಾರೆ; ಅವುಗಳ ಭಾವಾರ್ಥವೇನೆಂದರೆ:–ಎರಡೂ ಭುಜಗಳ ಕೆಳಭಾಗದಲ್ಲಿ ತಪ್ತ ಚಕ್ರ ಶಂಖಗಳನ್ನು ಧರಿಸಬೇಕು, ಶ್ರೌತಸ್ಮಾರ್ತ ಕರ್ಮಾಚರಣೆಯು ಫಲಪ್ರದವಾಗಲೂ ಮತ್ತು ಮಂತ್ರಸಿದ್ಧಿಗಾಗಿಯೂ, ಹೀಗೆ

**ಯಸ್ತು ನಾರಾಯಣಂ ದೇವಂ ಬ್ರಹ್ಮರುದ್ರಾದಿದೈವತೈಃ ।**
**ಸಮತ್ವೇನಾಭಿಮನ್ಯೇತ ಸ ಪಾಷಂಡೋ ನರಃ ಸ್ಮೃತಃ ॥ ೬೦೩ ॥**

**ಯೋ ಮೋಹಾದ್ವಿಷ್ಣುಮನ್ಯೇನ ಹೀನದೇವೇನ ದುರ್ಮತಿಃ ।**
**ಸಾಧಾರಣಂ ಸಕೃದ್ಬ್ರೂತೇ ಸೋಂತ್ಯಜೋ ನಾಂತ್ಯಜೋಂತ್ಯಜಃ ॥ ೬೦೪ ॥**

ಚಕ್ರಂ ಶಂಖಂ ಚ–ಚಕ್ರವನ್ನು, ಶಂಖವನ್ನು, ಪ್ರತಪ್ತಂ–ದಹಿಸಲಾದ ಚಕ್ರ ಶಂಖಗಳನ್ನು, ಭುಜಮೂಲಯೋಃ–ಭುಜಗಳ ಕೆಳಭಾಗದಲ್ಲಿ, ಬಿಭೃಯಾತ್–ಧರಿಸತಕ್ಕದ್ದು; ಶ್ರೌತಸ್ಮಾರ್ತಸಿದ್ಧ್ಯರ್ಥಂ – ಶ್ರೌತಸ್ಮಾರ್ತ ಕರ್ಮಗಳ ಫಲ ಸಿದ್ಧಿಗಾಗಿ (ವೇದೋಕ್ತ ಮತ್ತು ಧರ್ಮಶಾಸ್ತ್ರಾದಿಸ್ಮೃತಿಗಳಲ್ಲಿ ವಿಧಿಸಲಾದ ಕರ್ಮಾಚರಣೆಯ ಸಿದ್ಧಿಗಾಗಿ), ಚ–ಮತ್ತು, ಮಂತ್ರ ಸಿದ್ಧ್ಯರ್ಥಂ–ಮಂತ್ರ ಸಿದ್ಧಿಗಾಗಿಯೂ (ಉಚ್ಚರಿತ ಮಂತ್ರವು ಫಲಪ್ರದವಾಗಲು), (ಬಿಭೃಯಾತ್–ತಪ್ತಚಕ್ರಶಂಖಗಳನ್ನು ಧರಿಸತಕ್ಕದ್ದು) ; ಅಚಕ್ರಧಾರಿಣಂ–ಚಕ್ರವನ್ನು ಧರಿಸದ, ವಿಪ್ರಂ–ಬ್ರಾಹ್ಮಣನನ್ನು, ದೂರತಃ–ದೂರದಿಂದಲೇ, ಪರಿವರ್ಜಯೇತ್–ತ್ಯಜಿಸ ತಕ್ಕದ್ದು (ಅವನ ಸ್ಪರ್ಶವೂ ದೋಷಕರವಾದ್ದರಿಂದ) ; ಲೋಕೇ–ಜಗತ್ತಿನಲ್ಲಿ, ಅವೈಷ್ಣವಂ – ವಿಷ್ಣುಲಾಂಛನರಹಿತನಾದ, ವಿಪ್ರಂ–ಬ್ರಾಹ್ಮಣನನ್ನು, ಶ್ವಪಾಕಂ ಇವ–ಚಂಡಾಲನಂತೆ, ನೇಕ್ಷೇತ–ನೋಡಕೂಡದು (ದೃಷ್ಟಿಸಿ ನೋಡಬಾರದು) ; ಯಸ್ತು – ಯಾರಾದರೆ, ನಾರಾಯಣಂ ದೇವಂ–ಕ್ರೀಡಾದಿಗುಣ ವಿಶಿಷ್ಟನಾದ (ಜಗತ್ಸೃಷ್ಟ್ಯಾದಿಕ್ರೀಡೆಗಳುಳ್ಳ)ಶ್ರೀನಾರಾಯಣನನ್ನು, ಬ್ರಹ್ಮರುದ್ರಾದಿದೈವತೈಃ–

---

ಮಾಡುವುದು ಅತ್ಯವಶ್ಯಕವು, ಚಕ್ರವನ್ನು ಧರಿಸದ ಬ್ರಾಹ್ಮಣನ ಮುಖವನ್ನು ನೋಡಬಾರದು. ದೂರದಿಂದಲೇ ಅವನನ್ನು ಪರಿತ್ಯಜಿಸಬೇಕು – ಚಂಡಾಲ (ಶ್ವಪಾಕ–ನಾಯಿಮಾಂಸವನ್ನು ಪಕ್ವಗೊಳಿಸಿ ತಿನ್ನುವವನು)ನಂತೆ ಅವನನ್ನು ಕಣ್ತೆರದು ನೋಡಕೂಡದು ; ಯಾರು ನಾರಾಯಣನು ಬ್ರಹ್ಮರುದ್ರಾದಿ ದೇವತೆಗಳಿಂದ ಸಮನೆಂದು ತಿಳಿಯುವನೋ ಆತನೇ ಪಾಷಂಡಿ ಎಂಬುವನು–ಅನ್ಯನಲ್ಲ ; ಮಿಥ್ಯಾಜ್ಞಾನಿಯಾಗಿ, ಯಾವನು, ದುರ್ಬುದ್ಧಿಯಿಂದ, ವಿಷ್ಣುವನ್ನು ಅವರರಾದ, (ತಾರತಮ್ಯದಲ್ಲಿ ನೀಚರಾದ) ಅನ್ಯದೇವನಿಂದ ಸಾಧಾರಣನೆಂದು (ಅವರಂತೆ ಸಾಮಾನ್ಯ ದೇವತೆಯೆಂದು) ತಿಳಿಯುವನೋ, ಆತನೇ ಚಂಡಾಲನು;

ಬ್ರಹ್ಮರುದ್ರಾದಿ ದೇವತೆಗಳಿಂದ, ಸಮತ್ವೇನ–ಸಾಮ್ಯದಿಂದ (ನಾರಾಯಣಸಮವೆಂದು), ಅಭಿಮನ್ಯೇತ–ತಿಳಿದಿರುವನೋ, ಸ ನರಃ–ಆ ಮನುಷ್ಯನೇ, ಪಾಷಂಡಃ–ಪಾಷಂಡಿ ಎಂದು, ಸ್ಮೃತಃ–ಹೇಳಲ್ಪಡುವನು ; ಯಃ–ಯಾವ, ದುರ್ಮತಿಃ–ದುರ್ಬುದ್ಧಿಯು ಮೋಹಾತ್ – ಮಿಥ್ಯಾಜ್ಞಾನದಿಂದ (ಅಜ್ಞಾನದಿಂದ – ಜ್ಞಾನಪೂರ್ವಕವಾಗಿ–ಜಾಗರೂಕನಾಗಿರುತ್ತಿರಲು), ವಿಷ್ಣುಂ–ಶ್ರೀವಿಷ್ಣುವನ್ನು, ಹೀನದೇವೇನ–ನೀಚದೇವತೆಯಿಂದ, (ಅವರ–ಕೆಳಗಿನ ದೇವತೆಯಾದ), ಅನ್ಯೇನ–ಮತ್ತೊಬ್ಬನಿಂದ, ಸಾಧಾರಣಂ–ಸಮನೆಂದು, ಸಕೃತ್–ಒಂದಾವರ್ತಿ ; ಬ್ರೂತೇ–ಹೇಳುವನೋ, ಸಃ–ಆತನೇ, ಅಂತ್ಯಜಃ–ಚಂಡಾಲನು ; ಅಂತ್ಯಜಃ–ಜನ್ಮದಿಂದ ಚಂಡಾಲನು (ಬ್ರಾಹ್ಮಣ ಸ್ತ್ರೀ ಮತ್ತು ಶೂದ್ರಪುರುಷನಿಂದ ಹುಟ್ಟಿದವನು ಚಂಡಾಲನು), ನ ಅಂತ್ಯಜಃ–ಅಂತ್ಯಜನಲ್ಲ.

**ಅತಃ ಶ್ರುತೇಃ ಸ್ಮೃತೇಶ್ಚೈಕೋ ಮಾರ್ಗಃ ಸದ್ಧರ್ಮರಕ್ಷಣೇ ॥೬೦೫॥**

ಅತಃ–ಆದ್ದರಿಂದ (ಪ್ರತಪ್ತಂ, ಎಂದು ಹಿಂದಿನ ಶ್ಲೋಕಗಳಲ್ಲಿ ಉಕ್ತವಾದ ಪದ್ಮಪುರಾಣ ಮತ್ತು ವಾಸಿಷ್ಠ ಸ್ಮೃತಿಯಲ್ಲಿಯೂ, 'ಯೇನ ದೇವಾ' ಇತ್ಯಾದಿ ಶ್ರುತಿಯಲ್ಲಿಯೂ ಚಕ್ರವನ್ನು ಧರಿಸದವನನ್ನು ನಿಂದಿಸಿರುವ ಕಾರಣದಿಂದ), ಶ್ರುತೇಃ–ಶ್ರುತಿಯ, ಚ–ಹಾಗೂ, ಸ್ಮೃತೇಃ–ಸ್ಮೃತಿಯ, ಮಾರ್ಗಃ–ಮಾರ್ಗವು (ರೀತಿಯ), ಧರ್ಮರಕ್ಷಣೇ – ಧರ್ಮರಕ್ಷಣೆಯ ವಿಷಯದಲ್ಲಿ, ಏಕಃ – ಒಂದೇ (ಆಗಿರುತ್ತದೆ).

**ಕಿಂಚ ಶ್ರುತ್ಯಂತರಪ್ರೋಕ್ತಂ ಶತೋದ್ಯಾಮಂ ಹಿರಣ್ಮಯಂ ।**
**ಪವಿತ್ರಾಖ್ಯಂ ವಿಷ್ಣುಚಕ್ರಂ ಧಾರಣಾಯ ವಿನಿರ್ಮಿತಂ ।**
**ಯಜ್ಞರಕ್ಷಾಕರಂ ಸೋಗ್ನಿಃ ಸಹತೇ ಸ್ವೋದರೇರ್ಪಿತಂ ॥ ೬೦೬ ॥**

'ಅಗ್ನಿಶ್ಚ ದಹ್ಯಾತ್' ಎಂದು ಹೇಳಿದ ಅರ್ಥವನ್ನು ಸ್ಪಷ್ಟಗೊಳಿಸುತ್ತಾರೆ :—

---

ಜಾತ್ಯಾ (ಜನ್ಮದಿಂದ) ಚಂಡಾಲನು ಚಂಡಾಲನಲ್ಲ (೬೦೧–೬೦೪). ಆದ್ದರಿಂದ 'ಯೇನ ದೇವಾ' ಇತ್ಯಾದಿ ಹಿಂದೆ ಉದಾಹೃತವಾದ ಶ್ರುತಿಗಳಿಗೂ, ಸ್ಮೃತಿಗಳಿಗೂ ಸದ್ಧರ್ಮ ರಕ್ಷಣೆಯ ಮಾರ್ಗದಲ್ಲಿ ಏಕಾಭಿಪ್ರಾಯವು ಸಿದ್ಧವಾಗುತ್ತದೆ (೬೦೫). 'ಪ್ರಾಜಾಪತ್ಯಂ' ಎಂಬ ಅನ್ಯಶ್ರುತಿಯಲ್ಲಿ ಹೇಳಲಾದ, ಶತೋದ್ಯಾಮ, ಪವಿತ್ರಾದಿ

ಶ್ರುತ್ಯಂತರಪ್ರೋಕ್ತಂ–ಬೇರೆ (ಪ್ರಾಜಾಪತ್ಯಂ ಎಂಬ) ಶ್ರುತಿಯಲ್ಲಿ ಉಕ್ತವಾದ, ಶತೋದ್ಯಾಮಂ–ಶತೋದ್ಯಾಮವೆಂಬ, ಪವಿತ್ರಾಖ್ಯಂ – ಪವಿತ್ರವೆಂಬ ನಾಮವುಳ್ಳ, ವಿಷ್ಣುಚಕ್ರಂ–ವಿಷ್ಣುಚಕ್ರವು, ಹಿರಣ್ಮಯಂ–ಸುವರ್ಣಾತ್ಮಕವಾಗಿ, ಧಾರಣಾಯ–(ಭುಜಗಳಲ್ಲಿ) ಧರಿಸಲು, ವಿನಿರ್ಮಿತಂ–ನಿರ್ಮಿತವಾಗಿದೆ ; ಯಜ್ಞ-ರಕ್ಷಾಕರಂ – ಯಜ್ಞರಕ್ಷಣವನ್ನು ಮಾಡುವ (ಪುರಾಣಗಳಲ್ಲಿ ಶ್ರೀವಿಷ್ಣುಚಕ್ರವು ಯಜ್ಞವಿಘ್ನಕರ್ತರಾದ ರಾಕ್ಷಸ ವಧೆಗೆ ಕಾರಣವೆಂದು ವರ್ಣಿತವಾಗಿರುವುದರಿಂದ ಯಜ್ಞರಕ್ಷಾಕರವೆಂದು ಹೇಳಲಾಗಿದೆ), ಸಃ–ಯಜ್ಞಾಂಗಭೂತವಾದ ಚಕ್ರವು ; (ಮಹಾ ಮಹಿಮೆಯುಳ್ಳದ್ದು) ; ಅಗ್ನಿಃ–ಅಗ್ನಿಯು ಸ್ವೋದರೇ–ತನ್ನ ಜ್ವಾಲೆಯ ಮಧ್ಯದಲ್ಲಿ, ಅರ್ಪಿತಂ–ಸ್ಥಾಪಿತವಾದುದನ್ನು, ಸಹತೇ–ಇಟ್ಟುಕೊಂಡಿರುತ್ತಾನೆ. (ಅಗ್ನಿಯಲ್ಲಿ ಚಕ್ರವನ್ನು ದಹಿಸಿ ನಂತರ ಧಾರಣಮಾಡತಕ್ಕದ್ದೆಂಬ ವಿಧಿಯೂ ಸೂಚಿತವಾಗಿದೆ).

**ಅನ್ಯತ್ತು ಕುಪಿತಃ ಸರ್ವಂ ದಹೇದ್ವಾಯುಸಖೋಹ್ಯಸೌ ।**
**ಅತೋರ್ಥಾಂತರವಾರ್ತಾತ್ರ ದಗ್ಧೈವಾಭೂನ್ನ ಸಂಶಯಃ ॥ ೬೦೭ ॥**

ಅನ್ಯತ್‌ತು–ವಸ್ತ್ರರೂಪದ ದಶಾಪವಿತ್ರವನ್ನು, ಸರ್ವಂ–ಸರ್ವವನ್ನು (ಚಕ್ರಭಿನ್ನನಾದ ಸರ್ವವನ್ನು, ಕುಪಿತಃ–ವಿರುದ್ಧನೇ ಆಗಿ, ದಹೇತ್–(ಅಗ್ನಿಯು) ದಹಿಸುತ್ತಾನೆ ; ಹಿ–ಯಾವ ಕಾರಣದಿಂದ, ಅಸೌ–ಅಗ್ನಿಯು, ವಾಯುಸಖಃ–ವಾಯುಮಿತ್ರನಾದ್ದರಿಂದ, ಅತಃ–ಆ ಕಾರಣದಿಂದ, (ವಾಯುದೇವನಿಂದ–ಮಧ್ವಾಚಾರ್ಯರಿಂದ ಸುದರ್ಶನಧಾರಣವು ಪ್ರತಿಷ್ಠಾಪಿತವಾದ್ದರಿಂದ), ಅತ್ರ – ಇಲ್ಲಿ (ಈ ಶ್ರುತಿಯಲ್ಲಿ), ಅರ್ಥಾಂತರವಾರ್ತಾ–ಪವಿತ್ರಶಬ್ದಕ್ಕೆ ಬೇರೆ ಅರ್ಥವನ್ನು

---

ನಾಮಗಳುಳ್ಳ ವಿಷ್ಣುಚಕ್ರವು ಸುವರ್ಣಾತ್ಮಕವಾಗಿ ಭುಜಗಳಲ್ಲಿ ಧರಿಸಲಿಕ್ಕಾಗಿ ಕಲ್ಪಿತವಾಗಿದೆ ; ವಿಷ್ಣುಚಕ್ರವು, ಯಜ್ಞರಕ್ಷಾಕರವಾದುದು–ವಿಘ್ನಕರ್ತರಾದ ರಾಕ್ಷಸಾದಿಗಳನ್ನು ವಧಿಸಿ ರಕ್ಷಿಸುವ ಮಹಿಮೆಯುಳ್ಳದ್ದು ; ಅಗ್ನಿಯು ಅದನ್ನು ತನ್ನ ಜ್ವಾಲೆಗಳಲ್ಲಿಟ್ಟುಕೊಳ್ಳುತ್ತಾನೆ ; ಅದರಿಂದ ವಿಷ್ಣುಚಕ್ರದ ಸನ್ನಿಧಾನವುಳ್ಳದ್ದಾಗಿ, ಸುವರ್ಣಾತ್ಮಕ ಚಕ್ರವು ಧಾರಣ ಯೋಗ್ಯವಾಗಿರುತ್ತದೆ (೬೦೬). ವಿಷ್ಣುಚಕ್ರದಿಂದ ಅನ್ಯವಾದ ದಶಾ ಪವಿತ್ರಾದಿಯನ್ನು ಕುಪಿತನಾದ ಅಗ್ನಿಯು

ಹೇಳುವುದು, ದಗ್ಧಾ ಏವ – ದಹಿಸಲ್ಪಟ್ಟಂತೆಯೇ ಅಭೂತ್ – ಆಯಿತು, ನ ಸಂಶಯಃ–ನಿಶ್ಚಯವು.

**ಚಕ್ರಂ ಸುವರ್ಣತಃ ಕುರ್ಯಾಚ್ಛಂಖಂ ತು ರಜತೇನ ಚ ।**
**ಇತಿ ಪೌರಾಣಿಕೀಗೋಷ್ಠೀ ತತ್ಸರ್ವಂ ಮೇ ಮನೋರಮಂ ॥ ೬೦೮ ॥**
**ಏವಂ ಚ ತಪ್ತಚಕ್ರಂ ಮೇ ನಾಂಹೋ ದಾಹಾಯ ಕೇವಲಂ ।**
**ವಿರುದ್ಧಪಕ್ಷಕಕ್ಷಾಣಾಮಪಿ ದಾಹಮಚೀಕ್ಲಪತ್ ॥ ೬೦೯ ॥**

ತಪ್ತಮುದ್ರಾಧಾರಣೆಗೆ ಯೋಗ್ಯವಾದ ಚಕ್ರವು ಹಿರಣ್ಮಯವಾಗಿರತಕ್ಕದ್ದೆಂಬುದನ್ನು ಪದ್ಮಪುರಾಣವಚನದಿಂದ ತೋರಿಸುತ್ತಾರೆ :—

ಚಕ್ರಂ – ಚಕ್ರವನ್ನು, ಸುವರ್ಣತಃ – ಸುವರ್ಣದಿಂದ (ಭಂಗಾರದಿಂದ), ಕುರ್ಯಾತ್–ನಿರ್ಮಿಸಬೇಕು ; ಶಂಖಂತು–ಶಂಖವನ್ನಾದರೂ, ರಜತೇನ ಚ–ಬೆಳ್ಳಿಯಿಂದ (ನಿರ್ಮಿಸತಕ್ಕದ್ದು), ಇತಿ – ಎಂದು, ಪೌರಾಣಿಕೀಗೋಷ್ಠೀ – ಪುರಾಣಗಳ (ಪುರಾಣಿಕರ) ಸಮೂಹವು (ತಿಳಿಯುತ್ತದೆ) ; ತತ್–ಆದ್ದರಿಂದ, ಸರ್ವಂ ಮೇ – ನನ್ನಿಂದ ಉಕ್ತವಾದ ಪ್ರಮೇಯವೆಲ್ಲವೂ, ಮನೋರಮಂ – ಅಂಗೀಕಾರಯೋಗ್ಯವೇ ಆಗಿದೆ ; ಏವಂಚ–ಹೀಗೆ, ಮೇ–ನನ್ನ, ತಪ್ತಚಕ್ರಂ–ತಪ್ತಚಕ್ರವು, ಅಂಹೋದಾಹಾಯ–ಪಾಪದಹನಕ್ಕಾಗಿ, ಕೇವಲಂ–ಮಾತ್ರವೆ, ನ–ಅಲ್ಲ ; ಅಪಿ–ಮತ್ತೇನೆಂದರೆ, ವಿರುದ್ಧಪಕ್ಷಕಕ್ಷಾಣಾಂ–(ತಪ್ತಚಕ್ರಧಾರಣವನ್ನು

---

ದಹಿಸುತ್ತಾನೆ ; ಅಗ್ನಿಯು ವಾಯುಸಖನಲ್ಲವೇ ? ಮಧ್ವರೂಪೀ ವಾಯು-ದೇವನು, ಪವಿತ್ರ ಶಬ್ದವಾಚ್ಯವಾದುದು ತಪ್ತ ಚಕ್ರವೆಂಬ ಅರ್ಥವನ್ನು ನಿರ್ಣಯಿಸಿ ಹೇಳಿರುವುದರಿಂದ, ಬೇರೆ ಅರ್ಥವು ಇಲ್ಲಿ ಸರ್ವಥಾ ಯುಕ್ತವಾಗುವುದಿಲ್ಲ–ಅದೆಲ್ಲವೂ ಅಗ್ನಿದಗ್ಧವೆಂದೇ ಭಾವಿಸತಕ್ಕದ್ದು (೬೦೭). ಚಕ್ರವನ್ನು ಸುವರ್ಣದಿಂದಲೂ, ಶಂಖವನ್ನು ಬೆಳ್ಳಿಯಿಂದಲೂ ನಿರ್ಮಿಸತಕ್ಕದ್ದೆಂದು ಪದ್ಮಪುರಾಣಾದಿ (ಪುರಾಣವಾಕ್ಯ ಸಮೂಹ)ಗಳು (ಪೌರಾಣಿಕರೂ) ಹೇಳುತ್ತವೆ ; ತಪ್ತಚಕ್ರವು ಅಗ್ನಿಯಲ್ಲಿ ದಹಿಸಲ್ಪಟ್ಟು ನಂತರ ಉಪಯೋಗಿಸಲ್ಪಡುವುದು, ಕೇವಲ ತಪ್ತ ಚಕ್ರವನ್ನು ಧರಿಸುವವನ ಪಾಪ ದಹನಕ್ಕಾಗಿ ಮಾತ್ರವಲ್ಲ ; ತಪ್ತ ಮುದ್ರಾಧಾರಣೆಯನ್ನು ವಿರೋಧಿಸುವ ಸರ್ವವಿರುದ್ಧ ಪಕ್ಷಗಳ ದಾಹಕ್ಕಾಗಿಯೂ

ವಿರೋಧಿಸುವ)–ವಿರುದ್ಧಪಕ್ಷಗಳೆಂಬ ಕಕ್ಷಗಳ (ಒಣಮರಗಳ) ದಾಹಂ–ದಹಿಸುವುದನ್ನು, ಅಚೀಕ್ಲಪತ್–(ದಹಿಸುವುದಕ್ಕಾಗಿ ಸಹ) ನಿರ್ಮಿಸಿದರು (ಚಕ್ರವನ್ನು ಅಗ್ನಿಯಲ್ಲಿ ದಹಿಸಿ, ನಂತರ ದೇಹದಲ್ಲಿ ಧರಿಸಬೇಕೆಂಬ ನಿಯಮವನ್ನು, ಪಾಪ ದಹನ, ಮತ್ತು ವಿರುದ್ಧಪಕ್ಷ ದಹನಗಳೆಂಬ ಎರಡೂ ಕಾರಣಗಳಿಂದ ರಚಿಸಿರುವರು).

**ಪವಮಾನಪದ್ಯೈಃ ಸೋಮಪದೇನ ಚ ಯ ಈರ್ಯತೇ ।**
**ಸ ಏವಾಗ್ನಿಸವಿತ್ರಾದೌ ಸ್ಥಿತಸ್ತತ್ತತ್ಪದೋದಿತಃ ॥ ೬೧೦ ॥**

'ಯತ್ತೇ ಪವಿತ್ರಮರ್ಚಿಷ್ಯಗ್ನೇ' ಎಂಬಲ್ಲಿ ಹೇಳಲಾದ ಅಗ್ನಿಪದವೂ, 'ಉಭಾಭ್ಯಾಂ ದೇವಸವಿತಃ' ಇತ್ಯಾದಿಗಳಲ್ಲಿ ಹೇಳಿದ ಸವಿತ್ರಾದಿಪದವೂ, ಪವಮಾನ ಸೂಕ್ತಗತವಾದ್ದರಿಂದಲೂ, ಯೋಗದಿಂದ (ಆ ಶಬ್ದಗಳ ಯೌಗಿಕಾರ್ಥದಿಂದ ಸಹ ಪವಮಾನನಲ್ಲಿ ಕೂಡಿರುವುದರಿಂದ) ಸಹ ವಾಯುಪರವೇ ಎಂದು ಹೇಳುತ್ತಾರೆ :—

ಪವಮಾನಪದ್ಯೈಃ–ಪವಮಾನಪದಗಳಿಂದ, (ವಾಯುವಾಚಕ ಮಧ್ವಾದಿ ಪದಗಳ ಸಂಗ್ರಹಕ್ಕಾಗಿಯೂ ಬಹುವಚನವಿದೆ), ಸೋಮಪದೇನ ಚ–ಸೋಮ ಪದದಿಂದಲೂ, ಯಃ–ಯಾರು, ಈರ್ಯತೇ–ಹೇಳಲ್ಪಡುವನೋ, ಸಃ ಏವ–ಆತನೇ, ಅಗ್ನಿಸವಿತ್ರಾದೌ–ಅಗ್ನಿ, ಸೂರ್ಯಾದಿಗಳಲ್ಲಿ, ಸ್ಥಿತಃ–ಇರುವವನಾಗಿ, ತತ್ತತ್ಪದೋದಿತಃ–ಅಗ್ನಿ, ಸವಿತ್ರಾದಿ ಪದಗಳಿಂದ ವಾಚ್ಯನಾಗುತ್ತಾನೆ.

**ಅಂಗೀಭೂತಾಗ್ನಿನೇತೃತ್ವಾದಂಗೇಷ್ವಗ್ನಿಶಿಖಾ ನಯನ್ ।**
**ಪ್ರಾಣಾಗ್ನಿರಿತಿ ಯಃ ಪ್ರೋಕ್ತಃ ಸ ಏವಾಗ್ನಿಸ್ಥಿತಾನಲಃ ॥ ೬೧೧ ॥**

ಅಂಗೀಭೂತಾಗ್ನಿನೇತೃತ್ವಾತ್–ಅಪ್ರಧಾನವಾದ ಅಗ್ನಿಯ ನೇತಾರನಾದ್ದರಿಂದಲೂ, ಅಂಗೇಷ್ವಗ್ನಿ ಶಿಖಾಃ–ಕರಚರಣಾದಿ ಅಂಗಗಳಲ್ಲಿ ಯಥಾಯೋಗ್ಯವಾಗಿ

---

(ನಿರಾಕರಣೆಗಾಗಿಯೂ) ಆಗಿರುತ್ತದೆ; (೬೦೮–೬೦೯). ಪವಮಾನ ಪದಗಳಿಂದಲೂ, ಸೋಮ ಪದದಿಂದಲೂ ಹೇಳಲ್ಪಡುವನೇ, ಅಗ್ನಿ ಸವಿತೃ ಮೊದಲಾದವುಗಳಲ್ಲಿದ್ದು ಆಯಾ ಪದಗಳಿಂದ, ಅಗ್ನಿ, ಸವಿತಾದಿ ಶಬ್ದವಾಚ್ಯನೂ ಆಗಿರುವನು (೬೧೦). ಅಂಗಿಯಾದ (ಅಪ್ರಧಾನವಾದ) ಅಗ್ನಿಯ ನೇತಾರನೂ,

ಅಗ್ನಿಶಿಖಾಸಂಬಂಧವನ್ನು ನಯನ್ – ಹೊಂದಿಸುವವನಾಗಿ – (ಸಂತಾಪಯತಿ ಸ್ವಂದೇಹಮಾಪಾದತಲಮಸ್ತಕಾತ್ – ಹೃದಯಸ್ಥಿತವಾದ ಅಗ್ನಿಯನ್ನು ವ್ಯಾನ ವಾಯು ಸಹಾಯದಿಂದ – ನಾನಾ ಅಂಗಗಳನ್ನು ಹೊಂದಿಸುವುದರಿಂದಲೂ, ಅಂಗಂ ನಯನ್, ಮತ್ತು ಅಂಗೇಷು ನಯನ್ ಎಂಬ ವ್ಯುತ್ಪತ್ತಿಯು ಸೂಚಿತ ವಾಗಿದೆ–ನೀ ಪ್ರಾಪಣ ಎಂಬ ಧಾತುವಿನಿಂದಲೂ, ರೂಢಿಯಿಂದಲೂ ಅಗ್ನಿಶಬ್ದ ವಾಚ್ಯನುವಾಯುವು ) ಯಃ–ಯಾವಾತನು, ಪ್ರಾಣಾಗ್ನಿಃ ಇತಿ ಪ್ರೋಕ್ತಃ– ಪ್ರಾಣಾಗ್ನಿಯೆಂದು, ಪ್ರಾಣಾಪಾನಾದಿಗಳಲ್ಲಿದ್ದು ಕರೆಯಲ್ಪಡುವನೋ, ಸಃ ಏವ– ಆತನೇ (ಆ ವಾಯುದೇವನೇ ), ಅಗ್ನಿಸ್ಥಿತಾಮಲಃ – ಅಗ್ನಿಯಲ್ಲಿರುವ ಶುದ್ಧ ಸ್ವರೂಪನಾದ ವಾಯುದೇವನು.

**ಅಲಂ ಭಾವೋ ಯತೋ ನಾಸ್ಯ ಪವಿತ್ರೀಕರಣೇ ಸತಾಂ ।**
**ಉಪಸ್ಥಾತೃಷು ಯಃ ಪುಣ್ಯರಾಶಿಂ ಸೂತೇ ದಿನೇದಿನೇ ॥ ೬೧೨ ॥**
**ಸ ಏವ ಸವಿತಾ ಸೋಮಬಿಂಬಸ್ಥಃ ಸೋಮನಾಮಕಃ ।**
**ಸಮುತ್ಪಾಹ್ಲಾದಕಾರಿತ್ವಪೂರ್ವೈಃ ಶುಭಗುಣೈಃ ಪ್ರಭುಃ ॥ ೬೧೩ ॥**

'ಅನಲ' ಮತ್ತು 'ಸವಿತೃ' ಪದಗಳ ವಾಯುಪರವಾದ ಯೌಗಿಕಾ ರ್ಥವನ್ನು ವಿವರಿಸುತ್ತಾರೆ :—

ಕರಚರಣಾದ್ಯವಯಗಳಲ್ಲಿ ಹೃದಯಸ್ಥಿತವಾದ ಅಗ್ನಿಶಿಖಾಗಳನ್ನು, ನಯನ ಮಾಡುವವನೂ (ಹೊಂದಿಸುವವನೂ), ಆ ಕಾರಣದಿಂದಲೇ ಪ್ರಾಣಾಗ್ನಿ ಎಂದು ಕರೆಯಲ್ಪಡುವವನೂ, ಆದ ವಾಯುದೇವನೇ, ಅಗ್ನಿಸ್ಥಿತನಾದ ಶುದ್ಧ ಸ್ವರೂಪದ ಪವಮಾನನು; ವ್ಯಾನವಾಯುವಿನ ಸಹಾಯದಿಂದ ವಾಯುದೇವನು (ಪ್ರಾಣ ನಾಮಕನು) ಹೃದಯಸ್ಥ ಅಗ್ನಿಯನ್ನು ಎಲ್ಲ ಅವಯವಗಳಿಗೂ ಮುಟ್ಟಿಸುತ್ತಾನೆ; 'ಅಂಗಂ ನಯನ್' ಎಂಬುದು ಅಂಗೇಷು ಅಗ್ನಿ ಶಿಖಾಃ ನರ್ಯ ಎಂಬ ವ್ಯುತ್ಪತ್ತಿ ಯಿಂದ ವಾಯುವು ಅಗ್ನಿ ಶಬ್ದವಾಚ್ಯನೆಂಬುದನ್ನು ಸಾಧಿಸುತ್ತದೆ (೬೧೧). ಸಜ್ಜನರನ್ನು ಪವಿತ್ರಗೊಳಿಸುವುದರಲ್ಲಿ ಅಲಂಬುದ್ಧಿ ರಹಿತನಾದ್ದರಿಂದ ಪವಮಾನನು 'ಅನಲ' ಪದವಾಚ್ಯನು; ಸಂಧ್ಯೋಪಸ್ಥಾನ ಕರ್ತೃಗಳಲ್ಲಿ ದಿನದಿನದಲ್ಲಿ (ಪ್ರತಿ ದಿನವೂ) ಪುಣ್ಯರಾಶಿಯನ್ನೇ ಉತ್ಪಾದಿಸುವುದರಿಂದ ಸವಿತೃನಾಮಕನೂ ಆಗಿರುವನು, ಚಂದ್ರಬಿಂಬಸ್ಥಿತನಾಗಿದ್ದು ಸೋಮನಾಮಕನಾಗಿರುವವನೂ

ಅಸ್ಯ–ಈ ಪವಮಾನನಿಗೆ, ಸತಾಂ ಪವಿತ್ರೀಕರಣಂ–ಸಜ್ಜನರನ್ನು ಪವಿತ್ರೀಕರಿಸುವುದರಲ್ಲಿ (ಶುದ್ಧರನ್ನಾಗಿ ಮಾಡುವುದರಲ್ಲಿ), ಅಲಂಭಾವಃ–ಸಾಕೆನ್ನುವ ಬುದ್ಧಿಯು (ಅಲಂಬುದ್ಧಿಯು), ಯತಃ ನ–ಯಾವ ಕಾರಣದಿಂದ ಇರುವುದಿಲ್ಲವೋ), (ಆದ್ದರಿಂದ 'ಅನಲ'ನು); ಉಪಸ್ಥಾತೃಷು–ಸಂಧ್ಯೋಪಸ್ಥಾನ ಮಾಡುವವರಲ್ಲಿ (ತ್ರಿಕಾಲಗಳಲ್ಲಿ ಸಂಧ್ಯಾವಂದನೆಯನ್ನು ಆಚರಿಸಿ ಉಪಸ್ಥಾನ ಮಾಡುವವರಲ್ಲಿ), ಯಃ–ಯಾವಾತನು, ದಿನೇ ದಿನೇ–ಪ್ರತಿದಿನವೂ, ಪುಣ್ಯರಾಶಿಂ–ಪುಣ್ಯರಾಶಿಯನ್ನು ಸೂತೇ–(ಪ್ರಸವವಾಗುತ್ತಾನೋ) ಹುಟ್ಟಿಸುವನೋ, ಸ ಏವ – ಆತನೇ, ಸವಿತಾರನಾದ – ಸವಿತೃನಾಮಕನು, ಸೋಮಬಿಂಬಸ್ಥಃ – ಚಂದ್ರಮಂಡಲದಲ್ಲಿರುವ, ಸೋಮನಾಮಕಃ – ಸೋಮನೆಂಬ ಹೆಸರುಳ್ಳವನೂ (ಆಗಿರುವನು); ಸಮತ್ವ ಆಹ್ಲಾದಕಾರಿತ್ವಪೂರ್ವೈಃ–ಸಮತ್ವ, ಆಹ್ಲಾದಕರತ್ವ ಮೊದಲಾದ, ಶುಭಗುಣೈಃ–ಸದ್ಗುಣಗಳಿಂದ, ಪ್ರಭುಃ–ಪವಮಾನನು, (ಸೋಮನಾಮಕನಾಗಿರುವನು).[1]

**ಪವಮಾನಸ್ಯ ಯತ್ಸೂಕ್ತೇ ಪವಮಾನಪ್ರಶಂಸನಂ ।**
**ಉಚಿತಂ ತೇನ ವಾಯುಶ್ಚ ವಾಯುಗೋ ಹರಿರೇವ ಚ ।**
**ಸೂಕ್ತಸ್ಥಿತಾಖಿಲರ್ಗ್ಭಿಶ್ಚ ಸ್ತುತ್ಯೋ ನಾನ್ಯಸ್ಯ ವಾಗಿಯಂ ॥ ೬೧೪ ॥**

ಯತ್ (ಯಸ್ಮಾತ್)-ಯಾವ ಕಾರಣದಿಂದ, ಪವಮಾನಸ್ಯ-ಪವಮಾನನ, ಸೂಕ್ತೇ – ಸೂಕ್ತದಲ್ಲಿ, ಪವಮಾನ ಪ್ರಶಂಸನಂ – ಪವಮಾನನ ಸ್ತುತಿಯು,

---

ವಾಯುದೇವನೇ ಆಗಿರುವನು; ಸಮತ್ವ ಆಹ್ಲಾದಕರತ್ವ ಮೊದಲಾದ ಶುಭಗುಣಗಳುಳ್ಳವನಾದ್ದರಿಂದಲೂ, ವಾಯುದೇವನೇ 'ಸೋಮ' ನಾಮಕನೂ ಆಗಿರುವನು; (೬೧೨–೬೧೩). ಪವಮಾನ ಸೂಕ್ತದಲ್ಲಿ ಪವಮಾನನ ಸ್ತುತಿಯು

---

[1] 'ಉಭಾಭ್ಯಾಂ ದೇವ ಸವಿತಃ ಪವಿತ್ರೇಣ ಸವೇನ ಚ। ಮಾಂ ಪುನೀಹಿ ವಿಶ್ವತಃ' ಎಂಬ ಶ್ರುತಿಯಲ್ಲಿ, ಸವಿತಃ–ಪುಣ್ಯ ಸ್ರಷ್ಟನಾದ, ಹೇ ಪವಮಾನ! ದೇವ! ಪವಿತ್ರೇಣ–ಸಂಧ್ಯಾಕಾಲದಲ್ಲಿ ಬಾಹುಮೂಲದಲ್ಲಿ ಧರಿಸಿದ ಚಕ್ರದಿಂದ, ಸವೇನ – ಸವನದಿಂದ (ಸಂಧ್ಯಾಂಗ ಭೂತ ಪ್ರಾತಃಕಾಲಾದಿಯಿಂದಲೂ, ಮಾಂ–ನನ್ನನ್ನು, ವಿಶ್ವತಃ–ಸರ್ವತಃ–ಸರ್ವಪ್ರಕಾರದಿಂದ, ಪುನೀಹಿ–ಪವಿತ್ರಗೊಳಿಸು; (ಚಕ್ರಧಾರಣ ಮತ್ತು ಕಾಲನಿಯಮಗಳೆರಡೂ (ಸಂಧ್ಯಾಕರ್ಮಪವಿತ್ರಕಾರಕಗಳು – ಪವಮಾನನಿಂದ ಇವೆರಡೂ ಕಾರ್ಯ

ಉಚಿತಂ–ಯೋಗ್ಯವಾಗುವುದೋ, ತೇನ–ಆ ಕಾರಣದಿಂದಲೇ, ವಾಯುಶ್ಚ–ವಾಯುದೇವನೂ, ವಾಯುಗಃ–ವಾಯುವಿನ ಅಂತಸ್ಥನಾದ, ಹರಿಃ ಏವ ಚ –ಶ್ರೀಹರಿಯೂ, ಸೂಕ್ತಸ್ಥಾಖಿಲರ್ಗ್ಭಿಃ–ಸೂಕ್ತದಲ್ಲಿರುವ ಎಲ್ಲ ಋಕ್ಕುಗಳಿಂದಲೂ (ಮಂತ್ರವಾಕ್ಯಗಳಿಂದಲೂ), ಸ್ತುತ್ಯಃ–ಸ್ತುತ್ಯನೇ (ಆಗಿರುವನು) (ಎಲ್ಲ ಶ್ರುತಿಗಳು ಪರಮಮುಖ್ಯವಾಗಿ ವಿಷ್ಣುಸ್ತುತಿಪರಗಳೇ ಆದ್ದರಿಂದ), ಇಯಂ ವಾಕ್–ಪವಮಾನ ಸೂಕ್ತವು (ಪವತ್ರೀಕರಣರೂಪದ ಶ್ರುತಿಯು), ಅನ್ಯಸ್ಯ ನ–ಅನ್ಯಸ್ತುತಿಪರವಲ್ಲ.

**ಅತೋಽಗ್ನಾವಾಹಿತಂ ಚಕ್ರಂ ಸ್ವಾರ್ಚಿಷಾ ಪುಣ್ಯದಾಯಿನಾ ।**
**ಸ ಏವ ತಪ್ತಂ ಕುರುತೇ ಗುರುಭೂರ್ತ್ವಾ ಸ ಏವ ಚ ॥ ೬೧೫ ॥**

---

ಉಚಿತವಾದುದೇ ಸರಿ; ಆತನೊಂದಿಗೆ, ವಾಯುಸ್ಥಿತನಾದ ಶ್ರೀಹರಿಯ ಸ್ತುತಿಯು (ಸಕಲ ಶ್ರುತಿಗಳ ಮುಖ್ಯಪ್ರತಿಪಾದ್ಯನು ಶ್ರೀಹರಿಯೇ ಆದ್ದರಿಂದ) ಉಚಿತವೇ ಆಗುತ್ತದೆ; ಆದ್ದರಿಂದ ಪವನ ಸೂಕ್ತದಲ್ಲಿರುವ ಎಲ್ಲ ಋಕ್ಕುಗಳಿಂದ, ಈ ಉಭಯರೂ ಸ್ತುತ್ಯರಾಗಿರುವರು–ಈ ಸೂಕ್ತವು ಅವರ ಸ್ತುತಿಪರವಾದುದಲ್ಲದೇ ಅನ್ಯರನ್ನು ಸ್ತುತಿಸುವುದಿಲ್ಲ (೬೧೪). ಮಂತ್ರಪೂತವಾದ ಅಗ್ನಿಯಲ್ಲಿ ದಹಿಸಲ್ಪಟ್ಟಿದ್ದನ್ನು (ಅಗ್ನಿಯಿಂದ ತಪ್ತವಾದುದನ್ನು), ಅಗ್ನ್ಯಂತರ್ಗತ ಅಗ್ನಿನಾಮಕ

---

ಸಮರ್ಥವಾಗುತ್ತವೆ) ; (ಅನ್ಯೈಷ್ಣವಕೃತದೋಷದಿಂದಲೂ, ಕಾಲಾತಿಕ್ರಮದೋಷದಿಂದಲೂ ಪಾವನಗೊಳಿಸೆಂದು ಪ್ರಾರ್ಥನೆ) (ಈ ನಿಯಮವು ಬ್ರಾಹ್ಮಣಾದಿ ಮೂರು ವರ್ಣಗಳಿಗೂ ಅನ್ವಯಿಸುತ್ತದೆ–ಸಂಧ್ಯಾ ವಿಷಯಕವಾದ್ದರಿಂದ) ; 'ತ್ರಿಭಿಷ್ಟ್ವಂ ದೇವ ಸವಿತರ್ವರ್ಷಿಷ್ಠೈಃ ಸೋಮಧಾಮಭಿಃ । ಅಗ್ನೇ ದಕ್ಷೈಃ ಪುನೀಹಿ ನಃ ।' ಎಂಬ ಶ್ರುತಿಯಲ್ಲಿ ಸಂಧ್ಯಾವಂದನೆಯ ಅಂಗಭೂತವಾದ ಅಹೋರಾತ್ರಿಗಳಲ್ಲಿ ಸಂಧ್ಯಾಪ್ರವರ್ತಕ ಸವಿತೃ ಸೋಮಾಗ್ನಿಗಳಲ್ಲಿ ಸ್ಥಿತನಾದ ಪವಮಾನ ದೇವನನ್ನು ಆಯಾ ಪದಗಳಿಂದ ಸಂಬೋಧಿಸಿ, ವರ್ಷಿಷ್ಠೈಃ–ಅನಾದ್ಯನಂತಕಾಲಗಳಿಂದಲೂ, ದಕ್ಷೈಃ–ಸಮರ್ಥರಾದ ನೀವು ವರಿಷ್ಠೈಃ–ಶ್ರೇಷ್ಠಳಾದ ಧಾಮಭಿಃ – ವೈಕುಂಠಾದಿ ತ್ರಿಧಾಮಗಳಿಂದ (ಅವುಗಳಲ್ಲಿ ಯಥಾಯೋಗ್ಯ ಸ್ಥಾನವನ್ನು ಅನುಗ್ರಹಿಸಿ), ನಃ–ನಮ್ಮಗಳನ್ನು, ಪುನೀಹಿ–ಪವಿತ್ರಗೊಳಿಸಿರಿ ; ಎಂಬ ಪ್ರಾರ್ಥನೆಯೂ ಇದೆ ; ಇಲ್ಲಿ ಸವಿತೃ, ಸೋಮ, ಅಗ್ನಿನಾಮಗಳಿಂದ ಪವಮಾನನೇ ಬೋಧ್ಯನಾಗಿರುವನು ; ಇದರಿಂದ, ಸಂಸಾರರೂಪ ಮಲವನ್ನು ಪರಿಹರಿಸಿ, ಮೋಕ್ಷೈಶ್ವರ್ಯವನ್ನು (ಫಲಭೋಗ ರಾಶಿಯನ್ನು) ಅನುಗ್ರಹಿಸಲು, 'ವಾಯುಶ್ಚ ತದನುಜ್ಞಯಾ' ಎಂಬ ವಚನದಂತೆ, ಶಕ್ತನೆಂದೂ ತಿಳಿದುಬರುತ್ತದೆ.

**ಸತಾಂ ಭುಜೇ ಧಾರಯತಿ ಮುನೀನಾಂ ಮಧ್ವರೂಪಧೃಕ್ ।**
**ಸ ಏವ ಧಾರಯೇದ್ವಾಯುರನ್ಯತ್ರ ಗುರುಷು ಸ್ಥಿತಃ ॥ ೭೧೬ ॥**

ಅತಃ–ಆದ್ದರಿಂದ (ವಾಯುವೇ ಪವಮಾನಸೂಕ್ತಪ್ರತಿಪಾದ್ಯನಾದ್ದರಿಂದ, ಅಗ್ನೌ–ಅಗ್ನಿಯಲ್ಲಿ, ಆಹಿತಂ–ಹಾಕಲಾದ, ಚಕ್ರಂ–ಚಕ್ರವು, ಪುಣ್ಯದಾಯಿನಾ–ಪುಣ್ಯಪ್ರದವಾದ, ಸ್ವಾರ್ಚಿಷಾ–ತನ್ನ ಜ್ವಾಲೆಯಿಂದಲೇ, ಸ ಏವ–ಅಗ್ನಿಯೇ, ತಪ್ತಂ ಕುರುತೇ–(ಚಕ್ರವನ್ನು) ತಪ್ತವಾದುದನ್ನಾಗಿ (ಕಾದುದನ್ನಾಗಿ) ಮಾಡುತ್ತಾನೆ; ಸ ಏವ–ಆ ವಾಯುವೇ (ಅಗ್ನ್ಯಂತರ್ಗತವಾಯುವೇ), ಗುರುಃ–(ಮಧ್ವರೂಪದಿಂದ) ಗುರುಗಳಾಗಿ, ಮಧ್ವರೂಪಧೃಕ್–ಮಧ್ವರೂಪಧಾರಿಗಳಾಗಿ, ಸತಾಂ–ಸಜ್ಜನರ, (ಮತ್ತು) ಮುನೀನಾಂ–ಅನ್ಯಯತಿಗಳ, ಭುಜೇ–ಬಾಹುಗಳಲ್ಲಿ, ಧಾರಯತಿ–ಧರಿಸುವಂತೆ ಮಾಡುತ್ತಾರೆ (ಮುದ್ರಾಧಾರಣವನ್ನು ಮಾಡಿಸುತ್ತಾರೆ), ಸ ಏವ ವಾಯುಃ–ಅದೇ ಮಧ್ವರೂಪೀ ವಾಯುದೇವನೇ, ಅನ್ಯತ್ರ ಗುರುಷು–(ಮಧ್ವರೂಪದಿಂದ ಭಿನ್ನರಾದ) ಪರಮಹಂಸರಲ್ಲಿ, ಸ್ಥಿತಃ–ನಿಂತು, (ಇದ್ದು), ಧಾರಯೇತ್–ಧಾರಣಮಾಡಿಸುತ್ತಾನೆ.

**ಮಧ್ವಾಖ್ಯಗುರುರೂಪೇಣ ಪೂಯಮಾನಃ ಸ ಪಾವಯನ್ ।**
**ಧಾರಯೇತ್ತಾನಿ ರೂಪಾಣಿ ಮಧ್ವಸ್ಯೈವ ಬಹೂನಿ ತತ್ ॥ ೭೧೭ ॥**

ಮಧ್ವಾಖ್ಯಗುರುರೂಪೇಣ–ಮಧ್ವನಾಮಕ ಗುರುಗಳ ರೂಪದಿಂದ, ಪಾವಯನ್–ಪವಿತ್ರಗೊಳಿಸುವವನಾಗಿ, ಸಃ–ಆ ವಾಯುದೇವನು, ತಾನಿ ರೂಪಾಣಿ–(ದೈನಂದಿನ ಉಪಯೋಗಿಸಲ್ಪಡುವ ಅಗ್ನಿಯಲ್ಲಿ ಸುದರ್ಶನ ಸನ್ನಿಧಾನವನ್ನು ಸ್ಥಾಪಿಸುವ, ಮುದ್ರಾಧಾರಣ ಮಾಡುವ ಗುರುಗಳಲ್ಲಿ ನಿಂತು ಮುದ್ರಾಂಕನ

---

ಪವಮಾನನೇ ಮಧ್ವರೂಪದಿಂದ ಗುರುವಾಗಿ ನಿಂತು, ಆ ತಪ್ತ ಚಕ್ರವನ್ನು ಸಜ್ಜನರ ಭುಜಗಳಲ್ಲಿ ಧಾರಣಮಾಡಿಸುತ್ತಾನೆ; ಅತನೇ ಅಂತರ್ಗತ ಮಧ್ವರೂಪಗಳಿಂದ ಅನ್ಯ ಗುರುಸ್ಥಾನೀಯರಾದ ಯತಿಗಳಲ್ಲಿದ್ದು, ಆ ವಾಯುದೇವನೇ ತಪ್ತ ಮುದ್ರಾಧಾರಣವನ್ನು ಮಾಡಿಸುತ್ತಾನೆ; ಅದ್ದರಿಂದ ಈ ಎಲ್ಲವೂ ಅಗ್ನಿ, ಅಗ್ನಿಯಲ್ಲಿ ಚಕ್ರದ ದಾಹ, ಗುರುಗಳಾದ ಪರಮಹಂಸರು ಶಿಷ್ಯರಾದ ಸಜ್ಜನರಿಗೆ ಧಾರಣಮಾಡಿಸುವುದು, ಎಂಬ, ಈ ಎಲ್ಲವೂ, ವಾಯುದೇವನ ಕೃತಿಗಳೇ ಎಂದು ತಿಳಿದಿರಬೇಕು (೭೧೫–೭೧೬). ಮಧ್ವರೂಪದಿಂದ ಹೀಗೆ ಪವಿತ್ರಗೊಳಿಸುವ

ಮಾಡುವ ಗುರುಗಳನ್ನು ಪ್ರೇರಿಸುತ್ತ ಸ್ಥಿತವಾಗಿರುವ ಆಯಾ) ಮಧ್ವನಾಮಕ ರೂಪಗಳನ್ನು ಧಾರಯೇತ್–ಧರಿಸುವನು ; ತತ್–ಆದ್ದರಿಂದ, ಮಧ್ವಸ್ಯ ಏವ ಬಹೂನಿ–ಮಧ್ವಗುರುಗಳ ಬಹುರೂಪಗಳೇ ಅವು.

**ಶಿಷ್ಟಾಚಾರಾದದೃಷ್ಟಸ್ಯ ಯದಾ ವೇದಸ್ಯ ಕಲ್ಪನಾ ।**
**ಸ್ಪಷ್ಟದೃಷ್ಟಶ್ರುತಿಂ ಸೋಽತಿಬಲವಾನ್ನೈವ ಮುಂಚತಿ ॥ ೬೧೮ ॥**

ಯದಾ–ಯಾವಾಗ, ಶಿಷ್ಟಾಚಾರಾತ್–ಶಿಷ್ಟಾಚಾರದಿಂದ, ಅದೃಷ್ಟಸ್ಯ ವೇದಸ್ಯ –(ಶಿಷ್ಟಾಚಾರಕ್ಕೆ ಆಧಾರವಾದ) ಅದೃಷ್ಟವಾದರೂ ವೇದವಾಕ್ಯದ, ಕಲ್ಪನಾ–ಕಲ್ಪನೆಯೋ (ಇರುವಿಕೆಯನ್ನು ಕಲ್ಪಿಸುವೆನೋ), ಸಃ ಅಪಿ–ಆ ಶಿಷ್ಟಾಚಾರವು, ಬಲವಾನ್–ಬಲಿಷ್ಠವಾದುದು (ಪ್ರಬಲವಾದುದು), ಆಗಿದ್ದು ಸ್ಪಷ್ಟದೃಷ್ಟಶ್ರುತಿಂ–ಸ್ಪಷ್ಟವಾಗಿ ಸಿದ್ಧವಿರುವ (ತನಗೆ ಮೂಲಭೂತವಾದ) ಶ್ರುತಿಯನ್ನು, ನೈವ ಮುಂಚತಿ–ಬಿಡುವುದೇ ಇಲ್ಲವಷ್ಟೆ.

**ಅತಃ ಶ್ರುತಿರಭೂದೇಷಾ ತಪ್ತಚಕ್ರಾಂಕಶಾಸನಂ ।**
**ಲಿಂಗಾನುಶಾಸನಂ ತೂಕ್ತಂ ಶಾಸನದ್ವಯಸಂಪದಾ ।**
**ಸಹಿತಾಂ ವೈಷ್ಣವಗ್ರಾಮುಸೀಮಾಂ ಕೋ ವಾ ನ ಮಾನಯೇತ್**
**॥ ೬೧೯ ॥**

ಅತಃ–ಆದ್ದರಿಂದ, ಏಷಾ ಶ್ರುತಿಃ–ಈ (ಉದಾಹೃತ) ಶ್ರುತಿಯು ; ತಪ್ತಚಕ್ರಾಂಕಶಾಸನಂ – ತಪ್ತಚಕ್ರವನ್ನು ( ದೇಹದಲ್ಲಿ ) ಚಿನ್ಹಿಸಿಕೊಳ್ಳುವುದನ್ನು

---

ವಾಯುದೇವನು, ಸಕಲ ಸಜ್ಜನರ ಗುರುವು ; ಮಧ್ವರೂಪೀ ವಾಯುದೇವನೇ ಅಗ್ನಿಯಲ್ಲಿ ದಹಿಸುವ ಚಕ್ರದಲ್ಲಿ, ವಿಷ್ಣುಚಕ್ರದ ಸನ್ನಿಧಾನವನ್ನುಂಟುಮಾಡುವ, ಅನ್ಯ ಗುರುಗಳಲ್ಲಿ ನಿಂತು ಅವರ ಶಿಷ್ಯರಿಗೆ ತಪ್ತಮುದ್ರಾಧಾರಣ ಮಾಡಿಸುವ ಮುಂತಾದ ಬಹುರೂಪಗಳನ್ನು ಧರಿಸಿ ವ್ಯಾಪಾರ ಮಾಡುವನೆಂದು ಶ್ರುತಿಸಿದ್ಧವೇ ಆಗುತ್ತದೆ (೬೧೭). ಶಿಷ್ಟಾಚಾರಕ್ಕೆ ಮೂಲವಾದ ಶ್ರುತಿಯಿರಬೇಕೆಂದು, ಅದೃಷ್ಟ ಶ್ರುತಿಯನ್ನು ಕಲ್ಪಿಸುತ್ತಿರುವಾಗ, ಸ್ಪಷ್ಟವಾಗಿ ದೃಷ್ಟವಾದ ಶ್ರುತಿಗಳಿರುವಾಗ ಆ ಶಿಷ್ಟಾಚಾರವು ಪ್ರಬಲವೇ ಆಗುತ್ತದೆ—ಶ್ರುತಿಬಲವೂ ದೊರೆತುದನ್ನು ತ್ಯಜಿಸುವುದೇ ? (ಇಲ್ಲ) (೬೧೮). ಆದ್ದರಿಂದ ಈ ಶ್ರುತಿಯು ತಪ್ತ ಮುದ್ರಾ

ವಿಧಿಸುವುದು, ಅಭೂತ್–ಆಯಿತು ; ಲಿಂಗಾನುಶಾಸನಂ ತು–(ಪವಿತ್ರಂ ಚರಣಂ ನೇಮಿಃ ಇತ್ಯಾದಿ) ನಿಘಂಟುವಾದರೋ, ಉಕ್ತಂ–ಈ ಹಿಂದೆ ಉದಾಹರಿಸಲಾಗಿದೆ ; ಶಾಸನದ್ವಯಸಂಪದಾ–ಹೀಗೆ ಶ್ರುತಿ ಮತ್ತು ನಿಘಂಟುಗಳೆಂಬ ಎರಡು ಶಾಸನಗಳ ಆಧಾರದಿಂದ, ಸಹಿತಾಂ–ಕೂಡಿರುವ, ವೈಷ್ಣವ ಗ್ರಾಮ ಸೀಮಾಂ–ವೈಷ್ಣವರ ಮರ್ಯಾದೆಯನ್ನು, ಕೋವಾ–ಯಾರು, ನ ಮಾನಯೇತ್–ಗೌರವಿಸುವುದಿಲ್ಲ (ಎಲ್ಲರೂ ಗೌರವಿಸುತ್ತಾರೆ).

**ಪ್ರಾಸ್ತಪಂ ಯತ್ಸಂಹಿತಾ ಯತ್ತದೇವ ಪರಿಶಿಷ್ಟವಾಕ್ ।**
**ಪ್ರಪಂಚಯತಿ ತೇನಾಭೂತ್ತಚ್ಚ ಶಿಷ್ಟಾನುಶಾಸನಂ ॥ ೬೨೦ ॥**

ಪ್ರಾಸ್ತವಂ–(ತಪ್ತ ಚಕ್ರಾಂಕನ ವಿಷಯವನ್ನು ಪ್ರಸ್ತಾಪಿಸುವ) ಆರಂಭ ವಾದ, ಯತ್ಸಂಹಿತಾ–ಯಾವ ಶ್ರುತಿವಾಕ್ಯವೋ, ತದೇವ–ಅದೇ, (ಅದನ್ನೇ ಹೇಳುವ), ಪರಿಶಿಷ್ಟವಾಕ್–ಅಂತ್ಯದ ವಾಕ್ಯವೂ ಪ್ರಪಂಚಯತಿ–ವಿಸ್ತರಿಸುತ್ತದೆ ; (ಪ್ರಸ್ತಾವ, ಪರಿಶಿಷ್ಟವಾಕ್ಯಗಳಲ್ಲಿ ಏಕಾರ್ಥತ್ವವಿರುವುದರಿಂದ), ತೇನ – ಈ ಕಾರಣದಿಂದ, ತತ್–ಪರಿಶಿಷ್ಟವಾಕ್ಯವೇ, ಶಿಷ್ಟಾನುಶಾಸನಂ–ಶಿಷ್ಟರ ಆಜ್ಞಾ ರೂಪದ ವಿಧಿಯೂ (ಕೇವಲ ಶಿಷ್ಟಾಚಾರ ಮಾತ್ರವಲ್ಲ) ಅಭೂತ್–ಆಯಿತು. (ಶ್ರುತಿ ಶಾಸನವೇ ಆಯಿತು).

---

ಧಾರಣವನ್ನು ವಿಧಿಸುವುದಾಗಿದೆ ; ಪವಿತ್ರ ಶಬ್ದವು ಚಕ್ರವನ್ನೇ ಹೇಳುತ್ತದೆಂಬಲ್ಲಿ ನಿಘಂಟುವನ್ನು (ಲಿಂಗಾನುಶಾಸನವನ್ನು) ಈ ಹಿಂದೆ ನಿರೂಪಿಸಲಾಯಿತು ; 'ಪವಿತ್ರಂ ಚರಣಂ ನೇಮಿಃ' ಇತ್ಯಾದಿಯು, ಪವಿತ್ರವೆಂಬ ಈ ಶ್ರುತಿಗತವಾದ ಪದದಿಂದ ಚಕ್ರವನ್ನೇ ಹೇಳುತ್ತದೆಂದು ನಿಶ್ಚಯಿಸುತ್ತದೆ ; ಹೀಗೆ ಶ್ರುತಿ ಮತ್ತು ನಿಘಂಟುಗಳ ಉಭಯ ವಿಧಿಗಳಿಂದ ಸಿದ್ಧವಾದ ತಪ್ತಮುದ್ರಾಧಾರಣವೆಂಬ ವೈಷ್ಣವರ ಮರ್ಯಾದೆಯನ್ನು ಎಲ್ಲರೂ ಗೌರವಿಸಬೇಕಾದುದೇ ಸರಿ (೬೧೯). ತಪ್ತ ಚಕ್ರವನ್ನು ಸಂಹಿತಾ ಸೂಕ್ತವು ಪ್ರಸ್ತಾವಿಸಿ, ಪರಿಶಿಷ್ಟ ಸೂಕ್ತಭಾಗದಲ್ಲಿ ಅದನ್ನೇ (ಮುದ್ರಾಧಾರಣ ಫಲವನ್ನೇ) ನಿರೂಪಿಸಿರುವುದರಲ್ಲಿ, ಪರಿಶಿಷ್ಟ ವಾಕ್ಯವೂ ತಪ್ತ ಚಕ್ರಧಾರಣ ಪರವೇ ಆಗಿ, ತಪ್ತಮುದ್ರಾಧಾರಣವು ಶಿಷ್ಟಾಚಾರ ಪ್ರಾಪ್ತವೆಂದು,

**ಪ್ರಪಂಚನಂ ಚ ಪ್ರೋಕ್ತಸ್ಯ ತೇನ ವಾಕ್ಯದ್ವಯೇನ ತತ್ ।**
**ತಪ್ತಚಕ್ರಾಂಕನಂ ವಕ್ತಿ ವಾಕ್ಯಭೇದೋ ನ ಚೇದ್ಭವೇತ್ ।**
**ಯತೋಽಸ್ಯ ಪರಿಶಿಷ್ಟತ್ವಂ ತಚ್ಛೇಷತ್ವಮಪೇಕ್ಷತೇ ॥ ೭೨೧ ॥**

ಪ್ರೋಕ್ತಸ್ಯ-ಸಂಹಿತಾದಲ್ಲಿ ಪ್ರೋಕ್ತವಾದ ಚಕ್ರವನ್ನು ಅಗ್ನಿಯಲ್ಲಿ ದಹಿಸುವುದೆಂಬುದರ-('ಯತ್ತೇ ಪವಿತ್ರಮರ್ಚಿಷಿ' ಎಂದು ಹೇಳಿದ್ದರ), ಪ್ರಪಂಚನಂ-ವಿಸ್ತಾರವನ್ನು, ತೇನವಾಕ್ಯದ್ವಯೇನ-ಆ ಎರಡನೆ ವಾಕ್ಯದಿಂದ, ತತ್-(ಸಂಹಿತಾ ಪರಿಶಿಷ್ಟಸೂಕ್ತವು), ಮಾಡುತ್ತದೆ; ಯತಃ-ಏಕೆಂದರೆ ಅಸ್ಯ-ಸಂಹಿತೆಯು, ಪರಿಶಿಷ್ಟತ್ವಂ-ಪರಿಶಿಷ್ಟವಾಗಿದೆ, ಎಂಬುದು, ತಚ್ಛೇಷತ್ವಂ-ಸಂಹಿತಾಶೇಷತ್ವವನ್ನು (ಉಳಿದ ಭಾಗವೇ ಎಂಬುದನ್ನು), ಅಪೇಕ್ಷತೇ-ಅಪೇಕ್ಷಿಸುತ್ತದೆ; (ಅದಿಲ್ಲದಿದ್ದರೆ, (ಪರಿಶಿಷ್ಟತ್ವವೆಂಬುದು ಮುಂದಿನ ಸೂಕ್ತಕ್ಕೆ ಯುಕ್ತವಾಗುವುದಿಲ್ಲ); ಆದ್ದರಿಂದ ಶೇಷಸೂಕ್ತವು), ತಪ್ತಚಕ್ರಾಂಕನಂ-ತಪ್ತವಾದ ಚಕ್ರದಮುದ್ರೆಯನ್ನು ಧಾರಣ ಮಾಡುವುದನ್ನು ಎಂದರೆ, ಯಾರಿಂದ ಧಾರಣಮಾಡಲ್ಪಟ್ಟಿದ್ದೆಂಬುದನ್ನು ಪರಿಶಿಷ್ಟ ಸೂಕ್ತವು) ವಕ್ತಿ-ಪ್ರತಿಪಾದಿಸುತ್ತದೆ; ನ ಚೇತ್-ತಪ್ತಚಕ್ರಮುದ್ರೆಯಿಂದ ದೇಹದ ಪಾವಿತ್ರ್ಯವು (ಪರಿಶಿಷ್ಟ) ಶೇಷವಾಕ್ಯದಿಂದ ಹೇಳಲಾಗುತ್ತದೆ), ಹಾಗಲ್ಲದಿದ್ದರೆ, ವಾಕ್ಯಭೇದಃ ಭವೇತ್-ಸಂಹಿತಾಸೂಕ್ತ, ಪರಿಶಿಷ್ಟ ಸೂಕ್ತಗಳಲ್ಲಿ ಏಕವಾಕ್ಯಾರ್ಥತ್ವವು ಕೂಡುವುದಿಲ್ಲ).

**ತಾಪೇನ ದೇಹಪಾವಿತ್ರ್ಯಕೃತ್ಪವಿತ್ರಂ ಜಗತ್ತ್ರಯೇ ।**
**ನಾಪರಂ ವಿದ್ಯತೇ ವಿಷ್ಣುಚಕ್ರಾದ್ವೈಷ್ಣವಸಂಮತಾತ್ ॥ ೭೨೨ ॥**

ತಾಪೇನ-ತಾಪದಿಂದ (ದೇಹದ ಉಷ್ಣತೆಯಿಂದ), ದೇಹಪಾವಿತ್ರ್ಯಕೃತ್-ದೇಹವನ್ನು ಶುದ್ಧಗೊಳಿಸುವುದು, ಪವಿತ್ರಂ-ವಿಷ್ಣುಚಕ್ರವೇ, ಜಗತ್ತ್ರಯೇ-

---

ಮಾತ್ರವಲ್ಲ ಶ್ರುತಿಶಾಸನವುಳ್ಳದ್ದೆಂದೂ ಸಿದ್ಧವಾಯಿತು (೭೨೦). ಸಂಹಿತಾಭಾಗದ ಸೂಕ್ತದಲ್ಲಿ 'ಯತ್ತೇ ಪವಿತ್ರಮರ್ಚಿಷಿ' ಇತ್ಯಾದಿಯಾಗಿ ಹೇಳಿದುದನ್ನು, ಪರಿಶಿಷ್ಟ ಭಾಗದ ಸೂಕ್ತವು ವಿಸ್ತರಿಸುತ್ತದೆ; ಸಂಹಿತಾ ಶೇಷತ್ವವು ಇದ್ದರೆ ಮಾತ್ರ ಅದು ಪರಿಶಿಷ್ಟ ಸೂಕ್ತವಾಗುತ್ತದೆ; ಆ ಪರಿಶಿಷ್ಟ ಸೂಕ್ತವು, ತಪ್ತ ಚಕ್ರಧಾರಣೆಯಿಂದ ಧರಿಸಿದವರ ದೇಹ ಶುದ್ಧಿಯನ್ನು ಹೇಳುತ್ತದೆ; ಅದರಿಂದ ಉಭಯ ಸೂಕ್ತಗಳಲ್ಲಿ ಏಕವಾಕ್ಯಾರ್ಥವು ಸಿದ್ಧವಾಗುತ್ತದೆ; ಇಲ್ಲದಿದ್ದರೆ ಇಲ್ಲ (೭೨೧). ದೇಹತಾಪದಿಂದ (ದಹಿಸುವುದರಿಂದ) ಜಗತ್ತಿನಲ್ಲಿ, ದೇಹವನ್ನು ಪವಿತ್ರ

*

ಜಗತ್ತಿನಲ್ಲಿ, ವಿಷ್ಣುಚಕ್ರಾತ್ – ವಿಷ್ಣುಚಕ್ರದಿಂದ, ಅಪರಂ – ಬೇರೆಯಾದುದು, ವೈಷ್ಣವಸಂಮತಾತ್–ವಿಷ್ಣುಭಕ್ತರಿಗೆ ಸಂಮತವಾದ ಚಕ್ರದಿಂದ ಅನ್ಯವಾದುದು, ನ ವಿದ್ಯತೇ – ಇರುವುದಿಲ್ಲ. (ದಶಾಪವಿತ್ರ ಮೊದಲಾದುದರಿಂದ ದೇಹವು ದಹಿಸಲ್ಪಡುವುದಿಲ್ಲ); ತಾಪಕ್ಕೆ ಕಾರಣವಾದುದು ಸುದರ್ಶನಮಾತ್ರವೇ ಆಗಲು ಶಕ್ಯ).

**ಜಡರ್ಚಾಂ ಶ್ರವಣಾಯೋಗಾನ್ನತಾಃ ಪ್ರಾರ್ಥಯತೇ ಮುನಿಃ ।**
**ಋಗರ್ಥೀಭೂತಪವನತನೂನಾಂ ಪ್ರಾರ್ಥನಂ ಹಿ ತತ್ ॥ ೬೨೩ ॥**

'ಪಾವಮಾನ್ಯಃ ಪುನೀಹಿ ಮಾಂ' ಎಂಬಲ್ಲಿ ಪವಮಾನರೂಪಗಳನ್ನೇಕೆ ಹಿಡಿಯಬೇಕೆಂದರೆ, ಹೇಳುತ್ತಾರೆ :—

ಜಡರ್ಚಾಂ – ಜಡ (ವೇದ) ಋಕ್ಕುಗಳಿಗೆ, ಶ್ರವಣಾಯೋಗಾತ್ – (ಪ್ರಾರ್ಥನೆಯು) ಕೇಳುವುದು ಸಂಭವವಲ್ಲದ್ದರಿಂದ, ತಾಃ–ಪವಮಾನಪ್ರತಿಪಾದಕ ಋಕ್ಕುಗಳನ್ನು, ಮುನಿಃ–ಮುನಿಯು (ಋಷಿಯು), ಪ್ರಾರ್ಥಯತೇ–ಪ್ರಾರ್ಥಿಸುತ್ತಾನೆ; ತತ್ – ಆದ್ದರಿಂದ, ಋಗರ್ಥೀಭೂತಪವನತನೂನಾಂ – ಸೂಕ್ತ ಪ್ರತಿಪಾದ್ಯಗಳಾದ ವಾಯುರೂಪಗಳ, ಪ್ರಾರ್ಥನಂ ಹಿ–ಪ್ರಾರ್ಥನೆಯೇ ಆಗುತ್ತದೆಂಬುದು ಸ್ಪಷ್ಟವು.[1]

---

ಗೊಳಿಸುವುದು ಚಕ್ರವೊಂದೇ; ವಿಷ್ಣು ಭಕ್ತರಿಗೆ ಸಂಮತವಾದ ವಿಷ್ಣುಚಕ್ರದಿಂದಲ್ಲದೇ (ಸುದರ್ಶನದಿಂದ ಮಾತ್ರವಲ್ಲದೇ) ಬೇರಾವ ಚಕ್ರದಿಂದಲೂ ದೇಹ ಪಾವಿತ್ರ್ಯವು ಸಿದ್ಧಿಸುವುದಿಲ್ಲ (೬೨೨). ಜಡ ಋಕ್ಕುಗಳಿಗೆ ಪ್ರಾರ್ಥನೆಯು ಕೇಳಿಬರುವುದಿಲ್ಲ; ಆ ಋಕ್ಕುಗಳಿಂದ ಪ್ರತಿಪಾದ್ಯವಾದ ದೇವತಾಸ್ತುತಿಯೇ ಎಂದು, ಋಷಿಯ ಪ್ರಾರ್ಥನೆಯೆಂದು ಯುಕ್ತಿಯಿಂದಲೂ ಸಿದ್ಧವಾಗುತ್ತದೆ; ಆದ್ದರಿಂದ, 'ಪಾವಮಾನ್ಯಃ' ಎಂಬುದರಿಂದ, ಇಂದ ಸೋಮಾದಿ ಪದವಾಚ್ಯ

---

1 'ಇಂದ್ರಃ ಸುನೀತೀ ಸಹ ಮಾ ಪುನಾತು । ಸೋಮಃ ಸ್ವಸ್ತ್ಯಾವರುಣಃ ಸಮೀಚ್ಯಾ।' ಇತ್ಯಾದಿ ವಾಕ್ಯದಿಂದ, ಇಂದ್ರ, ಸೋಮಾದಿ ಪದವಾಚ್ಯಪವಮಾನರೂಪಗಳ ಪ್ರಾರ್ಥನೆಯೆಂದೇ ತಿಳಿಯುತ್ತದೆ; ಹಿಂದೆ ಉದಹರಿಸಿದ ಶ್ರುತಿಯಲ್ಲಿ ಸಹ, ಈ ರೂಪಗಳ ಪ್ರಾರ್ಥನೆಯನ್ನೇ (ಪವಮಾನ್ಯಃ) ಎಂಬುದರಿಂದ ತಿಳಿಯಬೇಕು.

**ಯತಸ್ತತ್ರೈವ ಸ ಮುನಿರ್ದೇವೈರ್ದೇವೀಃ ಸಮಾಹಿತಾಃ ।**
**ಇತ್ಯಾಹ ತೇನ ಸರ್ವರ್ಕ್ಷು ದೇವ್ಯೈಃ ಸಹ ಸಮಾಹಿತಾಃ ॥ ೬೨೪ ॥**

**ದೇವ್ಯಶ್ಚ ಸಂತಿ ಭಾರತ್ಯಾ ಮೂರ್ತಯೋ ವಾಯುಮೂರ್ತಯಃ ।**
**ಮಾನಿನ್ಯಃ ಪ್ರತಿಪಾದ್ಯಾಶ್ಚ ತತಸ್ತತ್ಪ್ರತಿಪಾದಿತಾಃ ॥ ೬೨೫ ॥**

ಬೇರೆ ನಿಮಿತ್ತವನ್ನು ಹೇಳುತ್ತಾರೆ :—

ತತ್ರೈವ—ಅಲ್ಲಿಯೇ (' ಯೇನ ದೇವಾಃ ' ಎಂಬ ಶ್ರುತಿವಾಕ್ಯದ ಮೊದಲು), ಸಃ ಮುನಿಃ—(' ಯೇನದೇವಾ ' ಎಂಬ ಶ್ರುತಿಯ) ಮಂತ್ರದ್ರಷ್ಟನಾದ ಋಷಿಯೇ, ಯತಃ—ಯಾವ ಕಾರಣದಿಂದ, ದೇವೈಃ—ದೇವತೆಗಳಿಂದ, ದೇವೀಃ—ದೇವಿಯರು (ಅವರ ಭಾರ್ಯರು) ಸಮಾಹಿತಾಃ—(ಪವಮಾನ ಸೂಕ್ತದ ಋಕ್ಕುಗಳಿಂದ ಪ್ರತಿಪಾದ್ಯರೂ ಅವುಗಳ ಅಭಿಮಾನಿಗಳೂ ಆದವರಿಂದ) ಕೂಡಿಯೇ ಇರುವರೋ,

---

ಪವಮಾನನ ಪ್ರಾರ್ಥನೆಯೆಂದು ತಿಳಿಯಬೇಕು (೬೨೩). ಪವಮಾನ ರೂಪಗಳ ಪ್ರಾರ್ಥನೆ ಎಂಬಲ್ಲಿ ಬೇರೆ ಕಾರಣವೂ ಇರುತ್ತದೆಂದು ತೋರಿಸುತ್ತಾರೆ ; 'ಯೇನ-ದೇವಾ' ಎಂಬ ವಾಕ್ಯದ ಹಿಂದಿನ ವಾಕ್ಯವು ಭಾರತೀ ರೂಪಗಳಿಂದ ಸಹಿತವಾದ ವಾಯುಮೂರ್ತಿಗಳನ್ನು ಹೇಳುವುದರಿಂದ 'ಪಾವಮಾನ್ಯಃ' ಎಂಬ ಬಹುವಚನದಿಂದ, ವಿವಿಧ ವಾಯುರೂಪಗಳೇ ಹೇಳಲ್ಪಡುತ್ತವೆಂದು ಸಿದ್ಧವಾಗುತ್ತದೆ ; ಆ ಹಿಂದಿನ ವಾಕ್ಯವು, 'ದೇವೈಃ ದೇವೀಃ ಸಮಾಹಿತಾಃ' ದೇವತೆಗಳಿಂದ ಕೂಡಿಯೇ ಇರುವ ದೇವಿಯರು, ಪವಮಾನ ಸೂಕ್ತ ಪ್ರತಿಪಾದ್ಯಗಳಾದ (ಪಾವಮಾನೀಃ) ಮತ್ತು ಅಭಿಮಾನಿಗಳಾದ ಪವಮಾನ ಶಬ್ದವಾಚ್ಯ ದೇವತೆಗಳಿಂದ ಕೂಡಿಯೇ ಇರುವರೆಂದು ಹೇಳುತ್ತದೆ; ಸಮಾಹಿತರಾಗಿರುವ ದೇವಿಯರೆಂದರೆ ಅವರ ಭಾರ್ಯರೇ—ಅನ್ಯರಲ್ಲ ; ದೇವೀಃಶಬ್ದವಾಚ್ಯರಾದ ದೇವಿಯರು, ಭಾರತೀ-ರೂಪಗಳೇ, ವಾಯುರೂಪಗಳೊಂದಿಗೆ ಕೂಡಿರುವ ದೇವಿಯರು ಭಾರತೀ ರೂಪಗಳೇ ಆಗಬೇಕಷ್ಟೆ; ಉಭಯರೂ (ದಂಪತಿಗಳಿಬ್ಬರೂ ಎಲ್ಲ ಋಕ್ಕುಗಳ ಅಭಿಮಾನಿಗಳೂ ಪ್ರತಿಪಾದ್ಯರೂ ಆಗಿರುವರು. ಯಜ್ಞಾದಿಗಳಲ್ಲಿ ಪತಿಯನ್ನು ಆಹ್ವಾನಿಸಿದರೆ ಪತ್ನಿಯರೂ ಜೊತೆಯಲ್ಲಿಯೇ ಆಗಮಿಸುತ್ತಾರೆ (೬೨೪—೬೨೫).

ಇತ್ಯಾಹ–ಎಂದು (ಆ ಹಿಂದಿನ ವಾಕ್ಯವು)[1] ಹೇಳಿರುವುದೋ, ತೇನ–ಅದರಿಂದ, ಸರ್ವರ್ಕ್ಷು–ಎಲ್ಲ ಋಕ್ಕುಗಳಲ್ಲಿ, ದೇವೈಃ ಸಹ–ದೇವತೆಗಳಿಂದ ಸಹಿತರಾಗಿ, ಸಮಾಹಿತಾಃ–ಕೂಡಿಕೊಂಡಿರುವ (ಒಂದಿಗೇ ಆಹ್ವಾನಿಸಲ್ಪಡುವರಾದ), ದೇವ್ಯಶ್ಚ–ದೇವಿಯರೂ, ಮಾನಿನ್ಯಃ–ಅಭಿಮಾನಿಗಳೇ ಆಗಿ, ಪ್ರತಿಪಾದ್ಯಾಃ–ಋಕ್ಪ್ರತಿಪಾದ್ಯರೂ ಆದ, ಭಾರತ್ಯಾಮೂರ್ತಯಃ–ಭಾರತೀ ರೂಪಗಳು) ವಾಯು ಮೂರ್ತಯಃ–ವಾಯುರೂಪಗಳೂ, ತತ್ಪ್ರತಿಪಾದಿತಾಃ–(ಆ ಮಂತ್ರಗಳಿಂದ) ಪ್ರತಿ ಪಾದ್ಯರು, ಸಂತಿ–ಇರುತ್ತಾರೆ; (ಎಂದು ಶ್ರುತಿಯು ಹೇಳಿರುತ್ತದೆ).

**ಚಕ್ರಾಂಕಧಾರಣಂ ತೇಷು ಕುರ್ವಂತ್ಯೋ ವಾಯುಮೂರ್ತಯಃ ।**
**ಪ್ರಧಾನಭೂತಾಃ ಪ್ರಾರ್ಥ್ಯಂತೇ ಶೇಷೇ ಶೇಷಿಣಿ ವಾಕ್ಯಯೋ ॥೬೨೬॥**

ಚಕ್ರಾಂಕಧಾರಣಮಾಡಿಸುವರಲ್ಲಿ ಪ್ರಧಾನಭೂತರಾದ ವಾಯುರೂಪಗಳನ್ನೇ ಹಿಂದಿನ ಶ್ರುತಿಯಲ್ಲಿ ಹಿಡಿಯಲಾಗಿದೆ, ಎಂದು ಸೂಚಿಸಿ ಬೇರೆ ಯುಕ್ತಿಯನ್ನು ಹೇಳುತ್ತಾರೆ :—

---

ಚಕ್ರಧಾರಣವನ್ನು ಮಾಡಿಸುವ ವಾಯು ಭಾರತೀರೂಪಗಳಲ್ಲಿ ಪ್ರಧಾನಭೂತರಾದ ವಾಯುರೂಪಗಳೇ ಪ್ರಾರ್ಥಿಸಲ್ಪಟ್ಟಿರುತ್ತವೆ; ಪರಿಶಿಷ್ಟ ವಾಕ್ಯದಲ್ಲಿಯೂ, ಪ್ರಧಾನ ಭೂತವಾದ ಸಂಹಿತಾ ಸೂಕ್ತದ ವಾಕ್ಯಗಳಲ್ಲಿಯೂ (ಋಕ್ಕುಗಳ ಸಮೂಹದಲ್ಲಿಯೂ) ಪ್ರಧಾನಗಳಾದ ವಾಯುರೂಪಗಳೇ

---

[1] ಇಲ್ಲಿ ಪ್ರಸಕ್ತವಾದ ಹಿಂದಿನ ಶ್ರುತಿಯು ಹೀಗಿದೆ:—'ಪಾವಮಾನೀರ್ದಿಶಂತು ನ ಇಮಂ ಲೋಕಮಥೋ ಅಮುಂ । ಕಾಮಾಂತ್ಸಮರ್ಧಯಂತು ನೋ ದೇವೈರ್ದೇವೀಃ ಸಮಾಹಿತಾಃ । ಎಂಬುದಾಗಿದೆ; ಅದರ ಅರ್ಥವು ಪಾವಮಾನೀಃ – ಪವಮಾನಸೂಕ್ತ ಸಂಬಂಧವುಳ್ಳ, ದೇವೈಃ – ದೇವಶಬ್ದವಾಚ್ಯ ಪವಮಾನರೂಪಗಳಿಂದ, ಸಮಾಹಿತಾಃ – ಕೂಡಿಯೇ ಇರುವ (ಅಭಿಮಾನಿಗಳೂ ಆಗಿರುವ), ದೇವೀಃ – ದೇವಿಯರು (ಭಾರತೀ ರೂಪಗಳು), ನಃ–ನಮಗೆ, ಇಮಂ ಲೋಕಂ–ಈ ಲೋಕವನ್ನು, ಅಥೋ–ಅನಂತರ, ಅಮುಂ – ಪರಲೋಕವನ್ನು, ದಿಶಂತು – ಕೊಡಲಿ (ಅನುಗ್ರಹಿಸಲಿ); ದೇವೈಃ – ದೇವತೆಗಳಿಂದ, ಸಮಾಹಿತಾಃ – ಕೂಡಿಯೇ ಇರುವ, ದೇವೀಃ – ದೇವಿಯರು, ನಃ–ನಮ್ಮ, ಕಾಮಾನ್–ಇಚ್ಛಿತ ವಸ್ತುಗಳನ್ನು (ಸುಖಭೋಗಗಳನ್ನು), ಸಮರ್ಧಯಂತು–ಸಮೃದ್ಧವನ್ನಾಗಿ ಮಾಡಲಿ (ಪೂರ್ತಿಗೊಳಿಸಲಿ).

ಚಕ್ರಾಂಕಧಾರಣಂ—ತಪ್ತಚಕ್ರಧಾರಣವನ್ನು, ಕುರ್ವಂತ್ಯಃ—ಮಾಡುವವರಾದ, ತೇಷು—ದೇವದೇವಿಯರಲ್ಲಿ, ಪ್ರಧಾನಭೂತಾಃ – ಪ್ರಧಾನಭೂತರಾದ, ವಾಯುಮೂರ್ತಯಃ – ವಾಯುರೂಪಗಳು, ಪ್ರಾರ್ಥ್ಯಂತೇ – ಪ್ರಾರ್ಥಿಸಲ್ಪಡುವರಾಗುತ್ತಾರೆ; ಶೇಷೇ–ಪರಿಶಿಷ್ಟರೂಪವಾಕ್ಯದಲ್ಲಿ, ಶೇಷಿಣಿ–ಪ್ರಧಾನಭೂತ ಸಂಹಿತಾರೂಪವಾಕ್ಯದಲ್ಲಿ, ವಾಕ್ಯೇ – ವಾಕ್ಯಸಮೂಹದಲ್ಲಿ – ಪ್ರಧಾನಭೂತವಾದ) (ವಾಯುಮೂರ್ತಿಗಳ ಪ್ರಾರ್ಥನೆಯೇ ಆಗಿರುತ್ತದೆ).[1]

**ನ ಯಸ್ಯ ಸರ್ವಮೋಕ್ಷೇಪಿ ಮೋಕ್ಷಃ ಸಾಧರ್ಮ್ಯಧರ್ಮಿಣಿ ।**
**ತಚ್ಚಕ್ರಲಾಂಛನಂ ಮೋಕ್ಷಯೋಗ್ಯಾತ್ಕೋ ಮೋಚಯೇದ್ಬುಧಃ**
॥ ೬೨೭ ॥

ಶ್ರೀಮುದ್ರಾಧಾರಣವು ಮುಕ್ತಿಯೋಗ್ಯರಿಗೆ ಅವಶ್ಯಕವೆಂಬಲ್ಲಿ ಯುಕ್ತಿಯನ್ನು ಹೇಳುತ್ತಾರೆ: —

ಯಸ್ಯ—ಯಾವ ಚಕ್ರಧಾರಣೆಯ, ಸಾಧರ್ಮ್ಯಧರ್ಮಿಣಿ—ಸಾರೂಪ್ಯವೆಂಬ ಸಾದೃಶ್ಯಸ್ವರೂಪದಲ್ಲಿ, ಸರ್ವಮೋಕ್ಷೇ ಅಪಿ—ಸಕಲ ಸಂಸಾರದ ಬಿಡುಗಡೆಯಾದ ನಂತರವೂ, ಮೋಕ್ಷಃ—ಮೋಚನವು (ಬಿಡುಗಡೆಯು–ರಾಹಿತ್ಯವು), ನ—ಇಲ್ಲವೋ (ಮುಕ್ತಿಯಲ್ಲಿ–ಸ್ವರೂಪದಲ್ಲಿ ಸಹ ಚಕ್ರಧಾರಣೆಯು ಇದ್ದೇ ಇರುತ್ತದೆ), ತತ್ ಚಕ್ರಲಾಂಛನಂ—ಆ ಚಕ್ರಮುದ್ರೆಯನ್ನು (ಚಿಹ್ನೆಯನ್ನು), ಮೋಕ್ಷ ಯೋಗ್ಯಾತ್— (ತಮೋಯೋಗ್ಯ, ಮಧ್ಯಮಜೀವರನ್ನು ಬಿಟ್ಟು) ಮುಕ್ತಿಯೋಗ್ಯನಾದ, ಕಃ— ಯಾವ, ಬುಧಃ—ವಿವೇಕಿಯು, ಮೋಚಯೇತ್—ಬಿಡುವನು (ತ್ಯಜಿಸುವನು ?)

---

ಸ್ತುತಿಸಲ್ಪಡುತ್ತವೆ (೬೨೬). ಮೇಲಾಗಿ, ಮುಕ್ತಿಯೋಗ್ಯ ಜೀವರೆಲ್ಲರೂ (ತಮೋಯೋಗ್ಯ ಹಾಗೂ ಮಧ್ಯಮ ಜೀವರ ವಿನಹ ಸರ್ವರೂ) ಸ್ವರೂಪದಲ್ಲಿ ಚಕ್ರಾಂಕನವುಳ್ಳವರೇ ಆಗಿರುವರು ; ಸ್ವಸ್ವರೂಪದಿಂದ ಸ್ಥಿತರಾಗಿರುವುದೇ ಮುಕ್ತಿಯಾದ್ದರಿಂದ, ಸಾರೂಪ್ಯವೆಂಬ ಸಾದೃಶ್ಯರೂಪದ ಮುಕ್ತರಿಗೆ ಸ್ವರೂಪ ದೇಹದಲ್ಲಿ ಸಹ (ಸಂಸಾರದಿಂದ ಪೂರ್ತಿ ಬಿಡುಗಡೆ ಹೊಂದಿದಮೇಲೂ) ಚಕ್ರ ಚಿಹ್ನೆಯು ಇರುವುದರಿಂದ, ಸಂಸಾರಾವಸ್ಥೆಯಲ್ಲಿ ಚಕ್ರಾಂಕಧಾರಣವನ್ನು ಯಾವ ಮುಕ್ತಿ

---

[1] ಅಂಗ, ಪ್ರಧಾನವಚನಗಳಲ್ಲಿ ಐಕ್ಯಾರ್ಥದ ನಿಯಮವಿರುವುದರಿಂದ ವಾಯುವೇ ಪರಿಶಿಷ್ಟ (ಅಂಗಭೂತ) ವಾಕ್ಯದಲ್ಲಿಯೂ ಪ್ರತಿಪಾದ್ಯನೆಂದು 'ಯೇನ ದೇವಾ' ಎಂಬ ವಾಕ್ಯವೂ ವಾಯುಪ್ರತಿಪಾದಿಕವೇ ಎಂದು ಹೇಳುತ್ತದೆ.

(ಮುಕ್ತಿಯೋಗ್ಯನಾದ ಯಾವನೂ ಬಿಡುವುದಿಲ್ಲ–ಚಕ್ರಲಾಂಛನವು ಸ್ವರೂಪದಲ್ಲಿ ಸಹ ಇದ್ದು, ಸಾರೂಪ್ಯ ಮುಕ್ತಿಯಲ್ಲಿಯೂ ಇರುವುದರಿಂದ ಹೇಗೆ ಸಂಸಾರಾವಸ್ಥೆಯಲ್ಲಿ ಬಿಡಬಹುದು ?–ಶಕ್ಯವಿಲ್ಲ).

**ಚಮೂಷತ್ಸ್ವಾಧುಚಮ್ವಾಂ ಸದ್ವೈಷ್ಣವೇಷು ಸಮುಜ್ಜ್ವಲನ್ ।**
**ಸುಖೀ ಹರಿರ್ಹಿ ಯಸ್ಯೇನಃ ಸ ಶ್ಯೇನೋ ವಿಷ್ಣುಕಿಂಕರಃ ॥ ೬೨೮ ॥**

ಪವಮಾನ ಸೂಕ್ತದ ಋಕ್ಕುಗಳಿಂದ ಚಕ್ರಾದಿ ಧಾರಣೆಯನ್ನು ಪ್ರಸ್ತಾವಿಸಿ, ಈಗ ಪೂಯಮಾನ ಸೂಕ್ತದಲ್ಲಿರುವ ವಾಕ್ಯದಿಂದ ಚಕ್ರಾದಿ ವಿಷ್ಣುವಿನ ನಾಲ್ಕು ಆಯುಧಗಳ ಧಾರಣವನ್ನು ಪ್ರಶಂಸಿಸುತ್ತಾರೆ :—[1]

---

ಯೋಗ್ಯ ಜೀವನೂ, ತ್ಯಜಿಸಲಾರನು (೬೨೭). ಸಕಲರ ಅನಾದಿ ಕಾಲದ ಅನಂತ ಕರ್ಮಗಳ ಸಾಕ್ಷೀಭೂತನಾಗಿರುವ, ಸತ್‌ಶಬ್ದವಾಚ್ಯನು ಶ್ರೀಹರಿಯು ;

---

[1] ಪ್ರಸಕ್ತವಾಕ್ಯವು ಹೀಗಿದೆ:—‘ ಚಮೂಷಚ್ಛ್ಯೇನಃ ಶಕುನೋ ಬಿಭೃತ್ವಾ-ಗೋವಿಂದುರ್ದ್ರಪ್ಸ ಆಯುಧಾನಿ ಬಿಭ್ರತ್ । ಅಪಾಮೂರ್ಮಿಂ ಸಚಮಾನಃ ಸಮುದ್ರಂ ತುರೀಯಂ ಧಾಮ ಮಹಿಷೋ ವಿವಕ್ತಿ । ಎಂಬ ಶ್ರುತಿವಾಕ್ಯವಾಗಿದೆ ; ಇದರ ಅರ್ಥವು ಮುಂದಿನಂತಿದೆ :—ಶ್ಯೇನಃ–ದೇವಷ್ಯಾರ್ದಿಜೀವನು (‘ಶ್ಯೇನೋ ಜೀವಃ’ ಎಂಬ ವಚನಾನುಸಾರ), ಶಕುನಃ – ಶುಕದಂತಿರುವ (ಬಲಾದಿಗಳಲ್ಲಿ ಅಲ್ಪನಾದ) ಮನುಷ್ಯಾದಿಜೀವನು ‘ಶಕುನ ಇತಿ ಶುಕನಾಮ’ ಎಂಬ ವಚನದಂತೆ) (ಜೀವರಲ್ಲಿ ತಾರತಮ್ಯವೂ ಸೂಚಿತವಾಯಿತು), ಗೋವಿಂದುಃ–ಗೋವಿಂದನ (‘ಗಾಃ ವಿದ್ಯಾಃ ವಿಂದತೇ’ ಎಂಬ ವ್ಯುತ್ಪತ್ತಿಯಿಂದ), ದ್ರಪ್ಸಃ–(ಗೋಪೀಚಂದನವೆಂಬ) ದ್ರವದ್ರವ್ಯದಿಂದ (ನೀರಿನಲ್ಲಿ ಕಲಸಿದ ಚಂದನದಿಂದ) (ಇದು ಪಂಚಮೀವಿಭಕ್ತಿಕವು, ಸುಮನಸಃ ಎಂಬಂತೆ ಛಾಂದಸವು), ಆಯುಧಾನಿ–ಚಕ್ರ, ಶಂಖ, ಗದಾ, ಪದ್ಮಗಳೆಂಬ (ವಿಷ್ಣುವಿನ) ಆಯುಧಗಳನ್ನು (‘ಚಂದನ ವಿಂದನಾತ್’ ಎಂಬ ವಚನದಂತೆ ಈ ಅರ್ಥವು ಸಿದ್ಧವಾಗುತ್ತದೆ–ಚಂದನಸ್ಯ ವಿಂದನಂ ಲಾಭಃ), ಬಿಭ್ರತ್–ಸದಾ ಧರಿಸುವನಾಗಿ, ಸಮುದ್ರಂ–ತಪ್ತಮುದ್ರಾಸಹಿತವಾದ ಸ್ವದೇಹವನ್ನು, ಬಿಭ್ರತ್–ಪ್ರದರ್ಶಿಸುವವನಾಗಿ (‘ಸಮುದ್ರಾದಿಭಿಃ ಸಹಿತಂ ವಪುರ್ದರ್ಶಯನ್’ ಎಂಬ ವಚನದಂತೆ) (ಗೋಪೀಚಂದನದಿಂದ ಚಕ್ರಾದಿಧಾರಣವು ಈ ಹಿಂದೆ ಹೇಳಲಾದ್ದರಿಂದ ಸಮುದ್ರಶಬ್ದದಿಂದ ತಪ್ತಮುದ್ರಾಧಾರಣೆಯನ್ನು ಗ್ರಹಿಸಬೇಕು, ಇಲ್ಲವಾದರೆ ಪುನರುಕ್ತಿಯಾಗುತ್ತದೆ), ಅಪಾಂ ಊರ್ಮಿಂ–ಜಲರಾಶಿಯ ಬುದ್ಬುದದಂತಿರುವ, ಸಂಸಾರಾರಂಭಕ ಕರ್ಮವನ್ನು, ಸಚಮಾನಃ–ಕಳೆದುಕೊಂಡವನಾಗಿ (ಸಂಹರಿಸಿ) (ಚಮು ಅದನ ಇತಿ ಧಾತೋಃ–ಎಂಬ ಅರ್ಥದಿಂದ) (ಸಚಮಾನೋ ನಿರಾಕರಣಶೀಲಃ’ ಎಂಬ ನಿರುಕ್ತವಚನದಿಂದ), ತುರೀಯಂ-ಧಾಮ – ಪರಮಾನಂದರೂಪವನ್ನು, ಚಮೂಷತ್ – ಕರ್ಮರಾಶಿಯನ್ನು ಸಾಕ್ಷಿಯಾಗಿ

ಚಮೂಷತ್ – (ಅನಾದಿಕಾಲದಿಂದ ಜೀವರಿಂದ ಮಾಡಲಾದ ಕರ್ಮ ರಾಶಿಗಳಲ್ಲಿ ಸಾಕ್ಷಿಭೂತನಾಗಿ ಇರುವ ಪರಬ್ರಹ್ಮನು) ಚಮೂಷತ್‌ನಾಮಕ ಭಗವಂತನು, ಸಾಧುಚಮ್ವಾಂಸನ್ – ಸತ್ಕರ್ಮಗಳಲ್ಲಿದ್ದು ಸಚ್ಛಬ್ದವಾಚ್ಯತ್ವ ಪ್ರದನಾದ, ವೈಷ್ಣವೇಷು – ವಿಷ್ಣುಭಕ್ತರಲ್ಲಿ, ಸಮುಜ್ಜ್ವಲನ್ – ಉತ್ಕೃಷ್ಟನಾಗಿ

ಆತನು ಸಕಲ ವಿಷ್ಣುಭಕ್ತರಲ್ಲಿ (ವಿಷ್ಣುಲಾಂಛನಗಳನ್ನು ತಪ್ಪದೇ ಸದಾ ಧರಿಸುವ ಸದ್ವೈಷ್ಣವರಲ್ಲಿ) ನಿಂತು ಉಜ್ಜ್ವಲನಾಗಿ ಪ್ರಕಾಶಿಸುವವನು : 'ಸುಖೀ ಹರಿಃ

ನಿಂತುನೋಡುವ–ಬಲ್ಲವನಾದ ಪರಬ್ರಹ್ಮನನ್ನು ('ಚಮೂಃ ಕರ್ಮ ಸಂಘಾಃ ಸದಿತಿ ಪರಬ್ರಹ್ಮರೂಪಂ ಭವತಿ' ಎಂಬ ವಚನದಂತೆ), ಮಹಿಷಃ–ಪೂರ್ವೋಕ್ತ ವಿಷ್ಣು ಚಕ್ರಾಂಕಿತನಾದ ವೈಷ್ಣವಜೀವನು, ವಿವಕ್ತಿ–ಅಪರೋಕ್ಷವಾಗಿ ನೋಡುತ್ತಾನೆ (ಸಾಕ್ಷಾತ್ಕರಿಸಿ ಕೊಂಡು ನೋಡುತ್ತಾನೆ ಎಂದರ್ಥ).

'ಮಹಿಷಃ ಸಂಸಾರ್ಯಪಿ ವಿವಕ್ತೀತಿ ಜಾನೀತೇ' ಎಂಬ ವಚನದಂತೆ, ಸಂಸಾರಿ ಜೀವನೂ, ಪರಬ್ರಹ್ಮನನ್ನು ಸಾಕ್ಷಾತ್ಕರಿಸಿ ನೋಡುತ್ತಾನೆ ; ಈ ವಿಷಯದಲ್ಲಿ ನಿರುಕ್ತದಲ್ಲಿ (ನಿರುಕ್ತವು ವೇದಾಂಗಗಳಲ್ಲಿ ಒಂದು) ಉಕ್ತವಾದ ಸಮಾಖ್ಯಾ ಶ್ರುತಿಯು ಹೀಗಿದೆ :— 'ಊರ್ಧ್ವೋ ಗಂಧರ್ವೋ ಅಧಿನಾಕೇ ಅಸ್ಥಾದ್ವಿಶ್ವಾ ರೂಪಾ ಪ್ರತಿ ಚಕ್ಷಾಣೋ ಅಸ್ಯ | ಭಾನುಃ ಶುಕ್ರೇಣ ಶೋಚಿಷಾ ವ್ಯದ್ಯೌತ್ಪ್ರಾರೂರುಚದ್ರೋದಸೀ ಮಾತರಾ ಶುಚಿಃ ||'; ಇದರ ಅರ್ಥವೇನೆಂದರೆ :—ಅಸ್ಯ – ಪರಮಾತ್ಮನ, ಗಂಧರ್ವಃ – (ಗಾನಿ – ಚಕ್ರಾಂಕಾದಿ ಪರಮಾತ್ಮನ ಅಸಾಧಾರಣ ಚಿನ್ಹೆಗಳನ್ನು ಧರಿಸುವ ಶೀಲವುಳ್ಳವನಾದ ಜೀವನು (ಗೋವಿಂದುಃ–ಗಾಃ ಆಯುಧಾನಿ, ಬಿಭ್ರತ್–ಧರಿಸುವ, ಎಂಬುದರ ಸಮಾಖ್ಯಾವಚನ ವಾದ್ದರಿಂದ) ಗಾನಿ–ಚಕ್ರಶಂಖಾದಿ ಆಯುಧಗಳನ್ನು ಧರಿಸುವ ಜೀವನು, ವಿಶ್ವಾ-ಸರ್ವತ್ರ ಪ್ರವೇಶಿಸಿ ಸ್ಥಿತನಾದ–ವಿಶಪ್ರವೇಶನೇ ಎಂಬುದರಿಂದ, ಹೃದಯ ಗುಹಾದಲ್ಲಿರುವ, ರೂಪಾ–ಬಿಂಬರೂಪಗಳನ್ನು, ಪ್ರತಿಚಕ್ಷಾಣಃ–ಅಪರೋಕ್ಷೀಕರಿಸಿಕೊಂಡು ಕಾಣುವನಾಗಿ (ಇದೇ ತುರೀಯ ರೂಪವು–'ತುರೀಯಂ ಧಾಮ ವಿವಕ್ತೀ' ಎಂಬುದರ ಸಮಾಖ್ಯೆಯಿದು) (ಇದರ ದರ್ಶನದಿಂದ ಮುಂದೆ ಆರಂಭಕವಾದ ಕರ್ಮಗಳ ಊರ್ಮಿಯು ನಷ್ಟವಾಗಿ, 'ಊರ್ಮಿಂ ಸಚಮಾನಃ' ಎಂಬ ಮೂಲಶ್ರುತಿಯ ಸಮಾಖ್ಯೆಯು), ಊರ್ಧ್ವಃ – ಮನುಷ್ಯಾದಿ ಜೀವರಿಂದ ಉತ್ಕೃಷ್ಟನಾದ ಜೀವನಾದ ಭಾನುಃ–ಸೂರ್ಯನು, (ಶ್ಯೇನ ಪದೋಕ್ತ ಸಮಸ್ತ ಜೀವರ ಉಪಲಕ್ಷಣವಿದೆಂದು ತಿಳಿಯಬೇಕು) ಸ್ವಯಂ ಆಕಾಶದಲ್ಲಿ ಮೇರುವಿನ ಸುತ್ತಲೂ ಸುತ್ತುವುದರಿಂದ, ಶ್ಯೇನಪಕ್ಷಿಯ ಉಪಮಾನವು ಸೂರ್ಯನಿಗೆ ಯುಕ್ತವಾಗುತ್ತದೆ), ನಾಕೇ–ಸ್ವರ್ಗದಲ್ಲಿ, ಅಧಿ ಅಸ್ಥಾತ್–ಅಧಿಕವಾಗಿ ಸ್ಥಿತನಾದನು ; (ಅಧಿಪತ್ಯವುಳ್ಳವನಾದನು) (ಇದರಿಂದ ದೇವತೆಗಳಿಗೆ ಅಪರೋಕ್ಷ ಜ್ಞಾನಾದಿ ಉತ್ತಮ ವೈಷ್ಣವ ಸ್ಥಾನವು ಭಾಗವತಾದಿ ಗಳಲ್ಲಿ ಹೇಳಿದಂತೆ ಚಕ್ರಾದಿ ಚಿನ್ಹೆಗಳ ಧಾರಣವೂ 'ನಹಿ ದೇವಪದಪ್ರಾಪ್ತಾ ಬ್ರಹ್ಮದರ್ಶನ

ಪ್ರಕಾಶಿಸುವವನೂ (ಆಗಿರುತ್ತಾನೆ) ; ಹಿ–ಯಸ್ಮಾತ್ (ಯಾವ ಕಾರಣದಿಂದ), ಸುಖೀ–ಸುಖರೂಪನು, ಹರಿಃ–ಶ್ರೀಹರಿಯೋ, (ಆತನೇ) ಯಸ್ಯ–ಯಾರಿಗೆ, ಇನಃ – ಸ್ವಾಮಿಯಾಗಿರುವನೋ, ಸಃ – ಆತನೇ, ಶ್ಯೇನಃ – (ಪಕ್ಷಿಗಳಲ್ಲಿ) ಶ್ಯೇನ ದಂತಿರುವ ದೇವ, ಋಷ್ಯಾದಿ ಜೀವನು, ವಿಷ್ಣುಕಿಂಕರಃ – (ಸದಾ) ವಿಷ್ಣು ಸೇವಕನು (ಮುಖ್ಯವೈಷ್ಣವನು).

**ನಯನ್ ಸುಖಭುವಂ ಸ್ವೀಯಾಂಶ್ಛಕುನಾಖ್ಯೋಽಪಿ ಸ ಪ್ರಭುಃ ।**
**ಬಿಭೃತ್ವಾ ಧಾರಣಾಶೀಲೋ ದ್ರಪ್ಸಂಶ್ಚಿತ್ತದ್ರವಾನ್ವಿತಃ ॥ ೬೨೯ ॥**

ಹಿಂದಿನ ಶ್ಲೋಕದಲ್ಲಿ ಪ್ರಸಕ್ತವಾದ ಪೂಯಮಾನಸೂಕ್ತದ ಶ್ರುತಿವಾಕ್ಯದ ಅನ್ವಾರ್ಥವನ್ನು ಸೂಚಿಸುತ್ತಾರೆ :—

---

ಯಸ್ಯಃ ಇನಃ', ಸುಖರೂಪನಾದ ಶ್ರೀಹರಿಯೇ ಯಾರ ಪ್ರಭುವೋ (ಸ್ವಾಮಿಯಾಗಿರುವನೋ) ಆತನೇ 'ಶ್ಯೇನ'ನು ; ಪಕ್ಷಿಗಳಲ್ಲಿ ಶ್ಯೇನ ಪಕ್ಷಿಯಂತೆ ಶ್ರೇಷ್ಠನು ; ಉತ್ಕೃಷ್ಟರಾಗಿರುವ ದೇವ, ಋಷ್ಯಾದಿ ಜೀವನೇ ಶ್ಯೇನನು ; ಆತನೇ ವಿಷ್ಣುಭಕ್ತಲ್ಲಿ ಶ್ರೇಷ್ಠನು (೬೨೮). ಪೂಯಮಾನ ಸೂಕ್ತದ ಪ್ರಸಕ್ತ ಶ್ರುತಿವಾಕ್ಯವು ಅನ್ವಾರ್ಥವುಳ್ಳದ್ದೂ ಆಗಿದೆ; ಅದು ಶ್ರೀಮಧ್ವರೂಪೀ ವಾಯು–

---

ವರ್ಜಿತಾಃ ' ಎಂಬಂತೆ ಸಿದ್ಧವಾಗುತ್ತದೆ) ; ಶುಕ್ರೇಣ–(ಶೋಕಘ್ನನಾದ, ರೀಜ್ಞ್ಯಾಯೋ ಎಂಬ ಧಾತುವಿನಿಂದ ಈ ಅರ್ಥವು ಸಿದ್ಧವಾಗುತ್ತದೆ), ಶೋಚಿಷಾ – ಕಾಂತಿಯಿಂದ, ವ್ಯದ್ಯೌತ್–ಪ್ರಕಾಶಿಸಿದನು (ಸೂರ್ಯಮಾತ್ರನಲ್ಲ–' ತಮೇವ ಭಾಂತಮನುಭಾತಿ ಸರ್ವಂ ' ಎಂಬ ಶ್ರುತಿಯಂತೆ, ಆತನ ಆಶ್ರಯಿಸಿದ ಸರ್ವರೂ ಪ್ರಕಾಶಿಸಿದರೆಂದರ್ಥ), ಶುಚಿಃ–ಶುದ್ಧನಾದ ಸೂರ್ಯನು (ಭೂಮ್ಯಂತರಿಕ್ಷದಲ್ಲಿರುವ ಅಶುದ್ಧ ಪದಾರ್ಥಗಳ ಲೇಪವಿಲ್ಲದ್ದರಿಂದ ಶುದ್ಧಶಬ್ದವಾಚ್ಯನು ಸೂರ್ಯನು), ಮಾತರಾ–ಜಗತ್ತಿನ ಮಾತೃಸ್ಥಾನೀಯರಾದ, ರೋದಸೀ–ದ್ಯು, ಪೃಥ್ವಿಗಳನ್ನು ಪ್ರಾರೂರುಚತ್ – ಪ್ರಕೃಷ್ಟವಾಗಿ ಶೋಭಿಸಿದರು. (' ಊರ್ಧ್ವೋಗಂಧರ್ವ ' ಎಂಬಲ್ಲಿನ ಸೂರ್ಯನ ಉತ್ಕೃಷ್ಟತ್ವ ಸಮರ್ಥನೆಯಿದು) ; ಈ ಗ್ರಂಥಕಾರರು, ನಿರುಕ್ತೋಕ್ತಸಮಾಖ್ಯಾಶ್ರುತಿಯನ್ನು ಅನುಸರಿಸಿ, ಸೂರ್ಯಸ್ಥಿತರಾದ ಶ್ರೀಮಧ್ವಾಚಾರ್ಯರನ್ನು ಹಿಡಿದು, ಸ್ವಾರಸ್ಯವಾಗಿ ಪವಮಾನಸೂಕ್ತ ವಾಕ್ಯಗಳನ್ನು ಯೋಜನೆಮಾಡಿಯೂ ' ಪೂಯಮಾನ ' ಎಂಬ ಸೂಕ್ತಾರ್ಥವನ್ನು ನಿರೂಪಿಸಿದ್ದಾರೆ ; ಚಮೂಷತ್ ಎಂಬುದರಿಂದ, ವೈಷ್ಣವನಿಗೆ (ವಿಷ್ಣುಲಾಂಛನಗಳನ್ನು ಸದಾ ಧರಿಸುವ ಅಧಿಕಾರಿಗೆ), ಸತ್ಶಬ್ದವಾಚ್ಯನಾದ ಶ್ರೀಹರಿ ದರ್ಶನವೂ ಸಂಸಾರಾರಂಭಕ ಸರ್ವಕರ್ಮಕ್ಷಯವೂ ಲಭಿಸುವುದೆಂಬ ಶ್ರುತ್ಯುಕ್ತಪರಮ ಮುಖ್ಯಾರ್ಥವನ್ನು ನಿರೂಪಿಸಲಾಗಿದೆ.

ಶಕುನಾಖ್ಯಃ ಅಪಿ–(ಶಸ್ಯ, ಕುಃ, ನಯತೀತಿ – ಸುಖಭೂಮಿಯನ್ನು ನಿಯಮಿಸುವುದರಿಂದ) ಶಕುನನಾಮಕನಾದರೂ, ಸ್ವೀಯಾಂ-ತನ್ನ, ಸುಖಭುವಂ-ಸುಖಭೂಮಿಯನ್ನು, ನಯನ್-(ತಾನೇ) ನಯನಮಾಡುವನಾಗಿ ಶಕುನನಾಮಕನಾದರೂ, ಸ ಪ್ರಭುಃ–ಆ ಪ್ರಭುವಾದ ಶ್ರೀಮಧ್ವದೇವನು, (ಶ್ರೀಮಧ್ವರು), ಬಿಭೃತ್ವಾಧಾರಣಶೀಲಃ – ಬಿಭೃತ್ವಾ, ಎಂದರೆ ಧಾರಣಮಾಡುವ ಸ್ವಭಾವದವನಾಗಿ, ದ್ರಪ್ಸಂ–ದ್ರಪ್ಸಂ ಎಂದರೆ, ಚಿತ್ತದ್ರವಾನ್ವಿತಃ-ಚಿತ್ತದ್ರವವುಳ್ಳ (ದ್ರವೀಭೂತಮನಸ್ಸುಳ್ಳವನಾಗಿ);

**ಆಯುಧಾನಿ ಸದಾ ಬಿಭ್ರದ್ಭುಜಕಂಠೋದರಾದಿಷು ।**
**ಚಕ್ರಶಂಖಗದಾಪದ್ಮಪೂರ್ವಾಣ್ಯಖಿಲವಾಕ್ಪತೇಃ ॥ ೬೩೦ ॥**
**ಗೋವಿಂದುಗೋಪತೇರ್ವಾ ಸ್ವಸ್ವಾಮಿನಃ ಸೇವಿನಾಂ ಪ್ರಭುಃ ।**
**ಅಪಾಂ ಜ್ಞಾನಪ್ರವಾಹಾಣಾಮೂರ್ಮಿಣಮೌನ್ನತ್ಯಸಂಪದಂ ॥ ೬೩೧ ॥**
**ಸಮುದ್ರಂ ವೇದಶಾಸ್ತ್ರಾಖ್ಯಂ ಸಚಮಾನಃ ಸ್ವಚೇತಸಾ ।**
**ಸಂಬಂಧಂ ಪ್ರಾಪಯನ್ ಮಧ್ವೋ ಮರುದಂಶೋ ಭವಾದ್ಬಹಿಃ**
**॥ ೬೩೨ ॥**

---

ದೇವನನ್ನೂ ಸ್ತುತಿಸುತ್ತದೆ; ಸುಖಭೂಮಿಯಾದ ವೈಕುಂಠಾದಿಲೋಕವನ್ನು ಹೊಂದಿಸುವುದರಿಂದ, ಶಕುನನಾಮನಾದ ಶ್ರೀಹರಿಯು ಇರುತ್ತಿದ್ದರೂ, ಗೋವಿಂದನ ಆಯುಧ ಚಿನ್ಹೆಗಳನ್ನು ಸದಾ ಧರಿಸಿ, ದ್ರವೀಭೂತವಾದ ಕೃಪಾಯುಕ್ತ ಚಿತ್ತವುಳ್ಳವನಾಗಿಯೂ ಇರುವ ಶ್ರೀಮಧ್ವರು, (೬೨೯) ಅನಾದಿಕಾಲದಿಂದ ತಮ್ಮ ಭುಜ, ಕಂಠ, ಉದರಾದಿ ದೇಹಭಾಗಗಳಲ್ಲಿ ಚಕ್ರ, ಶಂಖ, ಗದಾಪದ್ಮ ಮೊದಲಾದ ಶ್ರೀಕೃಷ್ಣನ ಆಯುಧಗಳನ್ನು ಧರಿಸುವ ಸ್ವಭಾವವುಳ್ಳವರು; ಶ್ರೀಕೃಷ್ಣನೇ ಗೋವಿಂದನಾಮಕ ಗೋಪತಿಯು; ಸಕಲ ಶಾಸ್ತ್ರಪ್ರತಿಪಾದ್ಯನು; ತನ್ನನ್ನು ಸ್ವಾಮಿತ್ವೇನ ಸೇವಿಸುವವರ ಪ್ರಭುವು; ಜ್ಞಾನಪ್ರವಾಹಗಳ ಉತ್ಕೃಷ್ಟತೆ ಎಂಬ ಸಂಪದವನ್ನು ತನ್ನ ಭಕ್ತರಿಗೆ ದೊರಕಿಸುವ ದೊರೆಯು (ಅದನ್ನು ಶ್ರೀಮಧ್ವರ ಮೂಲಕವೇ ಲಭಿಸುವಂತೆ ಮಾಡುವನು); ಜ್ಞಾನ ಪ್ರವಾಹದ ಸಂಪದವೆಂಬುದು, ವೇದಶಾಸ್ತ್ರಾದಿ ಸಮುದ್ರವು–ಅಪಾರವಾದ ವಿಸ್ತಾರವುಳ್ಳದ್ದು; ಶ್ರೀಮಧ್ವರು (ತಮ್ಮ) ಜನಕ್ಕೆ, ವೈಷ್ಣವರಿಗೆ, ಶ್ರವಣಾದಿಗಳ

**ಸ್ಥಿತೇಸ್ತುರ್ಯಂ ಮುಕ್ತಲೋಕಾಧಾರತ್ವಾದ್ಧಾಮಸಂಜ್ಞಿತಂ ।**
**ಪರಂಬ್ರಹ್ಮ ವಿಶೇಷೇಣ ವ್ಯಕ್ತೀತ್ಯಾಹ ಶ್ರುತಿಃ ಪರಾ ।**
**ಸಮವಾಯೇ ಸಚಿದ್ಧಾತುಂ ಯತೋ ವ್ಯಾಖ್ಯಾಂತಿ ಶಾಬ್ದಿಕಾಃ**

॥ ೬೩೩ ॥

ಆಯುಧಾನಿ–ಆಯುಧಗಳನ್ನು, ಭುಜಕಂಠೋದರಾದಿಷು–ಭುಜ, ಕಂಠ, ಉದರಾದಿ ದೇಹಭಾಗಗಳಲ್ಲಿ, ಚಕ್ರಶಂಖ ಗದಾ ಪದ್ಮಪೂರ್ವಾಣಿ–ಚಕ್ರ, ಶಂಖ, ಗದಾ, ಪದ್ಮ ಮೊದಲಾದವನ್ನು[1] (ಆಯುಧಗಳನ್ನೂ), ಸದಾ–ಯಾವಾಗಲೂ, ಬಿಭ್ರತ್–ಧರಿಸಿರುವನು, ಅಖಿಲ ವಾಕ್ಪತೇಃ–ಸಕಲ ಶಾಸ್ತ್ರ ಪ್ರತಿಪಾದ್ಯನಾದ, ಗೋವಿಂದುಃ–ಗೋವಿಂದನ (ಸರ್ವಜ್ಞನಾದ), ಗೋಪತೇಃ ವಾ–ಮತ್ತು ವೇದಾದಿ ಪ್ರತಿಪಾದ್ಯನೇ ಆದವನ–(ಗೋವಿಂದಃ ಶಬ್ದದ ಅರ್ಥಾಂತರವಿದು), ಭಗವಂತನ, ಸ್ವಸ್ವಾಮಿನಃ– ತಮ್ಮೆಲ್ಲರ ಮಹಾಸ್ವಾಮಿಯ, ಸೇವಿನಾಂ ಪ್ರಭುಃ – ಸೇವಕರ ಪ್ರಭುವಾಗಿದ್ದು, ಅಪಾಂ–ಜ್ಞಾನಪ್ರವಾಹಗಳ, ಊರ್ಮಿಂ–ಔನ್ನತ್ಯ ಸಂಪದವನ್ನು ಸಮುದ್ರಂ ವೇದಶಾಸ್ತ್ರಾಖ್ಯಂ–ವೇದಶಾಸ್ತ್ರವೆಂಬ ಸಮುದ್ರವನ್ನು, ಸಚಮಾನಃ– ಸಚಮಾನಃ ಎಂದರೆ, ಸ್ವ ಚೇತಸಾ – ತಮ್ಮ ಜ್ಞಾನದಿಂದ, ಸಂಬಂಧಂ– ಸಂಬಂಧವನ್ನು, ಪ್ರಾಪಯನ್–ಹೊಂದಿಸುವರಾದ, ಮಧ್ವಃ–ಶ್ರೀ ಮಧ್ವರು, ಭವಾತ್ ಬಹಿಃ–ಸಂಸಾರದ ಹೊರಗೆ (ಮೂಲಸ್ವರೂಪದಲ್ಲಿ) ಮರುದಂಶಃ– ವಾಯ್ವಂಶರಾಗಿ,–ಸ್ಥಿತೇಃ–ಸ್ಥಿತಿಕಾಲದಿಂದ ತುರ್ಯಂ–ತುರೀಯನಾಮಕವಾದ,

---

ರೂಪದಿಂದ ಆ ಸಮುದ್ರದ ಸಂಬಂಧವನ್ನುಂಟುಮಾಡುವರು ; ಇವರು ತಮ್ಮ ಮೂಲರೂಪದಲ್ಲಿ ವಾಯ್ವಂಶದವರು ; ಮುಕ್ತಲೋಕವೆಂಬ ಅಂತಿಮ ಪ್ರಾಪ್ಯ ಸ್ಥಾನದ ಧಾರಕನಾದ್ದರಿಂದ 'ಧಾಮ'ನೆಂದು ಕರೆಯಲ್ಪಡುವ ಪರಬ್ರಹ್ಮನನ್ನು, ವಿಶೇಷವಾಗಿ ಉಪದೇಶಿಸುವವರೇ ಅವರು ; ಶ್ರುತಿಯಲ್ಲಿರುವ 'ಸಚಮಾನಃ' ಎಂಬುದಕ್ಕೆ, ಸಚಿದ್ಧಾತುವಿನಿಂದ ಸಂಬಂಧಹೊಂದಿಸುವುದೆಂಬರ್ಥವು ಶಾಬ್ದಿಕರಂತೆ

[1] ಖಡ್ಗ, ಮೊದಲಾದ ಅನ್ಯ ಚಿಹ್ನೆಗಳನ್ನು ಧರಿಸುವ ಅಧಿಕಾರಿಗಳೂ (ಕ್ಷತ್ರಿಯಾದಿಗಳೂ) ಇರುತ್ತಾರೆ ; ಭಗವಂತನು ಯಾವ ರೂಪಗಳಲ್ಲಿ ಯಾವ ಯಾವ ಆಯುಧಗಳನ್ನು ಧರಿಸಿರುವನೆಂಬ ವಿವರಗಳು ಶ್ರೀಮಧ್ವಾಚಾರ್ಯಕೃತ ತಂತ್ರಸಾರ ಸಂಗ್ರಹದಲ್ಲಿ ನಿರೂಪಿತವಾಗಿದೆ.

ಮುಕ್ತಲೋಕಾಧಾರತ್ವಾತ್ – ಮುಕ್ತಲೋಕದ ಆಧಾರನಾದ್ದರಿಂದ, ಧಾಮ ಸಂಜ್ಞಿತಂ–ಧಾಮಶಬ್ದವಾಚ್ಯನಾದ, (ಧಾಮನೆಂದು ಕರೆಯಲ್ಪಡುವ), ಪರಂ ಬ್ರಹ್ಮ–ಪರಬ್ರಹ್ಮನನ್ನು ವಿಶೇಷೇಣ–ವಿಶೇಷವಾಗಿ, ವಕ್ತಿ–ಹೇಳುತ್ತಾರೆ (ಉಪ ದೇಶಿಸುತ್ತಾರೆ), ಇತಿ – ಹೀಗೆಂದು, ಪರಾಶ್ರುತಿಃ – ಈ ಶ್ರೇಷ್ಠವಾದ ಶ್ರುತಿಯು (ಅನ್ವರ್ಥವನ್ನು), ಆಹ – ಹೇಳಿತು (ಹೇಳುತ್ತದೆ); (ಸಚಮಾನಃ ಎಂಬ ಶಬ್ದಕ್ಕೆ ಸಂಬಂಧವನ್ನು ಹೊಂದಿಸಿ, ಎಂಬರ್ಥವನ್ನು ಮೂಲಭೂತಧಾತ್ವರ್ಥದಿಂದ ಸಾಧಿಸಲು ಹೇಳುತ್ತಾರೆ) ; ಸಮವಾಯೇ–ಸಂಬಂಧವೆಂಬರ್ಥದಲ್ಲಿ, ಸಚಿದ್ಧಾತುಂ– (ಸಚ ಸಮವಾಯೇ, ಎಂಬ ಧಾತ್ವರ್ಥದಿಂದ) ಸಚಿದ್ಧಾತುವನ್ನು, ಯತಃ– ಯಾವ ಕಾರಣದಿಂದ, ಶಾಬ್ದಿಕಾಃ–ವ್ಯಾಕರಣಜ್ಞರು, ವ್ಯಾಖ್ಯಾಂತಿ–ವ್ಯಾಖ್ಯಾನ ಮಾಡುವರೋ (ಆದ್ದರಿಂದ ಈ ಅರ್ಥವು ಯುಕ್ತವಾಗುತ್ತದೆ).

**ಪೂಯಮಾನಸ್ಯ ಸೂಕ್ತಸ್ಥಾ ತನ್ಮಾಧ್ವೀಯಂ ಕಥಾ ಧ್ರುವಂ ।**
**ಯತಃ ಪ್ರವಚನಂ ಕುರ್ವದ್ವಾಯೋರೂಪಂ ಶ್ರುತಿರ್ಜಗೌ ॥ ೬೩೪ ॥**

ಯತಃ–ಯಾವ ಕಾರಣದಿಂದ, ಪ್ರವಚನಂ ಕುರ್ವದ್ವಾಯೋ ರೂಪಂ– ಪ್ರವಚನಮಾಡುವ ವಾಯುದೇವನ ರೂಪವನ್ನು, ಶ್ರುತಿಃ–ಶ್ರುತಿಯು, ಜಗೌ– ಕೀರ್ತಿಸಿದೆಯೋ, ತತ್ – ಆದ್ದರಿಂದ, ಪೂಯಮಾನಸ್ಯ – ಸೂಕ್ತಸ್ಥಾ ಕಥಾ – ಪೂಯಮಾನ ಸೂಕ್ತದಲ್ಲಿರುವ ಕಥೆಯು (ವೃತ್ತಾಂತವು), ಮಾಧ್ವೀಯಂ– ಶ್ರೀಮಧ್ವರೂಪೀ ವಾಯುದೇವನದೇ ಎಂಬುದು, ಧ್ರುವಂ–ನಿಶ್ಚಯವು (ಸಿದ್ಧವು).

**ತಚ್ಚಮೂಷು ಸತಾಂ ಸೇಯಂ ಕಥಾ ಭಕ್ತಿಮತಾಂ ಸತಾಂ ।**
**ಸೇನಾಸ್ತುತೌ ಚ ಸೇನಾನೀಸ್ತುತಿರೇವ ಯತೋ ಭವೇತ್ ॥ ೬೩೫ ॥**

'ಚಮೂಷು' ಎಂಬುದು ಜಾತ್ಯೇಕವಚನವಾದ್ದರಿಂದ, ಸಕಲವೈಷ್ಣವ ರಿಂದ ಆಚರಿಸಲ್ಪಡುವ ಚಕ್ರಾದಿಧಾರಣಕ್ಕೆ ಶೌತ್ರತ್ವಸಿದ್ಧಿಗಾಗಿ, ಈ ಶ್ರುತಿಯು

---

ಸಿದ್ಧವಾಗುತ್ತದೆ (೬೩೦–೬೩೩). ವಿಷ್ಣುಭಕ್ತರನ್ನು ಉದ್ದೇಶಿಸಿ ಸಚ್ಛಾಸ್ತ್ರ ಪ್ರವಚನ ರೂಪದಿಂದ ಶ್ರೀವಿಷ್ಣುವನ್ನು ಉಪದೇಶಿಸುವುದೆಂದು ವಾಯುದೇವನ ರೂಪವನ್ನು ವರ್ಣಿಸುವ ಈ ಪೂಯಮಾನ ಸೂಕ್ತಗತ ಶ್ರುತಿಯು ಹೇಳುವುದರಿಂದ, ಮಧ್ವರೂಪದ ವಾಯುವೇ ವಾಚ್ಯನೆಂದು ನಿಶ್ಚಯವಾಗಿ ಸಿದ್ಧವಾಗುತ್ತದೆ (೬೩೪). ತಚ್ಚಮೂಷು ಎಂಬ ಶ್ರುತಿವಾಕ್ಯವು, ವೈಷ್ಣವ ಪ್ರತಿಪಾದಕವೂ

ವೈಷ್ಣವ ಮಾತ್ರವಿಷಯಕವೆಂದು ಹೇಳುತ್ತಾರೆ: ಪೂಯಮಾನಶ್ರುತಿಯು ಶ್ರೀಮಧ್ವರಪರವಾಗಿದ್ದಂತೆ, ವೈಷ್ಣವಪರವಾಗಿಯೂ ಇದೆ :—[1]

ಸಾ ಇಯಂ – ಆ ಈ ( ಚಮೂಷತ್, ಇತ್ಯಾದಿ ) ಶ್ರುತಿವಾಕ್ಯವು, ಭಕ್ತಿಮತಾಂ–ಶ್ರೀವಿಷ್ಣುಭಕ್ತಿಯುಳ್ಳ, ಸತಾಂ–ಸಜ್ಜನರ, ಚಮೂಷು ಸತಾಂ–ಸೇನೆಗಳಲ್ಲಿ (ವೃಂದಗಳಲ್ಲಿ – ಜಾತ್ಯೇಕವಚನವಾದ್ದರಿಂದ ಬಹುವಚನ ಪ್ರಯೋಗವು ಯುಕ್ತವಾಗುತ್ತದೆ) ಇರುವ ವಿಷ್ಣುಭಕ್ತರ, ಕಥಾ–ಚರಿತ್ರೆಯು, (ಆಗಿರುತ್ತದೆ) ; ಚ–ಹಾಗೂ, ಯತಃ–ಯಾವ ಕಾರಣದಿಂದ, ಸೇನಾಸ್ತುತೌ–ಸೇನೆಯ ಸ್ತುತಿಯಲ್ಲಿ (ಸ್ತುತಿಸುತ್ತಿರುವಲ್ಲಿ), ಸೇನಾನೀಸ್ತುತಿಃ ಏವ–ಸೇನಾನಾಯಕನ, ಸ್ತುತಿಯೇ, ಭವೇತ್–ಆಗುತ್ತದೆಯೋ (ಆದ್ದರಿಂದ ವೈಷ್ಣವ ಸೇನಾಸ್ತುತಿಯಿಂದ ನಾಯಕರಾದ ಶ್ರೀಮಧ್ವರ ಸ್ತುತಿಯೂ ಆಗುತ್ತದೆ).

**ಸ್ವರೇಣ ಪ್ರಣವಾಖ್ಯೇನ ಮಂತ್ರೇಣ ಹೃದಿಗಂ ಸದಾ ।**
**ಪರತಶ್ಚ ಪರಂ ದೇವಂ ಮಹತಶ್ಚ ಮಹತ್ತರಂ ॥ ೬೩೬ ॥**

---

ಆಗಿದೆ ; ಈ ಶ್ರುತಿಯು ಭಕ್ತಿಯುತರಾದ ಸಜ್ಜನರ ಸೇವಾ ಸ್ತುತಿಪರವೂ ಆಗಿರುವುದರಿಂದ, ಸೇನಾನಾಯಕರಾದ ಶ್ರೀಮಧ್ವರ ಸ್ತುತಿರೂಪವೂ ಆಗುತ್ತದೆ (೬೩೫). 'ಓಂ' ಎಂಬ ಮಂತ್ರದಿಂದ ಪ್ರಣವ ಮಂತ್ರದಿಂದ) ಸ್ವರಪೂರ್ವಕವಾಗಿ

[1] ಚಮೂಷತ್–ವೈಷ್ಣವ ಸೇನಾಮಧ್ಯದಲ್ಲಿ ಗುರುಗಳಾಗಿ ನಿಂತು, ಶ್ಯೇನಃ–' ಶ್ರೀ ' ಆನಂದರೂಪನಾದ ಶ್ರೀಹರಿಯು ಸಮ್ಯಕ್ ಸ್ವಾಮಿಯಾಗಿರುವ (ಶ್ರೀಮಧ್ವರಿಗೆ ಶ್ರೀಮಹಾಲಕ್ಷ್ಮೀದೇವಿಯು, ಪರಮಾತ್ಮನನಂತರ ಅವಾಂತರ ಸ್ವಾಮಿನಿಯಾಗಿದ್ದರೂ–ಮುಖ್ಯ ಸ್ವಾಮಿತ್ವವು ಶ್ರೀವಿಷ್ಣುವಿಗೇ ಇರುತ್ತದೆ), ಶಕುನಂ - ಶಂಕುಂ, ನಿರವಧಿಕ ಸುಖಾಶ್ರಯನಾದ ಪರಮಾತ್ಮನನ್ನು ಹೊಂದಿಸುವುದರಿಂದ ಶಕುನಶಬ್ದವಾಚ್ಯರಾದ ಶ್ರೀಮಧ್ವರು (ಅಥವಾ ಮೋಕ್ಷಪ್ರಾಪಕವೇದಶಾಸ್ತ್ರಾದಿಯನ್ನು ಭೂಮಿಯಂತೆ, ಧಾರಕರಾದ,–ಸದಾ ಧರಿಸಿರುವ ಮತ್ತು ಸತ್ತರ್ಕಗಳಿಂದ ರಕ್ಷಿಸುವರಾದ,–ಶ್ವಾಸರೂಪದಿಂದ ಜಗದ್ಧಾರಣ ಶೀಲರೂ ಆದ, ಶ್ರೀಮಧ್ವರು), ಗೋವಿಂದಃ—ಶ್ರೀಕೃಷ್ಣನ, ಆಯುಧಾನಿ–ಆಯುಧಗಳನ್ನು (ಸಹಸ್ರಾರವ ಚಕ್ರ, ಶತಾವರ್ತದ ಶಂಖ, ಸಹಸ್ರದಲ ಪದ್ಮ, ಷೋಡಾಶರವುಳ್ಳ ಗದಾಗಳೆಂಬ ಆಯುಧಗಳನ್ನು) ಬಿಭೃತ್ವಾ - ಭುಜದ್ವಯಗಳಲ್ಲಿ ಮತ್ತು ವಕ್ಷಸ್ಥಲದ ಎರಡು ಭಾಗಗಳಲ್ಲಿಯೂ (ತನ್ನ ಚತುರ್ಭುಜಗಳಲ್ಲಿ), ದ್ರಪ್ಸಃ - ಸದಾ ಚಿತ್ತದ್ರವಭಾವವುಳ್ಳವರಾಗಿ - ಬಿಭ್ರತ್ (ವೈಷ್ಣವರನ್ನು) ರಕ್ಷಿಸುವರಾಗಿ, ಅಪಾಂ ಊರ್ಮಿಂ – ಜ್ಞಾನಸಾರದ ಉತ್ಕರ್ಷ

ಧೃತೋರ್ಧ್ವಪುಂಡ್ರಃ ಶ್ರುತಸಚ್ಚಕ್ರಧಾರೀ ಹಯಃ ಪುಮಾನ್ ।
ವಿಷ್ಣುಂ ಧ್ಯಾಯತಿ ಸರ್ವತ್ರ ಸ ಮಹಾತ್ಮೇತಿ ಸಾಂಪ್ರತಂ ॥ ೬೩೭ ॥

ಪ್ರಸಿದ್ಧೋಪನಿಷಚ್ಚಾಹ ಶೃಪಾಕ ಇತಿ ಧಾತುತಃ ।
ತಪ್ತಚಕ್ರಾಂಕೋರ್ಧ್ವಪುಂಡ್ರಧೃತಿಸ್ತುತಿಪರಾ ಸ್ಫುಟಂ ॥ ೬೩೮ ॥

ಈಗ 'ಧೃತೋರ್ಧ್ವಪುಂಡ್ರಃ ಶೃತಚಕ್ರಧಾರೀ ವಿಷ್ಣುಂ ಪರಂ ಧ್ಯಾಯತಿ ಯೋ ಮಹಾತ್ಮಾ । ಸ್ವರೇಣ ಮಂತ್ರೇಣ ಸದಾ ಹೃದಿಸ್ಥಂ ಪರಾತ್ಪರಂ' ಎಂಬ, ತಪ್ತ ಚಕ್ರೋರ್ಧ್ವಪುಂಡ್ರ ಧಾರಣ ಪ್ರತಿಪಾದಕ ಸೃಗಾಲೋಪನಿಷದ್ವಾಕ್ಯವನ್ನು ಅರ್ಥತಃ ಸಂಗ್ರಹಿಸುತ್ತಾರೆ:—

---

ಉಚ್ಚರಿಸಿ, ಸರ್ವ ಗುಹಾವಾಸಿಯಾದ ಸತ್‌ಶಬ್ದ ವಾಚ್ಯನಾದ, ಲಕ್ಷ್ಮೀ ಬ್ರಹ್ಮಾದಿಗಳಿಂದ ಶ್ರೇಷ್ಠನೂ ವಂದ್ಯನೂ ಆದ ಪರಬ್ರಹ್ಮನನ್ನು (ವಿಷ್ಣುವನ್ನು) ಊರ್ಧ್ವಪುಂಡ್ರ, ತಪ್ತ ಚಕ್ರಾದಿಗಳನ್ನು ಧರಿಸಿ, ಧ್ಯಾನಿಸುವ ಪುರುಷನು, ಸರ್ವದಾ ಸರ್ವತ್ರ ಮಹಾತ್ಮನೆಂದು ಈಗಲೂ ತಿಳಿಯಲ್ಪಡುತ್ತಾನೆ; ಹೀಗೆಂದು

---

ವನ್ನುಳ್ಳವನ್ನಾಗಿ ಮಾಡಿ, ಸಮುದ್ರಂ—ವೇದಶಾಸ್ತ್ರಾಖ್ಯ ಸಮುದ್ರವನ್ನು, ಸಚಮಾನಃ—ಸ್ವಮನಸ್ಸಿನ ಸಂಬಂಧವನ್ನು ಹೊಂದಿಸಿ, (ಅಥವಾ ಜ್ಞಾನಮುದ್ರಾಸಹಿತನಾದ ಶ್ರೀ ವೇದವ್ಯಾಸರನ್ನೂ, ಶ್ರೀಹಯಗ್ರೀವದೇವನನ್ನು, ಸದಾ ಧ್ಯಾನಿಸುವರಾಗಿ) (ಅಥವಾ ಸಂಸಾರಸಮುದ್ರವನ್ನು ನಿರಾಕರಿಸುವರಾಗಿ), ಮಹಿಷಃ – ಸಕಲಜೀವರಲ್ಲಿ ಶ್ರೇಷ್ಠರಾದ ವಾಯ್ವವತಾರರಾದ ಶ್ರೀಮಧ್ವರು, ತುರೀಯಂ – ಮುಕ್ತಿಯೋಗ್ಯಜೀವರಿಗೆ ಅಂತ್ಯದಲ್ಲಿ ಪ್ರಾಪ್ಯನಾದ, ಧಾಮ—ವಿಷ್ಣುನಾಮಕ ಪರಬ್ರಹ್ಮನನ್ನು, ವಿವಕ್ತಿ—ಅಪರೋಕ್ಷದಿಂದ ಕಂಡು ವಿಶೇಷವಾಗಿ ತಿಳಿಯುತ್ತಾರೆ; ವೈಷ್ಣವಮಾತ್ರ ವಿಷಯದಲ್ಲಿಯಾದರೂ ಚಮೂಷತ್—ವೈಷ್ಣವ ಸಂಘದಲ್ಲಿ ನಿಂತು, ಶ್ಯೇನಃ—ಆನಂದರೂಪಿಯಾದ ಪರಮಾತ್ಮನೇ ಜನ್ಮಜನ್ಮಕ್ಕೂ ಸ್ವಾಮಿಯೆಂದು ತಿಳಿದಿರುವ, ಶಕುನಂ - ಪರಮಾತ್ಮನನ್ನು ಮುಟ್ಟಿಸುವ, ಗೋವಿಂದಃ - ಶ್ರೀಕೃಷ್ಣನ, ಆಯುಧಾನಿ ಬಿಭ್ರತ್ - ಆಯುಧಗಳಲ್ಲಿ ಧರಿಸಿರುವ, ದ್ರಪ್ಸಃ - ಯಥಾಯೋಗ್ಯವಾದ ಮೈತ್ರೀಭಾವ ನಿಮಿತ್ತ ಚಿತ್ತದ್ರವವುಳ್ಳ, ಅಪಾಂ ಊರ್ಮಿಂ ಸಮುದ್ರಂ - ಜ್ಞಾನರಸದ ಉತ್ಕರ್ಷವುಳ್ಳ, ಜ್ಞಾನಸಮುದ್ರವನ್ನು ಸಚಮಾನಃ - ಶ್ರವಣ ಮನನಾದಿಯಿಂದ ಯಥಾಯೋಗ್ಯವಾಗಿ ಸಂಬಂಧಗೊಳಿಸುವ, ಮಹಿಷಃ - ಅಧಮಮಧ್ಯಮ ಜೀವರಿಂದ ಉಕ್ತನಾದ ಮುಕ್ತಿಯೋಗ್ಯ ಜೀವನು, ತುರೀಯಂ ಧಾಮ ವಿವಕ್ತಿ - ಪರಮಾತ್ಮನನ್ನು ಸಾಕ್ಷಾತ್ತಾಗಿ ಕಂಡು ತಿಳಿಯುತ್ತಾನೆ; ಅಥವಾ ಅಪಾಂ ಊರ್ಮಿಂ, - ಸಮುದ್ರಂ -

ಸ್ವರೇಣ – ಸ್ವರಪೂರ್ವಉಚ್ಚರಿತವಾದ, ಪ್ರಣವಾಖ್ಯೇನ – (ಓಂ) ಪ್ರಣವವೆಂಬ, ಮಂತ್ರೇಣ – ಮಂತ್ರದಿಂದ, ಹೃದಿಗಂ – ಹೃದಯಸ್ಥಿತನಾದ, ಪರತಃ– ಲಕ್ಷ್ಮೀದೇವಿಯಿಂದಲೂ, ಪರಂ–ಉತ್ತಮನೂ (ಆದ), ಸದಾ–(ಸತ್‌ಶಬ್ದವಾಚ್ಯ ಪರಬ್ರಹ್ಮನನ್ನು ಈ ಲೋಕದಲ್ಲಿ) ಸರ್ವದಾ – ಮಹತಃ – ಮಹತ್ತಿನಿಕ್ಕಿಂತಲೂ (ಬ್ರಹ್ಮನಿಂದ ಸಹ) ಮಹತ್ತರಂ–ಮಹಾತ್ಮನಾದ (ದೊಡ್ಡವನಾದ– ಲಕ್ಷ್ಮೀ ಬ್ರಹ್ಮಾದಿಗಳಿಂದ ಸಹ ವಂದ್ಯನಾದ), ವಿಷ್ಣುಂ–ಶ್ರೀವಿಷ್ಣುವನ್ನು, ಧೃತೋರ್ಧ್ವ ಪುಂಡ್ರಃ–ಧರಿಸಿದ ಊರ್ಧ್ವ ಪುಂಡ್ರಾದಿ (ದ್ವಾದಶನಾಮಗಳುಳ್ಳವನೂ, ಶೃತ (ಶೃಪಾಕೇ ಎಂಬ ಧಾತುವಿನಿಂದ) ಸಚ್ಚಕ್ರಧಾರೀ–ತಪ್ತವಾದ ಶ್ರೀವಿಷ್ಣು ಚಕ್ರವನ್ನು ಧರಿಸಿದ, ಯಃ ಪುಮಾನ್–ಯಾವ ಪುರುಷನು, ಇಹ–ಈ ಲೋಕದಲ್ಲಿ, ಧ್ಯಾಯತಿ–ಧ್ಯಾನಮಾಡುವನೋ, ಸಃ–ಆತನು, ಸರ್ವತ್ರ–ಎಲ್ಲ ದೇಶದಲ್ಲಿ, ಮಹಾತ್ಮಾ–ಮಹಾತ್ಮನು, ಇತಿ–ಎಂದು, ಸಾಂಪ್ರತಂ–ಈಗಲೂ, ಪ್ರಸಿದ್ಧಾ– ಪ್ರಸಿದ್ಧವಾದ, ಉಪನಿಷತ್ ಚ–(ಸೌರಾಷ್ಟ್ರದೇಶದಲ್ಲಿ ವೈದಿಕರಿಂದ ಪಠ್ಯಮಾನವಾದ ಉಪನಿಷತ್ತು ಸಹ), ಆಹ–ಹೇಳುತ್ತದೆ; ಶೃಪಾಕ ಇತಿ ಧಾತುತಃ–ಶೃಎಂಬ ಧಾತ್ವರ್ಥವು ಪಾಕ(ದಹಿಸುವುದೆಂಬ) ವೆಂದಿರುವುದರಿಂದ, ತಪ್ತಚಕ್ರಾಂಕೋರ್ಧ್ವ ಪುಂಡ್ರಸ್ತುತಿಪರಾ – ತಪ್ತಚಂಕ್ರಾಂಕನ ಮತ್ತು ಊರ್ಧ್ವಪುಂಡ್ರ ಸ್ತುತಿ ಪರವಾದುದು, (ಈ ಶ್ರುತಿಯು); ಸ್ಪಷ್ಟಂ–(ಎಂದು) ಸ್ಪಷ್ಟವಾಗಿದೆ.

---

ಪ್ರಸಿದ್ಧವಾದ ಉಪನಿಷದ್ವಾಕ್ಯವೂ ಸ್ಪಷ್ಟವಾಗಿ ಹೇಳುತ್ತದೆ; ಶೃಪಾಕೇ ಎಂದು ಧಾತುವಿರುವುದರಿಂದ, 'ಶೃತ ಚಕ್ರ' ಪದದಿಂದ ತಪ್ತ ಚಕ್ರವನ್ನೇ ಉಪನಿಷತ್ತು ಹೇಳಿ, ಊರ್ಧ್ವಪುಂಡ್ರವನ್ನು ಧರಿಸತಕ್ಕ ವಿಷ್ಣುಭಕ್ತನ ಮಾಹಾತ್ಮ್ಯವನ್ನು ಸ್ಪಷ್ಟ

---

ಜಲತರಂಗಗಳಿಂದ ಪೂರ್ಣವಾದ, ಸಮುದ್ರವನ್ನು ಸಚಮಾನಂ - ಪಾನದಿಂದ ನಷ್ಟಗೊಳಿಸಿದ ಅಗಸ್ತ್ಯನು, ಅಥವಾ ಅಭಿಮಾನಿಯಾದ ವರುಣನು, ಗಂಗಾತರಂಗಗಳ ಸಂಬಂಧವನ್ನು ಹೊಂದಿಸಿ, ಶಿವನನ್ನು, ಜಟೆಯಲ್ಲಿ ಧರಿಸುವಂತೆ ಮಾಡಿ ಪವಿತ್ರೀಕರಿಸಿದ (ಸಚಮಾನಃ - ಸಂಬಂಧದಿಂದ ಪವಿತ್ರಗೊಳಿಸಿ - 'ತವಶ್ರಿಯೋ ಮರುತೋಮರ್ಜಯಂತ' ಎಂಬ ಶ್ರುತಿಯು ಹೇಳುವಂತೆ, ತಪಸ್ಸಿಗಾಗಿ ಸಮುದ್ರವನ್ನು ಪ್ರವೇಶಿಸಿ, ಒಳಗೆ ಚಕ್ರಾದಿ ಗೋವಿಂದನ ಆಯುಧಗಳನ್ನು ಧರಿಸಿ ತಪಸ್ಸನ್ನಾಚರಿಸದಂತೆ ಮಾಡಿದ, ಅರ ಮತ್ತು ಣ್ಯ ಎಂಬ ಮುಕ್ತಸ್ಥಾನಗತ ಸಮುದ್ರವನ್ನು ಸಚಮಾನಃ - ಮುಕ್ತಜೀವನು ಹೊಂದುವಂತೆ ಮಾಡುವ ಶ್ರೀಮಧ್ವಸೇನಾನಾಯಕರ ಮಹಿಮೆಯನ್ನು ಈ ಶ್ರುತಿಯು ಪ್ರತಿಪಾದಿಸಿರುತ್ತದೆ.

**ದ್ವಿರೇಖಮೂರ್ಧ್ವಪುಂಡ್ರಂ ಚ ಭವತಿ ದ್ವಿಭುಜೇ ಸದಾ ।**
**ತಪ್ತಚಕ್ರಂ ಧಾಯಯತೀತ್ಯಾಹ ಕಾಚನ ವೇದವಾಕ್ ॥ ೬೩೯ ॥**
**ಕಾಣ್ವಾನಾಂ ಸಾ ಶತಪಥಬ್ರಾಹ್ಮಣೇ ಕಿಲ ವರ್ತತೇ ।**
**ಯದ್ವೇದಸ್ಯ ಶಿರೋ ವಕ್ತಿ ತದೇವ ಹಿ ವಪುರ್ಮತಂ ॥ ೬೪೦ ॥**
**ತಸ್ಮಾದಿಯಂ ಚ ವಾಕ್ ಸ್ತೌತಿ ತಪ್ತಚಕ್ರಾಯುಧಾಂಕನಂ ।**
**ಅಚಕ್ರಧಾರಿವ್ಯಾಖ್ಯಾದಿ ಪ್ರತ್ಯಾಖ್ಯಾನಚಿಕೀರ್ಷಯಾ ॥ ೬೪೧ ॥**

'ದ್ವಿರೇಖಮೂರ್ಧ್ವಪುಂಡ್ರಂಭವತಿ, ತಪ್ತಂ ಚಕ್ರಂ ದ್ವಿಭುಜೇಧಾಯಯತಿ' ಎಂಬ [1] ಕಾಣ್ವರ ಶತಪಥ ಬ್ರಾಹ್ಮಣದಲ್ಲಿ ಈಗಲೂ ವೈದಿಕರಿಂದ ಬಿಡದೇ ಪಠಿಸಲ್ಪಡುವ ವಾಕ್ಯವು, ಊರ್ಧ್ವ ಪುಂಡ್ರ, ತಪ್ತ ಚಕ್ರ ಧಾರಣವನ್ನು ಸಮರ್ಥಿಸುತ್ತದೆ ಅದನ್ನು ಅರ್ಥತಃ ವಾಕ್ಯವನ್ನು ಸಂಗ್ರಹಿಸುತ್ತಾರೆ:—

---

ವಾಗಿ ಹೇಳಿದೆ (೬೩೬–೬೩೮). ಊರ್ಧ್ವಪುಂಡ್ರವು ದ್ವಿರೇಖೆಗಳುಳ್ಳದ್ದೆಂದೂ, ಎರಡೂ ಬಾಹು ಮೂಲಗಳಲ್ಲಿ ತಪ್ತಚಕ್ರವು ಸದಾ ಚಿಹ್ನಿತವಾಗಿರತಕ್ಕದ್ದೆಂದು, ಒಂದು ವೇದವಾಕ್ಯವು ಶಾಸನಮಾಡುತ್ತದೆ; ಅದಾವುದೆಂದರೆ, ಕಾಣ್ವರ, (ಕಾಣ್ವಶಾಖೆಯವರು) ಬಿಡದೇ ಪಠಿಸುವ ಶತಪಥವೆಂಬ ಬ್ರಾಹ್ಮಣ ಭಾಗದಲ್ಲಿ, ಈ ವಾಕ್ಯವಿದೆ; ವೇದ ಶಿರಸ್ಸೆಂಬುದು ಉಪನಿಷತ್ತಿನ ಅನ್ವರ್ಥವಾದ ನಾಮವು; ಸಂಹಿತಾ ಭಾಗವು ಅನ್ಯದೇಹಭಾಗವಿದ್ದಂತೆ; ಶಿರಸ್ಸಿನ ಆಜ್ಞೆಯಂತೆ (ಅದು ಹೇಳುವಂತೆ), ಹಸ್ತಪಾದಾದಿ ಅವಯವಗಳು ನಡೆಯುತ್ತವೆಂಬುದು ಸರ್ವಾನುಭವಸಿದ್ಧವಲ್ಲವೇ? ಅದರಂತೆ, ಉಪನಿಷದ್ವಾಕ್ಯವನ್ನು ಅನುಸರಿಸಿ, ಸಂಹಿತೆಯಾದರೂ ಹೇಳುತ್ತದೆ; ಉಪನಿಷದನುಸಾರವಾದ ಅರ್ಥವನ್ನೇ, ಸಂಹಿತಾ ಭಾಗದ ವಾಕ್ಯಗಳಿಗೆ ತಿಳಿಯಬೇಕೆಂಬ ನಿಯಮವೂ ಇದೆ; ಪ್ರಕೃತ ಉಪನಿಷತ್ತು ಊರ್ಧ್ವಪುಂಡ್ರ, ತಪ್ತಚಕ್ರಾದಿ ಧಾರಣವನ್ನು ಸ್ಪಷ್ಟವಾಗಿ ವಿಧಿಸುತ್ತದೆ; ಆದ್ದರಿಂದ ಸಂಹಿತಾ ಭಾಗದ ವಾಕ್ಯವಾದ 'ಚಮೂಷತ್' ಇತ್ಯಾದಿ ವಾಕ್ಯದಲ್ಲಿರುವ, ಗೋವಿಂದುಃ ಪವಿತ್ರ, ದ್ರಪ್ಸ, ಆಯುಧಾನಿ ಇತ್ಯಾದಿ ಶಬ್ದಗಳಿಗೆ

---

[1] ಊರ್ಧ್ವಪುಂಡ್ರಂ – ಊರ್ಧ್ವಪುಂಡ್ರವೆಂಬುದು, ದ್ವಿರೇಖಂ – ಎರಡು ರೇಖೆಗಳುಳ್ಳದ್ದು; ತಪ್ತಂಚಕ್ರಂ–ತಪ್ತ ಚಕ್ರವನ್ನು, ದ್ವಿಭುಜೇ–ಎರಡೂ ಭುಜಗಳಲ್ಲಿ, ಧಾಯಯತಿ–ಧರಿಸುತ್ತಾನೆ, ಎಂದರ್ಥವು.

ದ್ವಿರೇಖಂ-ಎರಡು ರೇಖೆಗಳುಳ್ಳದ್ದು, ಊರ್ಧ್ವಪುಂಡ್ರಂ-ಊರ್ಧ್ವಪುಂಡ್ರವು (ಹಣೆಯಲ್ಲಿ ಧರಿಸುವ ಮೇಲೇರುವ ನಾಮದ ಚಿನ್ಹೆಯು), ಭವತಿ ಆಗಿರುತ್ತದೆ; ಸದಾ-ನಿತ್ಯವೂ ತೋರುವ, ದ್ವಿಭುಜೇ-ಎರಡೂ ಬಾಹುಗಳಲ್ಲಿ, ತಪ್ತಚಕ್ರಂ-ತಪ್ತಚಕ್ರವನ್ನು, ಧಾರಯತಿ – ಧರಿಸುತ್ತಾನೆ, ಕಾಚನವೇದವಾಕ್ – ಒಂದು ವೇದವಾಕ್ಯವೂ, ಇತಿ ಆಹ-ಹೀಗೆ ಹೇಳುತ್ತದೆ; ಸಾ-ಆ ವಾಕ್ಯವು, ಕಾಣ್ವಾನಾಂ-ಕಾಣ್ವಶಾಖೆಯವರ, ಶತಪಥ ಬ್ರಾಹ್ಮಣೇ-ಶತಪಥಬ್ರಾಹ್ಮಣದಲ್ಲಿ, ವರ್ತತೇಕಿಲ-ಸ್ಪಷ್ಟವಾಗಿಯೇ ಇರುತ್ತದೆ; ಯತ್-ಯಾವುದನ್ನು, ವೇದಸ್ಯ ಶಿರಃ-ವೇದದ ಶಿರಸ್ಸು (ಉಪನಿಷತ್ತು), ತದೇವ – ಅದನ್ನೇ, ವಪುಃ – ದೇಹದ (ಸಂಹಿತಾ ವಾಕ್ಯಗಳ), ಮತಂ ಹಿ-ಅಭಿಪ್ರಾಯವೆಂಬುದು ಸಿದ್ಧ; (ಉಪನಿಷದರ್ಥವನ್ನು ಸಂಹಿತಾದಿವೇದಭಾಗವು ಅನುಸರಿಸುತ್ತದೆ—ದೇಹದಲ್ಲಿ ಶಿರಸ್ಸಿನ ಅಭಿಪ್ರಾಯದಂತೆ, ಹಸ್ತಪಾದಾದಿ ಅವಯವಗಳು ವರ್ತಿಸುವಂತೆ); ತಸ್ಮಾತ್-ಆದ್ದರಿಂದ, ಇಯಂ ಚ ವಾಕ್-ಈ ವೇದ ವಾಕ್ಯವೂ, ತಪ್ತಚಕ್ರಾಯುಧಾಂಕನಂ-ತಪ್ತಚಕ್ರದಿಂದ (ದೇಹದಲ್ಲಿ ಧರಿಸಿ) ಗುರ್ತಿಸಿಕೊಳ್ಳುವುದನ್ನು, ಸ್ತೌತಿ-ಪ್ರಶಂಸುತ್ತದೆ; ಅಚಕ್ರಧಾರಿ ವಾಖ್ಯಾದಿ ಪ್ರತ್ಯಾಖ್ಯಾನ ಚಿಕೀರ್ಷಯಾ-ಚಕ್ರವನ್ನು ಧರಿಸದ (ತಪ್ತಚಕ್ರಧಾರಣವನ್ನೂ ಮಾಡದ) ವನ, (ಸಂಹಿತಾಗತವಾದ ಗೋವಿಂದುಃ ಆಯುಧಾನಿ, ದ್ರಪ್ಸ ಆಯುಧಾನಿ, ಇತ್ಯಾದಿಗಳ ಸ್ವಕಪೋಲ ಕಲ್ಪಿತವಾದ ವ್ಯಾಖ್ಯಾನದ, ಪ್ರತ್ಯಾಖ್ಯಾನಕ್ಕಾಗಿ (ವಿರೋಧವನ್ನು ಆಚರಿಸಲಿಕ್ಕೆ ಮಾತ್ರ) (ಆಗಿರುತ್ತದೆ); (ಉಪನಿಷತ್ತನ್ನನುಸರಿಸಿ, ಗೋವಿಂದುರ್ದ್ರಪ್ಸ ಆಯುಧಾನಿ ಎಂಬುದಕ್ಕೆ ಚಕ್ರಾದಿಗಳ ಧಾರಣಪರವಾದ ಅರ್ಥವನ್ನೇ ತಿಳಿಯಬೇಕು, ಪವಿತ್ರಂ ಎಂಬುದರಿಂದ ಚಕ್ರವನ್ನೇ ಗ್ರಹಿಸಬೇಕು).

**ಅತ್ರಾಪಿ ಚ ಪವಿತ್ರಂತ ಇತಿ ವಾಗ್ವಾಯುಗಂ ಹರಿಂ ।**
**ಸ್ತುವಂತೀ ತಪ್ತಚಕ್ರಾಂಕಧಾರಣಂ ವಕ್ತಿ ಸುಸ್ಫುಟಂ ॥ ೬೪೨ ॥**

---

ಸ್ವೇಚ್ಛೆಯಿಂದ ಅರ್ಥಮಾಡಲು ಅವಕಾಶವಿಲ್ಲ; ಈ ವ್ಯಾಖ್ಯಾನಗಳು ಸ್ವಕಪೋಲ ಕಲ್ಪಿತಗಳೆಂದು ಪ್ರತಿಹೇಳಲಿಕ್ಕಾಗಿಯೇ, ಈ ಉಪನಿಷದ್ವಾಕ್ಯವು, ಊರ್ಧ್ವ ಪುಂಡ್ರ, ತಪ್ತ ಚಕ್ರಾದಿಧಾರಣವನ್ನು ಪ್ರಶಂಸಿಸುತ್ತದೆ (೬೩೯-೬೪೧). ಈ ಪೂಯಮಾನ ಸೂಕ್ತದಲ್ಲಿಯೂ, 'ಪವಿತ್ರಂತೇ' ಎಂಬ ವಾಕ್ಯವಿದೆ; ಅದು

ಪೂಯಮಾನ ಸೂಕ್ತದಲ್ಲಿಯೂ, ‘ ಪವಿತ್ರಂತ ಇತಿ ’ ಎಂಬ ವಾಕ್ಯವಿದೆ ;[1] ಅದನ್ನು ಅರ್ಥತಃ ಈ ಶ್ಲೋಕವು ಸಂಗ್ರಹಿಸಿರುತ್ತದೆ :—

ಅತ್ರಾಪಿ ಚ—ಈ ಪೂಯಮಾನ ಸೂಕ್ತದಲ್ಲಿಯೇ, ಪವಿತ್ರಂತೇ ಇತಿ— ‘ ಪವಿತ್ರಂತೇ ’ ಎಂಬ, ವಾಕ್—ವಾಕ್ಯವು, ವಾಯುಗಂ—ವಾಯುಸ್ಥಿತನಾದ,

---

ವಾಯುಸ್ಥಿತನಾದ ಶ್ರೀಹರಿಯನ್ನು ಸ್ತುತಿಸುವುದಲ್ಲದೇ, ತಪ್ತ ಮುದ್ರಾ ಧಾರಣವನ್ನು ಅತಿ ಸ್ಪಷ್ಟವಾಗಿ ನಿರೂಪಿಸುತ್ತದೆ (ಆದ್ದರಿಂದ ಪವಮಾನ ಸೂಕ್ತಾರ್ಥವು ಹಿಂದೆ ಹೇಳಿದಂತೆಯೇ ಆಗಿರುತ್ತದೆ— ಪವಮಾನಪೂಯಮಾನ

---

[1] ‘ ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ | ಅತಪ್ತ ತನೂರ್ನತದಾಮೋ ಅಶ್ನತೇ ಶ್ರುತಾಸ ಇದ್ವಹಂ ತಸ್ತತ್ಸಮಾ ಶತೇತಿ | ’ ಎಂಬ ಶ್ರುತ್ಯರ್ಥವು ಸಂಗೃಹೀತವಾಗಿದೆ,—ಇದರ ಅರ್ಥವೇನೆಂದರೆ,—ಹೇ ಬ್ರಹ್ಮಣಸ್ಪತೇ :—ವೇದಗಳ ಪತೇಃ (ಅಥವಾ ಚತುರ್ಮುಖನ ಪ್ರಭುವೇ !) ಹೇ ನಾರಾಯಣ ! ತೇ ಪವಿತ್ರಂ—ನಿನ್ನ ಸುದರ್ಶನವು, ವಿತತಂ—ಜಗತ್ತಿನಲ್ಲಿ ವಿಶೇಷವಾಗಿ ವ್ಯಾಪ್ತವಾಗಿದೆ (ಸೂರ್ಯನು ಪ್ರಕಾಶದಿಂದ ವ್ಯಾಪ್ತನಾದಂತೆ ಮಾತ್ರವಲ್ಲ, ಕಿಂತು ಸ್ವರೂಪದಿಂದಲೇ ವ್ಯಾಪ್ತವೆಂಬುದನ್ನು ‘ ವಿ ’ ಎಂಬ ಉಪಸರ್ಗವು ಹೇಳುತ್ತದೆ) ; ಪ್ರಭುಃ—ಪ್ರಭುವಾದ (ಶಕ್ತನಾದ) ನೀನು, ವಿಶ್ವತಃ ಗಾತ್ರಾಣಿ—ಸರ್ವ ಪ್ರಾಣಿಗಳ ಶರೀರಗಳನ್ನು, ಪರ್ಯೇಷಿ—(ಪರಿತಃ—ಸುತ್ತಲೂ ವ್ಯಾಪಿಸಿರುವಿ ; (ಸುದರ್ಶನಧಾರಿಯಾದ ನಾರಾಯಣನು ಸರ್ವಶರೀರಗಳಲ್ಲಿ ಸರ್ವಾಂತರ್ಯಾಮಿತಯಾ ವ್ಯಾಪ್ತನಾಗಿರುವುದರಿಂದ ಸುದರ್ಶನವೂ ಸರ್ವತ್ರ ವ್ಯಾಪ್ತವೇ ಎಂದು ಭಾವ) ; (ಅದರಿಂದ) ಅತಪ್ತತನುಃ—ಬಾಹುಮೂಲದಲ್ಲಿ ದಹಿಸಲ್ಪಡದ (ಅತಪ್ತ) ದೇಹವುಳ್ಳವನು (ಹಿಂದೆ ಸುದರ್ಶನಮಾತ್ರದ ಪ್ರಸ್ತಾವವಿರುವುದರಿಂದಲೂ, ಶಿಷ್ಟಾಚಾರಬಲದಿಂದ ತಪ್ತ ಚಕ್ರವೇ (ಕೇವಲ ಜಡ ಚಕ್ರವಲ್ಲ) ಎಂಬುದುದನ್ನು ಸ್ಪಷ್ಟಗೊಳಿಸಲು ‘ ಅತಪ್ತತನು ’ ಎಂದಿದೆ). ಆಮಃ—ತಪ್ತವಲ್ಲವ (ಹಸಿಯಾದ ಚಕ್ರದಿಂದ), ತತ್—ಮೋಕ್ಷ ಸುಖವನ್ನು ನಾಶ್ನುತೆ—ಹೊಂದುವುದಿಲ್ಲ (ಮೋಕ್ಷಸುಖದಿಂದ ಸಂಬಂಧ ರಾಹಿತ್ಯವನ್ನು ಸೂಚಿಸಲಿಕ್ಕೆ. ಅಶ್ನುತೇ ಎಂಬಲ್ಲಿ ಸಂಧಿಮಾಡದಿರುವುದು) ಶ್ರಿತಾಸಃ—ಚಕ್ರದಿಂದ ದಹಿಸಲಾದ ಭುಜವುಳ್ಳವರು, ಇತ್—ಹೀಗೆ (ತಪ್ತಸುದರ್ಶನದಂತೆ), ವಹಂ — ಧರಿಸುವ (ಗೋಪೀಚಂದನಾದಿಗಳಿಂದ ಧರಿಸುವ ಮನುಜರು - ವೈಷ್ಣವ ಜನರು, ತಂ - ಮೋಕ್ಷ ಸುಖವನ್ನು, ಸಮಾಶತ - ಸಮ್ಯಕ್ (ಚೆನ್ನಾಗಿ) ಭೋಗಿಸುತ್ತಾರೆ (ಅಶ ಭಕ್ಷಣವೆಂಬ ಧಾತುವಿನಿಂದ ಉತ್ಪನ್ನವಾದ ಪದವಿದು) ; (ಅಶ್ನುವತೇ ಎಂದು ಹೇಳುವ ಸ್ಥಲದಲ್ಲಿ ‘ ಆಶತ ’ ಎಂಬ ಅಲೌಕಿಕ ಪ್ರಯೋಗವು, ಮೋಕ್ಷ ಸುಖವು ಸಾಂಸಾರಿಕ ಸುಖದಂತೆ ಭೋಗಿಸುವುದಿಲ್ಲವೆಂಬ ಅಲೌಕಿಕ

*

(ವಾಯುವಿನಿಂದ ಗಮ್ಯನಾದ), ಹರಿಂ–ಶ್ರೀಹರಿಯನ್ನೂ ಸ್ತುವಂತೀ–ಪ್ರಶಂಸಿಸುವದಾಗಿ, ಚಕ್ರಾಂಕಧಾರಣಂ – ತಪ್ತ ಚಕ್ರ (ಮುದ್ರಾ) ಧಾರಣವನ್ನು, ಸುಸ್ಫುಟಂ–ಅತಿಸ್ಪಷ್ಟವಾಗಿ, ವಕ್ತಿ–ಹೇಳುತ್ತದೆ.

**ಬ್ರಹ್ಮಣೋ ವೇದರಾಶೀನಾಂ ಪತೇ ಲಕ್ಷ್ಮೀಪತೇ ತವ ।**
**ಪವಿತ್ರಹಸ್ತಗಂ ಚಕ್ರಂ ವ್ಯಾಪ್ತಂ ಸರ್ವತ್ರ ಸರ್ವದಾ ॥ ೬೪೩ ॥**

'ಪವಿತ್ರಂತ' ಎಂಬ ಶ್ರುತಿವಾಕ್ಯದ ಅಭಿಪ್ರಾಯವನ್ನೇ ವಿಶದಗೊಳಿಸುತ್ತಾರೆ :—

ಬ್ರಹ್ಮಣಃ – ವೇದರಾಶೀನಾಂ – ಬ್ರಹ್ಮಣಃ ಎಂದರೆ ವೇದರಾಶಿಗಳ (ಪತೇ–ಎಂದರೆ), ಲಕ್ಷ್ಮೀಪತೇ – ಹೇ ಲಕ್ಷ್ಮೀಪತೇ ! ತವ–ನಿನ್ನ, ಪವಿತ್ರಂ–ಪವಿತ್ರವೆಂದರೆ, ಹಸ್ತಗಂ ಚಕ್ರಂ–ಕೈಯಲ್ಲಿರುವ ಚಕ್ರವು, ಸರ್ವತ್ರ–ಎಲ್ಲರಲ್ಲಿ, ಸರ್ವದಾ–ಸರ್ವಕಾಲದಲ್ಲಿ, ವ್ಯಾಪ್ತಂ–ವ್ಯಾಪ್ತವಾಗಿದೆ.

**ಪ್ರಭುಸ್ತ್ವಂ ದೇಹಿ ಗಾತ್ರಾಣಿ ಯತಃ ಪರ್ಯೇಷಿ ವಿಶ್ವತಃ ।**
**ಚಕ್ರವ್ಯಾಪ್ತೌ ಹೇತುಭೂತಾ ಚಕ್ರಿವ್ಯಾಪ್ತಿರಿತೀರಿತಾ ।**
**ನಾನ್ಯತ್ಪವಿತ್ರಂ ಪ್ರಾಣ್ಯಂಗವ್ಯಾಪಿ ನಾಪಿ ಜಗತ್ತ್ರಯೇ ॥ ೬೪೪ ॥**

---

ಸೂಕ್ತ ಯಾವ ವಿರೋಧವೂ ಇಲ್ಲ) (೬೪೨). ವೇದರಾಶಿಯ ಪತಿಯಾದ ಹೇ ಲಕ್ಷ್ಮೀಪತೇ (ವೇದಾಭಿಮಾನಿಯು, ಲಕ್ಷ್ಮೀದೇವಿಯು), ಪವಿತ್ರನಾಮಕ ಚಕ್ರವನ್ನು ಹಸ್ತದಲ್ಲಿ ಧರಿಸಿದೆ ; ಈ ಚಕ್ರವು ಸರ್ವದಾ ಸರ್ವತ್ರ ವ್ಯಾಪ್ತವಾದುದು (ಚಕ್ರಧಾರಿಯು ಸರ್ವತ್ರ ವ್ಯಾಪ್ತನಾದ್ದರಿಂದ, ಚಕ್ರವೂ ಸರ್ವಾಂತರ್ಯಾಮಿಯಾದ ಸರ್ವರಲ್ಲಿಯೂ ಇರುತ್ತದೆಂಬುದು ಯುಕ್ತವೇ ಆಗುತ್ತದೆ) (೬೪೩). ಸರ್ವತ್ರ ವ್ಯಾಪ್ತನಾದ ನೀನು, (ಹೇ ಲಕ್ಷ್ಮೀಪತೇ), ಜೀವರ ದೇಹಗಳುಳ್ಳ ಪ್ರಾಣಿ

---

ಅರ್ಥವನ್ನು ಸೂಚಿಸುತ್ತದೆ - ಕಿಂತು ಸ್ವರೂಪಭೂತ ಸುಖವೇ ಎಂಬ ವಿಶೇಷವನ್ನು — ಲೋಕವಿಲಕ್ಷಣತ್ವವನ್ನು ಸೂಚಿಸುತ್ತದೆ). ಚಕ್ರಾಂಕಧಾರಣವಿಲ್ಲದೇ ಮೋಕ್ಷ ಸುಖ ಪ್ರಾಪ್ತಿಯಿಲ್ಲವೆಂದು ತಿಳಿಯುತ್ತದೆಯಾಗಿ ಮೊದಲಿಗೆ ಅದನ್ನು ತಪ್ಪದೇ ಆಚರಿಸತಕ್ಕದ್ದೆಂಬ ಕರ್ತವ್ಯವು ಸಿದ್ಧವಾಗುತ್ತದೆ ; ಸ್ವರೂಪದ ಆವಿರ್ಭಾವವೇ ಮೋಕ್ಷವು ; ಬಿಂಬರಲ್ಲಿ ಸಹ (ಸ್ವರೂಪದಲ್ಲಿಯೂ) ಚಕ್ರಾದಿ ಚಿನ್ಹೆಯು ಇರುತ್ತದೆಂದೂ ಇದರಿಂದ ಸಿದ್ಧವಾಗುತ್ವದೆ. 'ಪ್ರಭುರ್ಗಾತ್ರಾಣಿ ಪರ್ಯೇಷಿ' ಎಂಬುದೂ ಈ ಆವಶ್ಯಕ ನಿಯಮವನ್ನೇ ಸಾಧಿಸುತ್ತದೆ.

ಪ್ರಭುಃ–ವ್ಯಾಪ್ತನಾದ, ತ್ವಂ–ನೀನು (ಶ್ರೀವಿಷ್ಣುವು), ಯತಃ–ಯಾವ ಕಾರಣದಿಂದ, ವಿಶ್ವತಃ–ಸರ್ವರ, ದೇಹಿಗಾತ್ರಾಣಿ–ದೇಹಿಗಳ (ಜೀವರ) ಶರೀರಗಳನ್ನು, ಪರ್ಯೇಷಿ–ಅಂತರ್ಯಾಮಿಯಾಗಿ (ಒಳಹೊರಗೆ) ವ್ಯಾಪಿಸಿರುವೆಯೋ, ಇತಿ–ಈ ಕಾರಣದಿಂದ, ಚಕ್ರವ್ಯಾಪ್ತೌ–ಚಕ್ರದ ವ್ಯಾಪ್ತಿಯಲ್ಲಿ ಹೇತುವಾದ, ಚಕ್ರಿವ್ಯಾಪ್ತಿಃ–ಚಕ್ರಧಾರಿಯಾದ ನಿನ್ನ (ಶ್ರೀವಿಷ್ಣುವಿನ) ವ್ಯಾಪ್ತಿಯು, ಈರಿತಾ–ಶ್ರುತಿಯಲ್ಲಿ ಉಕ್ತವಾಗಿದೆ; ಅನ್ಯತ್ ಪವಿತ್ರಂ–ಪವಿತ್ರಶಬ್ದ ವಾಚ್ಯವೆಂಬ ದಶಾಪವಿತ್ರಾದಿಯು, ಪ್ರಾಣ್ಯಂಗವ್ಯಾಪಿ–ಪ್ರಾಣಿದೇಹಗಳಲ್ಲಿ ವ್ಯಾಪ್ತವಾದುದು, ನ–ಅಲ್ಲ: ಜಗತ್ತ್ರಯೇ ಅಪಿ ನ–ಜಗತ್ತಿನಲ್ಲಿ ಸರ್ವಗತ ಅವರ ವ್ಯಾಪ್ತಿಯೂ ಇಲ್ಲ.

**ತೇನಾತಪ್ತತನೂರಾಮಃ ಪಾಕಹೀನೋಽಶ್ನುತೇ ನ ತತ್ ।**
**ಆಮುಷ್ಮಿಕಫಲಂ ಯದ್ಧಿ ಪ್ರಸಿದ್ಧಂ ಮೋಕ್ಷಸಂಜ್ಞಿತಂ ॥ ೬೪೫ ॥**

ತೇನ–ಪೂರ್ವೋಕ್ತ ಸುದರ್ಶನದಿಂದ, ಅತಪ್ತತನೂಃ–ದಹಿಸಲ್ಪಡದ ದೇಹವುಳ್ಳ, ಪಾಕಹೀನ ಆಮಃ–ಪಾಕಹೀನವಾದ ಆಮದೇಹವು (ಹಸಿದೇಹವುಳ್ಳವನು), ಯತ್–ಯಾವ, ಮೋಕ್ಷ ಸಂಜ್ಞಿತಂ–ಮೋಕ್ಷವೆಂಬ ನಾಮದಿಂದ, ಪ್ರಸಿದ್ಧಂ–ಪ್ರಸಿದ್ಧವಾದ ಆಮುಷ್ಮಿಕ ಫಲಂ–ಪರಲೋಕದ ನಿತ್ಯಸುಖರೂಪದ ಫಲವೋ, ತತ್–ಅದನ್ನು, ನ ಅಶ್ನುತೇ–ಹೊಂದುವುದಿಲ್ಲವು ; ಹಿ–ಹೀಗೆಂಬುದು ಪ್ರಸಿದ್ಧವು.

**ಶೃತಾಸಸ್ತೇನ ಪಕ್ವಾಂಗಾ ವಹಂತಶ್ಚ ದಿನೇದಿನೇ ।**
**ಗೋಪೀಚಂದನತೋ ಭಕ್ತಾಸ್ತತ್ಸಮೇತ್ಯ ಸಮಾಶತ ।**
**ಇತ್ಯರ್ಥಂ ವಾಗಿಯಂ ಸ್ಪಷ್ಟಮಾಚಷ್ಟ ಕಿಲ ವೈಷ್ಣವೀ ॥ ೬೪೬ ॥**

---

ದೇಹಗಳನ್ನು ಒಳಹೊರಗೆ ವ್ಯಾಪಿಸಿರುವುದರಿಂದ, ಎಂಬುದು ಚಕ್ರ ವ್ಯಾಪ್ತಿಯನ್ನು ಸಾಧಿಸಲು ಹೇತುಭೂತವಾಗಿದೆ ; ಆದ್ದರಿಂದಲೇ ಶ್ರುತಿಯು, 'ಪ್ರಭುರ್ಗಾತ್ರಾಣಿ ಪರ್ಯೇಷಿ' ಎಂದು ಹೇಳಿರುವುದು ; ದಶಾಪವಿತ್ರ ಮೊದಲಾದ ಪವಿತ್ರ ಶಬ್ದ ವಾಚ್ಯವೆಂದು ಹೇಳುವ ಅನ್ಯವಸ್ತುವು, ಪ್ರಾಣಿ ದೇಹಗಳನ್ನು ವ್ಯಾಪಿಸಿರುವುದಿಲ್ಲ ; ಸರ್ವತ್ರ ಜಗತ್ತಿನಲ್ಲಿ ವ್ಯಾಪ್ತವೂ ಆಗಿರುವುದಿಲ್ಲ ; ಆದ್ದರಿಂದ ಪವಿತ್ರ ಶಬ್ದವು ವಿಷ್ಣುಚಕ್ರವನ್ನೇ ಹೇಳುತ್ತದೆ (೬೪೪). ಚಕ್ರದಿಂದ ಅತಪ್ತವಾದ ದೇಹವುಳ್ಳವನು, ಪರಲೋಕದ ಮುಖ್ಯ ಫಲವೆಂದು ಪ್ರಸಿದ್ಧವಾಗಿರುವ ಮೋಕ್ಷವೆಂಬ ಫಲವನ್ನು ಹೊಂದುವುದಿಲ್ಲ (೬೪೫). ಅಗ್ನಿ ತಪ್ತವಾದ ಚಕ್ರದಿಂದ ದಹಿಸಲ್ಪಟ್ಟ

ಶೃತಾಸಃ–ಅಗ್ನಿಯಲ್ಲಿ ತಪ್ತವಾದ, ತೇನ–ಸುದರ್ಶನದಿಂದ, ಪಕ್ವಾಂಗಾಃ–ದಹಿಸಲಾದ ದೇಹವುಳ್ಳವರು, ದಿನೇ ದಿನೇ–ನಿತ್ಯವೂ, ಗೋಪೀಚಂದನತಃ–ಗೋಪೀಚಂದನದಿಂದ, ವಹಂತಃ (ಚಕ್ರವನ್ನು ಧರಿಸುವವರಾದ, ಭಕ್ತಾಃ–ವಿಷ್ಣು ಭಕ್ತರು, ತತ್–ಆ ಮೋಕ್ಷಸುಖವನ್ನು, ಸಮೇತ್ಯ–ಹೊಂದಿ, ಸಮಾಶತ–ಆನಂದ ದಿಂದ ಭೋಗಿಸುವರು ; ಇತ್ಯರ್ಥಂ–ಹೀಗೆಂಬ ಅರ್ಥವನ್ನು, ಇಯಂ ವಾಕ್–ಈ ಶ್ರುತಿ ವಾಕ್ಯವು, ಸ್ಪಷ್ಟಂ – ಸಂದೇಹಕ್ಕೆಡೆಯಿಲ್ಲದಂತೆ, ಆಚಷ್ಟ – ಹೇಳಿತು ; ವೈಷ್ಣವೀ ಕಿಲ–ವಿಷ್ಣುಭಕ್ತರಿಗೆ (ಅವರ್ಜನೀಯವಾಗಿ) ಸಂಬಂಧಿಸಿದ ವಾಕ್ಯವಷ್ಟೆ.

**ತದೇಷಾ ಪೂಯಮಾನಸ್ಯ ಸೂಕ್ತಸ್ಥಾ ವಾಯುಗಂ ಹರಿಂ ।**
**ಸ್ತೌತಿ ವಾಯುಮತಸ್ಥಾನಾಂ ಧರ್ಮಸ್ತವನತತ್ಪರಾ ॥ ೬೪೭ ॥**
**ವಾಯೋಃ ಸೂಕ್ತಂ ವದೇದ್ವಾಯುಂ ವಾಯುಗಂ ವಾ ಹರಿಂ ವದೇತ್ ।**
**ವದೇದ್ವಾ ವಾತರಸನಮುನಿಧರ್ಮಂ ಸುನಿರ್ಮಲಂ ॥ ೬೪೮ ॥**

ತತ್–ಆದ್ದರಿಂದ, ಏಷಾ–ಈ 'ಪವಿತ್ರಂತೇ' ಎಂಬ, ಪೂಯಮಾನಸ್ಯ ಸೂಕ್ತಸ್ಥಾ–ಪೂಯಮಾನ ಸೂಕ್ತದ ವಾಕ್ಯವು, ವಾಯುಗಂ–ವಾಯುಸ್ಥಿತನಾದ, ಹರಿಂ – ಶ್ರೀಹರಿಯನ್ನು, ( ಪೂಯಮಾನಪ್ರಕರಣ ವಿರೋಧಪರಿಹಾರಕ್ಕಾಗಿ, 'ವಾಯುಗಂ ಹರಿ' ಎಂದಿರುವುದು), ವಾಯುಮತಸ್ಥಾನಾಂ–ವಾಯುಮತಾನು ಯಾಯಿಗಳ, ಧರ್ಮಸ್ತವನತತ್ಪರಾಧರ್ಮವನ್ನು ಪ್ರಶಂಸಿಸುವುದಾಗಿದ್ದು, ಸ್ತೌತಿ–ಸ್ತುತಿಸುತ್ತದೆ; ವಾಯೋಃ ಸೂಕ್ತಂ–ಪವಮಾನಸೂಕ್ತವು, ವಾಯುಂ–ವಾಯುದೇವನನ್ನು, ವದೇತ್–ಪ್ರತಿಪಾದಿಸುತ್ತದೆ, ವಾ–ಮತ್ತು, ವಾಯುಗಂ

---

(ತಪ್ತ ಮುದ್ರಾಧಾರಣೆಯನ್ನು ಹೊಂದಿದ) ದೇಹವುಳ್ಳ ವಿಷ್ಣುಭಕ್ತರು ಪ್ರತಿ ದಿನವೂ ಗೋಪೀ ಚಂದನದಿಂದ ಚಕ್ರಾದಿಗಳನ್ನು ಧರಿಸುವವರಾಗಿ, ಆ ವಿಷ್ಣು ಲೋಕವನ್ನು ಹೊಂದಿ, ಆನಂದಭೋಗವುಳ್ಳವರಾಗಿ ನಿತ್ಯ ವಿರಾಜಿಸುವರು ; ಈ ಅರ್ಥವನ್ನು ಈ ಶ್ರುತಿಯು ಸ್ಪಷ್ಟವಾಗಿ ಹೇಳುತ್ತದೆ; ಈ ಶ್ರುತಿ ವಿಧಿಯು ವೈಷ್ಣವರಿಗೆ ಅವರ್ಜನೀಯವಾದುದಾಗಿದೆ (೬೪೬). ಆದ್ದರಿಂದ, ಪೂಯಮಾನ ಸೂಕ್ತಗತವಾದ 'ಪವಿತ್ರಂತೇ' ಎಂಬ ವಾಕ್ಯವು, ವಾಯುಸ್ಥಿತನಾದ ಶ್ರೀಹರಿಯ, ಹಾಗೂ ವಾಯುಮತಾನುಯಾಯಿಗಳ ಧರ್ಮವನ್ನು ಸ್ತುತಿಸುತ್ತದೆಂದು ಸಿದ್ಧ ವಾಗುತ್ತದೆ ; ಪವಮಾನ ಸೂಕ್ತವು ವಾಯುದೇವನನ್ನಾಗಿ, ವಾಯುಸ್ಥಿತ

ಹರಿಂ ವದೇತ್—ವಾಯುಸ್ಥಿತನಾದ ಶ್ರೀಹರಿಯನ್ನು, ಪ್ರತಿಪಾದಿಸುತ್ತದೆ ; ವಾ—ಮತ್ತು ವಾತರಸನ ಮುನಿಧರ್ಮಂ—ವಾಯುದೇವನಲ್ಲಿ ಆಸಕ್ತರಾದ ಮುನಿಗಳ ಧರ್ಮವನ್ನು, ಸುನಿರ್ಮಲಂ—ಅತ್ಯಂತ ಶುದ್ಧವಾದುದನ್ನು, ವದೇತ್ – ಪ್ರತಿಪಾದಿಸುತ್ತದೆ.[1]

**ಬ್ರಹ್ಮಾಸ್ತ್ರರೂಪಗಾಯತ್ರೀ ಶತ್ರೋಃ ಸಂಹಾರಕರ್ಮಣಿ ।**
**ನಿಯುಕ್ತೇತ್ಯೇವ ಕಿಂ ವಕ್ತಿ ರಿಪುಸೇನಾಪ್ರಣಾಶನಂ ॥ ೬೪೯ ॥**

ಮಂತ್ರವು ಎಲ್ಲಿ ವಿನಿಯೋಗಮಾಡಲ್ಪಡುವುದೋ, ಆ ಅರ್ಥವನ್ನೇ ಅದು ನಿರೂಪಿಸುವುದೆಂಬ ನ್ಯಾಯವು ಹೇಗೆ ಅಪವಾದವುಳ್ಳದ್ದೋ ಹಾಗೆಯೇ ಸುದರ್ಶನ ಮಂತ್ರಾರ್ಥವನ್ನು ಅಪವಾದರೂಪವೆಂದು ತಿಳಿಯಬೇಕೆನ್ನುತ್ತಾರೆ :—

ಬ್ರಹ್ಮಾಸ್ತ್ರರೂಪಗಾಯತ್ರೀ – ಬ್ರಹ್ಮಾಸ್ತ್ರಮಂತ್ರರೂಪವಾದ ಗಾಯತ್ರೀ ಮಂತ್ರವು, ಶತ್ರೋಃ—ಶತ್ರುವಿನ (ಶತ್ರುಸೈನ್ಯದ), ಸಂಹಾರಕರ್ಮಣಿ—ಸಂಹಾರ ಕಾರ್ಯದಲ್ಲಿ, ನಿಯುಕ್ತಾ—ಪ್ರಯೋಗಿಸಲ್ಪಟ್ಟಿದ್ದು, ಇತ್ಯೇವ-ಎಂಬ ಮಾತ್ರದಿಂದ,

---

ಶ್ರೀಹರಿಯನ್ನಾಗಲಿ ಸ್ತುತಿಸುತ್ತದೆ ಮತ್ತು ವಾಯುಮತಾಸಕ್ತರಾದ ಮುನಿ ಧರ್ಮವನ್ನು, ಅತ್ಯಂತ ನಿರ್ಮಲವಾದುದೆಂದು ಘೋಷಿಸುತ್ತದೆ; ಹೀಗೆ ಪವಮಾನ, ಪೂಯಮಾನ ಸೂಕ್ತಗಳಲ್ಲಿ ಯಾವ ವಿರೋಧಕ್ಕೂ ಅವಕಾಶವಿಲ್ಲ (೬೪೭–೬೪೮). ಗಾಯತ್ರೀ ಮಂತ್ರವೇ ಬ್ರಹ್ಮಾಸ್ತ್ರದ ಅಭಿಮಂತ್ರಣದಲ್ಲಿ ಪ್ರಯೋಗಿಸಲ್ಪಡುತ್ತದೆಯಷ್ಟೆ ; ಆ ಬ್ರಹ್ಮಾಸ್ತ್ರವನ್ನು ಶತ್ರುಸೇನಾ ಸಂಹಾರ ಕಾರ್ಯದಲ್ಲಿ ಪ್ರಯೋಗಿಸುವ ಮಾತ್ರದಿಂದ, ಶತ್ರುಸೇನಾ ಪ್ರಣಾಶವನ್ನು ಆ ಮಂತ್ರವು ಪ್ರತಿಪಾದಿಸುವುದಿಲ್ಲ ಎಂಬುದು ಸ್ಪಷ್ಟವೇ ಆಗಿದೆ; ಹೀಗೆಯೇ ಸುದರ್ಶನ ಮಂತ್ರಾರ್ಥವೂ ಅಪವಾದ ರೂಪವಾದುದೇ ಆಗಿದೆ; ಭಕ್ತನ ದೇಹ ಪಾಕದಲ್ಲಿ ವಿನಿಯೋಗಿಸಿದರೂ, ಮುಖ್ಯ ಫಲವಾದ ಮೋಕ್ಷಪ್ರಾಪ್ತಿಯಲ್ಲಿಯೇ

---

[1] ದಶಾಪವಿತ್ರವೆಂದು ವ್ಯಾಖ್ಯಾನಿಸಿದರೆ, ಅದಕ್ಕೆ ವಿಶೇಷ ವ್ಯಾಪ್ತಿಯು ಹೊಂದು ವುದಿಲ್ಲ ; ಸೋಮರಸವನ್ನು ಸಂಗ್ರಹಿಸುವ ಮೃಣ್ಮಯ ಪಾತ್ರಪರವಾಗಿ ಅರ್ಥಮಾಡಿದರೆ, ಗಾತ್ರಪದ ಪ್ರಯೋಗವು ಅಯುಕ್ತವಾಗುತ್ತದೆ. ಮತ್ತು 'ತಪ್ತತನು' ಎಂಬುದು ಪ್ರಕೃತ ಅನುಪಯುಕ್ತವಾಗುತ್ತದೆ ; ಆದ್ದರಿಂದ ಪವಿತ್ರವೆಂದರೆ ಸುದರ್ಶನವೆಂಬ ಅರ್ಥವೇ ಸಾಧು ವಾಗುತ್ತದೆ.

ರಿಪುಸೇನಾಪ್ರಣಾಶನಂ-ಶತ್ರುಸೇನಾನಾಶವನ್ನು, ವಕ್ತಿ ಕಿಂ-ಹೇಳುವುದೇನು (ಪ್ರತಿಪಾದಿಸುವುದೇ ? ಇಲ್ಲ).

**ಸುದರ್ಶನಸ್ಯ ಮೀಮಾಂಸಾ ದ್ರಷ್ಟವ್ಯಾ ವಿಸ್ತರಾರ್ಥಿಭಿಃ ।**
**ಉಪಕರ್ತುಃ ಪ್ರತಿಕೃತೇರಶಕ್ತ್ಯೇಹಾಪಿ ತತ್ಕಥಾ ।**
**ಅತೋಽಸ್ಮದುಕ್ತ ಏವಾರ್ಥ ಇತಿ ಸರ್ವಂ ಮನೋರಮಂ ॥ ೭೫೦ ॥**

'ಪವಿತ್ರಂಬ್ರಹಣಸ್ಪತ್ಯಂ ಲೋಕವ್ಯಾಪ್ತಂ ಸುದರ್ಶನಂ। ತೇನಾತಪ್ತಾತನೂರ್ಯೇಷಾಂ ತೇ ನ ಯಾಂತಿ ಹರೇಃ ಪದಂ ॥' ಎಂಬುದು ಪವಿತ್ರಂತ' ಶ್ರುತಿಯ ವ್ಯಾಖ್ಯಾನರೂಪದ ಪದ್ಮಪುರಾಣ ವಾಕ್ಯವಾದ್ದರಿಂದ ಸಹ ನಾವು ಹೇಳಿದ ಅರ್ಥವೇ ಸಾಧುವಾದುದು–ಅನ್ಯಾರ್ಥವಲ್ಲೆಂಬಲ್ಲಿ ಯುಕ್ತಿಯನ್ನು ಸೂಚಿಸಲಿಕ್ಕೆ ಸಹ ಹೇಳುತ್ತಾರೆ :—

ಸುದರ್ಶನಸ್ಯ–ಸುದರ್ಶನದ, ಮೀಮಾಂಸಾ–ವಿಶೇಷ ವಿಚಾರವು, ವಿಸ್ತಾರಾರ್ಥಿಭಿಃ–ವಿಸ್ತಾರವನ್ನು ತಿಳಿಯಬೇಕೆಂಬ ಇಚ್ಛೆಯುಳ್ಳವರಿಂದ, ಉಪಕರ್ತುಃ ಪ್ರತಿಕೃತೇಃ ಅಶಕ್ತ್ಯಾ–ಸುದರ್ಶನದೇವನಿಗೆ (ಅಭಿಮಾನಿಗೆ) ಆ ಮಂತ್ರೋಪಾಸನೆಯಿಂದ ಬೇರೆಯಾದ ಯಾವ ಉಪಕಾರವನ್ನು ಮಾಡಲು ಶಕ್ಯವಿಲ್ಲದ್ದರಿಂದ, ಇಹಾಪಿ–ಇಲ್ಲಿಯೂ (ಈ ಯುಕ್ತಿಮಲ್ಲಿಕೆಯಲ್ಲಿ ಸಹ), ತತ್ಕಥಾ – ಸುದರ್ಶನ ಕಥೆಯು, (ಪುನಃ ಪುನಃ ಅನುವಾದಿಸಲಾಗುತ್ತದೆ) ಎಂದು ತಿಳಿಯತಕ್ಕುದ್ದು) ; ಅತಃ–ಆದ್ದರಿಂದ, ಅಸ್ಮದುಕ್ತಃ ಅರ್ಥ ಏವ–ನಾವು ಹೇಳಿದ ಅರ್ಥವೇ (ಪವಿತ್ರಂತೇ ಎಂಬ ಶ್ರುತಿಗೆ ಹೇಳಿದ ಅರ್ಥವು, ಇತಿ–(ಸಾಧು) ಎಂದು, ಸರ್ವಂ–ಎಲ್ಲವೂ, ಮನೋರಮಂ–ಆಹ್ಲಾದಕರವೇ (ಆಯಿತು) (ಅಂಗೀಕಾರಯೋಗ್ಯವೇ ಆಯಿತು).

---

ಅದರ ಪ್ರಯೋಜನವಿರುತ್ತದೆ–ಅದನ್ನೇ ಪ್ರತಿಪಾದಿಸುತ್ತದೆ (೬೪೯) 'ಪವಿತ್ರಂತೇ ಬ್ರಹ್ಮಣಸ್ಪತೇ' ಎಂಬ ಶ್ರುತ್ಯರ್ಥವನ್ನೇ ಪದ್ಮಪುರಾಣವು ವ್ಯಾಖ್ಯಾನ ರೂಪದಿಂದ ನಿರೂಪಿಸುತ್ತದೆಂದು ಸೂಚಿಸಿ, ಶ್ರುತಿವ್ಯಾಖ್ಯಾನ ರೂಪದಿಂದ ಶ್ರುತ್ಯರ್ಥವನ್ನೇ ವಿಶದಗೊಳಿಸುವ ಸ್ಮೃತಿಗಳನ್ನು ಅತ್ಯವಶ್ಯಕವಾಗಿ ಗಣನೆಗೆ ತಂದೇ ಶ್ರುತ್ಯರ್ಥ ವಿಚಾರದಲ್ಲಿ ತೊಡಗಬೇಕು ; ಸುದರ್ಶನ ಮಂತ್ರದಿಂದ ಉಪಕೃತನಾಗುವ ಉಪಾಸಕನು ಉಪಾಸನೆಯಿಂದ ಭಿನ್ನವಾದ ಯಾವ ಪ್ರತ್ಯುಪಕಾರವನ್ನೂ ಮಾಡಲು ಅಸಮರ್ಥನಾಗಿರುವನು ; ಆದ್ದರಿಂದ ಸುದೀರ್ಘವಾದ ಸುದರ್ಶನ

**ಅತೋ ವೇದೇನ ವೇದಾಂತವಚನೇನ ಚ ಮಾನಿತಂ ।**
**ಸರ್ವೈರ್ಮಾನ್ಯಂ ಮತಮಿದಂ ಮಾನನೀಯೋ ಗುರುಶ್ಚ ನಃ**
**॥ ೬೫೦ ॥**

ಅತಃ – ಪೂರ್ವೋಕ್ತ ಕಾರಣಗಳಿಂದ, ವೇದೇನ – ವೇದದಿಂದಲೂ, ವೇದಾಂತ ವಚನೇನ ಚ–ಉಪನಿಷದ್ವಾಕ್ಯಗಳಿಂದಲೂ, ಮಾನಿತಂ–ಗೌರವಿಸಲ್ಪಟ್ಟ, ಇದಂ ಮತಂ-(ತತ್ವವಾದಿಗಳ) ಈ ಸಿದ್ಧಾಂತವು, ಸರ್ವೈಃ-ಸರ್ವರಿಂದಲೂ, ಮಾನ್ಯಂ – ಗೌರವಿಸಿ ಅಂಗೀಕರಿಸಲ್ಪಡತಕ್ಕದ್ದೇ ಚ – ಹಾಗೂ, ನಃ – ನಮ್ಮ ( ತತ್ವವಾದಿಗಳ ), ಗುರುಃ – ಗುರುಗಳಾದ ಶ್ರೀಮಧ್ವರು, ಮಾನನೀಯಃ – ಮಾನ್ಯರು (ಪೂಜ್ಯರೇ ಆಗಿರುವರು).

**ಯದ್ವಾಯೋಃ ಪವಮಾನಸ್ಯ ಪೂಯಮಾನಾಭಿದಸ್ಯ ಚ ।**
**ಸೂಕ್ತಸ್ಥರ್ಚಾಮಿಯಂ ಚರ್ಚಾ ತದ್ವಾಯುಸ್ತುತಿರೇವ ನಃ ॥ ೬೫೧ ॥**

ಯತ್–ಯಾವ ಕಾರಣದಿಂದ, ಪವಮಾನಸ್ಯ–ಪವಮಾನನ, ಪೂಯಮಾನಾಭಿದಸ್ಯ ಚ–ಪೂಯಮಾನವೆಂಬ ನಾಮವುಳ್ಳ, ಸೂಕ್ತಸ್ಥರ್ಚಾಂ–ಸೂಕ್ತಗಳಲ್ಲಿರುವ ಋಕ್ಕುಗಳ (ಮಂತ್ರಗಳ), ವಾಯೋಃ ಇಯಂ ಚರ್ಚಾ–ವಾಯುದೇವನ ಈ ಮೀಮಾಂಸೆಯೋ, ತತ್–ಆದ್ದರಿಂದ, ನಃ–ನಮಗೆ (ತತ್ವವಾದಮತಾನುಯಾಯಿಗಳಿಗೆ), ವಾಯುಸ್ತುತಿಃ ಏವ–(ಈ ಎರಡೂ ಸೂಕ್ತಗಳು ನಮ್ಮ ಗುರುಗಳ ಸ್ತುತಿಯೇ ಆಗಿದೆ) ; ವಾಯುಸ್ತುತಿಯೇ ಆಗಿದೆ.

---

ಮಂತ್ರಾರ್ಥ ಮೀಮಾಂಸೆಯನ್ನು ಇಲ್ಲಿ ಮಾಡಬೇಕಾಯಿತು ; ವಿಸ್ತಾರವಾಗಿ ಸುದರ್ಶನ ಶ್ರುತ್ಯರ್ಥವನ್ನು ತಿಳಿಯಬೇಕಾದ ಅವಶ್ಯಕತೆಯೂ ಸಿದ್ಧವಾಗಿ ನಾವು ಹೇಳಿದ ಅರ್ಥವೇ ಗ್ರಾಹ್ಯವೆಂದೂ ಸ್ಥಾಪಿತವಾಯಿತು (೬೫೦). ಹೀಗೆ ವೇದದಿಂದಲೂ, ಉಪನಿಷದ್ವಾಕ್ಯಗಳಿಂದಲೂ ಸಿದ್ಧವಾಗುವ (ಪ್ರಮಾಣಿತವಾಗಿರುವ) ತತ್ವವಾದಿಗಳ ಈ ಸಿದ್ಧಾಂತವು, ಸರ್ವರಿಂದಲೂ ಮಾನ್ಯವೇ ಆಗಿದೆ ಮತ್ತು ನಮ್ಮ (ತತ್ವವಾದಿಗಳ) ಗುರುಗಳಾದ ಶ್ರೀಮಧ್ವರು ಜಗದ್ವಂದ್ಯರೇ ಆಗಿರುವರು (೬೫೧). ಪವಮಾನ, ಮತ್ತು ಪೂಯಮಾನ ಸೂಕ್ತಗಳಲ್ಲಿರುವ ಶ್ರುತಿವಾಕ್ಯಗಳ ವಾಯುದೇವನ ಮಹಿಮಾ ಪ್ರತಿಪಾದಕ ಚರ್ಚೆಯು, ನಮಗೆ (ವಾಯು-

**ಸ್ಪಷ್ಟಂ ಮಧ್ವಾಭಿಧಾನಾಂಕಾಃ ಸಪ್ತರ್ಚೋಽತ್ರ ವಿಚಾರಿತಾಃ ।**
**ಅಷ್ಟರ್ಚಸ್ತಚ್ಚರಿತ್ರಾಂಕಾಶ್ಚಕ್ರಾಂಕೈಕಾ ರಹಸ್ಯವಾಕ್ ॥ ೬೫೩ ॥**

ಅತ್ರ–ಈ ಋಕ್ಸಮೂಹದಲ್ಲಿ, ಸ್ಪಷ್ಟಂ–ಸ್ಪಷ್ಟವಾಗಿ, ಮಧ್ವಾಭಿದಾನಾಂಕಾಃ–ಮಧ್ವನಾಮದಿಂದ ಅಂಕಿತವಾದ, ಸಪ್ತರ್ಚಃ–'ಸಮಧ್ವ ಆಯುವತೇ' ಇತ್ಯಾದಿ[1] ಏಳು ಋಕ್ಕುಗಳೂ, ತಚ್ಚರಿತ್ರಾಂಕಾಃ–(ಶ್ರೀಮಧ್ವರ ಹಿಂದಿನ ಅವತಾರಗಳ) ಚರಿತ್ರೆಯಿಂದ ಅಂಕಿತಗಳಾದ, ಅಷ್ಟರ್ಚಃ–'ಪ್ರಸೇನಾನೀಃ' ಇತ್ಯಾದಿ ಎಂಟು ಋಕ್ಕುಗಳೂ,[2] ಚಕ್ರಾಂಕಾ – ಚಕ್ರ ಚಿಹ್ನೆಯನ್ನು ಪ್ರತಿಪಾದಿಸುವ, ಏಕಾ–ಒಂದು, ರಹಸ್ಯವಾಕ್ – (ಕಾಣ್ವರ ಶತಪಥಬ್ರಾಹ್ಮಣದೊಳಗಿನ) ರಹಸ್ಯವಾದ 'ದ್ವಿರೇಖಮೂರ್ಧ್ವಪುಂಡ್ರಂ' ಇತ್ಯಾದಿ[3] ಒಂದು ವಾಕ್ಯವೂ, ವಿಚಾರಿತಾಃ–ವಿಚಾರಮಾಡಲ್ಪಟ್ಟಿವೆ.

---

ಮತಾನುಯಾಯಿಗಳಿಗೆ), ಪ್ರಧಾನವಾದ ವಾಯುಸ್ತುತಿಯೇ ಆಗಿರುತ್ತದೆ (೬೫೨). ಸ್ಪಷ್ಟವಾಗಿ ಮಧ್ವನಾಮದಿಂದಲೇ ಅಂಕಿತವಾದ ಏಳು ಋಕ್ಕುಗಳೂ,

---

1 'ಸಮಧ್ವ ಆಯುವತೇ' (i); 'ಉನ್ಮಧ್ವ ಊರ್ಮಿಃ' (ii) 'ವಿದ್ವಾನ್ ಮಧ್ವಃ' (iii); 'ಮಧ್ವೋ ಅಂಶುಃ' (iv); 'ಸಿಂಹಂನ್ನ ಸಂತಂ ಮಧ್ವೋ ಅಯಾಸಂ' (v); 'ಪ್ರಧಾರಾ ಮಧ್ವಃ' (vi); 'ಅಸ್ಮಭ್ಯಮಿಂದವಿಂದ್ರಯುರ್ಮಧ್ವಃ' (vii); ಎಂಬಿವು ಏಳು ಋಕ್ಕುಗಳು ಮಧ್ವನಾಮವನ್ನು ಕೀರ್ತಿಸಿ ಮಹಿಮೆಗಳನ್ನು ನಿರೂಪಿಸುವವು;

2 'ಪ್ರಸೇನಾನೀಃ' (i); 'ಪ್ರಾವೀವಿಪತ್' (ii); 'ಸೋಮಃ ಪವತೇ' (iii); 'ಬ್ರಹ್ಮಾದೇವಾನಾಂ' (iv); 'ಯೇನ ದೇವಾಃ ಪವಿತ್ರೇಣ' (v); 'ಯತ್ತೇ ಪವಿತ್ರಮರ್ಚಿಷಿ' (vi); 'ಚಮೂಷಚ್ಛ್ಯೇನಃ' (vii); 'ಪವಿತ್ರಂತೇ' (viii); ಎಂಬಿವು ಎಂಟು ವಾಯು ಚರಿತ್ರೆಗಳನ್ನು ನಿರೂಪಿಸುವ ಪ್ರಧಾನ ಶ್ರುತಿಗಳು.

3 'ದ್ವಿರೇಖಮೂರ್ಧ್ವಪುಂಡ್ರಂ ಭವತಿ, ತಪ್ತಂ ಚಕ್ರಂ ದ್ವಿಭುಜೇ ಧಾರಯತಿ' ಎಂಬುದು ಕಾಣ್ವಶಾಖೆಯ, ಶತಪಥ ಬ್ರಾಹ್ಮಣದಲ್ಲಿನ ಒಂದು ಶ್ರುತಿಯು; ಈ ಎಲ್ಲ ಶ್ರುತ್ಯರ್ಥಗಳು ಅಲ್ಲಲ್ಲಿ, ಹಿಂದೆ ಪ್ರಸಕ್ತವಾಗಿ, ವಿವರವಾಗಿವೆ; ಆದ್ದರಿಂದ ಪುನಃ ಇಲ್ಲಿ ಕೊಡಲಾಗುವುದಿಲ್ಲ. ಅಷ್ಟರ್ಚಗಳನ್ನು (ಎಂಟು ಋಕ್ಕುಗಳನ್ನು) ಬೇರೆ ರೀತಿಯಿಂದಲೂ, ಎಂದರೆ, 'ಅಪೂರ್ವ್ಯಃ ಈಕ್ಷೇಣ್ಯಾಸ, ಎಂಬ ಆದ್ಯಂತ ವಾಕ್ಯಗಳನ್ನು ಸೇರಿಸಿ ಒಂದು ಋಕ್ಕು; ಮತ್ತು 'ಅಜೀತಯೇ, ಅಹತಯೇ ಊರ್ಧ್ವೋ ಗಂಧರ್ವಃ, ಪ್ರಾಜಾಪತ್ಯಂ, 'ಉಭಾಭ್ಯಾಂ ದೇವಸಹಿತಃ', ತ್ರಿಭಿಷ್ಟ್ವಂ ದೇವ ದೇವ ಸವಿತಃ' ಎಂಬ ಅಂಗಭೂತವಾದ ಆರು ಋಕ್ಕುಗಳು; ಹೀಗೆ ಮೊದಲು ಹೇಳಿದ ಎಂಟು, ಇವರು ಆರು, ಅಂತೂ (೧೪) ಶ್ರುತಿಗಳು ಮಧ್ವಚರಿತ್ರವರ್ಣನಪರವಾದವುಗಳು.

**ವಾಯುಸ್ತುತೌ ಚ ಮಧ್ವಾಖ್ಯಾ ಸಕೃದೇವ ಪ್ರಕಾಶಿತಾ ।**
**ಅಸಕೃನ್ಮಧ್ವಸನ್ನಾಮ್ನೀ ಸೇಯಂ ವಾಯೋರ್ಮಹಾಸ್ತುತಿಃ ॥ ೭೫೪ ॥**

ಪವಮಾನ, ಪೂಯಮಾನಾ ಸೂಕ್ತಗಳಲ್ಲಿ ಪ್ರಸಿದ್ಧ 'ವಾಯುಸ್ತುತಿ' ಸಾಮ್ಯವನ್ನು ಈ ಹಿಂದೆ ತೋರಿಸಿ, ಅವುಗಳಿಗೆ ತತೋಪಿ (ಅದಕ್ಕಿಂತಲೂ) ಅತಿಶಯವನ್ನು ಹೇಳುತ್ತಾರೆ :—

ವಾಯುಸ್ತುತೌ ಚ–ವಾಯುಸ್ತುತಿಯಲ್ಲಿ ಆದರೋ, ಮಧ್ವಾಖ್ಯಾ–ಮಧ್ವ ಎಂಬ ನಾಮವು, ಸಕೃದ್ಏವ – ಒಂದಾವರ್ತಿ 'ಮಧ್ವಾಖ್ಯಂ ಮಂತ್ರಸಿದ್ಧಂ ಕಿಮುತ–' ಎಂಬ ಒಂದು ಶ್ಲೋಕದಲ್ಲಿ ಮಾತ್ರ ಪ್ರಕಾಶಿತಾ–ಉಲ್ಲೇಖಿತವಾಗಿದೆ; ಅಸಕೃತ್–ಬಿಡದೇ ಉಪಯೋಗಿಸಿದ, ಸನ್ನಾಮ್ನೀ–ಶ್ರೀಮಧ್ವ ಎಂಬ ಮಂಗಲ ನಾಮವುಳ್ಳ, ಸಾ ಇಯಂ–ಈ ಋಕ್ಕುಗಳ ಸಮೂಹವು, ವಾಯೋಃ–ವಾಯುದೇವನ, ಮಹಾಸ್ತುತಿಃ–ಮಹಾಸ್ತುತಿಯು (ಸ್ತುತಿಮಾತ್ರವಲ್ಲ).

**ಇದಂ ತೇ ಪಾತ್ರಮಿತ್ಯೃಕ್ಷು ಮಧ್ವಂ ಸ್ತೌತ್ಯಷ್ಟಮೋsಷ್ಟಕೇ ॥೭೫೫॥**

'ಇದಂ ತೇ ಪಾತ್ರಂ' ಎಂಬ ಶ್ರುತಿಯನ್ನು [1] ಸಂಗ್ರಹಿಸುತ್ತಾರೆ :—

---

ಮಧ್ವ ಚರಿತ್ರೆಯನ್ನು ನಿರೂಪಿಸುವ ಎಂಟು ಋಕ್ಕುಗಳು ಮತ್ತು ಕಾಣ್ವರ ಶತಪಥ ಬ್ರಾಹ್ಮಣದಲ್ಲಿರುವ ಒಂದು ರಹಸ್ಯವಾಕ್ಯವೂ ಈ ವೇದ ಋಕ್ಕುಗಳ ಸಮೂಹದಲ್ಲಿ ವಿವೇಚಿಸಲ್ಪಟ್ಟಿವೆ (೭೫೩). ಪ್ರಚಾರದಲ್ಲಿರುವ ಪ್ರಸಿದ್ಧ (ಶ್ರೀತ್ರಿವಿಕ್ರಮ ಪಂಡಿತಾಚಾರ್ಯವಿರಚಿತ) ವಾಯುಸ್ತುತಿಯಲ್ಲಿ, 'ಮಧ್ವಾಖ್ಯಂ ಮಂತ್ರಸಿದ್ಧಂ' ಎಂಬ ಒಂದು ಶ್ಲೋಕದಲ್ಲಿ ಮಾತ್ರ ಮಧ್ವನಾಮವು ಪ್ರಕಾಶಿತವಾಗಿದೆ; ಪ್ರಕೃತ ಉಕ್ತವಾದ ಋಕ್ಸಮೂಹದಲ್ಲಿ, ಬಿಡದೇ ಈ ಮಂಗಲನಾಮವು ಸರ್ವತ್ರ ಉಲ್ಲೇಖಿತವಾಗಿದೆ; ಆದ್ದರಿಂದ ಇದು (ಈ ಋಕ್ಸಮುದಾಯವು) ವಾಯುಸ್ತುತಿ ಮಾತ್ರವಲ್ಲ–ವಾಯು ಮಹಾಸ್ತುತಿಯು (೭೫೪). ಋಗ್ವೇದದ

---

1 ಇದಂ ತೇ ಪಾತ್ರಂ ಸನವಿತ್ತಮಿಂದ್ರಪಿಬಾಸೋಮಮೇನಾ ಶತಕ್ರತೋ । ಪೂರ್ಣ ಆಹಾವೋ ಮದಿರಸ್ಯ ಮಧ್ವೋಯಂ ವಿಶ್ವ ಇದಭಿಹರ್ಯಂತಿ ದೇವಾ ॥ ಎಂಬ ಈ ಶ್ರುತಿಯು, ಚಂದ್ರನಾಮಕ ಪರಮಾತ್ಮನನ್ನು ಕುರಿತು, ವೇದಪುರುಷನ ವಚನವು (ವೇದವು ಹೇಳುವುದು ಆಗಿದೆ); ಅದರ ಅರ್ಥವೇನೆಂದರೆ:—ಶತಕ್ರತೋ–ಹೇ ಇಂದ್ರ! ಅಪರಿಮಿತ ಜ್ಞಾನ ಪರಿಪೂರ್ಣ! ಪರಮೈಶ್ವರ್ಯ ಸಂಪನ್ನ ಪರಮಾತ್ಮನೇ! ಇದಂ

ಇದಂ ತೇ ಪಾತ್ರಂ ಇತ್ಯೃಕ್ಷು ಮಧ್ವಂ—'ಇದಂ ತೇ ಪಾತ್ರಂ' ಎಂಬ ಶ್ರುತಿಯು ಶ್ರೀಮಧ್ವರನ್ನು, ಅಷ್ಟಮೇ ಅಷ್ಟಕೇ-ಎಂಟನೇ ಅಷ್ಟಕ (ವೇದ)ದಲ್ಲಿ, ಸೌತಿ—(ವೇದವೇ) ಸ್ತುತಿಸುತ್ತದೆ.

---

ಎಂಟನೇ ಅಷ್ಟಕದಲ್ಲಿ ಸಹ ಮಧ್ವನಾಮಗ್ರಹಣಪೂರ್ವಕವಾದ ಮಧ್ವರ ಸ್ತುತಿಯು, 'ಇದಂ ತೇ ಪಾತ್ರಂ' ಎಂಬ ಮಂತ್ರದಲ್ಲಿಯೂ ಇರುತ್ತದೆ (೬೫೫).

---

ಮುಂದೆ ಹೇಳಲಾಗುವ ಮಧ್ವಾಚಾರ್ಯರೆಂಬ, ತೇ—ನಿನಗೆ, ಪಾತ್ರಂ—ಸನ್ನಿಧಾನಯೋಗ್ಯವಾದ ಸ್ಥಾನವು ; (ಆ ಪಾತ್ರವು) ಸನವಿತ್ತಂ—ಅಲೌಕಿಕ ಜ್ಞಾನಭಕ್ತಿ ಭರಿತನು (ಸ್ವಭಕ್ತರಾದ ರುದ್ರಾದಿಗಳಿಗಿಂತ ಅತಿಶಯವಾಗಿ ಜ್ಞಾನಭಕ್ತಿ ವೈರಾಗ್ಯಗಳನ್ನು ಅನುಗ್ರಹಿಸಲು ಯೋಗ್ಯವಾದ ಸ್ಥಾನವು) ಮುಖ್ಯಪ್ರಾಣ ರೂಪರಾದ ಗುರುಗಳಾದ ಶ್ರೀಮಧ್ವಾಚಾರ್ಯರಲ್ಲಿ ಸದಾ ಸನ್ನಿಹಿತನಾಗಿರುತ್ತೀಯೆ ; ('ಯ ಏವಾಯಂ ಮುಖ್ಯಪ್ರಾಣ ; ತಮುದ್ಗೀಥಮುಪಾಸಾಂಚಕ್ರಿರೇ' ಎಂದು ಶ್ರುತಿಯೂ ಹೇಳುತ್ತದೆ; ಅಲೌಕಿಕವಾದುದೂ ಅನ್ಯರಲ್ಲಿಲ್ಲದ ಈ ಜ್ಞಾನವು ಅವರಲ್ಲಿಯೇ ಇರುವುದೆಂಬುದನ್ನು 'ಸನವಿತ್ತಂ' ಎಂಬುದೂ ಸೂಚಿಸುತ್ತದೆ) ; ಏನ (ಏನೇನ)—(ಸರ್ವಪ್ರೇರಕನಾಗಿ ಪ್ರಾಣಿಗಳಲ್ಲಿರುವ ಈ ಮುಖ್ಯ ಪ್ರಾಣನಿಂದ ದತ್ತವಾದ), ಸೋಮಂ—ಸೋಮರಸವನ್ನು, ಪಿಬ—ಪಾನಮಾಡು ; (ಸೋಮಪಾನ ಮಾಡುವರ ಮುಖದಲ್ಲಿರುವ ಆ ಮುಖ್ಯಪ್ರಾಣನಿಂದ ಒಳಗೆ ಪ್ರವೇಶ ಮಾಡಿಸಿದುದನ್ನು ಪಾನಮಾಡು, ಅಗ್ನ್ಯಂತರ್ಗತ ಮುಖ್ಯಪ್ರಾಣನೆಂಬ ಪಾತ್ರದಿಂದ ಪಾನಮಾಡು, ಎಂಬರ್ಥಗಳನ್ನು ತಿಳಿಯಬಹುದು) ('ಸರ್ವಂ ಸಪೂತಮಶ್ನಾತಿ ಸ್ವದಿತಂ ಮಾತರಿಶ್ವನಾ' ಎಂಬ ಶ್ರುತಿಯೂ ಹೀಗೆಯೇ ಹೇಳುತ್ತದೆ)—ಘಸಂದಾಸಸ್ಯ ಜಿಹ್ವಯಾಮಶ್ನಾತಿಕಮಲೋದ್ಭವೇತಿ ಸ್ಮೃತೇಶ್ಚ) ; ಮದಿರಸ್ಯ—ವೇದೋತ್ಪನ್ನ ಜ್ಞಾನದ (ಮತ್ತಃ ಇರಂ—ಈರಣಂ ಯಸ್ಯ ಎಂಬುದರಿಂದ) ಮತ್‌ಮಥನಂ—ವೇದಶಾಸ್ತ್ರಗಳ ಪರ್ಯಾಲೋಚನೆಯು, ಅದರಿಂದ ಉತ್ಪನ್ನವಾದ ಜ್ಞಾನದ ಎಂದೂ ತಿಳಿಯಬಹುದು), ಪೂರ್ಣಃ—ಸಂಪೂರ್ಣತ್ವವುಳ್ಳವನಾದ, ಆಹಾವಃ—(ಜ್ಞಾನಯಜ್ಞದಲ್ಲಿ ಸ್ಥಿತನಾಗಿ, ಭೂಮಿಯಲ್ಲಿರುವ ಶಿಷ್ಯರಲ್ಲಿ ಜ್ಞಾನದಾನವೆಂಬ ಹವನಕರ್ತರಾದ, ಯೋಗ್ಯತಾನುಸಾರವಾಗಿ ಜ್ಞಾನದಾನದಲ್ಲಿಯೇ ಪ್ರವೃತ್ತನಾದ, ಮಧ್ವಃ—ಈ ಮಧ್ವರೂಪವೇ (ಇದಂ ತೇ ಪಾತ್ರಂ) ಪಾತ್ರನು ; ಯಂ—ಯಾವ ಮಧ್ವರನ್ನು, ವಿಶ್ವೇದೇವಾಃ — ಕೇವಲ ಭೂಮಿಸ್ಥ ಶಿಷ್ಯರಲ್ಲಿ ಮಾತ್ರವಲ್ಲ) ಸಕಲ ದೇವತೆಗಳೂ (ಸ್ವರ್ಗಸ್ಥರೂ), ಇತ್—ಹೀಗೆ, (ಅನ್ಯ ಋಷ್ಯಾದಿ ಶಿಷ್ಯರಂತೆ), ಅಭಿ—ಎಲ್ಲ ಕಡೆಯಿಂದ, ಹರ್ಯಂತಿ—ಜ್ಞಾನ ಸಂಗ್ರಹಕ್ಕಾಗಿ ಹೊಂದುತ್ತಾರೆ (ತಮ್ಮ ಸಭೆಗಳಲ್ಲಿ, ಅಭಿತಃ—ಶಾಸ್ತ್ರಾದಿಗಳಲ್ಲಿ ಹೇಳಲಾದ ಅವರ ಗುಣಕೀರ್ತನವನ್ನು ಮಾಡುತ್ತಾರೆ.)

**ಶತಕ್ರತೋ ಬಹುಜ್ಞಾನಪರಮೈಶ್ವರ್ಯ ಹೇ ಹರೇ ।**
**ಇಂದ್ರಾಖ್ಯ ತೇ ಸನೇದಾನೇ ಯೋಗ್ಯವಿತ್ತಾನಿ ಯಸ್ಯ ತತ್ ।**
**ಸನವಿತ್ತಂ ಜ್ಞಾನಭಕ್ತಿವಿರಕ್ತ್ಯಾದಿಗುಣೋರ್ಜಿತಂ ॥ ೭೫೬ ॥**

**ಇದಂ ಮಧ್ವಾಭಿಧಂ ಪಾತ್ರಂ ಸನ್ನಿಧಾನಪದಂ ಧ್ರುವಂ ।**
**ನ ಚೇದೇತಾದೃಶಜ್ಞಾನಪೂರ್ತಿರತ್ರ ಕುತೋ ಭವೇತ್ ॥ ೭೫೭ ॥**

(ಹಿಂದಿನ ಶ್ಲೋಕದ ಅಡಿಟಿಪ್ಪಣಿಯಲ್ಲಿ ವಿವೃತವಾದ ಶ್ರುತ್ಯರ್ಥವನ್ನೇ ವಿಸ್ತರಿಸುತ್ತಾರೆ :—

ಶತಕ್ರತೋ-ಶತಕ್ರತೋ ಎಂದರೆ, ಬಹುಜ್ಞಾನ ಪರಮೈಶ್ವರ್ಯ-ಅಪರಿಮಿತ ಜ್ಞಾನ ಮತ್ತು ಪರಮೈಶ್ವರ್ಯಗಳುಳ್ಳ, ಇಂದ್ರಾಖ್ಯ-ಇಂದ್ರನಾಮಕ, ಹೇ ಹರೇ-ಹೇ ಹರಿಯೇ ! ತೇ-ನಿನಗೆ, ಸನೇ-ಸನೇ ಎಂದರೆ, ದಾನೇ-ದಾನದಲ್ಲಿ, ಯೋಗ್ಯವಿತ್ತಾನಿ ಯಸ್ಯ-ಯೋಗ್ಯವಾದ (ಜ್ಞಾನಭಕ್ತಿ ವೈರಾಗ್ಯಗಳೆಂಬ) ಧನವು ಯಾರಿಗೋ (ಯಾರುಳ್ಳವರೋ), ತತ್-ಆ ಪಾತ್ರವು, ಸನವಿತ್ತಂ-ಸನವಿತ್ತ ವೆನಿಸುವುದು, ಜ್ಞಾನಭಕ್ತಿವಿರಕ್ತ್ಯಾದಿಗುಣೋರ್ಜಿತಂ-ಜ್ಞಾನ, ಭಕ್ತಿ, ವಿರಕ್ತಿ ಮೊದಲಾದ ಗುಣಗಳಿಂದ ಉತ್ಕೃಷ್ಟವಾದುದು (ಅದು); ಇದಂ-ಈ ಪಾತ್ರವು, ಮಧ್ವಾಭಿಧಂ-ಮಧ್ವನಾಮಕವಾದುದೇ, ಪಾತ್ರಂ-ಪಾತ್ರವೆಂದರೆ, ಸನ್ನಿಧಾನ ಪದಂ-ಸನ್ನಿಧಾನವಿಡಲು ಯೋಗ್ಯವಾದ ಸ್ಥಾನವು; ನ ಚೇತ್-ಹಾಗಲ್ಲದಿದ್ದರೆ (ಶ್ರೀಮಧ್ವರು ಶ್ರೀಹರಿಯ ಆವಾಸ ಪಾತ್ರರಲ್ಲದಿದ್ದರೆ), ಅತ್ರ-ಇವರಲ್ಲಿ, ಏತಾದೃಶ ಜ್ಞಾನಪೂರ್ತಿಃ-ಈ ವಿಧದ ಪೂರ್ಣಜ್ಞಾನವು, ಕುತಃ-ಬೇರಾವ ಕಾರಣದಿಂದ, ಭವೇತ್-ಉಂಟಾಗುತ್ತದೆ ? (ಶಕ್ಯವಿಲ್ಲ).

---

'ಇದಂ ತೇ ಪಾತ್ರಂ' ಎಂಬ ಶ್ರುತಿಗತವಾದ ಪದಗಳ ಅರ್ಥವಿವರಣೆಯಿಂದ ಶ್ರುತ್ಯರ್ಥವನ್ನು ಪ್ರಕಾಶಗೊಳಿಸುತ್ತಾರೆ ; ಶತಕ್ರತೋ-ಎಂದರೆ ಅಪರಿಮಿತ ಜ್ಞಾನ ಮತ್ತು ಪರಮೈಶ್ವರ್ಯಯುಕ್ತನಾದ, ಇಂದ್ರನಾಮಕನಾದ ಶ್ರೀಹರೇ; ಸನೇ ಎಂದರೆ ದಾನದಲ್ಲಿ, ಅರ್ಹತೆಗೆ ಕಾರಣವಾಗುವ ಜ್ಞಾನವೈರಾಗ್ಯಗಳೆಂಬ ಗುಣಗಳಿಂದ ಉತ್ಕೃಷ್ಟನಾದ 'ಸನವಿತ್ತ' ನಾಮಕನಾದ ಮಧ್ವನೆಂದು ಪ್ರಸಿದ್ಧ ನಾದವನೇ ಪಾತ್ರನು, ಅಲ್ಲದಿದ್ದರೆ, ಪೂರ್ಣಜ್ಞಾನತ್ವ ಲಕ್ಷಣವು, ಶ್ರೀಹರಿಯ ಸನ್ನಿಧಾನ ಸ್ಥಾನನಲ್ಲದಿದ್ದರೆ, ಬೇರಾವ ಕಾರಣದಿಂದಲೂ, ಶ್ರೀಮಧ್ವದೇವನಲ್ಲಿ

**ಸತ್ವಂ ನ ಚೇದಿತಿ ಪ್ರೋಕ್ತಂ ದೇವವಾಕ್ಯಮನುಸ್ಮರ || ೬೫೮ ||**

ಸತ್ವಂ ನ ಚೇದಿತಿ–(ಸತ್ವಂ ನ ಚೇತ್) ಎಂಬ ಭಾಗವತದಲ್ಲಿರುವ (ಬ್ರಹ್ಮ ವಾಕ್ಯವನ್ನು), ಪ್ರೋಕ್ತಂ–ಹೇಳಿರುವ,[1] ದೇವ ವಾಕ್ಯಂ–ಬ್ರಹ್ಮದೇವನ ವಾಕ್ಯ ವನ್ನು, ಅನುಸ್ಮರ–ಸ್ಮರಿಸು.

---

ಉಂಟಾಗಲು ಅವಕಾಶವಿಲ್ಲ; ಆತನೇ ಶ್ರೀಹರಿಯ ಮುಖ್ಯ ಸನ್ನಿಧಾನಪಾತ್ರನು (೬೫೬–೬೫೭). 'ಸ ತ್ವಂ ನೇದ್ಧಾತರಿದಂ' ಎಂಬ ಭಾಗವತದಲ್ಲಿರುವ ಬ್ರಹ್ಮ ದೇವನು ಹೇಳುವ ವಾಕ್ಯವನ್ನು ಸ್ಮರಿಸು; ಆದರಿಂದಲೂ ವಾಯುದೇವನೇ (ಬ್ರಹ್ಮದೇವನೇ–ಋಜುಗಣದ ಜೀವನೇ ಶ್ರೀಹರಿಯ ಮುಖ್ಯ ಸನ್ನಿಧಾನ ಪಾತ್ರನೆಂದೂ, ಆತನ ಮನಸ್ಸೇ ಶ್ರೀಹರಿಯ ಪ್ರಧಾನ ವಾಸಸ್ಥಳವೆಂದು ಸಿದ್ಧ ವಾಗುತ್ತದೆ; ಭಾಗವತ ಶ್ಲೋಕವೂ ಅದರ ಅರ್ಥ ವಿವರಣೆಯೂ, ಅಡಿ

---

[1] 'ಸತ್ವಂ ನಚೇದ್ಧಾತರಿದಂ ನಿಜಂಭವೇದ್ವಿಜ್ಞಾನಮಜ್ಞಾನಭಿದಾಪಮಾರ್ಜನಂ| ಗುಣ ಪ್ರಕಾಶೈರನುಮೀಯತೇ ಭವಾನ್ ಪ್ರಕಾಶತೇ ಯಸ್ಯ ಚ ಯೇನ ವಾ ಗುಣಃ'| ಎಂಬುದು ಭಾಗವತ ವಾಕ್ಯವು; ಇದು ಇಲ್ಲಿ ಸಂಗ್ರಹೀತವಾಗಿದೆ; ಉಕ್ತಭಾಗವತಾನುಸಾರವಾಗಿಯೇ ಶ್ರುತಿಯೂ ಪ್ರವೃತ್ತವಾಗಿದೆ; ಶ್ಲೋಕಾರ್ಥವು ಹೀಗಿದೆ :—ಅಜ್ಞಾನಭಿದಾಪಮಾರ್ಜನಂ– ಅಜ್ಞಾನನೆಂಬ ವಿಪರೀತಜ್ಞಾನ (ಭಿದಾ) ನಾಶಕವಾದ ಇದಂ– ಈ (ನನ್ನಲ್ಲಿರುವ), ವಿಜ್ಞಾನಂ–ವಿಶಿಷ್ಟಜ್ಞಾನವು ('ಈಶ್ವರಾದನ್ಯತ್ರ ಸರ್ವವಿಷಯಂ ಜ್ಞಾನಂ, ಎಂಬ ಲಕ್ಷಣದ ನನ್ನ ಮನೋವೃತ್ತಿರೂಪ,–ಜ್ಞಾನವು, ಧಾತಃ–ಹೇ ಸ್ವಾಮಿ ! (ಸರ್ವರಕ್ಷಕ !) ಸತ್ವಂನ ಚೇತ್–ಸತ್ವಾತ್ಮಕವಲ್ಲದಿದ್ದರೆ, ನಿಜಂ–ನಿನ್ನ ಸನ್ನಿಧಾನ ವಿಶೇಷದಿಂದ ಹುಟ್ಟಿದುದಲ್ಲದಿದ್ದರೆ). ನನ್ನದೇ ಭವೇತ್ - ಆಗುತ್ತದೆ ; (ಸತ್ವಾದಿಗುಣತ್ರಯಾತ್ಮಕವಾದ ಜಗತ್ತು ಸರ್ವವೂ ಈಶ್ವರನೇ ಎಂಬ ಭ್ರಾಂತಿ ವಿಷಯವಾದ್ದರಿಂದ, ವೇದವೂ ಭ್ರಮಾತ್ಮಕವೇ ಆಗಿ), ಭವಾನ್ - ನೀನು (ಭಗವಂತನು), ಗುಣಪ್ರಕಾಶೈಃ - ಗುಣಗಳನ್ನು ಪ್ರಕಾಶಗೊಳಿಸುವ ಅನುಮಾನಗಳಿಂದ, ಅನುಮೀಯತೇ - ಯೇನ- ತಿಳಿಯಲ್ಪಡುವಿಯೇನು ? (ಪ್ರತ್ಯಕ್ಷದಿಂದ ಗ್ರಾಹ್ಯನಲ್ಲದ ನೀನು, ಅನುಮಾನದಿಂದ ಗ್ರಾಹ್ಯನಲ್ಲ—ಇಲ್ಲಿ 'ಯತ್' ಶಬ್ದವು 'ಅಂ' ಶಬ್ದಾರ್ಥವುಳ್ಳದ್ದ) ಅಗುಣಃ - ಸತ್ವಾದಿಗುಣರಹಿತನಾದ ನೀನು, ಯಸ್ಯ- ಯಾವನೊಬ್ಬ ಪುರುಷನ, ಯೇನ - ಉಪದೇಶವಾಕ್ಯದಿಂದ, ಪ್ರಕಾಶತೇ (ಕಿಂ) - ತಿಳಿಯಲ್ಪಡುವಿಯೇನು ? (ಸರ್ವಜ್ಞತ್ವ ವಿಶಿಷ್ಟಮನೋವೃತ್ತಿರೂಪ ಜ್ಞಾನವು, ವೇದಾದಿಗಳಿಂದ ಅಥವಾ ಅನುಮಾನ ದಿಂದ ಜನ್ಯವಾದುದಲ್ಲ ; ಗುಣಜನ್ಯನ ಜ್ಞಾನವು, ಅಗುಣನಾದ ನಿನ್ನನ್ನು ತಿಳಿಸಲಾರದು ; ಈ ನನ್ನ ಜ್ಞಾನವು, ನಿನ್ನ ಅಂತರ್ಯಾಮಿ ಸನ್ನಿಧಾನದಿಂದಲೇ ಜನಿಸಿದುದು).

**ಯೇನಾನೇನ ಪ್ರಾಣತಯಾ ಸರ್ವತ್ರ ವ್ಯಾಪಿನಾರ್ಪಿತಂ ।**
**ಸೋಮಂ ಯಜ್ಞರಸಂ ಸರ್ವಂ ಪಿಬ ಪೂರ್ಣೋಽಪಿ ತತ್ಪ್ರಿಯಾತ್ ।**
**ಜ್ಞಾನಯಜ್ಞರಸಂ ದಿವ್ಯಜ್ಞಾನಾಖ್ಯಂ ರಸಮೇವ ವಾ ॥ ೬೫ ॥**

ಏನ ಅನೇನ – ಈ ಮುಖ್ಯ ಪ್ರಾಣನಿಂದ, ಪ್ರಾಣತಯಾ–ಪ್ರಾಣ ರೂಪದಿಂದ, ಸರ್ವತ್ರ ವ್ಯಾಪಿನಾ – ಸರ್ವತ್ರವ್ಯಾಪ್ತನಾದ ಶ್ರೀಹರಿಯಿಂದಲೇ, ಅರ್ಪಿತಂ–ಸ್ಥಾಪಿತವಾದ, ಸೋಮಂ–ಸೋಮವೆಂಬ, ಯಜ್ಞರಸಂ–(ಯಜ್ಞದಲ್ಲಿ ಉಪಯೋಗಿಸಲಾದ) ಯಜ್ಞರಸವನ್ನು (ದ್ರವವನ್ನು), ಸರ್ವಂ–ಎಲ್ಲವನ್ನು (ಪೂರ್ಣವಾಗಿ), ಪಿಬ–ಪಾನಮಾಡು ; ಪೂರ್ಣಃ ಅಪಿ–(ನೀನು) ಪೂರ್ಣನೇ ಆದರೂ, ತತ್ಪ್ರಿಯಾತ್ – ( ಸೋಮರಸಾರ್ಪಕನಾದ ಮುಖ್ಯ ಪ್ರಾಣನಲ್ಲಿ ) ವಿಶೇಷಪ್ರೀತಿಯಿರುವುದರಿಂದ, ( ಪಿಬ–ಪಾನಮಾಡು ) ; ವಾ–ಅಥವಾ (ಮತ್ತು), ಜ್ಞಾನಯಜ್ಞರಸಂ–ಜ್ಞಾನಯಜ್ಞದಲ್ಲಿ ಸಾರಭೂತವಾದ, ದಿವ್ಯಜ್ಞಾನಾಖ್ಯಂ-(ಅಲೌಕಿಕ) ದಿವ್ಯಜ್ಞಾನವೆಂಬ, ರಸಂ ಏವ–ಸಾರಭಾಗವನ್ನೇ (ಪಿಬ–ಸ್ವೀಕರಿಸು).

**ಯೋಽಯಂ ಮಧ್ವೋ ಮಧ್ವನಾಮಾ ಮದಿರಸ್ಯ ಮದೀರಣಾತ್ ।**
**ಜಾತಸ್ಯ ವೇದಶಾಸ್ತ್ರಾದೇರ್ಮಥನಾದುದಿತಸ್ಯ ವಾ ॥ ೬೬ ॥**

---

ಟಿಪ್ಪಣಿಯಲ್ಲಿ ವಿವರಿಸಲಾಗಿದೆ (೬೪). ಹೀಗೆ ಮುಖ್ಯ ಪ್ರಾಣನಲ್ಲಿದ್ದು, ಪ್ರಾಣ ರೂಪದಿಂದ, ಸರ್ವತ್ರವ್ಯಾಪಿಯಾದ ನೀನೇ ಸ್ಥಾಪಿತವಾದ ಜ್ಞಾನಸಾರವೆಂಬ ಸೋಮರಸವನ್ನು (ಮುಖ್ಯಪ್ರಾಣನು) ನಿನಗೆ ಅತಿಪ್ರಿಯನಾದ್ದರಿಂದ ಭಕ್ತರು ಅರ್ಪಿಸುವುದನ್ನು ನೀನೇ ಸ್ವೀಕರಿಸಿ, ಅವರನ್ನು ಉದ್ಧರಿಸು ; (ಯಜ್ಞದಲ್ಲಿ ಹವನಮಾಡುವುದರಲ್ಲಿ ಉಪಯೋಗಿಸಲಾಗುವ ಸೋಮರಸವನ್ನು ನೀನೇ ಅಲ್ಲವೇ ಸ್ವೀಕರಿಸುವವನು ? ಅದರಂತೆ ಈ ಜ್ಞಾನರೂಪದ ಶ್ರೇಷ್ಠ ಹವಿಸ್ಸನ್ನು ಸ್ವೀಕರಿಸು, ಅದು ನಿನಗೆ ಪ್ರಿಯನಾದ ಮುಖ್ಯ ಪ್ರಾಣನಿಗೆ ಇಷ್ಟವಾದುದೂ ಆಗಿದೆ (೬೫). 'ಇದಂ ತೇ ಪಾತ್ರಂ' ಎಂಬ ಶ್ರುತಿಯಲ್ಲಿ 'ಮದಿರಸ್ಯ' ಎಂಬ ಪದವು, ಶ್ರೀಹರಿಯಿಂದ ಮುಖ್ಯ ಪ್ರೇರ್ಯನಾದ ಶ್ರೀಮಧ್ವರೂಪೀ ವಾಯುದೇವನನ್ನೇ ಹೇಳುತ್ತದೆ (ಮತ್ತಃ ಈರಣಂ ಯಸ್ಯ ಎಂಬ ವ್ಯುತ್ಪತ್ತಿಯಿಂದ ಈ ಅರ್ಥವು ಸಿದ್ಧ ವಾಗುತ್ತದೆ); ಮತ್ತು ವೇದ ಶಾಸ್ತ್ರಾದಿಗಳ ಮಥನದಿಂದ (ಪರ್ಯಾಲೋಚನೆ

**ಜ್ಞಾನಸ್ಯ ಪೂರ್ಣಃ ಸಂಪೂರ್ಣಃ ಕೇವಲಂ ಕರಣಂ ನ ತತ್ ।**
**ತತ್ಸಂಬಂಧ್ಯಪಿ ತಜ್ಜ್ಞಾನಂ ತದ್ಗುಣಸ್ಯಾಪಿ ಬೋಧನಾತ್ ॥ ೬೬೧ ॥**

'ಇದಂ ತೇ ಪಾತ್ರಂ' ಎಂಬ ಶ್ರುತಿಯ ಅರ್ಥವಿವರಣೆಯನ್ನೇ ಮುಂದರಿಸುತ್ತಾರೆ :—

ಯೋಽಯಂ—ಯಾವ ಈ, ಮಧ್ವಃ—ಮಧ್ವರೂಪೀವಾಯುವು, ಮದಿರಸ್ಯ ನನ್ನಿಂದಲೇ ಪ್ರೇರಿತವಾದ ಉತ್ತಮಜ್ಞಾನವುಳ್ಳ ಮದೀರಣಾತ್—( ಮತ್ತಃ ಈರಣಂ ಯಸ್ಯ. ಎಂಬಂತೆ ನನ್ನ ಪ್ರೇರಣೆಯುಳ್ಳವನೂ (ಪ್ರಧಾನಪ್ರೇರ್ಯನಾದ), ವಾ—ಅಥವಾ, ವೇದಶಾಸ್ತ್ರಾದೇಃ—ವೇದಶಾಸ್ತ್ರಾದಿಗಳ, ಮಥನಾತ್—ಪರ್ಯಾಲೋಚನೆಯಿಂದ, ಉದಿತಾತ್—ಉತ್ಪನ್ನವಾದ (ಉದ್ಬೋಧಿತವಾದ ಜ್ಞಾನವುಳ್ಳವನೂ) (ಆದ್ದರಿಂದ), ಮಧ್ವನಾಮ— 'ಮಧ್ವ,' ಎಂಬ ನಾಮದಿಂದ ಪ್ರಸಿದ್ಧನಾದವನು, ಜ್ಞಾನಸ್ಯ—ಜ್ಞಾನದ, ಪೂರ್ಣಃ ಸಂಪೂರ್ಣಃ—ಪೂರ್ಣತ್ವವುಳ್ಳವನು (ನಾನು ಕೇವಲ ಜ್ಞಾನಕರಣನು—ಸಾಧನನು ಮಾತ್ರವಲ್ಲ—ಅನಾದಿಯಿಂದ ಅದು ಇರತಕ್ಕದ್ದು—ಅದರ ಉದ್ಬೋಧವು ನನ್ನ ಪ್ರೇರಣೆಯಿಂದ ಮಾತ್ರ), ತತ್—ಅದು (ಜ್ಞಾನಯಜ್ಞದಲ್ಲಿ ಸೋಮರಸದಂತೆ ಪ್ರಧಾನಸ್ಥಾನದಲ್ಲಿರುವ ಜ್ಞಾನವು), ಕೇವಲಂ ಕರಣಂ ನ—ಆ ಜ್ಞಾನವೂ ಕೇವಲ ಸಾಧನಮಾತ್ರವೂ ಅಲ್ಲ (ನನ್ನ ಪ್ರಸಾದವೇ ಫಲಪ್ರಾಪ್ತಿಯಲ್ಲಿ ಮುಖ್ಯ ಕಾರಣವು), (ಅದನ್ನು) ತತ್ಸಂಬಂಧಿತ ಜ್ಞಾನಂ—ಆ ಉತ್ತಮವಾದ ಜ್ಞಾನವನ್ನು, ಯೋಗಿಗಳಲ್ಲಿ 'ಜುಹೋತಿ' ಎಂಬ ವ್ಯುತ್ಪತ್ತಿಯಿಂದ ಉಪದೇಶಿಸಿ ಪ್ರಚಾರಮಾಡಿದ್ದರಿಂದ 'ಆಹಾವ'ನೆಂಬ ನಾಮನೂ ಆದ ಮುಖ್ಯಪ್ರಾಣನ, ಅಪಿ—ಮತ್ತು ತದ್ಗುಣಸ್ಯ—ಮುಖ್ಯಪ್ರಾಣನ ಗುಣಗಳ,

---

ಯಿಂದ) ಉತ್ಪನ್ನವಾದ ಜ್ಞಾನವುಳ್ಳವನೂ ಈ ಮಧ್ವನಾಮದಿಂದ ಪ್ರಸಿದ್ಧನಾದವನೇ ಆಗಿರುವನು ; ಪೂರ್ಣಜ್ಞಾನಿಯು—ನನ್ನಿಂದಲೇ ಉದ್ಬೋಧಿತವಾದ ಸರ್ವಜ್ಞತ್ವವುಳ್ಳವನು ; ವೇದಶಾಸ್ತ್ರಾದಿಗಳು ಕರಣವೂ (ಸಾಧನವೂ) ಅಲ್ಲ ; ನನ್ನಿಂದಲೇ ಪ್ರೇರಿತವಾದ ಆ ಜ್ಞಾನವನ್ನು, ಯೋಗಿಗಳಲ್ಲಿ (ಜ್ಞಾನಾಧಿಕಾರಿಗಳಲ್ಲಿ ಶ್ರೀಮಧ್ವನು ಹವನ ಮಾಡುವುದರಿಂದ 'ಆಹಾವ'ನೆಂಬ ನಾಮವುಳ್ಳವನೂ ಆಗಿರುವನು ; ಪವಮಾನಾದಿ ಸೂಕ್ತಗಳಲ್ಲಿ ಈತನಿಂದ ಉಪದಿಷ್ಟವಾದ ಜ್ಞಾನವೇ ಮೋಕ್ಷದಾಯಕವೆಂದೂ ಹೇಳಿರುವುದರಿಂದ ಸಹ ಇದು ಸಮರ್ಥಿತ

ಬೋಧನಾತ್ – ( ಪವಮಾನಾದಿಸೂಕ್ತಗಳಲ್ಲಿ ) ಬೋಧಿಸಲ್ಪಟ್ಟಿರುವುದರಿಂದ (ಮುಖ್ಯ ಪ್ರಾಣಾವತಾರರಾದ ಶ್ರೀಮದಾಚಾರ್ಯರಿಂದ ಉಪದಿಷ್ಟವಾದ ಜ್ಞಾನವೇ ಮೋಕ್ಷಪ್ರದವಾದ ಜ್ಞಾನವೆಂದು ಸಿದ್ಧ).

**ಇತಿ ಜ್ಞಾಪಯಿತುಂ ಷಷ್ಠೀ ತಚ್ಚ ಯೋಗಿಷು ಸರ್ವತಃ ।**
**ಜುಹ್ವದಾಹಾವನಾಮಾ ಸನ್ ವರ್ತತೇ ವ್ಯಾಸಸನ್ನಿಧೌ ॥ ೬೬೨ ॥**

ಇತಿ–ಹೀಗೆ, ಜ್ಞಾಪಯಿತುಂ–ಯೋಗ್ಯಜೀವರಿಗೆ ತಿಳಿಸಿಕೊಡಲು, ಷಷ್ಠೀ–(ಮದಿರಸ್ಯ) ಎಂದು ಷಷ್ಠೀ ವಿಭಕ್ತಿಯು ಇದೆ ; (ಚ–ಮತ್ತು) ತತ್–ಆ ಜ್ಞಾನವನ್ನು, ಸರ್ವತಃ–ಎಲ್ಲೆಡೆಯಲ್ಲಿರುವ, ಯೋಗಿಷು–ಜ್ಞಾನಾರ್ಹರಲ್ಲಿ, ಜುಹ್ವತ್–ಹವಿಸ್ಸಿನಂತೆ (ಉಪದೇಶದಿಂದ) ಹೋಮಮಾಡಿ, ಆ–ಸಮಂತಾತ್ (ಸರ್ವತಃ) ಆಹಾವನಾಮಾ – ಆಹಾವ ನಾಮಕನಾಗಿ ವ್ಯಾಸಸನ್ನಿಧೌ – ಶ್ರೀವ್ಯಾಸರ ಎದುರಿನಲ್ಲಿ (ಸಮ್ಮುಖದಲ್ಲಿ), ವರ್ತತೇ – ( ಬದರಿಕಾಶ್ರಮದಲ್ಲಿ ) ಈಗಲೂ ಇರುತ್ತಾರೆ.

**ಮುನಿಮಾತ್ರಗುರುರ್ನಾಸಾವಿದಿತ್ಥಂ ಯದಭಿಸ್ಥಿತಾಃ ।**
**ಪರ್ಯಂತಿ ಮನಸಾಽಸ್ಯೈಷ್ಯ ಧ್ಯಾಯಂತಿ ಸಕಲಾಃ ಸುರಾಃ ॥ ೬೬೩ ॥**

ಅಸೌ–ಈ ಮಧ್ವರೂಪೀ ವಾಯುದೇವನು, ಮುನಿಮಾತ್ರಗುರುಃ–ಋಷ್ಯಾದಿಗಳಿಗೆ ಮಾತ್ರ ಜ್ಞಾನೋಪದೇಶಕನಲ್ಲ, ಇತ್ ಇತ್ಥಂ–ಈ ಪ್ರಮೇಯವು ಹೀಗಿದೆ : ( ಏನೆಂದರೆ ), ಸಕಲಾಃ – ಸಮಸ್ತರಾದ, ಸುರಾಃ – ದೇವತೆಗಳು, ಅಭಿಸ್ಥಿತಾಃ – ಸರ್ವತ್ರ ಇರುವ ಸಕಲರೂ, ಮನಸಾ–ತಮ್ಮ ಮನಸ್ಸಿನಿಂದ,

---

ವಾಗುತ್ತದೆ ; (೬೬೦–೬೬೧). ಈ ಅರ್ಥವಿಶೇಷವನ್ನು ತಿಳಿಸಲಿಕ್ಕಾಗಿಯೇ ಷಷ್ಠೀ ವಿಭಕ್ತಿಕ ಪದಪ್ರಯೋಗವಿದೆ ; ಆ ಮೋಕ್ಷಪ್ರಾಪಕ ಜ್ಞಾನವನ್ನು ಋಷ್ಯಾದಿ ಯೋಗಿಗಳಲ್ಲಿ ಉಪದೇಶದ್ವಾರಾ ಪ್ರಚಾರಮಾಡುತ್ತ, ಜ್ಞಾನದಾನ ರೂಪದ ಹವನದಿಂದ 'ಆಹಾವ' ನಾಮಕನಾಗಿ, ಈಗಲೂ, ಶ್ರೀವ್ಯಾಸ ಸನ್ನಿಧಿಯಲ್ಲಿ, ಬದರಿಕಾಶ್ರಮದಲ್ಲಿ ಶ್ರೀಮಧ್ವರು ಇರುತ್ತಾರೆ (೬೬೨). ಶ್ರೀಮಧ್ವರು ಋಷ್ಯಾದಿಗಳಿಗೆ ಮಾತ್ರ ಜ್ಞಾನೋಪದೇಶಕರಲ್ಲ – ಮತ್ತೇನೆಂದರೆ, ಸರ್ವತ್ರ ಇರುವ ಸಮಸ್ತ ದೇವತೆಗಳೂ, ಶ್ರೀಮಧ್ವರನ್ನು ತಮ್ಮ ಮನಸ್ಸಿನಲ್ಲಿ ಸ್ಥಾಪಿಸಿಕೊಂಡು,

ಆಕೃಷ್ಯ – ಸ್ವಹೃದಯಕ್ಕೆ ಸೆಳೆದುಕೊಂಡು, ಹರ್ಯಂತಿ – ಹರ್ಯಂತಿ ಎಂದರೆ, ಧ್ಯಾಯಂತಿ–ಧ್ಯಾನಿಸುತ್ತಾರೆ; (ಶ್ರೀಮಧ್ವರನ್ನು ತಮ್ಮ ಮನಸ್ಸಿನಿಂದ ಹೊಂದಿ ಚಿಂತಿಸುತ್ತಾರೆ, ಎಂದರ್ಥ).

**ಅಭಿತೋ ವಾ ವ್ಯಾಹರಂತಿ ತಮೀದೃಕ್ ಸುಗುಣಂ ಸುರಾಃ ।**
**ಯದ್ವಾಭಿತಃ ಪ್ರಾಪ್ನುವಂತಿ ಚೇಪ್ಸಯಾ ಶಾಸ್ತ್ರಸಂಪದಾಂ ॥ ೭೭೪ ॥**

(‘ ಹರ್ಯಂತಿ ’ ಎಂಬ ಛಾಂದಸಪದವನ್ನು,) ಅಭಿತಃ–ಸರ್ವರೂ (ಸರ್ವತ್ರ), ಈದೃಕ್ – ಈ ಪರಿಯ, ಸುಗಣಂ – ಸದ್ಗುಣವುಳ್ಳನೆಂದು, ಸುರಾಃ–ದೇವತೆಗಳು, ವ್ಯಾಹರಂತಿ – ಹೇಳುವರು ; ಯದ್ವಾ – ಅಥವಾ (ಮತ್ತು), ಶಾಸ್ತ್ರಸಂಪದಾಂ–ಶಾಸ್ತ್ರರೂಪದ ಭಾಗ್ಯಗಳ, ಈಪ್ಸಯಾ – (ಜ್ಞಾನವನ್ನು ಹೊಂದುವ) ಪಡೆಯುವ ಇಚ್ಛೆಯಿಂದ, ಅಭಿತಃ – ಎಲ್ಲಕಡೆಯಿಂದ ( ಸುತ್ತಲಿನಿಂದಲೂ ), ಪ್ರಾಪ್ನುವಂತಿ–(ಶ್ರೀಮಧ್ವರನ್ನು) ಹೊಂದುತ್ತಾರೆ.

**ಹರ್ಯನ್ನುಷಸಮಿತ್ಯಾದೌ ಪ್ರಾಪ್ತ್ಯರ್ಥೋಽಸ್ತಿ ಯತೋ ಹ್ಯಣಿಃ ।**
**ಅನ್ಯಾರ್ಥಶೂನ್ಯಾ ವಾಗೇಷಾ ಕಿಂ ನ ಬ್ರೂತೇ ಗುರುಂ ಮಮ ॥೭೭೫॥**

ಹರ್ಯನ್ ಎಂಬುದು ಪ್ರಾಪ್ತಿ ಎಂಬರ್ಥವುಳ್ಳದ್ದೆಂಬಲ್ಲಿ ವೈದಿಕ ಪ್ರಯೋಗವನ್ನು ತೋರಿಸುತ್ತಾರೆ.

---

(ಮನಸಾ ಅವರನ್ನು ಹೊಂದಿ) ಧ್ಯಾನಿಸುತ್ತಾರೆ (೭೭೩). ಈ ಪ್ರಕಾರದ ಸದ್ಗುಣಭರಿತರೆಂದು, ದೇವತೆಗಳು ಎಲ್ಲೆಲ್ಲಿಯೂ ಹೇಳಿಕೊಳ್ಳುತ್ತಾರೆ; ಶಾಸ್ತ್ರಜ್ಞಾನವನ್ನು ಅವರಿಂದ ಹೊಂದಲು, ಸುತ್ತಲಿನಿಂದ ಪ್ರಾಪ್ತರಾಗುತ್ತಾರೆ ; ಈ ಎರಡೂ ಅರ್ಥವನ್ನು ‘ಹರ್ಯತಿ’, ಎಂಬ ಪದವು ಹೇಳುತ್ತದೆ ; ಹರ್ಯನ್ ಎಂಬ ಪದವು ಈ ಅರ್ಥದಲ್ಲಿ ವೇದಗಳು ಅನ್ಯತ್ರ ಪ್ರಯೋಗಿಸಿರುವುದೂ ಇದೆ ; ‘ಹರ್ಯನ್ನುಷ-ಸಮರ್ಚಯಃ’ ಎಂಬ ವೇದಮಂತ್ರವು, ಶ್ರೀಮಧ್ವರನ್ನು ಸ್ತುತಿಸುತ್ತ, ಈ ಪದವನ್ನು ಇದೇ ಅರ್ಥದಲ್ಲಿ ಪ್ರಯೋಗಿಸಿದೆ ; ಅನ್ಯಾರ್ಥ ರಹಿತವಾದ ಈ ಪದವು, ನಮ್ಮ ಗುರುಗಳಾದ ಶ್ರೀಮಧ್ವರೂಪೀ ವಾಯುದೇವನನ್ನು ಹೇಳುವುದಿಲ್ಲವೇನು ?

ಹರ್ಯನ್ನುಷಸಂ—ಇತ್ಯಾದೌ—('ಹರ್ಯನ್ನುಷಸಮರ್ಚಯಃ' ಎಂಬಿತ್ಯಾದಿ ಶ್ರುತಿವಾಕ್ಯವನ್ನು ಸಂಗ್ರಹಿಸುತ್ತಾರೆ) ಈ ಶ್ರುತಿವಾಕ್ಯದಲ್ಲಿ, 1 ಯತಃ—ಯಾವ ಕಾರಣದಿಂದ, ಹೃಞಃ—ಹೃಞ್ ಧಾತುವಿಗೆ, ಪ್ರಾಪ್ತ್ಯರ್ಥಃ—ಪ್ರಾಪ್ತಿ(ಹೊಂದುವಿಕೆ) ಎಂಬರ್ಥವು, ಅಸ್ತಿ—ಇರುವುದೋ, ಏಷಾ ವಾಕ್—(ಆದ್ದರಿಂದ) 'ಈ ಪವಿತ್ರಂತೀ' ಶ್ರುತಿಯು, (ಹರ್ಯಂತ ಎಂಬ ಪದವು,) ಅನ್ಯಾರ್ಥಶೂನ್ಯಾ—ಬೇರೆ ಅರ್ಥ ವಿಲ್ಲದ್ದು (ಆಗಿದ್ದು), ಮಮ—ನನ್ನ, ಗುರುಂ—ಗುರುಗಳಾದ ಶ್ರೀಮಧ್ವರನ್ನು, ಬ್ರೂತೇ ನ ಕಿಂ—ಹೇಳುವುದಿಲ್ಲವೇನು ? (ನಿಶ್ಚಯವಾಗಿ ಅವರನ್ನೇ ಹೇಳುತ್ತದೆ).

**ಮಧ್ವೋ ವೋ ನಾಮೇತಿ ವಾಕ್ಚ ಮರುತ್ಸೂಕ್ತೇ ತಮುಜ್ಜಗೌ ||೬೬೬||**

ಶ್ರೀಮದಾಚಾರ್ಯರ ವಿಷಯಕವಾದ ಅತಿ ಸ್ಪಷ್ಟವಾದ ಬೇರೊಂದು ಶ್ರುತಿಯನ್ನು ಹೇಳುತ್ತಾರೆ :—

---

(ನಿಶ್ಚಯವಾಗಿಯೂ ಅವರನ್ನೇ ಪ್ರತಿಪಾದಿಸುತ್ತದೆ); (೬೬೪—೬೬೫). 'ಮಧ್ವೋ ವೋ ನಾಮ ಮರುತಂ' ಎಂಬ ಮತ್ತೊಂದು ಸ್ಪಷ್ಟ ಶ್ರುತಿಯೂ (ಮರುತ್ಸೂಕ್ತದಲ್ಲಿ) ಅವತಾರತ್ರಯಗಳನ್ನು ಕೀರ್ತಿಸುತ್ತದೆ (ಅಡಿ ಟಿಪ್ಪಣಿ ನೋಡಿರಿ) (೬೬೬).

---

1 ಪ್ರಸಕ್ತ ಶ್ರುತಿವಾಕ್ಯವು ಹೀಗಿದೆ: 'ಹರ್ಯನ್ನುಷಸಮರ್ಚಯಃ ಸೂರ್ಯಂ ಹಯನ್ನರೋಚಯಃ | ವಿದ್ವಾಂಶ್ಚಿಕಿತ್ವಾನ್ಹರ್ಯಶ್ವವರ್ಧಸ ಇಂದ್ರವಿಶ್ವಾ ಅಭಿಶ್ರಿಯಃ ||' ಇದರ ಅರ್ಥವೇನೆಂದರೆ :—(ಹೇ)ಹರ್ಯಶ್ವ—ಹೇ ಪರಮೈಶ್ವರ್ಯ ಸಂಪನ್ನಪರಮಾತ್ಮನೇ ! (ಹರಿದ್ವರ್ಣಅಶ್ವವುಳ್ಳ ಇಂದ್ರನಾಮಕನು ಶ್ರೀಹರಿಯು), ವಿದ್ವಾನ್—ಸರ್ವಜ್ಞನೂ, ಚಿಕಿತ್ವಾನ್—(ಜಗತ್ಸೃಷ್ಟ್ಯಾದಿ) ಕರ್ತನೂ ಆದ ನೀನು, ಉಷಸಂ—ಉಷಃಕಾಲವನ್ನು, ಹರ್ಯನ್ (ಪ್ರಾಪ್ನುವನ್)—ಹೊಂದುವನಾಗಿ, ಅರ್ಚಯಃ—ಸ್ನಾನಸಂಧ್ಯಾದಿ ಭಗವತ್ಪೂಜಾ ಕರ್ಮಗಳನ್ನು ಸಜ್ಜನರಿಂದ ಮಾಡಿಸುವನಾಗಿ, ಸೂರ್ಯಂ—(ಉಷಃ ಕಾಲದನಂತರ ಉದಿತ ನಾಗುವ) ಸೂರ್ಯನನ್ನು, ಹರ್ಯನ್—ಹೊಂದುವನಾಗಿ (ಸೂರ್ಯಬಿಂಬದಲ್ಲಿ ಸನ್ನಿಧಾನ ವನ್ನಿಟ್ಟು), ವಿಶ್ವಾಃ—ಸಮಸ್ತವಾದ, ಅಭಿ—ಸುತ್ತಲೂ ಇರುವ, ಶ್ರಿಯಃ—ಶುಭಗಳಾದ ಸಪ್ತ ದ್ವೀಪಗಳನ್ನು (ಅಥವಾ) ದಿಕ್ಕುಗಳನ್ನೂ, ವರ್ಧಸೇ—ಅಲ್ಲಿರುವ ಪ್ರಜೆಗಳ (ಜೀವರ) ಅಭಿವೃದ್ಧಿಗಾಗಿ, ಅರೋಚಯಃ—ಪ್ರಕಾಶಿಸುವನಾಗುವಿ ; (ಸೂರ್ಯನಲ್ಲಿದ್ದು ಸಕಲ ಜಗತ್ತನ್ನು ಪ್ರಕಾಶಗೊಳಿಸುವಿ ; 'ಯದಾದಿತ್ಯಗತಂ ತೇಜೋ ಜಗದ್ಭಾಸಯತೇಖಿಲಂ | ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಂ | ಎಂಬ ಸ್ಮೃತಿ (ಗೀತಾ) ವಾಕ್ಯವೂ ಇದನ್ನೇ ಹೇಳುತ್ತದೆ ;) ಹೀಗೆ ಹರ್ಯಂತಿ ಎಂಬುದಕ್ಕೆ 'ಪ್ರಾಪ್ನುವಂತಿ'—ಹೊಂದುತ್ತಾರೆಂಬ ಅರ್ಥವೂ ಯುಕ್ತವಾಗುತ್ತದೆ.)

*

ತಂ – ಆ ಶ್ರೀಮಧ್ವರನ್ನು, ಮಧ್ವೋ ವೋ ನಾಮ ಇತಿ ವಾಕ್ ಚ – ‘ ಮಧ್ವೋವೋನಾಮ ’ ಎಂಬ ಶ್ರುತಿಯೂ,[1] ಮರುತ್ಸೂಕ್ತೇ-ಮರುತ್ಸೂಕ್ತದಲ್ಲಿ, ಉಜ್ಜಗೌ – (ಅವತಾರತ್ರಯಗಳನ್ನು ಉತ್ಕೃಷ್ಟವಾಗಿ) ಅತಿಶಯ ಸ್ಪಷ್ಟವಾಗಿ ಕೀರ್ತಿಸಿರುತ್ತದೆ.

**ಯದ್ಯತೋ ಮುಖ್ಯಮರುತೋ ವೈರ್ಯುಗ್ರಾ ಯೇ ಕುಮಾರಕಾಃ ।**
**ಅಯಾಸುರ್ಭೂತಲಂ ಭೀಮಹನೂಮನ್ಮಧ್ವನಾಮಕಾಃ ॥ ೬೬೭ ॥**

**ಯೇಚಿದೇವ ಜಗತ್ಯುರ್ವ್ಯಾಂ ರೋದಸ್ಯಾ ಪೃಥಿವೀಂ ದಿವಂ ।**
**ರೇಜಯಂತಿ ಚರಿತ್ರೇಣ ರಾಜಯಂತಿ ಯುಗೇಯುಗೇ ॥ ೬೬೮ ॥**

‘ ಮಧ್ವೋವೋ ’ ಎಂಬ ಶ್ರುತ್ಯರ್ಥದ ವಿವರಣೆಯನ್ನು ಮಾಡುತ್ತಾರೆ :—

ಯತ್–(ಯತಃ) ಯಾವ ಕಾರಣದಿಂದ, ಮುಖ್ಯಮರುತಃ – ಮುಖ್ಯ ವಾಯುವಿನ, ವೈರ್ಯುಗ್ರಾಃ–ದ್ವೇಷದಿಂದ ಉಗ್ರರಾದ (ಕ್ರೂರರಾದ) (ಬಾಹು ಯುದ್ಧ ಮತ್ತು ವಾಗ್ಯುದ್ಧಗಳಲ್ಲಿ ಪ್ರಬಲರಾದ), ಯೇ ಕುಮಾರಕಾಃ–ಯಾವ

---

ಶ್ರುತಿಯಲ್ಲಿ ಯತ್–ಎಂದರೆ ಯತಃ ಎಂದರ್ಥ ; ಮುಖ್ಯ ವಾಯುದೇವನ ವೈರಿಗಳಾದ ದೈತ್ಯರು ಬಾಹುಯುದ್ಧ, ವಾಗ್ಯುದ್ಧಗಳಲ್ಲಿ ಪ್ರಬಲರಾಗಿ, ವಾಯು ಭಕ್ತರನ್ನು ಪೀಡಿಸಲು ಭೂತಲದಲ್ಲಿ, ಸಾಮೂಹಿಕವಾಗಿ ಉತ್ಪನ್ನರಾಗುತ್ತಿರಲು,

[1] ಇಲ್ಲಿ ಸಂಗೃಹೀತವಾದ ಶ್ರುತಿಯು ಹೀಗಿದೆ :—ಮಧ್ವೋವೋನಾಮಮಾರುತಂ ಯಜತ್ರಾಃ ಪ್ರಯಜ್ಞೇಷು ಶವಸಾಮದಂತಿ । ಯೇ ರೇಜಯಂತಿ ರೋದಸೀಚಿದುರ್ವೀಪಿ ನ್ವಂತ್ಯುತ್ಸಂ ಯ ದಯಾಸುರುಗ್ರಾಃ ॥ ’ ಇದರ ಅರ್ಥವು ಈ ಮುಂದಿನಂತಿದೆ : ಯತ್–ಯಾವ ಕಾರಣದಿಂದ (ಯಾವಾಗ) ಉಗ್ರಾಃ–ಬಾಹುಯುದ್ಧ ಮತ್ತೆ ವಾಗ್ಯುದ್ಧಗಳಲ್ಲಿ) ಉಗ್ರರಾದ (ದೈತ್ಯ) ಜನರು, ಅಯಾಸುಃ – ಪ್ರಾಪ್ತರಾದರೋ (ಆಗ), ಉತ್ಸಂ–ಹೇ ಹನುಮದ್ಭೀಮಮಧ್ವರೂಪಾವತಾರನಾದ ಹೇ ವಾಯುದೇವ !) ನಿನ್ನ ಚರಣಕಮಲದಲ್ಲಿ ಉತ್ಸುಕನಾದ ( ಉತ್ಸಾಹವುಳ್ಳ ), ಪುರುಷನನ್ನು, ಪಿನ್ವಂತಿ–( ಸಕಲಭಾಗ್ಯವನ್ನಿತ್ತು ) ರಕ್ಷಿಸುತ್ತವೆ ; (‘ ಪಿನ್ವ ಸೇಚನೇ ’ ಎಂಬ ಧಾತುವಿನಿಂದ) (ಸತ್ಯಲೋಕದಿಂದ ಭೂಮಿಗೆ ಪ್ರಾಪ್ತನಾಗಿ, ಭೂಮಿಯಲ್ಲಿರುವ ನಿಮ್ಮ ಭಕ್ತ ಜನರ ರಕ್ಷಣೆಯನ್ನು ಮಾಡುವರೆಂಬ ವಾಯು ಮಹಿಮೆಯನ್ನು ಹೇಳುವ ಕಾಣ್ವೋಕ್ತಿಯನ್ನು ಸತ್ಯಗೊಳಿಸಿದುದು ಪ್ರಸಿದ್ಧ ವಾಗಿದೆ) ; ಯೇ–ಕೇಚಿತ್–ಯಾವವು ಕೆಲವು ಅವತಾರ ರೂಪಗಳು), ಉರ್ವೀ–ಭೂಮಿ

ತುಚ್ಛರಾದ (ಅಲ್ಪರಾದ) ದೈತ್ಯರು (ದೈತ್ಯಸಂತಾನಗಳು), ಭೂತಲಂ–ಭೂಮಿಗೆ, ಅಯಾಸುಃ–(ವಾಯುಭಕ್ತರನ್ನು ಹಿಂಸಿಸಲು) ಪ್ರಾಪ್ತರಾದರೋ, ಭೀಮಹನೂಮನ್ಮಧ್ವನಾಮಕಾಃ–(ಆಗ) ಭೀಮ, ಹನುಮಾನ್, ಮತ್ತು ಮಧ್ವನಾಮಕವಾದ ರೂಪಗಳು (ಅವತಾರಗಳು), ಯೇಚಿದೇವ–ಯಾವವು ಯಾವ ಕಾಲದಲ್ಲಿ ಅವಶ್ಯಕವೋ ಆಗ, ಜಗತಿ–ಜಗತ್ತಿನಲ್ಲಿ, ಉರ್ವ್ಯಾ–ಜಗತ್ತಿನಲ್ಲಿ, ರೋದಸ್ಯಾ–ಎಂದರೆ, ಪೃಥಿವೀಂ ದಿವಂ–ಪೃಥ್ವಿಯನ್ನೂ, ದ್ಯು (ಸ್ವರ್ಗಲೋಕವನ್ನು), ರೇಜಯಂತಿ–ಪ್ರಕಾಶಿಸುತ್ತವೆ (ಎಂದರೆ), ಚರಿತ್ರೇಣ–ತಮ್ಮ ಚರಿತ್ರೆಯಿಂದ (ಕೃತಿಗಳಿಂದ), ಯುಗೇ ಯುಗೇ–ಆಯಾ ಯುಗದಲ್ಲಿ (ಅವತಾರಗಳಾದ ಯುಗದಲ್ಲಿ), ರಾಜಯಂತಿ–ವಿರಾಜಿಸುತ್ತವೆ (ಅಸುರಮೋಹಕವ್ಯಾಪಾರಗಳಿಂದ ಸಹ ತನ್ನ ಶಕ್ತಿಯನ್ನು ಗೂಹನಮಾಡಿಕೊಳ್ಳುತ್ತವೆ; ಸಜ್ಜನರನ್ನು ಜ್ಞಾನಾದಿ ಸಂಪತ್ತನ್ನಿತ್ತು ರಕ್ಷಿಸುತ್ತವೆ.

---

ಭೀಮ, ಹನುಮಂತ, ಮಧ್ವರೆಂಬ ನಾಮಗಳಿಂದ, ಮುಖ್ಯಪ್ರಾಣನು ಅವಶ್ಯಕವಾದ ಯಾವುದೊಂದು ರೂಪದಿಂದ ಅವತರಿಸಿ, ಭೂಲೋಕ ಸ್ವರ್ಗಾದಿ ಲೋಕಗಳಲ್ಲಿ, ತನ್ನ ನಾನಾ ಕೃತಿಗಳಿಂದ, ಆಯಾ ಯುಗಾನುಸಾರವಾಗಿ ಶಕ್ತಿ ಗೂಹನಾದಿ ಮೋಹಕ ವ್ಯಾಪಾರಗಳಿಂದಲೂ, ವಿರಾಜಿಸುತ್ತಾನೆ (೬೬೭–೬೬೮).

---

ಯಲ್ಲಿ, ರೋದಸೀ–ದ್ಯಾವಾ ಪೃಥ್ವಿಗಳಲ್ಲಿ (ದ್ಯುಲೋಕ ಭೂಲೋಕಗಳಲ್ಲಿ), ರೇಜಯಂತಿ–ರಾಜಿಸುತ್ತವೆಯೋ (ಚರಿತ್ರೆಯಿಂದಲೂ ವಿಚಿತ್ರ ವ್ಯಾಪಾರಗಳಿಂದ ಅಸುರಜನ ಮೋಹಕ್ಕಾಗಿ, ಸ್ವಬಂಧನ (ನಹುಷನಿಂದ) ದುರ್ಯೋಧನಾದಿಗಳ ಶೃಂಖಲೆಗಳಿಂದ ಸಹ ಬಂಧಿತನಂತೆ ಸ್ವಶಕ್ತಿಯನ್ನು ಕಾಂತಿಯನ್ನು ಗೂಹನಮಾಡಿದ') ಎಂಬರ್ಥವನ್ನು ಸೂಚಿಸಲು ರೇಜಯಂತಿ ಎಂಬ ಅಲೌಕಿಕ ಪ್ರಯೋಗವಿದೆ), ('ಹೇ ವಾಯುದೇವ!) ವಃ–ನಿಮ್ಮ ಸಂಬಂಧವಾದ, ಮಧ್ವೋನಾಮ–ಶ್ರೀಮಧ್ವನಾಮಕ, ತಂ ಮಾರುತಂ–ಮುಖ್ಯಪ್ರಾಣಪುತ್ರನಾದ ಅಗ್ರಗಣ್ಯನಾದ ಅವತಾರವನ್ನು, ಯಜತ್ರಾಃ–ಯಾಜಕರು (ಯಜ್ಞರಕ್ಷಕರಾದ ಯಜಮಾನಾದಿ ಋತ್ವಿಜರು ಮತ್ತು ಸಭ್ಯರು), ಯಜ್ಞೇಷು–ಯಜ್ಞಕರ್ಮವನ್ನು ಆಚರಿಸುತ್ತಿರಲು, ಶವಸಾ–ಅನಾಯಾಸದಿಂದ, ರಚಿತವಾದ ವೇದ ಖಂಡಾರ್ಥ ಕಥನದಿಂದ, (ಕರ್ಮನಿರ್ಣಯವೆಂಬ ನಿಮ್ಮ ಗ್ರಂಥ ಶ್ರವಣದಿಂದ), ಪ್ರಮದಂತಿ–ಉತ್ಕೃಷ್ಟ ಹರ್ಷವನ್ನು ಹೊಂದಿರುವರು ('ಛಂದಃ ಖಂಡಾರ್ಥವಾದೀಜಿತಕುಮತಿಕುಲಃ' ಎಂದು ಅಣುಮಧ್ವ-ವಿಜಯ ವಚನವೂ ಈ ವಿಷಯದಲ್ಲಿ ಇರುತ್ತದೆ).

**ಪಿನ್ವಂತಿ ಪಾಲಯಂತ್ಯುತ್ಸಮುತ್ಸುಕಂ ಸ್ವಪದಾಂಬುಜೇ ।**
**ಪಿವಿಂ ಮಿವಿಂಚ ಯುದ್ಧಾಥಾತುಂ ಸೇಚನೇರ್ಥೇsನುಶಾಸನೇ ।**
**ಪಾಲನಂ ಚಾಖಿಲೈರಿಷ್ಟೈಃ ಸೇಚನಂ ಯದ್ವಿದುರ್ಬುಧಾಃ ॥ ೬೬೯ ॥**

ಪಿನ್ವಂತಿ–(ತತಃ–ದೈತ್ಯಪೀಡೆಯಿಂದ) ಎಂದರೆ, ಉತ್ಸಂ–ಉತ್ಸನೆಂದರೆ, ಸ್ವಪದಾಂಬುಜೇ–ತನ್ನ ಪಾದ ಕಮಲದಲ್ಲಿ, ಉತ್ಸುಕಂ–ಉತ್ಸಾಹವುಳ್ಳ ಭಕ್ತನನ್ನು, ಪಾಲಯಂತಿ–ರಕ್ಷಿಸುತ್ತವೆ; ಪಿವಿಂ ಚ ಮಿವಿಂ–ಪಿವಿ ಮತ್ತೆ ಮಿವಿಗಳನ್ನು, ಯುತ್ ಥಾತುಂ–ಕೂಡಿರುವ ಧಾತುವನ್ನು, ಸೇಚನೇ ಸೇಚನವೆಂಬ ಅರ್ಥದಲ್ಲಿ ಪ್ರಯೋಗವೆಂದು, ಅನುಶಾಸನೇ–ಕೋಶದಲ್ಲಿ (ಇರುತ್ತದೆ); ಯತ್–ಯಾವ ಕಾರಣದಿಂದ, ಬುಧಾಃ–ಶಬ್ದಶಾಸ್ತ್ರಜ್ಞರು, ಪಾಲನಂ ಚ–ಪಾಲನವೆಂದರೆ, ಅಖಿಲೈಃ–ಸಕಲ, ಇಷ್ಟೈಃ–ಇಷ್ಟಗಳಿಂದ, ಸೇಚನಂ–ಸುರಿಸುವುದು (ಪ್ರೋಕ್ಷಣಮಾಡುವುದು), (ಎಂದು), ವಿದುಃ–ತಿಳಿಯುವರೋ (ಆದ್ದರಿಂದ ಉಕ್ತಶ್ರುತ್ಯರ್ಥವು ಯೋಗ್ಯವೇ ಆಗಿದೆ).

**ಬಲಜ್ಞಾನಾಖ್ಯಕಾರ್ಯೇಷು ತೇಷು ಪುತ್ರೇಷು ಹೇsನಿಲಾಃ ।**
**ಮರುತೋ ಯಃ ಪ್ರಿಯಂ ಮಧ್ವೋ ನಾಮ ಮಾರುತಮುದ್ಭೃತಂ**
**॥ ೬೭೦ ॥**

**ಯಜತ್ರಾ ಯಾಜಕಾಃ ಸರ್ವೇ ಯಜ್ಞೇಷೂಕ್ತಿವಿಶಾರದಂ ।**
**ಸುಖೇನ ಭರಿತಾಃ ಸಂತೋ ದೃಷ್ಟ್ವಾ ಶ್ರುತ್ವಾ ಚ ತದ್ವಚಃ ।**
**ಪ್ರಮುದಂತಿ ಪ್ರಹೃಷ್ಯಂತಿ ಕರ್ಮನಿರ್ಣಯಕೋವಿದಂ ॥ ೬೭೧ ॥**

ಬಲಜ್ಞಾನಾಖ್ಯಕಾರ್ಯೇಷು–ಬಲಜ್ಞಾನಗಳೆಂಬ ಕಾರ್ಯಗಳುಳ್ಳ, ತೇಷು ಪುತ್ರೇಷು–ಆ ವಾಯುಪುತ್ರರಲ್ಲಿ ಮೂಲದೇವನು ಪುತ್ರನೆಂದೂ, ಅಂಶದಿಂದಾದ

---

ತನ್ನ ಪಾದಕಮಲವನ್ನು ಉತ್ಸಾಹದಿಂದ ಆಶ್ರಯಿಸಿದ ಭಕ್ತನನ್ನು ಈ ರೂಪಗಳು, (ಅವತಾರ ರೂಪವು), 'ಪಿನ್ವಂತಿ', ಎಂದರೆ ರಕ್ಷಿಸುತ್ತದೆ; ಪಿವಿ, ಮಿವಿ ಯುತವಾದ ಧಾತುವನ್ನು 'ಸೇಚನ' ಎಂಬರ್ಥದಲ್ಲಿ ಪ್ರಯೋಗಿಸಲಾಗುವುದೆಂದು ಶಬ್ದಶಾಸ್ತ್ರವು ಹೇಳುತ್ತಿದೆ. ಸೇಚನವೆಂದರೆ, ಇಷ್ಟಾರ್ಥಗಳನ್ನು ಸುರಿಸುವುದು (ವರ್ಷಿಸುವುದು) ಎಂಬರ್ಥವನ್ನು ಜ್ಞಾನಿಗಳು ತಿಳಿಯುತ್ತಾರೆ (೬೬೯). ಬಲಜ್ಞಾನಾದಿ ಕರ್ಮಗಳಲ್ಲಿ ಪ್ರವೃತ್ತರಾದ ವಾಯುಪುತ್ರರಲ್ಲಿ, ಮುಖ್ಯ

ಅವತಾರವು (ಆ ಮೂಲ ಅಂಶಿಯ ಅಂಶಗಳು) ಪುತ್ರರೆಂದೂ ವ್ಯವಹರಿಸಲಾಗುತ್ತದೆ; ಶ್ರೀಮಧ್ವೋ ನಾಮ–ಮಧ್ವವೆಂಬ ನಾಮವುಳ್ಳ, ಹೇ ಅನಿಲಾಃ–ಹೇ! ವಾಯುಪುತ್ರರೇ! ಮರುತಃ–ವಾಯುದೇವನಿಗೆ ಯಃ – ಯಾವುದು ಪ್ರಿಯಂ–ಪ್ರಿಯವಾದುದೋ, ಅದ್ಭುತಂ–ಆಶ್ಚರ್ಯಕರವಾದ ವ್ಯಾಪಾರಗಳುಳ್ಳದ್ದೆ ಆ ರೂಪವನ್ನು, ಯಜತ್ರಾಃ–ಯಾಜಕರು, ಸರ್ವೇ–ಎಲ್ಲರೂ, ಯಜ್ಞೇಷು ಯಜ್ಞ ಕರ್ಮಗಳಲ್ಲಿರುವಾಗ, ಉಕ್ತಿವಿಶಾರದಂ–(ಯಜ್ಞಕರ್ಮ ಸಂಬಂಧವಾದ ಉಕ್ತಿಗಳನ್ನು ವಿವರಿಸುವುದರಲ್ಲಿ ವಿಶಾರದನಾದವನನ್ನು, ಕರ್ಮನಿರ್ಣಯ ಕೋವಿದಂ–ಕರ್ಮವನ್ನು ಕ್ರಮಾನುಸಾರವಾಗಿ ನಿಶ್ಚಯಿಸುವುದರಲ್ಲಿ ಅತಿ ನಿಪುಣನಾದ ಆ ಮಧ್ವನನ್ನು; ಸುಖೇನ ಭರಿತಾಃ–ಆನಂದಪೂರ್ಣರಾಗಿ, ಸಂತಃ–ಇದ್ದವರಾಗಿ, ತದ್ವಚಃ–ಅಧರ ಉಕ್ತಿಗಳನ್ನು, ದೃಷ್ಟ್ವಾ–ಕಂಡು, ಚ ಮತ್ತು ಶ್ರುತ್ವಾ–ಶ್ರವಣ ಮಾಡಿ, (ಕರ್ಮನಿರ್ಣಯ ಗ್ರಂಥ ನಿರ್ಮಾಣಚಾತುರ್ಯವನ್ನು ತಿಳಿದು), ಪ್ರಮದಂತಿ–ಅತಿಶಯವಾಗಿ ಹರ್ಷಿಸುತ್ತಾರೆ.

**ಇತಿ ಶ್ರುತಿರ್ಯಚ್ಚರಿತ್ರಂ ವಕ್ತ್ಯತ್ರೈವ ಪ್ರಚಾರಿತಂ ।**
**ಸ ಮಧ್ವೋ ವೈದಿಕಾಚಾರ್ಯಃ ಸಿದ್ಧಃ ಸದ್ವಿದ್ವದಗ್ರಣೀಃ ॥ ೬೭೨ ॥**

ಇತಿ–ಹೀಗೆಂದು, ಶ್ರುತಿಃ–ಶ್ರುತಿಯು, ಯಚ್ಚರಿತ್ರಂ–ಯಾರ (ಶ್ರೀಮಧ್ವರ) ಕೃತಿಯನ್ನು, ಅತ್ರ ಏವ–ಭೂಲೋಕದಲ್ಲಿಯೇ (ಆದುದೆಂದು), ಪ್ರಚಾರಿತಂ–

---

ವಾಯುದೇವನಿಗೆ, ಮಧ್ವನಾಮಕನು ಅತಿಪ್ರಿಯನು; ಯಜ್ಞಕಾರ್ಯದಲ್ಲಿ ಪ್ರವೃತ್ತರಾದ ಋತ್ವಿಜರು, ಯಾಜ್ಞಿಕ ವಿಷಯಕ ಶ್ರುತ್ಯರ್ಥಗಳನ್ನು ನಿರೂಪಿಸುವುದರಲ್ಲಿ, ಶ್ರುತಿವಾಕ್ಯಗಳನ್ನು ಯಥಾಯೋಗ್ಯವಾಗಿ ಹೊಂದಿಸಿ, ಯೋಗ್ಯಾರ್ಥವನ್ನು ನಿರೂಪಿಸುವುದರಲ್ಲಿ ವಿಶಾರದರಾದ ಶ್ರೀಮಧ್ವರನ್ನು, ಕಂಡು, ಕೇಳಿ, ವಿಶೇಷವಾಗಿ ಹರ್ಷಿಸಿರುತ್ತಾರೆ; ಅದ್ಭುತವಾದ ಶ್ರೀಮಧ್ವರು ಆಗಿಂದಾಗ ರಚಿಸಿ ತಾವು ಹೇಳಿದ ಅರ್ಥಯೋಜನೆಯ ಸ್ಥೈರ್ಯಾರ್ಥವಾಗಿ, ಋತ್ವಿಜರಿಗೆ ಕೊಟ್ಟ ಕರ್ಮನಿರ್ಣಯ ನಾಮಕ ಗ್ರಂಥವು ಅದ್ಭುತವಾದುದು; ಈ ವಿಷಯವೂ 'ಪ್ರಮದಂತಿ' (ಪ್ರಹರ್ಷಯಂತಿ) ಎಂಬ ಶ್ರುತಿಭಾಗದಲ್ಲಿ ನಿರೂಪಿತವಾಗಿದೆ (೬೭೦–೬೭೧). ಹೀಗೆ, ಶ್ರೀಮಧ್ವರು ಇಲ್ಲಿ (ಪೃಥ್ವಿಯಲ್ಲಿ ಶ್ರೀಮಧ್ವರೂಪದಿಂದ) ಮಾಡಿದ ಅದ್ಭುತ ಕೃತಿಯನ್ನು ಶ್ರುತಿಯು ವರ್ಣಿಸುವುದರಿಂದ, ಆ ವೇದ

(ಯಜ್ಞಾಚರಣಕಾಲದಲ್ಲಿಯೇ ತೊಡಕಿನ ಅರ್ಥಗಳನ್ನು ಸಮಂಜಸವಾಗಿ ಯೋಜನೆಮಾಡಿ) ಕರ್ಮನಿರ್ಣಯವೆಂಬ ಗ್ರಂಥವನ್ನೇ ಪ್ರಚಾರಮಾಡಿದರೆಂಬ ಕೃತಿಯನ್ನು, ವಕ್ತಿ–ಹೇಳುತ್ತದೆಯೋ, ಸ ಮಧ್ವಃ–ಆ ಶ್ರೀ ಮಧ್ವಾವತಾರವು, ವೈದಿಕಾಚಾರ್ಯಃ–ವೇದಜ್ಞಾನವುಳ್ಳವರೂ ಉಪದೇಶಿಸುವ ಸಾಮರ್ಥ್ಯವುಳ್ಳವರೂ ಎಂದೂ ಸದ್ವಿದ್ವದಗ್ರಣೀಃ–ಸಚ್ಛಾಸ್ತ್ರಪ್ರವೀಣರೆಂದೂ, ಸಿದ್ಧಃ–ಸಿದ್ಧವಾಗುತ್ತದೆ.

**ತದಸ್ಯೇತಿ ಶ್ರುತೌ ಪ್ರೋಕ್ತೋ ವಿಷ್ಣೋಸ್ತು ಪರಮೇ ಪದೇ ।**
**ಉತ್ಸ ಔತ್ಸುಕ್ಯವಾನ್ಮಧ್ವಃ ಕೋವಾ ಸಿದ್ಧೋ ನಿಗದ್ಯತಾಂ ।**
**ಮಧ್ವಶ್ರುತೇರ್ವಿಷ್ಣುಭಕ್ತಿಲಿಂಗಾಚ್ಚಾಸೌ ಗುರುರ್ಹಿ ನಃ ॥ ೬೭೩ ॥**

ತದಸ್ಯೇತಿಶ್ರುತೌ – ತದಸ್ಯ ಇತ್ಯಾದಿ ಶ್ರುತಿಯಲ್ಲಿ,[1] ಪ್ರತಿಪಾದ್ಯನಾಗಿ, ವಿಷ್ಣೋಃ–ಶ್ರೀಮಹಾವಿಷ್ಣುವಿನ, ಪರಮೇ–ಅತ್ಯುತ್ತಮವಾದ, ಪದೇ–ಸ್ವರೂಪದಲ್ಲಿ, ಉತ್ಸಃ – ಎಂದರೆ, ಔತ್ಸುಕ್ಯವಾನ್ – ಉತ್ಸಾಹವುಳ್ಳ ಮಧ್ವಃ–ಶ್ರೀಮಧ್ವರು, ಕೋವಾ–ಅನ್ಯರಾರು, ಸಿದ್ಧಃ–ಹೀಗೆ ಶ್ರುತಿ ಸಿದ್ಧರು. ? ನಿಗದ್ಯತಾಂ–ಹೇಳಲ್ಪಡಲಿ

---

ಜ್ಞಾನಿಗಳಾದ ವೈದಿಕಾಚಾರ್ಯರೆಂದೂ, ಅನ್ಯ ಸಚ್ಛಾಸ್ತ್ರಗಳ ಅಗ್ರಗಣ್ಯರೆಂದೂ ಸಿದ್ಧವಾಗುತ್ತದೆ (೬೭೨). 'ತದಸ್ಯ ಪ್ರಿಯಮಭಿಪಾಥೋ' ಇತ್ಯಾದಿ ಶ್ರುತಿಯು

---

[1] 'ತದಸ್ಯ ಪ್ರಿಯಮಭಿಪಾಥೋ ಅಶ್ಯಾಂ ನರೋ ಯತ್ರ ದೇವಯವೋ ಮದಂತಿ । ಉರುಕ್ರಮಸ್ಯ ಸಹಿಬಂಧುರಿತ್ಥಾ ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ ।' ಎಂಬುದು ಇಲ್ಲಿ ಸಂಗೃಹೀತವಾದ ಶ್ರುತಿಯು ; ಅದರ ಅರ್ಥವೇನೆಂದರೆ:—ಪ್ರಿಯಂ–ಸಕಲ ಶ್ರುತಿ ಸ್ಮೃತಿಗಳಿಗೂ, ಅವುಗಳ ಪ್ರವರ್ತಕರಾದ ಮುನಿಗಳಿಗೂ ಹರ್ಷಪ್ರದವಾದ, ತತ್ ಅಭಿಪಾಥಃ – ಅಕಾಲಮೃತ್ಯುಹರವೆಂದು ಪ್ರಸಿದ್ಧವಾದ, ನಾರಾಯಣನ ಸರ್ವಾಂಗಗಳಲ್ಲಿ ಅಭಿಷಿಕ್ತವಾದ ತೀರ್ಥವನ್ನು, ನರಃ–ಮನುಷ್ಯನಾದ ನಾನು, ಅಶ್ಯಾಂ–(ಪಾನಂ ಕುರ್ಯಾಂ) ಪಾನಮಾಡುತ್ತೇನೆ (ಅಂತಃಶುದ್ಧಿಯೇ ಮುಖ್ಯವಾದ್ದರಿಂದ 'ಅಶ್ಯಾಂ' ಎಂದು ಹೇಳಲಾಗಿದೆ) ; ಯತ್ರ–ವಿಷ್ಣ್ವಂಗ ಸಂಬಂಧದಿಂದ ಅತಿಪವಿತ್ರವಾದ ತೀರ್ಥದಲ್ಲಿ, ದೇವಯವಃ–ಬ್ರಹ್ಮಾದಿ ದೇವತೆಗಳೆಲ್ಲರೂ, (ದೇವಯುಃ ಎಂಬ ಶಬ್ದವಿದು), ಮದಂತಿ–ಹರ್ಷಿಸುತ್ತಾರೆ (ವಿಷ್ಣುಪಾದೋದಕವು ದೇವತೆಗಳಿಗೂ ಹರ್ಷಪ್ರದವಾಗಿರಲು, ಮನುಷ್ಯರಿಗೆ ಕೈಮುತ್ಯವನ್ನು ತೋರಿಸಲು ಇದನ್ನು ಶ್ರುತಿಯು ಹೇಳುತ್ತದೆ). (ಇದರಿಂದ ಬ್ರಹ್ಮಾದಿ ಮನುಷ್ಯಾಂತರಾದ ಸಕಲರಿಗೆ ವಿಷ್ಣು ಪಾದೋದಕವು ವಿಹಿತವೆಂದೂ ಸಿದ್ಧವಾಗುತ್ತದೆ) ; (ಮುಖ್ಯಪ್ರಾಣನ ಮುಖ್ಯಾವತಾರರಾದ ಶ್ರೀಮಧ್ವರಿಗೂ, ವಿಷ್ಣುಪಾದೋದಕವು ಪರಮ

(ಯಾರೂ ಇಲ್ಲ) ; ಮಧ್ವಶ್ರುತೇಃ–ಶ್ರೀಮಧ್ವರನ್ನೇ ಪ್ರತಿಪಾದಿಸುವ ಈ ಶ್ರುತಿ ಸಮೂಹದಿಂದಲೂ, ವಿಷ್ಣುಭಕ್ತಿಲಿಂಗಾತ್ ಚ–ವಿಷ್ಣುವಿನ ಅಸದೃಶಭಕ್ತಿರೂಪ ಲಿಂಗದಿಂದಲೂ, ಅಸೌ–ಇವರೇ, ನಃ–ನಮ್ಮ, (ವೈಷ್ಣವರ–ವಿಷ್ಣು ಭಕ್ತರ), ಗುರುಃ–ಗುರುಗಳು (ಆಗಿರುವರು), ಹಿ–ವೈಷ್ಣವಾಚಾರ್ಯ, ಪೂರ್ಣಪ್ರಜ್ಞಾಚಾರ್ಯರೆಂಬ ಪ್ರಸಿದ್ಧಿಯೂ ಇರುತ್ತದೆ.

**ಯತಃ ಶ್ರುತ್ಯೋರುಕ್ರಮಸ್ಯ ಸ ಹಿ ಬಂಧುರಿತೀರ್ಯತೇ ।**
**ತತಸ್ತಂ ಸಾ ಗುರುಂ ಮುಖ್ಯ ಪ್ರಾಣರೂಪಂ ನ್ಯರೂರುಪತ್ ॥ ೭೭೪ ॥**

ಯತಃ–ಯಾವ ಕಾರಣದಿಂದ, ಶ್ರುತ್ಯಾ–ಶ್ರುತಿಯಿಂದ, ಉರುಕ್ರಮಸ್ಯ–ತ್ರಿವಿಕ್ರಮರೂಪೀ ಶ್ರೀವಿಷ್ಣುವಿನ, ಬಂಧುಃ–ಬಂಧುವು (ಪುತ್ರ ಮತ್ತು ಶಿಷ್ಯತ್ವಗಳಿಂದ), ಸಃ ಹಿ–ಈ ಮಧ್ವರೇ ಎಂದು, ಇತಿ–ಎಂದು, ಈರ್ಯತೇ–ನಿರೂಪಿತವಾಗಿದೆಯೋ, ತತಃ–ಆದ್ದರಿಂದ, ತಂ–ಶ್ರೀಮಧ್ವರನ್ನೇ, ಮುಖ್ಯಪ್ರಾಣರೂಪಂ ಗುರುಂ–ಮುಖ್ಯ ಪ್ರಾಣರೂಪನಾದ (ಅವತಾರನಾದ) ಗುರುವನ್ನಾಗಿ, ಸಾ–ಆ ಪ್ರಸಿದ್ಧ ಶ್ರುತಿಯು, ನ್ಯರೂರುಪತ್–(ನಿಶ್ಚಯಿಸಿ) ನಿರೂಪಿಸಿರುತ್ತದೆ.

---

ವಿಷ್ಣುರೂಪದಲ್ಲಿ, ಅತ್ಯಂತ ಉತ್ಸಾಹಯುಕ್ತನಾದ ಶ್ರೀಮಧ್ವರೂಪೀ ವಾಯುದೇವನನ್ನು ವರ್ಣಿಸುತ್ತದೆ ; ಹೀಗೆ ಶ್ರುತಿ ಸಿದ್ಧವಾದ ವಿಷ್ಣುಭಕ್ತಿ ಯುಕ್ತನಾದವನು, ಬೇರಾವನಿರುವನು ? (ಯಾರೂ ಇಲ್ಲ) ; ವಿಷ್ಣುಭಕ್ತಿಯಲ್ಲಿ ಅತ್ಯಂತ ಶ್ರೇಷ್ಠರೆಂಬ ಲಿಂಗದಿಂದ ಸಹ ಅವರೇ ನಮ್ಮ ಗುರುಗಳಾದ ಪೂರ್ಣಪ್ರಜ್ಞರೆಂಬ ಅನ್ವರ್ಥನಾಮವುಳ್ಳ ಶ್ರೀಮದಾಚಾರ್ಯರು (೭೭೩). 'ತದಸ್ಯ' ಎಂಬ ಶ್ರುತಿಯು, ಶ್ರೀಮಧ್ವರು, ತ್ರಿವಿಕ್ರಮರೂಪೀ ಶ್ರೀಹರಿಯು ಮುಖ್ಯ ಬಂಧುವೆಂದೂ, ಪುತ್ರನಾಗಿಯೂ, ಶಿಷ್ಯನಾಗಿಯೂ ಅತಿ ಸಮೀಪದ ಬಂಧುತ್ವವನ್ನು ಪ್ರತಿಪಾದಿಸು

---

ಪ್ರಿಯವೆಂದು ಸಾಧಿಸಲು ಉತ್ತರಾರ್ಧಶ್ರುತಿಯು ಪ್ರವೃತ್ತವಾಗಿದೆ) ಪರಮೇ–ಸರ್ವೋತ್ತಮನಾದ, ವಿಷ್ಣೋಃ–ಶ್ರೀವಿಷ್ಣುವಿನ, ಪದೇ–ಪಾದದಲ್ಲಿ (ಸ್ವರೂಪದಲ್ಲಿ), ಉತ್ಸಃ–ಉತ್ಸುಕನಾದ, ಸಃ–ಆ (ಪ್ರಸಿದ್ಧ), ಮಧ್ವಃ – ಶ್ರೀಮಧ್ವಮುನಿಯು, ಇತ್ಥಾ–ಪೂರ್ವೋಕ್ತ ರೀತಿಯಲ್ಲಿ (ವಿಷ್ಣು ಪಾದೋದಕ ಪ್ರಾಶನದಿಂದ), ಉರುಕ್ರಮಸ್ಯ–(ಉತ್ಕೃಷ್ಟ ಪಾದವಿಕ್ಷೇಪವುಳ್ಳ) ತ್ರಿವಿಕ್ರಮನ, ಬಂಧುಃ ಹಿ-(ಪ್ರೀತಿಯ ಪುತ್ರನಾಗಿ) ಬಂಧುವೆನಿಸಿರುವನು–ಶಿಷ್ಯನಾಗಿಯೂ ಬಂಧುವಾಗಿರುವನು.

**ಯಸ್ಮಿನ್ ಸ್ಥಿತೇ ಸ್ಥಿತೋಽಹಂ ಸ್ಯಾಂ ಯದ್ಗತೌ ಚ ಗತೋಽಸ್ಮ್ಯಹಂ ।**
**ತಂ ಸ್ರಕ್ಷ್ಯಾಮೀತಿ ಮನ್ವಾನಃ ಪ್ರಾಣಂ ಸೋಽಸೃಜತ ಪ್ರಭುಃ ॥೬೭೫॥**

**ಇತ್ಯಾಹೋಪನಿಷದ್ಯಸ್ಮಾತ್ತಸ್ಮಾತ್ಪ್ರಿಯಕುಮಾರಕಃ ।**
**ಪ್ರಾಣ ಏವ ಹರೇರ್ಬಂಧುಃ ಸ ಏವಾತ್ರಾಪಿ ಕೀರ್ತ್ಯತೇ ॥ ೬೭೬ ॥**

ವಿಷ್ಣುಬಂಧುತ್ವವು ಮುಖ್ಯಪ್ರಾಣನಿಗೇ ಏಕೆಂದರೆ ಹೇಳುತ್ತಾರೆ :—

ಈ ಶ್ಲೋಕದಲ್ಲಿ 'ಕಸ್ಮಿನ್ನ್ವಹಮುತ್ಕ್ರಾಂತ ಉತ್ಕ್ರಾಂತೋ ಭವಿಷ್ಯಾಮಿ ಕಸ್ಮಿನ್ ಸ್ಥಿತೇ ಪ್ರತಿಷ್ಠಾಸ್ಯಾಮೀತಿ ಸ ಪ್ರಾಣಮಸೃಜತ।' ಎಂಬ ಶ್ರುತಿಯು ಸಂಗೃಹೀತವಾಗಿದೆ: ಆ ಶ್ರುತ್ಯರ್ಥವೇ ಈ ಶ್ಲೋಕರೂಪದಲ್ಲಿದೆ: ಯಸ್ಮಿನ್ ಸ್ಥಿತೇ-ಯಾರು ಇರುತ್ತಿರಲು, ಅಹಂ-ನಾನು, ಸ್ಥಿತಃ ಸ್ಯಾಂ-ಇರುವವನಾಗುತ್ತೇನೆ; ಯದ್ಗತೌ ಚ-ಯಾರು ಹೋದರೆ ಮಾತ್ರ, ಅಹಂ-ನಾನು, ಗತೋಽಸ್ಮಿ-ಹೋಗುವವನಾಗುತ್ತೇನೆ (ಪ್ರಾಣಿ ದೇಹಗಳಲ್ಲಿ), ತಂ-ಅಂಥವನನ್ನು, ಸ್ರಕ್ಷ್ಯಾಮಿ-ಸೃಷ್ಟಿಮಾಡುತ್ತೇನೆ, ಇತಿ-ಹೀಗೆಂದು, ಮನ್ವಾನಃ-ಆಲೋಚಿಸಿ (ತಿಳಿದು-ಸಂಕಲ್ಪಿಸಿ), ಸಃ-ಆ ಪರಮಾತ್ಮನು, ಪ್ರಭುಃ-ಇಚ್ಛಾನುಸಾರವಾದ ಸೃಷ್ಟಿಯಲ್ಲಿ ಸಮರ್ಥನಾಗಿದ್ದು, ಪ್ರಾಣಂ-ಮುಖ್ಯಪ್ರಾಣನನ್ನು, ಅಸೃಜತ-ಸೃಷ್ಟಿಸಿದನು; ಯಸ್ಮಾತ್-ಯಾವ ಕಾರಣದಿಂದ, ಉಪನಿಷತ್-ಉಪನಿಷತ್ತು, ಇತ್ಯಾಹ-ಹೀಗೆ ಹೇಳಿದೆಯೋ, ತಸ್ಮಾತ್-ಆ ಕಾರಣದಿಂದ, ಪ್ರಾಣ ಏವ-ಮುಖ್ಯ ಪ್ರಾಣನೇ, ಪ್ರಿಯ ಕುಮಾರಕಃ-(ಭಗವಂತನ) ಪ್ರಿಯಪುತ್ರನು; ಸ ಏವ-ಆತನೇ ಬಂಧುಃ-ಬಂಧುವು ಎಂದು, ಅತ್ರಾಪಿ-ಈ ಶ್ರುತಿಯಲ್ಲಿಯೂ, ಕೀರ್ತ್ಯತೇ-ಹೇಳಲ್ಪಟ್ಟಿರುವನು.

---

ವುದರಿಂದ, ಮುಖ್ಯಪ್ರಾಣನ ಅವತಾರರಾದ ಶ್ರೀಮಧ್ವರೇ ಮುಖ್ಯ ಗುರುಗಳೆಂದು ಸಿದ್ಧವಾಗುತ್ತದೆ (೬೭೪). 'ಕಸ್ಮಿನ್ನ್ವಹ ಉತ್ಕ್ರಾಂತೇ....' ಇತ್ಯಾದಿ ಶ್ರುತಿಯು ಹೇಳುವಂತೆ, ಮುಂದೆ ಸೃಷ್ಟರಾಗಲಿರುವ ಅನಂತ ಪ್ರಾಣಿದೇಹಗಳಲ್ಲಿ, ಯಾರು ಇದ್ದರೆ ನಾನು ಇರುವೆನೋ, ಮತ್ತು ಯಾರು ಆ ದೇಹದಿಂದ ಹೊರಟರೆ ನಾನೂ ಹೊರಡುವೆನೋ, ಅಂಥವನೊಬ್ಬನನ್ನು ಮೊದಲು ಸೃಷ್ಟಿಮಾಡುವೆನೆಂದು ಸಂಕಲ್ಪಿಸಿ, ಪರಮಾತ್ಮನು ಮುಖ್ಯಪ್ರಾಣನನ್ನು ಸೃಷ್ಟಿಮಾಡಿದನು; ಆದ್ದರಿಂದ

**ಮುಖ್ಯಸ್ಯೈವ ಗ್ರಾಹ್ಯತಯಾ ತಥಾ ಶ್ರೌತಸಮಾಖ್ಯಯಾ ।**
**ಹಿಶಬ್ದೋದಿತಯಾ ವಿದ್ವತ್ಪ್ರಸಿದ್ಧ್ಯಾ ಚಾಪರೋ ನ ಸಃ ॥ ೬೭೭ ॥**

ಬಂಧುತ್ವ ಬೇರೆ ನಿಮಿತ್ತಗಳನ್ನು ಹೇಳುತ್ತಾರೆ :—

ಮುಖ್ಯಸ್ಯ ಏವ ಗ್ರಾಹ್ಯತಯಾ–(ಪ್ರಾಣಶಬ್ದವಾಚ್ಯರಾದ ಪ್ರಾಣಾಪಾನ, ಇಂದ್ರಿಯಾದಿಗಳಲ್ಲಿ) ಮುಖ್ಯನನ್ನೇ ಗ್ರಹಿಸಬೇಕಾದದು ಉಚಿತವಾದ್ದರಿಂದ, ತಥಾ – ಹಾಗೂ, ಶ್ರೌತಸಮಾಖ್ಯಯಾ – ಶ್ರುತಿಯ ಸಮಾಖ್ಯೆಯೂ ಇರುವುದರಿಂದ,[1] ಹಿ–ಹಿ ಎಂಬ, ಶಬ್ದೋದಿತಯಾ–ಶಬ್ದದಿಂದ ಹೇಳಲ್ಪಡುವ, ವಿದ್ವತ್ಪ್ರಸಿದ್ಧ್ಯಾ ಚ – ವಿದ್ವಜ್ಜನರಲ್ಲಿ ಪ್ರಸಿದ್ಧನಾದ್ದರಿಂದಲೂ,[2] ಸಃ – ಮುಖ್ಯ ಪ್ರಾಣನೇ (ಮುಖ್ಯ ಬಂಧುವು), ಅಪರಃ ನ–ಅನ್ಯರಾರೂ ಅಲ್ಲ (ಅನ್ಯಬಂಧು ಗಳಿದ್ದರೂ ಮುಖ್ಯಬಂಧುವು ಗ್ರಾಹ್ಯನಲ್ಲವೇ ?)

**ದೇವಾನಾಂ ಪ್ರಾಯಪಠಿತೋ ದೇವಶ್ರೇಷ್ಠೋ ಭವೇದಯಂ ।**
**ಧರ್ಮನಿರ್ಣಯಭೂಮಿತ್ವಾದ್ಬಂಧುತ್ವಾಚ್ಚ ಮಹಾಪ್ರಭೋಃ ॥೬೭೮॥**

ಬೇರೆ ನಿಮಿತ್ತವನ್ನು ಹೇಳುತ್ತಾರೆ :—

---

ಈ ಉಪನಿಷತ್ತಿನಂತೆ ಮುಖ್ಯಪ್ರಾಣನೇ ಪ್ರಿಯಪುತ್ರನು; ಶ್ರೀಹರಿಗೆ ಮುಖ್ಯ ಬಂಧುವೆಂದರೆ ಮುಖ್ಯಪ್ರಾಣನೇ ; ಈ ಪ್ರಮೇಯವನ್ನೇ 'ತದಸ್ಯ ಪ್ರಿಯಂ' ಎಂಬ ಪ್ರಸಕ್ತ ಶ್ರುತಿಯೂ ನಿರೂಪಿಸುತ್ತದೆ (೬೭೫–೬೭೬). ಶ್ರೀಹರಿಗೆ ಮುಖ್ಯ ಪ್ರಾಣನೇ ಮುಖ್ಯ ಬಂಧುವೆಂಬಲ್ಲಿ ಬೇರೆ ನಿಮಿತ್ತಗಳೂ ಇವೆ; ಪ್ರಾಣಶಬ್ದ ವಾಚ್ಯರಲ್ಲಿ ಮುಖ್ಯನಾದವನನ್ನೇ ಪ್ರಾಣಶಬ್ದ ವಾಚ್ಯನೆಂದು ತಿಳಿಯಬೇಕು– ಅನೇಕ ಬಂಧುಗಳಿದ್ದರೂ ಪುತ್ರನೇ ಮುಖ್ಯಬಂಧುವೂ ಆಗಿರುತ್ತಾನೆ ; ಶ್ರುತಿಯೂ ಹೀಗೆ ಹೇಳುತ್ತದೆ ; ವಿದ್ವಜ್ಜನರಲ್ಲಿ ಪೂರ್ಣಪ್ರಜ್ಞರೇ ಮುಖ್ಯಪ್ರಾಣನೆಂಬ ಪ್ರಸಿದ್ಧಿಯೂ ಇದೆ ; ಆದ್ದರಿಂದ ಶ್ರೀಮಧ್ವರೇ ಮುಖ್ಯಪ್ರಾಣನು–ಅನ್ಯರಾರೂ ಅಲ್ಲ (೬೭೭). ದೇವತೆಗಳಲ್ಲಿ ಈತನೇ ಬಹಳವಾಗಿ ದೇವಶ್ರೇಷ್ಠನೆಂದು

---

1 ಹಿಂದಿನ ಶ್ಲೋಕದಲ್ಲಿ ಸಂಗೃಹೀತವಾದ 'ಕಸ್ಮಿನ್ನ್ವಹಂ' ಎಂಬ ಶ್ರುತಿಯ ಸಮಾಖ್ಯೆಯೂ ಇದೆ ;

2 'ಪೂರ್ಣಪ್ರಜ್ಞರಿಗೇ ಶ್ರೀಮಧ್ವರೆಂಬ ಪ್ರಸಿದ್ಧಿಯು ವಿದ್ವಜ್ಜನರಲ್ಲಿದೆ.

ದೇವಾನಾಂ – ದೇವತೆಗಳ (ಮಧ್ಯದ)ಲ್ಲಿ, ಪ್ರಾಯಪಠಿತಃ – ಬಹಳವಾಗಿ ಮುಖ್ಯಪ್ರಾಣನೇ ಪಠಿತನಾಗುವುದರಿಂದ, ಅಯಂ – ಈ ಮುಖ್ಯ ಪ್ರಾಣನೇ (ಶ್ರೀಮಧ್ವರೇ) ದೇವಶ್ರೇಷ್ಠಃ ಭವೇತ್–ದೇವ ಶ್ರೇಷ್ಠನು ಆಗುತ್ತಾನೆ; ಮಹಾ ಪ್ರಭೋಃ – ಮಹಾ ಪ್ರಭುವಿನ (ಭಗವಂತನ), ಬಂಧುತ್ವಾತ್ – ಮುಖ್ಯ ಬಂಧುವಾದ್ದರಿಂದಲೂ, ಧರ್ಮ ನಿರ್ಣಯಭೂಮಿತ್ವಾತ್ – ಧರ್ಮಾಧರ್ಮಗಳ ನಿರ್ಣಯವು ಇವರಿಂದಲೇ ಆಗಬೇಕಾದ್ದರಿಂದಲೂ (ದೇವಶ್ರೇಷ್ಠನಾಗಿರುವನು).

**ಕಿಂಚೇತ್ಥೇತಿ ಪದಾದ್ಯತ್ರ ದೇವಾ ದೇವಯುಸಂಜ್ಞಿತಾಃ ।**
**ಯದ್ಯುಂಜಂತಿ ಪರಂ ದೇವಂ ಪರಿವಾರತಯಾ ಸದಾ ।**
**ಮುದಂತಿ ತತ್ರ ವಿಷ್ಣ್ವಂಗಾಭಿಷಿಕ್ತೇ ತೀರ್ಥಪಾಥಸಿ ॥ ೬೭೯ ॥**

ಕಿಂಚ–ಮತ್ತೂ ಏನೆಂದರೆ, ದೇವಯುಸಂಜ್ಞಿತಾಃ – ದೇವಯುಗಳೆಂದು ಕರೆಯಲ್ಪಡುವ, ದೇವಾಃ–ದೇವತೆಗಳು, ಯತ್–ಯಾರ ಕಾರಣದಿಂದ, ಇತ್ಥೇತಿ ಪದಾತ್–ದೇವಾಯು ಎಂಬ ಪದದಿಂದಲೇ, ಯತ್ರ–ಯಾವ ವಿಷಯದಲ್ಲಿ, ಪರಂ ದೇವಂ–(ಈ) ದೇವಶ್ರೇಷ್ಠನನ್ನು, ಸದಾ–ಸರ್ವದಾ, ಪರಿವಾರತಯಾ–ಪರಿವಾರ ತ್ವೇನ, ಯುಂಜಂತಿ–ಯೋಚಿಸುವರೋ (ವಿಷ್ಣುಪರಿವಾರದೇವತೆಗಳು, ತಮ್ಮಲ್ಲಿ ಮುಖ್ಯನೆಂದು ಯಾರನ್ನು ಸೇರಿಸಿಕೊಂಡು ಪಠಿಸುವರೋ), (ತತ್–ಅದರಿಂದ), ತತ್ರ–ಅವರ ಮಧ್ಯೆ, ವಿಷ್ಣ್ವಂಗಾಭಿಷಿಕ್ತೇ–ವಿಷ್ಣುವಿನ ಅಂಗಭೂತನಾದ (ಮುಖ್ಯ ಸಹಾಯಕನಾದ) ಮುಖ್ಯಪ್ರಾಣನು ಅಭಿಷಿಕ್ತನಾದ, ತೀರ್ಥ ಪಾಥಸಿ – ತೀರ್ಥೋದಕದಲ್ಲಿ, ಮುದಂತಿ – ಹರ್ಷಿಸುತ್ತಾರೆ (ಅಭಿಷಿಕ್ತತೀರ್ಥಪಾನದಿಂದ ಹರ್ಷಿಸುತ್ತಾರೆ–ಸರ್ವಸಜ್ಜನರೂ ಹರ್ಷಿಸುತ್ತಾರೆ).

---

ಸಂಬೋಧಿತನಾಗುತ್ತಾನೆ; ಮಹಾ ಪ್ರಭುವಾದ ಶ್ರೀಹರಿಯ ಮುಖ್ಯಬಂಧುವೆಂದು ಮಾತ್ರವಲ್ಲ; ಸಕಲ ಧರ್ಮಾಧರ್ಮ ನಿರ್ಣಯವು ಇವರಿಂದಲೇ ಆಗಬೇಕಾಗಿರು ವುದರಿಂದ್ದ ಸಹ ದೇವಶ್ರೇಷ್ಠನು (೬೭೮). ಈ ಕಾರಣದಿಂದಲೇ, 'ದೇವಯು' ಗಳೆಂದು ಪ್ರಸಿದ್ಧರಾದ ದೇವತೆಗಳೂ, ವಿಷ್ಣುವಿನ ಪರಿವಾರ ಭೂತರಾದವರಲ್ಲಿ ದೇವಾಯು ಶಬ್ದವಾಚ್ಯತ್ವಕ್ಕೆ ಮುಖ್ಯಾರ್ಹನೆಂದು, ತಮ್ಮಲ್ಲಿ ಈತನನ್ನು ಸೇರಿಸಿ ಕೊಂಡು ದೇವಶ್ರೇಷ್ಠನೆಂದು ಪಠಿಸುತ್ತಾರೆ; ಸರ್ವಕಾರ್ಯಗಳಲ್ಲಿ ಆತನನ್ನು

**ನಿತ್ಯಂ ಸೋಽಶನವಾನ್ ಪ್ರೋಕ್ತಸ್ತೇನ ಚಾನಂದತೀರ್ಥತಾಂ ।**
**ಸ್ಪಷ್ಟೀಕರೋತಿ ವೇದೋಽಸೌ ತಸ್ಯ ಮಧ್ವಾಖ್ಯಯೋಗಿನಃ ॥ ೬೮೦ ॥**

ನಿತ್ಯಂ–ಸದಾ, ಸಃ–ಶ್ರೀಮಧ್ವರು, ಅಶನವಾನ್ ಪ್ರೋಕ್ತಃ–ಆನಂದವುಳ್ಳವರಾದ್ದರಿಂದ, ('ನಿತ್ಯಮಶನವಾನ್ ಪ್ರೋಕ್ತಃ' ಎಂದೂ) ಅಸೌ–ವೇದಃ ('ಸಹಿಬಂಧುರಿತ್ಥಾ', ಎಂದೂ) ಹೇಳುವ ವಾಕ್ಯಗಳಿಂದ ಪ್ರತಿಪಾದ್ಯರಾದ ಈ ಬಂಧುವು, ತಸ್ಯ–ವೇದೋಕ್ತವಾದ, ಮಧ್ವಾಖ್ಯ–ಶ್ರೀಮಧ್ವರೆಂಬ ಯೋಗಿನಃ–ಮಹಾಜ್ಞಾನಿಯ, ಆನಂದತೀರ್ಥತಾಂ–ಆನಂದತೀರ್ಥರೆಂಬ ನಾಮದ ಸಾರ್ಥಕ್ಯವನ್ನು, ತೇನ–ಅದರಿಂದಲೇ, ಸ್ಪಷ್ಟೀಕರೋತಿ–ಸ್ಪಷ್ಟಗೊಳಿಸುತ್ತದೆ.

**ಆನಂದರೂಪಸ್ಯ ಹರೇಸ್ತೀರ್ಥಂ ಯಸ್ಯ ಸ ಏವ ಹಿ ।**
**ಆನಂದತೀರ್ಥನಾಮಾ ಸ್ಯಾತ್ತಸ್ಮಾಚ್ಚಾಸ್ಮದ್ಗುರುರ್ಭವೇತ್ ।**
**ಅತಃ ಶ್ರುತಿರಿಯಂ ಸೂತೇ ಮಧ್ವರೂಪಂ ಗುರುಂ ಮಮ ॥ ೬೮೧ ॥**

ಇತ್ಥೇತಿ ಪದದಿಂದ (ಹಿಂದಿನ ೬೭೫ನೇ ಶ್ಲೋಕವನ್ನು ನೋಡಿರಿ) ವಿಷ್ಣುಪಾದೋದಕ ಸೇವೆಯು ಸೂಚಿತವಾಗಿದ್ದರೂ, ಆನಂದತೀರ್ಥರೆಂಬ ಅರ್ಥವು ಹೇಗೆ ಲಭಿಸುತ್ತದೆಂಬುದನ್ನು ನಿರೂಪಿಸುತ್ತಾರೆ:—

ಆನಂದರೂಪಸ್ಯ–ಆನಂದ ಸ್ವರೂಪನಾದ, ಹರೇಃ–ಶ್ರೀಹರಿಯ, ತೀರ್ಥಂ–ಪಾದೋದಕವು, ಯಸ್ಯ–ಯಾರುಳ್ಳವರೋ, ಸಃ ಏವ–ಅವರೇ, ಹಿ–ಯಾವ ಕಾರಣದಿಂದ, ಆನಂದತೀರ್ಥ ನಾಮಾ–ಆನಂದತೀರ್ಥನಾಮಕರು, ಸ್ಯಾತ್–ಆಗುವರೋ, ತಸ್ಮಾತ್ ಚ–ಆದ್ದರಿಂದಲೂ ಸಹ, (ಆನಂದತೀರ್ಥರು)

---

ಮುಂದಿಟ್ಟುಕೊಂಡೇ ಪ್ರವೃತ್ತರಾಗುತ್ತಾರೆ; ಈತನು ಅಭಿಷಿಕ್ತನಾದ ತೀರ್ಥೋದಕ ಪಾನದಲ್ಲಿ, ಸಕಲರೂ ಹರ್ಷಿಸುತ್ತಾರೆ (೬೭೯). 'ನಿತ್ಯಮಶನವಾನ್ ಪ್ರೋಕ್ತಃ' ಎಂಬುದು ಆತನು ನಿತ್ಯಾನಂದಾನುಭವವುಳ್ಳವನೆಂದು ಹೇಳಿ, ಆನಂದತೀರ್ಥರೆಂಬ ಶ್ರೀಮಧ್ವರ ನಾಮವು ಅನ್ವರ್ಥಕವೆಂಬುದನ್ನು ಸ್ಪಷ್ಟಗೊಳಿಸುತ್ತದೆ; ಮಹಾಜ್ಞಾನಿಗಳಾದ ಈ ಮಧ್ವರ ಮಹಿಮೆಯು ಹೀಗಿದೆ (೬೮೦). ಆನಂದರೂಪನಾದ ಶ್ರೀಹರಿಯ ಪಾದೋದಕವನ್ನು ಸರ್ವಾತಿಶಯವಾಗಿ ಮಹಿಮಾಜ್ಞಾನ ಪೂರ್ವಕ

ಅಸ್ಮದ್ಗುರುಃ–ನಮ್ಮ ಗುರುಗಳು, ಭವೇತ್–ಆಗುವರು ; ಅತಃ–ಆದ್ದರಿಂದ, ಇಯಂ ಶ್ರುತಿಃ–ಈ ಶ್ರುತಿಯು, ಮಮ–ನನ್ನ, ಮಧ್ವರೂಪಂ – ಮಧ್ವರೂಪರಾದ, ಗುರುಂ – ಗುರುಗಳನ್ನು, ಸೂತೇ – ಪ್ರಸವವಾಗುತ್ತದೆ (ಶ್ರುತ್ಯಭಿಮಾನಿಲಕ್ಷ್ಮೀ ದೇವಿಯ ಪ್ರಿಯಕುಮಾರಕರಾದ ಅವರನ್ನೇ ಪ್ರತಿಪಾದಿಸುತ್ತದೆ– ಬಹುವಿಧ ನಿರವಕಾಶಯುಕ್ತಿಗಳೂ ಇರುತ್ತವೆ).

**ಬಳಿತ್ಥೇತಿ ಶ್ರುತಿರ್ವಾಯೋರ್ದೇವಸ್ಯ ಪ್ರಥಮಂ ವಪುಃ ।**
**ದ್ವಿತೀಯಂ ಚ ತೃತೀಯಂ ಚ ವಕ್ತಿ ವಾಕ್ಯತ್ರಯೇ ಕ್ರಮಾತ್ ॥೬೮೨॥**

ಬಳಿತ್ಥಾ ಇತಿ ಶ್ರುತಿಃ–' ಬಳಿತ್ಥಾ ತದ್ವಪುಷೇ ' ಎಂಬ ಶ್ರುತಿಯು, ದೇವಸ್ಯ–(ಶ್ರುತಿಯಲ್ಲಿ ಉಕ್ತನಾದ ಈ ಪದವು ಬಲಕಾರ್ಯ ಸಾಧಕನಾದ ಆಂಜನೇಯನನ್ನೇ ಹೇಳುವದೆಂದು ಸ್ಪಷ್ಟವಿರುವುದರಿಂದ) ವಾಯೋಃ–ವಾಯು ದೇವನ, ಪ್ರಥಮಂ ವಪುಃ–ಪ್ರಥಮಾವತಾರವು ; ದ್ವಿತೀಯಂ ಚ–ಎರಡನೆಯ ಮತ್ತು, ತೃತೀಯಂ ಚ–ಮೂರನೇ ಅವತಾರಗಳನ್ನೇ, (ಎರಡು ಮತ್ತು ಮೂರನೇ ವಾಕ್ಯಗಳಿಂದ)[1] ವಾಕ್ಯತ್ರಯೇ–ಮೂರು ವಾಕ್ಯಗಳಲ್ಲಿ, ಕ್ರಮಾತ್–ಕ್ರಮದಿಂದ, ವಕ್ತಿ–ಹೇಳುತ್ತದೆ (ಪ್ರತಿಪಾದಿಸುತ್ತದೆ).

---

ನಿತ್ಯ ಸೇವಿಸುವರಾದ್ದರಿಂದ (ಆನಂದರೂಪಸ್ಯ ಹರೇಃ ತೀರ್ಥಂ ಯಸ್ಯ ಸಃ, ಎಂಬ ವ್ಯುತ್ಪತ್ತಿಯಿಂದ) ಅವರು ನಮ್ಮ ಗುರುಗಳಾದ ಶ್ರೀಮಧ್ವರೇ ಆಗಿರುವರು ; ಆನಂದರೂಪನಾದ ಶ್ರೀಹರಿಯ ಸರ್ವೋತ್ತಮತ್ವ ಸ್ಥಾಪನೆಯ ಶಾಸ್ತ್ರವನ್ನು ರಚಿಸುವುದರಿಂದಲೂ ಇವರೇ ಆನಂದತೀರ್ಥರು (ತೀರ್ಥವೆಂದರೆ ಶಾಸ್ತ್ರವೆಂಬ ಅನ್ಯ ಮುಖ್ಯಾರ್ಥವೂ ಇದೆ) ; ಈ ಕಾರಣದಿಂದ ಸಹ ಮಧ್ವರೂಪರಾದ ನಮ್ಮ ಗುರುಗಳನ್ನೇ ಈ ಶ್ರುತಿಯು ಪ್ರತಿಪಾದಿಸುತ್ತದೆ; ಈ ವಿಷಯಕ್ಕೆ ಬಹು ನಿರವಕಾಶಯುಕ್ತಿಗಳೂ ಇವೆ (೬೮೧). ಬಳಿತ್ಥಾ ಸೂಕ್ತವು (ಶ್ರುತಿಯೂ,) ತನ್ನ ಪ್ರಥಮ ವಾಕ್ಯದಲ್ಲಿ ಮೂಲ ವಾಯುದೇವನ ಬಲಕಾರ್ಯವನ್ನು ವಿವರಿಸಿ,

---

[1] ಬಳಿತ್ಥಾ ಸೂಕ್ತದ ವಾಯ್ವವತಾರಗಳನ್ನು ನಿರೂಪಿಸುವ, ಮೂರು ಭಾಗಗಳು ಈ ಮುಂದಿನಂತಿವೆ ಮತ್ತು ಅವುಗಳ ಅರ್ಥವನ್ನು ಅಲ್ಲಿಯೇ ಕೊಡಲಾಗಿದೆ:—

' ಬಳಿತ್ಥಾ ತದ್ವಪುಷೇಽಧಾಯಿ ದರ್ಶತಂ ದೇವಸ್ಯ ಭರ್ಗಃ ಸಹಸೋ ಯತೋಜನಿ ।
ಯದೀಮುಪಹ್ವರತೇ ಸಾಧತೇ ಮತಿರ್ಋತಸ್ಯ ಧೇನಾ ಅನಯಂತ ಸಶ್ರುತಃ । . . . (೧)

**ತಚ್ಚ ಪ್ರಸಿದ್ಧಸಂತ್ಯಾಗಾಯೋಗಾದನ್ಯಾಪ್ರಸಿದ್ಧಿತಃ ।**
**ತತ್ವವಾದ್ಯುದಿತಂ ರೂಪತ್ರಯಮೇವೇತಿ ಮೇ ಮತಿಃ ॥ ೬೮೩ ॥**

ತತ್ – ವಾಯುದೇವನ ಆ ರೂಪತ್ರಯವು, ಪ್ರಸಿದ್ಧ ಸಂತ್ಯಾಗಾ-ಯೋಗಾತ್ – ಪ್ರಸಿದ್ಧವಾದ ಹನುಮದ್ಭೀಮಮಧ್ವರೂಪಗಳ ತ್ಯಾಗವು ಯುಕ್ತವಲ್ಲವಾದ್ದರಿಂದಲೂ, ಅನ್ಯಾಪ್ರಸಿದ್ಧಿತಃ – ಅನ್ಯತ್ರಪ್ರಸಿದ್ಧಿ ಇಲ್ಲದ್ದರಿಂದಲೂ (ನಮ್ಮ ಗುರುಗಳನ್ನು ಬಿಟ್ಟು ಅನ್ಯರಲ್ಲಿ ಪ್ರಸಿದ್ಧ ಇಲ್ಲದ್ದರಿಂದಲೂ), ತತ್ವವಾದ್ಯುದಿತಂ–ತತ್ವವಾದಿಯಿಂದ ಹೇಳಲ್ಪಟ್ಟ, ರೂಪತ್ರಯಂ ಏವ ಇತಿ–ಶ್ರುತ್ಯುಕ್ತ ಮೂರು ರೂಪಗಳೇ ಎಂದು, ಮೇ–ನನ್ನ, ಮತಿಃ–ನಿಶ್ಚಯವು.

---

ಸ್ಪಷ್ಟವಾಗಿ, ಪ್ರಥಮಾವತಾರವೆಂದು ಹನುಮದವತಾರವನ್ನು ಹೇಳುತ್ತದೆ; ಎರಡು ಮತ್ತು ಮೂರನೇ ವಾಕ್ಯಗಳಿಂದ, ಆ ವಾಯುದೇವನ ಎರಡು ಮತ್ತು ಮೂರನೇ ಅವತಾರಗಳನ್ನು ಕ್ರಮವಾಗಿ ಪ್ರತಿಪಾದಿಸುತ್ತದೆ; ಹೀಗೆ ಮೂರೂ ಅವತಾರಗಳು ಶ್ರುತ್ಯುಕ್ತಗಳೇ ಆಗಿವೆ (೬೮೨). ಶ್ರೀವಾಯುದೇವನ ಮೂರು ಅವತಾರಗಳೆಂಬುವನ್ನು ತ್ಯಜಿಸಲು (ಗಮನಿಸದಿರಲು) ಶಕ್ಯವಲ್ಲ; ಈ ಪ್ರಸಿದ್ಧಿಯನ್ನು ತ್ಯಜಿಸುವುದು ಯುಕ್ತವಾಗುವುದಿಲ್ಲ; ಅನ್ಯತ್ರ ಬೇರಾವ ದೇವತೆಯಲ್ಲಿಯೂ ಹೀಗೆಂಬ ಪ್ರಸಿದ್ಧಿ ಇರುವುದಿಲ್ಲ; ಆದ್ದರಿಂದ ತತ್ವವಾದಿಯು

---

'ಪೃಕ್ಷೋ ವಪುಃ ಪಿತುಮಾನ್ನಿತ್ಯ ಆಶಯೇ ದ್ವಿತೀಯಮಾಸಪ್ತ ಶಿವಾಸು ಮಾತೃಷು ।' . . . . . (೨)

'ತೃತೀಯಮಸ್ಯ ವೃಷಭಸ್ಯ ದೋಹಸೇ ದಶಪ್ರಮತಿಂ ಜನಯಂತ ಯೋಷಣಃ' । . . . . . (೩)

ಇವು ಮೂರು ಭಾಗಗಳು ಕ್ರಮವಾಗಿ ಹನುಮದ್ಭೀಮಮಧ್ವ ರೂಪಗಳ ಮಹಿಮೆಯನ್ನು ಪ್ರತಿಪಾದಿಸುತ್ತವೆ: ಇವುಗಳ ಅರ್ಥ :—

(೧) ಸಹಸಃ–ಶತಪ್ರವೇಗ ಸಹನ ಸಮರ್ಥನಾದ, ದೇವಸ್ಯ – ವಾಯುದೇವನ, ತತ್–ಆ ಮೂಲರೂಪವು, ಬಟ್–ಬಲಾತ್ಮಕವಾದುದು, ದರ್ಶತಂ–ಜ್ಞಾನರೂಪವಾದುದು; ಯತಃ–ಯಾವುದರಿಂದಲೋ (ಯಾವ ಮೂಲ ರೂಪದಿಂದಲೋ), ಯತಃ ವಪುಷೇ – ಯಾರಿಂದ ಅವತಾರ ರೂಪಕ್ಕಾಗಿ, ಇತ್ಥಂ ಏವ–ಈ ರೀತಿಯಾಗಿಯೇ (ಜ್ಞಾನ ಬಲಾತ್ಮಕವಾಗಿಯೇ, ಅಧಾಯಿ–ಧರಿಸಲ್ಪಟ್ಟಿತೋ (ಮೂಲ ರೂಪದಂತೆಯೇ ಇರುವ ಅವತಾರ ರೂಪವು ಯಾರಿಂದ ಹೊಂದಲ್ಪಟ್ಟಿತೋ) ತಸ್ಯ ದೇವಸ್ಯ ಭರ್ಗಃ–ಆ ವಾಯುದೇವರ

**ಹನುಮದ್ಭೀಮಸಂಜ್ಞೌ ದ್ವೌ ಪ್ರಸಿದ್ಧೌ ವಿಷ್ಣುಕಿಂಕರೌ ।**
**ಅತಸ್ತೃತೀಯೋಽಪಿ ಕಶ್ಚಿದ್ಭವೇದ್ಭಕ್ತಧುರಂಧರಃ ॥ ೬೮೪ ॥**

ಬೇರೆ ಯುಕ್ತಿಯನ್ನು ಹೇಳುತ್ತಾರೆ :—

ಹನುಮದ್ಭೀಮ ಸಂಜ್ಞೌ – ಹನುಮ, ಭೀಮರೆಂಬ ನಾಮವುಳ್ಳ, ದ್ವೌ– ಎರಡು ರೂಪಗಳು, ಪ್ರಸಿದ್ಧೌ–(ರಾಮಾಯಣಭಾರತಗಳಲ್ಲಿ) ಪ್ರಸಿದ್ಧವಾಗಿರುವ,

---

ಹೇಳುವಂತೆ ಹನುಮ, ಭೀಮ, ಮಧ್ವರೆಂಬ ಮೂರು ವಾಯು ಅವತಾರಗಳೇ ಶ್ರುತ್ಯುಕ್ತವೆಂದು ನನ್ನ ನಿಶ್ಚಯವು (೬೮೩). ಹನುಮ, ಭೀಮ ನಾಮಕ ಎರಡು

---

ಭರಣಗಮನಾದಿಗಳನ್ನು ನಿರ್ವಹಿಸುವ, ಯತ್ ಈಂ - ಯಾವುದೇ ಆದ, ಮತಿಃ – ಹನುಮಂತನೆಂಬ ಪ್ರಥಮ ರೂಪವು, ಋತಸ್ಯ – ಯಥಾರ್ಥ ಜ್ಞಾನ ಸ್ವರೂಪನಾದ ಶ್ರೀರಾಮನ, ಉಪ–ಸಮೀಪದಲ್ಲಿ, ಹ್ವರತೇ–ಸರ್ವದಾ ಇರುತ್ತದೆ ; ಸಸ್ರುತಃ–(ಅಮೃತವನ್ನು) ಸ್ರವಿಸುವ, ಧೇನಾಃ–ರಾಮನ ವಾಕ್ಯಗಳನ್ನು, ಸಾಧತೇ–ಸಾಧಿಸುತ್ತದೆ ; (ಅಥವಾ, ಋತಸ್ಯ ಸಸ್ರುತಃ ಧೇನಾಃ–ಶ್ರೀರಾಮ ಪ್ರತಿಪಾದಕ ಮೂಲರಾಮಾಯಣ ವಾಕ್ಯಗಳನ್ನು) ಅನಯಂತ–(ರಾಮಭಕ್ತರಿಗೆ) ಮುಟ್ಟಿಸುತ್ತದೆ; (ಅಥವಾ, ಶ್ರೀರಾಮನ ಅಮೃತ ಸದೃಶ ವಾಕ್ಯಗಳನ್ನು ಸೀತೆಗೆ ಲಂಕೆಗೆ ಹೋಗಿ, ಮುಟ್ಟಿಸುತ್ತದೆ.)

(೨) ಅಸ್ಯ–ಈ, ವೃಷಭಸ್ಯ–ಅಭೀಷ್ಟವನ್ನು ಮಳೆಗರೆಯುವ, (ಅಥವಾ, ಬಹುಶಕ್ತಿಸಂಪನ್ನನಾದ) (ವೃಷಸೇಚನೇ, ವೃಷಶಕ್ತ್ಯತಿಶಯೇ, ಎಂಬ ಧಾತ್ವರ್ಥಗಳಿರುತ್ತವೆ) ದ್ವಿತೀಯಂ ವಪುಃ- (ವಾಯುದೇವರ ಎರಡನೆಯ ರೂಪವು, ಸಪ್ತ - ಏಳು, ಆಶಿವಾಸು– ಪರಮ ಮಂಗಲ ಪ್ರದಗಳಾದ, ಮಾತೃಷು - ಋಗಾದಿ ಪ್ರಮಾಣಗಳಲ್ಲಿ, ನಿತ್ಯಃ - ನಿತ್ಯದಲ್ಲಿ, ಶಯೇ - ಶಯನ ಮಾಡುತ್ತದೆ (ಚೆನ್ನಾಗಿ ಆಸಕ್ತವಾಗಿರುತ್ತದೆ) ; (ಹೀಗೆ ಶಾಸ್ತ್ರಮನನದಲ್ಲಿ ನಿರತವಾದರೂ ಈ ಭೀಮನಾಮಕ ರೂಪವು, ವೃಕ್ಷಃ - ಬಹುಸೈನ್ಯಗಳನ್ನು ನಾಶಗೊಳಿಸುತ್ತದೆ ; ಪಿತುಮಾನ್ - ಬಹ್ವನ್ನ ಭೋಗವುಳ್ಳದ್ದು.

(೩) ಅಸ್ಯ ವೃಷಭಸ್ಯ- ಈ ದೇವ ಶ್ರೇಷ್ಠನ, ದಶಪ್ರಮತಿಂ - ಪೂರ್ಣಪ್ರಜ್ಞರೆಂಬ ನಾಮವುಳ್ಳ, ತೃತೀಯಂ ವಪುಃ - ಮೂರನೆಯ ರೂಪವನ್ನು, ದೋಹಸೇ - ಜ್ಞಾನದೋಹನಕ್ಕಾಗಿ (ಹಸುವಿನಂತೆ ಹಾಲು ಕರೆಯಲು), ಯೋಷಣಃ - (ಗುರುಪತ್ನಿಯಾದ್ದರಿಂದ ಬಹುವಚನವು) ಸ್ತ್ರೀಯರು, ಜನಯಂತ - ಪ್ರಸವವಾದರು, (ಅಥವಾ) ಶ್ರೀಭೂದುರ್ಗಾ ರೂಪಗಳುಳ್ಳ ಲಕ್ಷ್ಮೀದೇವಿಯರೇ ಹುಟ್ಟಿಸಿದಳು ; ಮಧ್ಯಗೇಹಭಟ್ಟರೆಂಬ ಬ್ರಾಹ್ಮಣ ಪತ್ನಿಯ ಗರ್ಭದಲ್ಲಿ ಸನ್ನಿಹಿತರಾಗಿ ಹುಟ್ಟಿಸಿದಳು) ; ಈ ಸೂಕ್ತವು, ಮುಂದಿನ ಭಾಗಗಳಿಂದ, ಮೂರನೆಯ ಅವತಾರದಿಂದ ರಚಿತವಾದ ರುದ್ರಾದಿ ದೇವಸೇವ್ಯ ಶಾಸ್ತ್ರ ವಿಷಯಾಧಿಗಳನ್ನು ನಿರೂಪಿಸುತ್ತದೆ.

ವಿಷ್ಣುಕಿಂಕರೌ – ಶ್ರೀವಿಷ್ಣುಸೇವಕರೂಪಗಳು ; ಅತಃ – ಆದ್ದರಿಂದ, ತೃತೀಯಃ ಅಪಿ–(ಶ್ರುತ್ಯುಕ್ತ) ಮೂರನೆಯ ಅವತಾರವೂ, ಕಶ್ಚಿತ್–ಒಬ್ಬ, ಭಕ್ತಧುರಂಧರಃ–ವಿಷ್ಣುಭಕ್ತನಾದ ಕಾರ್ಯಸಾಧಕನೇ, ಭವೇತ್–ಆಗಿರಬೇಕು.

**ಪೂರ್ವೌ ದ್ವೌ ಹರಿಸೇನಾಯಾಃ ಸೇನಾನ್ಯೌ ಯನ್ಮತೌ ಸತಾಂ ।**
**ಅತಸ್ತೃತೀಯೋಽಪಿ ಸೋಽಯಂ ವೈಷ್ಣವಾಗ್ರೇಸರೋ ಭವೇತ್** ॥ ೬೮೫ ॥

ವಿಷ್ಣುಕಿಂಕರತ್ವ ಬಲದಿಂದ ಮೂರನೆಯ ಮಧ್ವಾವತಾರವು ವಾಯುದೇವನದೆಂದು ನಿರ್ಧರಿಸಿ, ಈಗ ವಿಷ್ಣು ಸೇನಾನಾಯಕತ್ವ ಬಲದಿಂದಲೂ ಶ್ರೀಮಧ್ವರೇ ತೃತೀಯಾವತಾರರೆಂದೂ ಹೇಳುತ್ತಾರೆ:—

ಪೂರ್ವೌ ದ್ವೌ–ಮೊದಲಿನ ಎರಡು ರೂಪಗಳು (ಹನುಮ, ಭೀಮ ರೂಪಗಳು), ಹರಿಸೇನಾಯಾಃ–ಕಪಿಸೇನೆಯ ಮತ್ತು ಪಾಂಡವ ಸೇನೆಯ, ಸೇನಾನ್ಯೌ–ನಾಯಕರೂಪಗಳು ; (ಎಂದು), ಯತ್–ಯಾವ ಕಾರಣದಿಂದ, ಸತಾಂ – ಸಜ್ಜನರಿಗೆ, ಮತೌ – ಸಮ್ಮತಗಳಾದ್ದರಿಂದ, ಅತಃ – ಆದ್ದರಿಂದಲೇ, ತೃತೀಯಃ ಅಪಿ – ಮೂರನೆಯದಾದರೂ, ವೈಷ್ಣವಾಗ್ರೇಸರಃ – ವಿಷ್ಣುಭಕ್ತರ ನಾಯಕರು, ಸೋಽಯಂ ಭವೇತ್ – ಆ ವಾಯುದೇವನೇ, ಈ ಶ್ರೀಮಧ್ವಾಚಾರ್ಯರು ಆಗಿರುವರು ಎಂಬುದೂ ಯುಕ್ತವಾಗುತ್ತದೆ.

**ತ್ರೇತಾಯಾಂ ದ್ವಾಪರೇ ಚೈವ ತೌ ದ್ವೌ ವಾಯುಕುಮಾರಕೌ ।**
**ತತ್ತೃತೀಯಃ ಕಲೌ ಚ ಸ್ಯಾದ್ಯುಕ್ತ್ಯಾ ವಾಯುಕುಮಾರಕಃ**
**ಯೌಕ್ತಸ್ಯ ತಸ್ಯ ಸುಜನಪ್ರಸಿದ್ಧಿರ್ಮಧ್ವತಾಂ ದಿಶೇತ್** ॥ ೬೮೬ ॥

ಬೇರೆ ಯುಕ್ತಿಯನ್ನು ಹೇಳುತ್ತಾರೆ:—

---

ವಾಯುರೂಪಗಳು, ಶ್ರೀರಾಮ ಮತ್ತು ಶ್ರೀಕೃಷ್ಣಗಳೆಂಬ ವಿಷ್ಣುರೂಪಗಳನ್ನು ಭಕ್ತಿಯಿಂದ ಸೇವಿಸಿದವುಗಳೆಂದು ಪ್ರಸಿದ್ಧವಾಗಿವೆ ; ಅದರಿಂದ ಶ್ರುತ್ಯುಕ್ತ ಮೂರು ರೂಪಗಳಲ್ಲಿ ಮೂರನೆಯದು, ಸಹ ವಿಷ್ಣುಕಾರ್ಯ ಸಾಧಕವಾದುದೇ ಆಗಿರಬೇಕು (೬೮೪). ಮೊದಲಿನ ಎರಡು ರೂಪಗಳಲ್ಲಿ ಒಂದು, ಕಪಿಸೇನಾ ನಾಯಕತ್ವವನ್ನು, ಮತ್ತೊಂದು ಪಾಂಡವಸೇನಾ ನಾಯಕತ್ವವನ್ನು ಹೊಂದಿದವುಗಳೆಂದು ಸಜ್ಜನ ಸಮ್ಮತಗಳಾಗಿವೆ ; ಆದ್ದರಿಂದ ಮೂರನೆಯದೂ ವೈಷ್ಣವ ಭಕ್ತ ಸೇನೆಯ ನಾಯಕತ್ವವುಳ್ಳದ್ದಾಗಿರಬೇಕಲ್ಲವೇ ? (೬೮೫). ವಾಯುಪುತ್ರರಾದ

ತ್ರೇತಾಯಾಂ–ತ್ರೇತಾ ಯುಗದಲ್ಲಿ, ಚ–ಮತ್ತು, ದ್ವಾಪರೇ ಏವ–ದ್ವಾಪರಯುಗದಲ್ಲಿಯೇ, ತೌ ದ್ವೌ–ಆ ಎರಡು ರೂಪಗಳು, ವಾಯುಕುಮಾರಕೌ–ವಾಯುಪುತ್ರರು (ಅಂಶಸಂಭೂತರು)•; ತತ್–ಆದ್ದರಿಂದ, ಕಲೌ ಚ–ಕಲಿಯುಗ ದಲ್ಲಿಯೇ, ಯುಕ್ತ್ಯಾ–ಯುಕ್ತಿ ಯುಕ್ತವಾಗುವುದರಿಂದ, ವಾಯುಕುಮಾರಕಃ–ವಾಯುಪುತ್ರನು, ಸ್ಯಾತ್–ಆಗಬೇಕು (ಆಗಿರುತ್ತಾನೆ) ; ಯೌಕ್ತಸ್ಯ–ಯುಕ್ತಿ ಬಲದಿಂದ ಪ್ರಾಪ್ತವಾದ, ತಸ್ಯ–ಆ ವಾಯುದೇವನಿಗೆ, (ಕಲಿಯುಗದಲ್ಲಿ ಅವತಾರ ವನ್ನು) ಸುಜನಪ್ರಸಿದ್ಧಿಃ–ತತ್ವವಾದಿ ಜನಪ್ರಸಿದ್ಧಿಯು, ಮಧ್ವತಾಂ–ಮಧ್ವಾ ಚಾರ್ಯರೆಂಬುದನ್ನು, ದಿಶೇತ್–ತಿಳಿಸುತ್ತದೆ.

**ಬಲಕಾರ್ಯೇಷು ಯೋ ವಿಷ್ಣೋಃ ಸಾಚಿವ್ಯಮಕರೋನ್ಮರುತ್ ।**
**ಹನೂಮದಾದಿರೂಪೇಣ ಜ್ಞಾನಕಾರ್ಯೇಽಪಿ ಸ ಪ್ರಭೋಃ ।**
**ವ್ಯಾಸರೂಪಸ್ಯ ಸಚಿವೀಭಾವಮರ್ಹತಿ ನಾಪರಃ ॥ ೬೮೭ ॥**

ಯುಕ್ತ್ಯಂತರವನ್ನು ಹೇಳುತ್ತಾರೆ :—ಯಃ ಮರುತ್ – ಯಾವ ವಾಯು ದೇವನು, ಬಲಕಾರ್ಯೇಷು–ಬಲಕಾರ್ಯಗಳಲ್ಲಿ, ವಿಷ್ಣೋಃ – ಶ್ರೀವಿಷ್ಣುವಿನ, ಸಾಚಿವ್ಯಂ–ಸೇವೆಯನ್ನು, ಹನೂಮದಾದಿರೂಪೇಣ – ಹನುಮ, ಭೀಮ ರೂಪ ಗಳಿಂದ (ರಾಮಕೃಷ್ಣರೂಪಗಳ ಸೇವೆಯನ್ನು), ಅಕರೋತ್–ಮಾಡಿದನೋ, ಸಃ–ಆ ವಾಯುದೇವನು, ಜ್ಞಾನಕಾರ್ಯೇಽಪಿ – ಜ್ಞಾನಕಾರ್ಯದಲ್ಲಿ ಸಹ, ಪ್ರಭೋಃ ವ್ಯಾಸರೂಪಸ್ಯ–ಸಮರ್ಥರಾದ ಶ್ರೀವ್ಯಾಸರೂಪದ, ಸಚಿವೀಭಾವಂ–ಸೇವಾಭಾವವನ್ನು, ಅರ್ಹತಿ–(ಹೊಂದಲು) ಅರ್ಹ (ಯೋಗ್ಯ)ವಾಗುತ್ತದೆ, ಅಪರಃ ನ–ಅನ್ಯನಲ್ಲ.

---

ಹನುಮ ಭೀಮರೂಪಗಳು-ತ್ರೇತೆ ಮತ್ತು ದ್ವಾಪರಯುಗಗಳಲ್ಲಿ ಆದವು ; ಆದ್ದರಿಂದ ಕ್ರಮದಿಂದ ಮೂರನೆಯದು, ಯುಕ್ತಿಬಲದಿಂದಲೂ ಕಲಿಯುಗದಲ್ಲಿಯೇ ಆಗಬೇಕು ; ತತ್ವವಾದಿ ಜನರಲ್ಲಿರುವ ಪ್ರಸಿದ್ಧಿಯು ಅದನ್ನು ಶ್ರೀಮಧ್ವರೂಪ ವನ್ನಾಗಿಯೇ ತೋರಿಸುತ್ತದೆ (೬೮೬). ಹನುಮ ಭೀಮ ರೂಪಗಳು ಬಲಕಾರ್ಯ ದಲ್ಲಿ ರಾಮಕೃಷ್ಣರ ಸೇವಾರೂಪದ ಸಾಚಿವ್ಯವನ್ನು ದೈತ್ಯಸಂಹಾರಮಾಡಿ ಸಾಧಿಸಿರುತ್ತವೆ ; ಆದ್ದರಿಂದ ವ್ಯಾಸರೂಪೀ ಶ್ರೀವಿಷ್ಣು ಸಾಚಿವ್ಯವನ್ನು, ಆ ವಾಯುದೇವನು ಜ್ಞಾನಕಾರ್ಯದಲ್ಲಿಯೂ ಮಾಡಬೇಕಷ್ಟೆ–ಆ ವಾಯುರೂಪವು

**ಬಲಕಾರ್ಯೇ ಸಹಾಯೌ ತೌ ಪ್ರಭೋರ್ದಾನವಮರ್ದನೌ ।**
**ಜ್ಞಾನಕಾರ್ಯೇ ಸೂತ್ರಕೃತೋ ಭಾಷ್ಯಕೃದ್ಧಿ ಸಹಾಯಕೃತ್ ।**
**ಅತೋಽಪಿ ಮಧ್ವನಾಮಾಯಸ್ತೃತೀಯೋ ವಾಯುನಂದನಃ ॥೭೮॥**

ಪ್ರಭೋಃ–ಭಗವಂತನ, ಬಲಕಾರ್ಯೇ – ಬಲಕಾರ್ಯದಲ್ಲಿ (ರಾವಣ, ಶಿಶುಪಾಲಾದಿ ಸಂಹಾರರೂಪ ಭಗವಂತನ ಬಲಕಾರ್ಯದಲ್ಲಿ), ತೌ–ಆ ಎರಡು ರೂಪಗಳು (ಹನುಮ, ಭೀಮರೂಪಗಳಿಂದ), ದಾನವಮರ್ದನೌ (ಕಾರ್ಯ ಸಾಧಕರಾದ್ದರಿಂದ ) ಅಕ್ಷಕುಮಾರ, ಜರಾಸಂಧಾದಿ ದಾನವರನ್ನು ಮರ್ದನ ಮಾಡಿರುವುವು ; (ಹೀಗೆಯೇ) ಜ್ಞಾನಕಾರ್ಯೇ–ಜ್ಞಾನಕಾರ್ಯದಲ್ಲಿ, ಸೂತ್ರ-ಕೃತಃ–ಸೂತ್ರಕರ್ತರಾದ ಶ್ರೀ ವೇದವ್ಯಾಸರೂಪೀ ಶ್ರೀಹರಿಗೆ, ಸಹಾಯಕೃತ್–ಸಹಾಯರೂಪ ಸೇವೆಯನ್ನು ಮಾಡಿದ, ಭಾಷ್ಯಕೃತ್ ಹಿ–ಯಾವ ಕಾರಣದಿಂದ ದುರ್ಭಾಷ್ಯಗಳ ಅಂತ್ಯದಲ್ಲಿ ಸಿದ್ಧಾಂತರೂಪದ ಭಾಷ್ಯವನ್ನು ರಚಿಸಿದರೋ, ಅತಃ ಅಪಿ–ಈ ಕಾರಣದಿಂದಲೂ, ಮಧ್ವನಾಮಾ – ಶ್ರೀಮಧ್ವರೆಂಬ ನಾಮವುಳ್ಳ, ಯಃ–ಯಾವ ಗುರುಗಳು, ತೃತೀಯಃ ವಾಯುನಂದನಃ–ಮೂರನೆಯ ವಾಯು ಪುತ್ರರು (ಎಂದು ಸಿದ್ಧವಾಗುತ್ತದೆ).

**ಕಿಂಚಾಶ್ರಮಚತುಷ್ಕಸ್ಯ ಧರ್ಮಮಾಚರತೋ ಗುರೋಃ ।**
**ಪ್ರಥಮಂ ತು ವಪುರ್ವರ್ಣಿವನಿನೋಃ ಧರ್ಮಮಾಚರತ್ ।**
**ದ್ವಿತೀಯಂ ಗೃಹಿಣೋ ಧರ್ಮಮಾಚರದ್ಭೀಮಸಂಜ್ಞಿತಂ ॥ ೭೯ ॥**

ಬೇರೆ ಯುಕ್ತಿಯನ್ನು ಹೇಳುತ್ತಾರೆ :—

---

ಬೇರೆ ಕಾರ್ಯವನ್ನು ಮೂರನೆಯ ಅವತಾರದಿಂದ ನಿರ್ವಹಿಸಲಾರದು (೭೭). ಹಿಂದಿನ ಎರಡು ರೂಪಗಳು ಶ್ರೀಹರಿಯ ಬಲಕಾರ್ಯ ಸಾಧನೆಯಲ್ಲಿ, ದಾನವ ಮರ್ದನ ರೂಪದ ಕಾರ್ಯವನ್ನು ಸಾಧಿಸಿವೆ ; ಜ್ಞಾನಕಾರ್ಯದಲ್ಲಿ ಶ್ರೀವ್ಯಾಸರು ರಚಿಸಿದ ಸೂತ್ರಗಳಿಗೆ ಭಾಷ್ಯವನ್ನು ರಚಿಸಿ, ದುರ್ಭಾಷ್ಯಗಳ ಖಂಡನದಿಂದ ಶ್ರೀವ್ಯಾಸ ಸಿದ್ಧಾಂತವನ್ನು ಸಮರ್ಥಿಸುವ, ಅನ್ಯಸಾಧ್ಯವಲ್ಲದ ಸೇವೆಯನ್ನು ಸಲ್ಲಿಸಿದೆ ; ಆದ್ದರಿಂದ ಸಹ ಶ್ರೀಮಧ್ವರೇ ವಾಯುದೇವನ (ಮುಖ್ಯಪ್ರಾಣನ) ತೃತೀಯಾವತಾರರು (೭೮). ಮುಖ್ಯಪ್ರಾಣನು (ವಾಯುದೇವನು) ಸಕಲರ

*

ಆಶ್ರಮ ಚತುಷ್ಕಸ್ಯ–ಬ್ರಹ್ಮಚಾರಿ, ಗ್ರಹಸ್ಥ, ವಾನಪ್ರಸ್ಥ ಯತ್ಯಾಶ್ರಮ ಗಳೆಂಬ ನಾಲ್ಕು ಆಶ್ರಮಗಳ, ಧರ್ಮಂ–ಧರ್ಮವನ್ನು, ಆಚರತಃ–ಆಚರಿಸುವ, ಗುರೋಃ – ಮುಖ್ಯಪ್ರಾಣನ, ಪ್ರಥಮಂ ವಪುಃ – ತು – ಪ್ರಥಮಾವತಾರವೇ (ಹನುಮಾನ್ ಎಂಬ ಪ್ರಥಮ ರೂಪವೇ), ವರ್ಣಿವನಿನೋಃ–ಬ್ರಹ್ಮಚಾರಿ ವಾನ ಪ್ರಸ್ಥಗಳ (ಜಿತೇಂದ್ರಿಯನಾಗಿ ಗಾಯತ್ರೀಜಪದ ಆಚರಣೆ ಮತ್ತು ಕಂದಮೂಲಾದಿ ಆಹಾರವುಳ್ಳವನಾಗಿ ವನದಲ್ಲಿಯೇ ವಾಸಿಸಿದ್ದರಿಂದ, ಎರಡೂ ಆಶ್ರಮಗಳ), ಧರ್ಮಂ–ಧರ್ಮವನ್ನು, ಆಚರತ್–ಆಚರಿಸಿತು (ಪ್ರಥಮಾವತಾರದಿಂದ ಎರಡೂ ಆಶ್ರಮ ಧರ್ಮಗಳ ಆಚರಣೆಯೂ ಆಯಿತು); ಭೀಮ ಸಂಜ್ಞಿತಂ–ಭೀಮ ನಾಮಕ, ದ್ವಿತೀಯಂ–ಎರಡನೆಯ ರೂಪವು, ಗೃಹಿಣಃ ಧರ್ಮಂ–ಗೃಹಸ್ಥ ಧರ್ಮ ವನ್ನು, ಆಚರತ್–ಆಚರಿಸಿತು.[1]

**ತೃತೀಯಂ ಚ ವಪುರ್ಯುಕ್ತ್ಯಾ ಯತ್ಯಾಶ್ರಮಧುರಂಧರಂ ।**
**ಭವೇದವಶ್ಯಂ ತದ್ವಾಯೋರ್ನಾಥ್ವೀ ತನುಃಭೂದ್ಬಲಾತ್ ॥೯೦॥**

ಯುಕ್ತ್ಯಾ–ಯುಕ್ತಿಬಲದಿಂದ, ತೃತೀಯಂ ಚ ವಪುಃ–ಮೂರನೇ ರೂಪವು, ಯತ್ಯಾಶ್ರಮಧುರಂಧರಂ – ಯತ್ಯಾಶ್ರಮ ಪಾಲನೆಯಲ್ಲಿ ಸಮರ್ಥವಾದುದು, ಅವಶ್ಯಂ ಭವೇತ್ – ಅವಶ್ಯಕವಾಗಿ ಆಗಬೇಕಾಯಿತು; ತತ್ – ಆದ್ದರಿಂದ, ಬಲಾತ್ – (ಅವಶಿಷ್ಟವಾದ ಯತ್ಯಾಶ್ರಮ ಧರ್ಮಪಾಲನೆಗಾಗಿ) ಅನ್ಯಮಾರ್ಗ

---

ಗುರುವಾದ ದೇವಶ್ರೇಷ್ಠನು; ಆತನು ಬ್ರಹ್ಮಚರ್ಯ, ವಾನಪ್ರಸ್ಥ, ಗೃಹಸ್ಥ ಮತ್ತು ಯತ್ಯಾಶ್ರಮಗಳ ಧರ್ಮಗಳನ್ನು ಆಚರಿಸಲು ಸಂಕಲ್ಪಿಸಿ, ಹನುಮ ದ್ರೂಪದಿಂದ ಬ್ರಹ್ಮಚರ್ಯ ಮತ್ತು ವಾನಪ್ರಸ್ಥ ಧರ್ಮಗಳನ್ನು ಆಚರಿಸಿದನು; ಭೀಮರೂಪದಿಂದ, ಗೃಹಸ್ಥಾಶ್ರಮವನ್ನು ಪಾಲಿಸಿರುವನು; (೬೮). ಮೂರನೇ ಅವತಾರದಲ್ಲಿ ಅವಶಿಷ್ಟವಾದ ಯತ್ಯಾಶ್ರಮಧರ್ಮವನ್ನು, ಯುಕ್ತಿ ಬಲದಿಂದ ಆಚರಿಸಬೇಕೆಂಬುದನ್ನೂ ಸಾಧಿಸಿತು; ಯತಿಗಳಾಗಿ, ದೇವಯೋಗ್ಯವಾದ ಅತ್ಯುತ್ತಮ ಆಶ್ರಮ ಪಾಲನೆಮಾಡಿದ, ಮಧ್ವರೂಪವೇ ಆಗಿದೆ ಎಂದು

---

1 ಮುಖ್ಯ ಪ್ರಾಣನು ಸ್ವಸಂಕಲ್ಪಾನುಸಾರ ಆಚರಿಸಬೇಕಾದ ನಾಲ್ಕು ಆಶ್ರಮ ಧರ್ಮ ಗಳಲ್ಲಿ, ಎರಡು ಆಶ್ರಮ ಧರ್ಮಗಳನ್ನು ಪ್ರಥಮಾವತಾರದಿಂದಲೂ, ಗೃಹಸ್ಥಧರ್ಮ ವೊಂದನ್ನು ದ್ವಿತೀಯಾವತಾರದಿಂದಲೂ ಆಚರಿಸಿದ್ದಾಯಿತು.

ವಿಲ್ಲದೇ (ಯುಕ್ತಿಬಲದಿಂದ), ವಾಯೋಃ–ವಾಯುದೇವನ, ಮಾಧ್ವೀತನುಃ–ಮಧ್ವರೂಪವು, ಅಭೂತ್–ಆಯಿತು (ಯತ್ಯಾಶ್ರಮವುಳ್ಳದ್ದೆ ಆಯಿತು).

**ದೇವೋ ವಾ ದಾನವೋ ವಾ ಸ್ಯಾದ್ಭಾಷ್ಯಕಾರೋ ನ ಮಾನವಃ ।**
**ತತ್ರ ವಿಷ್ಣೌ ರತಾ ದೇವಾ ದೈತ್ಯಾ ಬ್ರಹ್ಮಶಿವಾದಿಷು ।**
**ಅತೋಽಪಿ ವೈಷ್ಣವಂ ಭಾಷ್ಯಂ ದೇವಮೂಲಂ ನ ಸಂಶಯಃ ॥ ೬೯೧ ॥**

ಶ್ರೀಮಧ್ವರ ವಾಯ್ವವತಾರತ್ವವನ್ನು, ಅನ್ಯಭಾಷ್ಯಕಾರರ ದಾನವರೂಪತ್ವವನ್ನು ಯುಕ್ತಿಯಿಂದ ಸಾಧಿಸುತ್ತಾರೆ :—

ದೇವಃ ವಾ–ದೇವನಾಗಲಿ, ದಾನವಃ ವಾ–ದಾನವನಾಗಲಿ, ಭಾಷ್ಯಕಾರಃ–ಸೂತ್ರಭಾಷ್ಯಕಾರನು, ಸ್ಯಾತ್–ಆಗಿರಬೇಕು ; ಮಾನವಃ ನ–ಮನುಷ್ಯನು ಅಲ್ಲ (ಮನುಷ್ಯಮಾತ್ರನಿಗೆ ಸಕಲಶಾಸ್ತ್ರ ನಿರ್ಣಾಯಕ ಸೂತ್ರದಲ್ಲಿ ಪ್ರವೃತ್ತಿಯು ಯುಕ್ತವಾಗುವುದಿಲ್ಲ ; (ದಾನವನಿಗೆ ಸಹಜಶಕ್ತಿಯಿಲ್ಲದೇ ಶಿವಾದಿವಿಷಯಕ ಕುತ್ಸಿತ ತೀವ್ರ ತಪಸ್ಸು ಮೊದಲಾದ್ದರಿಂದ ಆಹಿತವಾದ ಶಕ್ತಿಯಿಂದ ಪ್ರವೃತ್ತಿಯು ಕೂಡುತ್ತದೆ–ಮಾನವರಿಗೆ ಉಭಯವಿಧ ಶಕ್ತಿ ಇಲ್ಲದ್ದರಿಂದ ಭಾಷ್ಯ ಪ್ರವೃತ್ತಿಯು ಉಪಪನ್ನವಾಗುವುದಿಲ್ಲ) ; ತತ್ರ– ಈ ವಿಷಯದಲ್ಲಿ, ದೇವಾಃ – ದೇವತೆಗಳು, ವಿಷ್ಣೌ–ವಿಷ್ಣುವಿನಲ್ಲಿ, ರತಾಃ–ಆಸಕ್ತರು ; ದೈತ್ಯಾಃ–ದೈತ್ಯರು, ಬ್ರಹ್ಮಶಿವಾದಿಷು–[1] ಬ್ರಹ್ಮರುದ್ರಾದಿ ಅನ್ಯರಲ್ಲಿ (ರತಾಃ–ಆಸಕ್ತರು); ಅತಃ ಅಪಿ–ಈ ಕಾರಣದಿಂದ ಸಹ, ವೈಷ್ಣವಂ ಭಾಷ್ಯಂ–ವಿಷ್ಣುಸರ್ವೋತ್ತಮತ್ವವನ್ನು ಸಾಧಿಸುವ ಭಾಷ್ಯವು, ದೇವಮೂಲಂ–ದೇವನಿರ್ಮಿತವೇ, ನ ಸಂಶಯಃ–ನಿಶ್ಚಯವು.

---

ಪ್ರಾಪ್ತವಾಗುತ್ತದೆ (೬೯೦). ಸೂತ್ರಭಾಷ್ಯಕಾರನು, ದೇವನಾಗಿರಬೇಕು ಅಥವಾ ದಾನವನಾಗಿರಬೇಕು–ಉಭಯವಿಧ ಶಕ್ತ್ಯಭಾವದಿಂದ ಮನುಷ್ಯನಂತೂ ಅಲ್ಲ ; ವಿಷ್ಣುವಿನಲ್ಲಿ ಭಕ್ತಿಯುತರು (ಆಸಕ್ತರು) ದೇವತೆಗಳು ; ದೈತ್ಯ (ದಾನವ)ರು ಬ್ರಹ್ಮಶಿವಾದಿಗಳಲ್ಲಿ (ಜಗನ್ಮಿಥ್ಯಾತ್ವ, ಶೂನ್ಯತ್ವ ಮೊದಲಾದವುಗಳಲ್ಲಿ) ಆಸಕ್ತರು ; ಆದ್ದರಿಂದ ಸರ್ವಪ್ರಕಾರದಿಂದ ವಿಷ್ಣುಸರ್ವೋತ್ತಮತ್ವವನ್ನೇ ಸಾಧಿಸುವ ವೈಷ್ಣವ

---

1 ಇಲ್ಲಿರುವ ಆದಿಪದದಿಂದ ನಿರ್ಗುಣ, ಅಪರಪರ್ಯಾಯವಾದ ಶೂನ್ಯವನ್ನು ಸಂಗ್ರಹಿಸಲಾಗಿದೆ.

**ಅಯಾದವೀಂ ಕ್ಷ್ಮಾಂ ಕರಿಷ್ಯೇ ಇತ್ಯೇಕಃ ಪ್ರತಿಶುಶ್ರುವೇ ।**
**ಅನ್ಯಸ್ತು ಕೃಷ್ಣಂ ಜಗ್ರಾಸ ಯೋ ಗ್ರಸೀತ್ಸಕಲಂ ಜಗತ್ ॥ ೬೯೨ ॥**

ಏಕಃ–ಒಬ್ಬನು (ಸಾಲ್ವನು), ಕ್ಷ್ಮಾಂ–ಭೂಮಿಯನ್ನು, ಅಯಾದವೀಂ–ಕೃಷ್ಣಸಹಿತವಾಗಿ ಯಾದವರ ಅಭಾವವನ್ನು (ನಾಶವನ್ನು), ಕರಿಷ್ಯೇ ಇತಿ–ಮಾಡುವೆನೆಂದು, ಪ್ರತಿಶುಶ್ರುವೇ–ಪ್ರತಿಜ್ಞೆ ಮಾಡಿದನು; ಅನ್ಯಃ ತು–ಮತ್ತೊಬ್ಬನಾದರೋ (ಬಕನು), ಯಃ–ಯಾವನು, ಸಕಲಂ ಜಗತ್–ಸಮಸ್ತ ಜಗತ್ತನ್ನು, ಅಗ್ರಸೀತ್ – ಗ್ರಾಸ ಮಾಡಿರುವನೋ (ಹೊಟ್ಟೆಯಲ್ಲಿಟ್ಟುಕೊಂಡಿರುವನೋ), ಕೃಷ್ಣಂ–ಆ ಕೃಷ್ಣನನ್ನು, ಜಗ್ರಾಸ–(ಬಕಪಕ್ಷಿರೂಪವನ್ನು ಧರಿಸಿಬಂದು) ನುಂಗಿದನು (ಕೃಷ್ಣಾಭಾವವನ್ನು, ಎಂದರೆ ಉಪಲಕ್ಷಣದಿಂದ ಸರ್ವಜೀವಾಭಾವವನ್ನು ಸಾಲ್ವನೂ, ಸಕಲ ಜಗದಭಾವವನ್ನು ಬಕನೂ, ಇಚ್ಛಿಸಿದ ದೈತ್ಯರೆಂಬುದು ಭಾಗವತದಲ್ಲಿ ಪ್ರಸಿದ್ಧವಾಗಿದೆ.)

**ಸ ವಾದೀ ಮೂಲದೈತ್ಯೋ ವಾ ತದಾವೇಶಯುತೋಽಪಿ ವಾ ।**
**ಅಪರಃ ಕೋಽಪಿ ದೈತ್ಯಃ ಸ್ಯಾನ್ನ ಚೇದೀದೃಙ್ಮತಿಃ ಕುತಃ ॥ ೬೯೩ ॥**

ಸಃ ವಾದೀ–ಕೃಷ್ಣ, ಜೀವ, ಜಡಾತ್ಮಕ ಜಗತ್ತಿನ ಮಿಥ್ಯಾತ್ವವನ್ನು ವಾದಿಸುವವನು, ಮೂಲದೈತ್ಯಃ–ಮೂಲದೈತ್ಯನು, ವಾ–ಅಥವಾ, ತದಾವೇಶ–ಯುತಃ ಅಪಿ–ಆ ಮೂಲದೈತ್ಯನ (ಸಾಲ್ವನ) ಆವೇಶವುಳ್ಳವನಾಗಲಿ, ವಾ–ಅಥವಾ, ಅಪರಃ–ಮತ್ತೊಬ್ಬನಾದ ಬಕಾದಿ, ಕೋಽಪಿ ದೈತ್ಯಃ–ಯಾವನೊಬ್ಬ

---

ಭಾಷ್ಯವು ದೇವನಿರ್ಮಿತವೇ ಆಗಿದೆ–ಬೇರೆಯಲ್ಲ–ಯಾವ ಸಂಶಯಕ್ಕೂ ಅವಕಾಶವಿಲ್ಲ(೬೯೧). ಒಬ್ಬ ದೈತ್ಯನು (ಸಾಲ್ವನು) ಕೃಷ್ಣಸಹಿತವಾದ ಯಾದವರೆಲ್ಲರನ್ನು ನಾಶಮಾಡುವುದಾಗಿ ಪ್ರತಿಜ್ಞೆಮಾಡಿದನು; ಉಪಲಕ್ಷಣದಿಂದ ಸರ್ವಜೀವಾಭಾವವನ್ನು ಸಾಧಿಸುವ ಪ್ರತಿಜ್ಞೆಯುಳ್ಳವನಾದನು; ಮತ್ತೊಬ್ಬನು (ಬಕನು,) ಸಕಲ ಜಗತ್ತನ್ನು ತನ್ನ ಉದರದಲ್ಲಿಟ್ಟುಕೊಂಡಿರುವ ಶ್ರೀಕೃಷ್ಣನನ್ನೇ ನುಂಗಿ ಸಕಲ ಜಗದಭಾವವನ್ನು ಸಾಧಿಸಲು ಯತ್ನಿಸಿದ ದೈತ್ಯನು; ಈ ಉಭಯ ದೈತ್ಯರ ಯತ್ನಗಳು ಭಾಗವತದಲ್ಲಿ ಪ್ರಸಿದ್ಧವಾಗಿದೆ; (೬೯೨). ಈ ಉಭಯರ ಮೂಲ ಗುರುವಾದ ಕಲಿಯು (ದುರ್ಯೋಧನನು) ಜೀವಜಡಾತ್ಮಕ ಜಗತ್ತನ್ನು ಮಿಥ್ಯಾ

ದೈತ್ಯನು, ಸ್ಯಾತ್–ಆಗಿರುತ್ತಾನೆ ; ನ ಚೇತ್–ದೈತ್ಯನಲ್ಲದಿದ್ದರೆ, ಈದೃಙ್ಮತಿಃ– ಈ ಮಿಥ್ಯಾತ್ವಬುದ್ಧಿಯು, ಕುತಃ–ಎಲ್ಲಿಂದ ಬರುತ್ತದೆ ?

**ಸೂಚಿಮಾತ್ರಪ್ರದೇಶಂ ಚ ಯಃ ಸ್ವತೋಽನ್ಯಸ್ಯ ನಾದಿಶತ್ ।**
**ಸ ಭೀಮಗದಯಾ ಶಾಮ್ಯೇನ್ನಾಭೀಮಸ್ಯ ಪರಾಕ್ರಮೈಃ ।**
**ಮಧ್ವಸ್ಯ ಭೀಮರೂಪತ್ವಂ ತದ್ವ್ಯಾಕ್ತಮಿತಿ ಮೇ ಮತಿಃ ॥ ೬೫ ॥**

ಭೀಮನಿಗೇ ಮಧ್ವರೂಪತ್ವವನ್ನು ಉಪಪಾದಿಸುತ್ತಾರೆ :—

ಸೂಚಿಮಾತ್ರ ಪ್ರದೇಶಂ ಚ–ಸೂಜಿ ತುದಿಯೂರುವಷ್ಟು ಭೂಪ್ರದೇಶವನ್ನು, ಸ್ವತಃ–ತನ್ನ, ಅನ್ಯಸ್ಯ–ಇತರರ (ಭೂಮಿಯನ್ನು), ನ ಅದಿಶತ್–[1] (ಯಾವ ದುರ್ಯೋಧನನು) ಕೊಡಲಿಲ್ಲವೋ (ಕೊಡಲು ಒಪ್ಪಲಿಲ್ಲವೋ), ಸಃ–ಆತನು (ಆ ದೈತ್ಯನು), ಭೀಮಗದಯಾ–ಭೀಮನ (ವಾಗ್ರೂಪಗದಾಪೆಟ್ಟಿನಿಂದಲೇ) ಗದೆಯಿಂದಲೇ, ಶಾಮ್ಯೇತ್–ಉಪಶಾಂತನಾಗಬಲ್ಲನು ; ಅಭೀಮಸ್ಯ–

ಎಂಬುವನು, ಅಥವಾ ಅವನ ಆವೇಶವುಳ್ಳವನಾವನಾದರೊಬ್ಬ ದೈತ್ಯನು, ಅನ್ಯಭಾಷ್ಯಕಾರನಲ್ಲದಿದ್ದರೆ, ಈ ಮಿಥ್ಯಾತ್ವ ಬುದ್ಧಿಯು ಹೇಗೆ ಉಂಟಾಗುತ್ತದೆ ? (ಸರ್ವಥಾ ಶಕ್ಯವಿಲ್ಲ (೬೪). ದುರ್ಯೋಧನನು, ಪಾಂಡವರಿಗೆ ಸೂಜಿ ಮೊನೆಯಷ್ಟು ಭೂಪ್ರದೇಶವನ್ನು ಕೊಡಲಾಗುವುದ್ದಿಲ್ಲವೆಂದು ನಿರಾಕರಿಸಿದನು ;

[1] ರಾಜ್ಯದೇಶಾದಿಯು ತನ್ನದಾದರೆ, ಅಸತ್ವವನ್ನು ಅಂಗೀಕರಿಸಿದಂತೆ ಆಗುವುದಿಲ್ಲ ; ಅದು ಅನ್ಯನದೆಂದರೆ, ಸದ್ವಿಲಕ್ಷಣವನ್ನು ಅಂಗೀಕರಿಸದಂತೆ ಆಗುವುದಿಲ್ಲ ; ದುರ್ಯೋಧನನ ಪಕ್ಷವು, ಸದಸದ್ವಿಲಕ್ಷಣರೂಪದ ಮಿಥ್ಯಾತ್ವವನ್ನು ಜಗತ್ತಿಗೆ ಹೇಳುತ್ತದೆ ; ಸಾಲ್ವ, ಬಕರೆಂಬ ಹಿಂದೆ ಹೇಳಲಾದ ದೈತ್ಯಪಕ್ಷವು ಅತ್ಯಂತಾಭಾವ ಪ್ರತಿಯೋಗಿತ್ವರೂಪ ಮಿಥ್ಯಾತ್ವವನ್ನು ಜಗತ್ತಿಗೆ ಹೇಳುತ್ತದೆ ; ಅಥವಾ ರಾಜ್ಯದ (ಭೂಮಿಯ) ಸ್ವಾಮಿಯು ತಾನೇ, ಅನ್ಯನಲ್ಲವೆಂಬ ದುರ್ಯೋಧನನು ಈಶ್ವರಾಭೇದವಾದಿಯೆನ್ನಬಹುದು (ಈಶ್ವರೋಹಂ ಇತ್ಯಾದಿಯಂತೆ) ; ಕಲಿರೂಪದ ಮೂಲದೈತ್ಯನಾದ ದುರ್ಯೋಧನನು, ಮತದ್ವಯಕ್ಕೂ ಗುರುಸ್ಥಾನದಲ್ಲಿರುವನು ; ಆದ್ದರಿಂದ, ಮೂಲದೈತ್ಯನಾದ ಕಲಿಯಾಗಲಿ ಆತನ ಆವೇಶಯುಕ್ತನಾದ ಮಣಿಮಂತನಾಗಲಿ, ಭೀಮಗದೆಯಿಂದಲೇ ಬಗ್ಗತಕ್ಕವರಲ್ಲದೇ ಅನ್ಯರಿಂದಲ್ಲ ; ಆದ್ದರಿಂದ ವಾಗ್ಯುದ್ಧರೂಪದ ಗದಾಯುದ್ಧದಲ್ಲಿ ದುರ್ಭಾಷ್ಯಗಳನ್ನು ಖಂಡಿಸಿದ ಶ್ರೀಮಧ್ವರು ಭೀಮನ ಅಪರಾವತಾರರೆಂಬುದೇ ಯುಕ್ತಿಸಿದ್ಧವಾಗುತ್ತದೆ.

ಭೀಮನಲ್ಲದವನ, ಪರಾಕ್ರಮೈಃ—ಶೂರತನದಿಂದ, ನ—ಆಗುವುದಿಲ್ಲ (ಸುಮ್ಮ ನಾಗುವುದಿಲ್ಲ) ; ತತ್—ಆದ್ದರಿಂದ, ಮಧ್ವಸ್ಯ—ಶ್ರೀಮಧ್ವರಿಗೆ, ಭೀಮರೂಪತ್ವಂ— ಭೀಮರೂಪತ್ವವು (ಭೀಮನೇ ಅನ್ಯರೂಪವನ್ನು ಹೊಂದಿರುವಿಕೆಯು), ಯೌಕ್ತಂ— ಯುಕ್ತಿಯುಕ್ತವಾಗುತ್ತದೆ, ಇತಿ ಮೇ ಮತಿಃ—ಎಂದು ನನ್ನ ನಿಶ್ಚಿತಾಭಿಪ್ರಾಯವು.

**ಕಿಂಚ ಶ್ರುತೌ ಮತಿಪದಂ ಹನುಮದ್ವಾಚಕಂ ಭವೇತ್ ।**
**ಯತೋ ಗತ್ಯರ್ಥಕೋ ಧಾತುರ್ಜ್ಞಾನಾರ್ಥ ಇತಿ ಶಾಬ್ದಿಕಾಃ ।**
**ತಜ್ಜ್ಞಾನಶೀಲಂ ತದ್ವಂತಂ ನಿರ್ವಕ್ತಿ ಹನುಮತ್ಪದಂ ॥ ೬೯ ॥**

ಬಳಿತ್ಥಾಶ್ರುತಿಯು ವಾಕ್ಯತ್ರಯಗಳಲ್ಲಿ ಹನುಮದಾದಿ ಅವತಾರತ್ರಯಗಳೇ ಪ್ರತಿಪಾದ್ಯವೆಂದು, ಪದಮಹಿಮೆಯಿಂದ ಸಹ ಸಿದ್ಧವಾಗುವುದೆನ್ನುತ್ತಾರೆ :—

ಕಿಂಚ — ಮತ್ತೇನೆಂದರೆ, ಶ್ರೌತ ಮತಿಪದಂ — 'ಮಾತಿರ್ಯುತಸ್ಯ ಧೇನಾ ಅನಯಂತ' ಎಂಬಲ್ಲಿರುವ ಮತಿಪದವು (ಶ್ರುತಿಯಲ್ಲಿ ಪ್ರಯೋಗಿಸಲ್ಪಟ್ಟಿರುವ ಶಬ್ದವು), ಹನುಮದ್ವಾಚಕಂ—ಹನುಮಂತನನ್ನು ಹೇಳುವುದು, ಭವೇತ್—ಆಗು ತ್ತದೆ ; ಯತಃ—ಏಕೆಂದರೆ ; ಗತ್ಯರ್ಥಕಃ ಧಾತುಃ—ಗತ್ಯರ್ಥವುಳ್ಳ ಧಾತುವು (ಹನ ಹಿಂಸಾಗತ್ಯೋಃ ಎಂದು ಧಾತುವು ; ಹನ ಎಂಬ ಧಾತುವಿಗೆ ಗತ್ಯರ್ಥವೂ),

---

ಭೂಮಿಯು ತನ್ನ ಸ್ವಾಮಿತ್ವಕ್ಕೆ ಸೇರಿದ್ದೆಂಬ ಭಾವದಿಂದ ಹಾಗೆ ಹೇಳಿದ್ದರೆ 'ಈಶ್ವರೋಹಂ' ಎಂಬಂತೆ, ಈಶ್ವರಾಭೇದ ವಾದಿಯು ; ಜೀವಜಡಾತ್ಮಕ ಜಗತ್ತು ಸದಸದ್ವಿಲಕ್ಷಣರೂಪದಿಂದ ಮಿಥ್ಯೆಯೆಂದು ಹೇಳುವ ಈ ಕಲಿಸ್ವರೂಪನು ಈ ಹಿಂದೆ ನಿರೂಪಿತರಾದ ಉಭಯ ದೈತ್ಯರ ಗುರುವೇ ಸರಿ ; ಈತನು ಭೀಮನ ಗದಾ ಪ್ರಹಾರದಿಂದ ಮಾತ್ರ ನಾಶಹೊಂದಲರ್ಹನಲ್ಲವೇ ? ಆತನ ಆವೇಶಯುಕ್ತ ಮಣಿಮಂತದೈತ್ಯರಚಿತಭಾಷ್ಯವು, ಶಬ್ದರೂಪದ ಭೀಮ ಗದಾ ಪೆಟ್ಟಿನಿಂದ ಮಾತ್ರ ಭಗ್ನವಾಗಬಲ್ಲದು—ಅನ್ಯಥಾ ಅಲ್ಲ ; ಆದ್ದರಿಂದ, ಈ ಕಾರ್ಯವನ್ನು ಮಧ್ವ ಭಾಷ್ಯವು ಮಾಡಿರುವುದರಿಂದ, ಶ್ರೀಮಧ್ವರು ಭೀಮರೂಪವೇ (ಅಪರಾವತಾರವೇ) ಎಂಬುದು ಯುಕ್ತಿಯುಕ್ತವಾಗುತ್ತದೆ ; ಹೀಗೆಂಬುದು ನನ್ನ ನಿಶ್ಚಿತಾಭಿಪ್ರಾಯವು (೬೮.) ಬಳಿತ್ಥಾ ಶ್ರುತಿಯಲ್ಲಿ 'ಮತಿ' ಪದವು (ಮಾತಿರ್ಯುಷಭಸ್ಯ, ಎಂಬಲ್ಲಿರುವುದು) ಹನುಮದ್ವಾಚಕವಾದುದು ; 'ಹನಹಿಂಸಾಗತ್ಯೋಃ' ಎಂಬ

ಜ್ಞಾನಾರ್ಥಃ–ಜ್ಞಾನವೆಂಬರ್ಥವುಳ್ಳದ್ದೆ, ಇತಿ ಶಾಬ್ದಿಕಾಃ–ಎಂದು ವ್ಯಾಕರಣಜ್ಞರು (ಹೇಳುವರು) ; ಹನುಮತ್ಪದಂ-ಹನುಮಾನ್ ಎಂಬ ಪದವು, ತಜ್‌ಜ್ಞಾನಶೀಲಂ– ಆ ಜ್ಞಾನ ಸ್ವಭಾವವುಳ್ಳವನನ್ನು, ತದ್ವಂತಂ–ಜ್ಞಾನವುಳ್ಳವನನ್ನಾಗಿ, ನಿರ್ವಕ್ತಿ– ನಿರ್ವಚನಮಾಡುತ್ತದೆ ; (ತಾಚ್ಛೀಲಿಕಾರ್ಥ ಉನ್ ಪ್ರತ್ಯಯ ಬಂದು–ಆ ಸ್ವಭಾವ ವುಳ್ಳವನೆಂದು ತಿಳಿಸಲು 'ಹನು' ಎಂದಾಗಿ, 'ಹನು' ಉಳ್ಳವನು 'ಹನುಮಾನ್' ಎಂದು ಕರೆಯಲ್ಪಡುವನು), (ಹೀಗೆ ಉಕ್ತ ಅವತಾರತ್ರಯಗಳೂ ಜ್ಞಾನಪೂರ್ಣ ಗಳೆಂದೇ ಶ್ರುತಿಸಿದ್ಧವಾಗುತ್ತದೆ).[1]

**ಮತಿರೂಪಂ ಮತೀತ್ಯಾಹುರ್ಮತಿಮಂತಂ ಯತೋ ಬುಧಾಃ ।**
**ಅತಃ ಸ್ವಾಭಾವಿಕೀ ಯಸ್ಯ ಮತಿಃ ಸ ಮತಿರುಚ್ಯತೇ ।**
**ಏವಂ ಚ ಹನುಮಾನೇವ ಮತಿಶಬ್ದೋದಿತೋ ನ ಕಿಂ ॥ ೬೯ ॥**

ಹನುಮತ್ಪದಸಮಾನಾರ್ಥಕವಾದ ಮತಿಮಾನ್ ಎಂದೇ ಶ್ರುತಿಯು ಹೇಳದೇ 'ಮತಿಃ' ಎಂದು ಮಾತ್ರ ಏಕೆ ಹೇಳುತ್ತದೆ, ಎಂದರೆ ಮತಿಶಬ್ದ ದಿಂದಲೂ ಅದೇ ಅರ್ಥವೆಂಬಲ್ಲಿ ಲೌಕಿಕ ಪ್ರಯೋಗವನ್ನೂ ತೋರಿಸುತ್ತಾರೆ :—

ಯತಃ–ಯಾವ ಕಾರಣದಿಂದ, ಬುಧಾಃ–ವಿವೇಕಿಗಳು (ಜ್ಞಾನಿಗಳು), ಮತಿಮಂತಂ-ಮತಿಯುಳ್ಳವನನ್ನು, ಮತಿರೂಪಂ-ಮತಿರೂಪದ, ಮತೀತ್ಯಾಹುಃ–

---

ಧಾತ್ವರ್ಥದಲ್ಲಿ ಗತ್ಯರ್ಥಕ್ಕೆ ಜ್ಞಾನಾರ್ಥಕತ್ವ ವ್ಯಾಕರಣಜ್ಞರು ಹೇಳುವುದರಿಂದ, ಮತ್ತು 'ಉ' ಎಂಬ ಪ್ರತ್ಯಯವು ಆ ಜ್ಞಾನವು ಸ್ವಾಭಾವಿಕವೆಂದು ಹೇಳುವುದರಿಂದ, ಹನು ಎಂದರೆ ಜ್ಞಾನಸ್ವಭಾವದ ವಸ್ತುಎಂದೂ, 'ತದ್ವಂತಂ' (ಅದನ್ನುಳ್ಳವನು ಹನುಮಂತ–ಹನುಮಾನ್) ಎಂದೂ, ಹನುಮತ್ಪದದ ನಿರ್ವಚನವೇ ಆಗುತ್ತದೆ (೬೫). ಮತಿರೂಪನನ್ನು ಮತಿ ಎಂದೇ ಕರೆಯುವರು ; ಮತಿವಂತನೇ ಮತಿರೂಪನು ; ಇದು ಜ್ಞಾನಿಸಮ್ಮತವು ; ಸ್ವಾಭಾವಿಕವಾದ ಮತಿಯುಳ್ಳವನೇ ಮತಿಯು ; ಏವಂಚ, ಮತಿಶಬ್ದವು ಹನುಮಂತನನ್ನೇ ಹೇಳುತ್ತದೆ ; ಮತಿ

---

1 ಕೆಲವು ಸ್ಥಳದಲ್ಲಿ 'ಹನುಮಾನ್' ಎಂದು ಕಂಡು ಬರುವ ಪ್ರಯೋಗವೂ ಪುನಃ ಉಕಾರವರ್ಣದ ಆಗಮದಿಂದ, ಆದರ (ಜ್ಞಾನದ) ವಿಶೇಷವನ್ನೇ ಹೇಳುತ್ತದೆ.

ಮತಿ ಎಂದೇ ಹೇಳುವರು ; ಅತಃ–ಈ ಕಾರಣದಿಂದ, ಯಸ್ಯ–ಯಾರ, ಮತಿಃ–ಜ್ಞಾನವು, ಸ್ವಾಭಾವಿಕೀ–ಸ್ವಭಾವಸಿದ್ಧವಾದುದೋ (ಆಗಂತುಕವಲ್ಲದುದೋ), ಸಃ–ಆತನು, ಮತಿಃ ಉಚ್ಯತೇ–ಮತಿ ಎಂದೇ ಕರೆಯಲ್ಪಡುವನು ; ಏವಂಚ–ಹೀಗೆ, ಹನುಮಾನ್ ಏವ–ಹನುಮಾನ್ ಎಂಬುದೇ, ಮತಿಶಬ್ದೋದಿತಃ–ಮತಿ ಶಬ್ದ ಹೇಳಲ್ಪಡುವುದು, ನ ಕಿಂ–ಅಲ್ಲವೇನು ? (ಮತಿಶಬ್ದವೂ, ಮತಿಮಂತನನ್ನೇ ಹೇಳುತ್ತದೆ).

**ದ್ವಿತೀಯಂ ಚ ವಪುಃ ಸಾ ವಾಕ್ಪಿತುಮಾನಿತಿ ಶಂಸತಿ ।**
**ಪಿತುರಿತ್ಯನ್ನ ನಾಮೇತಿ ಬ್ರಾಹ್ಮಣಂ ಪಿತುಮಾಂಸ್ತತಃ ।**
**ಬಹ್ವನ್ನವಾನಭೂದ್ಭೀಮೋ ಬಾಹುಲ್ಯಾರ್ಥಮತುಬ್ಬಲಾತ್ ॥ ೬೯೭ ॥**

ಸಾ ವಾಕ್–('ಪೃಕ್ಷೋವಪುಃ' ಎಂಬ) ಶ್ರುತಿವಾಕ್ಯವು, ದ್ವಿತೀಯಂ ಚ–ಎರಡನೇ, ವಪುಃ–ರೂಪವನ್ನು (ಅವತಾರದೇಹವನ್ನು), ಪಿತುಮಾನ್ ಇತಿ–ಪಿತುಮಾನ್ ಎಂದು ಶಂಸತಿ–ಹೇಳುತ್ತದೆ ; ಪಿತುಃ–ಪಿತಾ ಎಂಬುದರ ಅರ್ಥವು ಅನ್ನನಾಮ ಇತಿ – ಅನ್ನದ ನಾಮವೆಂದು, ಬ್ರಾಹ್ಮಣಂ–ಬ್ರಾಹ್ಮಣವಚನವಿದೆ (ಬ್ರಾಹ್ಮಣವೆಂಬ ವೇದಭಾಗದಲ್ಲಿ ಹೇಳಿರುತ್ತದೆ); ಬಾಹುಲ್ಯಾರ್ಥಮತುಪ್–ಬಲಾತ್–ಬಹು ಎಂಬರ್ಥವನ್ನು ಹೇಳುವ ಮತುಪ್ ಪ್ರತ್ಯಯಬಲದಿಂದ, (ಬಹು ಧನವುಳ್ಳವನನ್ನು ಧನವಾನ್ ಎಂದು ಕರೆಯುವಂತೆ), ಭೀಮಃ–ಭೀಮನು, ಬಹ್ವನ್ನವಾನ್–ಬಹ್ವನ್ನವುಳ್ಳವನು (ಪಿತುಮಾನ್ ಶಬ್ದವಾಚ್ಯನು), ಅಭೂತ್–ಆದನು.

---

ಎಂದರೆ ಜ್ಞಾನವಷ್ಟೆ (೬೯೬). ಪ್ರಸಕ್ತ ಶ್ರುತಿ ಎರಡನೆಯ ವಾಕ್ಯವು, ವಾಯುದೇವನ ದ್ವಿತೀಯ ರೂಪವನ್ನು ಪಿತುಮಾನ್ ಎಂದು ಹೇಳಿತು ; ಪಿತುಃ ಎಂಬುದರ ಅರ್ಥವು ಅನ್ನವೆಂದು ಬ್ರಾಹ್ಮಣ (ವೇದಭಾಗದಲ್ಲಿ) ಹೇಳಲಾಗಿದೆ ; ಪಿತುಮಾನ್ ಎಂಬಲ್ಲಿರುವ 'ಮತುಪ್' ಪ್ರತ್ಯಯವು ಬಹು ಎಂಬ ಅರ್ಥವನ್ನು ಹೇಳುತ್ತದೆ ; (ಬಹುಧನವುಳ್ಳವನನ್ನು ಧನವಾನ್ ಎಂದು ಕರೆದಂತೆ) ; ಆದ್ದರಿಂದ ಪಿತುಮಾನ್ ಎಂಬುದಕ್ಕೆ ಬಹ್ವನ್ನ ಭೋಕ್ತನೆಂಬರ್ಥವು ಸಿದ್ಧವಾಗುತ್ತದೆ (೬೯೭).

**ತೃತೀಯಂ ತು ವಪುಃ ಪ್ರಾಹ ದಶಪ್ರಮತಿನಾಮಿ ಸಾ ।**
**ತಚ್ಚ ಪೂರ್ಣಪ್ರಜ್ಞನಾಮ ಸಮಾನಾರ್ಥಂ ಪ್ರತೀಯತೇ ॥ ೬೯೮ ॥**

ಸಾ–('ತೃತೀಯಮಸ್ಯ' ಎಂಬ ಮೂರನೆಯ ಅವತಾರವನ್ನು ಹೇಳುವ) ಶ್ರುತಿಯು, ದಶಪ್ರಮತಿನಾಮಿ – ದಶಪ್ರಮತಿ ಎಂಬ ನಾಮವುಳ್ಳದ್ದೆಂದು, ತೃತೀಯಂ ತು–(ವಾಯುದೇವನ) ಮೂರನೇಯದೇ ಆದ, ವಪುಃ–ದೇಹವನ್ನು, ಪ್ರಾಹ–ಹೇಳಿರುತ್ತದೆ; ತತ್ ಚ–ಆ ನಾಮವಾದರೂ, ಪೂರ್ಣಪ್ರಜ್ಞನಾಮ ಸಮಾನಾರ್ಥಂ – ಪೂರ್ಣ ಪ್ರಜ್ಞರೆಂಬ (ಯತ್ಯಾಶ್ರಮನಾಮದ) ಸಮಾನಾರ್ಥ ವುಳ್ಳದ್ದೆಂದು, ಪ್ರತೀಯತೇ–ತಿಳಿಯುತ್ತದೆ; ('ದಶದಶಸ್ತ್ವಚ್ಛತಂ ಶತಶತಾನಿ ತತ್ಸಹಸ್ರಾಣಿ ತತ್ಸರ್ವಂ' ಎಂಬ ಶ್ರುತಿಯು ಸೂಚಿತವಾಗಿದೆ; ಶತ, ಸಹಸ್ರ, ಅನಂತ ಪದಗಳ ಸಂಖ್ಯೆಯನ್ನು ದಶಶಬ್ದವು ಹೇಳುತ್ತದೆ; ಆದ್ದರಿಂದ ದಶ ಎಂದರೆ, ಪೂರ್ಣ (ಸರ್ವ) ಎಂದರ್ಥ, ಪ್ರಮತಿ ಎಂದರೆ ಜ್ಞಾನ; ಹೀಗೆ ದಶಪ್ರಮತಿ ಎಂದರೆ ಪೂರ್ಣಪ್ರಜ್ಞ ಅಥವಾ ಸರ್ವಜ್ಞ, ಎಂದೇ ಅರ್ಥವು).

**ಬಹುತ್ವಾರ್ಥದಶತ್ವೋಕ್ತೇಃ ಪೂರ್ಣತ್ವಾರ್ಥೇಽಪಿ ವರ್ತನಾತ್ ।**
**ಅತಃ ಪೂರ್ಣಪ್ರಜ್ಞ ಏವ ದಶಪ್ರಮತಿನಾಮವಾನ್ ॥ ೬೯೯ ॥**

ಬಹುತ್ವಾರ್ಥದಶತ್ವೋಕ್ತೇಃ–ಬಹುತ್ವವೆಂಬ ಅರ್ಥವುಳ್ಳ ದಶಶಬ್ದವನ್ನು ಶ್ರುತಿಯು ಪ್ರಯೋಗಿಸಿರುವುದರಿಂದ (ಅದು), ಪೂರ್ಣತ್ವಾರ್ಥೇಽಪಿ–ಪೂರ್ಣತ್ವ ವೆಂಬ ಅರ್ಥದಲ್ಲಿಯೂ, ವರ್ತನಾತ್ – ಇರುವುದರಿಂದಲೂ, ಅತಃ – ದಶ, ಪೂರ್ಣಪದಗಳು ಪರ್ಯಾಯಪದಗಳಾದ್ದರಿಂದ, ಪೂರ್ಣಪ್ರಜ್ಞ ಏವ – ಪೂರ್ಣ ಪ್ರಜ್ಞರೆಂಬುವರೇ, ದಶಪ್ರಮತಿನಾಮವಾನ್–ದಶಪ್ರಮತಿ ಎಂಬ ನಾಮ (ಶ್ರುತಿ ಯಲ್ಲಿ) ಉಳ್ಳವರು.

---

ಮೂರನೇ ಅವತಾರವನ್ನು ಹೇಳುವ ಈ ಶ್ರುತಿಯು ಅದನ್ನು 'ದಶಪ್ರಮತಿ' ನಾಮವುಳ್ಳದ್ದೆಂದು ಹೇಳುತ್ತದೆ; ಅದು ಪೂರ್ಣಪ್ರಜ್ಞರೆಂಬ (ಶ್ರೀಮಧ್ವರ ಯತ್ಯಾಶ್ರಮನಾಮದ) ಸಮಾನಾರ್ಥಕವೇ ಆಗಿದೆ; ದಶಶಬ್ದವು ಶತ, ಸಹಸ್ರ, ಅನಂತಾದಿ ಸಂಖ್ಯಾವಾಚಕವೆಂದು ಶ್ರುತಿಯೇ ಹೇಳುತ್ತದೆ; ದಶ ಎಂದರೆ ಪೂರ್ಣಪ್ರಮತಿ ಎಂದರೆ ಜ್ಞಾನ, ಆದ್ದರಿಂದ ದಶಪ್ರಮತಿ ಎಂದರೆ ಪೂರ್ಣ ಪ್ರಜ್ಞರೆಂದೇ ಅರ್ಥವು (೬೯೮). ಹೀಗೆ ದಶಶಬ್ದವು ಬಹುತ್ವ ಅರ್ಥವುಳ್ಳದ್ದು;

**ಅಪ್ಯಕ್ಷರಸ್ಯ ಸಾಮ್ಯೇನ ನಿರ್ಬ್ರೂಯಾದಿತಿ ವೈದಿಕಾಃ ।**
**ಸರ್ವಸಾಮ್ಯೇತು ಶಬ್ದೌ ದ್ವೌ ಕಥಂ ನೈಕಾರ್ಥವಾಚಕೌ ॥ ೭೦೦ ॥**

ಅಕ್ಷರಸ್ಯ ಸಾಮ್ಯೇನ ಅಪಿ–ದಶಪ್ರಮತಿ, ಪೂರ್ಣಪ್ರಮತಿಗಳೆಂಬ ಎರಡರಲ್ಲಿ ಅಕ್ಷರಸಾಮ್ಯವಿರುವುದರಿಂದ, ನಿರ್ಬ್ರೂಯಾತ್–ಅರ್ಥವನ್ನು ನಿಶ್ಚಯಿಸಿ (ಒಂದೇ ವಸ್ತುವನ್ನು) ಹೇಳುತ್ತದೆ, ಇತಿ–ಎಂದು, ವೈದಿಕಾಃ–ವೈದಿಕರು (ಹೇಳುತ್ತಿರಲು), ಶಬ್ದೌ ದ್ವೌ – ಎರಡು ಪದಗಳು, ಸರ್ವಸಾಮ್ಯೇ ತು – ಸರ್ವಸಾಮ್ಯವಿದ್ದರೂ, ಏಕಾರ್ಥವಾಚಕೌ–ಒಂದೇ ವಸ್ತುವನ್ನು ಹೇಳದಿರಲು, ಕಥಂ ನ–ಏಕೆ ಆಗುವುದಿಲ್ಲ (ಒಂದೇ ವಸ್ತುವನ್ನೇ ಹೇಳುತ್ತವೆ) [1]

**ದಶಪ್ರಮತಿನಾಮಾನ್ಯೋ ಯತೋ ನಾಸ್ತಿ ಜಗತ್ತ್ರಯೇ ।**
**ಅರ್ಥಾಲಾಭೇನ ಶಬ್ದೋಽಸೌ ಪೂರ್ಣಪ್ರಜ್ಞಂ ಬಲಾದ್ವ್ರಜೇತ್ ॥ ೭೦೧ ॥**

ಬೇರೆ ಯುಕ್ತಿಯನ್ನು ಸೂಚಿಸುತ್ತಾರೆ :—

ಯತಃ – ಯಾವ ಕಾರಣದಿಂದ, ದಶಪ್ರಮತಿನಾಮಾನ್ಯಃ – ದಶಪ್ರಮತಿ ಎಂಬ ನಾಮವುಳ್ಳ ಅನ್ಯನು, ಜಗತ್ತ್ರಯೇ–ಬ್ರಹ್ಮಾಂಡದಲ್ಲಿ, ನಾಸ್ತಿ–ಇರುವುದಿಲ್ಲವೋ, ಅಸೌ ಶಬ್ದಃ–ಈ ದಶಪ್ರಮತಿ ಎಂಬ ಶಬ್ದವು, ಅರ್ಥಾಲಾಭೇನ–

---

ಪೂರ್ಣ ಎಂಬ ಅರ್ಥವುಳ್ಳದ್ದೂ ಅದೇ ಆಗಿದೆ; ಆದ್ದರಿಂದ ಪೂರ್ಣಪ್ರಜ್ಞಶಬ್ದಾರ್ಥವೇ ಶ್ರುತಿಯು ಹೇಳುವ ದಶಪ್ರಮತಿ ಎಂಬುದು; ಅವರೇ ತೃತೀಯಾವತಾರರಾದ ಶ್ರೀಮಧ್ವರು (೬೯೯). ವೈದಿಕರು, ಅಕ್ಷರ ಸಾಮ್ಯದಿಂದ ಎರಡು ಪದಗಳು, ಒಂದೇ ವಸ್ತುವನ್ನು ಪ್ರತಿಪಾದಿಸುವುದೆಂದು ನಿಶ್ಚಯಿಸುತ್ತಾರೆ ; ಎರಡು ಪದಗಳಲ್ಲಿ ಸರ್ವಸಾಮ್ಯವು (ದಶಪ್ರಮತಿ–ಪೂರ್ಣಪ್ರಜ್ಞ ಪದಗಳಲ್ಲಿ) ಇರುತ್ತಿರಲು (ಉಕ್ತ ರೀತಿಯಲ್ಲಿ ಇರುತ್ತಿರಲು) ಅವು ಒಂದೇ ವಸ್ತುವಾಚ್ಯಗಳಲ್ಲವೆಂಬುದು ಹೇಗೆ ಯುಕ್ತವಾಗುತ್ತದೆ? (ಒಂದೇ ವಸ್ತುವೆಂದು ಸಿದ್ಧವಾಗುತ್ತದೆ) (೭೦೦). ಮೂರು ಲೋಕದಲ್ಲಿ ದಶಪ್ರಮತಿ ಎಂಬ ನಾಮವುಳ್ಳ ಮತ್ತೊಬ್ಬನು ಯಾರೂ ಇಲ್ಲ ;

---

1 ಪಂಚರಾತ್ರಸಂಹಿತೆಯಲ್ಲಿ, 'ದಶೇತಿ ಸರ್ವಮುದ್ದಿಷ್ಟಂ ಸರ್ವಂ ಪೂರ್ಣಮಿಹೋಚ್ಯತೇ । ಪ್ರಜ್ಞಾ ಪ್ರಮತಿರುದ್ದಿಷ್ಟಾ ಪೂರ್ಣಪ್ರಜ್ಞಸ್ತತಃ ಸ್ಮೃತಃ ।' ಎಂದು ಸರ್ವಸಾಮ್ಯದ ನಿರ್ವಚನವೂ ಇದೆ.

(ನಮ್ಮ ಆಚಾರ್ಯರೆಂಬ ಅರ್ಥವುಳ್ಳ ಶಬ್ದವು ಶ್ರುತಿಯಲ್ಲಿ ದೊರೆಯದಿದ್ದರೂ), ಬಲಾತ್—ಶಬ್ದಾರ್ಥಗಳು ಸದಾ ಕೂಡಿರುವುವೆಂಬ ಸಾಹಿತ್ಯ ನಿಯಮಬಲದಿಂದ (ಕಾಲಿದಾಸನೂ ಸಹ 'ವಾಗರ್ಥಾವಿವ ಸಂಪೃಕ್ತೌ' ಎಂದಿರುವಂತೆ), ಪೂರ್ಣ ಪ್ರಜ್ಞಂ—ಪೂರ್ಣಪ್ರಜ್ಞರನ್ನೇ (ಯತ್ಯಾಶ್ರಮದ ನಮ್ಮ ಆಚಾರ್ಯರ ನಾಮ), ಭಜೇತ್—ಆಶ್ರಯಿಸುತ್ತದೆ (ಅನ್ಯಾರ್ಥವನ್ನಲ್ಲ).

**ಯತೋ ಮಧ್ವೋ ಮಾತರಿಶ್ವಾ ಗುಹಾಸಂತಂ ಮಥಾಯತಿ ।**
**ಇತಿ ವಕ್ಷ್ಯತಿ ಯಂ ಮಧ್ವಂ ಮಾತರಿಶ್ವಾಭಿಧಂ ಸ್ಫುಟಂ ।**
**ದಶಪ್ರಮತಿನಾಮಾತ್ರ ಸ ಏವಾತೋ ನ ಸಂಶಯಃ ॥ ೭೦೨ ॥**

ಬೇರೆ ಯುಕ್ತಿಯನ್ನೂ ಹೇಳುತ್ತಾರೆ :—

ಯತಃ—ಯಾವ ಕಾರಣದಿಂದ, ಮಾತರಿಶ್ವಾ ಮಧ್ವಃ—ವಾಯುದೇವನ ಮೂರನೆಯ ಅವತಾರರಾದ ಶ್ರೀಮಧ್ವರು, ಗುಹಾಸಂತಂ—ಸರ್ವರ ಹೃದ್ಗುಹಾ ವಾಸಿಯಾದ ಶ್ರೀಹರಿಯನ್ನು, ಮಥಾಯತಿ—ಶಾಸ್ತ್ರವೆಂಬ ಮಥನದಿಂದ ವಿಚಾರ ಮಾಡುತ್ತಾನೋ, ಇತಿ—ಎಂದು, ಯಂ—ಯಾವ, ಮಾತರಿಶ್ವಾಭಿಧಂ—ವಾಯು ನಾಮಕ, ಮಧ್ವಂ—ಮಧ್ವರೂಪವನ್ನು, ಸ್ಫುಟಂ—ಸ್ಪಷ್ಟವಾಗಿ, ವಕ್ಷ್ಯತಿ—(ಶ್ರುತಿಯು) ಹೇಳುತ್ತದೆಯೋ, ಅತಃ—ಒಂದೇ ಪ್ರಕರಣದಲ್ಲಿರುವ ಎರಡು ಶಬ್ದ ಗಳಿಗೆ ಭಿನ್ನಾರ್ಥಕತ್ವವು ಯುಕ್ತವಾಗುವುದಿಲ್ಲವಾದ್ದರಿಂದ, ಅತ್ರ—ಅಲ್ಲಿ, ದಶ ಪ್ರಮತಿನಾಮಾ—ದಶಪ್ರಮತಿನಾಮವುಳ್ಳವನು, ಸಃ ಏವ—ಮಧ್ವರೂಪೀವಾಯು ದೇವನೇ, ನ ಸಂಶಯಃ—ಸಂಶಯವಿಲ್ಲ.

---

ಈ ಶಬ್ದ ಪ್ರತಿಪಾದ್ಯ ವಸ್ತುವೇ ದೊರೆಯದಿರಲು, ಈ ಶಬ್ದವು ಪೂರ್ಣಪ್ರಜ್ಞರನ್ನೇ ಆಶ್ರಯಿಸುತ್ತದೆ (೭೦೧). ಶ್ರುತಿಯು ಮಧ್ವರನ್ನು ಮಾತರಿಶ್ವಾ (ವಾಯು-ನಾಮಕ) ಎಂದು ಹೇಳುತ್ತದೆ; ಈ ಮಧ್ವನಾಮಕ ಮಾತರಿಶ್ವನು, ಸರ್ವ ಹೃದ್ಗುಹಾವಾಸಿಯಾದ ಶ್ರೀಹರಿಯನ್ನು ಶಾಸ್ತ್ರವೆಂಬ ಮಥನದಿಂದ ವಿಚಾರಮಾಡಿ ನಿರ್ಣಯಿಸುವನೆಂದೂ ಶ್ರುತಿಯೇ ಹೇಳುವುದರಿಂದ, ದಶಪ್ರಮತಿ ನಾಮಕನೆಂದು ಶ್ರುತಿಯಲ್ಲಿ ಹೇಳಲ್ಪಡುವನು. ಈ ಕಾರಣದಿಂದ, ಅವರಿಂದ ರಚಿತವಾದ ಭಾಷ್ಯಾದಿಗಳ ಅವಲೋಕನದಿಂದಲೇ, ಈ ಪ್ರಸಿದ್ಧ ಮಧ್ವರೇ (ನಮ್ಮ

**ವೃಷಭಸ್ಯಾಸ್ಯ ದೇವಸ್ಯ ತೃತೀಯಂ ಚ ವಪುರ್ಹರೇಃ ।**
**ಯೋಷಿತೋ ವೇದಮಾನಿನ್ಯಃ ಶ್ರೀಭೂದುರ್ಗಾಭಿಧಾಃ ಕಿಲ ॥೭೦೩॥**

**ದೋಹಸೇ ಜ್ಞಾನದೋಹಾಯ ದಶಪ್ರಮತಿಸಂಜ್ಞಿತಂ ।**
**ಜನಯಂತ ನಿಜಾಮ್ನಾಯರಕ್ಷಣಾರ್ಥಮಜೀಜನನ್ ॥ ೭೦೪ ॥**

ಬಳಿತ್ಥಾಶ್ರುತಿಯ ತೃತೀಯ ವಾಕ್ಯವು (೬೮೨ನೇ ಶ್ಲೋಕದ ಅಡಿಟಿಪ್ಪಣಿಯನ್ನು ನೋಡಿರಿ) ಶ್ರೀಮಧ್ವರೂಪದ ಪರವೆಂಬುದು, ವಾಕ್ಯಾರ್ಥ ಪರ್ಯಾಲೋಚನೆಯಿಂದ ಸಿದ್ಧವಾಗುತ್ತದೆಂಬುದನ್ನು ತೋರಿಸಲು, ಆ ವಾಕ್ಯದ ಅರ್ಥವನ್ನು ಹೇಳುತ್ತಾರೆ :—

ವೃಷಭಸ್ಯ-ಶ್ರೇಷ್ಠನಾದ, ಅಸ್ಯ ದೇವಸ್ಯ-ಈ ವಾಯುದೇವನ, ತೃತೀಯಂ ಚ ವಪುಃ-(ಮೂರನೆಯದೆಂದರೆ ಯಾವುದೆಂಬ ಆಕಾಂಕ್ಷೆಯನ್ನು ಪೂರ್ಣಗೊಳಿಸಲು ೨ನೇ ವಾಕ್ಯದಲ್ಲಿನ 'ವಪುಃ' ಶಬ್ದವನ್ನು ಆವರ್ತಿಸಿಕೊಳ್ಳಬೇಕೆಂಬುದನ್ನು ಸೂಚಿಸಿ, ತೃತೀಯಂ ವಪುಃ ಎಂದಿರುವರು) ಮೂರನೆಯ ದೇಹವು, ಹರೇಃ-ಶ್ರೀಹರಿಯ, ಯೋಷಿತಃ-ಭಾರ್ಯರಾದ, ವೇದಮಾನಿನ್ಯಃ ಕಿಲ-ಪ್ರಸಿದ್ಧ ವೇದಾಭಿಮಾನಿಗಳಾದ, ಶ್ರೀಭೂದುರ್ಗಾಭಿದಾಃ-ಶ್ರೀಭೂದುರ್ಗಾನಾಮಕರಾದ ಸ್ತ್ರೀಯರು, ದೋಹಸೇ ಜ್ಞಾನದೋಹಾಯ – ದೋಹಸೇ ಎಂದರೆ ಜ್ಞಾನದೋಹನಕ್ಕಾಗಿ (ಹಸು ಹಾಲು ಕರೆಯುವಂತೆ ಜ್ಞಾನಧಾರೆಯಿಂದ ವೇದವನ್ನು ರಕ್ಷಿಸಲು, ದುರರ್ಥಗಳನ್ನು ಪರಿಹರಿಸಲು), ದಶಪ್ರಮತಿ ಸಂಜ್ಞಿತಂ-ದಶಪ್ರಮತಿ ಎಂಬ ಅನ್ವರ್ಥನಾಮವುಳ್ಳ ಶ್ರೀಮಧ್ವರನ್ನು ನಿಜಾಮ್ನಾನಾಯ ರಕ್ಷಣಾರ್ಥಂ-ತಮ್ಮ ವೇದದ

---

ಆಚಾರ್ಯರೇ) ಎಂದು ಸಿದ್ಧ-ಸಂಶಯವಿಲ್ಲ (೭೦೨). ದೇವಶ್ರೇಷ್ಠನಾದ ಈ ವಾಯುದೇವನ ಮೂರನೆಯ ಅವತಾರದ ದೇಹವನ್ನು, ಪ್ರಸಿದ್ಧರಾದ ವೇದಾಭಿಮಾನಿಗಳಾದ ಶ್ರೀ, ಭೂ, ದುರ್ಗಾರೂಪಗಳುಳ್ಳ ಮಹಾಲಕ್ಷ್ಮೀದೇವಿಯೇ, ತಮ್ಮಿಂದ ಅಭಿಮನ್ಯವಾದ ವೇದಗಳ ರಕ್ಷಣಾರ್ಥವಾಗಿ (ದುರರ್ಥಗಳನ್ನು ನಿರಾಕರಿಸಿ, ಸಜ್ಜನರಿಗೆ ಯಥಾರ್ಥಜ್ಞಾನ ಬೋಧವಾಗಲು ಅನುಕೂಲಿಸುವಂತೆ, ಜ್ಞಾನಧಾರಾ ದೋಹನಕ್ಕಾಗಿ ದಶಪ್ರಮತಿ ನಾಮಕನನ್ನು ಹುಟ್ಟಿಸಿದರು (ಮಧ್ಯಗೇಹ ಭಟ್ಟರ ಪತ್ನಿಗರ್ಭದಿಂದ ಉತ್ಪಾದಿಸಿದರು) (೭೦೩-೭೦೪)

ರಕ್ಷಣೆಗಾಗಿ, ಜನಯಂತ ಅಜೀಜನನ್ – ಜನಯಂತ ಎಂದರೆ ಹುಟ್ಟಿಸಿದರು ಎಂದರ್ಥ.

**ಅಮಾಙಿತ್ಯೋಗೇಪಿ ಲಙ್‌ರೂಪಂ ಯತಃ ಸ್ಯಾಚ್ಛಂದಸೀದೃಶಂ ।**
**ಛಂದಸ್ಯಸನ್ ಪ್ರತ್ಯಯೋಪಿ ತುಮರ್ಥೇಽಸ್ತೀತಿಶಾಬ್ದಿಕಾಃ ॥ ೭೦೫ ॥**

ಲಡಾಗಮದ ಅವಶ್ಯಕತೆಯಿಂದ, ಅಜನಯಂತ ಎಂದಾಗಬೇಕು; ಜನಯಂತ ಎಂದು ಹೇಗಾಗುತ್ತದೆಂಬ ಸಂಶಯಕ್ಕೆ ಪರಿಹಾರವನ್ನು ಹೇಳುತ್ತಾರೆ:—

ಅಮಾಙಿತ್ಯೋಗೇಪಿ–('ಬಹುಲಂ ಛಂದಸ್ಯಮಾಂಙಿತ್ಯೋಗೇಪಿ' ಎಂಬ ಸೂತ್ರವು ಸೂಚಿತವಾಯಿತು), ನಿಷೇಧಾರ್ಥಕ ಮಾಂಙ್‌ದಯೋಗವಿಲ್ಲದಿದ್ದರೂ, ಲಙ್‌ರೂಪಂ–ಧಾತುವನ್ನು ಲಙ್‌ರೂಪದಲ್ಲಿ ಉಪಯೋಗಿಸುವುದು, (ವೇದದಲ್ಲಿ ಅಡಾಗಮವು ವೈಕಲ್ಪಿಕವು–ಇಚ್ಛಾನುಸಾರವೆಂದು), ಯತಃ–ಯಾವ ಈ ಕಾರಣದಿಂದ, ಛಂದಸಿ–ವೇದದಲ್ಲಿ, ಈದೃಶಂ–ಜನಯಂತ ಎಂದು, ಸ್ಯಾತ್. ಆಗಿದೆಯೋ, ಛಂದಸಿ–ವೇದದಲ್ಲಿ, ಪ್ರತ್ಯಯಃ – ಪ್ರತ್ಯಯವು, ಅಸನ್ ಅಪಿ – ಇಲ್ಲದಿದ್ದರೂ, ತುಮರ್ಥೇ–'ತುಂ' ಪ್ರತ್ಯಯಾರ್ಥದಲ್ಲಿ, ಅಸ್ತಿ–('ದೋಗ್ಧುಂ' ಎಂಬರ್ಥದಲ್ಲಿ ದೋಹಸೇ ಎಂಬ ಪದವೂ) ಆಗುತ್ತದೆ. ಇತಿ ಶಾಬ್ದಿಕಾಃ–ಎಂದು ಶಬ್ದಶಾಸ್ತ್ರಜ್ಞರು (ಹೇಳುವರು).

**ಯತೋ ಮಧ್ವೋ ಮಾತರಿಶ್ವಾ ಜನ್ಮನೋಽನುಸುರಾನನು ।**
**ಪ್ರಕೃಷ್ಟವಿಜಿಗೀಷಾದಿಶಕ್ತಿಮಾನ್ ಪ್ರದಿವಃ ಸುಧೀಃ ॥ ೭೦೬ ॥**

'ಯದೀಮನುಪ್ರದಿವೋ' ಎಂಬ ಬಳಿತ್ಥಾ ಸೂಕ್ತದ ಮುಂದಿನ ವಾಕ್ಯದ ಅರ್ಥವನ್ನು ಹೇಳುತ್ತಾರೆ:—

---

ವೇದದಲ್ಲಿ, ನಿಷೇಧಾರ್ಥಕ ಯೋಗವಿಲ್ಲದಿದ್ದಲ್ಲಿ, ಧಾತುವನ್ನು ಲಙ್ ರೂಪದಲ್ಲಿ ಉಪಯೋಗಿಸುವುದು ಸಾಧುವಾಗುತ್ತದೆಂದು ವ್ಯಾಕರಣ ಸೂತ್ರ ಸೂಚಿತವಾಗಿಯೇ ಇದೆ; ಪ್ರತ್ಯಯದ ಅಭಾವದಲ್ಲಿ ಸಹ 'ತುಂ' ಅರ್ಥವೂ ಯುಕ್ತವಾಗುತ್ತದೆ; 'ದೋಗ್ಧುಂ' ಎಂಬುದು 'ದೋಹಸೇ' ಎಂಬುದರ ಅರ್ಥವೆಂಬುದೂ ವೇದಪ್ರಯೋಗ ಸಿದ್ಧವೇ ಆಗುತ್ತದೆ (೭೦೫). ಯಾವ ಕಾರಣದಿಂದ

ಯತಃ – ಯತ್ ಎಂಬುದರ ಅರ್ಥವಿದು, (ಯಾವ ಕಾರಣದಿಂದ ಎಂದರ್ಥವು), (ಅನು ಎಂಬುದರಿಂದ ಏನನ್ನು ಅನುಸರಿಸಿ ಎಂಬ ಆಕಾಂಕ್ಷೆ ಇರುವುದರಿಂದ) ಜನ್ಮನಃ ಅನು–ಜನ್ಮದನಂತರ, ಸುರಾನ್ ಅನು–ದೇವತೆಗಳನ್ನು ಉದ್ದೇಶಿಸಿ, ಮಧ್ವಃ ಮಾತರಿಶ್ವಾ[1]–ಮಧ್ವರೂಪೀ ವಾಯುದೇವನು, ಪ್ರಕೃಷ್ಟ ವಿಜಿಗೀಷಾದಿ ಶಕ್ತಿಮಾನ್–ಸ್ಪಷ್ಟವಾದ (ಜಯಪ್ರಾಪಕ) ಜ್ಞಾನಾದಿ ಶಕ್ತಿಯುಳ್ಳವನು, ಪ್ರದಿವಃಸುಧೀಃ–ಪ್ರದಿವ ಶಬ್ದವಾಚ್ಯನಾದ ಜ್ಞಾನಿಯು (ಎಂದು ಸೂಕ್ತಗತವಾದ ಶಬ್ದಾರ್ಥಗಳ ವಿವರಣೆ ಮಾತ್ರವಾದ್ದರಿಂದ ಇಲ್ಲಿ ವಾಕ್ಯಾನ್ವಯಕ್ಕೆ ಅವಕಾಶವಿಲ್ಲ).

**ಪ್ರಕೃಷ್ಟಾ ದ್ಯೌರ್ಯೇಷು ತೇ ವಾ ಪ್ರದೀಪೋ ದೇವತಾಜನಾಃ ।**
**ತಾನನೂದ್ದಿಶ್ಯೇತಿ ವಾರ್ಥೋ ವಕ್ತವ್ಯೋತ್ರ ವಿಚಕ್ಷಣೈಃ ॥ ೭೦೭ ॥**

ಪ್ರದಿವಶಬ್ದಕ್ಕೆ ಬೇರೆ ಅರ್ಥವನ್ನು ತಿಳಿಯಬಹುದೆನ್ನುತ್ತಾರೆ :—

---

ಮಧ್ವರೂಪೀ ವಾಯುದೇವನು, ಹುಟ್ಟನ್ನು ಅನುಸರಿಸಿ (ಜನ್ಮಾರಭ್ಯ), ಸುರಾನ್ ಅನು–ದೇವತೆಗಳನ್ನು ಉದ್ದೇಶಿಸಿ, ಉಪದೇಶಿಸುವುದರಲ್ಲಿ, ಸ್ಪಷ್ಟವಾದ ಸರ್ವತ್ರ (ಸರ್ವವಿಚಾರ ಸಭೆಗಳಲ್ಲಿ) ಜಯಶೀಲನಾಗುವ ಶಕ್ತಿಯುಳ್ಳವನಾದ್ದರಿಂದ 'ಪ್ರದಿವ'ನೆಂಬ ಪ್ರಖ್ಯಾತನಾಮವುಳ್ಳವನಾಗಿದ್ದಾನೆ (೭೦೬). ಅಥವಾ 'ಪ್ರಕೃಷ್ಟಾ ದ್ಯೌಃ ಯೇಷಾಂ ತೇ' ಎಂಬ ವ್ಯುತ್ಪತ್ತಿಯಿಂದ, ದೇವತೆಗಳು ಜ್ಞಾನಕಾಂತಿಯುಳ್ಳವರಾದ್ದರಿಂದ, ಪ್ರದಿವರೆನಿಸುವರು; ಅವರನ್ನು (ರುದ್ರಾದಿ ದೇವತೆಗಳಲ್ಲಿ) ಉದ್ದೇಶಿಸಿ, ಎಂದಾದರೂ ಅರ್ಥವನ್ನು ಕುಶಲರು ತಿಳಿಯಬಹುದಾಗಿದೆ (೭೦೭).

---

1 'ಯದೀಮನುಪ್ರದಿವೋ ಮಧ್ವ ಆಧವೇ ಗುಹಾಸಂತಂ ಮಾತರಿಶ್ವ ಮಥಾಯತಿ |' (ಬಳಿತ್ಥಾಸೂಕ್ತದ ೩ನೆಯ ಋಕ್ಕಿನಲ್ಲಿರುವ ವಾಕ್ಯವು ಹೀಗಿದೆ) ಇದರ ಅರ್ಥವೇನೆಂದರೆ:—

ಯತ್ ಈಂ - ಯಾವ ಈ, ಪ್ರದಿವಃ - ಪ್ರಕಾಶರೂಪರಾದ, ಮಧ್ವಃ - ಆನಂದತೀರ್ಥರೆಂಬ, ಮಾತರಿಶ್ವ - ವಾಯುದೇವನೇ (ಮಾತರಿ - ಋಗಾದಿಪ್ರಮಾಣಗಳಲ್ಲಿ, ಶ್ವಯತಿ– ಸದಾ ಗಮನವುಳ್ಳವರು,) ಗುಹಾಸಂತಂ - ಗೂಹನಮಾಡಲ್ಪಟ್ಟ (ದುರ್ವಾದಿಗಳಿಂದ ಗೂಹನವಾದ ಶ್ರೀಹರಿಯನ್ನು), ಅನು - ಶಾಸ್ತ್ರಾನುಸಾರವಾಗಿ, ಆಧವೇ - (ಆ ಸಮಂತಾತ್– ಸಂಶಯವಿಲ್ಲದಂತೆ, ಭವೇ - ಸತಿತ್ವ ವಿಷಯದಲ್ಲಿ) ಮಥಾಯತಿ - ಶಾಸ್ತ್ರಮಥನದಿಂದ ನಿಶ್ಚಯಿಸುತ್ತಾರೆ.

ಪ್ರಕೃಷ್ಟಾ–ಸ್ಪಷ್ಟವಾದ (ಶ್ರೇಷ್ಠವಾದ), ದ್ಯೌಃ–ಕಾಂತಿಯು, ಯೇಷು–ಯಾರಲ್ಲಿಯೋ, ತೇ ವಾ–ಅವರೇ, ಪ್ರದಿವಃ–ಪ್ರದಿವರೆಂದು ಕರೆಯಲ್ಪಡುವ, ದೇವತಾಜನಾಃ–ದೇವಯೋನಿಯ ಪ್ರಜೆಗಳು ; ತಾನ್–ಅವರನ್ನು, ಅನು–ಅನು ಎಂದರೆ, ಉದ್ದಿಶ್ಯ ಇತಿ–ಗುರಿಯಾಗಿಟ್ಟು (ಉದ್ದೇಶಿಸಿ, ಅವರಿಗಾಗಿ), ಅರ್ಥಃ ವಾ–ಎಂಬ ಅರ್ಥವಾದರೂ, ಅತ್ರ – ಇಲ್ಲಿ, ವಿಚಕ್ಷಣೈಃ – ಕುಶಲರಿಂದ ವಕ್ತವ್ಯಃ – ಹೇಳಲ್ಪಡತಕ್ಕುದ್ದಾಗುತ್ತದೆ.

**ಆಧವೇ ಸರ್ವತಃ ಶ್ರೇಷ್ಠ್ಯೇ ಯದ್ಧವಃ ಪತಿರುಚ್ಯತೇ ।**
**ಭಾವಪ್ರಧಾನೋ ನಿರ್ದೇಶೋಽಪ್ಯಸ್ತಿ ತೇನೋಚಿತಂ ಹಿ ತತ್ ॥೭೦೮॥**
**ಗುಹಾಸಂತಂ ಹೃದ್ಗುಹಾಯಾಂ ವಸಂತಂ ಪುರುಷೋತ್ತಮಂ ।**
**ಈಮಿತ್ಥಂ ಹೃದ್ಗುಹಾಸ್ಥತ್ವಾದ್ವ್ಯಾಕಾರೇಣ ಮಥಾಯತಿ ।**
**ವೇದಶಾಸ್ತ್ರಾದಿಮಥನಂ ಕೃತ್ವಾ ದರ್ಶಯತಿ ಪ್ರಭುಃ ॥ ೭೦೯ ॥**

ಆ ಗುಹಾವಾಸಿಯು ಸರ್ವದರಿಂದ ಶ್ರೇಷ್ಠವೆಂಬ ಅರ್ಥವನ್ನು ಹೇಳುತ್ತಾರೆ :—

ಆಧವೇ–ಆಧವೇ ಎಂದರೆ, ಸರ್ವತಃ ಶ್ರೇಷ್ಠ್ಯೇ–ಸರ್ವಪ್ರಕಾರದಿಂದ (ಸರ್ವರಿಂದ) ಶ್ರೇಷ್ಠವೆಂಬಲ್ಲಿ, ಯತ್–ಯಾವ ಕಾರಣದಿಂದ, ಧವಃ ಪತಿಃ ಇತಿ ಉಚ್ಯತೇ – ಧವಃ ಎಂದರೆ ಪತಿ ಎಂಬರ್ಥವು ಹೇಳಲಾಗುವುದೋ, ಭಾವಪ್ರಧಾನೋ ನಿರ್ದೇಶಃ ಅಪಿ – ಭಾವಪ್ರಧಾನವನ್ನು ಸೂಚಿಸುವ ಗುರಿಯೂ, ಅಸ್ತಿ–ಇರುತ್ತದೆ, ತೇನ–ಅದರಿಂದ, ತತ್–ಆಧವೇ ಎಂಬ ಪದವು, ಉಚಿತಂ ಹಿ–ಯೋಗ್ಯವೇ ಆಗಿದೆ ; ಗುಹಾಸಂತಂ–ಗುಹಾಸಂತಂ ಎಂದರೆ, ಹೃದ್ಗುಹಾಯಾಂ–ಪ್ರಾಣಿಗಳ ಹೃದಯ ಗುಹಾದಲ್ಲಿ, ವಸಂತಂ–ವಾಸಮಾಡುವ, ಪುರುಷೋತ್ತಮಂ–

---

ಶ್ರುತಿಯಲ್ಲಿರುವ 'ಆಧವೇ' ಎಂಬ ಪದಕ್ಕೆ (ಆ) ಸರ್ವಪ್ರಕಾರದಿಂದ (ಧವೇ) ಶ್ರೇಷ್ಠರೆಂದರ್ಥವೆಂಬುದರಿಂದ ಭಾವಪ್ರಧಾನವು ಉದ್ದೇಶಿತವಾಗಿದೆ ; ಆಧವೇ ಎಂಬ ಪದಪ್ರಯೋಗವು ಉಚಿತವಾಗಿರುತ್ತದೆ ; 'ಗುಹಾಸಂತಂ' ಎಂದರೆ, ಪ್ರಾಣಿಗಳ ಹೃದಯದಲ್ಲಿ ವಾಸಿಸುವ ಪುರುಷೋತ್ತಮನೆಂದರ್ಥವು ; ಹೀಗೆಂದು, (ಹೃದಯಾಂತವರ್ತಿ ಎಂಬ ಮುಂತಾದ ರೂಪವುಳ್ಳವನೆಂದು) ವೇದಶಾಸ್ತ್ರಾದಿಗಳ ವಿಚಾರದಿಂದ ಸಾರವನ್ನು ತೆಗೆದು, ಪ್ರಭುಗಳಾದ ಶ್ರೀಮಧ್ವರು ತೋರಿಸುತ್ತಾರೆ

ಶ್ರೀಹರಿಯನ್ನು, ಇತ್ಥಂ–ಈ ಪ್ರಕಾರವಾಗಿ, ಹೃದ್ಗುಹಾಸ್ಥತ್ವಾದ್ಯಾಕಾರೇಣ–ಹೃದಯಗುಹಾವಾಸಿ ಎಂಬ ಮುಂತಾದ ರೂಪದಿಂದ, ಮಥಾಯತಿ–ಮಥಾಯತಿ (ವಿಚಾರಮಾಡುತ್ತಾರೆ, ಎಂದರೆ), ವೇದಶಾಸ್ತ್ರಾದಿಮಥನಂ–ವೇದಾಶಾಸ್ತ್ರಾದಿಗಳ ಮಥನವನ್ನು(ಪೂರ್ವಾಪರ ವಿಷಯಗಳ ಆಲೋಚನೆಯಿಂದ ನಿಶ್ಚಯಿಸುವುದನ್ನು) ಕೃತ್ವಾ – ಮಾಡಿ, ಪ್ರಭುಃ – ಸಮರ್ಥನಾದ ಮಧ್ವರೂಪೀ ಮಾತರಿಶ್ವನು, ದರ್ಶಯತಿ–ತೋರಿಸಿಕೊಡುತ್ತಾರೆ.

**ದೀರ್ಘೇಣ ಮಥನಸ್ಯಾತಿದೀರ್ಘತಾಂ ಶ್ರೌತತಾಂ ಚ ಸಾ ।**
**ಅಸೂಚಯತ್ತೇನ ನಾನಾದುರ್ಭಾಷ್ಯಾಣ್ಯಪ್ಯಮೋಚಯತ್ ॥ ೭೧೦ ॥**

ಸಾ–ಆ ಶ್ರುತಿಯು (ಬಳಿತ್ಥಾಶ್ರುತಿಯು), ತೇನ–ಅದರಿಂದ (ಎಂದರೆ), ದೀರ್ಘೇಣ–ಬಹುಕಾಲದ, ಮಥನಸ್ಯ–ವಿಚಾರದ, ಅತಿದೀರ್ಘತಾಂ–ದುರ್ಭಾಷ್ಯಗಳು ಬಹುಕಾಲದಿಂದ ಬಂದವುಗಳೆಂಬುದನ್ನು, ಶ್ರೌತತಾಂ–ಶ್ರುತಿಸಮ್ಮತವೆಂಬ ಭಾವವನ್ನು ಜನರಲ್ಲಿ ಹೊಂದಿ (ಪೂರ್ವೋತ್ತರವಿರುದ್ಧಗಳೆಂಬ ಕಾರಣದಿಂದ), ತೇನ–ಭಾಷ್ಯಾದಿ ಗ್ರಂಥಗಳ ರಚನೆಯಿಂದ, ಅಸೂಚಯತ್–ಸೂಚಿಸಲಾಗಿದೆ; ಅಪಿ–ಮತ್ತು, ದುರ್ಭಾಷ್ಯಾಣಿ–ದುರ್ಭಾಷ್ಯಗಳನ್ನು (ಹಿಂದಿನ ೨೧ ದುರ್ಭಾಷ್ಯಗಳನ್ನು), ಅಮೋಚಯತ್–ಜನಮನದ ಮೇಲಿನ ಹಿಡಿತದಿಂದ ಬಿಡಿಸಿದರು.

**ತಸ್ಮಾದೀಶಾನಾದಯೋಽಪಿ ಸೂರಯಸ್ತತ್ಪ್ರಸಾದತಃ ।**
**ಬಭೂವುರಿತಿ ಸಂಬಂಧೋ ಯತೋತ್ರೈಕೋ ಬಹುಃ ಕೃತಃ ।**
**ಆದ್ಯರ್ಥ್ಯೈವ ವಿಭಕ್ತಿಸ್ತದಿತಿ ಸರ್ವಂ ಚ ಮಂಗಲಂ ॥ ೭೧೧ ॥**

ತಸ್ಮಾತ್ – ಆ ಕಾರಣದಿಂದ, ಈಶಾನಾದಯಃ – ರುದ್ರಾದಿಗಳಾದ, ಸೂರಯಃ ಅಪಿ – ದೇವತೆಗಳೂ (ಜ್ಞಾನಿಗಳೂ), ತತ್ಪ್ರಸಾದತಃ–ಶ್ರೀಮಧ್ವರ

---

(ಉಪದೇಶಿಸುತ್ತಾರೆ) (೭೦೮–೭೦೯). ವಿಸ್ತಾರವಾದ ಬಹ್ವರ್ಥಗರ್ಭಿತವಾದ ಗ್ರಂಥರಚನೆಯಿಂದ, ನಿರಾಕರಿಸಲ್ಪಟ್ಟ ದುರ್ಭಾಷ್ಯಗಳು ಅನಾದಿ ಕಾಲದಿಂದ ಪ್ರಚಾರದಲ್ಲಿದ್ದುವೆಂದೂ ಸೂಚಿಸಿ, ಅವುಗಳಿಂದ ಸಜ್ಜನರಿಗೆ ಪ್ರಾಪ್ತವಾಗಿದ್ದ ಮೋಹಾದಿಗಳನ್ನು ಬಿಡಿಸಿದರು; ಹಾಗೂ ತಮ್ಮ ಭಾಷ್ಯಾದಿಗಳೇ ಶ್ರುತ್ಯುಕ್ತ ಅರ್ಥಗಳನ್ನು ನಿರೂಪಿಸುತ್ತವೆಂದೂ ತೋರಿಸಿದರು (೭೧೦). ರುದ್ರಾದಿ ದೇವತೆಗಳೂ ಸುಲಭವಾಗಿ ಶ್ರುತ್ಯರ್ಥಗಳನ್ನು ಯಥಾರ್ಥವಾಗಿಯೂ, ನಿಶ್ಚಯ

ಪ್ರಸಾದದಿಂದ, ಬಭೂವುಃ–(ಜ್ಞಾನಿಗಳು) ಆದರು ;[1] ಸಂಬಂಧ–('ಯದೀಮನು ಪ್ರದಿವಃ ಎಂಬ ವಾಕ್ಯದಿಂದ) ಸಂಬಂಧವು ; ಯತಃ–ಏಕೆಂದರೆ, ಅತ್ರ–ಶ್ರುತಿಯಲ್ಲಿ, ಏಕಃ–ಒಬ್ಬ ಶಿವಪ್ರತಿಪಾದಕ ಈಶಾನ ಶಬ್ದವು, ಬಹುಃಕೃತಃ–ಬಹುವಚನಾಂತ ವಿಭಕ್ತಿಕಶಬ್ದವಾಗಿ ಮಾಡಲ್ಪಟ್ಟಿತು (ಮುಂದೆ ಸೂರಯಃ ಎಂಬ ಬಹುವಚನಾಂತ ಪದವೂ ಇದೆ). ಆದ್ಯರ್ಥೈವ – ಆದಿಪದದ ಅರ್ಥವುಳ್ಳದ್ದು, ವಿಭಕ್ತಿಃತತ್ – (ಈಶಾನಾಸಃ ಎಂಬ ಪದವು) ಆ ಪದದ ವಿಭಕ್ತಿಯು ; ಚ–ಹೀಗೆ, ಸರ್ವಂ– ಎಲ್ಲವೂ, ಮಂಗಲಂ–ಶುಭವಾದ ಅರ್ಥವುಳ್ಳದ್ದೇ ಆಗಿದೆ.

**ವರ್ಗಾರ್ಥಸ್ತೂದಿತಃ ಪೂರ್ವೈರ್ಮದ್ಗೀಸ್ತದ್ಯುಕ್ತಿಮಲ್ಲಿಕಾ ॥ ೭೧೨ ॥**

ಮದ್ಗೀಃ–ನನ್ನ ಗ್ರಂಥರೂಪದ ಈ ವಾಣಿಯು, ಪೂರ್ವೈಃ–ಪೂರ್ವಾಚಾರ್ಯೋಕ್ತವಾದ, ತದ್ಯುಕ್ತಿಮಲ್ಲಿಕಾ – (ಯುಕ್ತಿ ಸಂಗ್ರಹರೂಪವಾದ್ದರಿಂದ)

---

ವಾಗಿಯೂ ಗ್ರಹಿಸಿದರೆಂದು ಹೇಳುವ 'ನಿರ್ಯದೀಂಬುಧ್ನಾತ್....' ಇತ್ಯಾದಿ ಬಳಿತ್ಥಾವಾಕ್ಯದ ಅರ್ಥವನ್ನು ಈ ಮುಂದೆ ವಿವರಿಸುತ್ತಾರೆ ; 'ಈಶಾನಾಸಃ ಸೂರಯಃ' ಎಂದರೆ ರುದ್ರಾದಿ ಜ್ಞಾನಿಗಳೆಂದರ್ಥ ; ಈ ಎಲ್ಲರೂ ಶ್ರೀಮಧ್ವರ ಉಪದೇಶದಿಂದ, ಅವರ ಪ್ರಸಾದದಿಂದ, ಜ್ಞಾನಿಗಳಾದರು ಎಂದು ಬಭೂವುಃ (ಅಕ್ರಂತ ಎಂಬುದರಿಂದ ಸೂಚಿತವಾಗಿ) 'ಯದೀಮನುಪ್ರದಿವೋ' ಎಂಬ ಹಿಂದಿನ ವಾಕ್ಯದಿಂದ ಸಂಬಂಧಗೊಳ್ಳುತ್ತದೆ ; 'ಈಶಾನಾಸಃ' ಈಶಾನಾದಿ (ರುದ್ರಾದಿ)ಗಳೆಂಬರ್ಥವನ್ನು ಹೇಳುತ್ತದೆ ; ಈಶಾನಾದಿ ಎಂಬಂತೆ ಈಶಾನಾಸಃ ಎಂಬ ಬಹುವಚನದಂತೆಯೇ ತಿಳಿಯಬೇಕು ; ಹೀಗೆ ಈ ಶ್ರುತಿಯು ಬಹು ಶುಭವಾದ ಅರ್ಥವುಳ್ಳದ್ದೇ ಆಗಿ ಮಂಗಲ ಶ್ರುತಿಯೆನಿಸುತ್ತದೆ. (೭೧೧). ಹೀಗೆ

---

1 ಇದರಿಂದ 'ನಿರ್ಯದೀಂಬುಧ್ನಾನ್ಮಹಿಷಸ್ಯವರ್ಪಸ ಈಶಾನಾಸಃ ಶವಸಾಕ್ರಂತ ಸೂರಯಃ।' ಎಂಬ ಬಳಿತ್ಥಾವಾಕ್ಯವು ವಿವೃತವಾಗಿದೆ : ಇದರ ಅರ್ಥವೇನೆಂದರೆ :— ಬುಧ್ನಾತ್–ಸರ್ವಜ್ಞನಾದ, (ಭಕ್ತಾಗ್ರೇಸರನಾದ), . ಯತ್–ಯಾವ ಶ್ರೀಮಧ್ವರಿಂದ ಈಶಾನಾಸಃ–ರುದ್ರಾದಿ ದೇವತೆಗಳು, ಮಹಿಷಸ್ಯ–ಮಹಾತ್ಮನಾದ ಶ್ರೀನಾರಾಯಣನ, ವರ್ಪಸಃ–ವರಣೀಯಗಳಾದ್ದರಿಂದ ವರ್ಪಗಳೆಂಬ ಗುಣಗಳನ್ನು, ನಿರಕ್ರಂತ–ನಿರ್ಣಯಾತ್ಮಕವಾಗಿ ತಿಳಿದರು ('ಯದೀಮನುಪ್ರದಿವಃ' ಎಂಬ ವಾಕ್ಯದಿಂದ ಸಂಬಂಧವೆಂದು ತಿಳಿಯಬೇಕು—೭೦೬ನೇ ಶ್ಲೋಕದ (೧)ನೇ ಅಡಿಟಿಪ್ಪಣಿಯನ್ನು ನೋಡಿರಿ) ; ಶವಸಾ–ಕಷ್ಟವಿಲ್ಲದೇ (ಸುಲಭವಾಗಿ) ನಿಃ–ಅತ್ಯಂತವಾಗಿ, ಅಕ್ರಂತ–ತಿಳಿದರು.

ಯುಕ್ತಿಮಲ್ಲಿಕೆಯು, ವರ್ಗಾರ್ಥಸ್ತು–ಬಳಿತ್ಥಾವರ್ಗಾರ್ಥವು, ಉದಿತಃ-(ಪೂರ್ತಿಯಾಗಿದೆ) (ಎಂದು) ಹೇಳಲಾಗುತ್ತದೆ. (ಈ ಯುಕ್ತಿಮಲ್ಲಿಕಾ ಗ್ರಂಥವೇ ಬಳಿತ್ಥಾ ವರ್ಗದ ಮಹಾರ್ಥಗಳ ಪ್ರತಿಪಾದನೆಯಾಗುತ್ತದೆ). (ಬಳಿತ್ಥಾ ವರ್ಗಾರ್ಥದ ವಿವರವೂ ಈ ಕೆಳಗಿನಂತಿದೆ. [1]

**ಯಸ್ಯರ್ಚೋ ಮಧ್ವನಾಮಾಂಕಾಃ ಶ್ಲೋಕಾನೇಕಾದಶಾ ಗೃಣನ್ ।**
**ಸ ಮಧ್ವೋ ವೈದಿಕಾಚಾರ್ಯೋ ಗುರುರ್ಜಯತಿ ದುರ್ಜನಾನ್**

॥ ೭೧೩ ॥

ಮಧ್ವನಾಮಾಂಕಾಃ – ಮಧ್ವನಾಮದಿಂದ ಅಂಕಿತಗಳಾದ, ಯಸ್ಯ–ಯಾರ (ಯಾವ ಶ್ರೀಮಧ್ವರ), ಋಚಃ–ಋಕ್ಕುಗಳು, ಏಕಾದಶ–ಹನ್ನೊಂದು ಸಂಖ್ಯೆಯುಳ್ಳವುಗಳು, ಶ್ಲೋಕಾನ್ – ಶ್ಲೋಕಗಳನ್ನು (ಸ್ತುತಿಪರಗಳಾದ)

---

ಬಳಿತ್ಥಾ ಸೂಕ್ತವನ್ನುಳ್ಳ ವೇದವರ್ಗವು ಹೀಗೆ ವ್ಯಾಖ್ಯಾತವಾದಂತೆ ಆಗಿದೆ; ಪೂರ್ವಾಚಾರ್ಯರುಗಳಿಂದ ರಚಿತವಾದ ಯುಕ್ತಿಗಳನ್ನು ಸಂಗ್ರಹಿಸಿದ ಮಾಲಿಕೆಯಂತಿದೆ–ಈ ಯುಕ್ತಿಮಲ್ಲಿಕಾ ಗ್ರಂಥವು ; ಬಳಿತ್ಥಾವರ್ಗದ ಮಹಾ ಅರ್ಥವಿಶೇಷಗಳೆಲ್ಲವೂ ಉಕ್ತವಾದವು (೭೧೨). ಹೀಗೆ ಮಧ್ವನಾಮದಿಂದ ಅಂಕಿತವಾದ

---

[1] ಅನ್ನಸೂಕ್ತಗಳ ಮಧ್ಯದಲ್ಲಿರುವ ಬಳಿತ್ಥಾವರ್ಗದಲ್ಲಿ ಮುಖ್ಯ ಪ್ರಾಣನ ಪ್ರಸಂಗವೇಕೆಂದು ಸಂಶಯಪಡುವ ಕಾರಣವಿಲ್ಲ ; ಪ್ರಾಣಾದ್ಯಾಹುತಿ ಪಂಚಕವು ಅನ್ನಸೂಕ್ತದಲ್ಲಿರಬೇಕಾದುದು, ಅವಶ್ಯಕವು ; ಪ್ರಾಣಾದಿಪಂಚಕವು ಮುಖ್ಯ ಪ್ರಾಣನ ಪಂಚರೂಪಗಳನ್ನೊಳಗೊಂಡಿವೆ ; ಆದ್ದರಿಂದ ಮುಖ್ಯಪ್ರಾಣನ ಸ್ತುತಿಯು ಪ್ರಸಕ್ತವಾಗಿ ಅದನ್ನೇ ಈ ವರ್ಗವು ಪ್ರತಿಪಾದಿಸುತ್ತದೆ ; ತಥಾ ಚಾಯಂ ವರ್ಗಾರ್ಥಃ) ವರ್ಗಾರ್ಥವು ಈ ಮುಂದಿನಂತಿದೆ :—

ಸಹಸಃ–ವೇಗವುಳ್ಳ, ಅಥವಾ ಬ್ರಹ್ಮಾಂಡಾಂತರ್ಗತ ಘನೋದಕ ಮಧ್ಯದಲ್ಲಿರುವ ವಾಯುಕೂರ್ಮರೂಪದಿಂದ ಜಗದ್ಧಾರಕ ಶೇಷದೇವನನ್ನು ಧರಿಸುವ ಬಹುತರ ಸಹನಶೀಲನಾದ್ದರಿಂದ ಸಹಸಶಬ್ದವಾಚ್ಯನಾದ, ದೇವಸ್ಯ–ಮುಖ್ಯಪ್ರಾಣನ ('ಪ್ರಾಣಾದಭೂದ್ಯಸ್ಯ ಚರಾಚರಾಣಾಂ ಪ್ರಾಣಃ ಸಹೋಬಲಮೋಜಶ್ಚವಾಯುಃ' ಎಂದು ಭಾಗವತದಲ್ಲಿ ವಾಯುದೇವನ ಉತ್ಪತ್ತಿಯಲ್ಲಿ, ಸಹ, ಬಲ, ಓಜಸ್ವರೂಪನೆಂದು ವಾಯುಮಹಿಮೆಯು ಉಕ್ತವಾಗಿದೆ), ಬಟ್–ಬಲಾತ್ಮಕವೂ, ದರ್ಶತಂ–ವಿಸ್ತಾರವಾದ (ವ್ಯಾಪ್ತವಾದ) ಜ್ಞಾನವುಳ್ಳವನೂ, (ದರ್ಶೇನ ತತಂ, ದರ್ಶತಂ), ಭರ್ಗಃ–(ವಿಷ್ಣುವಿನಿಂದ ಜನಿಸಿ ಆ ವಿಷ್ಣುವನ್ನು ಸ್ವಹೃದಯದಲ್ಲಿ (ಮನಸಾ) ಗ್ರಹಿಸಿರುವುದರಿಂದ – ಭರಣಮಾಡಿಕೊಂಡಿರುವುದರಿಂದ,

ಮಹಿಮೆಗಳಲ್ಲಿ (ಪವಮಾನ, ಪೂಯಮಾನ ಸೂಕ್ತಗಳಲ್ಲಿರುವ ಏಳು, ಅನ್ಯತ್ರ ವಿರುವ ನಾಲ್ಕು ಹೀಗೆ ಹನ್ನೊಂದು ಮಧ್ವನಾಮಾಂಕಿತಗಳು). ಅಗೃಣನ್– ಕೀರ್ತಿಸಿವೆ ಸಃ–ಅವರೇ (ಈ ಋಕ್ಕುಗಳಿಂದ ಪ್ರತಿಪಾದ್ಯರೇ), ಮಧ್ವಃ– ಶ್ರೀಮಧ್ವರೆಂಬುವರು ; ವೈದಿಕಾಚಾರ್ಯಃ ಗುರುಃ–ವೇದೋಕ್ತ ಆಚಾರ್ಯರು (ವೇದಪ್ರಸಿದ್ಧ ಆಚಾರ್ಯರು–ಸದ್ಗುರುಗಳು–ಜಗದ್ಗುರುಗಳು) ; ದುರ್ಜನಾನ್– ದುರ್ವಾದಿಗಳನ್ನು, ಜಯತಿ–ಗೆಲ್ಲುವರು.

---

ಹನ್ನೊಂದು ಋಕ್ಕುಗಳು ವಾಯುದೇವನ ಮಹಿಮೆಗಳನ್ನು, ಕೀರ್ತಿಸಿರುತ್ತದೆ ; ಈ ಋಕ್ಕುಗಳಿಂದ ಪ್ರತಿಪಾದ್ಯರೇ ಶ್ರೀಮಧ್ವರೆಂಬುವರು, ಪ್ರಸಿದ್ಧ ವೈದಿಕಾ ಚಾರ್ಯರು ಅವರೇ ಸಕಲ ದುರ್ವಾದಿಗಳನ್ನು ಜಯಿಸುವರು (೭೧೩).

---

'ಭರ್ಗ'ನು, ಯತಃ–ಯಾರಿಂದ (ಮತ್ತೆ ಯಾರ ಆಜ್ಞೆಯಿಂದ), ಅಜನಿ–ಜನಿಸಿದನೋ (ಅಜ್ಞಾಮನ್ಯೈರಧಾರ್ಯಾಂ, ಎಂದಿರುವುದರಿಂದ), ಇತ್ಥಾ–ಮುಂದೆ ಹೇಳುವಂತೆ (ಅತಿ ದೀರ್ಘವೆಂದೂ ಜ್ಞಾಪಿಸುತ್ತದೆ. ಈ ಶಬ್ದವು), ಅಥವಾ ಮೂಲರೂಪದಂತೆಯೋ, ವಪುಷೇ– ಹನುಮದಾದಿ ಅವತಾರಗಳಿಗೂ, ಅಧಾಯಿ–ಧರಿಸಲ್ಪಟ್ಟಿದೆಯೋ (ಜ್ಞಾನಬಲಾದಿ ಮೂಲ ರೂಪದಂತೆ ಹೊಂದಿಸಲ್ಪಟ್ಟಿವೆಯೋ, (ಅಥವಾ) ಭರ್ಗಃ–ಭಗವದ್ರೂಪವು, ಅಜನಿ–ಮೂಲ ರಾಮಾಯಣ, ಪಂಚರಾತ್ರ, ಬ್ರಹ್ಮಸೂತ್ರಭಾಷ್ಯಾದಿಗಳಿಂದ ಪ್ರಾದುರ್ಭಾವಗೊಂಡಿತೋ, ಯಾವ ಕಾರಣದಿಂದ ಭರ್ಗಶಬ್ದವಾಚ್ಯವಾದ ರಾಮ, ಕೃಷ್ಣ, ವೇದವ್ಯಾಸ ರೂಪಗಳ ಅವತಾರ ಸೇವಾರ್ಥವಾಗಿ, ಅಜನಿ–(ವಾಯುದೇವನು) ಹುಟ್ಟಿರುವನೋ, (ಭಗವಂತನ ರೂಪತ್ರಯಗಳ ಅಭೇದವನ್ನು ವಪುಷೇ ಎಂಬ ಏಕವಚನ ಶಬ್ದ ಪ್ರಯೋಗವಿದೆ) (ಅಥವಾ ಭರ್ಗಃ ಪದವು ಶಿವವಾಚಕವು–ಹರಃಸ್ಮರಹರೋಭರ್ಗಃ–ಎಂದು ಕೋಶವೂ ಇದೆ) ಸಹಸಃ– ವಾಯುವಿನಿಂದ, ಭರ್ಗಃ–ಶಿವನು, ಅಜನಿ–ಜನಿಸಿದನು, ತಸ್ಯಸಹಸಃ–ಆ ಮುಖ್ಯ ಪ್ರಾಣನ, ಒಂದೊಂದು ರೋಮದಲ್ಲಿಯೂ ಕೋಟಿ ಲಿಂಗಜನಕತ್ವವೆಂಬ ಪ್ರಸಿದ್ಧಿಯೂ ಮಹಿಮೆಯೂ ಉಕ್ತವಾಗಿದೆ) ; ಮುಖ್ಯಪ್ರಾಣತ್ವವು, ವಾಯುಶಬ್ದವಾಚ್ಯನಾದ ಪ್ರಾಣನಿಂದ (ಭೂತ ವಾಯುವಿನಿಂದ) ವ್ಯಾವರ್ತಿಸಲು ಇರುತ್ತದೆ ; 'ಮಾತರಿಶ್ವಾಮಥಾಯತಿ' ಎಂದು ಹೇಳಿರು ವುದರಿಂದ, ದೇವಶಬ್ದವಾಚ್ಯನು ವಾಯುದೇವನೇ ಆಗಿರುವನು ; ಮಾತರಿ–ಭಗವಜ್ಞಾನ ಸಾಧನೀಭೂತವಾದ ವೇದಶಾಸ್ತ್ರಾದಿಗಳಲ್ಲಿ, ಶ್ವಾ–(ಗತಿಃ) ಸದಾನಿರತನಾಗಿರುವಿಕೆಯು (ಅವುಗಳ ಯಥಾರ್ಥಜ್ಞಾನಿ) ಎಂಬರ್ಥವನ್ನೇ ತಿಳಿಸಲು 'ದರ್ಶತಂ' ಎಂದೂ ಹೇಳ ಲಾಗಿದೆ. (ದರ್ಶತಪದವು ವಾಯುವಿಶೇಷಣವಾಗಿ, 'ವಾಯುವಾಯಾಹಿದರ್ಶತ' ಎಂಬಲ್ಲಿ ಪ್ರಯೋಗಿಸಲ್ಪಟ್ಟಿರುವುದು ಸ್ಪಷ್ಟವಾಗಿದೆ), ಬಟ್ ಮತ್ತು ದರ್ಶತಂ ಎಂಬ ಎರಡೂ ವಿಶೇಷಣಗಳೂ ಮೂರೂ ಅವತಾರಗಳಿಗೆ ಅನ್ವಯಿಸುತ್ತವೆಯಾದರೂ, ಒಂದು, ಎರಡನೇ

ವಾಯೋರ್ದಿವ್ಯಾನಿ ರೂಪಾಣಿ ಪದ್ಮತ್ರಯಯುತಾನಿ ಚ ॥ ೭೧೪ ॥

ತ್ರಿಕೋಟಿಮೂರ್ತಿಸಂಯುಕ್ತಸ್ತ್ರೇತಾಯಾಂ ರಾಕ್ಷಸಾಂತಕಃ ।
ಹನುಮಾನಿತಿ ವಿಖ್ಯಾತೋ ರಾಮಕಾರ್ಯಧುರಂಧರಃ ॥ ೭೧೫ ॥

ಸ ವಾಯುರ್ಭೀಮಸೇನೋಽಭೂದ್ದ್ವಾಪರಾಂತೇ ಕುರೂದ್ವಹಃ ।
ಕೃಷ್ಣಂ ಸಂಪೂಜಯಾಮಾಸ ಹತ್ವಾ ದುರ್ಯೋಧನಾದಿಕಾನ್ ॥ ೭೧೬ ॥

ವಾಯುದೇವನ ಅವತಾರಗಳನ್ನು ಪ್ರತಿಪಾದಿಸುವ ವಾಯುಪುರಾಣ ವಚನಗಳನ್ನು ಸಂಗ್ರಹದಿಂದ ನಿರೂಪಿಸುತ್ತಾರೆ :—

---

ಈ ವಾಯುದೇವನು ಮೂರು ಪದ್ಮ (ಸಂಖ್ಯೆಯ) ರೂಪಗಳುಳ್ಳವನು ; ರಾಮಾವತಾರಕಾಲದಲ್ಲಿ ಮೂರು ಕೋಟಿ ರೂಪಗಳಿಂದ ಯುಕ್ತನಾಗಿ ರಾಕ್ಷಸಾಂತಕನಾಗಿ

---

ಅವತಾರಗಳಲ್ಲಿ ಅಧಿಕವಾದ ಬಲಕಾರ್ಯಗಳೂ, ಮೂರನೇ ಅವತಾರದಲ್ಲಿ ಜ್ಞಾನಕಾರ್ಯಗಳನ್ನು ಸೂಚಿಸುತ್ತವೆ ; ನಿರಂತರ ಭಗವಂತನ ಧ್ಯಾನದಿಂದ ಉತ್ಪನ್ನವೆಂದು ಸೂಚಿಸಲು, ಧ್ಯಾನರೂಪದ ಉತ್ತಮ ಚೇಷ್ಟಾಕರ್ತೃತ್ವವೆಂಬ ಪ್ರಾಣಶಬ್ದಾರ್ಥವನ್ನು ಭರ್ಗಃ ಎಂಬ ಮೂರನೇ ವಿಶೇಷಣವೂ ಇರುತ್ತದೆ ; ಈ ವರ್ಗವನ್ನು ಭಗವತ್ಪರವಾದ ಅರ್ಥದಲ್ಲಿಯೂ ತಿಳಿಯಬೇಕು ; ಜನನಾಭಾವಸೂಚನೆಗಾಗಿಯೂ, ಗಾಯತ್ರೀ ಪ್ರತಿಪಾದ್ಯನೆಂದು ಸೂಚಿಸಲಿಕ್ಕೂ ಭರ್ಗಶಬ್ದವಿದೆ ; ದರ್ಶತಪದವು, ನಿರುಪಚರಿತ ಅನಂತಸರ್ವಜ್ಞತ್ವವನ್ನು ಹೇಳಿದೆ— ವಾಯುಪರವಾದರೆ, ಈಶ್ವರಾದನ್ಯತ್ರ ಆಲೋಚನ ಮಾತ್ರದಿಂದ ಸಕಲ ಪದಾರ್ಥ ಜ್ಞಾನವನ್ನು ಹೇಳುತ್ತದೆ—ಹಾಗೆಯೇ ಭರ್ಗ ಪದವು ಧ್ಯಾನರೂಪದ ಉಪಾಸನಾದಿ ಕೌಶಲ್ಯವನ್ನು ತಿಳಿಸುತ್ತದೆ ; ಪುನಃ ದರ್ಶತ ಪದದಿಂದ ವಾಯುದೇವನ ನಿತ್ಯಾಪರೋಕ್ಷತ್ವವೂ ಹೇಳಲ್ಪಡುತ್ತದೆ ; ಬಲಕ್ಕೆ ಜ್ಞಾನಸಾಧನ ದುಷ್ಟಸಂಹಾರ ರೂಪದ ಸೇವೆಯ ಉಪಯೋಗಿತ್ವವೂ ಇದೆ ; ಅಥವಾ 'ದರ್ಶತಂ' ಎಂಬುದು, (ದರ್ಶಃ ವೈಷ್ಣವ ಶಾಸ್ತ್ರವು, ತಂ—ತತಂ, ಯಸ್ಮಾತ್— ಯಾರಿಂದ ಭೂಮಿಯಲ್ಲಿ ವ್ಯಾಪ್ತವಾಯಿತೋ—ಪ್ರಸಾರವಾಯಿತೋ, ಆ ವಾಯುದೇವರ ಮೂರನೆಯ ಅವತಾರವು—ಶ್ರೀಮಧ್ವರೂಪವು ; ಭರ್ಗಃ—ಆ ರೂಪದಿಂದ, ನಾನಾದುಶ್ಶಾಸ್ತ್ರಗಳನ್ನು ಭರ್ಜನಮಾಡುವುದರಿಂದ (ದಹಿಸುವುದರಿಂದ, ಪಾಕಮಾಡುವುದರಿಂದ) ಭರ್ಗಶಬ್ದವಾಚ್ಯರೂ ; ಹೀಗೆ ಮೂರು ವಿಶೇಷಣಗಳೂ, ತೃತೀಯಾವತಾರದ ಜ್ಞಾನ ಕಾರ್ಯಕ್ಕೆ ಉಪಯೋಗತ್ವೇನ ಅನ್ವಯಿಸಿಕೊಳ್ಳಬೇಕು ; ಈ ಮೂರನೆಯ ಮಧ್ವಾವತಾರದ ಪ್ರಾಶಸ್ತ್ಯ ಸೂಚಕವಾಗಿ, ಮೊದಲಿನ ಎರಡು ಅವತಾರಗಳನ್ನು ಅರ್ಧ ಅರ್ಧ ಋಕ್ಕುಗಳಿಂದ ಹೇಳಿ,

ವಾಯೋಃ – ಮೂಲವಾಯುದೇವನ, ದಿವ್ಯಾನಿ ರೂಪಾಣಿ – (ವಿಷ್ಣುಸೇವೆಗಾಗಿ ಸ್ವೀಕೃತವಾದ, ಆದ್ದರಿಂದಲೇ) ದಿವ್ಯವಾದ (ಲೋಕವಿಲಕ್ಷಣಗಳಾದ) ಅವತಾರರೂಪಗಳು, ಪದ್ಮತ್ರಯ ಯುತಾನಿ ಚ – ಮೂರು ಪದ್ಮ (ಪದ್ಮ, ಮಹಾಪದ್ಮಗಳು ಸಂಖ್ಯಾವಾಚಕಗಳು ; one thousand billions is one Padma) (ಸಂತಿ) ಇರುತ್ತವೆ ; ತ್ರಿಕೋಟಿ ಮೂರ್ತಿ ಸಂಯುಕ್ತಃ–ಮೂರು ಕೋಟಿ ರೂಪಗಳಿಂದ ಕೂಡಿದವನಾಗಿ, ತ್ರೇತಾಯಾಂ – ತ್ರೇತಾಯುಗದಲ್ಲಿ ; ರಾಕ್ಷಸಾಂತಕಃ–(ರಾಮಾವತಾರಕಾಲದಲ್ಲಿ) ರಾಕ್ಷಸಸಂಹಾರಕನು, ರಾಮಕಾರ್ಯ ಧುರಂಧರಃ–ದುಷ್ಟದೈತ್ಯನಿಗ್ರಹವೆಂಬ ಶ್ರೀರಾಮ ಕಾರ್ಯಸಾಧಕನಾಗಿ (ಅದರ ಭಾರವನ್ನು ಅಧಿಕವಾಗಿ ವಹಿಸಿ), ಹನುಮಾನ್ ಇತಿ–ಹನುಮಂತನೆಂದು, ವಿಖ್ಯಾತಃ–ಪ್ರಸಿದ್ಧನಾದನು; ಸಃ ವಾಯುಃ–ಆ ವಾಯುದೇವನೇ, ದ್ವಾಪರಾಂತೇ–ದ್ವಾಪರಯುಗದ ಕಡೆಯಭಾಗದಲ್ಲಿ, ಕುರೂದ್ವಹಃ – ಕುರುವಂಶದಲ್ಲಿ ಜನಿಸಿ

---

ತ್ರೇತಾಯುಗದಲ್ಲಿ ರಾಮಕಾರ್ಯ ದುರಂಧರನಾದ ಹನುಮಂತನೆಂದು ವಿಖ್ಯಾತನಾದನು ; ಅದೇ ವಾಯುದೇವನೇ ಕುರುವಂಶದಲ್ಲಿ, ಭೀಮಸೇನನೆಂಬ ನಾಮದಿಂದ, ಧ್ವಾಪರಯುಗದಲ್ಲಿ ಅವತರಿಸಿ, ದುರ್ಯೋಧನಾದಿಗಳನ್ನು

---

ಮೂರನೆಯ ಅವತಾರವನ್ನು ಅರ್ಥಸಹಿತವಾದ ಮೂರು ಋಕ್ಕುಗಳಿಂದ ನಿರೂಪಿಸಲಾಗಿದೆ ('ಸರ್ವಜ್ಞಮನ್ಯಮನವೇಕ್ಷ್ಯಸಕಾರ್ಯವೀರ್ಯಂ–ತದ್ಯುಕ್ತ್ಯಾಭಾಸ ಜಾಲಪ್ರಸರವಿಷತರೂದ್ದಾಹದಕ್ಷಪ್ರಮಾಣ–ಇತ್ಯಾದಿಗಳು ಮೂರನೆಯ ಅವತಾರದ ಜ್ಞಾನಬಲವನ್ನು, ದುಃಶಾಸ್ತ್ರ ಭರ್ಜನೆಯನ್ನು, ಹೇಳುತ್ತವೆ ;) ಯದೀಂ–ಯಾವ ಮತಿಶಬ್ದವಾಚ್ಯವಾದ (ಅತಿಶಯಮತಿವಂತನೂ, ಅನ್ಯರ ಮತಿಪ್ರೇರಕನೂ ಆದ್ದರಿಂದ) ಹನುಮಂತನು, ಉಪ – ಶ್ರೀರಾಮನ ಸಮೀಪದಲ್ಲಿ ಹ್ವರತೇ–ವಿಹರಿಸುತ್ತದೆ (ಆನಂದದಿಂದ ಕ್ರೀಡಿಸುತ್ತದೆ) (ಇದು ಹನುಮಚ್ಛಬ್ದಾರ್ಥಸೂಚಕವೂ ಆಗುತ್ತದೆ) ಅಥವಾ ಉಪಹ್ವರತೇ–ಏಕಾಂತ ಶ್ರವಣಕ್ಕಾಗಿ ಶ್ರೀರಾಮನ ಸಮೀಪವನ್ನು ಹೊಂದುತ್ತಿರಲು ಭಕ್ತಿಯಿಂದ ಬಾಗಿದ ದೇಹವುಳ್ಳವನಾಗುತ್ತಾನೆ ; (ಹ್ವರ ಕೌಟಿಲ್ಯ ಇತಿ) ('ಪ್ರೀತ್ಯಾವನಮ್ರಾಕೃತಿಂ– ' ಎಂಬ ವಚನವೂ ಇದನ್ನೇ ತಿಳಿಸುತ್ತದೆ) ; (ಮತ್ತು ಸಾಕ್ಷಾತ್ ಪರದೇವತೆಯೊಂದಿಗೆ ಏಕಾಂತಗೋಷ್ಠೀಯೋಗ್ಯವಾದ ವಿಲಕ್ಷಣ ಹನುಪ್ರದೇಶ (ಹನು–ಕೆನ್ನೆ, ಕಪೋಲ)ವುಳ್ಳವನೆಂದು ಸ್ವಾರ್ಥಲಕ್ಷಣವನ್ನು ಬಿಡದ ಹನುಶಬ್ದಬೋಧ್ಯಮುಖಕಮಲವುಳ್ಳವನೆಂಬ ವ್ಯುತ್ಪತ್ತಿಯಿಂದ ಹನುಮಾನ್ ಶಬ್ದಾರ್ಥವನ್ನೇ ತಿಳಿಸುತ್ತದೆ) ; ಯದೀಮುಪಹ್ವರತೇ–ಯತ್, ಯಾವ ಪೂರ್ವೋಕ್ತಮತಿಶಬ್ದವಾಚ್ಯನಾದ ಹನುಮಂತನು, ಈಂ–ಸೀತಾರೂಪ ಲಕ್ಷ್ಮೀದೇವಿಯನ್ನು, ಉಪ–ಸಮೀಪದಲ್ಲಿ (ಲಂಕಾಸ್ಥಿತ

(ಕುರುವಂಶಲಲಾಮನಾಗಿ), ಭೀಮಸೇನಃ–ಭೀಮಸೇನನು, ಅಭೂತ್–ಆದನು (ಆಗಿ ಜನಿಸಿದನು); ದುರ್ಯೋಧನಾದಿಕಾನ್ – ದುರ್ಯೋಧನಾದಿ ಸಕಲ ದುಷ್ಟರನ್ನು, ಹತ್ವಾ–ಸಂಹರಿಸಿ, ಕೃಷ್ಣಂ–ಶ್ರೀಕೃಷ್ಣನನ್ನು (ದುಷ್ಟನಿಗ್ರಹಕ್ಕಾಗಿಯೇ ಅವತರಿಸಿದ್ದ ಯಾದವ ಕೃಷ್ಣನನ್ನು), ಸಂಪೂಜಯಾಮಾಸ – ಭಕ್ತಿಯಿಂದ ಪೂಜಿಸಿದನು (ತನ್ನ ಸೇವೆಯನ್ನು ಅರ್ಪಿಸಿದನು).

**ದ್ವೈಪಾಯನಸ್ಯ ಸೇವಾರ್ಥಂ ಬದರ್ಯಾಂ ತು ಕಲೌ ಯುಗೇ ।**
**ವಾಯುಶ್ಚ ಯತಿರೂಪೇಣ ಕೃತ್ವಾ ದುಃಶಾಸ್ತ್ರಖಂಡನಂ ॥ ೭೧೭ ॥**

---

ಸಂಹರಿಸಿ ಶ್ರೀಕೃಷ್ಣನನ್ನು ಚೆನ್ನಾಗಿ ಪೂಜಿಸಿದನು; ಭೂಭಾರಹರಣವೆಂದ ಶ್ರೀಕೃಷ್ಣನ ಕಾರ್ಯದಲ್ಲಿ ಪ್ರಥಮಾಂಗನೆನಿಸಿದನು (೭೧೪–೭೧೬). ಕಲಿಯುಗದಲ್ಲಿ ಬಾದರಾಯಣರ ಸೇವೆಯನ್ನು ಬದರಿಕಾಶ್ರಮದಲ್ಲಿ ಮಾಡಿ, ದುಃಶಾಸ್ತ್ರಗಳನ್ನು ಖಂಡಿಸಿ, ಭೂರೇಖೆಯ ದಕ್ಷಿಣ ಭಾಗದಲ್ಲಿ, (ಭರತವರ್ಷದಲ್ಲಿ), ಕಲಿಯುಗದಲ್ಲಿ

---

ಸೀತಾ ಹಾಗೂ ಶ್ರೀರಾಮರೆಂಬ ಉಭಯರ ಸಮೀಪದಲ್ಲಿ) ಖಿತಸ್ಯ- ರಾಮನ ಸಮೀಪದಲ್ಲಿಯೂ, ಹ್ವರತೇ - ಕ್ರೀಡಿಸುತ್ತದೆ; (ಏಕಾಂತೋಕ್ತಿ ಸಮಯದಲ್ಲಿ ಸ್ತ್ರೀಯೂ ಆಗುತ್ತದೆ, ಹನುಮದ್ರೂಪವು); ಸಾಧತೇ - ದುಷ್ಟರಾಕ್ಷಸ ಹಿಂಸಾದಿ ರಾಮಕಾರ್ಯಗಳನ್ನು ಸಾಧಿಸುತ್ತದೆ; (ಸಾಧಯತೇ ಎಂದು ಹೇಳದೆ ಧಾತು ಸ್ವರೂಪ ಪ್ರಕೃತಿಯನ್ನೇ ಪ್ರಯೋಗಿಸಿ ಸಾಧತೇ ಎಂದು ಹೇಳಿರುವುದು ಸ್ವಾಮಿ ಕಾರ್ಯನಿರ್ವಹಣೆಯಲ್ಲಿ ಅಂಗಕೌಟಿಲ್ಯವಿಲ್ಲೆಂಬುದನ್ನು ಸೂಚಿಸುತ್ತದೆ) ಹನನಂ ಅಸ್ಯ ಅಸ್ತೀತಿ ಹನುಮಾನ್–ಶತ್ರುಹನನವುಳ್ಳವನೆಂಬರ್ಥವನ್ನೇ ಸೂಚಿಸುತ್ತದೆ; ಉಕಾರವು ಆ ಶೀಲವುಳ್ಳವನೆಂಬುದನ್ನು ಹೇಳುತ್ತದೆ); ಖಿತಸ್ಯ– ಶ್ರೀರಾಮನ, ಸಸೃತಃ–ಅಮೃತವನ್ನು ಸ್ರವಿಸುವ, ಧೇನಾಃ - ಕಾಮಧೇನುವಿನಂತೆ (ಧಿನು ಪುಷ್ಟಾವಿತಿಧಾತೋಃ) ಸಜ್ಜನರ ಧಾರಣಪೋಷಣ ಶೀಲವುಳ್ಳನಾದ್ದರಿಂದ, ಧೇನಾಶಬ್ದ ವಾಚ್ಯನು; ಅಥವಾ ಯಾವ ದೇಹದಿಂದ ಶ್ರೀರಾಮನ ವಾಕ್ಯಗಳನ್ನು ಸೀತೆಗೆ ಮುಟ್ಟಿಸಿದನೋ; ಖಿತಸ್ಯ - ರಾಮನ, ಸಸೃತಃ - ಉಪಕ್ರಮಾದಿ ಯುಕ್ತಿ ಲಕ್ಷಣವನ್ನು ಸ್ರವಿಸುವ, ವೇದಪಂಚರಾತ್ರಾದಿ ವ್ಯಾಖ್ಯಾನ ರೂಪವಾಕ್ಯಗಳನ್ನು, ಅನಯಂತ - ಮುಖ್ಯ ಶ್ರೋತೃವಾದ ತಾನು ತನ್ನ ಮನಸ್ಸನ್ನು ಮುಟ್ಟಿಸಿದನು; ಅಥವಾ ಖಿತಸ್ಯ- ರಾಮಪ್ರತಿಪಾದಿಕಗಳಾದ, ಸಸೃತಃ - ಮೂಲರಾಮಾಯಣದ ವಾಕ್ಯಗಳನ್ನು, ಅನಯಂತ - (ದೇವ ಗಂಧರ್ವಾದಿ ಶ್ರೋತೃಗಳಲ್ಲಿ,) ಮುಟ್ಟಿಸಿದನು; (ಬಹುವಚನವನ್ನು ಹಿಂದಿನಂತೆಯೇ ಯೋಗ್ಯವಾಗಿ ಕೃತ್ಯವುಳ್ಳದ್ದೆಂದು ಭಾವಿಸಬೇಕು); ತದ್ವಪುಃ - ಮೊದಲಿನರೂಪವು, (ರಾಮ ಸೇವಾರ್ಥವಾಗಿ ಭೂಮಿಯಲ್ಲಿ ಅವತರಿಸಿದ ಹನುಮದ್ರೂಪವು) (ವಾಕ್ಯಶೇಷದಿಂದ ಇದಕ್ಕೆ

ಸಂಬಂಧವೆಂದು ತಿಳಿಯಬೇಕು) ; ಸಸೃತಃ ಧೇನಾಃ - (ರಾಮನ) ಕೃಪಾರಸಬಿಂದುಗಳಿಂದ ದ್ರವೀಭೂತವಾದ ಮನಸ್ಸಿನಿಂದ ಹೊರಟ, ಮಾತುಗಳನ್ನು ; (ಹನುಮಂತನು ಸಮುದ್ರೋಲ್ಲಂಘನ, ವನಭಂಜನ, ಸಂಜೀವನ ಪರ್ವತಾನಯನ ಮುಂತಾದ ಮಹಾಸೇವೆಗಳನ್ನು ಸಲ್ಲಿಸಿ ಯಾವ ಫಲವನ್ನೂ ಅಪೇಕ್ಷಿಸದೇ ಅನುಗ್ರಹಮಾತ್ರವನ್ನು ಏಕಾಂತ ಭಕ್ತರ ಮಹಾ ಲಕ್ಷಣವನ್ನು ಲಕ್ಷಿಸಿ, ಆನಂದಾಶ್ರು ಸಹಿತವಾದ ಮಾತುಗಳನ್ನು, ಸಹಭೋಗರೂಪವಾದ ಬ್ರಹ್ಮಪದವಿಯನ್ನು ಅನುಭವಿಸಿ ವೈಕುಂಠಾದಿ ಲೋಕಗಳಿಗೂ ಹೊಕ್ಕು ಅಲ್ಲಿ ನನ್ನ ಸಂದರ್ಶವನ್ನು ಪಡೆಯುವಿ, ಇತ್ಯಾದಿ ಅಮೃತ ತುಲ್ಯ ರಾಮವಾಕ್ಯಗಳಿಂದ ಅನಯಂತ - ತುಷ್ಟನಾದನೆಂಬ ಅರ್ಥವನ್ನು ತಿಳಿಸುತ್ತವೆ) ; ಯದ್ಯಪಿ, ಮೂಲವಾಯುದೇವನಿಗೇ ಬ್ರಹ್ಮಪದವಿಯು ; ತಥಾಪಿ ಹನುಮದವತಾರ ಸೇವೆಯಿಂದ ತುಷ್ಟನಾದ ಶ್ರೀರಾಮನಿಂದ, ದತ್ತವಾದ್ದನ್ನು (ಬ್ರಹ್ಮಪದವಿಯನ್ನು) ಶ್ರುತಿಯು ವರ್ಣಿಸಿರುತ್ತದೆ ; 'ಈಃ' ಎಂದರೆ ಲಕ್ಷ್ಮೀದೇವಿಯು ; ಈಂ - ಆಕೆಯನ್ನು ಉಪ - (ವೈಕುಂಠಸ್ಥನಾರಾಯಣನ ಮುಖಕಮಲದ ಸಮೀಪಕ್ಕೆ) - ವಕ್ಷಸ್ಥಲವನ್ನು, ಅನಯಂತ - ಹೊಂದಿಸಿದನು (ಸೀತಾಕೃತಿಯನ್ನು ರಾಮನ ಬಳಿಗೆ ಒಯ್ದನು) ; ಅಸ್ಯ - ವಾಯುದೇವನ, ದ್ವಿತೀಯಂ ವಪುಃ - ಎರಡನೆಯ ಅವತಾರವು, ಪೃಕ್ಷಃ - ಶತ್ರುಸೇನಾ ನಾಶಕವಾದ್ದರಿಂದ ಪೃಕ್ಷಶಬ್ದವಾಚ್ಯವಾದುದು (ಪೃತ್ಪೃತನಾ ಕ್ಷೀಯತೇ ಅಸ್ಮಾತ್ ಎಂಬ ವ್ಯುತ್ಪತ್ತಿಯಿಂದ) ; ಅದೇ ಭೀಮರೂಪವು ; ಪಿತುಮಾನ್— ಬಹ್ವನ್ನಭೋಕ್ತನಾದ್ದರಿಂದ, ಪಿತುಮಚ್ಛಬ್ದವಾಚ್ಯವೂ ಆಗಿದೆ ; ನಿತ್ಯಶಬ್ದವಾಚ್ಯನೂ ಆತನೇ (ಪ್ರಲಯದಲ್ಲಿ ಸಹ ಲುಪ್ತವಾಗದ ಜ್ಞಾನವುಳ್ಳವನಾದ್ದರಿಂದ) ; ಸಪ್ತಮಾತೃಷು— ನಾಲ್ಕು ವೇದಗಳು, ರಾಮಾಯಣ, ಪುರಾಣ, ಪಂಚರಾತ್ರಗಳೆಂಬ ಏಳು ವಿದ್ಯೆಗಳಲ್ಲಿ, ಆಶಯೇ - ಸಮಂತಾತ್ ಶೇತೇ - ಸರ್ವತ್ರ ವಿಮರ್ಶೆಯಿಂದ ಭೀಮರೂಪವು ನಿಶ್ಚಯವನ್ನು ತಿಳಿದಿರುತ್ತದೆ ; (ಲೌಕಿಕರ ನಿದ್ರೆಯಂತೆ 'ಶಯೇ' ಹೇಳಲಾಗಿದೆ - ನಿದ್ರಾಭಾವವು ಸೂಚಿತವಾಗಿದೆ) ; ಅಥವಾ ಪರಾಪರತತ್ವಗಳು ಮತ್ತು ಅವುಗಳಲ್ಲಿನ ಪಂಚಭೇದಗಳೆಂಬ ಸಪ್ತಾರ್ಥಗಳನ್ನು ತಿಳಿದವನೆಂದೂ ಹೇಳಲು ಬರುತ್ತದೆ ; 'ಯೋಷಣಃ ದೋಹಸೇ ಜನಯಂತ' ಎಂಬುದು ಈ ಹಿಂದೆ ಹೇಳಿದಂತೆ, ಶ್ರೀಭೂದುರ್ಗಾ ರೂಪವುಳ್ಳ ಶ್ರೀನಾರಾಯಣ ಪತ್ನಿಯರು, ಜ್ಞಾನದೋಹನಕ್ಕಾಗಿ, ದೇವಶ್ರೇಷ್ಠನಾದ ವಾಯುದೇವನನ್ನು ಉತ್ಪಾದಿಸಿದರೆಂಬ ಅರ್ಥವು ಪ್ರಸಿದ್ಧವಾಗಿದೆ—ಉಪದೇಶಾದಿಗಳಿಂದ ಸಜ್ಜನ ಮನಸ್ಸನ್ನು ಜ್ಞಾನಪೂರ್ಣವನ್ನಾಗಿ ಮಾಡಲು, ವೈಷ್ಣವಧರ್ಮವನ್ನೂ ಶ್ರೀವಿಷ್ಣುವನ್ನೂ ಲೋಕದಲ್ಲಿ ಚೆನ್ನಾಗಿ (ಶುದ್ಧವಾಗಿ) ಪ್ರತಿಪಾದನೆಮಾಡಲು, ಎಂಬರ್ಥವನ್ನು 'ದೋಹಸೇ' ಎಂಬುದಕ್ಕೆ ತಿಳಿಯಬಹುದಾಗಿದೆ— (ದುಹಪ್ರಪೂರಣಾ ಇತಿಧಾತೋಃ) ; ಇದರಿಂದ ಆನಂದನಾಮ ಭಗವಂತನ ಜ್ಞಾನಪ್ರದವಾದ ಶಾಸ್ತ್ರವನ್ನು ರಚಿಸಿದವರೆಂದು ಹೇಳುವ 'ಆನಂದತೀರ್ಥ' ಮತ್ತು 'ಪೂರ್ಣಪ್ರಜ್ಞ' ನಾಮಗಳ ಅರ್ಥವೂ ಸೂಚಿತವಾಗಿವೆ ; ಬುಧ್ನಾತ್—ಜ್ಞಾನರೂಪರಾದ (ವೈಷ್ಣವರ ಮೂಲಾಧಾರರಾದ) ಶ್ರೀಮಧ್ವರ, ಈಂ—ಹೀಗೆ, (ಜಗತ್ತಿನಲ್ಲಿ ಪ್ರವರ್ತಮಾನವಾದ ಮಧ್ವಸಿದ್ಧಾಂತ

ರೀತಿಯಿಂದ,) ಈಶಾನಾಸಃ–ಈಶಾನಾದಿ ಜ್ಞಾನಿಗಳು, ಮಹಿಷಸ್ಯ–ಸರ್ವೋತ್ತಮನಾದ ನಾರಾಯಣನ, ವರ್ಪಸಃ–ಗುಣಗಳನ್ನು (ಅವತಾರಗಳನ್ನು), ನಿರಕ್ರಂತ–ಅತಿಶಯಸ್ಪಷ್ಟ ವಾಗಿ ತಿಳಿದರು (ನಿರ್ಯದೀಂ ಬುಧ್ನಾನ್ಮಹಿಷಸ್ಯ ವರ್ಪಸಃ ಈಶಾನಾಸಃ ಶ್ರವಸಾಕ್ರಂತ', ಎಂಬುದರ ಅರ್ಥವಿವರಣೆಯಿದು) ; ಅಥವಾ ಮಹಿಷಸ್ಯ–ಶ್ರೇಷ್ಠನಾದ ವಾಯುದೇವನ, ವರ್ಪಸಃ–ಗುಣಗಳನ್ನು, (ಜ್ಞಾನದಾನದಿಂದ ರಕ್ಷಿಸುವರೆಂಬ ಗುಣವನ್ನು, ಬುಧ್ನಾತ್– ವೈಷ್ಣವಾಧಾರರಾದ, ತೃತೀಯರೂಪದಿಂದ, ಈಶಾನಾಸಃ–ರುದ್ರಾದಿಗಳು ಸೂರಯಃ– ಜ್ಞಾನಿಗಳು ಆದರು (ಪ್ರಜಾಯಂತ - ಯಥಾ ಪೂರ್ವಂ ಮತ್ತು ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ಎಂಬ ಸ್ಮೃತಿ ಮತ್ತು ಶ್ರುತಿಗಳಿಂದ) 'ಜ್ಞಾನದಾತಾ' ಎಂಬ ಅವರ ನಾಮದ ಅರ್ಥವು ಸ್ಪಷ್ಟವಾಗುತ್ತದೆ ; (ಯದೀಮನುಪ್ರದಿವೋ), ಯತ್–ಯಾವ ಕಾರಣದಿಂದ, ಪ್ರದಿವಃ–ಪ್ರಕೃಷ್ಟಜ್ಞಾನ ಪ್ರಕಾಶವುಳ್ಳವನಾದ್ದರಿಂದ, ಮಧ್ವೋಮಾತರಿಶ್ವಾ–ಮಧ್ವರೆಂಬ ವಾಯುದೇವನು, ಅನು–ಹುಟ್ಟಿದಾರಭ್ಯ, ಪ್ರದಿವಃ–ಪ್ರಕೃಷ್ಟಜ್ಞಾನವುಳ್ಳವರೋ (ಶ್ರುತಿ ಬ್ರಹ್ಮಮೀಮಾಂಸಾದಿಗಳನ್ನು ಅನುಸರಿಸಿದ ಜ್ಞಾನವುಳ್ಳವರೋ), ಗುಹಾಸಂತಂ–ಹೃದಯ ಗುಹಾವಾಸಿಯಾದ ಶ್ರೀನಾರಾಯಣನನ್ನು, ಅಧಿವೇ–ಸರ್ವಾಧಿಪತಿತ್ವದಲ್ಲಿ, ಮಥಾಯತಿ– ಮಥನರೂಪಶಾಸ್ತ್ರ ವಿಚಾರದಿಂದ, ಸ್ಥಾಪಿಸುತ್ತಾರೆ ; (ಯಾರಿಂದ ರುದ್ರಾದಿಗಳೂ, ಶ್ರೀಹರಿ ಗುಣಗಳ ನಿಶ್ಚಯವನ್ನು ಹೊಂದಿದರೋ ಆ ತೃತೀಯಾವತಾರವನ್ನು, ಎಂದು ಸಂಬಂಧ ವನ್ನು ತಿಳಿಯಬೇಕು) ; ಈ ಶ್ರುತಿಯಲ್ಲಿ ಸ್ಪಷ್ಟವಾಗಿ ಮಧ್ವನಾಮವು ಮಾತರಿಶ್ವಾನಾಮ ದಿಂದ ಸಮಾನಾಧಿಕರಣ್ಯದಿಂದ ಹೇಳಿರುವುದು ಮೂರನೇರೂಪವೇ ಮಧ್ವನಾಮಕವೆಂದು ಸಿದ್ಧವಾಗುತ್ತದೆ ; 'ಪಿತುಮಾನ್' ಎಂಬುದಕ್ಕೆ 'ಪಿತುಃ ಮಾ ಯಸ್ಯ' ಪರಮಾತ್ಮನಿಂದ ಅತಿಶಯವಾದ ವಿದ್ಯೆಯು ಯಾರಿಗೋ ಎಂಬ ವ್ಯುತ್ಪತ್ತಿಯಿಂದ, ಭಗವತ್ಪ್ರೇರಣಾನುಸಾರ ವಾಗಿಯೇ ಸರ್ವವನ್ನು ತಿಳಿಯುವರಲ್ಲದೇ ಮತ್ತು ತದನುಸಾರವಾದ ಕಾರ್ಯಗಳನ್ನು ಮಾಡುವರಲ್ಲದೇ ಸ್ವೇಚ್ಛಾನುಸಾರವಾಗಿ ಅಲ್ಲವೆಂಬರ್ಥವೂ ತಿಳಿಯಬರುತ್ತದೆ, ವೀರುಧಃ– (ವಿಶೇಷೇಣರುಹತೀತಿವ್ಯುತ್ಪತ್ತ್ಯಾ) ವೀರುಧಶಬ್ದವಾಚ್ಯಲತಾ ವಿಶೇಷಗಳಂತೆ ; ಪೃಕ್ಷುಧಃ– ಪ್ರಕ್ಷುಧಾಶಬ್ದವಾಚ್ಯ ಪ್ರತಿವಾದಿಕೃತ ಪ್ರಶ್ನೆಗಳನ್ನು, ದಂಸು–ದಂತಗಳಲ್ಲಿ, ಆರೋಹತಿ– ಆರೋಪಿಸಿಕೊಳ್ಳುತ್ತದೆ (ಎಂದರೆ ಹಲ್ಲುಗಳಿಂದ ಲತಾವಿಶೇಷಗಳು ಚೂರ್ಣವಾಗುವಂತೆ, ಹಾಗೆ ಪ್ರತಿವಾದಿಕೃತ ಪ್ರಶ್ನೆಗಳನ್ನು ಚೂರ್ಣೀಕರಿಸುತ್ತದೆ) ; (ಪ್ರಮಾಣಿಕಗಳಲ್ಲದ ಪ್ರಶ್ನೆ ಗಳಿಗೆ ಪರಿಹಾರವೇ ಇಲ್ಲ ; ಪ್ರಾಮಾಣಿಕ ಮತ್ತು ಅಪ್ರಾಮಾಣಿಕ ಪ್ರಶ್ನೆಗಳಿಗೆ ಕೆಲವು ಸ್ಥಲ ಗಳಲ್ಲಿ 'ಸತ್ಯಂ' ಎಂದು ಹೇಳಿ, ಪರಿಹಾರ ನಿರೂಪಣೆಯು ಆರಂಭವಾಗುತ್ತದೆ ; ಅಲ್ಲಿಯೂ ದಂತಾಕ್ಷರಬಾಹುಲ್ಯದಿಂದಲೇ ಪರಿಹಾರವು ಆರಂಭವಾಗುತ್ತದೆಂದು ಸೂಚಿಸಲು, 'ದಂಸು' ಎಂತಲೇ ಇಲ್ಲಿಯೂ ಹೇಳಲಾಗಿದೆ) ; ಅಥವಾ ವೀರುಧಃ–ವೈಷ್ಣವ ವಿರೋಧಿಗಳಾಗಿಯೇ ಉತ್ಪನ್ನರಾದ, ಪೃಕ್ಷುಧಃ – ಸ್ವಸೇನಾಕ್ಷೋಭಕಾರಿಗಳಾದ, ಕಲ್ಯಾದಿದೈತ್ಯಸಮೂಹವನ್ನು, ದಂಸು ಆರೋಹತಿ–ಸ್ವಚರಣದಿಂದ ಮುಟ್ಟುತ್ತದೆ–ಅವರನ್ನು ಪರಾಭವಗೊಳಿಸಿ ಅವರ

ಹಲ್ಲು ಮುರಿಯುತ್ತದೆ ; ( ದಂತಭಂಗವು ಪರಾಜಯವೆಂದು ಲೋಕರೂಢಿಯೂ ಇದೆ ; ಭೀಮನು ದುಃಶಾಸನನ ದಂತಭಂಗವನ್ನು ಮಾಡಿರುವನು ; ' ಅಧಃಸಪತ್ನಾ ಮೇ ಪದೋ-ರಿಮೇ ಸರ್ವೇ ಅಭಿಷ್ಠಿತಾ' ಎಂಬ ಶ್ರುತಿಯೂ, 'ತ್ವಯಾಭಿಗುಪ್ತಾ ವಿಚರಂತಿನಿರ್ಭಯಾ...' ಇತ್ಯಾದಿ ಸೇವಾಸ್ತುತಿರೂಪ ಸ್ಮೃತಿಯೂ ಇರುತ್ತವೆ) ; ಯತ್ (ಯಸ್ಮಾತ್), ಲಕ್ಷ್ಮೀ ಶ್ರೀ ನಾರಾಯಣರಿಬ್ಬರೂ, (ಈತನಿಗೆ) ವಾಯುದೇವನಿಗೆ ಸ್ವಾಮಿಗಳಾಗಿರುವರು ; ಈ ಉಭಯರು, ಜನುಷಂ—ವಾಯುಜನ್ಮವನ್ನು, ಇನ್ವತಃ—ಪ್ರೇರಕರಾಗಿರುವರೋ (ಇನ್ವತೀ ಎಂಬ ರೂಪವು ಛಾಂದಸವು), ಅತ್—ಈ ಕಾರಣದಿಂದ, (ಅಕಾರವಾಚ್ಯ ಪರಮಾತ್ಮನ ಬಲದಿಂದ), ಯವಿಷ್ಠಃ - ಸೂಕ್ಷ್ಮರೂಪಿಯಾದ (ಕಡೆಯರೂಪದ) ಶ್ರೀಮಧ್ವನು ಘೃಣಾ-ದಯಾವಂತನು (ಭೀಮಾದಿರೂಪಗಳಂತೆ ಶತ್ರುಹಿಂಸಾದಿಗಳನ್ನು ಮಾಡದ) ಶುಚಿಃ—ಯತಿಧರ್ಮಾಚರಣೆಯಿಂದ ಪರಮಪಾವನನೂ, ಅಭವತ್—ಆದನು ; (' ಉಭಾಯದಸ್ಯ ಜನುಷಂ ಯದಿನ್ವತ ಆದಿದ್ಯವಿಷ್ಠೋ ಅಭವದ್ಘೃಣಾ ಶುಚಿಃ ' ಎಂಬ ಬಳಿತ್ಥಾ ನಾಲ್ಕನೇ ಋಕ್ಕಿನ ಅರ್ಥವನ್ನು ವಿವರಿಸುತ್ತಿರುವರು) ; (ಈ ಮುಂದೆ ' ಆದಿನ್ಮಾಮಾತ್ರ್ಯಾಃ . . . . .' ಎಂಬ ಋಕ್ಕಿನ ಅರ್ಥವನ್ನು ವಿವರಿಸುತ್ತಾರೆ) ; ಆತ್—ಪರಮಾತ್ಮನ ಪ್ರೇರಣೆಯಿಂದಲೇ, ಇತ್—ಹೀಗೆ (ಪ್ರತಿಕಲ್ಪದಲ್ಲಿ, ಮಾತ್ರ್ಯಾಃ—ತಾಯಿಯ ಉದರವನ್ನು, (ಶುಕ್ರಶೋಣಿತವಿಲ್ಲದೇ ನಿಮಿತ್ತಮಾತ್ರವಾಗಿಟ್ಟುಕೊಂಡು,) ಆವಿಶತ್—ದೇಹವನ್ನು (ಪ್ರಸವಕಾಲದಲ್ಲಿ) ಪ್ರವೇಶಿಸುವನು (ಗರ್ಭವಾಸದುಃಖರಹಿತನೆಂಬುದನ್ನು ಸೂಚಿಸುತ್ತದೆ) ; (ಮಾತೃಷು ಅಶುಚಿಃ—ಎಂದೂ ಸೂಚಿಸುತ್ತದೆ) ; ಅಹಿಂಸ್ಯಮಾನಃ—ಗರ್ಭದಲ್ಲಿಯಾಗಲಿ, ಜನ್ಮಾನಂತರವಾಗಲಿ, ಕಲ್ಯಾದಿಗಳ ಪೀಡಾರಹಿತನು ; ಉರ್ವಿಯಾ (ಉರ್ವ್ಯಾ) – ಉರುತರಸ್ವಶಕ್ತಿಯಿಂದ, ವಿವಾವೃಧೇ—ಅಭಿವೃದ್ಧನಾದನು ; ಯತ್—ಏಕೆಂದರೆ, ಅಯಂ—ಈ ಮಧ್ವರು, ಸನಾಜುವಃ—(ಸನಾಜುಷಃ—ಸನಾಜುವಃ ಎಂಬುದು ವೈದಿಕ ಪ್ರಯೋಗವು) ; ನಿರಂತರ ನಾರಾಯಣನ ಸೇವೆಯುಳ್ಳವನಾಗಿ, ಪೂರ್ವಾಃ—(ಸಪ್ತವಿದ್ಯೆಗಳಲ್ಲಿ ಮೊದಲಿನ, ಋಕ್, ಯಜು, ಸಾಮ, ಅಥರ್ವಗಳೆಂಬ) ವಿದ್ಯೆಗಳನ್ನು, ಅನು—(ಉಪಕ್ರಮೋಪಸಂಹಾರಾದಿಗಳನ್ನು) ಅನುಸರಿಸಿ ; ಅರುಹತ್—(ಮನಸ್ಸಿನಿಂದ) ಮೇಲೆ ಹತ್ತಿ ಅಥವಾ ಅಭಿಮಾನಿತ್ವೇನ ಅಧಿಷ್ಠಾನಮಾಡಿ ಸ್ಥಿತನಾಗಿರುವನು (ಅಶ್ವಾರೋಹಿಯು ತನ್ನ ಅಶ್ವವನ್ನು ಸಂಹರಿಸಲ್ಪಡಲು ಬಿಡದಿರುವಂತೆ, ಅಭಿಮಾನ್ಯವಾದ ವೇದಗಳನ್ನು ದುರರ್ಥಗಳಿಂದ ವ್ಯರ್ಥಗೊಳಿಸಿದಂತೆ, ವೇದಗಳನ್ನು ರಕ್ಷಿಸುವನೆಂದು ಸೂಚಿಸಿ, ಅರುಹತ್ ಎಂದಿರುವರು) ; (ಆದ್ದರಿಂದ) ನಿನವ್ಯಸೀಷು—ನಿತರಾಂ ನೂತನಗಳಾದ, (ಮೂಲರೂಪದಿಂದ ಈಚೆಗೆ ವ್ಯಕ್ತವಾದ ವ್ಯಾಸದಿರೂಪದಿಂದ ಉತ್ಪನ್ನಗಳಾದ) ಅವರಾಸು—ವೇದಗಳಕಿಂತ ಅನಂತರ ಸೃಷ್ಟಗಳಾದ (ವೇದಗಳಂತೆ ಸೃಷ್ಟಿಕಾಲದಲ್ಲಿ ಪ್ರಾದುರ್ಭಾವಗೊಂಡಕಾರಣಕ ನೂತನತ್ವ ವಿವಕ್ಷೆಯಿಂದಲ್ಲ) ಪುರಾಣ ಪಂಚರಾತ್ರಗಳಲ್ಲಿ (ರಾಮಾಯಣದಲ್ಲಿಯೂ), ಧಾವತೇ—(ಭಗವದುಪದೇಶ ಬಲದಿಂದ) ತ್ವರೆಯಿಂದ ಗೂಹಿತಾರ್ಥಗಳನ್ನು ಸ್ಪಷ್ಟಗೊಳಿಸುತ್ತದೆ ; (ಶಬ್ದದಿಂದ ಅರ್ಥದಿಂದ ಸಹ ನವ್ಯತ್ವವು ಕಾಲಿದಾಸಾದಿ

**ತತಃ ಕಲಿಯುಗೇ ಪ್ರಾಪ್ತೇ ತೃತೀಯೋ ಮಧ್ವನಾಮಕಃ ।**
**ಭೂರೇಖಾದಕ್ಷಿಣೇ ಭಾಗೇ ಮಣಿಮದ್ಗರ್ವಶಾಂತಯೇ ।**
**ಧಿಕ್ಕುರ್ವಂಸ್ತತ್ಪ್ರಭಾಂ ಸದ್ಯೋಽವತೀರ್ಣೋಽತ್ರ ದ್ವಿಜಾನ್ವಯೇ॥೭೧೮॥**
**ಇತ್ಯಾದ್ಯಾಃ ಸೂಕ್ತಯೋ ವಾಯುಪುರಾಣಸ್ಥಾಃ ಸಹಸ್ರಶಃ ।**
**ಅವತಾರತ್ರಯಂ ವಾಯೋಃ ಕಥಯಂತಿ ಮಹಾತ್ಮನಃ ॥ ೭೧೯ ॥**

ದ್ವೈಪಾಯನಸ್ಯ – ಶ್ರೀವೇದವ್ಯಾಸರ, ಸೇವಾರ್ಥಂ – ಸೇವೆಗಾಗಿ, ಬದರ್ಯಾಂ–ಬದರಿಯಲ್ಲಿ, ಆಸ್ತೇ–(ಈಗಲೂ) ಇರುವರು ; ಕಲೌಯುಗೇ–

---

ಮಣಿಮಂತನ ಗರ್ವಶಾಂತಿಗಾಗಿ ಆತನ ಮಾಯಾವಾದವೆಂಬುದು ; ಶಾಸ್ತ್ರವನ್ನು ಖಂಡಿಸಿ, ಆತನ ಪ್ರಭಾವದಿಂದ ಸಜ್ಜನರನ್ನು ರಕ್ಷಿಸಿ, (ಆ ವಿದ್ಯೆಯನ್ನು ಧಿಕ್ಕರಿಸಿ,

---

ಪುರುಷಕೃತ ಗ್ರಂಥಗಳಲ್ಲಿರುವಂತೆ, ಪುರಾಣಾದಿಗಳಲ್ಲಿ ತಿಳಿದಿರಲು 'ನಿನವ್ಯಸೀಷು' ಎಂಬ ವಿಲಕ್ಷಣ ಪ್ರಯೋಗವಿದೆ) (ಪುರಾಣಾದಿಗಳಲ್ಲಿ ಕ್ರಮಮಾತ್ರವ್ಯತ್ಯಾಸವಿದ್ದರೂ ಶಬ್ದತಃ ಮತ್ತು ಅರ್ಥತಃ, ಭಿನ್ನಕಲ್ಪನಿಮಿತ್ತವಾದ ವ್ಯತ್ಯಾಸವು, ಸ್ವಕಪೋಲಕಲ್ಪಿತ ಪುರುಷಕೃತ ಅನ್ಯಗ್ರಂಥಗಳಂತೆ ಅಲ್ಲವೆಂದೂ ಸೂಚಿತವಾಗಿದೆ) ; 'ಪ್ರಥಮಂವಪುಃ' ಎಂಬುದರಿಂದ ವಾಯುಪುತ್ರನಾದ ಹನುಮಂತನ ನಾಮವು, (ಖುತಸ್ಯ ಉಪಹ್ವರತೇ ; ಥೇನಾ ಅನುಮಂತ ಇತ್ಯಾದಿಗಳಿಂದ ವರ್ಣಿತವಾದ ಪರಾಕ್ರಮಾದಿ ಅಸಾಧ್ಯವೃಶಕರ್ಮಗಳಿಂದ) ಸೂಚಿತ ವಾಯಿತು ; 'ಪೃಕ್ಷಃ' ಎಂಬುದರಿಂದ (ಮಹಾಬಲ ಎಂಬ ನಾಮವೂ) ಬಲಿಷ್ಠನಾದ ಗದಾಪಾಣಿಯಾದ ಭೀಮನ, ದುಃಶಾಸನಾದಿ ಸಂಹಾರವೂ, 'ವೀರ' ಎಂಬ ನಾಮವನ್ನು ಸೂಚಿಸಿತು : ಪಿತುಮಾನ್ ಎಂಬುದರಿಂದ, ವೃಕೋದರನೆಂಬ ನಾಮವು (ವೃಕನಾಮಕ ಅಗ್ನಿಯನ್ನು ಉದರದಲ್ಲಿವುಳ್ಳವನೆಂಬರ್ಥವೂ) 'ಮಾತೃಷು ಆವಿಶತ್' ಎಂಬುದರಿಂದ 'ಕೃಷ್ಣದಯಿತ'ನೆಂಬ ನಾಮವೂ ಸೂಚಿತವಾದವು ; 'ಮಧ್ವ ಆಥವೇ' ಎಂಬ ಶ್ರುತಿಯು, ಆನಂದತೀರ್ಥ, ಪೂರ್ಣಪ್ರಜ್ಞ ಯತೀಶ್ವರಗಳೆಂಬ ನಾಮಗಳನ್ನು, 'ನಿರ್ಯದೀಂ' ಎಂಬ ಶ್ರುತಿಯು ಜ್ಞಾನದಾತಾ, ವೈಷ್ಣವಾಚಾರ್ಯ ಎಂಬ ನಾಮಗಳನ್ನು, 'ಯದೀ ಮನು' ಎಂಬ ಶ್ರುತಿಯು, ಮಧ್ವ, ತತ್ವಜ್ಞಗಳೆಂಬ ನಾಮಗಳನ್ನು, 'ಪ್ರಯುತ್ಸಿತಃ' ಎಂಬ ಶ್ರುತಿಯು, ವ್ಯಾಸಶಿಷ್ಯ, ಧ್ವಸ್ತದುರಾಗಮ, ಜಿತವಾದೀ, ಎಂಬ ನಾಮಗಳನ್ನು, 'ಉಭಾಯುದಸ್ಯ' ಎಂಬ ಶ್ರುತಿಯಲ್ಲಿರುವ, 'ಶುಚಿ' ಪದವು, ಜಿತೇಂದ್ರಿಯ, ಎಂಬ ನಾಮವನ್ನು ಸೂಚಿಸಿತು ; ಹೀಗೆ ಈ ಶ್ರುತಿಯು ಲೋಕ ಪ್ರಸಿದ್ಧಗಳಾದ ವಾಯುಪುತ್ರನ ಅನುಗ್ರಹಕಾರಣವಾದ ದ್ವಾದಶನಾಮಗಳನ್ನು ಸೂಚಿಸಿದೆ ; ಬಳಿತ್ಥಾ ವರ್ಗಾರ್ಥವು ಮುಗಿದುದು.

ಕಲಿಯುಗದಲ್ಲಿ, ವಾಯುಶ್ಚ – ಶ್ರೀವಾಯುದೇವನಾದರೋ, ಯತಿರೂಪೇಣ – ಯತಿರೂಪದಿಂದ, ತತಃ–(ಬದರಿ ಪ್ರಯಾಣದ) ಪೂರ್ವದಲ್ಲಿ, ದುಃಶಾಸ್ತ್ರಖಂಡನಂ– ದುಃಶಾಸ್ತ್ರಗಳ ಖಂಡನೆಯನ್ನು (ನಿರಾಕರಣೆಯನ್ನು), ಕೃತ್ವಾ–ಮಾಡಿ, ಆಸ್ತೇ– ಇರುವನು; ತತಃ–ಅನಂತರ, ಕಲೌ ಯುಗೇ–ಕಲಿಯುಗವು, ಪ್ರಾಪ್ತೇ (ಸತಿ) ಬರುತ್ತಿರಲಾಗಿ, ವಾಯುಶ್ಚ–ಅದೇ ವಾಯುದೇವನೇ, ಯತಿರೂಪೇಣ–ಯತಿ ರೂಪದಿಂದ, ತೃತೀಯಃ–ಮೂರನೆಯದಾಗಿ, ಮಧ್ವನಾಮಕಃ–ಶ್ರೀಮಧ್ವ ಎಂಬ ನಾಮವುಳ್ಳವನಾಗಿ, ಭೂರೇಖಾದಕ್ಷಿಣೇಭಾಗೇ–ಭೂರೇಖೆಯ ದಕ್ಷಿಣಭಾಗದಲ್ಲಿ (ಭರತವರ್ಷದಲ್ಲಿ) (ಬದರಿನಾಮಕವೇ ಆದ ಭೂಭಾಗದ ದಕ್ಷಿಣದಲ್ಲಿ), ಮಣಿ– ಮದ್ಗರ್ವಶಾಂತಯೇ–ಮಣಿಮಂತನೆಂಬ ದೈತ್ಯನ, ಗರ್ವಶಾಂತಿಗಾಗಿ, ತತ್ಪ್ರಭಾಂ– ಆತನ ವಿದ್ಯೆಯೆಂಬ ಪ್ರಭೆಯನ್ನು, ಧಿಕ್ಕುರ್ವನ್–ಧಿಕ್ಕರಿಸುವನಾಗಿ, ಅತ್ರ ಅಲ್ಲಿ (ದಕ್ಷಿಣದಲ್ಲಿರುವ ಉಡುಪಿ ಸಮೀಪದಲ್ಲಿ), ದ್ವಿಜಾನ್ವಯೇ – ಮಧ್ಯಗೇಹನೆಂಬ ಬ್ರಾಹ್ಮಣನ ಪುತ್ರನಾಗಿ (ಆ ಸದ್ವಂಶದಲ್ಲಿ), ಸದ್ಯಃ – ಅಲ್ಪಕಾಲದಲ್ಲಿಯೇ, ಅವತೀರ್ಣಃ–ಅವತರಿಸಿದನು; ಇತ್ಯಾದ್ಯಾಃ–ಈ ಮೊದಲಾದ, ಸೂಕ್ತಯಃ– ಮಂಗಳಕರವಾದ ವಾಕ್ಯಗಳು, ಸಹಸ್ರಶಃ–ಸಾವಿರಾರು (ಬಹುವಾಗಿ), ವಾಯು– ಪುರಾಣಸ್ಥಾಃ – ವಾಯುಪುರಾಣದ (ಮಧ್ವಮಹಿಮಾಪ್ರತಿಪಾದಕ ಅಧ್ಯಾಯ ದಲ್ಲಿ), ವಾಯೋಃ – ವಾಯುದೇವನ, ಅವತಾರತ್ರಯಂ – ಮೂರು ಅವತಾರ ಗಳನ್ನು, ಮಹಾತ್ಮನಃ – ಮಹಾತ್ಮನಾದ ವಾಯುದೇವನ ಸ್ತುತ್ಯರ್ಥವಾಗಿ, ಕಥಯಂತಿ–ಹೇಳುತ್ತವೆ.

**ಅತಃ ಶ್ರುತಿಸ್ಮೃತಿಸ್ತುತ್ಯಚಿತ್ರಚಾರಿತ್ರವಿಸ್ತೃತೇಃ ।**
**ಮಧ್ವಸ್ಯೈವ ಮತಂ ಯುಕ್ತ್ಯನ್ವಿತಂ ಪರಮಮಂಗಲಂ ॥ ೭೨೦ ॥**

---

ಕೀಳೆಂದು ತಿರಸ್ಕರಿಸುವಂತೆ ಮಾಡಲು) ಉಡುಪಿ ಸಮೀಪದಲ್ಲಿ ಬ್ರಾಹ್ಮಣ ಪುತ್ರನಾಗಿ ಶೀಘ್ರವಾಗಿ ಅವತರಿಸಿದನು; ಈ ಮುಂತಾದ ವಾರ್ತೆಗಳು, ವಾಯು ಪುರಾಣದ ಬಹು (ಸಹಸ್ರಶಃ) ವಾಕ್ಯಗಳು, ವಾಯುದೇವನ ಮೂರು ಅವತಾರ ಗಳನ್ನು, ಯತಿರೂಪದ ಮೂರನೇ ಶ್ರೀಮಧ್ವನಾಮಕ ಅವತಾರ ಸಹಿತವಾಗಿ, ವಿಸ್ತಾರವಾಗಿ ನಿರೂಪಿಸುತ್ತವೆ (೭೧೭–೭೧೯). ಆದ್ದರಿಂದ, ಶ್ರುತಿ, ಸ್ಮೃತಿಗಳಿಂದ ನಿರೂಪಿಸಲಾದ ವಿಸ್ತಾರವಾದ ಚಿತ್ರ ಚರಿತ್ರೆಗಳಿಂದ, ಮಧ್ವಮತವೇ ಯುಕ್ತಿ

ಅತಃ – ಆದ್ದರಿಂದ, ಶ್ರುತಿಸ್ಮೃತಿಸ್ತುತ್ಯಚಿತ್ರಚಾರಿತ್ರವಿಸ್ಮೃತೇಃ – ಉಕ್ತ ಶ್ರುತಿ, ಸ್ಮೃತಿಗಳಿಂದ ಸ್ತುತ್ಯವಾದ ವಿಚಿತ್ರಚಾರಿತ್ರ್ಯವುಳ್ಳವರಾದ, ಮಧ್ವಸ್ಯ-ಏವ ಮತಂ – ಶ್ರೀಮಧ್ವರ ಮತವೇ, ಯುಕ್ತ್ಯನ್ವಿತಂ – ಯುಕ್ತಿಯುಕ್ತವೂ, ಪರಮಮಂಗಲಂ–ಉತ್ತಮಮಂಗಲಪ್ರದವೂ (ಆಗಿದೆ).

**ಹಿತಂ ನ ಜಾನಾಮ್ಯಹಿತಂ ನ ಜಾನೇ**
**ನಾಕರ್ತುಮೀಶೋ ನ ಚ ಕರ್ತುಮೀಶಃ ।**
**ಯಥಾ ನಟಾನ್ನಾಟಕದಾರುಯಂತ್ರಂ**
**ತಥಾ ಹರೇಃ ಪ್ರೇರಣಯೈವ ವರ್ತೇ ॥ ೭೨೧ ॥**

ಜೀವಕರ್ತೃತ್ವಾದಿ ವಿವಿಧವಾದಗಳ ನಿರಾಕರಣೆಗಾಗಿ, ಗ್ರಂಥಕಾರರೇ ಕರ್ತೃತ್ವ ವಿಷಯವನ್ನು ತಮ್ಮನ್ನು ಉದಾಹರಣೆಯಾಗಿಟ್ಟುಕೊಂಡು ನಿರೂಪಿಸುತ್ತಾರೆ :—

ಹಿತಂ–ನನಗೆ ಯಾವುದು ಹಿತವೆಂಬುದನ್ನು, ನ ಜಾನಾಮಿ–ತಿಳಿಯಲಾರೆನು ; ಅಹಿತಂ–ಅಹಿತವಾದುದನ್ನು, ನ ಜಾನೇ–ತಿಳಿಯೆನು ; ಕರ್ತುಂ–(ಸ್ವೇಚ್ಛಾನುಸಾರ) ಕರ್ಮಗಳನ್ನು ಮಾಡಲು, ನ ಈಶಃ – ಸಮರ್ಥನಲ್ಲ ; ಅಕರ್ತುಂ–ಮಾಡದಿರುವುದಕ್ಕೂ, ನ ಈಶಃ–ಶಕ್ತನಲ್ಲ ; ಯಥಾ–ಹೇಗೆಂದರೆ, ನಟಾನ್–(ನರ್ತನಮಾಡುವ ಕಟ್ಟಿಗೆ) ಗೊಂಬೆಗಳನ್ನು, ನಾಟಕದಾರುಯಂತ್ರಂ–(ನಟನು) ಪ್ರತಿಮೆಗಳನ್ನು ಸೂತ್ರದಲ್ಲಿ ಪೋಣಿಸಿ ಕುಣಿಸುವಂತೆ (ನಮ್ಮನ್ನು–ಜೀವರನ್ನು), ತಥಾ – ಹಾಗೆ (ಚೇಷ್ಟಿಸುತ್ತಾನೆ); ಹರೇಃ – ಶ್ರೀಹರಿಯ, ಪ್ರೇರಣಯಾ–ಪ್ರೇರಣೆಯಿಂದ (ಪೂರ್ಣ ಅಸ್ವತಂತ್ರನಾಗಿ ಶ್ರೀಹರಿವಶದಲ್ಲಿದ್ದು)

---

ಯುಕ್ತವೆಂದೂ, ಪರಮ ಮಂಗಲಕರವೆಂದೂ ಸಿದ್ಧವಾಗಿದೆ (೭೨೦). ನನ್ನ ಹಿತವನ್ನು ತಿಳಿಯೆನು ; ಅಹಿತವನ್ನೂ ತಿಳಿಯೆನು ; ಯಾವುದನ್ನೇ ಆಗಲಿ ಮಾಡದಿರಲಿಕ್ಕೂ, ಮಾಡುವುದಕ್ಕೂ ಶಕ್ತನಲ್ಲ–ನಾನು ಕರ್ತನಲ್ಲ ; ಸೂತ್ರದಲ್ಲಿ ಯೋಜಿಸಲಾದ, ಕಟ್ಟಿಗೆ ಪ್ರತಿಮೆಗಳನ್ನು ರಂಗಸ್ಥಲದಲ್ಲಿ ಕುಣಿಸುವಂತೆ, ಶ್ರೀಹರಿ ಪ್ರೇರಣೆಯು ನನ್ನಿಂದ ಈ ಗ್ರಂಥರಚನಾ ರೂಪದ ಕೃತಿಯನ್ನು ಮಾಡಿಸಿದೆ,

ವರ್ತೇ–ಪ್ರವೃತ್ತಿಯುಳ್ಳವನಾಗುತ್ತೇನೆ[1] (ಕರ್ಮಗಳನ್ನು, ಚೇಷ್ಟೆಗಳನ್ನು ಮಾಡುತ್ತೇನೆ).

**ಯದಭೂತ್ತದ್ಧರೇರ್ಯಚ್ಚ ನಾಭೂತ್ತಚ್ಚ ಹರೇಃ ಪರಾತ್ ।**
**ಜೀವೋ ವಿಷ್ಟಿಗೃಹೀತೋಽಸ್ಮಾತ್ಕಿಂ ಭವೇತ್ಕಿಂ ಚ ನೋ ಭವೇತ್**
॥ ೭೨೨ ॥

ಯತ್–ಯಾವ ಸುಖಸಂಪದಾದಿಯು, ಅಭೂತ್–ಉಂಟಾದುವುವೋ, ತತ್–ಅದೆಲ್ಲವೂ, ಹರೇಃ–ಹರಿಯಿಂದಲೇ ಆದವುಗಳು; ಯತ್ ಚ–ಯಾವ ದುಃಖಮರಣಾದಿಯು, ನ ಅಭೂತ್–ಆಗಲಿಲ್ಲವೋ, ತತ್ ಚ–ಅದೂ ಸಹ, ಪರಾತ್ – ಸ್ವತಂತ್ರನಾದ, ಹರೇಃ – ಹರಿಯಿಂದಲೇ (ಆಗಲಿಲ್ಲ – ತಪ್ಪಿದವು); ಜೀವಃ–ಜೀವನು, ವಿಷ್ಟಿಗೃಹೀತಃ–ರಾಜಬಂಧನದಲ್ಲಿರುವ ದಾಸನಂತೆ ಪೂರ್ಣ ಅಸ್ವತಂತ್ರನು; ಅಸ್ಮಾತ್–ಈತನಿಂದ, ಕಿಂ ಭವೇತ್–ಏನಾಗುತ್ತದೆ? ಕಿಂಚ–ನೋ ಭವೇತ್–ಯಾವುದು ಆಗುವುದಿಲ್ಲ? (ಈತನಿಂದ ನಮಗೇನು ಆಗತಕ್ಕದ್ದಿದೆ? ಯಾವುದೂ ಇಲ್ಲ); [2]

---

ಎಂಬುದು ಸತ್ಯ–ನಿಶ್ಚಯ; (೭೨೧). ನಮ್ಮಿಂದ ಯಾವ ಕೃತಿಯು ಸಂಭವಿಸುವುದೋ ಅದು ಶ್ರೀಹರಿಯದೇ ಆಗಿದೆ; ಯಾವುದು ಸಂಭವಿಸಲಿಲ್ಲವೋ ಅದೂ ಆತನಿಂದಲೇ (ಶ್ರೀಹರಿ ಪ್ರೇರಣೆಯಿಂದಲೇ); ಜೀವನು, ರಾಜಾಧೀನನಾದ ಬಂಧನದಲ್ಲಿರುವ ದಾಸನಂತೆ, ಪರಮಾತ್ಮನ ಅಧೀನನು; ಹೀಗಿರುವ ಜೀವನಿಂದ ಏನನ್ನು ಸಾಧಿಸಲಾಗುತ್ತದೆ; ಯಾವುದನ್ನು ತ್ಯಜಿಸಲಾಗುತ್ತಧೆ? (ಉಭಯಕ್ಕೂ

---

1 ‘ ಈಶಸ್ಯ ಹಿ ವಶೇ ಲೋಕೋ ಯೋಷಾ ದಾರುಮಯೀ ಯಥಾ । ’ ಎಂಬ ಶ್ರೀಭಾಗವತಶ್ಲೋಕವು ಸೂಚಿತವಾಗಿದೆ; ‘ ಯೋಷಾ ’ ಎಂದರೆ ಸ್ತ್ರೀಯು; ಸ್ತ್ರೀ ಮಾತ್ರವಲ್ಲ ‘ ದಾರುಮಯೀ ’ ಕಟ್ಟಿಗೆಯಿಂದ ಮಾಡಿದ ಹೆಣ್ಣುಬೊಂಬೆ ಮಾತ್ರ; ಜೀವನು ಜಡದಂತೆ,–ಆದರೆ ಜಡನಲ್ಲ; ಜಡದಂತೆ ಪೂರ್ಣ ಅಸ್ವತಂತ್ರನು; ಆದರೂ ಭಗವಂತನ ಪ್ರೇರಣೆಯಂತೆ ಕಾರ್ಯ ನಿರ್ವಹಿಸಲು ಶಕ್ತನು.

2 ಸ್ವಹಿತಕರಣದಲ್ಲಿ ಶಕ್ತಿ ಇಲ್ಲ–ತನ್ನ ಅಹಿತವನ್ನೇ ಬಹುವಾಗಿ ಮಾಡುವುದರಿಂದ; ಸಂಸಾರದಲ್ಲಿ ಹುಟ್ಟಲು, ಇರಲು, ಮೃತನಾಗಲು ಒಬ್ಬ ಈಶನು ಸರ್ವರಿಂದ ಅಪೇಕ್ಷಿತನಾಗುತ್ತಾನೆ; ‘ ಇತರವ್ಯಪದೇಶಾದ್ಧಿತಾಕರಣಾದಿ ದೋಷಪ್ರಸಕ್ತಿಃ ’ ಎಂಬ ಬ್ರಹ್ಮಸೂತ್ರೋಕ್ತವಾದ ಯುಕ್ತಿಯಿಂದಲೂ, ಜೀವಕರ್ತೃತ್ವವಾದವೂ, ಜೀವೇಶ್ವರಾಭೇದ

**ಕರ್ಮಣೋ ಯದಿ ತತ್ಕರ್ಮ ಸ್ವಾನಿಷ್ಟಂ ಕುರುತೇ ಕುತಃ ।**
**ಅನಾದ್ಯನಿಷ್ಟಕರ್ಮಾಣಿ ಕರೋತ್ಯನ್ಯವಶೋ ಧ್ರುವಂ ॥ ೭೨೩ ॥**

ಜೀವನು ಅಸ್ವತಂತ್ರನೂ ಈಶ್ವರಾಭಿನ್ನನೂ ಆದರೆ, ಅನಿಷ್ಟಗಳಾದ ಉಭಯಪಕ್ಷದಲ್ಲಿಯೂ ದುಃಖಾದಿ ಹೇತುಗಳಾದ ಕರ್ಮಗಳನ್ನು ಮಾಡುವುದು ಕೂಡುವುದಿಲ್ಲವೆಂದರೆ, ಪುಣ್ಯಪಾಪಾದಿಕರ್ಮವಶದಿಂದಲೇ ಜನನ, ಮರಣಾದಿಗಳು ಉಂಟಾಗುತ್ತವೆನ್ನಬಹುದೇ ಎಂಬ ಶಂಕೆಯನ್ನು ಉತ್ತರಿಸುತ್ತಾರೆ:—

ಕರ್ಮಣಃ-ಕರ್ಮದಿಂದ, ಯದಿ-ಒಂದು ಪಕ್ಷ, ತತ್ಕರ್ಮ-(ಸ್ವದುಃಖಾದಿ ಅನರ್ಥಹೇತುವಾದ ಪರಸ್ತ್ರೀಗಮನ, ಬ್ರಹ್ಮಹತ್ಯಾದಿ) ಕರ್ಮವು ಎಂದರೆ, ಸ್ವಾನಿಷ್ಟಂ–ತನಗೆ ಇಷ್ಟವಲ್ಲದ ದುಃಖದಾಯಕ ಕರ್ಮಗಳನ್ನು, ಕುತಃ–ಏಕೆ, ಕುರುತೇ–ಮಾಡುತ್ತಾನೆ? (ಜೀವಪ್ರವರ್ತಕವೆಂಬ ಕರ್ಮವನ್ನು ಏಕೆ ಮಾಡುತ್ತಾನೆ? ಕರ್ಮಕ್ಕೆ–ಸ್ವಕರ್ತನ ಪ್ರೇರಣೆಯು ಯುಕ್ತವಲ್ಲ); [2] (ಜೀವಃ–ಜೀವನು,

---

ಪೂರ್ಣ ಅಸಮರ್ಥನು) (೭೨೨). ಜೀವನು ಪೂರ್ಣ ಅಸ್ವತಂತ್ರನು; ಸ್ವತಂತ್ರ ಪ್ರೇರಕನೂ ಅನ್ಯನಿಲ್ಲ ಎಂದರೆ, ಅನಾದಿ ಕರ್ಮವೇ (ಪ್ರಕೃತ) ಈಗ ಸಂಭವಿಸುವ ಕರ್ಮಕಾರಣವು ಎನ್ನಬೇಕಾಗುತ್ತದೆ; ಹೀಗೆ ಪೂರ್ವಕರ್ಮವೇ ಈಗಿನ ಕರ್ಮಕ್ಕೆ ಕಾರಣವೆಂದರೆ, ಪ್ರೇರಕವೆಂಬ ಪೂರ್ವ ಕರ್ಮವೂ ಈಗಿನ ದುಷ್ಕರ್ಮಕ್ಕೆ ಕಾರಣವಾಗಲು, ದುಷ್ಕರ್ಮವೇ ಆಗಿರಬೇಕೆನ್ನಬೇಕಾಗುತ್ತದೆ; ದುಷ್ಕರ್ಮವನ್ನಾಚರಿಸುವವನು, ಚೇತನನಾಗಿರಬೇಕು; ಕರ್ಮವು ಜಡ; ಅದು ಬೇರೊಂದು

---

ವಾದವೂ ನಿರಾಕೃತವಾಗುತ್ತವೆ; ಈ ಸೂತ್ರಾರ್ಥವು ಹೀಗಿದೆ:—ಇತರವ್ಯಪದೇಶಾತ್– ('ಜೀವಾದ್ಭವಂತಿ ಭೂತಾನಿ' ಎಂದು ಹೇಳುವ ಶ್ರುತಿಯಿಂದ ಜೀವನೇ ಸ್ವತಂತ್ರ ಕರ್ತೃತ್ವವುಳ್ಳವನೆಂದು ತೋರುವುದರಿಂದ (ಜೀವನೇ ಜಗತ್ಕಾರಣನು, ಈಶ್ವರನಲ್ಲ, ಎಂದರೆ); ಹಿತಾಕರಣಾದಿ–ಸ್ವಹಿತವನ್ನು ಬಿಡುವುದು ಅಹಿತವನ್ನು ಮಾಡುವುದೆಂಬ ಮೊದಲಾದ ದೋಷಪ್ರಸಕ್ತಿಃ–ಜೀವಾನುಭವ ವಿರುದ್ಧವೆಂಬ ದೋಷವು ಪ್ರಾಪ್ತವಾಗುತ್ತದೆ (ಆದ್ದರಿಂದ ಜೀವನು ಸ್ವತಂತ್ರ ಕರ್ತನಲ್ಲ; ಸ್ವತಂತ್ರನಾದರೆ ತನ್ನ ಅಹಿತವನ್ನು ಆಚರಿಸಲು ಕಾರಣವಿಲ್ಲ.

2 ತನ್ನ ಹಲ್ಲುಗಳಿಂದ ತಾನೇ ತನ್ನ ನಾಲಿಗೆಯನ್ನು ಕಚ್ಚಿ ದುಃಖಪಡುವುದೇಕೆಂಬುದಕ್ಕೆ, ಆತ್ಮಾಶ್ರಯವೆಂಬ ದೋಷ ಬರುವುದಲ್ಲದೇ, ರಾಗದ್ವೇಷಾದಿಗಳಿಂದ ತತ್ಸದೃಶ ಅನರ್ಥಕರ ಕರ್ಮಗಳು ಸಂಭಾವ್ಯವೆಂದರೆ, ಕರ್ಮ ಪ್ರೇರಣೆಗೆ ಕರ್ಮವೇ ಕಾರಣವೆಂಬುದು ಬಿದ್ದು ಹೋಯಿತು. ರಾಗಾದಿ ಉದ್ರೇಕ ಅಥವಾ ದ್ವೇಷಾದಿಗಳ ಉದ್ರೇಕದಿಂದ ಸಂಭವಿಸಬಹು

ವಿಷ್ಟಿಗೃಹೀತಃ–ರಾಜನ ಬಿಟ್ಟಿಗೆ ಸಿಕ್ಕಿರುವ (ಯಾವ ಕೂಲಿ ಇಲ್ಲದೇ ದುಡಿಯ ಬೇಕಾದ ದಾಸನಂತೆ) ಪುರುಷನಂತಿರುವುದರಿಂದ), ಅನಾದ್ಯನಿಷ್ಟಕರ್ಮಾಣಿ– ಅನಾದಿಕರ್ಮಗಳಲ್ಲಿ ತನಗೆ ಅನಿಷ್ಟವಾದ (ಅಹಿತಗಳಾದ ದುಷ್ಕರ್ಮಗಳನ್ನು) ಕರ್ಮಗಳನ್ನು, ಧ್ರುವಂ – ನಿಶ್ಚಯವಾಗಿಯೂ, ಅನ್ಯವಶಃ – ಅನ್ಯಚೇತನವಶ ನಾಗಿಯೇ, ಕರೋತಿ–ಮಾಡುತ್ತಾನೆಂದೇ (ಅಂಗೀಕರಿಸಬೇಕಾಗುತ್ತದೆ).

**ನಿತ್ಯೋ ಜೀವೋ ಸ್ವತಂತ್ರಶ್ಚೇದನಿತ್ಯಂ ಕರ್ಮಜನ್ಮನಿ ।**
**ಸ್ಥಿತೌ ಲಯೇ ಪರಾಪೇಕ್ಷಮನ್ಯಾಧೀನಂ ಕಥಂ ನ ತತ್ ॥ ೭೨೪ ॥**

ಕರ್ಮಕ್ಕೆ ಪ್ರೇರಕವಾಗಲಾರದು ; ತನಗೆ ಅಹಿತವಾದ ದುಷ್ಕರ್ಮವು ತನ್ನಿಂದಲೇ ಸಂಭವಿಸಲಾರದು ; ಆದ್ದರಿಂದ ಆ ಪೂರ್ವಕರ್ಮಕ್ಕೂ, ಅನ್ಯಪ್ರೇರಕ ಚೇತನನಿರ ಬೇಕೆಂದು ಪ್ರಾಪ್ತವಾಗುತ್ತದೆ; ಒಬ್ಬ ಅಸ್ವತಂತ್ರನು, ಮತ್ತೊಬ್ಬನಿಗೆ ಪ್ರೇರಕ ನಾಗಿರಲು ಶಕ್ಯವಿಲ್ಲ; ಆದ್ದರಿಂದ ಆ ಚೇತನನು ಸ್ವತಂತ್ರನೇ ಇರಬೇಕೆಂದೂ ಪ್ರಾಪ್ತವಾಗುತ್ತದೆ (೭೨೩). ಜೀವನು ನಿತ್ಯನೂ ಸ್ವತಂತ್ರನೂ ಎಂದು

---

ದಾದರೂ, ಅದಕ್ಕಿಂತ ಅಧಿಕವಾದ ರಾಜಶಾಸನ, ನರಕವಾಸಾದಿಗಳಿಂದ ಜೀವನು ದುಷ್ಕರ್ಮಗಳಿಂದ ಏಕೆ ನಿವೃತ್ತನಾಗುವುದಿಲ್ಲವೆಂಬಲ್ಲಿ ಕಾರಣವನ್ನು ಹೇಳಬೇಕಾಗುತ್ತದೆ ; ಆದ್ದರಿಂದ, ಬಲಾತ್ಕಾರದಿಂದ ಆ ಕರ್ಮದಲ್ಲಿ ಜೀವನನ್ನು ಬಲಾತ್ಕರಿಸಿ ಪ್ರವೃತ್ತನಾಗುವಂತೆ ಮಾಡುವ, ಈಶ್ವರನನ್ನೇ ಅಂಗೀಕರಿಸಬೇಕಾಗುತ್ತದೆ. ಪೂರ್ವಕರ್ಮದಿಂದಲೇ ನೂತನ ಕರ್ಮವೆಂದರೆ, ಪುನಃ ಅನ್ಯೋನ್ಯಾಶ್ರಯದೋಷವು ಪ್ರಸಕ್ತವಾಗುತ್ತದೆ ; ಕರ್ಮವು ಜಡ ವಾದ್ದರಿಂದ, ಸ್ವತಂತ್ರನಾದ ಒಬ್ಬ ಚೇತನನೇ ಅವಶ್ಯಕವಾಗುತ್ತದೆ (ಅನ್ಯಪುರುಷರಲ್ಲಿ ಕಂಡ ರಾಗದ್ವೇಷಾದಿಗಳೇ ಕಾರಣಗಳೆನ್ನಬೇಕಾಗುತ್ತದೆ; ಏವಮಾದಿ ಆಕ್ಷೇಪಗಳಿಗೆ ನಿಲುಗಡೆ ಇಲ್ಲದಂತಾಗುತ್ತದೆ ; ಅನಾದಿ ಕರ್ಮವೂ ಈಗ ಪ್ರವೃತ್ತವಾಗುವ ಅನಿಷ್ಟಪ್ರದಕರ್ಮಕ್ಕೆ ಕಾರಣವಾಗಲಾರದು ; ಪ್ರೇರಕವೆಂಬ ಅನಾದಿಕರ್ಮವಾದರೂ ಅನಿಷ್ಟಕರ್ಮವೇ (ದುಷ್ಕರ್ಮವೇ) ಆಗಿರಬೇಕು ; ಪರಕೃತಕರ್ಮಗಳು ತಮ್ಮ ಫಲರೂಪ ನೂತನ ಕರ್ಮ ಪ್ರೇರಕಗಳಾಗಲಾರವು : ಭೃತ್ಯನಂತಿರುವ ಜೀವನ ಆ ಹಿಂದಿನ ಕರ್ಮವು, ಯಾರಿಂದ ಮಾಡಲಾದುದೆಂಬ ಪ್ರಶ್ನೆಯೂ ಹಾಗೆಯೇ ಉಳಿಯುತ್ತದೆ; ಮತ್ತೊಬ್ಬ ಜೀವನಿಂದ ಮಾಡಿದ ಕರ್ಮವು, ಅನ್ಯಪ್ರೇರಕವಾಗಲು ಸಂಬಂಧವಿಲ್ಲ; ಆ ಜೀವನೂ (ವಿಷ್ಟಿಗೃಹೀತ) ಪುರುಷನೇ ಆಗುತ್ತಾನೆ ; ಹೀಗೆ ಯುಕ್ತಿಯೂ, ಬಲಾತ್ ಕಾರಯಿತೃವಾದ (ಮಾಡಿರುವ) ಅಧಿಕೃತಪುರುಷನು ಆವಶ್ಯಕನಾಗಬೇಕಾಗುತ್ತದೆ : ಆದ್ದರಿಂದ ಪೂರ್ವ ಕರ್ಮವಾಗಲಿ, ಈಶ್ವರನಾಗಲಿ, ಹೇಗೆ ಸಿದ್ಧವಾಗದಿರುತ್ತಾನೆ? ಈಶ್ವರನು ಪ್ರೇರಕ, ಪೂರ್ವಕರ್ಮವು ಪ್ರೇರಣೆಯಲ್ಲಿ ನಿಮಿತ್ತವೆಂದು ಅಂಗೀಕರಿಸಬೇಕಾಗುತ್ತದೆ.

ಮತ್ತೂ ಏನೆಂದರೆ, ಈಗಿನ ಕರ್ಮಕ್ಕೆ ಹಿಂದಿನ ಕರ್ಮವೂ, ಅದಕ್ಕೆ ಅದರ ಹಿಂದಿನ ಕರ್ಮವೂ ಕಾರಣವೆಂದರೆ, ದುರ್ಜನರ ದುಷ್ಕರ್ಮಗಳ ಪರಂಪರಾ ನಿಯಾಮಕನೂ, ಸಜ್ಜನರ ಸಾಧುಕರ್ಮ ಪರಂಪರಾ ನಿಯಾಮಕನೂ (ಉಭಯ ನಿಯಾಮಕರೂ ಅಸ್ವತಂತ್ರರೇ ಆದ್ದರಿಂದ) ಕರ್ಮಭಿನ್ನ ಕಶ್ಚಿನ್ನಿಯಾಮಕನನ್ನು ಹೇಳಬೇಕಾಗುತ್ತದೆ; ಆಯಾ ಜೀವನ ಯೋಗ್ಯತಾವಶದಿಂದ ಸತ್ಕರ್ಮ ದುಷ್ಕರ್ಮಗಳು ಸಂಭವಿಸುತ್ತದೆಂದರೆ, ಜೀವರಲ್ಲಿ ಯೋಗ್ಯಾಯೋಗ್ಯ ವಿಭಾಗವನ್ನೇ ಪರನು, ಅಂಗೀಕರಿಸುವುದಿಲ್ಲವಾದ್ದರಿಂದ, ಹಾಗೆ ಹೇಳಲು ಬರುವುದಿಲ್ಲ; ಅನ್ಯಮಾರ್ಗವಿಲ್ಲದೇ ಜೀವಯೋಗ್ಯತೆಯೇ ಕಾರಣವೆಂದು ಒಪ್ಪಬೇಕಾದರೆ, ಸ್ವತಂತ್ರ ಈಶ್ವರನನ್ನು ಒಪ್ಪುವುದು ಲಘುತರವಾಗುತ್ತದೆ; ಮತ್ತು ಜೀವಗತಯೋಗ್ಯತೆಯೂ, ಜೀವನಂತೆ ಪರನಿಯಮ್ಯವೇ ಆಗಬೇಕಾಗುತ್ತದೆ; ನಿತ್ಯಚೇತನನಾದ ಜೀವನಿಗೆ ಸ್ವಾತಂತ್ರ್ಯಭಾವವನ್ನು ತಿಳಿದು, ಕರ್ಮಸಹಾಯದಿಂದ ಹಾಗೆ ಪ್ರವೃತ್ತಿಯುಂಟಾಗುತ್ತದೆಂದರೆ, ಅನಿತ್ಯವೂ ಜಡವೂ ಆದ ಕರ್ಮವು ಸುತರಾಂ ಅಸ್ವತಂತ್ರವಾದ್ದರಿಂದ, ಜೀವನಿಗೂ ಕರ್ಮಕ್ಕೂ ಉಭಯಕ್ಕೂ ನಿಯಾಮಕನಾದ ಸ್ವತಂತ್ರ ಈಶ್ವರನು ಬಲಾತ್ (ಸಂದರ್ಭಸನ್ನಿವೇಶಗಳ ಬಲದಿಂದಲೇ) ಸಿದ್ಧನಾಗುತ್ತಾನೆ, ಎನ್ನುತ್ತಾರೆ :—

ಜೀವಃ–ಜೀವನು, ನಿತ್ಯಃ–ನಿತ್ಯನೂ, ಸ್ವತಂತ್ರಶ್ಚ-ಸ್ವತಂತ್ರನೂ, ಚೇತ್–ಎಂದಾದರೆ, ಅನಿತ್ಯಂ – ಅನಿತ್ಯಗಳಾದ, ಕರ್ಮಜನ್ಮನಿ – ಕರ್ಮಜನ್ಮಗಳು, ಸ್ಥಿತೌ – ಸ್ಥಿತಿಕಾಲದಲ್ಲಿ, ಲಯೇ – ಪ್ರಲಯದಲ್ಲಿಯೂ, ಅನ್ಯಾಧೀನಂ – ಅನ್ಯಾಧೀನವೂ, ಪರಾಪೇಕ್ಷಂ–ಪರನನ್ನು (ಮತ್ತೊಬ್ಬನನ್ನು) ಅಪೇಕ್ಷಿಸುವುದೂ, ತತ್–ಆ ಕಾರಣದಿಂದ (ಜೀವನು ನಿತ್ಯನೂ ಸ್ವತಂತ್ರನೂ ಆದ್ದರಿಂದ), ಕಥಂ ನ–ಆಗದಿರುವುದು ಹೇಗೆ? (ಆಗಿರುವುದು ಸರ್ವಾನುಭವಸಿದ್ಧವಾಗಿದೆ; ಇದರ ಕಾರಣವನ್ನು ತಿಳಿಯಬೇಕಲ್ಲವೇ ?).

---

ತಿಳಿಯುವುದಾದರೆ, ಸ್ಥಿತಿಕಾಲದ ಮತ್ತು ಲಯಕಾಲದ ಅನ್ಯಾಧೀನವು ಯುಕ್ತವಾಗುವುದಿಲ್ಲ; ಸ್ಥಿತಿಕಾಲದಲ್ಲಿ ಪರಾಧೀನತ್ವವೂ ಲಯಕಾಲದ ಪರಾಧೀನತ್ವವೂ ಸರ್ವಾನುಭವಸಿದ್ಧವಾಗಿದೆ; ಜನ್ಮ, ಕರ್ಮಗಳೆರಡೂ ಅನಿತ್ಯವೂ ಪರಾಧೀನವೂ ಆಗಿವೆ; ಸ್ವೇಚ್ಛೆಯಿಂದ ಜೀವನು, ಇಚ್ಛಿತವಾದ ಜನ್ಮವನ್ನು ಹೊಂದುವುದಿಲ್ಲ

**ಯತ ಇತ್ಯೇಕವಚನಾದೇಕೋ ದಾಧಾರ ಚೇತ್ಯಲಂ ।**
**ಸ್ಪಷ್ಟಶ್ರುತೇರ್ನ ಕರ್ಮಾಣಿ ಕರ್ಮದ್ವಾರಾ ನ ಚೇತನಾಃ ।**
**ಅನಂತಃ ಸರ್ವಜಗತಾಂ ಕರ್ತಾರೋ ಲಾಘವಾದಪಿ ॥ ೭೨೫ ॥**

ಅನಂತಜೀವರ ಅನಂತಕರ್ಮಗಳ ಕರ್ತೃತ್ವದಲ್ಲಿ ಒಬ್ಬನೇ ಕರ್ತನೆಂದು ಪ್ರತಿಪಾದಿಸುವ ಶ್ರುತಿವಿರೋಧವನ್ನು, ಸಹಾಯಕ ಶ್ರುತಿಯುಳ್ಳ ಯುಕ್ತಿಯನ್ನು ಅಂಗೀಕರಿಸುವುದು ಲಾಘವವೆಂಬ ಯುಕ್ತಿವಿರೋಧವನ್ನೂ, ಪ್ರದರ್ಶಿಸಿ, ಒಬ್ಬ ಶ್ರೀಹರಿಯೇ ಸರ್ವರ ಸರ್ವಕರ್ತನೆಂದು ಸಾಧಿಸುತ್ತಾರೆ :—

ಯತಃ—ಯತಃ ಎಂಬ ('ಯತೋ ವಾ ಇಮಾನಿ ಭೂತಾನಿ ಜಾಯಂತೇ)', ಶ್ರುತಿಯು (ಯಾವ ಕಾರಣದಿಂದ), ಇತಿ ಏಕವಚನಾತ್—('ತದ್ವಿಜಿಜ್ಞಾಸಸ್ವ- ತದ್ಬ್ರಹ') ಎಂದು (ಉಪಸಂಹಾರದಲ್ಲಿ) ಸೃಷ್ಟಿಸ್ಥಿತಿ, ಲಯಾದಿ ಸರ್ವಕ್ಕೂ (ಒಬ್ಬ ಕರ್ತನೆಂದು) ಏಕವಚನಪ್ರಯೋಗದಿಂದ ನಿರ್ದೇಶಿಸಿರುವುದರಿಂದ (ತಸಿಲಂತ ಯತಃ ಎಂಬುದಕ್ಕೆ ಯೇಭ್ಯಃ ಎಂಬ ಬಹುವಚನಾರ್ಥವೂ ಯುಕ್ತವಾಗಬಹು ದೆಂಬುದನ್ನು, ಉಪಕ್ರಮದಲ್ಲಿ, ಅಧೀಹಿ ಭಗವೋ ಬ್ರಹ್ಮೇತಿ—ಒಬ್ಬ ಬ್ರಹ್ಮನು ಉಪಕ್ರಾಂತನಾಗಿರುವುದರಿಂದ, ಬಹುವಚನಾರ್ಥದ ಯೇಭ್ಯಃ ಎಂಬರ್ಥವು ಯುಕ್ತವಾಗುವುದಿಲ್ಲವೆಂದು ಹೇಳಿ ನಿರಾಕರಿಸುವುದರಿಂದಲೂ), ಏಕೋ ದಾಧಾರ ಚ—'ಏಕೋ ದಾಧಾರ ಭುವನಾನಿ ವಿಶ್ವಾ' ಎಂದೂ ('ಯ ಉ ತ್ರಿಧಾತು ಪೃಥಿವೀ- ಮುತದ್ಯಾಮೇಕೋ ದಾಧಾರ ಭುವನಾನಿ ವಿಶ್ವಾ' ಎಂಬ ಶ್ರುತಿಯೂ), ಅಲಂ— ನಿರವಕಾಶವಾಗಿ, ಸ್ಪಷ್ಟಶ್ರುತೇಃ—ಜಗತ್ಕರ್ತನು ಒಬ್ಬನೇ ಎಂದು ಹೇಳುವ ಶ್ರುತಿ ಗಳಿರುವುದರಿಂದಲೂ, ಕರ್ಮಾಣಿ—ಕರ್ಮಗಳು, ನ—ಕರ್ತರಲ್ಲ (ಕರ್ಮಪ್ರವರ್ತಕ ಗಳಲ್ಲಿ), ಕರ್ಮದ್ವಾರಾ—ಕರ್ಮಗಳ ದ್ವಾರ (ಕರ್ಮಗಳನ್ನು ನಿಮಿತ್ತೀಕರಿಸಿ),

---

ಮತ್ತು ಸ್ವೇಚ್ಛಾನುಸಾರವಾದ ಕರ್ಮಗಳನ್ನು ಮಾಡಲಾರನು; ಹೀಗಿರಲು (ಸ್ಥಿತಿಯೂ) (ಕರ್ಮಕರಣವೂ) ಲಯವೂ (ಮರಣವೂ) ಅನ್ಯಾಧೀನಗಳೆಂದು ಹೇಳಲೇನು? (೭೨೪). 'ಯತೋ ಭೂತಾನಿ ಜಾಯಂತೇ'— ಇತ್ಯಾದಿ ಶ್ರುತಿಯು, ಜೀವರು ಯಾವನೊಬ್ಬನಿಂದ ಜನಿಸುವರೋ, ಎಂದು ಮುಂತಾಗಿ ಒಬ್ಬನನ್ನು ತೋರಿಸಿ, 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' ಎಂದು ಆ ಒಬ್ಬನನ್ನೇ ಬ್ರಹ್ಮನೆಂದು ಚಿಂತಿಸಿರೆಂದು, ಸರ್ವರ ಸೃಷ್ಟಿ, ಸ್ಥಿತಿ, ಲಯಾದಿಗಳಿಗೆ ಕಾರಣನು

ಚೇತನಾಃ ನ – ಅನಂತಚೇತನರೂ ಅಲ್ಲ; ಸರ್ವಜಗತಾಂ – ಸರ್ವಜಗತ್ತಿಗೆ (ಅನಂತರ ಜೀವರ ಅನಂತಕರ್ಮಗಳಿಗೆ), ಕರ್ತಾರಃ–ಕರ್ತೃಗಳು, ಲಾಘವಾತ್ ಅಪಿ–ಲಾಘವದಿಂದ ಸಹ (ಬಹುಕರ್ತೃಗಳನ್ನು ಅಂಗೀಕರಿಸುವುದಕ್ಕಿಂತ ಲಘುವಾದ್ದರಿಂದ ಸಹ) ಅನಂತಃ – ಶ್ರೀಹರಿಯು ಒಬ್ಬನೇ (ಆತನೇ ಅನಂತನು) (ಅನಂತ ರೂಪನಾದರೂ, ಎಲ್ಲರೂಪಗಳಿಂದ ಅಭಿನ್ನನೇ ಆಗಿ ಒಬ್ಬನೇ ಆಗಿರುವನು) (ಯತ್ಪ್ರಯಂತ್ಯಭಿಸಂವಿಶಂತೀತಿ, ಪ್ರಾಪ್ಯತ್ವವನ್ನು ಒಬ್ಬನಿಗೇ ಹೇಳಿರುವುದರಿಂದ, ಯುಕ್ತಿಪ್ರೋದ್ಬಲಿತವಾದ ಶ್ರುತಿಸಿದ್ಧನಾದ ಕರ್ತನು, ಪ್ರಾಪ್ಯನೂ ಒಬ್ಬನೇ).

**ಲೋಕೇಽದೃಷ್ಟದ್ವಾರಕರ್ತೃನಾತ್ರಾತ್ ಕ್ವಾಪಿ ಕ್ರಿಯಾಽಜನೇಃ ।**
**ಕೃತಿಪೂರ್ವಕಕರ್ತೈವ ಕರ್ತಾನ್ಯಸ್ತೂಪಚಾರತಃ ।**
**ಅನ್ಯಥಾ ಕನ್ಯಕಾಯಾಃ ಸ್ಯಾದ್ಭರ್ತಾಪಿ ಪಿತೃವತ್ಪಿತಾ ॥ ೭೨೬ ॥**

ಅದೃಷ್ಟದ್ವಾರಾ ಜೀವರಿಗೇ ಜಗತ್ಕರ್ತೃತ್ವವನ್ನು ತಿಳಿಯಬೇಕೆಂಬ ವಾದವನ್ನು ದೂಷಿಸುತ್ತಾರೆ :—

---

ಒಬ್ಬನೇ ಎಂದು ಏಕವಚನ ಪ್ರಯೋಗದಿಂದ ನಿರೂಪಿಸುತ್ತದೆ ; 'ಯ ಉ ತ್ರಿಧಾತು ಪ್ರಥಿವೀಮುತದ್ಯಾಮೇಕೋ ದಾಧಾರ ಭುವನಾನಿ ವಿಶ್ವಾ' ಎಂಬ ಶ್ರುತಿಯೂ, ಸಕಲ ಜಗತ್ತನ್ನು ಧರಿಸಿರುವವನು ಒಬ್ಬನೇ ಎಂದೂ ಹೇಳುತ್ತದೆ; ಜೀವರ ಕರ್ಮಗಳು ಅನಂತವಾಗಿವೆ; ಒಬ್ಬೊಬ್ಬರ ಒಂದೊಂದು ಕರ್ಮಕ್ಕೂ ಒಬ್ಬ ಪ್ರೇರಕ ಚೇತನನ್ನು (ಪೂರ್ವ ಕರ್ಮಾದಿಗಳು ಜಡವಾದ್ದರಿಂದ) ಹೇಳಿ, ಅನಂತ ಪ್ರೇರಕ ಚೇತನರನ್ನು ತಿಳಿಯುವುದು ಶ್ರುತಿವಿರುದ್ಧವಾಗುತ್ತದೆ; ಹಾಗೆ ಕಲ್ಪಿಸುವುದು ಗುರುಭೂತವೂ ಆಗುತ್ತದೆ; ಆದ್ದರಿಂದ ಲಾಘವವೆಂಬ ಯುಕ್ತಿ ಬಲದಿಂದಲೂ, ಶ್ರುತಿಯ ಸ್ಪಷ್ಟೋಕ್ತಿಯಿರುವುದರಿಂದಲೂ, ಸರ್ವ ಜಗತ್ತಿನ ಸರ್ವಕರ್ತನು ಅನಂತನಾದ (ಅನಂತರೂಪಗಳಿಂದ ಅಭಿನ್ನನಾದ) ಒಬ್ಬ ಸ್ವತಂತ್ರ ಈಶ್ವರನೆಂಬ ಪರಮ ಚೇತನನೆಂದು ಸಿದ್ಧವಾಗುತ್ತದೆ (೭೨೫). ಲೋಕದಲ್ಲಿ ಅದೃಷ್ಟದ್ವಾರಕ ಕರ್ತೃತ್ವವು (ಅದೃಷ್ಟ ಸಹಕೃತ ಜೀವನಿಂದ ಕಾರ್ಯನಿಷ್ಪತ್ತಿಯು) ಎಲ್ಲಿಯೂ ಕಂಡುಬರುವುದಿಲ್ಲ; ಕೃತಿಪೂರ್ವಕ ಕರ್ತನೇ ಕಾರ್ಯಸಮರ್ಥ

ಲೋಕೇ – ಜಗತ್ತಿನಲ್ಲಿ, ಅದೃಷ್ಟದ್ವಾರಕರ್ತೃಮಾತ್ರಾತ್ – ಅದೃಷ್ಟದ್ವಾರ ಕರ್ತೃಮಾತ್ರದಿಂದ, ಕ್ವಾಪಿ–ಎಲ್ಲಿಯೂ, ಕ್ರಿಯಾಜನೇಃ–ಕ್ರಿಯೆಯ ಉತ್ಪತ್ತಿಯು (ಕಾರ್ಯೋತ್ಪತ್ತಿಯು) ಕಂಡುಬರುವುದಿಲ್ಲವಾದ್ದರಿಂದ, ಕೃತಿಪೂರ್ವಕ ಕರ್ತಾ ಏವ ಕರ್ತಾ – ಕ್ರಿಯಾಪೂರ್ವಕಪ್ರವೃತ್ತನಾದ ಕರ್ತನೇ ಕರ್ತೃವೆನಿಸುತ್ತಾನೆ; ಅನ್ಯಸ್ತು–ಅದಿಲ್ಲದ ಅನ್ಯನು, ಉಪಚಾರತಃ–ಉಪಚಾರಕ್ಕೆ ಮಾತ್ರ ಕರ್ತನೆನಿಸು ವನು ; ಮುಖ್ಯಕರ್ತನಲ್ಲ (ಘಟಪಟಾದಿಕಾರ್ಯಗಳು, ಕೃತಿಪೂರ್ವಕಪ್ರವೃತ್ತರಾದ ಕುಂಬಾರ ನೇಯ್ಕಾರರಿಲ್ಲದೆ ಕಂಡುಬರುವುದಿಲ್ಲ) ; [1] (ಕೃತಿಪೂರ್ವಕ ಕರ್ತೃತ್ವಾ ಭಾವದಲ್ಲಿ ಜಗದ್ರೂಪಕಾರ್ಯತ್ವವು ಸಿದ್ಧಿಸುವುದಿಲ್ಲವೆಂಬಲ್ಲಿ ಯುಕ್ತಿಯನ್ನು ಇದರಿಂದ ಸೂಚಿಸಲಾಗಿದೆ); ಅನ್ಯಥಾ–ಹಾಗಲ್ಲದಿದ್ದರೆ (ವಿಪಕ್ಷದಲ್ಲಿ ಬಾಧಕ ವನ್ನೂ ಹೇಳುತ್ತಾರೆ), ಕೃತಿಪೂರ್ವಕಕರ್ತನಂತೆ, ಅದೃಷ್ಟದ್ವಾರಕರ್ತನೂ ಮುಖ್ಯಕರ್ತನೆಂದಾದರೆ, ಕನ್ಯಕಾಯಾಃ–ಕನ್ಯೆಯೊಬ್ಬಳ, ಭರ್ತಾ ಅಪಿ–(ಅದೃಷ್ಟ ದ್ವಾರಾಕರ್ತನೆಂಬ) ಭರ್ತನೂ (ಪತಿಯೂ), ಪಿತೃವತ್–ಪಿತನಂತೆ, ಪಿತಾ–

---

ನಾಗಿರುತ್ತಾನೆ; ಕುಲಾಲ ಕುವಿಂದಾದಿಗಳಿಂದಲೇ ಘಟಪಟಾದಿ ವಸ್ತು ನಿರ್ಮಾಣವು ಕಂಡಿರುತ್ತದೆ; ಕೃತಿಪೂರ್ವಕ ಕರ್ತೃತ್ವವಿಲ್ಲದುದು, ಉಪಚಾರಕ್ಕೆ ಮಾತ್ರ ಕರ್ತನೆಂದು ಹೇಳಲ್ಪಡುತ್ತದೆ ; ಅದೃಷ್ಟದ್ವಾರಾ ಕರ್ತನೂ ಮುಖ್ಯಕರ್ತ ನೆಂದಾಗುವುದಾದರೆ, ಕನ್ಯೆಯ ಅದೃಷ್ಟದ್ವಾರಾ ಆಕೆಯ ಕರ್ತನಾಗುವ ಭರ್ತನೂ, ಆಕೆಯ ತಂದೆಯಂತೆ, ಮುಖ್ಯಕರ್ತನಾಗಲಿ ಎಂದು ಹೇಳಬೇಕಾದೀತು ; ಅದು

---

[1] ಸಸ್ಯಾಂಕುರಾದಿ ಕಾರ್ಯದಲ್ಲಿ ಕೃತಿಪೂರ್ವಕ ಪ್ರವೃತ್ತನಾದ ಕರ್ತೃವು ಕಂಡು ಬರುವುದಿಲ್ಲವಷ್ಟೆ: ಹೀಗೆಯೇ ಅದೃಷ್ಟದ್ವಾರಾ ಕಾರ್ಯವಾಗುತ್ತದೆಂದು ತಿಳಿಯುವುದು ಅಪಸಿದ್ಧಾಂತವಾಗುತ್ತದೆ; ಕುಂಬಾರಾದಿಗಳು ಘಟಾದಿಗಳ ಕರ್ತರಲ್ಲದಿದ್ದರೆ, ವ್ಯತಿರೇಕ ದಿಂದ ಅವರಿಲ್ಲದೆಯೂ ಘಟಾದಿಗಳ ಉತ್ಪತ್ತಿಯು ಸಂಭವಿಸಬೇಕಾಗುತ್ತದೆ. ಆ ಕಾರಣ ಕಾರ್ಯೋತ್ಪತ್ತಿ ಪ್ರಸಂಗವೇ ಸರ್ವತ್ರ ಪ್ರಾಪ್ತವಾಗಬೇಕಾಗುತ್ತದೆ. ಕೇವಲ ಘಟದ ಎರಡು ತುಂಡುಗಳ ಜೋಡಣೆಯಿಂದ (ಕಪಾಲದ್ವಯ ಸಂಯೋಗದಿಂದ) ಘಟೋತ್ಪತ್ತಿಯಾಗುವು ದೆಂದು ತಿಳಿಯುವುದಕ್ಕೂ ಬರುವುದಿಲ್ಲ; ಮೊದಲು ಘಟವಿರಬೇಕು; ಅದನ್ನು ಎರಡು ಹೋಳು ಮಾಡುವ (ನಾಶಕರ್ತನು) ಕರ್ತೃವಿರಬೇಕು ; ಎರಡು ಕಪಾಲಗಳನ್ನು ಸೇರಿಸಿದ ನಂತರವೂ, ದಂಡಚಕ್ರಾದಿ ಉಪಕರಣಗಳಿಂದ, ಪೃಥುಬುಧ್ನೋದರಾಕಾರ ಕರಣ, ಕಂಠ ಪೀಠಕರಣಾದಿಗಳಿಗೆ ಕುಂಬಾರನ ಅವಶ್ಯಕತೆಯೂ ತಪ್ಪುವುದಿಲ್ಲ (ಕುಂಭಕಾರನೆಂಬ ಶಬ್ದವೂ ಅರ್ಥಶೂನ್ಯವಾಗುತ್ತದೆ).

ತಂದೆಯು, ಸ್ಯಾತ್–ಆಗಲಿ (ಇದು ಯುಕ್ತವಲ್ಲ; ಆದ್ದರಿಂದ ಕೃತಿಪೂರ್ವಕ ಕರ್ತನೇ ಮುಖ್ಯಕರ್ತನು).

**ಅತೋ ನಾಮುಖ್ಯಕರ್ತ್ರೈವ ಮಹಾಕಾರ್ಯಮಿದಂ ಭವೇತ್ ।**
**ಕಿಂ ಸ್ತ್ರೀಪುಂಸೌ ವಿನಾಪಿ ಸ್ಯಾತ್ಪುತ್ರಃ ಪುತ್ರೇಷ್ಟಿಮಾತ್ರತಃ ॥ ೭೨೭ ॥**

ಅತಃ – ಆದ್ದರಿಂದ (ಕೃತಿಪೂರ್ವಕಕರ್ತನೇ ಮುಖ್ಯಕರ್ತನಾದ್ದರಿಂದ), ಇದಂ–ಈ (ಮಹೀಮಹೀಧರಾದಿ), ಮಹಾಕಾರ್ಯಂ – ಜಗನ್ನಿರ್ಮಾಣರೂಪ ಮಹಾಕಾರ್ಯವು (ಘಟಾದ್ಯಲ್ಪಕಾರ್ಯಕ್ಕೂ ಕರ್ತೃದ್ವಯಾಪೇಕ್ಷೆಯಿರಲು, ಮಹಾಕಾರ್ಯಕ್ಕೆ ಕರ್ತೃದ್ವಯದ), (ಮುಖ್ಯಾಮುಖ್ಯಕರ್ತೃಗಳು ಅವಶ್ಯಕ ವೆಂದು ಹೇಳಲೇನು?); ಅಮುಖ್ಯಕರ್ತ್ರಾ–ಕೇವಲ ಅದೃಷ್ಟವಿಶೇಷದಿಂದಲೇ, ನ ಭವೇತ್–ಆಗುವುದಿಲ್ಲ; ಸ್ತ್ರೀಪುಂಸೌ ವಿನಾಪಿ–ಸ್ತ್ರೀಪುರುಷರಿಲ್ಲದೇ, ಪುತ್ರೇಷ್ಟಿ ಮಾತ್ರತಃ–ಪುತ್ರೇಷ್ಟಿಜನ್ಯವಾದ ಅದೃಷ್ಟಮಾತ್ರದಿಂದ, ಪುತ್ರಃ ಸ್ಯಾತ್ ಕಿಂ– ಪುತ್ರಜನ್ಮವು, ಆಗುವುದೇನು?

**ನಚೇದುಪಾದಾನಮಪಿ ತದ್ವತ್ಸ್ಯಾದೌಪಚಾರಿಕಂ ।**
**ದೃಷ್ಟಾನುಸಾರತಸ್ತಚ್ಚೇತ್ಕರ್ತಾಪಿ ಸ್ಯಾತ್ತಥೈವ ಹಿ ॥ ೭೨೮ ॥**

ಉಪಾದಾನಪ್ರತಿಬಂದಿಯಿಂದ ಅದೃಷ್ಟಕರ್ತೃವೇ ಮುಖ್ಯಕರ್ತನಾಗಲೆಂಬ ವಾದವನ್ನು ಉತ್ತರಿಸುತ್ತಾರೆ:—

---

ಯುಕ್ತವಾಗುವುದಿಲ್ಲ; ಆದ್ದರಿಂದ ಕೃತಿಯಲ್ಲಿ ಪ್ರವೃತ್ತನಾದ ಕಾರ್ಯಕರ್ತನೇ ಮುಖ್ಯಕರ್ತನು (೭೨೬). ಆದ್ದರಿಂದ, ಅಮುಖ್ಯಕರ್ತನಿಂದ (ಕಾರ್ಯಕ್ಕೆ ಕಾರಣರೂಪದಿಂದ ಕರ್ತೃವಾದ ಮಾತ್ರದಿಂದ) ಆಗುವುದಿಲ್ಲವಾದ್ದರಿಂದ, ಈ (ಭೂಭೂಧರಾದಿ ಮಹಾ ಜಗತ್ತಿನ) ಸೃಷ್ಟ್ಯಾದಿ ಕಾರ್ಯವು, ಕೃತಿಪೂರ್ವಕ ಕರ್ತನೆಂಬ ಮುಖ್ಯಕರ್ತನಿಲ್ಲದೇ, ನಿಷ್ಪನ್ನವಾಗುವುದಿಲ್ಲ; ಒಂದು ಕಾರ್ಯಸಿದ್ಧಿಗೆ ಅದೃಷ್ಟವೂ ಕಾರಣವೆಂದ ಮಾತ್ರಕ್ಕೆ ಆ ಕಾರಣವನ್ನು ಕರ್ತೃವೆಂದು ಅಂಗೀಕರಿಸಲು ಬರುವುದಿಲ್ಲ; ಸಂತಾನೋತ್ಪತ್ತಿಯಲ್ಲಿ ಕೃತಿಪೂರ್ವಕ ಕರ್ತರಾದ ಸ್ತ್ರೀಪುರುಷ ರಿಲ್ಲದೇ, ಕೇವಲ ಪುತ್ರೇಷ್ಟಿಯಿಂದ ಉತ್ಪನ್ನವಾದ ಅದೃಷ್ಟವು ಕಾರಣವಾಗ ಲಾರದಷ್ಟೆ; ಪುತ್ರೋತ್ಪತ್ತಿಯಲ್ಲಿ ಅದೃಷ್ಟಕಾರಣವು, ಅಮುಖ್ಯವು; ಮುಖ್ಯ ಕರ್ತೃಗಳಾದ ಸ್ತ್ರೀಪುರುಷರು ಕಾರ್ಯಪ್ರವೃತ್ತವಾಗಬೇಕಾದುದು ಅವಶ್ಯಕ (೭೨೭). ಕೃತಿಪೂರ್ವಕ ಕರ್ತನೇ (ಚೇತನಕರ್ತನೇ) ಮುಖ್ಯಕರ್ತನಲ್ಲದಿದ್ದರೆ,

ನ ಚೇತ್–ಕೃತಿಪೂರ್ವಕಕರ್ತನೇ ಮುಖ್ಯಕರ್ತನಲ್ಲದಿದ್ದರೆ, ಉಪಾದಾನಂ ಅಪಿ–ಉಪಾದಾನವೂ (ಘಟದ ಉಪಾದಾನಕಾರಣವಾದ ಮೃತ್ತಿಕೆಯಂತೆ), ತದ್ವತ್–ಅದರಂತೆ (ಔಪಚಾರಿಕಕರ್ತನಂತೆ), ಸ್ಯಾತ್–(ಜಗತ್ತಿನ ಸೃಷ್ಟ್ಯಾದಿಯೂ) ಆಗಲಿ; ದೃಷ್ಟಾನುಸಾರತಃ–ದೃಷ್ಟವಾದ (ಘಟಾದಿ) ಕಾರ್ಯಾನುಸಾರವಾಗಿ, ತತ್ ಚೇತ್–ಅದು ಆಗುತ್ತದೆ ಎಂದರೆ (ಉಪಾದಾನವು ಅದೃಷ್ಟ ಕಾರಣವಲ್ಲ, ಎಂದರೆ), (ಜಗದುಪಾದಾನವಾದ ಪರಿಮಾಣು ಮೊದಲಾದುದೂ, ಹಾಗೆಯೇ ಕಾರಣವಾಗಲಿ ಎಂದರೆ), ಕರ್ತಾಪಿ–ಕರ್ತನೂ, ತಥಾ ಏವ ಸ್ಯಾತ್ ಹಿ–ಘಟಕ್ಕೆ ಕುಂಬಾರನಂತೆ, ಜಗತ್ಸೃಷ್ಟಿಗೂ, ಉಪಾದಾನಕಾರಣದೊಂದಿಗೆ, ಕೃತಿಪೂರ್ವಕಕರ್ತನೂ ಒಬ್ಬನಿರಲಿ.

**ಅದೃಷ್ಟಮಪಿ ಬೀಜಾದ್ಯಂ ಕಲ್ಪ್ಯಂ ಫಲಬಲಾದ್ಯಥಾ ।**
**ತಥಾऽದೃಷ್ಟೋऽಪಿ ಕರ್ತಾಸ್ಯ ಕಲ್ಪ್ಯಃ ಕೋऽಪ್ಯುರುಶಕ್ತಿಮಾನ್**
**॥ ೭೨೯ ॥**

ಕೃತಿಪೂರ್ವಕಕರ್ತನಾದ ಕುಂಬಾರಾದಿ ಕರ್ತೃವು ದೃಷ್ಟನಾಗಿದ್ದಾನೆ; ಜಗತ್ಕರ್ತನು ಕಾಣುವುದಿಲ್ಲವಾದ್ದರಿಂದ ಕಲ್ಪಿಸುವುದು ಹೇಗೆಂದರೆ, ಹೇಳುತ್ತಾರೆ:—

ಯಥಾ–ಹೇಗೆ, ಅದೃಷ್ಟಂ ಅಪಿ–ಕಾಣದಿದ್ದರೂ, ಫಲಬಲಾತ್–ಫಲವು ಕಾಣುವುದೆಂಬ ಬಲದಿಂದ, ಬೀಜಾದ್ಯಂ–(ಅಂಕುರಾದಿ ದರ್ಶನದಿಂದ) ಬೀಜಾದಿ

---

ಉಪಾದಾನದಂತೆ ಔಪಚಾರಿಕಕರ್ತೃವೂ ಆಗಲಿ, ಘಟಕ್ಕೆ ಉಪಾದಾನವಾದ ಮೃತ್ತಿಕೆಯಂತೆ, ಜಗದ್ರೂಪದ ಕಾರ್ಯಕ್ಕೆ, ಪರಮಾಣು ಮೊದಲಾದ ಉಪಾದಾನವೂ ಇದೆ; ಘಟಾದಿ ದೃಷ್ಟವಾದ ಕಾರ್ಯಗಳಂತೆ ಆಗಲಿ ಎಂದರೆ, ಘಟಾದಿ ಕಾರ್ಯಕ್ಕೆ ಉಪಾದಾನದೊಂದಿಗೆ ಕುಂಬಾರನೂ ಅವಶ್ಯಕವಾದಂತೆ, ಜಗತ್ತಿಗೂ ಕೃತಿಪೂರ್ವಕ ಕರ್ತನೂ ಒಬ್ಬನಿರಲೆಂದು ಅಂಗೀಕರಿಸಬೇಕಾಗುತ್ತದೆ (೭೨೮). ಕೃತಿಪೂರ್ವಕ ಕರ್ತನು ಕುಲಾಲನಂತೆ ಕಾಣುವುದಿಲ್ಲವೆಂದರೆ, ಆತನನ್ನು—ಅಂಥ ಕರ್ತನನ್ನು ಕಲ್ಪಿಸಬೇಕು; ಅಂಕುರಾದಿ (ಫಲ) ದರ್ಶನದಿಂದ, ಬೀಜಾದಿ ಕಾರಣವನ್ನು ಕಾಣದಿದ್ದರೂ (ಇರಲೇಬೇಕೆಂದು) ಕಲ್ಪಿಸುವಂತೆ, ಭೂಭೂಧರಾದಿ ಮಹಾ ವಿಶ್ವಸೃಷ್ಟಿಗೆ ಅವಶ್ಯಕವಾದ ಅಚಿಂತ್ಯ (ಅತಿಶಯ) ಸಾಮರ್ಥ್ಯವುಳ್ಳ ಮುಖ್ಯಕರ್ತನೊಬ್ಬನನ್ನು, ಕಾರ್ಯರೂಪವಾದ ಜಗತ್ತಿನ ಪ್ರತ್ಯಕ್ಷ ದರ್ಶನ

ಗಳನ್ನು, ಕಲ್ಪ್ಯಂ–ಕಲ್ಪಿಸಬೇಕಾಗುವುದೋ, ತಥಾ–ಹಾಗೆಯೇ, ಅದೃಷ್ಟಃ ಅಪಿ–ಪ್ರತ್ಯಕ್ಷಕಾಣದಿದ್ದರೂ, ಕೋಪಿ–ಒಬ್ಬ, ಉರುಶಕ್ತಿಮಾನ್–(ಭೂಮ್ಯಾದಿ ನಿರ್ಮಾಣ ಮಾಡಬಲ್ಲ ಅತಿಶಯ ಶಕ್ತಿಯುಳ್ಳವನೊಬ್ಬನು) ಸಮರ್ಥಕರ್ತನು, ಕರ್ತಾ – (ಕೃತಿಪೂರ್ವಕಕರ್ತನಾದ) ಮುಖ್ಯಕರ್ತನು, ಅಸ್ಯ – ಈ ಜಗತ್ತಿಗೆ (ಜಗತ್ಸೃಷ್ಟ್ಯಾದಿಕರ್ತೃತ್ವ ವಿಷಯಕ್ಕೆ), ಕಲ್ಪ್ಯಃ–ಕಲ್ಪಿಸಬೇಕಾಗುತ್ತದೆ.

**ನ ಚ ಕಾಲಾದಿಕಂ ತಸ್ಯ ಪ್ರೇರಕಂ ಜಡವಸ್ತುನಃ ।**
**ಸ್ವತಃಪ್ರವೃತ್ತ್ಯಯೋಗೇನ ಪ್ರೇರ್ಯತ್ವಾತ್ ಕರ್ತೃತೋಽನ್ಯತಃ**
|| ೭೩೦ ||

ಒಬ್ಬ ನಿಯಾಮಕನಿರಲಿ; ಆದರೆ ಆತನು ಈಶ್ವರನೇ ಆಗಬೇಕೇಕೆ? ಸ್ವತಃ ಜನ್ಮಾದಿಶೂನ್ಯವಾದ ಕಾಲಾದಿಯೇ ನಿಯಾಮಕವಾಗಲಿ—ಜಗತ್ಕರ್ತಾ ಕಾಲಾದಿಯೇ ಆಗಲಿ, ಎಂದರೆ, ಹೇಳುತ್ತಾರೆ:—

ತಸ್ಯ–ಜೀವಾದಿ ಜಗತ್ತಿಗೆ, ಪ್ರೇರಕಂ–ಪ್ರೇರಕವಾದುದು, ಕಾಲಾದಿಕಂ–ಕಾಲಾದಿಯು (ಪ್ರಕೃತ್ಯಾದಿಕವು ಆದಿಪದದಿಂದ ಗ್ರಾಹ್ಯವು), ನ ಚ–ಆಗುವುದಿಲ್ಲ (ಏಕೆಂದರೆ); ಜಡವಸ್ತುನಃ–ಜಡವಾದ ಕಾಲಾದಿಗೆ, ಸ್ವತಃ ಪ್ರವೃತ್ತ್ಯಯೋಗೇನ–ತನ್ನಿಂದ ತಾನೇ ಕಾರ್ಯ ಪ್ರವೃತ್ತವಾಗುವ ಶಕ್ತಿಯು ಕೂಡುವುದಿಲ್ಲವಾದ್ದರಿಂದ, ಅನ್ಯತಃ ಕರ್ತೃತಃ–ಜಡಭಿನ್ನ ಚೇತನನಿಂದ (ಚೇತನಕರ್ತನಿಂದ), ಪ್ರೇರ್ಯತ್ವಾತ್ – (ಕಾಲಾದಿಜಡವು ಸದಾ) ಪ್ರೇರ್ಯವೇ ಆದ್ದರಿಂದ (ಅದು ಜಗತ್ಕಾರಣವಾಗಲಾರದು); (ಕಾಲಚಿಂತಕರಮತವೂ, ಪ್ರಧಾನವೇ (ಪ್ರಕೃತಿಯು) ಜಗತ್ಕರ್ತುವೆಂದು ಹೇಳುವ ಸಾಂಖ್ಯಮತವೂ ಇದರಿಂದ ನಿರಾಕೃತವಾದವು).

**ನಾಪಿ ತತ್ಪ್ರೇರಕೋ ಬ್ರಹ್ಮಾ ನೇಶೋ ನೇಂದ್ರೋಽಪರೇ ಕುತಃ ।**
**ಅಂಘ್ರ್ಯರ್ಚನೇನ ತತ್ತೀರ್ಥಜುಷ್ಟ್ಯಾ ತದ್ಗತ್ತಭೂತ್ವತಃ || ೭೩೧ ||**

---

ದಿಂದಲೇ, ಕಲ್ಪಿಸಬೇಕಾಗುತ್ತದೆ (೭೨೯). ಜಗದ್ರೂಪದ ಈ ಮಹಾ ಕಾರ್ಯಕ್ಕೆ, ಕಾಲ ಪ್ರಕೃತ್ಯಾದಿಗಳೂ ಕಾರಣಗಳಲ್ಲ; (ಕರ್ತೃಗಳಲ್ಲ) ಏಕೆಂದರೆ, ಅವು ಸ್ವರೂಪದಿಂದಲೇ ಜಡಪದಾರ್ಥಗಳು; ಅವುಗಳಿಗೆ ಸ್ವತಃ ಪ್ರವೃತ್ತಿಯು ಕೂಡುವುದಿಲ್ಲ; ಸ್ವತಃ ಪ್ರವೃತ್ತಿ ಸಾಮರ್ಥ್ಯವುಳ್ಳ ಅನ್ಯ ಚೇತನದಿಂದ ಪ್ರೇರ್ಯಗಳಾಗಿರುವುವಲ್ಲದೇ, ಅನ್ಯಪ್ರೇರಕವಲ್ಲ (೭೩೦). ಬ್ರಾಹ್ಮ, ಶೈವಮತಾನುಯಾಯಿಗಳು ಹೇಳುವಂತೆ

ಬ್ರಾಹ್ಮ, ಶೈವಾದಿಮತದಂತೆ, ಬ್ರಹ್ಮಶಿವಾದಿಗಳೇ ಕರ್ಮನಿಯಾಮಕರಾಗಲಿ, ಎಂದರೆ ಹೇಳುತ್ತಾರೆ :—

ತತ್ಪ್ರೇರಕಃ–ಕರ್ಮಪ್ರೇರಕನು, ಬ್ರಹ್ಮಾ ನ–ಬ್ರಹ್ಮನೂ ಅಲ್ಲ; ಈಶಃ ಅಪಿ–ರುದ್ರನೂ, ನ–ಅಲ್ಲ, ಇಂದ್ರಃ ನ–ಇಂದ್ರನಲ್ಲ; ಅಪರೇ ಕುತಃ–ಅನ್ಯ (ಇಂದ್ರಿಯಾಭಿಮಾನಿಗಳೂ ಅಲ್ಲದ) ದೇವತೆಗಳು, ಹೇಗೆ ಕರ್ಮ ಪ್ರೇರಕರಾಗುವರು? (ಕೈಮುತ್ಯಸಿದ್ಧಿಗಾಗಿ ಇದನ್ನು 'ಅಪರೇಕುತಃ' ಎಂದಿರುವರು); ಅಂಘ್ರ್ಯರ್ಚನೇನ–(ಬಾಹ್ಯಜಲಧಾರೆಯಲ್ಲಿ ಪಾದಪ್ರಕ್ಷಾಲನಮಾಡಿದ ಬ್ರಹ್ಮನು, ಶ್ರೀಹರಿಯಿಂದ ಪ್ರೇರ್ಯನಾದ ಬ್ರಹ್ಮನು ಹೇಗೆ ಸರ್ವರ ಕರ್ಮ ಪ್ರೇರಕನಾಗುವನು?) (ಶ್ರೀದೇವಿಯೂ ಕರ್ಮಪ್ರೇರಕಳಲ್ಲ; 'ಸಾಶ್ರೀಸ್ಸ್ವವಾಸಮರವಿಂದವನಂ ವಿಹಾಯ ಯತ್ಪಾದಸೌಭಾಗಮಲಂ ಭಜತೇನುರಕ್ತಾ', ಎಂದು ಭಾಗವತವಚನವಿದೆ; ಆಕೆಯೂ ಹರಿಪಾದಾಸಕ್ತಳು – ಶ್ರೀಹರಿಯ ಅಧೀನಳು – ಸ್ವತಂತ್ರಳಲ್ಲ); ಅಂಘ್ರ್ಯರ್ಚನೇನ–ಪಾದಪ್ರಕ್ಷಾಲನೆಯಿಂದ ಪೂಜಿಸಿದ ಬ್ರಹ್ಮನು, ತತ್ತೀರ್ಥಜುಷ್ಟ್ಯಾ–ಆ ಪಾದೋದಕವನ್ನು ಶಿರಸಾಧರಿಸಿ (ಸೇವಿಸಿದ್ದರಿಂದ) ರುದ್ರನೂ, ತದ್ದತ್ತಭೂತ್ವತಃ–ವಿಷ್ಣುಪಾದದಿಂದ ಕೊಡಲ್ಪಟ್ಟ ತ್ರೈಲೋಕ್ಯಪದವಿಯುಳ್ಳವನಾದ್ದರಿಂದ ಇಂದ್ರನೂ, (ಪ್ರೇರಕಃ ನ–ಸರ್ವಕರ್ಮಪ್ರೇರಕರಲ್ಲ)[1]

**ಕಿಂಚ ಸೃಜ್ಯಂ ವಶೇ ಸ್ರಷ್ಟುರ್ಹಾರ್ಯಂ ಹರ್ತುರ್ವಶೇ ಪರಂ ।**
**ಪಾತುರ್ವಶೇ ಸ್ಥಿತಂ ಸರ್ವಮತೋ ವಿಷ್ಣೋರ್ವಶೇಖಿಲಂ ॥ ೭೩೨ ॥**

---

ಬ್ರಹ್ಮರುದ್ರರು ಜಗತ್ಕರ್ತರಲ್ಲ; ಇಂದ್ರನೂ ಅಲ್ಲ; ಬೇರೆ ಯಾರು ಸರ್ವಕರ್ಮ ಪ್ರೇರಕರಾದಾರು? (ಶಕ್ಯವಿಲ್ಲ); ಬ್ರಹ್ಮನು ವಿಷ್ಣುಪಾದವನ್ನು ತೊಳೆದು ಪೂಜಿಸಿದವನು; ರುದ್ರನು, ಆ ವಿಷ್ಣು ಪಾದೋದಕವನ್ನು, ತನ್ನ ತಲೆಯಲ್ಲಿ ಧರಿಸಿದವನು (ಸೇವಿಸಿದವನು); ಇಂದ್ರನು ವಿಷ್ಣುವಿನಿಂದ (ವಾಮನರೂಪದಿಂದ) ಸ್ವರ್ಗಾಧಿಪತ್ಯವನ್ನು ಪಡೆದವನು; ಇಂದ್ರನಿಗಿಂತ ಅವರರು ಜಗತ್ಕಾರಣರಾಗಲು ಅನರ್ಹರೆಂದು ಹೇಳಲೇನು? (೭೩೧). ಕಿಂಚ, ಸೃಷ್ಟವಾಗುವುದೆಲ್ಲವೂ ಸೃಷ್ಟಿ

---

[1] ಅಂಘ್ರಿಪದದಿಂದ ಈಶ್ವರನಿಗೆ ಅಶರೀರತ್ವವನ್ನು ಹೇಳುವ ತಾರ್ಕಿಕಾದಿಗಳು ನಿರಸ್ತರಾದರು; ಶ್ರೀಹರಿಯಿಂದ ಭಿನ್ನನಾದ ನಿರಾಕಾರನಾದ ಈಶ್ವರನೊಬ್ಬನು ಇದ್ದಲ್ಲಿ, ಸರ್ವಜ್ಞರಾದ ಬ್ರಹ್ಮಾದಿಗಳು ಆತನನ್ನೇ ಪೂಜಿಸುತ್ತಿದ್ದರು; ಹಾಗಿಲ್ಲ; ಆದ್ದರಿಂದ ಶ್ರೀಹರಿಯೇ ಸ್ವತಂತ್ರ ಈಶ್ವರನು.

ಸೃಷ್ಟಿಕರ್ತನು ಬ್ರಹ್ಮ. ಸ್ಥಿತಿಕರ್ತ ವಿಷ್ಣುವು, ಸಂಹಾರಕರ್ತ ರುದ್ರ ಎಂಬ ಪ್ರಸಿದ್ಧ ಪ್ರಮೇಯದಿಂದ ಸಹ ವಿಷ್ಣುವಿಗೇ ಸರ್ವೇಶ್ವರತ್ವವು ಸಿದ್ಧವಾಗುತ್ತದೆನ್ನುತ್ತಾರೆ:—

ಕಿಂಚ—ಮತ್ತೇನೆಂದರೆ, ಸೃಜ್ಯಂ—ಸೃಷ್ಟಿಯೋಗ್ಯವಾದ ವಸ್ತುವು, ಸ್ರಷ್ಟುಃ—ಬ್ರಹ್ಮನ, ವಶೇ—ಅಧೀನದಲ್ಲಿ (ಸೃಷ್ಟಿರಹಿತವಾದ ಕಾಲ, ಆಕಾಶಾದಿಗಳಲ್ಲಿ); ಹಾರ್ಯಂ—ಸಂಹಾರಯೋಗ್ಯವಾದುದೆಲ್ಲವೂ, ಹರ್ತುಃ—ಶಿವನ, ವಶೇ—ಅಧೀನದಲ್ಲಿ; ಪರಂ—ಹಾಗೂ, ಸ್ಥಿತಂ—ಸ್ಥಿತಿಯುಳ್ಳ (ಇರುವ), ಸರ್ವಂ—ಸಮಸ್ತವೂ, ಪಾತುಃ—ರಕ್ಷಣೆಮಾಡುವ ವಿಷ್ಣುವಿನ, ವಶೇ—ಅಧೀನದಲ್ಲಿ; ಅತಃ—ಆದ್ದರಿಂದ, (ಜನನಮರಣ ಶೂನ್ಯಗಳಾದ ಅನಾದಿನಿತ್ಯವಸ್ತುಗಳಿಗೂ—ಸ್ಥಿತಿರಹಿತವಸ್ತುವಿದೆ ಎಂಬುದು ವ್ಯಾಹತವು—(ವಿರುದ್ಧಭಾಷಣವು) ರಕ್ಷಣೆಗಾಗಿ ಸರ್ವವೂ ವಿಷ್ಣುವಿನ ಅಧೀನತ್ವವು, ಅಖಿಲಂ — ಸಮಸ್ತ ಜಗತ್ತು, ವಿಷ್ಣೋಃ — ಶ್ರೀನಾರಾಯಣನ, ವಶೇ—ಅಧೀನದಲ್ಲಿರುತ್ತದೆ, (ಎಂದು ಸಿದ್ಧವಾಗುತ್ತದೆ).

**ಯತ್ಕರ್ತುಶ್ಚ ಸ್ಥಿತಿರ್ವಾಚ್ಯಾ ಹರ್ತುಶ್ಚಾವಶ್ಯಕೀ ಸ್ಥಿತಿಃ ।**
**ನ ಹ್ಯಸತ್ಕಾರಣಂ ದೃಷ್ಟಂ ಬ್ರಹ್ಮೇಶೌ ತದ್ವಶೌ ಹರೇಃ ॥ ೭೩೩ ॥**

ಯತ್ (ಯಸ್ಮಾತ್)—ಯಾವ ಕಾರಣದಿಂದ, ಕರ್ತುಃ—ಸ್ರಷ್ಟೃವಿಗೂ, (ಸೃಷ್ಟಿಕರ್ತನಿಗೂ), ಸ್ಥಿತಿಃ—ಸ್ಥಿತಿಯು, ವಾಚ್ಯಾ—ಹೇಳಲ್ಪಡಬೇಕು; ಸ್ಥಿತಿಃ—ಸ್ಥಿತಿಯು (ಪಾಲನೆಯು), ಹರ್ತುಃ ಚ — ಸಂಹಾರಕರ್ತನಿಗೂ, ಆವಶ್ಯಕೀ — ಅವಶ್ಯಕವೇ ಸರಿ; ಅಸತ್ಕಾರಣಂ ನಹಿ ದೃಷ್ಟಂ—ಅಸತ್ತು ಜಗತ್ಕಾರಣವಲ್ಲ (ಎಂದೂ ಹುಟ್ಟದ ಮತ್ತು ನಷ್ಟವಾಗದ ಜಡವಸ್ತುವು ಜಗತ್ಕಾರಣವಲ್ಲ) (ಅದು ಸ್ಥಿತಿರಹಿತವಾದುದರಿಂದಲೇ ಕಾರಣವಲ್ಲ); ತತ್ — ಆದ್ದರಿಂದ, ಬ್ರಹ್ಮೇಶೌ — (ಸೃಷ್ಟಿಸಂಹಾರಕರ್ತರೆಂಬ) ಬ್ರಹ್ಮರುದ್ರರು, ಹರೇಃ — (ಸ್ಥಿತಿಕರ್ತನಾದ) ಶ್ರೀವಿಷ್ಣುವಿನ, ವಶೌ—ಅಧೀನರು.

---

ಕರ್ತನ ವಶದಲ್ಲಿರುತ್ತದೆ; ಸಂಹಾರ ಯೋಗ್ಯವಾದುವೆಲ್ಲವೂ (ನಷ್ಟವಾಗುವುದು) ಸಂಹಾರಕರ್ತನ ವಶವು; ಇರುವುದೆಲ್ಲವೂ (ಸ್ಥಿತಿಯಿರುವುದೆಲ್ಲವೂ) ಸ್ಥಿತಿಕರ್ತನ (ಪಾಲಕನ) ಅಧೀನವು; ಆದ್ದರಿಂದ ಸ್ಥಿತಿಕರ್ತನಾದ (ಇರುವುದೆಲ್ಲದರ ರಕ್ಷಕನಾದ) ಶ್ರೀವಿಷ್ಣುವಿನ ಅಧೀನವು; ಹೀಗೆ ಸಮಸ್ತ ಜಗತ್ತು ವಿಷ್ಣ್ವಧೀನವೆಂದು ಯುಕ್ತಿಯಿಂದ ಸಹ ಸಿದ್ಧವಾಗುತ್ತದೆ (೭೩೨). ಸೃಷ್ಟಿಕರ್ತನಿಗೂ ಸ್ಥಿತಿಯು (ತನ್ನ

**ಏತಶ್ಚ ಸ್ವಸ್ಥಿತಿಃ ಸ್ವೀಯವ್ಯಾಪಾರತ್ವಾತ್ ಸ್ವತೋ ಹರೇಃ ।**
**ಅತಃ ಸ್ವತಂತ್ರತಾ ತಸ್ಯ ಸಿದ್ಧಾ ಸಿದ್ಧಾರ್ಥಪದ್ಧತೇಃ ॥ ೭೩೪ ॥**

ಏತಶ್ಚ–ಇದಾದರೂ, ಸ್ವಸ್ಥಿತಿಃ–ಇರತಕ್ಕ ಪರಿಸ್ಥಿತಿಯು ; (ಸ್ವಸ್ಥಿತಿಃ–ವಿಷ್ಣುವಿನ ಸ್ಥಿತಿಯು), ಸ್ವೀಯವ್ಯಾಪಾರಾತ್ – ಸ್ಥಿತಿಯು ವಿಷ್ಣುವ್ಯಾಪಾರವೇ ಆಗಿರುವುದರಿಂದ, ಹರೇಃ–ವಿಷ್ಣುವಿಗೆ, ಸ್ವತಃ–(ಆತನಿಗೂ ಸ್ಥಿತಿಯು ಅವಶ್ಯಕವಾಗಿದ್ದರೂ, ಅದು ತನ್ನಿಂದಲೇ) ಸಾಧಿಸುತ್ತದೆ ; ಅತಃ–ಆದ್ದರಿಂದ (ಸ್ವಸ್ಥಿತಿಗೆ ಅನ್ಯರನ್ನು ಆಶ್ರಯಿಸುವ ಅವಶ್ಯಕವಿಲ್ಲದ್ದರಿಂದ), ಸಿದ್ಧಾರ್ಥಪದ್ಧತೇಃ–ಸಿದ್ಧವಾದ ಅರ್ಥವನ್ನು ಅನುಸರಿಸಿಯೇ, ತಸ್ಯ–ವಿಷ್ಣುವಿಗೆ, ಸ್ವತಂತ್ರತಾ–ಸ್ವಾತಂತ್ರ್ಯವು (ಸಿದ್ಧವಾಗಿದೆ–ಬ್ರಹ್ಮರುದ್ರರಂತೆ ಸ್ಥಿತಿಗಾಗಿ ಪರಾಧೀನತ್ವವಲ್ಲ.)

**ನ ಹ್ಯಂಡಜಃ ಸೃಜೇದಂಡಮಹಂಕಾರಂ ಹರೋ ಹರೇತ್ ।**
**ಮಹತ್ತತ್ವಂ ಕುತಃ ಸೃಷ್ಟಂ ಕುತೋ ನಷ್ಟಂ ವಿಚಾರ್ಯತಾಂ ॥೭೩೫॥**

ಜಗತ್ತಿನ ಸೃಷ್ಟಿಸಂಹಾರಗಳೂ ಪೂರ್ಣವಾಗಿ (ಸರ್ವವೂ) ಬ್ರಹ್ಮರುದ್ರರ ಅಧೀನಗಳಲ್ಲವೆಂದು ಹೇಳುತ್ತಾರೆ :—

---

ರಕ್ಷಣೆಯು) ಅವಶ್ಯಕವು ; ಹಾಗೆಯೇ ಸಂಹಾರಕರ್ತನಿಗೂ, ತನ್ನ ಅಸ್ತಿತ್ವಾದಿ ರಕ್ಷಣೆಯು ಅವಶ್ಯಕವೇ ಆಗಿರುತ್ತದೆ; ರಕ್ಷಣೆಯು ಬೇಕಿಲ್ಲದ ಅಸದ್ವಸ್ತುವು (ಎಂದೂ ಯಾವ ವಿಧದಿಂದಲೂ ಹುಟ್ಟುಸಾವುಗಳಿಲ್ಲದ ಜಡವಸ್ತುವು) ಜಗತ್ಕಾರಣವಲ್ಲ ; ಈ ಕಾರಣದಿಂದ ಬ್ರಹ್ಮರುದ್ರರು, ಜಗತ್ತಿನ ಸೃಷ್ಟಿಸಂಹಾರ ಕರ್ತರಾದರೂ, ಸ್ಥಿತಿಕರ್ತನಾದ ಶ್ರೀವಿಷ್ಣುವಿನ ಅಪೇಕ್ಷೆಯುಳ್ಳವರೇ ಆಗಿರುವರು ; ಆದ್ದರಿಂದ ಸಹ ಆ ಉಭಯರೂ ವಿಷ್ಣುವಶರೆಂದು ಸಿದ್ಧವಾಗುತ್ತದೆ (೭೩೩). ಹಾಗೆಂದರೆ ವಿಷ್ಣುವಿಗೂ ಸ್ಥಿತಿಕರ್ತನೊಬ್ಬನು ಬೇಕಿಲ್ಲವೇ ? ಎಂಬ ಪ್ರಶ್ನೆಯೂ ಸಹಜವಾಗಿ ಹುಟ್ಟುವುದಲ್ಲವೇ ? ಸತ್ಯವೇ ; ಆದರೆ ಸ್ಥಿತಕರ್ತನಾದ ವಿಷ್ಣುವಿನಿಂದಲೇ ವಿಷ್ಣುವಿನ ಸ್ಥಿತಿಯು ಸಂಭವಿಸುತ್ತದೆ ; ಹೀಗೆ ತನ್ನಿಂದಲೇ ತನ್ನ ಸ್ಥಿತಿ ವ್ಯಾಪಾರವು ನಡೆಯುವುದರಿಂದ ಅನ್ಯಾಶ್ರಯವು ಬೇಕಿಲ್ಲವಾದ್ದರಿಂದ, ವಿಷ್ಣುವೇ ಸ್ವತಂತ್ರನು ; ಹೀಗೆ, ಸರ್ವರಿಗೂ ಸಿದ್ಧವಾದ ಅರ್ಥತಿಳಿಯುವ ಮಾರ್ಗಾನುಸರಣೆಯಿಂದಲೇ, ಶ್ರೀವಿಷ್ಣುವಿನ ಸ್ವಾತಂತ್ರ್ಯವು ಸಿದ್ಧವಾಗುತ್ತದೆ (೭೩೪). ಅಂಡದಲ್ಲಿದ್ದ ಪದ್ಮನಾಭನ ನಾಭಿಯಿಂದ ಹುಟ್ಟಿದ ಅಜನು (ಚತುರ್ಮುಖನು) ಬ್ರಹ್ಮಾಂಡದ

ಅಂಡಜಃ–(ಬ್ರಹ್ಮಾಂಡದಲ್ಲಿ ಪ್ರಕಟವಾಗಿದ್ದ ಪದ್ಮನಾಭನ ನಾಭಿಕಮಲದಿಂದ ಉತ್ಪನ್ನನಾದ ಸತ್ಯಲೋಕಾಧಿಪತಿಯಾದ) ಚತುರ್ಮುಖ ಬ್ರಹ್ಮನು, ಅಂಡಂ–( ತನ್ನ ಉತ್ಪತ್ತಿಗಿಂತ ಪೂರ್ವದಲ್ಲಿಯೇ ಇದ್ದ) ಬ್ರಹ್ಮಾಂಡವನ್ನು,[1] ನ ಹಿ ಸೃಜೇತ್ – ಸೃಷ್ಟಿ ಮಾಡಲಾರನಷ್ಟೆ; ಹರಃ–ರುದ್ರನು, ಅಹಂಕಾರಂ – ಅಹಂಕಾರತತ್ತ್ವವನ್ನು, (ನಹಿ) ಹರೇತ್–ಸಂಹರಿಸಲಾರನು ;[2] ಮಹತ್ತತ್ತ್ವಂ–

ಸೃಷ್ಟಿಕರ್ತನಲ್ಲ; ಹರನು (ರುದ್ರನು) ಸಂಹಾರಕರ್ತನೆನಿಸಿದರೂ, ಅಹಂಕಾರ ತತ್ತ್ವದ ಸಂಹಾರಕನಲ್ಲ; ಅಹಂಕಾರ ತತ್ತ್ವವನ್ನು ಪ್ರಲಯಕಾಲದಲ್ಲಿ ಗ್ರಾಸ ಮಾಡುವ ಮಹತ್ತತ್ತ್ವವು ಏಕೆ ಸೃಷ್ಟವಾಯಿತು ಮತ್ತು ಅದರ ಲಯವು ಹೇಗೆ ಎಂಬ ವಿಷಯವನ್ನು ವಿಚಾರಮಾಡಬೇಡವೇ ? ಆ ವಿಚಾರದಿಂದ ಫಲಿಸುವ

[1] ಬ್ರಹ್ಮಾಂಡ ಸೃಷ್ಟಿಯಾಗಲಿ, ಅದಕ್ಕೂ ಮೊದಲಿಗೆ ಸೃಷ್ಟವಾದ ೨೪ ತತ್ತ್ವಗಳ (ಮಹದಾದಿ ತತ್ತ್ವಗಳ) ಸೃಷ್ಟಿಯಾಗಲಿ, ಅಥವಾ ಬ್ರಹ್ಮಾಂಡದೊಳಗೆ ಆದರೂ ಪಾದ್ಮಕಲ್ಪ ವ್ಯತಿರಿಕ್ತ ಇತರ ದೈನಂದಿನ ಕಲ್ಪಗಳಲ್ಲಿ ಸೃಷ್ಟವಾದ ನಾನಾ ಪದಾರ್ಥಗಳ ಸ್ರಷ್ಟೃತ್ವವೂ ಬ್ರಹ್ಮನಿಗೆ ಕೂಡುವುದಿಲ್ಲ; ಈ ಎಲ್ಲವೂ, ಅಂಡಸೃಷ್ಟಿಯನ್ನು ಬ್ರಹ್ಮನು ಮಾಡುವುದಿಲ್ಲ ವೆಂಬ ವಾಕ್ಯದಲ್ಲಿ ಉಪಲಕ್ಷಣದಿಂದ, ಸೂಚಿತವೆಂದು ತಿಳಿಯಬೇಕು.

[2] ಶೇಷಾಂತರ್ಗತ ಸಂಕರ್ಷಣ ಮುಖದಿಂದ (ಸಂಕರ್ಷಣರೂಪೀ ಭಗವಂತನಿಂದ), ಪ್ರಲಯಾಗ್ನಿಗೆ (ಜಗತ್ತನ್ನು ದಹಿಸುವ ಅಗ್ನಿಗೆ) ಅಭಿಮಾನಿಯಾದ ರುದ್ರನಿಂದ ಸಹಿತವಾಗಿ, ಪ್ರಲಯಕಾಲದಲ್ಲಿ ಉತ್ಪನ್ನನಾಗಿ ಸಂಹಾರಕರ್ತನೆನಿಸುವನು – ರುದ್ರದೇವನು ; ಈ ಕಾಲಾಗ್ನಿಗೆ ಬ್ರಹ್ಮಾಂಡ ದಹನ ಕಾಲದಲ್ಲಿ ಬಾಹ್ಯ ಜಲಾವರಣದಲ್ಲಿರುವ ಬ್ರಹ್ಮಾಂಡಕ್ಕೆ ದಾಹ ವಾಗುವುದೇ (ಬ್ರಹ್ಮಾಂಡ ದಹನ ಶಕ್ತಿಯುಂಟೇ) ಎಂಬುದನ್ನು ಚಿಂತಿಸಬೇಡವೇ ? ಲಂಕಾ ದಹನಮಾಡಿದ ಹನುಮಂತನಂತೆ ತ್ರಿಪುರವನ್ನು ದಹಿಸಿದ ಶಿವನಂತೆ, ಜಗದ್ದಾಹದಲ್ಲಿ ಮುಖ್ಯ ಕರ್ತೃತ್ವವು, ಸಂಕರ್ಷಣನಾಮಕ ಭಗವಂತನ ವ್ಯಾಪಾರವೇ ಎಂದು ಪ್ರಾಪ್ತ ವಾಗುತ್ತದೆ; ಬ್ರಹ್ಮಾಂಡದೊಳಗಿನ ವಸ್ತುಗಳ ದೈನಂದಿನ ಪ್ರಲಯದಲ್ಲಿನ ಸಂಹಾರ ಕಾರ್ಯವು ಅಹಂಕಾರಾಭಿಮಾನಿ ಶಿವನಿಗಿದ್ದರೂ, ಬ್ರಹ್ಮಾಂಡೋಪರಿಸ್ಥಿತವಾದ ೨೪ ತತ್ತ್ವಗಳ ಸಂಹಾರ ಕಾರ್ಯವು, ಮುಖ್ಯವಾಗಿ ಭಗವಂತನಿಂದಲೇ ಸಂಭವಿಸುವುದಾದರೂ, ಆಯಾ ತತ್ತ್ವಾಭಿಮಾನಿಗಳ ಮೇಲಿನ ತತ್ತ್ವಾಭಿಮಾನಿಗಳೂ ಆ ಕಾರ್ಯದಲ್ಲಿ ನಿಯುತರಾಗಿರುವರು ; ಆದ್ದರಿಂದ ರುದ್ರನಿಗೆ ಸರ್ವಜಗತ್ತಿನ ಸಂಹರ್ತೃತ್ವವು ಸಿದ್ಧವಲ್ಲ ; ಮಹತ್ತತ್ತ್ವಾಭಿಮಾನಿಯಾದ ಬ್ರಹ್ಮನು, ಅಹಂಕಾರ ತತ್ತ್ವವನ್ನು (ರುದ್ರನನ್ನು) ಗ್ರಾಸಮಾಡುವನು; ಹೀಗೆ ಮೊದಲು ಪುರುಷರೂಪದಿಂದ ಭಗವಂತನು ಸೃಜ್ಯರಾದ ಸರ್ವ (ಪಿಪೀಲಿಕಾದಿ)ಗಳ ಸೃಷ್ಟಿಯನ್ನು ಮಾಡುವುದರಿಂದ ಬ್ರಹ್ಮನು ಸೃಷ್ಟಿಯನ್ನಾಗಲಿ, ರುದ್ರನು ನಾಶವನ್ನಾಗಲಿ ಪೂರ್ಣವಾಗಿ

ಮಹತ್ತತ್ತ್ವವು, ಕುತಃ_ಯಾವ ಕಾರಣದಿಂದ (ಯಾರಿಂದ), ಸೃಷ್ಟಂ–ಸೃಷ್ಟವಾಯಿತು? ಕುತಃ ನಷ್ಟಂ–ಯಾವುದರಿಂದ ಸಂಹರಿಸಲ್ಪಡುವುದು (ಎಂಬುದು) ವಿಚಾರ್ಯತಾಂ–ವಿಚಾರಮಾಡಲ್ಪಡಲಿ.

**ಅತಃ ಸ್ವಯೋಗ್ಯಕಾರ್ಯಸ್ಯ ಕರ್ತಾರೌ ತೌ ಹರೀಚ್ಛಯಾ ।**
**ಹರಿಸ್ತು ಕರ್ತಾ ಸರ್ವಸ್ಯ ಭರ್ತಾ ಹರ್ತಾ ತ್ರಿಶಕ್ತಿಧೃತ್ ॥ ೭೩೬ ॥**

ಅತಃ – ಆದ್ದರಿಂದ, ಸ್ವಯೋಗ್ಯಕಾರ್ಯಸ್ಯ – ತಮಗೆ ಯೋಗ್ಯವಾದ ಕಾರ್ಯದ, ಕರ್ತಾರೌ–ಮಾಡತಕ್ಕವರು, ತೌ–ಆ, ಇಬ್ಬರು (ಬ್ರಹ್ಮರುದ್ರರು), ಹರೀಚ್ಛಯಾ–ಶ್ರೀಹರೀಚ್ಛೆಯಿಂದ (ಮಾಡಲು ಮಾತ್ರ ಶಕ್ತರು); ಹರಿಃ ತು–ಶ್ರೀಹರಿಯಾದರೋ, ಸರ್ವಸ್ಯ–ಸರ್ವರ (ಸರ್ವಕರ್ಮಗಳ), ಕರ್ತಾ–ಕರ್ತನೂ,

---

ಪ್ರಮೇಯವನ್ನು ತಿಳಿದುನೋಡು) (೭೩೫). ಸೃಷ್ಟಿ, ಸ್ಥಿತಿ, ಸಂಹಾರಗಳೆಂಬ ಮೂರನ್ನು (ಜಗದ್ವಿಷಯದಲ್ಲಿ) ನಿರ್ವಹಿಸುವವನು, ತ್ರಿಶಕ್ತಿಧಾರಿಯಾದ ಶ್ರೀಹರಿಯೇ ಆಗಿರುವನು; ಬ್ರಹ್ಮರುದ್ರರಿಬ್ಬರೂ, ಸ್ವಯೋಗ್ಯವಾದ (ಸೃಷ್ಟಿ, ಸಂಹಾರ) ಕಾರ್ಯಗಳನ್ನು ತಮ್ಮ ಯೋಗ್ಯತೆ ಇದ್ದಷ್ಟು ನಿರ್ವಹಿಸುತ್ತಾರೆ; ಅದೂ ಶ್ರೀಹರಿಯ ಅಧೀನರಾಗಿ, ಆತನು ಶಕ್ತಿಕೊಟ್ಟಷ್ಟು ಮಾತ್ರ; ಈ ವಿಚಾರದಲ್ಲಿ ಸೂಚಿತವಾದ ಪ್ರಮಾಣಗಳೂ ಮತ್ತು ಅವುಗಳ ಭಾವಾರ್ಥಗಳನ್ನು ಕೆಳಗಿನ ಟಿಪ್ಪಣಿಯಲ್ಲಿ ವಿವರಿಸಿರುವುದನ್ನು ನೋಡಿ ತಿಳಿಯಬೇಕು (೭೩೬).

---

ಮಾಡುವವರಲ್ಲ; ಮಹತ್ತತ್ತ್ವವು ಅಹಂಕಾರ ತತ್ತ್ವದ ಉತ್ಪತ್ತಿಗೆ ಉಪಾದಾನ ಮಾತ್ರವಾದ್ದರಿಂದ, ಮಹತ್ತತ್ತ್ವಾಭಿಮಾನಿ ಬ್ರಹ್ಮನಿಗೆ ಮುಖ್ಯ ಸ್ರಷ್ಟೃತ್ವವಿಲ್ಲ, ಈ ವಿವೇಚನೆಯಿಂದ ಸರ್ವತ್ರ ಮುಖ್ಯಕಾರಣನು ಶ್ರೀಹರಿಯೇ ಎಂದು ಸಿದ್ಧವಾಗುತ್ತದೆ; ಬ್ರಹ್ಮರುದ್ರರಿಗೆ ಸ್ವಯೋಗ್ಯವಾದ ಕೆಲವು ಸೃಷ್ಟಿ ಸಂಹಾರ ಭಾಗಗಳು ಮಾತ್ರ ಸಂಭವಿಸುತ್ತವೆಂದೂ ಸಿದ್ಧವಾಗುತ್ತದೆ; ಆದ್ದರಿಂದಲೇ ಸೂತ್ರಗಳಲ್ಲಿಯೂ, ಶ್ರುತಿಗಳಲ್ಲಿಯೂ, ಪರಬ್ರಹ್ಮನಿಂದಲೇ ಜಗತ್ತಿನ ಸೃಷ್ಟ್ಯಾದಿಗಳು ನಡೆಯುತ್ತವೆಂದೂ, ಅದೇ ಪರಬ್ರಹ್ಮ ಲಕ್ಷಣವೆಂದೂ, ಹೇಳಲಾಗಿದೆ; ಭಾಗವತದಲ್ಲಿ ಸಹ 'ಸಸರ್ಜ ಭಗವಾನಾದೌ' ಇತ್ಯಾದಿ ಭಾಗದಲ್ಲಿ ಈ ಪ್ರಮೇಯವೇ ವಿಸ್ತರಿಸಲ್ಪಟ್ಟಿದೆ.

ಭರ್ತಾ–ಪಾಲಕನೂ, ಹರ್ತಾ – ಸಂಹಾರಕನೂ (ಆಗಿ); ತ್ರಿಶಕ್ತಿಧೃತ್ – ಈ ಮೂರೂ ಶಕ್ತಿಗಳುಳ್ಳವನು ;[1]

**ನ ಪಿತಾಧಿಪತಿರ್ನೄಣಾಂ ನ ಹರ್ತಾ ಯಾಮಿಕೋಽಪಿ ವಾ ।**
**ಕಿಂತು ರಕ್ಷಕ ಏವಾತೋ ವಿಷ್ಣುರೇವ ಜಗತ್ಪತಿಃ ॥ ೬೩೭ ॥**

ಲೋಕರೀತಿಯಿಂದ ಸಹ ಸೃಷ್ಟಿಕರ್ತ ಮತ್ತು ಸಂಹಾರಕರ್ತರಿಗೆ ಸರ್ವಾಧಿಪತ್ಯವಿಲ್ಲ ; ರಕ್ಷಕನಿಗೇ ಸರ್ವಾಧಿಪತ್ಯವೆಂದು ಸ್ಪಷ್ಟಗೊಳಿಸುತ್ತಾರೆ :—

ನೄಣಾಂ–ಪ್ರಜೆಗಳ, ಅಧಿಪತಿಃ–ಸರ್ವಾಧಿಕಾರಿಯು, ಪಿತಾ ನ–ಹಡೆದ ತಂದೆಯಲ್ಲ ; ಹರ್ತಾ ನ–(ಅಪರಾಧಿಗಳ) ಸಂಹಾರಕರ್ತನೂ ಅಲ್ಲ ; ಅಪಿವಾ–

---

ಲೋಕರೀತ್ಯಾ ಸಹ ಸೃಷ್ಟಿಕರ್ತ ಸಂಹಾರಕರ್ತರಿಗೆ ಸರ್ವಾಧಿಪತ್ಯವಿಲ್ಲ ; ಸೃಷ್ಟಿಸುವ ತಂದೆಗೆ ಸರ್ವಾಧಿಕಾರವಿಲ್ಲ ; ಸಂಹಾರಕರ್ತನಿಗೂ ಇಲ್ಲ ; ಪುರಪಾಲಕನಾದ ಯಾಮಿಕನು (ತ್ರಿಯಾಮಗಳಲ್ಲಿ ಕಾವಲಿದ್ದು ಅಪರಾಧಿಯ ಶಿರಚ್ಛೇದದಲ್ಲಿ ಸಹ ರಾಜನಿಂದ ಅಧಿಕಾರವನ್ನು ಹೊಂದಿದ ಯಾಮಿಕನೇ–ಅವನಿಗೂ ಅಧಿಕಾರ ಪ್ರದನಾದ ರಾಜನೇ) ಸರ್ವಾಧಿಪತಿಯು ; ರಕ್ಷಕನಲ್ಲಿ ಸರ್ವಾಧಿಪತ್ಯವು ಕಂಡು

---

[1] 'ಸೃಜಾಮಿ ತನ್ನಿಯುಕ್ತೋಽಹಂ ಹರೋ ಹರತಿ ತದ್ವಶಃ । ವಿಶ್ವಂಪುರುಷರೂಪೇಣ ಪರಿಪಾತಿ ತ್ರಿಶಕ್ತಿಧೃತ್ ॥' ಎಂಬ ಭಾಗವತ ವಚನವನ್ನು ಪ್ರಮಾಣವನ್ನಾಗಿ ಸೂಚಿಸುತ್ತಾರೆ; ಇದು ಬ್ರಹ್ಮದೇವನ ಮಾತು ; ಇದರ ಭಾವಾರ್ಥ ; 'ಶ್ರೀಹರಿಯಿಂದ ನಿಯೋಜಿತನಾಗಿ ನಾನು ಸೃಷ್ಟಿಮಾಡುತ್ತೇನೆ ; ರುದ್ರನಾದರೂ, ಶ್ರೀಹರಿಯ ವಶನಾಗಿ ಸಂಹರಿಸುತ್ತಾನೆ ; ಜಗತ್ತನ್ನು ಪುರುಷರೂಪದಿಂದ ಸೃಷ್ಟಿ, ಸ್ಥಿತಿ, ಸಂಹಾರಗಳೆಂಬ ಮೂರೂ ವ್ಯಾಪಾರಗಳಲ್ಲಿ ಸ್ವಯಂ ಶಕ್ತನಾದ, ಶ್ರೀಹರಿಯೇ (ನಮ್ಮಲ್ಲಿ ಆವಿಷ್ಟ ಚೇತನನಂತೆ ಪ್ರವೇಶಿಸಿ ಮಾಡುವುದಿಲ್ಲ; ಕಿಂತು ತಾನೇ) ನಿರ್ವಹಿಸುತ್ತಾನೆ, (ಪಾದ್ಮಕಲ್ಪದಲ್ಲಿಯೂ, ಶ್ರೀಹರಿ ಸನ್ನಿಧಾನಬಲದಿಂದಲೇ ಶ್ರೀಹರಿಯೇ ಸೃಷ್ಟಿ ನಿರ್ವಾಹಕನೆಂದು ಬ್ರಹ್ಮನೇ ಹೇಳಿಕೊಳ್ಳುತ್ತಾನೆ ) ; ( ಹೀಗೆಯೇ ದೈನಂದಿನ ಸಂಹಾರ ಕಾರ್ಯದಲ್ಲಿಯೂ, ಅಂತಿಮ ( ಪ್ರಲಯಕಾಲದ ) ಸಂಹಾರದಲ್ಲಿಯೂ, ಭಗವಚ್ಛಕ್ತಿಯಿಂದಲೇ ಪ್ರವೃತ್ತನಾದರೂ, ಆತನಿಂದ ಪ್ರೇರಿತವಾದ ತನ್ನ ಅಲ್ಪಶಕ್ತಿಯಿಂದ ತನಗಿಂತ ಕೆಳಗಿನವರ ಸಂಹಾರ ಕಾರ್ಯವನ್ನು ಮಾಡುತ್ತಾನೆ ; ಈ ದೃಷ್ಟಿಯಿಂದಲೇ, ಆಚಾರ್ಯರು ದ್ವಾದಶ ಸ್ತೋತ್ರದಲ್ಲಿಯೂ, 'ಶೇಷಾಹಿ ವೈರಿಶಕ್ರಮನುಪ್ರಧಾನ ಚಿತ್ರೋರುಕರ್ಮರಚನಂ ಯದಪಾಂಗಲೇಶಂ । ಆಶ್ರಿತ್ಯ ವಿಶ್ವಮಖಿಲಂ ವಿದಧಾತಿ ಧಾತಾ ಶ್ರೀಯತ್ಕಟಾಕ್ಷಬಲವತ್ಯಜಿತಂ ನಮಾಮಿ । ಮತ್ತು 'ಶಕ್ರೋಗ್ರದೀಧಿತಿ-ಹಿಮಾಕರ ಸೂರ್ಯಸೂನುಪೂರ್ವಂ ನಿಹತ್ಯ ನಿಖಿಲಂ ಯದಪಾಂಗಲೇಶಂ । ಆಶ್ರಿತ್ಯ ನೃತ್ಯತಿ

ಮತ್ತೇನೆಂದರೆ, ಯಾಮಿಕಃ – ಯಾಮಿಕನೆಂಬ, ರಕ್ಷಕಃ ಏವ – (ರಾಜನಿಂದ ನೇಮಿತನಾದ [2] ಯಾಮಿಕನೇ–ರಾತ್ರಿಯಾಮತ್ರಯಗಳಲ್ಲಿ ಪುರಪಾಲಕನಾದವನು ಯಾಮಿಕನು. ಆತನಿಗೇ ಅಪರಾಧಿಗೆ ಶಿರಚ್ಛೇದಾದಿದಂಡ ವಿಧಿಸುವ ಅಧಿಕಾರವೂ ಇರುತ್ತದೆ) ; ಸರ್ವವಿಧದಿಂದ ಪಾಲಕನಾದ ರಾಜನೇ (ಸ್ಥಿತಿಕರ್ತನೇ), (ಆಗಿರುತ್ತಾನೆ) ; ಕಿಂತು–ಆದರೆ, ರಕ್ಷಕ ಏವ–ರಕ್ಷಕನೇ (ಸರ್ವಾಧಿಪತಿಯು) ; ಅತಃ– ಆದ್ದರಿಂದ, ವಿಷ್ಣುಃ ಏವ – ಶ್ರೀವಿಷ್ಣುವೇ (ಜಗತ್ಪಾಲಕನಾದ ವಿಷ್ಣುವೇ), ಜಗತ್ಪತಿಃ–ಜಗತ್ತಿನ ಒಡೆಯನು (ಸರ್ವಾಧಿಪತಿಯು).

**ದಶದಿಕ್ಪತಿಭಾವೇನ ದೇವಾ ಬ್ರಹ್ಮೇಶಪೂರ್ವಕಾಃ ।**
**ಖಂಡಾಧಿಪತಯೋ ವಿಷ್ಣುಸ್ತದಭಾವಾಜ್ಜಗತ್ಪತಿಃ ॥ ೭೩೮ ॥**

---

ಬರುತ್ತದೆ ; ಈ ಯುಕ್ತಿಯು ಸಹ, ಪಾಲಕನಾದ ಶ್ರೀವಿಷ್ಣುವೇ ಜಗತ್ಪತಿಯೆಂದು ತೋರಿಸುತ್ತದೆ ; (೭೩೭). ಬ್ರಹ್ಮಾದಿ ದೇವತೆಗಳು ಖಂಡಾಧಿಪತಿಗಳು ಬ್ರಹ್ಮಾಂಡದ ಏಕದೇಶಗಳಿಗೆ ಮಾತ್ರ ತಂತಮ್ಮ ಲೋಕಗಳಿಗೆ ಮಾತ್ರ

---

ಶಿವಪ್ರಕಟೋರುಶಕ್ತಿಃ ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥' ಇವುಗಳ ಭಾವಾರ್ಥವೇನೆಂದರೆ: ಶೇಷಗರುಡ, ಇಂದ್ರ, ಮನು ಮೊದಲಾದ ಪ್ರಧಾನ ದೇವತೆಗಳ ವಿಚಿತ್ರ ಕರ್ಮಗಳು, ಯಾವ ಶ್ರೀದೇವಿಯಿಂದಲೋ ಆಕೆಯು ಸಹ, ಯಾವಾತನ (ಅಜಿತನಾಮಕ ಶ್ರೀಹರಿಯ) ಅಪಾಂಗಲೇಶವನ್ನು ಆಶ್ರಯಿಸಿರುವಳು : ಇಂದ್ರ ಚಂದ್ರ, ಸೂರ್ಯ, ಯಮಾದಿಗಳನ್ನು ಸಂಹರಿಸುವ ಕಾರ್ಯವನ್ನು ಲೀಲೆಯಿಂದ ಯಾವ ಅಜಿತನ ಆಶ್ರಯದಿಂದ ಸಮರ್ಥಳೋ ; ಯಾವಾಕೆಯ ಶಕ್ತಿಯನ್ನು ಆಶ್ರಯಿಸಿ, ಶಿವನು ತನ್ನ ನಾಟ್ಯದಿಂದ ಪ್ರಕಟವಾದ ಉಗ್ರಶಕ್ತಿಯುಳ್ಳವನೋ, ಅಂಥ ಶ್ರೀದೇವಿಯು ಅಜಿತ ಕಟಾಕ್ಷಲೇಶವನ್ನು ಆಶ್ರಯಿಸಿರುವಳು ; ಮತ್ತು ಭಾಗವತದಲ್ಲಿಯೇ 'ಪ್ರಸುಪ್ತಲೋಕತಂತ್ರಾಣಾಂ ನಿಶಾಮ್ಯ ಜಗದೀಶ್ವರಃ । ಚತುರ್ವಿಂಶತಿ ತತ್ವಾನಾಂ ಗಣಂ ಯುಗಪದಾವಿಶತ್ । ಸೋನುಪ್ರವಿಷ್ಟೋ ಭಗವಾನ್ ಚೇಷ್ಟಾರೂಪೇಣ ತಂ ಗಣಂ । ಭಿನ್ನಂಸಂಯೋಜಯಾಮಾಸ ಸುಪ್ತಂ ಕರ್ಮ ಪ್ರಬೋಧಯನ್ ।'—ಜಗದ್ವ್ಯಾಪಾರರಹಿತರಾಗಿ, ಸುಪ್ತರಂತಿರುವ ೨೪ ತತ್ವಗಳ ಅಭಿಮಾನಿಗಳನ್ನು ಕಂಡು, ಏಕದಾ ಅವರಲ್ಲಿ ಪ್ರವೇಶಿಸಿ, ಪರಸ್ಪರವಾಗಿ ಆ ದೇವತೆಗಳು ಸೇರಿ ಕಾರ್ಯಸಮರ್ಥರಾಗುವಂತೆ ಅವರ ಶಕ್ತಿಗಳನ್ನು ಉದ್ಬೋಧಿಸಿದನು ; ಎಂದೂ ಹೇಳಲಾಗಿದೆ.

[2] ರಕ್ಷಕ ಪದದಿಂದ, ಧನ, ಭೂ, ವೇತನಾದಿಗಳಿಂದ, ಸಕಲ ಪ್ರಜೆಗಳ ರಕ್ಷಣೆಯನ್ನು ಮಾಡುವ ಸ್ಥಿತಿಕರ್ತನೇ, ಜಗತ್ಪತಿಯೆಂದು ಸಿದ್ಧವಾಗುತ್ತದೆ.—ರಾಜನಂತೆ.

ನಿತ್ಯಸಂಧ್ಯಾವಂದನ ಕರ್ಮವನ್ನು ತಿಳಿದವನೂ, ಬ್ರಹ್ಮಾದಿದೇವತೆಗಳಿಗೆ ಖಂಡಾಧಿಪತ್ಯವನ್ನು, ಶ್ರೀಹರಿಗೆ ಮಾತ್ರ ಅಖಂಡಾಧಿಪತ್ಯವನ್ನು ಪರಿಶೇಷದಿಂದ ಸಿದ್ಧಿಸುವುದೆಂಬುದನ್ನು ಚೆನ್ನಾಗಿ ಬಲ್ಲನು, ಎನ್ನುತ್ತಾರೆ :—

ಬ್ರಹ್ಮೇಶಪೂರ್ವಕಾಃ–ಬ್ರಹ್ಮರುದ್ರಾದಿ, ದೇವಾಃ–ದೇವತೆಗಳು, ದಶದಿಕ್ಪತಿ ಭಾವೇನ–ಹತ್ತು ದಿಕ್ಕುಗಳ (ಒಬ್ಬೊಬ್ಬನು ಒಂದು ದಿಕ್ಕಿನ ಅಧಿಪತಿಯೆಂಬ), ಭಾವದಿಂದ, ಖಂಡಾಧಿಪತಯಃ–(ಜಗತ್ತಿನ ಒಂದೊಂದು ಭಾಗಕ್ಕೆ–ತುಂಡಿಗೆ), ಅಧಿಪತಿಗಳೆಂದು (ಸಂಧ್ಯಾಕರ್ತನೂ ತಿಳಿಯುವನು); ತದಭಾವಾತ್–ವಿಷ್ಣುವಿಗೆ ಯಾವುದೊಂದು ದಿಕ್ಕಿನ ಅಧಿಪತಿಭಾವವೂ ಇಲ್ಲದ್ದರಿಂದ, ವಿಷ್ಣುಃ–ಶ್ರೀವಿಷ್ಣುವು, ಜಗತ್ಪತಿಃ–ಜಗತ್ಪತಿಯು (ಅಖಂಡಾಧಿಪತಿಯು) (ಎಂದು ಸಿದ್ಧವಾಗುತ್ತದೆ).

**ಅಖಿಲೈರ್ಲೋಕಪಾಲೈಶ್ಚಾಪ್ಯದೃಶ್ಯಃ ಸನ್ನುರುಶ್ಚ ಸನ್ ।**
**ತೇಷಾಮಂತರ್ಬಹಿಶ್ಚ ತ್ವಂ ಸದಾ ವಿಚರಸೀತಿ ವಾಕ್ ॥ ೭೩೯ ॥**

ಈಶ್ವರನು ಜಗತ್ತಿನ ಅಂತರ್ಬಹಿಗಳಲ್ಲಿ ಲೋಕಪಾಲಕರಿಂದಲೂ ಅದೃಷ್ಟನಾಗಿ ಸಂಚರಿಸುವ, ಅಧಿದೇವತೆಯೆಂದು ಪ್ರಮಾಣಗಳಿಂದ ಸಹ ಸಿದ್ಧವೆಂದು, ನಿರೂಪಿಸುತ್ತಾರೆ :—[1]

---

ಅಧಿಪತಿಗಳು ; ಬ್ರಹ್ಮಾದಿಗಳು, ದಶದಿಕ್ಕುಗಳಿಗೆ ಒಬ್ಬೊಬ್ಬರು ಪಾಲಕರೆಂಬುದನ್ನು ನಿತ್ಯ ಸಂಧ್ಯಾಕರ್ಮವನ್ನು ಮಾಡುವ ಸಾಮಾನ್ಯವಟುವೂ ಸಹ ತಿಳಿಯುವನು ; ವಿಷ್ಣುವು ಯಾವುದೊಂದು ದಿಕ್ಕಿನ ಅಧಿಪತಿ ಮಾತ್ರನಲ್ಲದೇ ಸರ್ವಜಗತ್ಪತಿಯು ; ಆತನೇ ಅಖಂಡಾಧಿಪತಿಯು ; (೭೩೮). ಮನುವು, (ಭಾಗವತ ಪಂಚಮಸ್ಕಂಧ

---

[1] ಇಲ್ಲಿ ಸೂಚಿತವಾದ ಪಂಚಮಸ್ಕಂಧ (ಭಾಗವತ) ವಾಕ್ಯವು, ಹೀಗಿದೆ :— 'ಪಾತಂ ನ ಶೇಕುರ್ದ್ವಿಪದಶ್ಚತುಷ್ಪದಃ ಸರೀಸೃಪಸ್ಥಾಸ್ನು ಯದತ್ರ ದೃಶ್ಯತೇ' ಇದು ಮನುವಚನವು; ಅರ್ಥತಃ ಸಂಗ್ರಹಿಸಿ ಇತರ ದೇವತೆಗಳ ಏಕದೇಶದ (ಖಂಡಾಧಿಪತ್ಯವನ್ನು) ಪತಿತ್ವವನ್ನು, ಶ್ರೀಹರಿ ಪ್ರೇರಣೆ ಇಲ್ಲದೇ ಸ್ವತಃ ಸಾಮರ್ಥ್ಯಾಭಾವವನ್ನು, ಶ್ರೀಹರಿಗೆ ಸರ್ವರಿಗೆ ಅಂತರ್ಬಹಿಃ ಪ್ರೇರಕತ್ವವನ್ನು ಸರ್ವೇಶ್ವರತ್ವವನ್ನು ಸರ್ವರೂ ಆತನ ವಶರೆಂಬುದು ಯುಕ್ತಿಸಿದ್ಧ ಮಾತ್ರವಲ್ಲ ; ಪ್ರಮಾಣಸಿದ್ಧವೂ ಆಗಿರುತ್ತದೆಂಬುದನ್ನು, ಸಾಧಿಸಲಾಗಿದೆ ; ಮನುವು 'ನಃ' ಎಂಬ ಬಹುವಚನದಿಂದ. ಅನ್ಯದಿಕ್ಪಾಲಕರನ್ನು ಸೂಚಿಸಿರುತ್ತಾನೆ.

ಅಖಿಲೈಃ—ಸಮಸ್ತರಾದ, ಲೋಕಪಾಲೈಶ್ಚಾಪಿ—ಲೋಕಪಾಲಕರಿಂದಲೂ, ಅದೃಶ್ಯಃ – ಅದೃಶ್ಯನೂ, ಉರುಶ್ಚ ಸನ್ – ಉತ್ಕೃಷ್ಟನೂ ಆಗಿದ್ದು, ತೇಷಾಂ – ಆ ಎಲ್ಲರ, ಅಂತರ್ಬಹಿಶ್ಚ—ಒಳಹೊರಗೆ, ತ್ವಂ – ನೀನು, ಸದಾ – ಸರ್ವದಾ, ವಿಚರಸಿ—ಸಂಚರಿಸುವಿ, ಇತಿವಾಕ್—ಎಂಬ (ಭಾಗವತ) ವಾಕ್ಯವೂ (ಇರುತ್ತದೆ).

**ಯಂ ಹಿತ್ವಾ ರಾಕ್ಷಸಾವೇಶಾನ್ಮತ್ಸರಜ್ವರಸಂಯುತಾಃ ।**
**ಯತಮಾನಾಃ ಪೃಥಕ್ ಸರ್ವೇ ಲೋಕಪಾಲಾಃ ಸಮೇತ್ಯ ಚ ॥ ೭೪೦ ॥**
**ತ್ರಾತುಂ ನ ಶೇಕುರಿತಿವಾಕ್ಚಾಸ್ತಿ ಭಾಗವತೇ ಯತಃ ।**
**ಅಖಂಡಾಧಿಪತಿಸ್ತಸ್ಮಾದ್ವಿಷ್ಣುರೇವ ನ ಸಂಶಯಃ ।**
**ಮನೋರ್ಹಿ ವಾಗಿಯಂ ಕೈರ್ವಾ ಮಾನನೀಯಾ ನ ಮಾನವೈಃ ॥ ೭೪೧ ॥**

ಹಿಂದಿನ ಶ್ಲೋಕದಲ್ಲಿ ಪ್ರಸಕ್ತವಾಗಿ (ಅಡಿಟಿಪ್ಪಣಿಯಲ್ಲಿ ವಿವರಿಸಲಾದ ಭಾಗವತಶ್ಲೋಕ ತಾತ್ಪರ್ಯವನ್ನು ಸಂಗ್ರಹವಾಗಿ ಸೂಚಿಸುತ್ತಾರೆ :—

ಯಂ—ಯಾವ (ತ್ವಾ—ನಿನ್ನನ್ನು), ಹಿತ್ವಾ—ಬಿಟ್ಟು, ರಾಕ್ಷಸಾವೇಶಾತ್—ರಾಕ್ಷಸಾವೇಶದಿಂದ, ಮತ್ಸರಜ್ವರಸಂಯುತಾಃ—ಮತ್ಸರವೆಂಬ ಜ್ವರಯುಕ್ತರಾಗಿ, ಯತಮಾನಾಃ – ಯತ್ನಮಾಡುವ, ಪೃಥಕ್ – ಪ್ರತ್ಯೇಕನಾಗಿಯೂ, ಸರ್ವೇ ಸಮೇತ್ಯ ಚ—ಎಲ್ಲರೂ ಒಂದಾಗಿಯೂ, ಲೋಕಪಾಲಾಃ ಸರ್ವೇ—ಲೋಕಪಾಲಕರಾದ ಸರ್ವರೂ, ಯತಮಾನಾಃ – ಯತ್ನಮಾಡುವವರಾದರೂ, ತ್ರಾತುಂ—

---

ದಲ್ಲಿ) ಶ್ರೀವಿಷ್ಣುವನ್ನು ಸಮಸ್ತಲೋಕಪಾಲರು ಕಾಣರೆಂದೂ (ಪೂರ್ಣವಾಗಿ ಅರಿಯರೆಂದೂ), ಆತನು ಅನಂತ ಶಕ್ತಿಯುಳ್ಳವನಾಗಿ ಈ ಎಲ್ಲರ (ಲೋಕಪಾಲರೆಂಬ ಸರ್ವರ) ಅಂತರ್ಬಹಿಶ್ಚ (ಒಳಹೊರಗೆ) ಇರುತ್ತಿದ್ದೆ, ಅವರಿಗೂ ಪ್ರೇರಕನೆಂದು ಶ್ರೀವಿಷ್ಣುವನ್ನು ಸ್ತುತಿಸಿರುವನು; (ದೂರ್ವಾಸನು, ವಿಷ್ಣುಚಕ್ರದಿಂದ ಹಿಂಬಾಲಿಸಲ್ಪಟ್ಟು, ರಕ್ಷಣಾರ್ಥವಾಗಿ ಸಕಲಲೋಕ ಪಾಲಕರನ್ನು ಶರಣುಹೊಂದಿದರೂ, ಯಾರೂ ರಕ್ಷಣೆ ಮಾಡಲಾಗಲಿಲ್ಲ; ಶ್ರೀವಿಷ್ಣುವಿನಿಂದ ಅಂತರ್ಬಹಿಶ್ವ ಪ್ರೇರ್ಯರಾದವರು ಯಾರೂ ಆತನ ರಕ್ಷಣೆಯಲ್ಲಿ ಶಕ್ತರಲ್ಲವೆಂದು ಹೇಳಲಾಗಿದೆ (೭೩೯). ಲೋಕಪಾಲಕರೆಂಬುವರು, ಅಸುರಾವೇಶ ನಿಮಿತ್ತವಾಗಿ, ಮತ್ಸರಾದಿ ದೋಷಯುಕ್ತರೂ ಆಗಿರುವರು; ಹೀಗಿರುವ ಈ ದೋಷಿಗಳು, ಬೇರೆಯಾಗಿ ಅಥವಾ

(ಯಾರೊಬ್ಬನನ್ನು) ರಕ್ಷಿಸಲು, ನ ಶೇಕುಃ–ಶಕ್ತರಾಗುವುದಿಲ್ಲ; ಇತಿವಾಕ್–ಎಂಬ ವಾಕ್ಯವು, ಯತಃ–ಯಾವ ಕಾರಣದಿಂದ, ಭಾಗವತೇ ಅಸ್ತಿ–ಭಾಗವತದಲ್ಲಿ ಇರುತ್ತದೆಯೋ, ತಸ್ಮಾತ್–ಆದ್ದರಿಂದ, ವಿಷ್ಣುಃ ಏವ–ಶ್ರೀವಿಷ್ಣುವೇ, ಅಖಂಡಾಧಿಪತಿಃ–ಸರ್ವಜಗತ್ತಿನ ಅಧೀಶ್ವರನು ; ಸಂಶಯಃ ನ–ನಿಶ್ಚಯವು ; ಇಯಂ ವಾಕ್–ಈ ನುಡಿಯು, ಮನೋಃ ಹಿ – ಮನುವಿನ ವಾಕ್ಯವಷ್ಟೇ ; ಕೈಃ – ಯಾವ, ಮಾನವೈಃ–ಮನು ಸಂಬಂಧಿಗಳಾದ ಮಾನವರಿಂದ, ನ ಮಾನನೀಯಾ–ಗೌರವಿಸಲ್ಪಡುವುದಿಲ್ಲ ? (ಎಲ್ಲ ಮಾನವರೂ ಗೌರವಿಸಿ ಅಂಗೀಕರಿಸತಕ್ಕದ್ದೇ ಸರಿ).

**ತಚ್ಛ್ರುತ್ವಾ ಮುನಯಃ ಸರ್ವೇ ವಿಸ್ಮಿತಾ ಮುಕ್ತಸಂಶಯಾಃ ।**
**ಭೂಯಾಂಸಂ ಶ್ರದ್ದಧುರ್ವಿಷ್ಣುಂ ಯತಃ ಶಾಂತಿರ್ಯತೋ ಭಯಂ ।**
**ಇತಿ ಭಾಗವತೇ ಪ್ರೋಕ್ತಂ ಮುನೀನಾಂ ವಚನಂ ಸ್ಮರ ॥ ೭೪೨ ॥**

ತಚ್ಛ್ರುತ್ವಾ–ಮನುವಿನ ಈ (ಪ್ರಸಕ್ತನುಡಿಯನ್ನು) ಮಾತನ್ನು, ಕೇಳಿ, ಸರ್ವೇ ಮುನಯಃ–ಕಶ್ಯಪ, ವಿಶ್ವಾಮಿತ್ರಾದಿಮುನಿಗಳು, ವಿಸ್ಮಿತಾಃ–ಆಶ್ಚರ್ಯಗೊಂಡರು, ಮುಕ್ತ ಸಂಶಯಾಃ–ವಿಷ್ಣುಸರ್ವೋತ್ತಮತ್ವ ವಿಷಯಕ ಸರ್ವ ಸಂಶಯಗಳ ಪರಿಹಾರವನ್ನು ಹೊಂದಿದವರು (ಆಗಿ), ಯತಃ – ಯಾರಿಂದ, ಶಾಂತಿಃ–ಇಹಲೋಕದ ಸಕಲ ಶಾಂತಿಯೋ, ಯತಃ–ಯಾರಿಂದ, ಅಭಯಂ–ಮೋಕ್ಷವೋ (ಅಂಥ), ವಿಷ್ಣುಂ–ಶ್ರೀವಿಷ್ಣುವನ್ನು, ಭೂಯಾಂಸಂ–ಸರ್ವೋತ್ತಮನನ್ನಾಗಿ, ಶ್ರದ್ದಧುಃ–ದೃಢನಿಶ್ಚಯವುಳ್ಳವರಾಗಿ (ತಿಳಿದರು) ; ಇತಿ–ಎಂದು,

---

ಮಿಳಿತರಾಗಿ, ಯಾರನ್ನು, ಯತ್ನಮಾಡಿದರೂ, ರಕ್ಷಿಸಲಾರದವರಾದರೋ, ಎಂಬ ಮನುವಿನ ನುಡಿಯು ಭಾಗವತದಲ್ಲಿರುತ್ತದೆ; ಆದರಿಂದ ಸಹ ಶ್ರೀವಿಷ್ಣುವೇ ಅಖಂಡಾಧಿಪತಿಯೆಂದು ನಿಸ್ಸಂಶಯವಾಗಿ ಸಿದ್ಧವಾಗುತ್ತದೆ ; ಸಕಲ ಮಾನವ ಧರ್ಮಮೂಲನಾದ 'ಮನು'ವಿನ ನುಡಿಯನ್ನು ಯಾವ 'ಮಾನವನು' ಮಾನ್ಯ ಮಾಡದಿರಲಿಕ್ಕಾದೀತು ? (ಎಲ್ಲರೂ ಮಾನ್ಯಮಾಡಬೇಕಷ್ಟೆ) (೭೪೦–೭೪೧). ಕಶ್ಯಪ, ವಿಶ್ವಾಮಿತ್ರಾದಿ ಋಷಿಗಳೂ (ಮಹಾಜ್ಞಾನಿಗಳೂ), ಮನುವಿನ ಈ ನುಡಿಯನ್ನು ಕೇಳಿ, ಎಲ್ಲರೂ ವಿಸ್ಮಿತರಾಗಿ, ಸಂಶಯಮುಕ್ತರಾಗಿ, ಶ್ರೀವಿಷ್ಣುವೇ ಸರ್ವೋತ್ತಮನೆಂದು ಶ್ರದ್ಧೆಯನ್ನು ಹೊಂದಿದರು ; ಆತನಿಂದಲೇ ಶಾಂತಿಯೆಂದೂ,

ಭಾಗವತೇ–ಭಾಗವತದಲ್ಲಿ, ಪ್ರೋಕ್ತಂ–ಹೇಳಲಾದ, ಮುನೀನಾಂ–ಋಷಿಗಳ, ವಚನಂ–ನುಡಿಯನ್ನು, ಸ್ಮರ–ಸ್ಮರಿಸು.

**ತದ್ಗೋತ್ರಜಾತಃ ಪೂರ್ವೇಷಾಂ ತೇಷಾಂ ವಾಕ್ಯಂ ನ ವಿಸ್ಮರ ।**
**ಯದ್ಗೋತ್ರಪ್ರವರೇಶಾಸ್ತೇ ತಾನುದಾಸ್ತೇ ಕಥಂ ಭವಾನ್ ॥ ೭೪೩ ॥**

ತದ್ಗೋತ್ರಜಾತಃ–ಕಶ್ಯಪ, ವಿಶ್ವಾಮಿತ್ರಾದಿ ಮುನಿಗಳ ಗೋತ್ರದಲ್ಲಿ ಹುಟ್ಟಿದವನೂ, ಯತ್–ಯಾವ ಕಾರಣದಿಂದ ತೇ–ಆ ಕಶ್ಯಪಾದಿಗಳು, ಗೋತ್ರ ಪ್ರವರೇಶಾಃ–ಗೋತ್ರ ಪ್ರವರಗಳ ಮೂಲಭೂತರೋ, (ಅಂಥಗೋತ್ರಪ್ರವರಗಳುಳ್ಳ) ಭವಾನ್–ನೀನು, (ಪರನು), ತಾನ್–ಆ ವಾಕ್ಯಗಳನ್ನು, ಕಥಂ–ಹೇಗೆ ಉದಾಸ್ತೇ–ಉದಾಸೀನನಾಗಿ ನೋಡುವಿ (ಗಮನಿಸದಿರುವಿ?), (ತದ್ಗೋತ್ರ ಜಾತನಾದ ನೀನು) ಪೂರ್ವೇಷಾಂ–ನಿನ್ನ ಪೂರ್ವಿಕರ, ವಾಕ್ಯಂ–ನುಡಿಯನ್ನು, ನ ವಿಸ್ಮರ–ಮರೆಯಬೇಡ.

**ಅಸ್ಯ ದೇವಸ್ಯೇತಿ ವೇದೇ ಯಥಾವಿಷ್ಣೋರ್ವಶೇ ಹರಃ ।**
**ಸ್ಪಷ್ಟಂ ಶ್ರುತಸ್ತಥಾ ವೇದೇ ನ ಕ್ವಾಪೀಶವಶೋ ಹರಿಃ ॥ ೭೪೪ ॥**

ಅಸ್ಯದೇವಸ್ಯ ಇತಿ–'ಅಸ್ಯದೇವಸ್ಯಮೀಹ್ಳುಷೋವಯಾ ವಿಷ್ಣೋರೇಕಸ್ಯ ಪ್ರಭೃಥೇಹವಿರ್ಭಿಃ। ವಿದೇಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಂ. ವರ್ತಿರಶ್ವಿನಾವಿರಾವತ್' ಎಂಬ ವೇದೇ–ಶ್ರುತಿಯಲ್ಲಿ, ಯಥಾ–ಹೇಗೆ, ವಿಷ್ಣೋಃ–ವಿಷ್ಣುವಿನ, ವಶೇ–ವಶದಲ್ಲಿ, ಹರಃ–ರುದ್ರನು, ಸ್ಪಷ್ಟಂ ಶ್ರುತಃ–ಸ್ಪಷ್ಟವಾಗಿ ಹೇಳಲ್ಪಟ್ಟಿರುವನೋ (ಪ್ರಸಿದ್ಧವಾದ ವಿಷ್ಣುರುದ್ರ ಶಬ್ದಗಳೆರಡನ್ನು ಹೇಳಿ, ಅವರಲ್ಲಿ

---

ಮೋಕ್ಷವೆಂದೂ, ನಿಸ್ಸಂಶಯವಾಗಿ ತಿಳಿದರು; ಹೀಗೆಂದು ಭಾಗವತದಲ್ಲಿ ಹೇಳುವ ಋಷಿಗಳ ನುಡಿಯನ್ನು ಸ್ಮರಿಸುವುದೂ ಅವಶ್ಯಕವು (೭೪೨). ಆ ಕಶ್ಯಪಾದಿ ಪ್ರಾಚೀನ ಋಷಿಗಳ ವಾಕ್ಯವನ್ನು ಮರೆಯಬೇಡ; ನೀನೂ ಅವರ ಗೋತ್ರದಲ್ಲಿ ಜನ್ಮ ತಾಳಿರುವಿ; ಗೋತ್ರ ಪ್ರವರಗಳ ಪ್ರವರ್ತಕರಾದ ಅವರು ನಿನಗೂ ಮಾನ್ಯರಲ್ಲವೇ? ಅವರ ಮಾತುಗಳನ್ನು ಉದಾಸೀನಮಾಡುವಿಯಾ? ಅದು ನಿನಗೆ ಶ್ರೇಯಸ್ಕರವಲ್ಲ (೭೪೩). 'ಅಸ್ಯದೇವಸ್ಯ ಮೀಹ್ಳುಷೋವಯಾ ವಿಷ್ಣೋರೇಷಸ್ಯ' ಎಂಬ ವೇದವು, ಸ್ಪಷ್ಟವಾಗಿ ವಿಷ್ಣುವಶದಲ್ಲಿದ್ದು, ಆತನ ಇಚ್ಛೆಯಂತೆಯೇ ಜೀವರಿಗೆ

*

ರುದ್ರನು ವಿಷ್ಣುವಿನ ವಶನೆಂದು ಹೇಳಲ್ಪಟ್ಟಿರುವಂತೆ), ತಥಾ–ಹಾಗೆ (ವಿಷ್ಣು ರುದ್ರಪದಗಳೆರಡನ್ನು ಹೇಳಿ, ಅವರಲ್ಲಿ ರುದ್ರನು ಉತ್ತಮನೆಂದು), ವೇದೇ – ವೇದದಲ್ಲಿ, ಕ್ವಾಪಿ–ಎಲ್ಲಿಯೂ, ಹರಿಃ–ವಿಷ್ಣುವು, ಈಶವಶಃ–ರುದ್ರವಶನೆಂದು, ನ–ಹೇಳಿರುವುದಿಲ್ಲ. ('ಸೋಮಃ ಪವತೇ' ಎಂಬ ಶ್ರುತಿಯಲ್ಲಿ, ಸೋಮನಿಗೆ ವಿಷ್ಣುಜನಕತ್ವವು ಕೇಳಿಬರುತ್ತದೆ; ಸೋಮಪದದಿಂದ ಪವಮಾನನು, ಸೋಮನು, ಚಂದ್ರಾಭಿಮನ್ಯಸೋಮಲತೆಯೂ, ಲೋಕವೇದಗಳಲ್ಲಿ ಪ್ರಸಿದ್ಧಿ ಇದೆ–ರುದ್ರನಲ್ಲಿ ಪ್ರಸಿದ್ಧಿ ಇಲ್ಲ; ಆದ್ದರಿಂದ ಪರಾಭಿಲಕ್ಷಿತವಾದ ಅರ್ಥವು ಸಿದ್ಧವಾಗುವುದಿಲ್ಲ. (ಪ್ರಸಕ್ತ ಶ್ರುತಿಯ ಪದಗಳ ಅರ್ಥವು ಮುಂದಿನ ಶ್ಲೋಕಗಳಲ್ಲಿ ನೋಡಬಹುದು).

**ಈಷೇರಿಚ್ಛಾರ್ಥಕಾದ್ಧಾತೋಃ ಪಚಾದ್ಯಚಿಕೃತೇ ಸತಿ ।**
**ಗುಣೇ ಜಾತೇ ಪಾಲನೇಚ್ಛಾ ಕೃಪಾ ಯಸ್ಯ ಸ್ವಸೇವಿಷು ।**
**ತಸ್ಯೈಷಸ್ಯ ನ ಚೇದೇತಸ್ಯೇತಿ ಸ್ಯಾಚ್ಛಬ್ದವಿನ್ಮತೇ ॥ ೭೪೫ ॥**

ಶ್ರೌತಪದಗಳ ಅರ್ಥವನ್ನು ಹೇಳುತ್ತಾರೆ :—

ಇಚ್ಛಾರ್ಥಕಾತ್–ಇಚ್ಛೆ ಎಂಬರ್ಥವುಳ್ಳ ಧಾತೋಃ–ಧಾತುವಿನಿಂದ, (ಇಷ ಇಚ್ಛಾಯಾಂ ಎಂಬಲ್ಲಿ ಉಕ್ತವಾದ ಧಾತುವಿಗೆ, ಇಕಾರಕ್ಕೆ ಅಕಾರವು ಸೇರಲು–ಸೂತ್ರದಂತೆ–ಏಷಃ ಎಂಬ ಅಕಾರಾಂತ ಪದವಾಗಿ, ಇಚ್ಛೆಯುಳ್ಳವನನ್ನು ಹೇಳುತ್ತದೆ) ; ಪಚಾದ್ಯಚಿಕೃತೇಸತಿ–ಪಚಾದ್ಯಚಿ ಎಂಬ ವ್ಯಾಕರಣ ನಿಯಮದಂತೆ,

---

ಲೌಕಿಕೈಶ್ವರ್ಯಾದಿಗಳನ್ನು ರುದ್ರನು ಕೊಡುವನೆಂದು, ರುದ್ರನಿಗೆ ವಿಷ್ಣುವಿನ ಅಧೀನತ್ವವನ್ನು ಹೇಳುತ್ತದೆಯೋ, ಹಾಗೆ ಮತ್ತೆಲ್ಲಿಯೂ, ವಿಷ್ಣು ರುದ್ರರಿಬ್ಬರನ್ನೂ ಹೇಳಿ, ಅವರಲ್ಲಿ ವಿಷ್ಣುವಿಗೆ ರುದ್ರಾಧೀನತ್ವವನ್ನು ವೇದವು ಹೇಳುವುದಿಲ್ಲ (೭೪೪). ಪ್ರಸಕ್ತ 'ಅಸ್ಯ ದೇವಸ್ಯ....' ಎಂಬ ಪವಮಾನ ಸೂಕ್ತ ವಾಕ್ಯದಲ್ಲಿ 'ಏಷಸ್ಯ' ಎಂಬುದಕ್ಕೆ ತನ್ನ ಭಕ್ತರನ್ನು, ಕೃಪಾಯುಕ್ತನಾಗಿ ಸರ್ವವಿಧದಿಂದ ರಕ್ಷಿಸುವವನಾದ, ಎಂಬರ್ಥವು ಯುಕ್ತವಾಗುತ್ತದೆ ; 'ಇಷ ಇಚ್ಛಾಯಾಂ' ಎಂಬ ಧಾತುವಿನಿಂದ ಉತ್ಪನ್ನವಾದುದು 'ಏಷಸ್ಯ' ಎಂಬ ಪದವು 'ಇ' ಕಾರಕ್ಕೆ ಅಕಾರವು ಸೇರಿ, ಗುಣವಾಗಿ, 'ಏಷಃ' ಎಂಬ ಅಕಾರಾಂತ ಪದವು ನಿಷ್ಪನ್ನವಾಗುತ್ತದೆ ; ಏಷಸ್ಯ ಎಂಬುದು ಈ ಅರ್ಥವುಳ್ಳದ್ದಲ್ಲದಿದ್ದರೆ, 'ಏತಸ್ಯ–ಈತನ'

ಗುಣೇ ಜಾತೇ–ಇಷ ಎಂಬಲ್ಲಿರುವ ಇಕಾರಕ್ಕೆ ಅಕಾರದ ಗುಣಸಂಧಿಯಿಂದ, (ಏಷಃ ಎಂಬ ಅಕಾರಾಂತ ಪದವು ನಿಷ್ಪನ್ನವಾಗುತ್ತದೆ) ; ಯಸ್ಯ–ಯಾವ ವಿಷ್ಣುವಿಗೆ, ಸ್ವಸೇವಿಷು–ತನ್ನನ್ನು ಸೇವಿಸುವರಲ್ಲಿ, ಕೃಪಾ–ಕೃಪೆಯೋ, ಪಾಲನೇಚ್ಛಾ–(ಅವರ) ರಕ್ಷಣೆಯ ಇಚ್ಛೆಯೆಂದು (ಭಕ್ತಪಾಲನೇಚ್ಛೆಯೆಂದು) ಲಭಿಸುತ್ತದೆ ; ತಸ್ಯ ಏಷಸ್ಯ– 'ವಿಷ್ಣೋರೇಷಸ್ಯ' ಎಂಬಲ್ಲಿ (ಶ್ರುತಿಯಲ್ಲಿ) ಇರುವ ಏಷಸ್ಯ ಎಂಬುದಕ್ಕೆ, ನ ಚೇತ್–ಸ್ವಭಕ್ತಪಾಲನೇಚ್ಛೆಯುಳ್ಳವನೆಂಬ ಅರ್ಥವು ಇಲ್ಲದಿದ್ದರೆ, ಏತಸ್ಯ ಇತಿ ಸ್ಯಾತ್–ಏತಸ್ಯ ಎಂದಾಗಬೇಕು (ಏಷಸ್ಯ ಎಂದಲ್ಲ), ಶಬ್ದವಿನ್ಮತೇ–ಶಬ್ದಶಾಸ್ತ್ರ ಬಲ್ಲವರ ಮತದಲ್ಲಿ (ಈ ಅರ್ಥವೇ ಸಿದ್ಧವಷ್ಟೆ–ವ್ಯಾಕರಣಾನುಸಾರವಾದ ವ್ಯುತ್ಪತ್ತಿಯುಳ್ಳದ್ದು).

**ತಸ್ಯಾಸ್ಯ ವಿಷ್ಣೋರ್ದೇವಸ್ಯ ಭಕ್ತಾಭೀಷ್ಟಸ್ಯ ಸೇಚನಾತ್ ।**
**ಮೀಹ್ಳುಷೋ ಯನ್ಮಿಹಃಸೇಕೇ ಹವಿರ್ಭಿರ್ಯಜ್ಞಸಾಧನೈಃ ।**
**ಪ್ರಭೃಥಂ ಪ್ರಭೃತಂ ಶಸ್ತಂ ತೃತೀಯೋತಿಶಯೇ ಯತಃ ॥ ೭೪೬ ॥**

**ಅಚೋ ಹಲಶ್ಚ ಯತ್ಪಶ್ಚಾತ್ತೃತೀಯೋಸೌ ತತಃ ಕಿಲ ।**
**ತತಃ ಪ್ರಭರಣೇ ಪೂಜಾತ್ಮಕೇ ಸನ್ಮ್ಯಕ್ಕೃತೇ ಸತಿ ॥ ೭೪೭ ॥**

ತಸ್ಯ–ಆ ಪ್ರಸಿದ್ಧವಾದ, ಅಸ್ಯ ದೇವಸ್ಯ–ಈ ದೇವೋತ್ತಮನಾದ, ವಿಷ್ಣೋಃ–ವಿಷ್ಣುವಿನ, ಭಕ್ತಾಭೀಷ್ಟಸ್ಯ–ಭಕ್ತರ ಅಭೀಷ್ಟಗಳ, ಸೇಚನಾತ್–ಸೇಚನಮಾಡುವುದರಿಂದ, ಮೀಹ್ಳುಷಃ–ಮೀಹ್ಳುಟ್‌ನಾಮಕನಾದ ವಿಷ್ಣುವಿಗೆ, (ಮತ್ತು) ಯತ್–

---

ಎಂದು ಶಬ್ದರೂಪವಿರಬೇಕಾಗಿತ್ತು, ಸ್ವಭಕ್ತಪಾಲನೆಯೇ ಇಚ್ಛೆಯಾಗಿವುಳ್ಳವನು 'ಏಷಃ' ; ಏಷಸ್ಯ–ಹೀಗಿರುವ ಶ್ರೀವಿಷ್ಣುವಿನ, ಎಂದರ್ಥವಾಗುತ್ತದೆ; ಇದು ವ್ಯಾಕರಣಜ್ಞರ ಮತವು (೭೪೫). ಭಕ್ತಾಭೀಷ್ಟಪ್ರದನೂ, ದೇವೋತ್ತಮನೂ ಆದ ಶ್ರೀವಿಷ್ಣುವಿನ ರಕ್ಷಣೆಯು, ಭಕ್ತಿಪೂರ್ವಕವಾದ ಪೂಜಾತ್ಮಕ ಕೃತಿಗಳಿಂದ ಮೆಚ್ಚಿಸಲು, ತಪ್ಪದೇ ಲಭಿಸುತ್ತದೆ; ಆತನ ಹೆಸರು ಮೀಹ್ಳುಟ್ ಎಂದಿರುತ್ತದೆ (ಮೀಹ್ಳುಷಃ–ಷಷ್ಠಿ ಏಕವಚನ); 'ಮಿಹ ಸೇಚನೇ' ಎಂಬ ಧಾತುವಿನಿಂದ ಹುಟ್ಟಿದ ಈ ಪದವು ಭಕ್ತರ ಅಭೀಷ್ಟವನ್ನು ಮಳೆಗರೆಯುವುದೆಂಬ ಅರ್ಥವುಳ್ಳದ್ದು; ಈ ವಿಷ್ಣುತೃಪ್ತಿಯು ಯಜ್ಞಸಾಧನಗಳಾದ, ಹವಿಸ್ಸುಗಳಿಂದ, ಎಂಬಂತೆ ಪೂರ್ಣ

ಯಾವ ಕಾರಣದಿಂದ, ಮಿಹಃಸೇಕೇ–ಮಿಹಸೇಚನೇ, ಎಂಬ ಧಾತುವಿನಿಂದ, (ಮೀಢ್ವುಷಃ ಎಂಬುದರ ಅರ್ಥವನ್ನು ಹೀಗೆ ತಿಳಿಯಬೇಕು) ಯಜ್ಞಸಾಧನೈಃ–ಯಜ್ಞಸಾಧನಗಳಾದ, ಹವಿರ್ಭಿಃ – ಹವಿಸ್ಸುಗಳಿಂದ, ಪ್ರಭೃಥಂ – ಪ್ರಭೃತಂ–ಪ್ರಭೃಥಂ ಎಂಬುದಕ್ಕೆ ಪ್ರಭೃತಂ ಎಂಬರ್ಥವನ್ನು ತಿಳಿದು, ಯತಃ–ಯಾವ ಕಾರಣದಿಂದ, ತೃತೀಯಃ–ವರ್ಗದ ಮೂರನೆಯ ವರ್ಣವು, ಅತಿಶಯೇ–ಅತಿಶಯವೆಂಬ ಅರ್ಥದಲ್ಲಿ, ಶಸ್ತಂ–ಪ್ರಶಸ್ತವೋ ತತಃ–ಆದ್ದರಿಂದ, (ಪ್ರಭುತಂ) ಪ್ರಭರಣೇ – ಚೆನ್ನಾಗಿ ತೃಪ್ತಿಯಾಗುವಷ್ಟೆ, ಪೂಜಾತ್ಮಕೇ – ಪೂಜಾರೂಪದ ಹವಿರ್ದಾನವು, ಸಮ್ಯಕ್‌ಕೃತೇ–ಭಕ್ತಿಪೂರ್ವಕ ಮಾಡಲ್ಪಡುತ್ತಿರಲು, (ಎಂಬರ್ಥಗಳನ್ನು ಶ್ರುತಿಪದಗಳಿಗೆ ತಿಳಿಯಬೇಕು); ಅಚಃ ಹಲಶ್ಚ ಯತ್ ಪಶ್ಚಾತ್–ತ್+ಅ=ತ ಎಂದು ವ್ಯಂಜನಾಕ್ಷರಗಳಲ್ಲಿ ಸ್ವರವೂ ಸೇರಿರುವುದರಿಂದ 'ಥ' ಎಂಬುದು ಎರಡನೆಯದಲ್ಲಿ ಮೂರನೆಯದಾಗುತ್ತದೆಯಾದ್ದರಿಂದ ಈ ನಿಯಮವು ಸ್ಪಷ್ಟವಾಗಿ ಅನ್ವಯಿಸುತ್ತದೆ.

**ವಯಾ ಭೂತ್ಯಾದಿ ದಾನೇನ ಬಂಧಕೋ ವಯಬಂಧನೇ ।**
**ಇತಿ ಧಾತೋರ್ಹಿ ಪ್ರಸಿದ್ಧೋ ರುದ್ರಸ್ತ್ರಿಭುವನೇಶ್ವರಃ ॥ ೭೪೮ ॥**

ವಯ ಶಬ್ದಾರ್ಥವನ್ನು ಹೇಳುತ್ತಾರೆ :—

ವಯಬಂಧನೇ ಇತಿ ಧಾತೋಃ–ವಯ ಬಂಧಸು ಎಂಬರ್ಥದ ಧಾತುವಿನಿಂದ, ವಯಾ–ನಿತ್ಯತೃಪ್ತನಾದ ವಿಷ್ಣುವಿನಿಂದಲೇ ನಿಯತನಾದ ರುದ್ರನಿಂದ,

---

ಪೂರ್ಣವೂ ಪ್ರಶಸ್ತವೂ ಆಗಿರಬೇಕಾದುದು ಅವಶ್ಯಕ; ಶ್ರುತಿಯಲ್ಲಿರುವ ಪ್ರಭೃಥಂ ಎಂಬುದಕ್ಕೆ ಪ್ರಭೃತಂ ಎಂದರ್ಥ; 'ತಕಾರ'ಕ್ಕೆ ಬದಲು, ಆ ವರ್ಗದ ವರ್ಣಗಳ ಮೂರನೇ ವರ್ಣವು ಅತಿಶಯಾರ್ಥದಲ್ಲಿ ಉಪಯೋಗಿಸಲಾಗಿದೆ; ತವರ್ಗದಲ್ಲಿ, 'ಥ' ಎಂಬುದು ಎರಡನೆಯ ವರ್ಣವು, ಮೂರನೆಯದಲ್ಲಿ ಎಂಬ ಸಂಶಯಬೇಡ, ಎಲ್ಲ ವ್ಯಂಜನಾಕ್ಷರಗಳು, ಕ್+ಅ; ತ್+ಅ; ಎಂಬಂತೆ ಒಂದೊಂದು ಸ್ವರಾಕ್ಷರ ಸಹಿತವಾಗಿಯೆ ಇರುತ್ತವೆ; ಆದ್ದರಿಂದ ಥ ಎಂಬುದು ಮೂರನೆಯ ವರ್ಣವೇ ಆಗುತ್ತದೆ; 'ತೃತೀಯೋತಿಶಯೇ' ಎಂಬ ವಿಧಿಯು ಅನ್ವಯಿಸುತ್ತದೆ; 'ಪ್ರಭೃತಂ' ಎಂದರೆ ಪ್ರ ಎಂಬ ಉಪಸರ್ಗವು ಸಮ್ಯಕ್ತ್ವವನ್ನು, ಭರಣೀ ಎಂಬುದು ಪೂಜಾತ್ಮಕ ಕೃತಿಯನ್ನು ಹೇಳುತ್ತದೆ (೭೪೬–೭೪೭) 'ವಯ ಬಂಧನೇ'

ಎಂಬರ್ಥವನ್ನು ಶ್ರುತಿಯಲ್ಲಿರುವ ‘ ವಯಾ ’ ಶಬ್ದಾರ್ಥವನ್ನಾಗಿ ತಿಳಿಯಬೇಕೆನ್ನುತ್ತಾರೆ ; ಯಥಾ – ಹೇಗೆಂದರೆ, ತ್ರಿಭುವನೇಶ್ವರಃ–ಜಗತ್ತಿನಲ್ಲಿ ಈಶ್ವರನೆಂದು, ಪ್ರಸಿದ್ಧಃ ರುದ್ರಃ – ಪ್ರಸಿದ್ಧನಾದ ರುದ್ರನು, ಭೂತ್ಯಾದಿದಾನೇನ – ಲೌಕಿಕ ಐಶ್ವರ್ಯಾದಿ ದಾನದಿಂದ, ಬಂಧಕಃ–(ಜೀವರನ್ನು) ಸಂಸಾರದಲ್ಲಿ ಬಂಧಿಸುವವನು, ಹಿ–ಎಂದು ಪ್ರಸಿದ್ಧನು.

**ರುದ್ರಿಯಂ ರುದ್ರಸಂಬಂಧಿ ಮಹಿತ್ವಂ ಮಹಿಮೋಚ್ಚಯಂ ।**
**ಘಸ್ಯೇತ್ಯಾದೇಶಕರಣೇ ಸಮುದ್ರಿಯಪದಂ ಯಥಾ ।**
**ತಥಾ ಬಾಹುಲಕಾತ್ತಸ್ಮಾದ್ರೌದ್ರಮೇವ ಹಿ ರುದ್ರಿಯಂ ॥ ೭೪೯ ॥**

ರುದ್ರಸಂಬಂಧವಾದುದನ್ನು ಹೇಳಲು ‘ರೌದ್ರಂ’ ಎಂದಿರಬೇಕು ; ‘ ರುದ್ರಿಯಂ ’ ಎಂದು ಹೇಗೆಂಬುದನ್ನು ಉಪಪಾದಿಸುತ್ತಾರೆ :—

ರುದ್ರಿಯಂ–ರುದ್ರಸಂಬಂಧಿಯು, ಮಹಿತ್ವಂ–ಮಹಿಮೆಯ ಉತ್ಕೃಷ್ಟತೆಯು, (ಎಂದು ಶ್ರುತಿಪದ್ಯಗಳ ಅರ್ಥವು) ; ಘಸ್ಯ–ಘ ಪ್ರತ್ಯಯದ, ಇತಿ ಆದೇಶಕರಣೇ–ಎಂದು ಆದೇಶ ಮಾಡಿದರೆ, ಯಥಾ–ಸಮುದ್ರಪದದಿಂದ ಘಪ್ರತ್ಯಯದ ಆದೇಶವಾದರೆ ‘ ಸಮುದ್ರಿಯಂ, ಯಥಾ–ಸಮುದ್ರಿಯಂ ಎಂದು ಆಗುವುದೋ, ತಥಾ ಹಾಗೆ–ಬಾಹುಲಕಾತ್–(ಆ ಪ್ರತ್ಯಯಕ್ಕೆ ಛಂದಸಿ ಬಹುಲಂ ಇತ್ಯಾದಿಯಾಗಿ ನಿಯಮಾಪವಾದಗಳನ್ನು ಲಕ್ಷಿಸಿ), ರೌದ್ರಂ–ರೌದ್ರವೆಂಬುದು, ತಸ್ಮಾತ್–ಆ ಕಾರಣದಿಂದ, ರುದ್ರಿಯಂ – ರುದ್ರಿಯಂ (ಎಂದಾಗುತ್ತದೆ) : ಹಿ – ಈ ರೂಪದ ನಿಷ್ಪತ್ತಿಯು ಪ್ರಸಿದ್ಧವೇ ಇದೆ.

---

ಎಂಬ ಧಾತುವಿನಿಂದ, ನಿತ್ಯ ತೃಪ್ತನಾದ ವಿಷ್ಣುವಿನಿಂದ ಜನರಿಗೆ ಐಶ್ವರ್ಯಾದಿಗಳು ಕೊಟ್ಟು, ಸಂಸಾರದಲ್ಲಿ ಬಂಧಿಸುವ ಸಾಮರ್ಥ್ಯವುಳ್ಳನಾಗಿದ್ದಾನೆ ; ತ್ರಿಭುವನೇಶ್ವರನೆಂಬ ಪ್ರಸಿದ್ಧಿಯನ್ನು ಜಗತ್ತಿನಲ್ಲಿ ಸರ್ವರಿಗೆ ಲೌಕಿಕ ಐಶ್ವರ್ಯಾದಿಗಳ ದಾನದಿಂದ, ಪಡೆದಿರುತ್ತಾನೆ ; ಆದ್ದರಿಂದ ಶ್ರುತಿಯಲ್ಲಿರುವ ‘ವಯಾ’ ಎಂಬ ಪದಕ್ಕೆ ರುದ್ರನಿಂದ, ಎಂಬರ್ಥವನ್ನು ತಿಳಿಯಬೇಕು ; (೭೪೮). ರುದ್ರಸಂಬಂಧವಾದುದು ರೌದ್ರಂ ಎಂದಾಗುವುದಿಲ್ಲ ; ಛಂದೋನಿಯಮಾನುಸಾರ ಘ ಪ್ರತ್ಯಯದ ಆದೇಶದಿಂದ, ಸಮುದ್ರ ಸಂಬಂಧವುಳ್ಳದ್ದು, ಸಮುದ್ರಿಯಂ ಎಂದು ಆಗುವಂತೆ, ರುದ್ರಿಯಂ

**ವಿದೇ ಲೇಭೇ ತದ್ವದೇವ ಪೂರ್ವಾಭ್ಯಾಸಮುಪೈಕ್ಷತ ।**
**ಪೂರ್ವಾನಭ್ಯಸ್ತಪದವೀಪ್ರಾಪ್ತಿಂ ಸೂಚಯಿತುಂ ಶ್ರುತಿಃ ॥ ೭೫೦ ॥**

**ಅನಾವೃತ್ತಿಪದಪ್ರಾಪ್ತಿಸೂಚನಾಯ ಚ ಸೂತ್ರವತ್ ।**
**ಅಸ್ಮಿನ್ನರ್ಥೇ ಪ್ರಮಾಣಾನಾಂ ಪ್ರಸಿದ್ಧಿಂ ಚ ಹಿನಾ ಜಗೌ ॥ ೭೫೧ ॥**

ವಿದೇ–' ವಿದೇ ' ಎಂಬುದರ ಅರ್ಥವು, ಲೇಭೇ–ಹೊಂದುವುದೆಂದಾಗಿದೆ ; (ಲಿಟ್ ಪ್ರಯೋಗದಲ್ಲಿ ಪೂರ್ವಾಭ್ಯಾಸವು ವಿಹಿತವಾದ್ದರಿಂದ, ' ವಿವಿದೇ ' ಎಂದು ಪ್ರಯೋಗವಿರಬೇಕು, ಎಂದರೆ), (ವಿದ್ಲೃ ಲಾಭೇ ಎಂಬ ಧಾತು), ತದ್ವತ್–ಲೇಭೇ ಎಂಬ ಪ್ರಯೋಗದಂತೆ, ಪೂರ್ವಾಭ್ಯಾಸಂ–(' ವಿವಿದೇ ' ಎಂಬ ಪೂರ್ವಾಭ್ಯಾಸವನ್ನು), ಉಪೈಕ್ಷತ–ಉದಾಸಿಸಿತು (ಶ್ರುತಿಯು ಉಪೇಕ್ಷೆಮಾಡಿತು. ಲೇಭೇ ಎಂಬ ಲಿಟ್ ಪ್ರಯೋಗದಲ್ಲಿ ಪೂರ್ವವರ್ಣಾಭ್ಯಾಸವಿಲ್ಲ ; ಅದರಂತೆ (ಆವೃತ್ತಿಯಿಲ್ಲದಂತೆ), ವಿವಿದೇ ಎಂಬಲ್ಲಿ ' ವಿದೇ ' ಎಂದು ಪ್ರಯೋಗಿಸಿತು) ; ಶ್ರುತಿಃ–ಶ್ರುತಿಯು ಪೂರ್ವಾನಭ್ಯಸ್ತ ಪದವೀಪ್ರಾಪ್ತಿಂ–ಪೂರ್ವದಲ್ಲಿ (ಹಿಂದೆ) ಇರದ ರುದ್ರಪದವಿಯ ಪ್ರಾಪ್ತಿಯನ್ನು, ಸೂಚಯಿತುಂ–(ಭಗವಂತನ ಪೂಜೆಯಿಂದ ಲಭಿಸುವುದೆಂಬುದನ್ನು) ಸೂಚಿಸಲು, ಅನಾವೃತ್ತಿ ಪದಪ್ರಾಪ್ತಿ ಸೂಚನಾಯ ಚ–(ರುದ್ರಪದಪ್ರಾಪ್ತಿರೂಪ ಐಹಿಕ ಫಲಮಾತ್ರವಲ್ಲ) ಅನಾವೃತ್ತಿಯುಳ್ಳ (ಹಿಂದಿರುಗಿ

---

ಎಂಬ ರೂಪವು ನಿಷ್ಪನ್ನವಾಗುತ್ತದೆ; ರುದ್ರಿಯಂ ಎಂಬುದಕ್ಕೆ ರೌದ್ರಂ ಎಂದೇ ಅರ್ಥ (೭೪೯). ಶ್ರುತಿಯಲ್ಲಿ 'ವಿದೇ' ಎಂಬುದಕ್ಕೆ 'ಲೇಭೇ' ಎಂದರ್ಥ ; ಲೇಭೇ ಎಂಬಲ್ಲಿ 'ಲಿಲೇಭೇ' ಎಂದು ಪೂರ್ವವರ್ಣದ ಆವೃತ್ತಿಯನ್ನು ಮಾಡದಿರುವಂತೆ 'ವಿವಿದೇ' ಎಂಬುದಕ್ಕೆ ಬದಲಾಗಿ 'ವಿದೇ' ಎಂದು, ಶ್ರುತಿಯು ಪ್ರಯೋಗಿಸಿದೆ ; ಲಿಟ್ ಪ್ರಯೋಗದಲ್ಲಿ ಸಾಮಾನ್ಯವಾಗಿ ಪೂರ್ವವರ್ಣದ ಆವೃತ್ತಿಯು ಕಂಡು ಬರುವುದುಂಟು ; ಹಿಂದೆ ಇದರ ರುದ್ರಪದವಿಯು ಹೊಸದಾಗಿ ಪ್ರಾಪ್ತವಾಗುವುದೆಂಬುದನ್ನು, ರುದ್ರನಿಗೆ ವಿಷ್ಣುಪೂಜೆಯಿಂದ, ಇಷ್ಟುಮಾತ್ರ ಐಹಿಕ ಪದಪ್ರಾಪ್ತಿಯಲ್ಲ ; ಅನಾವೃತ್ತಿರೂಪದ ನಿತ್ಯಮೋಕ್ಷಸ್ಥಿತಿಯೂ ಲಭಿಸುವುದೆಂಬುದರ ಸೂಚಕವೂ ಆಗಿದೆ, ಈ ಅಸಾಧಾರಣ ಪ್ರಯೋಗವು ; 'ಹಿ' ಎಂಬ ಪದವು ಈ ಅರ್ಥಗಳಲ್ಲಿ ಬಹುಪ್ರಮಾಣಗಳಿರುತ್ತವೆಂದೂ ಸೂಚಿಸುತ್ತದೆ (೭೫೦–೭೫೧).

ಬಾರದ, ನಿತ್ಯಮೋಕ್ಷ ಪದವಿಯೂ, ಭಗವತ್ಪೂಜೆಯಿಂದ ಲಭಿಸುವುದೆಂಬುದನ್ನು ಸೂಚಿಸಲು ಸಹ, ಸೂತ್ರವತ್–ಬಹ್ವರ್ಥಸೂಚಕ ಸೂತ್ರದಂತೆ, ಸಹ (ಪೂರ್ವಾಭ್ಯಾಸವನ್ನು ಉಪೇಕ್ಷಿಸಿದೆ) ; ಹಿನಾ–ಹಿ ಎಂಬ ಪದದಿಂದ, ಅಸ್ಮಿನ್ ಅರ್ಥೇ–ಈ ಅರ್ಥದಲ್ಲಿ, ಪ್ರಮಾಣಾನಾಂ–ಪ್ರಮಾಣಗಳ, ಪ್ರಸಿದ್ಧಿಂ ಚ–ಪ್ರಸಿದ್ಧಿಯನ್ನು, ಜಗೌ–(ಶ್ರುತಿಯು) ಕೀರ್ತಿಸಿತು.

**ಯುವಾಮಪ್ಯಶ್ವಿನೌ ವರ್ತಿರ್ವರ್ತನಂ ಯಾಜ್ಞಿಕಾನ್ನವತ್ ।**
**ಇರಾವದ್ಬ್ರಾಹ್ಮಣೇ ಯಸ್ಮಾದಿಲೇತ್ಯನ್ನಮುದೀರಿತಂ ।**
**ಡಲಯೋರಲಯೋಶ್ಚಾಭೇದೇನ ಸ್ಯಾದೀದೃಶಂ ಪದಂ ॥ ೭೫೨ ॥**

ಅಶ್ವಿನೌ–ಹೇ ಅಶ್ವಿನೀದೇವತೆಗಳೇ !, ಯುವಾಂ ಅಪಿ–( ಯಾಸಿಷ್ಟಂ, ಎಂದು ಮಧ್ಯಮ ಪುರುಷದ್ವಿವಚನ ಪ್ರಯೋಗದಿಂದ) ನೀವಿಬ್ಬರು ಸಹ, ವರ್ತಿಃ–ವರ್ತಿ ಎಂದರೆ, ವರ್ತನಂ–ವೃತ್ತಿಯು, (ಉಪಜೀವಿಕೆಯು), ಇರಾವತ್–ಇರಾವತ್ ಎಂದರೆ, ಯಾಜ್ಞಿಕಾನ್ನವತ್–ಯಜ್ಞದಲ್ಲಿ ಹವಿಸ್ಸನ್ನು ಹೊಂದಿರುವಂತೆ (' ಅಶ್ವಿಭ್ಯಾಂ ಸ್ವಾಹಾ ' ಎಂದು ಕೊಡುವ ಹವಿಸ್ಸೆಂಬ ಅನ್ನವುಳ್ಳವರಾಗಿರುವಿರಿ) ; ಬ್ರಾಹ್ಮಣೇ – ಋಗ್ವೇದಬ್ರಾಹ್ಮಣದಲ್ಲಿ ( ' ಇಲೇನ್ನಮೇವಾಸ್ಯ ' ಎಂದಿರುತ್ತದೆ ), ಯಸ್ಮಾತ್ – ಯಾವ ಕಾರಣದಿಂದ, ಇಲೇತಿ – ಇಲ ಎಂದು, ಅನ್ನಂ – ಅನ್ನವು ಉದೀರಿತಂ–ಹೇಳಲ್ಪಟ್ಟಿರುತ್ತದೆಯೋ) ಈದೃಶಂ ಪದಂ–ಈ ರೂಪದ 'ಇರಾವತ್' ಎಂಬ ಪದವು, ಡಲಯೋರಲಯೋಃ ಚ–ಡಲಗಳ ಮತ್ತೆ ರಲಗಳ, ಅಭೇದೇನ–ಅಭೇದಪ್ರಯೋಗದಿಂದ, ಸ್ಯಾತ್–ಸಿದ್ಧವಾಗುತ್ತದೆ.

**ಯಾಸಿಷ್ಟಂ ತಸ್ಯ ಕೃಪಯೈವಾಯಾಸಿಷ್ಟಂ ಲುಙೀದೃಶಂ ।**
**ಅಮಾಙ್ಯೋಗೇಪಿ ಯದ್ವೇದೇ ಪದಂ ಶಾಸ್ತಿ ಸ ಪಾಣಿನಿಃ ॥ ೭೫೩ ॥**

---

ಶ್ರುತಿಯು 'ಇರಾವತ್' ಎಂದರೆ, ರಲಗಳ ಅಭೇದವನ್ನು ಹೇಳುವ ಋಗ್ವೇದ ಬ್ರಾಹ್ಮಣ ವಾಕ್ಯದಂತೆ, ಇಲಾವತ್, ಎಂದರೆ, ಅನ್ನವುಳ್ಳದ್ದೆಂಬ ಅರ್ಥವನ್ನು ಹೇಳುತ್ತದೆ ; ಹೇ ಅಶ್ವಿನಿಗಳೇ ! ನೀವಾದರೂ, 'ವರ್ತಿಃ' ಎಂದರೆ, ಉಪಜೀವಿಕೆಯುಳ್ಳವರು (ಅನ್ನವುಳ್ಳವರೆಂಬ) ಅರ್ಥದಿಂದ, ವಿಷ್ಣುವಿನ ಕೃಪೆಯಿಂದಲೇ, ಯಜ್ಞಭಾಗಿಗಳಾದ ಅನ್ಯದೇವತೆಗಳಂತೆ, ಅನ್ನವುಳ್ಳವರಾಗಿರುತ್ತೀರಿ ( ೭೫೨ ). 'ಯಾಸಿಷ್ಟಂ' ಎಂಬುದು ಅಯಾಸಿಷ್ಟಂ–ಹೊಂದಿರುವಿರಿ ಎಂದರ್ಥ ; ಪಾಣಿನಿಯೂ

ಯಾಸಿಷ್ಟಂ—ಯಾಸಿಷ್ಟಂ ಎಂದರೆ, ತಸ್ಯ—ಆ ವಿಷ್ಣುವಿನ, ಕೃಪಯಾ ಏವ—ಕೃಪೆಯಿಂದಲೇ, ಅಯಾಸಿಷ್ಟಂ—ಹೊಂದಿರುವಿರಿ, (ನೀವಿಬ್ಬರೂ ವಿಷ್ಣುವಿನ ಕೃಪೆಯಿಂದಲೇ ಅನ್ನವುಳ್ಳವರಾಗಿ ಜೀವಿಕೆಯನ್ನು ಹೊಂದಿರುವಿರಿ); ಈದೃಶಂ ಲುಙ್—ಈ ಲುಙ್ ಪ್ರಯೋಗವಿದೆ; (ಅಡಾಗಮಾಭಾವದಲ್ಲಿ ಕಾರಣವೇನೆಂದರೆ ಹೇಳುತ್ತಾರೆ): ಅಮಾಙ್ಯೋಗೇ—ಮಾಙ್ಯೋಗವಿಲ್ಲದಿದ್ದಲ್ಲಿ, ಯತ್—ಯಾವ ಕಾರಣದಿಂದ, ವೇದೇ—ವೇದದಲ್ಲಿ, ಪದಂ—ಈರೂಪದ ನಿಷ್ಪತ್ತಿಯನ್ನು, ಪಾಣಿನಿಃ ಅಪಿ—ಪಾಣಿನಿಯೂ (ವ್ಯಾಕರಣಶಾಸ್ತ್ರಜ್ಞನೂ), ಶಾಸ್ತಿ—ವಿಧಿಸಿರುವನು; (ಹೇಳಿರುವನು).

**ಔಣಾದಿಕೇ ಸಂತರೂಪಾದ್ವೃತೇರ್ವರ್ತಿರ್ಭವಿಷ್ಯತಿ ।**
**ಯಥಾರ್ಚಿಃ ಸರ್ಪಿರಿತ್ಯಾದಿ ಪದಂ ತದ್ವದಿದಂ ಪದಂ ॥ ೭೫೪ ॥**

ಶ್ರುತಿಗತವಾದ 'ವರ್ತಿಃ' ಪದವು ದ್ವಿತೀಯಾಂತಪದವು ಹೇಗಾಗುತ್ತದೆಂದರೆ ಹೇಳುತ್ತಾರೆ:—

ಔಣಾದಿಕೇ ಸಂತರೂಪಾತ್—('ವೃತುವರ್ತನ' ಎಂಬ ಧಾತುವಿಗೆ ಔಣಾದಿಕದಲ್ಲಿ ಸುನ್ ಪ್ರತ್ಯಯವು ಬರಲು, ತಕಾರಕ್ಕೆ ದ್ವಿತ್ವದಲ್ಲಿ ಋಕಾರದ ಗುಣವಾಗಲು, ವರ್ತಿಃ ಎಂಬ ಸಕಾರಾಂತ ಪದವು ಸಿದ್ಧವಾಗುತ್ತದೆ) ಎಂಬ ನಿಯಮದಿಂದ, ವೃತೇಃ—ವೃತಿ ಎಂಬುದಕ್ಕೆ, ವರ್ತಿಃ ಭವಿಷ್ಯತಿ—ವರ್ತಿಃ ಎಂಬ ರೂಪವು ಉಂಟಾಗುತ್ತದೆ; ಯಥಾ—ಹೇಗೆಂದರೆ, ಅರ್ಚಿಃ—ರುಚಕಾಶನ ಇತಿ ಧಾತೋಃ ಎಂಬ ಧಾತುವಿನಿಂದ ಅರ್ಚಿಪದವೊ, ಸರ್ಪಿಃ ಇತ್ಯಾದಿಪದಂ—(ಸೃಪ್ಲೃಗತೌ,

---

ಸಹ ವೇದದಲ್ಲಿ 'ಅಮಾಙ್ಯೋಗೆ' ಎಂಬ ತನ್ನ ನಿಯಮದಲ್ಲಿ ಈ ರೂಪದ ನಿಷ್ಪತ್ತಿಯನ್ನು ಹೇಳಿರುವನು; ನೀವು ಉಭಯರೂ ವಿಷ್ಣು ಕೃಪಾಬಲದಿಂದ ಹೀಗೆ ಯಜ್ಞಭಾಗಕ್ಕೆ ಅರ್ಹರಾಗಿ ವರ್ತಿಸುತ್ತಿರುವಿರಿ (೭೫೩). 'ವೃತು ವರ್ತನೇ' ಎಂದು ಧಾತುವಿದೆ; ಇದರಿಂದ, ವೃತೇಃ ಎಂಬುದು ವರ್ತಿಃ ಎಂಬ ರೂಪವನ್ನು ಹೊಂದುತ್ತದೆ; ಔಣಾದಿಕದಲ್ಲಿ ಸುನ್‌ಪ್ರತ್ಯಯ ಬಂದು ಋಕಾರದ ಗುಣವಾಗಲು, ವರ್ತಿಃ ಎಂಬ ಸಕಾರಾಂತ ಪದವು ವ್ಯಾಕರಣಾನುಸಾರ ಏರ್ಪಡುತ್ತದೆ; ಅರ್ಚಿಃ, ಸರ್ಪಿಃ ಎಂಬ ಪದಗಳ ರೂಪ ನಿಷ್ಪತ್ತಿಯೂ ಈ ವಿಧದಿಂದಲೇ ಸಂಭವಿಸುತ್ತದೆ (ಋಚಕಾಶನ ಎಂಬರ್ಥದ ಧಾತು ಮತ್ತು ಸೃಪ್ಲೃಗತೌ ಎಂಬ ಧಾತುಗಳಿಂದ

ಎಂಬ ಧಾತುವಿನಿಂದ ಹರಿಯುವ ಸ್ವಭಾವದ ತುಪ್ಪವೆಂಬರ್ಥದ) ಸರ್ಪಿ ಮೊದಲಾದ ಪದವೂ (ಸಿದ್ಧವಾಗುವುವೋ), ತದ್ವತ್ ಇದಂ ಪದಂ–ಅದರಂತೆ ಈ ಪದವೂ (ಎಂದು ತಿಳಿಯಬೇಕು).

**ಅತಃ ಸ್ಪಷ್ಟಾರ್ಥವಾಣೀಯಂ ರುದ್ರಸ್ಯಾಭೀಷ್ಟದಾಯಕಂ ।**
**ವಿಷ್ಣುಂ ಶುಭಗುಣಾಂಭೋಧಿಂ ರುದ್ರಾದಪ್ಯಧಿಕಂ ಜಗೌ ॥ ೭೫೫ ॥**

ಅತಃ–ಶ್ರುತಿಯಲ್ಲಿ ವಿಷ್ಣುವಿನಲ್ಲಿಯೂ ರುದ್ರನಲ್ಲಿಯೂ ಪ್ರಸಿದ್ಧವಿರುವ ಪದಗಳನ್ನೇ ಪ್ರಯೋಗಿಸಿ, ಹೇಳುವ 'ಅಸ್ಯದೇವಸ್ಯ' ಎಂಬ ಶುತ್ಯುಕ್ತ, ಸ್ಪಷ್ಟಾರ್ಥ ವಾಣೀ ಇಯಂ–ಸ್ಪಷ್ಟಾರ್ಥವನ್ನು[1] ಹೇಳುವ ಈ ಶ್ರುತಿಯು, ರುದ್ರಸ್ಯ–

ಈ ರೂಪಗಳು ನಿಷ್ಪನ್ನವಾಗುತ್ತವೆ (೭೫೪). ಸದ್ಗುಣ ಸಮುದ್ರನಾದ ಶ್ರೀವಿಷ್ಣುವನ್ನು ರುದ್ರನ ಅಭೀಷ್ಟಪ್ರದನೆಂದು ಸ್ಪಷ್ಟವಾಗಿ ನಿರೂಪಿಸುವ ಈ ಶ್ರುತಿಯು, ರುದ್ರನಿಗಿಂತ ವಿಷ್ಣುವಿನ ಆಧಿಕ್ಯವನ್ನು ಸ್ಪಷ್ಟವಾಗಿ ಸಮರ್ಥಿಸುತ್ತದೆ (೭೫೫). ಸೋಮಪದವು ಸ, ಉಮಾ, ಎಂಬೆರಡು ಭಾಗಗಳುಳ್ಳದ್ದಲ್ಲ; ಅದು ಅಖಂಡವಾದ ಒಂದೇ ಪದವು; ಉಮಾ ಸಹಿತನೆಂಬರ್ಥವನ್ನು ಹೇಳಿ, ಸೋಮ ನೆಂದರೆ ರುದ್ರನೆಂದು ಅರ್ಥಮಾಡಲು ಬರುವುದಿಲ್ಲ; ವೇದಜ್ಞಾನಿಗಳು ಹೀಗೆಲ್ಲಿಯೂ

[1] ಪ್ರಸಕ್ತ ಶ್ರುತಿವಾಕ್ಯದ ಸಮುದಾಯಾರ್ಥವು ಹೀಗಿದೆ:—ವಿಷಸ್ಯ–ಇಚ್ಛಾರೂಪಸ್ಯ, ಕೃಪಾಲುವಾದ, ದೇವಸ್ಯ–ಸತ್ಯಸಂಕಲ್ಪನೂ (ಜಗತ್ಸೃಷ್ಟ್ಯಾದಿ ಕ್ರೀಡಾವಿಶಿಷ್ಟನೂ ಆದ), ಮೀಹ್ವುಷಃ–ಭಕ್ತಾಭೀಷ್ಟಸೇಚನ ಸ್ವಭಾವನಾದ, ಅಸ್ಯ–ಅಕಾರವಾಚ್ಯನಾದ ವಿಷ್ಣೋಃ–ವಿಷ್ಣುವಿನ, ಹವಿರ್ಭಿಃ–ನೈವೇದ್ಯಹೋಮಾದಿಗಳಿಂದ, ಪ್ರಭೃಥೇ–ಭಕ್ತಿಯಿಂದ ಪೂಜಿಸುತ್ತಿರಲು, ವಯಾಃ–ಲೌಕಿಕ ಐಶ್ವರ್ಯಾದಿ ದಾನದಿಂದ ಸಂಸಾರದಲ್ಲಿ ಬಂಧಕನಾದ ರುದ್ರನು ರುದ್ರಿಯಂ–ರುದ್ರಸಂಬಂಧವಾದ, ಮಹಿತ್ವಂ–ಮಹಿಮೆಯನ್ನು (ರುದ್ರಪದವಿಯನ್ನು), ಯಥಾವಿದೇಹಿ–ಹೇಗೆ ಹೊಂದಿದನೋ, (ಅಥವಾ ಯಸ್ಮಾತ್–ಯಾರ ಪ್ರಸಾದದಿಂದ ಹೊಂದಿದನೋ), ಅಶ್ವಿನೌ–ಹೇ ಅಶ್ವಿನಿಗಳೇ! ಯುವಾಂ–ನೀವಿಬ್ಬರೂ, ಇರಾವತ್–ಅನ್ನವುಳ್ಳವರಾಗಿ, ವರ್ತಿಃ–ವರ್ತನವನ್ನು, ಯಾಸಿಷ್ಟಂ–(ವಿಷ್ಣುಪೂಜೆಯನ್ನು ಮಾಡಿಯೇ) ಹೊಂದುವರಾಗಿರುವಿ; (ಇಂದ್ರಾದಿಗಳಿಗೂ ಅಧೀಶ್ವರನಾದ ರುದ್ರನೂ ತನ್ನ ಐಶ್ವರ್ಯಾದಿಗಳನ್ನು ವಿಷ್ಣುಪೂಜೆಯಿಂದ ಪಡೆದನೆಂದಮೇಲೆ, ಇಂದ್ರನಗಿಂತ ಅವರರಾದ ನೀವೂ ಸಹ ವಿಷ್ಣು ಕೃಪೆಯಿಂದಲೇ ನಿಮ್ಮ ಭಾಗ್ಯವನ್ನು ಹೊಂದಿರುತ್ತೀರೆಂದು ಹೇಳಲೇನಿದೆ? ಈ ಮಹಿಮೆಯು ಭಗವಂತನನ್ನು ನಿಶ್ಚಯವೂ ನಿತ್ಯಸಿದ್ಧವೂ ಎಂದು ನಿತ್ಯ ಶ್ರುತಿಯು ಸಾರುತ್ತದೆ.

ರುದ್ರನಿಗೆ, ಅಭೀಷ್ಟದಾಯಕಂ – ಅಭೀಷ್ಟಪ್ರದನಾದ, ವಿಷ್ಣುಂ – ವಿಷ್ಣುವನ್ನು, ಶುಭಗುಣಾಂಭೋದಿಂ–ಸದ್ಗುಣಸಮುದ್ರನೆಂದೂ, ರುದ್ರಾನ್ ಅಪಿ–ರುದ್ರನಗಿಂತ, ಅಧಿಕಂ–ಉತ್ತಮನೆಂದೂ, ಜಗೌ–ಹೇಳಿರುತ್ತದೆ.

**ಶ್ರೌತೋಽಖಂಡಪದಃ ಸೋಮೋ ನೇಶೋ ವೇದವಿದಾಂ ಮತೇ ।**
**ವಿಶ್ವಾಧಿಕತ್ವಗೀಃ ಸಾವಕಾಶೇಂದ್ರಾದಿಶ್ರುತಾವಿವ ॥ ೭೫೬ ॥**

ಶ್ರೌತಃ–ಶ್ರುತ್ಯುಕ್ತವಾದ, ಸೋಮಃ–ಸೋಮಪದವು, ಅಖಂಡಪದಃ–ಅಖಂಡಪದವು (ಸ ಉಮಃ ಎಂದು ಎರಡು ಭಾಗಗಳುಳ್ಳ ಪದವಲ್ಲ, ಸಜೂಃ ಎಂಬಂತೆ), ವೇದವಿದಾಂ – ವೇದಜ್ಞಾನಿಗಳ ಮತದಲ್ಲಿ,[1] ಈಶಃ ನ – ರುದ್ರನಲ್ಲ (ಉಮಾಸಹಿತನೆಂದಲ್ಲ) ; ವಿಶ್ವಾಧಿಕತ್ವಗೀಃ–ವಿಶ್ವಾಧಿಕನೆಂದು (ಇಂದ್ರಶ್ರುತಿಯು)

---

ಅರ್ಥಮಾಡುವುದಿಲ್ಲ ; ವಿಶ್ವಾಧಿಕನೆಂದು ರುದ್ರನನ್ನು ನಿರೂಪಿಸುವ ಶ್ರುತಿಯೂ, ರುದ್ರನಿಗೆ ವಿಷ್ಣುವಿಗಿಂತ ಆಧಿಕ್ಯವನ್ನು ಸಾಧಿಸುವುದಿಲ್ಲ; ವಿಶ್ವಾಧಿಕತ್ವವು ಸಾವಕಾಶ ಪದವು, ಇಂದ್ರನಿಗೆ ಸರ್ವೇಶ್ವರತ್ವವನ್ನು ಹೇಳುವ ಶ್ರುತ್ಯಾದಿಗಳಂತೆ, ಇದೂ, 'ವಿಶ್ವಂ ಅಧಿಕಂ ಯಸ್ಮಾತ್' ಎಂಬ ಸಮಾಸದಿಂದ ಅವರರಗಿಂತ ಉತ್ತಮವೆಂಬರ್ಥವು ತೋರುತ್ತದೆ; 'ಸೋಮ' ಪದವು ಚಂದ್ರನನ್ನು, ಸೋಮಲತೆಯನ್ನು

---

[1] 'ಉಮಾಸಹಿತಃ ಸೋಮಃ' ಎಂಬ ವ್ಯುತ್ಪತ್ತಿಯನ್ನು ಪರನು ಆಶಿಸುತ್ತಾನೆ; ಸೋಮಪದವು, ಚಂದ್ರ ಮತ್ತು ಸೋಮಲತೆ ಎಂಬ ಪ್ರಸಿದ್ಧವಾದ ಅರ್ಥವುಳ್ಳದ್ದು; ದ್ವಿಖಂಡಪದವೆಂದು ವೈದಿಕರು ಎಲ್ಲಿಯೂ ಅಂಗೀಕರಿಸುವುದಿಲ್ಲ ; ವೇದ ಮರ್ಯಾದೆಯನ್ನು ಉಲ್ಲಂಘಿಸಿ ಅರ್ಥವನ್ನು ಹೇಳುವುದು ಅವೈದಿಕವಾಗುತ್ತದೆ – ಅದು ಯುಕ್ತವಲ್ಲ; ಹೀಗೆಯೇ ಈ ಪ್ರಸಕ್ತಶ್ರುತಿಯು ಶಿವನಿಗೆ ವಿಷ್ಣುಜನಕತ್ವವನ್ನು ಹೇಳುತ್ತದೆಂದು ಶಂಕಿಸಲಿಕ್ಕೂ ಅವಕಾಶವಿಲ್ಲ; ವಿಷ್ಣುವು ಶಿವನಿಂದ ಪೂಜ್ಯತ್ವವೂ, ಶಿವಾಭೀಷ್ಟದಾಯಕತ್ವವೂ ಉಭಯವಾದಿ ಸಂಪ್ರತಿಪನ್ನವೆಂದು ಸ್ಪಷ್ಟವಾಗಿ ಹೇಳುತ್ತದೆ; ಸೋಮವಂಶದಲ್ಲಿ ಶ್ರೀಕೃಷ್ಣನು ಜನಿಸಿದನೆಂಬುದು ಚಂದ್ರನನ್ನು ಹೇಳುತ್ತದೆ; ಅಲ್ಲದೇ ರುದ್ರನನ್ನಲ್ಲ; 'ಸತ್ರಸಮಾಸಭಗವಾನ್' ಇತ್ಯಾದಿ ವಚನವು ಯಜ್ಞಕುಂಡದಿಂದ ಅವತರಿಸಿದ ಹಯಗ್ರೀವನನ್ನು ಕುರಿತು, ಜನಕತ್ವವು ಘಟಿಸಬಹುದು—ಆದರೆ ರುದ್ರಜನಕತ್ವವನ್ನಲ್ಲ; 'ವಿಶ್ವಾಧಿಕೋ ರುದ್ರೋ ಮಹರ್ಷಿಃ' ಎಂಬ ವಾಕ್ಯವೂ (ಶ್ರುತಿಯೂ) ಸ್ಪಷ್ಟವಾಗಿ ವಿಷ್ಣುವಿಗೆ ರುದ್ರವಶತ್ವವನ್ನು ಹೇಳುವುದಿಲ್ಲ; ಮಹರ್ಷಿ ಸರ್ವರಲ್ಲಿ ಅಧಿಕನು ರುದ್ರನೆಂಬುದೂ ಇಂದ್ರ ಶ್ರುತಿಯಂತೆ ವಿಶ್ವಾಧಿಕತ್ವವನ್ನು ಮಾತ್ರ ಹೇಳುತ್ತದೆ.

ಹೇಳುವುದು, (ವಿಶ್ವಾಧಿಕಃ ಎಂದರೆ ಸರ್ವಾಧಿಕನೆಂಬರ್ಥವನ್ನು ಹೇಳುವುದಿಲ್ಲ–ಹೀಗೆ ಹೇಳುವುದು ನಿನ್ನ ಇಷ್ಟವನ್ನು ಸಾಧಿಸುವುದಿಲ್ಲ–ರುದ್ರನಿಗೆ ಸರ್ವೇಶ್ವರತ್ವವು ಸಿದ್ಧಿಸುವುದಿಲ್ಲ ; ಅಲ್ಲದೇ ಸಾವಕಾಶವೆಂದರೆ 'ವಿಶ್ವಂ ಅಧಿಕಂ ಯಸ್ಮಾತ್' ಎಂಬ ಸಮಾಸವೂ ಸಂಭಾವ್ಯವಾಗುತ್ತದೆ), ಸಾವಕಾಶೇಂದ್ರಿಯಾದಿಶ್ರುತೌ, ಇವ – ಸಾವಕಾಶಾರ್ಥವನ್ನು ಹೇಳುವುದೆಂಬ ಇಂದ್ರಶ್ರುತಿಯಲ್ಲಿನಂತೆ (ರುದ್ರನ ಸರ್ವೇಶ್ವರತ್ವವು ಸಿದ್ಧಿಸುವುದಿಲ್ಲ).

**ಸೋರೋದೀದಿತಿ ವೇದೇ ಹಿ ನೋದನಾದ್ರುದ್ರತೋದಿತಾ ।**
**ನ ತೇ ಮಹಿತ್ವಮಿತಿ ತು ವಿಷ್ಣೋರಸಮತೋದಿತಾ ॥ ೭೫೭ ॥**

ಬೇರೆ ಶ್ರುತಿವಾಕ್ಯಗಳಿಂದಲೂ ರುದ್ರನ ಅವರತ್ವವನ್ನು, ವಿಷ್ಣುವಿನ ಸರ್ವೋತ್ತಮತ್ವವನ್ನು ಸಾಧಿಸುತ್ತಾರೆ:—

ಸೋರೋದಿತಿವೇದೇ–'ಸೋರೋದೀದ್ಯದರೋದೀತ್ತದ್ರುದ್ರಸ್ಯ ರುದ್ರತ್ವಂ' ಎಂಬ ಶ್ರುತಿವಾಕ್ಯದಲ್ಲಿ (ಸಃ–ರುದ್ರನು), ರೋದನಾತ್–ಸ್ವಾಭೀಷ್ಟನನ್ನು ಕುರಿತು, ಅಸಮರ್ಥನಾಗಿ ರೋದನಮಾಡಿದ್ದರಿಂದ, ರುದ್ರತಾ–(ರುದ್ರನ) ರುದ್ರತ್ವವು, ಉದಿತಾ–ಹೇಳಲ್ಪಟ್ಟಿದೆ ; ನ ತೇ ಮಹಿತ್ವಂ ಇತಿ–'ನ ತೇ ಮಹಿತ್ವಂ ಅಶ್ನುತೇ' ಎಂಬ ಶ್ರುತಿಯು, ವಿಷ್ಣೋಃ–ವಿಷ್ಣುವಿನ, ಅಸಮತಾ–ಅಸಮತ್ವವು (ಸಮರಹಿತನೆಂಬುದು ಅತ ಏವ ಸರ್ವೋತ್ತಮನೆಂಬುದು), ಉದಿತಾ–ಹೇಳಲ್ಪಟ್ಟಿದೆ.

**ಯಾಹ್ಯುಚ್ಛೇಷಣಭಾಗೋವೈರುದ್ರ ಇತ್ಯಾಹ ವೇದವಾಕ್ ।**
**ಜುಷೇಥಾಂ ಯಜ್ಞಮಿತ್ಯಾದ್ಯಾ ಸಾ ವಿಷ್ಣುಂ ವಕ್ತ್ಯತಃ ಸ ರಾಟ್॥೭೫೮॥**

ಉಚ್ಛೇಷಣಭಾಗಃ–ಯಜ್ಞೋಚ್ಛಿಷ್ಟ ಭೋಕ್ತೃತ್ವವುಳ್ಳವನು, ವೈ ರುದ್ರಃ–ರುದ್ರನು ಪ್ರಸಿದ್ಧನೆಂದು, ಯಾ ವೇದವಾಕ್–ಯಾವ ('ಉಚ್ಛೇಷಣಭೋಗೋ ವೈ ರುದ್ರಃ') ವೇದವಾಕ್ಯವು, ಹಿ–ಯಜುಃಶಾಖೆಯಲ್ಲಿ ಪ್ರಸಿದ್ಧವಿದೆ ; ಇತ್ಯಾಹ–

---

ಪ್ರಸಿದ್ಧವಾಗಿ ನಿರೂಪಿಸುತ್ತದೆ (೭೫೬). 'ಸೋರೋದಿತ್ ಯದರೋದೀತ್ತದ್ರುದ್ರಸ್ಯರುದ್ರತ್ವಂ', 'ನ ತೇ ಮಹಿತ್ವಂ' ಇತ್ಯಾದಿ ಶ್ರುತಿಗಳು ವಿಷ್ಣುವಿನ ಸರ್ವೋತ್ತಮತ್ವವನ್ನು ಸ್ಪಷ್ಟವಾಗಿ ಘೋಷಿಸುತ್ತವೆ (೭೫೭). ಯಜ್ಞದಲ್ಲಿ, ಇಂದ್ರ ಮತ್ತು ಇಂದ್ರಾವಿಷ್ಟ ವಿಷ್ಣುಗಳೆಂಬ ಎರಡು ವಿಷ್ಣುರೂಪಗಳನ್ನು

ಎಂದು ಹೇಳಿದೆಯೋ, ಜುಷೇಥಾಂ ಯಜ್ಞಂ—ಇಂದ್ರ (ಇಂದ್ರಾಂತರ್ಗತ) ವಿಷ್ಣುಗಳೆಂಬ ನೀವಿಬ್ಬರೂ ಅರ್ಪಿತವಾದ ಯಜ್ಞವಸ್ತುಗಳನ್ನು [1] ಸ್ವೀಕರಿಸಿರಿ, ಇತ್ಯಾದ್ಯಾ—ಈ ಮೊದಲಾದ ಇದೇ ವಿಷ್ಣುಸೂಕ್ತದಲ್ಲಿರುವ, ಸಾ—ವೇದವಾಕ್ಯವು, ವಿಷ್ಣುಂ ವಕ್ತಿ—ವಿಷ್ಣುವನ್ನು ಹೇಳುತ್ತದೆ; ಅತಃ—ಆದ್ದರಿಂದ (ವಿಷ್ಣುವು ಭೋಗಿಸಿ, ಅವಶಿಷ್ಟವಾದುದರ ಭೋಕ್ತೃತ್ವವು ರುದ್ರನಿಗೆ ಹೇಳಿರುವುದರಿಂದ), ಸಃ—ವಿಷ್ಣುವು, ರಾಟ್—ದೇವರಾಜನು (ದೇವೋತ್ತಮನು).

**ಇಂದ್ರಾವಿಷ್ಣೂ ಯುವಾಂ ಯಜ್ಞಂ ಜುಷೇಥಾಂ ದ್ರವಿಣಂ ಚ ನಃ ।**
**ಧತ್ತಂ ದತ್ತಂ ಪ್ರದಿಶತಾಮರಿಷ್ಟೈರ್ನಾಶವರ್ಜಿತೈಃ ॥ ೭೫೯ ॥**
**ಪಥಿಭಿರ್ಮೋಕ್ಷಮಾರ್ಗ್ಯೈರ್ನಃ ಪಾರಯಂತೋ ಭವಾಂಬುಧೇಃ ।**
**ಪರಂ ಪಾರಂ ಪ್ರಾಪಯಂತಾವಿತಿ ಯಚ್ಛ್ರುತಿರಂಜಸಾ ॥ ೭೬೦ ॥**

---

ಆಹ್ವಾನಿಸಿ, ಹವಿರಾದಿಗಳನ್ನು ಸಮರ್ಪಿಸಿ, ಅವಶಿಷ್ಟ (ಯಜ್ಞೋಚ್ಛಿಷ್ಟ) ಭಾಗವನ್ನು ರುದ್ರನಿಗೆಂದು ಹೇಳಲಾಗುತ್ತದೆ; ಆದ್ದರಿಂದಲೂ ಆ ಶ್ರುತಿಯು ವಿಷ್ಣುವೇ ಸ್ವತಂತ್ರನೆಂದು (ರಾಜನೆಂದು) ಸಾಧಿಸುತ್ತದೆ (೭೫೮). ವಿಷ್ಣು ಸೂಕ್ತದಲ್ಲಿರುವ ಈ ಶ್ರುತಿಯು 'ಇಂದ್ರಾವಿಷ್ಣೂ' ಎಂಬುದಾಗಿ ಇಂದ್ರನನ್ನು, ವಿಷ್ಣುವನ್ನು ಆಹ್ವಾನಿಸಿ, ಈ ಯಜ್ಞದಲ್ಲಿ ನಮ್ಮಿಂದ ಕೊಡಲಾಗುವ ಹವಿರಾದಿ ದ್ರವ್ಯಗಳನ್ನು, ಮುಖ್ಯ ಯಜ್ಞಫಲವನ್ನು ಅವರಿಗೆ ಅರ್ಪಿಸಿ, ಅನ್ಯರಿಂದ ಪರಿಹರಿಸಲಶಕ್ಯವಾದ ಅನಿಷ್ಟಗಳಿಂದ ನಮ್ಮನ್ನು ರಕ್ಷಿಸಿ, ಮೋಕ್ಷಮಾರ್ಗದಿಂದ

---

[1] ಇಲ್ಲಿ ಪ್ರಸಕ್ತವಾದ ಶ್ರುತಿಯು ಹೀಗಿದೆ :—'ವಷಟ್ತೇವಿಷ್ಣವಾಸ ಆಕೃಣೋಮಿ; ಜುಷೇಥಾಂ ಯಜ್ಞಂ ದ್ರವಿಣಂ ಚ ಧತ್ತಮರಿಷ್ಟೈರ್ನಃ ಪಥಿಭಿಃ ಪಾರಯಂತೇ' ಇತಿ— ಇದರ ಭಾವಾರ್ಥವು ಹೀಗಿದೆ :—ವಿಷ್ಣು ಮತ್ತು ಇಂದ್ರರಿಗೆ ಅರ್ಪಿಸುತ್ತೇನೆ ; ನೀವಿಬ್ಬರೂ ('ಜುಷೇಥಾಂ' ಎಂಬುದು ಮಧ್ಯಮ ಪುರುಷದ್ವಿವಚನವು) ಇಂದ್ರಾವಿಷ್ಟ ವಿಷ್ಣು ಮತ್ತು ಪ್ರತ್ಯೇಕಸ್ಥಿತನಾದ ವಿಷ್ಣು, ಹೀಗೆ ಇಬ್ಬರೂ, ಸ್ವೀಕರಿಸಿರಿ, ಎಂದು ಪ್ರಾರ್ಥನೆಯು, ಸಂಸಾರ ಸಮುದ್ರಜಲದ ಆಚೆಗೆ ನಿರ್ಲಿಪ್ತರಾಗಿ ನಿಂತಿರುವ ನೀವು, ನನ್ನಿಂದ ಆಚರಿಸಲ್ಪಡುವ ದೇವಯಜ್ಞದಿಂದಲೂ ಭಕ್ತಿಯಿಂದ ಅರ್ಪಿಸಲಾಗುವ ಪಿತೃಯಜ್ಞಾನ್ನದಿಂದಲೂ, ತೃಪ್ತರಾಗಿ ನನ್ನ ಅಭಿವೃದ್ಧಿಗೆ ಕಾರಣರಾಗಿರಿ ; ತಮ್ಮ ಸಮೀಪವನ್ನು ಹೊಂದಿ ವೃದ್ಧಿಗೊಳ್ಳುತ್ತೇನೆ; ಮುಂದೆ ಇಲ್ಲಿಯೇ ಉಚ್ಛಿಷ್ಟಭಾಗಕ್ಕೆ ರುದ್ರನು ಭೋಕ್ತನೆಂದೂ ಹೇಳಲಾಗುತ್ತದೆ.

**ಐಹಿಕಾಮುಷ್ಮಿಕಫಲಪ್ರದಾತಾರಂ ಮಖಸ್ಯ ಚ ।**
**ಭೋಕ್ತಾರಂ ವಿಷ್ಣುಸೂಕ್ತಸ್ಥಾ ವಿಷ್ಣುಂ ಸ್ತೌತಿ ದ್ವಿರೂಪಿಣಂ ॥೭೬೧॥**

**ಯತಶ್ಚ ರುದ್ರಾಹುತಿದಾಹಸ್ತಮದ್ಯಾಪಿ ಯಾಜ್ಞಿಕಾಃ ।**
**ಪ್ರಕ್ಷಾಲಯಂತಿ ತೇನಾಸೌ ಯಜ್ಞೋಚ್ಛಿಷ್ಟಾಶನೋ ಧ್ರುವಂ ॥೭೬೨॥**

ಹಿಂದಿನ ಶ್ರುತ್ಯರ್ಥವನ್ನೇ ವಿವರಿಸುತ್ತಾರೆ :—

ಇಂದ್ರಾವಿಷ್ಣೂ–ಹೇ ಇಂದ್ರ ವಿಷ್ಣುಗಳಿರಾ ! (ಇಂದ್ರಾವಿಷ್ಟವಿಷ್ಣು ಮತ್ತು ಪೃಥಕ್‌ಸ್ಥಿತನಾದ ವಿಷ್ಣುವೂ, ಉಭಯ ವಿಷ್ಣುರೂಪಗಳೂ), ಯುವಾಂ–ನೀವಿಬ್ಬರೂ, ನಃ–ನಮ್ಮ, ಯಜ್ಞಂ–ಯಜ್ಞವನ್ನು (ಯಜ್ಞಮುಖ್ಯಫಲವನ್ನು), ದ್ರವಿಣಂ ಚ–ಹವಿರಾದಿ ದ್ರವ್ಯಗಳನ್ನೂ, ಜುಷೇಥಾಂ – ಸ್ವೀಕರಿಸುವರಾಗಿರಿ ; ಧತ್ತಂದತ್ತಂ–ಧತ್ತಂ ಎಂದರೆ ದತ್ತ–ಅರ್ಪಿಸುವ, ಎಂದರ್ಥ. ಪ್ರದಿಶತಾಂ–ತಿಳಿಸಿ ಕೊಡಿರಿ ; ನಾಶವರ್ಜಿತೈಃ–ನಷ್ಟವಾಗದ, ಅರಿಷ್ಟೈಃ–ಅನಿಷ್ಟಗಳಿಂದ, ನಃ–ನಮ್ಮನ್ನು (ತಪ್ಪಿಸಿ, ಪರಿಹರಿಸಿ), ಭವಾಂಬುಧೇಃ–ಸಂಸಾರಸಾಗರದ, ಪರಂ ಪಾರಂ–ಆ ಕಡೆಯ ತೀರವನ್ನು, ಪ್ರಾಪಯಂತೌ–ಮುಟ್ಟಿಸಿ, ಪಾರಯಂತಃ–ದಾಟಿಸುವರಾಗಿ, ಪಥಿಭಿಃ–ಪಥಿಭಿಃ ಎಂದರೆ, ಮೋಕ್ಷಮಾರ್ಗೈಃ–ಮೋಕ್ಷಮಾರ್ಗ ಗಳಿಂದ (ಅರ್ಚಿರಾದಿಮಾರ್ಗದಿಂದ), ಇತಿ – ಎಂದು, ಶ್ರುತಿಃ – ಶ್ರುತಿಯು, ಅಂಜಸಾ–ಸ್ಪಷ್ಟವಾಗಿ, ಐಹಿಕಾಮುಷ್ಮಿಕ ಫಲಪ್ರದಾತಾರಂ–ಇಹಪರಲೋಕಗಳ

---

(ಅರ್ಚಿರಾದಿ ಮಾರ್ಗದಿಂದ) ನಿತ್ಯಸ್ಥಾನವನ್ನು ಹೊಂದಿಸೆಂಬ ಪ್ರಾರ್ಥನೆಯನ್ನು ಮಾಡಿಕೊಳ್ಳುತ್ತಾರೆ ; ಸಂಸಾರ ಸಾಗರವನ್ನು ದಾಟಿಸೆಂಬ ಯಾಚನೆಯನ್ನು ಸಲ್ಲಿಸುತ್ತಾರೆ ; ಹೀಗೆ ಯಜ್ಞವನ್ನೆಲ್ಲಾ ಸಮರ್ಪಿಸಿ ಇಹಪರಗಳ ಫಲದಾತನಾದ ಮತ್ತು ಯಜ್ಞಭೋಕ್ತನಾದ ದ್ವಿರೂಪನಾದ ವಿಷ್ಣುವನ್ನೇ ಈ ಶ್ರುತಿಯು ನಿರೂಪಿಸಿ, ರುದ್ರನಿಗಿಂತ ವಿಷ್ಣುವಿನ ಉತ್ತಮತ್ವವನ್ನೇ ಸಾಧಿಸುತ್ತದೆ ; ಏಕೆಂದರೆ, ಇಂದ್ರ ವಿಷ್ಣುಗಳಿಗೆ ಅರ್ಪಣೆಯಾದ ನಂತರ ಯಜ್ಞೋಚ್ಛಿಷ್ಟಭಾಗದ ಹವಿರಾದಿಗಳನ್ನು ರುದ್ರನಿಗೆ ಅರ್ಪಿಸುತ್ತದೆ ; ಈ ಕಾರಣದಿಂದ ಯಾಜ್ಞಿಕರು, ಈಗಲೂ, ಉಚ್ಛಿಷ್ಟವಾದ ಯಜ್ಞ ಭಾಗವನ್ನು ಅಗ್ನಿಯಲ್ಲಿ ರುದ್ರನಿಗಾಗಿ ಅರ್ಪಿಸಿ, ಕೈತೊಳೆಯುವ ಪದ್ಧತಿ ಇದೆ ; ಯಜ್ಞದಲ್ಲಿ

ಸತ್ಫಲಗಳನ್ನು ಅನುಗ್ರಹಿಸುವ, ಚ – ಹಾಗೂ, ಮುಖಸ್ಯ – ಯಜ್ಞದ, ಭೋಕ್ತಾರಂ – ಭೋಕ್ತೃವನ್ನಾಗಿ, ದ್ವಿರೂಪಿಣಂ – ಎರಡು ರೂಪಗಳಿಂದಿರುವ, ವಿಷ್ಣುಂ – ವಿಷ್ಣುವನ್ನು, ವಿಷ್ಣುಸೂಕ್ತಸ್ಥಾ – ವಿಷ್ಣುಸೂಕ್ತದಲ್ಲಿರುವ ವಾಕ್ಯವು, ಸ್ತೌತಿ–ಸ್ತುತಿಸುತ್ತದೆ; ಯತಃ–ಅದೇ ಕಾರಣದಿಂದಲೇ, ರುದ್ರಾಹುತಿ ದಾಹಃ–ರುದ್ರನಿಗಾಗಿ ಉಚ್ಛಿಷ್ಟವನ್ನು (ವಿಷ್ಣುವಿಗೆ ಅರ್ಪಿತವಾಗಿ ಉಳಿದುದ್ದನ್ನು), ಅಗ್ನಿಯಲ್ಲಿ ಹೋಮಿಸಿ (ಅರ್ಪಿಸುವರಾಗಿ), ಯಾಜ್ಞಿಕಾಃ–ಯಜ್ಞಕರ್ಮದಲ್ಲಿ ಆಸಕ್ತರು, ಅದ್ಯಾಪಿ–ಈಗಲೂ ಸಹ, ತಂ–ಅದನ್ನು, ಪ್ರಕ್ಷಾಲಯಂತಿ–(ಅರ್ಪಿಸಿದನಂತರ) ಕೈತೊಳೆಯುತ್ತಾರೆ; ತೇನ–ಈ ಕಾರಣದಿಂದ, ಅಸೌ–ರುದ್ರನು, ಧ್ರುವಂ–ನಿಸ್ಸಂಶಯವಾಗಿ, ಯಜ್ಞೋಚ್ಛಿಷ್ಟಾಶನಃ – ಯಜ್ಞದಲ್ಲಿ (ವಿಷ್ಣ್ವರ್ಪಿತವಾಗಿ ಉಳಿದ) ಉಚ್ಛಿಷ್ಟಭಾಗವನ್ನು (ಉಣ್ಣುವನು) ಭೋಗವುಳ್ಳವನು (ಹೀಗಿರಲು, ರುದ್ರನು ವಿಷ್ಣುವಿನಿಂದ ಅವರನು ಹೇಗಲ್ಲ? ಅವರನೇ ಎಂದು ಸಿದ್ಧವಾಗುತ್ತದೆ).

**ಪ್ರಲಯೇ ವಟಪತ್ರೇಽಪ್ಸು ಶೇತೇ ನಾರಾಯಣಃ ಕಿಲ ।**
**ತದಾ ಕ್ವಾನ್ಯೇ ಸುರಾಸ್ತಸ್ಮಾತ್ಸರ್ವೇಶೋ ವಿಷ್ಣುರೇವ ಹಿ ॥ ೭೬೩ ॥**

ಶ್ರೌತ ಯುಕ್ತಿಯನ್ನು ಹೇಳುತ್ತಾರೆ :—

ಪ್ರಲಯೇ ಅಪ್ಸು–ಮಹಾಪ್ರಲಯ ಜಲದಲ್ಲಿ, ನಾರಾಯಣಃ–ಶ್ರೀನಾರಾಯಣನು, ವಟಪತ್ರೇ–ಆಲದೆಲೆಯಲ್ಲಿ, ಶೇತೇ–ಮಲಗಿರುವನು; ತದಾ–ಆಗ, ಅನ್ಯೇ ಸುರಾಃ ಕ್ವ–ಬ್ರಹ್ಮಾದಿ ಅನ್ಯದೇವತೆಗಳು ಎಲ್ಲಿರುವರು? (ಯಾರೂ ಇಲ್ಲ); ತಸ್ಮಾತ್–ಆದ್ದರಿಂದ (ಬ್ರಹ್ಮಾದಿಗಳೆಲ್ಲರೂ ಲಯಹೊಂದಿ ಆತನೊಬ್ಬನೇ ಉಳಿಯುವುದರಿಂದ), ವಿಷ್ಣುರೇವ ಹಿ–ವಿಷ್ಣುಮಾತ್ರನೇ, ಸರ್ವೇಶಃ–ಸರ್ವೋತ್ತಮನು, ಕಿಲ–ಎಂಬುದು ('ಏಕೋ ನಾರಾಯಣ ಆಸೀತ್ ನ ಬ್ರಹ್ಮಾ ನ ಚ ಶಂಕರಃ,

---

ಭೋಗಿಸಲ್ಪಟ್ಟು ಉಚ್ಛಿಷ್ಟವಾದ್ದರಿಂದ, ಇಂದ್ರಾವಿಷ್ಟನಾದ ವಿಷ್ಣುರೂಪವೆಂದೇ ಹೇಳಿರುವರಲ್ಲದೇ, ಇಂದ್ರಮಾತ್ರನಲ್ಲ; ಅನ್ಯಥಾ ಇಂದ್ರನಕ್ಕಿಂತ ಉತ್ತಮನಾದ ರುದ್ರನಿಗೆ ನಂತರ ಹವಿರ್ದಾನವು ಯುಕ್ತವಾಗುವುದಿಲ್ಲ; ಹೀಗೆ ಯಜ್ಞಕರ್ಮ ವಿಧಾನದಿಂದಲೂ ರುದ್ರನ ವಿಷ್ಣ್ವವರತ್ವವು ಸಮರ್ಥಿತವಾಗುತ್ತದೆ. (೭೫೫–೭೬೨). ಮಹಾಪ್ರಲಯದಲ್ಲಿ ಬ್ರಹ್ಮಾದಿ ಸಕಲದೇವತೆಗಳೂ ಲಯಹೊಂದಿ

ಸದೇವೇದಮಗ್ರ ಆಸೀತ್, ಏಕಮೇವಾದ್ವಿತೀಯಂ', ಇತ್ಯಾದಿ ಶ್ರುತಿವಾಕ್ಯಗಳನ್ನು) ಸೂಚಿಸುತ್ತದೆ.

**ಕಿಂಚ ಗೀತೋಪನಿಷದಿ ಸರ್ವಂ ದ್ವಿಪುರುಷಾಖ್ಯಯಾ ।**
**ಸಂಗೃಹೀತಂ ಹರಿಸ್ತ್ವೇಕಃ ಪುರುಷೋತ್ತಮ ಈರಿತಃ ॥ ೭೬೪ ॥**

ಗೀತಾವಾಕ್ಯದಿಂದಲೂ ಶ್ರೀಹರಿಯ ಸರ್ವೋತ್ತಮತ್ವವನ್ನು ಜ್ಞಾಪಿಸಿ ಕೊಡುತ್ತಾರೆ :—

ಕಿಂಚ-ಮತ್ತೇನೆಂದರೆ, ಗೀತೋಪನಿಷದಿ-ಗೀತೆಯಲ್ಲಿ (ಉಪನಿಷತ್ಸಾರವಾದ ಗೀತೆಯಲ್ಲಿ), ಸರ್ವಂ—ಎಲ್ಲ ಚೇತನ ಸಮುದಾಯವೂ, ದ್ವಿಪುರುಷಾಖ್ಯಯಾ—ಕ್ಷರಾಕ್ಷರವೆಂಬ ದ್ವಿವಿಧರೆಂಬ ಪುರುಷನಿರೂಪಣೆಯಿಂದ, ಸಂಗೃಹೀತಂ—ಸಂಗ್ರಹಿಸಲ್ಪಟ್ಟಿತು, ಹರಿಸ್ತು – ಶ್ರೀಹರಿಯು, ಏಕಃ – ಒಬ್ಬನೇ, ಪುರುಷೋತ್ತಮಃ—ಪುರುಷೋತ್ತಮನು (ಎಂದು), ಈರಿತಃ—ಹೇಳಲ್ಪಟ್ಟಿರುವನು.

**ರಾಮಃ ಪ್ರಭೂ ರಾಮಭೃತ್ಯಾ ದೇವಾಃ ಸರ್ವೇಪಿ ವಾನರಾಃ ।**
**ಕೃಷ್ಣಃ ಪ್ರಭುಃ ಕೃಷ್ಣಭೃತ್ಯಾ ದೇವಾ ಧರ್ಮಾತ್ಮಜಾದಯಃ ॥೭೬೫॥**

ರಾಮಃ – ಶ್ರೀರಾಮನು, ಪ್ರಭುಃ – ಸ್ವಾಮಿಯು ; ರಾಮಭೃತ್ಯಾಃ – ರಾಮಸೇವಕರು, ಸರ್ವೇಪಿ ವಾನರಾಃ – ಎಲ್ಲ ಹನುಮದಾದಿ ವಾನರರೂ (ಆಗಿರುವರು) ; ಕೃಷ್ಣಃ – ಶ್ರೀಕೃಷ್ಣನು, ಪ್ರಭುಃ – ಸ್ವಾಮಿಯು, ಧರ್ಮಾತ್ಮಜಾದಯಃ—ಯಮಪುತ್ರನೇ (ಯುಧಿಷ್ಠಿರನೇ ಮೊದಲಾದ), ದೇವಾಃ—ದೇವತೆಗಳು, ಕೃಷ್ಣಭೃತ್ಯಾಃ—ಕೃಷ್ಣನ ಭೃತ್ಯರು (ಸೇವಕರು), (ಹೀಗೆ ರಾಮಾಯಣ ಭಾಗವತಾದಿಗಳಲ್ಲಿ ಸಹ ಶ್ರೀವಿಷ್ಣು ಸರ್ವೋತ್ತಮತ್ವವೇ ಸಾಧಿಸಲಾಗಿದೆ).

**ಅರ್ಹತ್ತಮೋ ಹ್ಯಗ್ರಪೂಜಾಮರ್ಹತ್ಯನ್ಯೋ ನ ಸಂಸದಿ ।**
**ಯುಥೈವೇಹ ತಥಾಮುತ್ರ ತದ್ವಿಷ್ಣುರಖಿಲಪ್ರಭುಃ ॥ ೭೬೬ ॥**

---

ಯಾರೂ ಇಲ್ಲದಂತಾಗಲು, ವಿಷ್ಣುವು, ಮಹಾ ಪ್ರಲಯ ಜಲದಲ್ಲಿ ವಟಪತ್ರದಲ್ಲಿ ಮಲಗುತ್ತಾನೆ; ಇದರಿಂದ ಸಹ, 'ಏಕೋ ನಾರಾಯಣ ಆಸೀತ್ ನ ಬ್ರಹ್ಮಾ ನ ಚ ಶಂಕರಃ', 'ಸದೇವೇದಮಗ್ರ ಆಸೀತ್', 'ಏಕಮೇವಾದ್ವಿತೀಯಂ' ಇತ್ಯಾದಿ ಶ್ರುತಿಗಳು ಹೇಳುವಂತೆ, ವಿಷ್ಣುವೇ ಸರ್ವೋತ್ತಮನೆಂದು ಸಿದ್ಧವಾಗುತ್ತದೆ (೭೬೩). ಉಪನಿಷತ್ಸಾರರೂಪವಾದ ಗೀತೆಯಲ್ಲಿ ರಮಾ ಬ್ರಹ್ಮಾದಿ ಸಕಲ

ಅವತಾರಗಳೇ ಸರ್ವೋತ್ತಮವೆಂದಮೇಲೆ ಮೂಲರೂಪವು ಸರ್ವೋತ್ತಮವೆಂಬುದು ಸಹಜವಾಗಿ ಸಿದ್ಧವಾಗುತ್ತದೆ, ಎನ್ನುತ್ತಾರೆ; ಮೂಲರೂಪದ ವಿಷಯಕ್ಕೆ ಹೇಳಲೇನು? ಎನ್ನುತ್ತಾರೆ :—

ಅರ್ಹತ್ತಮಃ–ಪೂಜ್ಯತಮನು (ಪೂಜ್ಯರಲ್ಲಿ ಶ್ರೇಷ್ಠನು), ಅಗ್ರಪೂಜಾಂ–ಅಗ್ರಪೂಜೆಯನ್ನು, ಸಂಸದಿ–(ಸರ್ವಪ್ರಾತಿನಿಧಿಕ) ಸಭೆಯಲ್ಲಿ, ಅರ್ಹತಿ–ಹೊಂದಲು ಯೋಗ್ಯನಾಗಿರುತ್ತಾನೆ; ಅನ್ಯಃ ನ–ಬೇರಾವನೂ ಅಲ್ಲ; ಇಹ ಯಥೈವ–ಇಲ್ಲಿ (ಈ ಲೋಕದಲ್ಲಿ) ಹೇಗೋ, ತಥಾ ಅಮುತ್ರ–ಹಾಗೆಯೇ ಪರದಲ್ಲಿಯೂ, ತತ್–ಆದ್ದರಿಂದ, ವಿಷ್ಣುಃ–ಶ್ರೀವಿಷ್ಣುವು, ಅಖಿಲಪ್ರಭುಃ–ಸರ್ವಸ್ವಾಮಿಯು.

**ತಸ್ಮಾತ್ಸರ್ವೇಶ್ವರೋ ವಿಷ್ಣುಃ ಸರ್ವಂ ಸರ್ವತ್ರ ಸರ್ವದಾ ।**
**ಪ್ರವರ್ತಯತಿ ಸರ್ವಜ್ಞಃ ಸರ್ವಶಕ್ತಿಃ ಸನಾತನಃ ॥ ೭೬೭ ॥**

ವಿಷ್ಣುವಿನ ಸರ್ವೋತ್ತಮತ್ವ ಪ್ರಮೇಯಸಾಧನವನ್ನು ಉಪಸಂಹರಿಸುತ್ತಾರೆ :—

ತಸ್ಮಾತ್–ಆದ್ದರಿಂದ, ಸರ್ವೇಶ್ವರಃ–ಸರ್ವನಿಯಾಮಕನಾದ, ವಿಷ್ಣುಃ–ಶ್ರೀವಿಷ್ಣುವು, ಸರ್ವಂ–ಜಗತ್ತೆಲ್ಲವನ್ನೂ, ಸರ್ವತ್ರ–ಎಲ್ಲೆಲ್ಲಿಯೂ, ಸರ್ವದಾ–

---

ಚೇತನ ಸಮುದಾಯವೂ ಕ್ಷರ, ಅಕ್ಷರ ಪುರುಷರೆಂಬ ಎರಡು ವರ್ಗದಲ್ಲಿ ನಿರೂಪಿಸಲ್ಪಟ್ಟು, (ಸಂಗ್ರಹಿಸಲ್ಪಟ್ಟು) ಶ್ರೀಹರಿಯೊಬ್ಬನೇ ಪುರುಷೋತ್ತಮನೆಂದು ಹೇಳಲ್ಪಟ್ಟಿರುವನು (೭೬೪). ಶ್ರೀರಾಮನೇ ಪ್ರಭುವು, ಸಕಲದೇವತೆಗಳೂ (ಕಪಿರೂಪದಿಂದ) ರಾಮಭೃತ್ಯರು; ಕೃಷ್ಣನೇ ಮಹಾಸ್ವಾಮಿಯು, ಯಮಪುತ್ರನಾದ ಯುಧಿಷ್ಠಿರಾದಿ ಎಲ್ಲ ದೇವತೆಗಳೂ, ಕೃಷ್ಣಭೃತ್ಯರು; ಹೀಗೆ ರಾಮಾಯಣ, ಭಾಗವತಾದಿಗಳಲ್ಲಿಯೂ, ವಿಷ್ಣುವಿನ ಸರ್ವೋತ್ತಮತ್ವವೇ ಸಾಧಿಸಲಾಗಿದೆ (೭೬೫). ಪೂಜ್ಯರಲ್ಲಿ ಶ್ರೇಷ್ಠನಾದವನು, ವಿವೇಕಿಗಳ ಸಭೆಯಲ್ಲಿ ಅಗ್ರಪೂಜೆಗೆ ಅರ್ಹನಾಗುತ್ತಾನೆ–ಅನ್ಯನಲ್ಲ; ಇಲ್ಲಿ ಹೇಗೋ ಪರದಲ್ಲಿಯೂ ಹಾಗೆಯೇ ಎಂದು ತಿಳಿಯಬೇಕು; ಆದ್ದರಿಂದಲೇ ಅವತಾರ ರೂಪದಲ್ಲಿ ಅಗ್ರಪೂಜೆಯನ್ನು ಹೊಂದಿದ ಶ್ರೀಕೃಷ್ಣನೇ, ಮೂಲರೂಪದಲ್ಲಿ (ಶ್ರೀವಿಷ್ಣುವೇ) ಸರ್ವಸ್ವಾಮಿಯು (೭೬೬). ಆದ್ದರಿಂದ ಸರ್ವೇಶ್ವರನಾದ ವಿಷ್ಣುವೇ, ಸರ್ವವನ್ನು, ಸರ್ವತ್ರ,

ಯಾವಾಗಲೂ, ಪ್ರವರ್ತಯತಿ–ಚೇಷ್ಟಿಸುತ್ತಾನೆ (ಪ್ರೇರಕನಾಗಿ ಪ್ರವೃತ್ತಿಸುತ್ತಾನೆ); (ಆದ್ದರಿಂದ) ಸರ್ವಜ್ಞಃ–ಸರ್ವಜ್ಞನೂ, ಸರ್ವಶಕ್ತಿಃ–ಸರ್ವಶಕ್ತನೂ, ಸನಾತನಃ–ನಿತ್ಯನೂ ಸ್ವತಂತ್ರನೂ (ಆಗಿರುವನು).

**ತದ್ಭೂತಂ ಭೂತಮೇತಸ್ಮಾದ್ಭವಚ್ಚ ಭವತಿ ಪ್ರಭೋಃ ।**
**ಭಾವ್ಯಂ ಭವಿಷ್ಯತಿ ಹ್ಯಸ್ಯ ಕೃಪಯಾ ನಾನ್ಯತಃ ಕ್ವಚಿತ್ ॥ ೭೬೮ ॥**

ತತ್–ಆದ್ದರಿಂದ, ಭೂತಂ–ಭೂತಕಾಲದಲ್ಲಿದ್ದುದು, ಏತಸ್ಮಾತ್–ಈ ವಿಷ್ಣುವಿನಿಂದ, ಭೂತಂ–ಇದ್ದುದು (ಉಂಟಾದುದು ಆಗಿದೆ); ಪ್ರಭೋಃ–ಶ್ರೀವಿಷ್ಣುವಿನಿಂದಲೇ, ಭವಚ್ಚ–ಈಗಿರುವುದೂ, ಭವತಿ–ಇರುತ್ತದೆ; ತಸ್ಯ ಕೃಪಯಾ–ಆತನ ಕೃಪೆಯಿಂದಲೇ, ಕ್ವಚಿತ್–ಎಷ್ಟೊ, ಅನ್ಯತಃ ನ–ಬೇರೆಯವನಿಂದ ಅಲ್ಲ; ಭಾವ್ಯಂ–ಮುಂದಾಗುವುದು, ಭವಿಷ್ಯತಿ–ಉಂಟಾಗುತ್ತದೆ (ನಡೆಯುತ್ತದೆ).

**ಅತಃ ಸರ್ವೇಷ್ಟಲಾಭಾಯ ಸರ್ವಾನಿಷ್ಟನಿವೃತ್ತಯೇ ।**
**ತಮರ್ಚ್ಯಮರ್ಚಯ ಸ್ತುತ್ಯಂ ಸ್ತುಹಿ ನಮ್ಯಂ ನಮಾಚ್ಯುತಂ ॥೭೬೯॥**

ಅತಃ–ಆದ್ದರಿಂದ (ಭೂತ ಭವ್ಯ ಭವತ್ಪ್ರಭುವಾದ್ದರಿಂದ), ಸರ್ವೇಷ್ಟಲಾಭಾಯ–ಸಕಲಾಭೀಷ್ಟಸಿದ್ಧಿಗಾಗಿ, ಸರ್ವಾನಿಷ್ಟನಿವೃತ್ತಯೇ–ಸರ್ವಅನಿಷ್ಟಗಳ ಪರಿಹಾರಕ್ಕಾಗಿ, ತಂ–ಆ, ಅರ್ಚ್ಯಂ–ಪೂಜಾರ್ಹನಾದ ವಿಷ್ಣುವನ್ನು, ಅರ್ಚಯ–ಪೂಜಿಸು; ಸ್ತುತ್ಯಂ–ಸ್ತೋತ್ರಾರ್ಹನಾದ ಆತನನ್ನೇ, ಸ್ತುಹಿ–ಸ್ತುತಿಸು, ನಮ್ಯಂ–ನಿತ್ಯನಮನಕ್ಕೆ–ಅರ್ಹನಾದ, ಅಚ್ಯುತಂ–ಶ್ರೀವಿಷ್ಣುವನ್ನೇ, ನಮ–ನಮಸ್ಕರಿಸು (ನಿತ್ಯಾಧೀನನಾಗಿರು).

---

ಸರ್ವದಾ ನಿಯಾಮಕನಾಗಿದ್ದು, ಸರ್ವಕಾರ್ಯಗಳಲ್ಲಿ ಪ್ರವರ್ತಿಸುವನು; ಆತನು ಆದ್ದರಿಂದಲೇ ಸರ್ವಜ್ಞನೂ, ಸರ್ವಶಕ್ತನೂ, ಅನಾದಿನಿತ್ಯ ಸ್ವತಂತ್ರನೂ ಆಗಿರುವನು (೭೬೭). ಭೂತಕಾಲದಲ್ಲಿದ್ದುದೆಲ್ಲವೂ, ಈ ವಿಷ್ಣುವಿನಿಂದ ಉಂಟಾದುದು; ಈಗಿರುವುದೂ ಸರ್ವಸ್ವಾಮಿಯಾದ ವಿಷ್ಣುವಿನ ದೆಶೆಯಿಂದಲೇ ಇರುತ್ತದೆ; ಮುಂದಾಗುವುದೆಲ್ಲವೂ, ಆತನಿಂದಲೇ ಆಗುತ್ತದೆ; ಎಲ್ಲವೂ ಆತನ ಕೃಪೆಯಿಂದಲೇ; ಅನ್ಯನಿಂದ ಅಲ್ಲವೇ ಅಲ್ಲ (೭೬೮). ಆದ್ದರಿಂದ ಸರ್ವಾನಿಷ್ಟನಿವೃತ್ತಿಗೂ, ಸಕಲಾಭೀಷ್ಟಸಿದ್ಧಿಗೂ, ಪೂಜ್ಯತಮನಾದ ಅಚ್ಯುತನನ್ನೇ ಪೂಜಿಸು, ಸ್ತೋತ್ರ

*

**ಜ್ಞಾನಂ ಮಾನಂ ನೇತಿ ವಾಕ್ಯಂ ವ್ಯಾಹತಂ ಸ್ಯಾದ್ವಿಚಾರಣೇ ।**
**ಧಾತ್ವರ್ಥಃ ಪ್ರತ್ಯಯಾರ್ಥಶ್ಚ ಯತಃ ಸ್ಥಾನದ್ವಯೇ ಸಮಃ ॥ ೭೭೦ ॥**

ಪಂಚ ಸೌರಭಗಳಲ್ಲಿ ಉಕ್ತವಾದ ಪ್ರಮೇಯಗಳನ್ನು ಅಭಿನವಪ್ರಮೇಯ ಗಳೊಂದಿಗೆ ಮೂಲರೂಪದಿಂದ ಸಂಗ್ರಹಿಸಲು, ಮುಂದಿನ ಗ್ರಂಥಸಂದರ್ಭವು ಪ್ರವೃತ್ತವಾಗಿದೆ; ಮೊದಲಿಗೆ ಪ್ರಮಾಣವಾಗಿ ಉದಾಹರಿಸುವ ಸ್ಮೃತಿಗೆ ಅಯಥಾರ್ಥವನ್ನು ಹೇಳುವ ತಾರ್ಕಿಕನನ್ನು ದೂಷಿಸುತ್ತಾರೆ (ನಿರಾಕರಿಸು ತ್ತಾರೆ) :—

ಜ್ಞಾನಂ–ಜ್ಞಾನವು, ಮಾನಂ–ಪ್ರಮಾಣವು, ನ ಇತಿ–ಅಲ್ಲವೆಂಬುವ, ವಾಕ್ಯಂ–ನುಡಿಯು, ವಿಚಾರಣೇ–ವಿಚಾರಣಮಾಡುತ್ತಿರಲು, ವ್ಯಾಹತಂ–ವಿರುದ್ಧ ಭಾಷಣವು, ಸ್ಯಾತ್ – ಆಗುತ್ತದೆ; ಯತಃ – ಏಕೆಂದರೆ, ಧಾತ್ವರ್ಥಃ – 'ಜ್ಞಾ ಅವಬೋಧನೇ' 'ಮಾಙಮಾನೇ' ಎಂಬ ಧಾತ್ವರ್ಥಗಳೂ (ಜ್ಞಾನವಾಚಕಗಳೇ ಆಗಿರುತ್ತವೆ);) ಪ್ರತ್ಯಯಾರ್ಥಃ ಚ–ಲ್ಯುಟ್ ಪ್ರತ್ಯಯದ ಅರ್ಥವೂ (ವ್ಯಾಕರಣ ನಿಯಮದಂತೆ ಉಭಯಶಬ್ದಗಳೂ ನಿಷ್ಪನ್ನವಾಗುತ್ತವೆ), ಸ್ಥಾನದ್ವಯೇ–ಎರಡೂ ಸ್ಥಾನಗಳಲ್ಲಿ, ಸಮಃ–ಸಮವಾಗಿವೆ (ಆದ್ದರಿಂದ ಮಾನವು ಯಥಾರ್ಥಜ್ಞಾನಜನಕ ವಲ್ಲವೆಂಬುದು ಯುಕ್ತವಲ್ಲ).

**ಸ್ವತಸ್ತ್ವವಾದೇ ಪ್ರಾಮಾಣ್ಯಂ ಕಸ್ಯೇತಿ ಚ ವಿಚಾರಯ ॥ ೭೭೧ ॥**

ಸ್ವತಸ್ತ್ವವಾದೇ–ಜ್ಞಾನಪ್ರಾಮಾಣ್ಯದ ಸ್ವತಸ್ತ್ವ, ಪರತಸ್ತ್ವವಾದದಲ್ಲಿ, ಕಸ್ಯ–ಯಾವುದಕ್ಕೆ, ಪ್ರಾಮಾಣ್ಯಂ–ಪ್ರಾಮಾಣ್ಯವೆಂಬುದನ್ನು, ಇತಿ ವಿಚಾರಯ–

---

ಪಾತ್ರನಾದ ಆತನನ್ನೇ ಸ್ತುತಿಸು; ನಿತ್ಯನಮನಕ್ಕೆ ಅರ್ಹನಾದ ವಿಷ್ಣುವನ್ನೇ ನಮಸ್ಕರಿಸು (೭೬೯). ಜ್ಞಾನವು ಪ್ರಮಾಣವಲ್ಲೆಂಬ ನುಡಿಯು, ವ್ಯಾಹತವು (ವಿರುದ್ಧ ಭಾಷಣವು); ಏಕೆಂದರೆ, ಜ್ಞಾನ ಮತ್ತು ಮಾನಗಳೆಂಬ ಎರಡೂ ಪದಗಳಲ್ಲಿ ಧಾತ್ವರ್ಥವೂ, ಪ್ರತ್ಯಯಾರ್ಥವೂ, ಎರಡೂ ಸಮವಾಗಿವೆ; 'ಜ್ಞಾ ಅವಬೋಧನೇ' ಮತ್ತು 'ಮಾಙಮಾನೇ' ಎಂಬ ಧಾತ್ವರ್ಥವೂ, ಜ್ಞಾನ ವಾಚಕಗಳೇ ಆಗಿವೆ; ಲ್ಯುಟ್ ಪ್ರತ್ಯಯವೂ (ಈ ಉಭಯ ಪದಗಳ ವ್ಯಾಕರಣ ನಿಯಮಧಂತೆ ನಿಷ್ಪತ್ತಿಯು ಏಕಪ್ರಕಾರವಾಗಿದೆ) ಎರಡೂ ಸ್ಥಾನಗಳಲ್ಲಿ ಸಮವಾಗಿವೆ; ಆದ್ದರಿಂದ ಸ್ಮೃತ್ಯಾದಿ ಪ್ರಮಾಣಗಳು ಯಥಾರ್ಥ ಜ್ಞಾನ ಜನಕವಲ್ಲ, ಎಂಬ ವಾದವು ಸರಿಯಲ್ಲ (೭೭೦). ಜ್ಞಾನ ಪ್ರಾಮಾಣ್ಯವು,

ಎಂದು ವಿಚಾರಮಾಡು (ಆಗಲೂ, ಜ್ಞಾನಕ್ಕೆ ಪ್ರಾಮಾಣ್ಯವನ್ನು ಲಕ್ಷಣಕಥನ ಸಮಯದಲ್ಲಿ, ಅಂಗೀಕರಿಸಬೇಕಾಗಿ ಬಂದು, ವ್ಯಾಹತಿಯು–ಜ್ಞಾನಕ್ಕೆ ಪ್ರಾಮಾಣ್ಯ ವಿಲ್ಲವೆಂಬ ವಿರುದ್ಧಭಾಷಣವೆಂಬ ದೋಷವು ಸಿದ್ಧವಾಗುತ್ತದೆ).

**ಪ್ರಜ್ಞಪ್ತಿಃ ಪ್ರಮಿತಿಃ ಪ್ರಜ್ಞಾ ಪ್ರಮಾ ಪ್ರಜ್ಞಾನಮೇವ ಹಿ ।**
**ಪ್ರಮಾಣಂ ಸ್ಯಾದ್ಯತಃ ಶಬ್ದಾಃ ಪರ್ಯಾಯಾಃ ಶಕ್ತಿಶೋಧನೇ**
**॥ ೭೭೨ ॥**

ಮೂಲದಲ್ಲಿ (ಆರಂಭದಲ್ಲಿಯೇ) ವ್ಯಾಹತಿಯನ್ನು ತೋರಿಸುತ್ತಾರೆ :—

ಯತಃ–ಏಕೆಂದರೆ, ಪ್ರಜ್ಞಪ್ತಿಃ–ಪ್ರಜ್ಞಪ್ತಿ, ಪ್ರಮಿತಿಃ–ಪ್ರಮಿತಿ, ಪ್ರಮಾ–ಪ್ರಮಾ, ಪ್ರಜ್ಞಾನಂ–ಪ್ರಜ್ಞಾನವೂ, (ಈ ಎಲ್ಲ ಶಬ್ದಗಳೂ ಧಾತು, ಪ್ರತ್ಯಯಗಳ ಸಮತ್ವದಿಂದ ಏಕಾರ್ಥ ವಾಚಕಗಳು) (ಹಾಗಲ್ಲದಿದ್ದರೆ ಇದು ಘಟವು, ಶರೀರವಲ್ಲ, ಎಂದಂತಾಗುತ್ತದೆ); (ಆದ್ದರಿಂದ), ಯತಃ – ಯಾವ ಕಾರಣದಿಂದ, ಶಕ್ತಿ ಶೋಧನೇ–ಈ ಶಬ್ದಗಳ ಶಕ್ಯಾರ್ಥವನ್ನು ವಿಚಾರಮಾಡಿದರೆ, ಶಬ್ದಾಃ ಏವ–ಈ ಎಲ್ಲ ಶಬ್ದಗಳೂ, ಪರ್ಯಾಯಾಃ–ಏಕಾರ್ಥವುಳ್ಳವುಗಳೋ ಪ್ರಮಾಣಂ ಸ್ಯಾತ್–(ಆದ್ದರಿಂದ) ಪ್ರಮಾಣವೆಂಬ ಅರ್ಥವುಳ್ಳವುಗಳೇ;

**ಶ್ರವಣಂ ಮನನಂ ಧ್ಯಾನಂ ದರ್ಶನಂ ಸ್ಮರಣಂ ತಥಾ ।**
**ಗಮನಂ ಮೋಚನಂ ಬಂಧಾದ್ರಮಣಂ ಚ ಕಿಮುಚ್ಯತಾಂ ॥ ೭೭೩ ॥**

---

ಸ್ವತಸ್ತ್ವವೆಂದೂ, ಪರತಸ್ತ್ವವೆಂದೂ ಎರಡು ಪ್ರಕಾರವಾಗಿದೆ; ಸ್ವತಸ್ತ್ವವೆಂದರೆ ಅನ್ಯ ಸಹಾಯವಿಲ್ಲದೇ ಪ್ರಮಾಣ (ಯಥಾರ್ಥಜ್ಞಾನ ಜನಕವಾದುದೆಂಬುದು ಸ್ವತಸ್ತ್ವವು)(ಗುಣ ಸೌರಭದಲ್ಲಿ ಈ ವಿಷಯವು (ಸ್ವತಸ್ತ್ವವಾದವು ವಿಸ್ತಾರವಾಗಿ ಪ್ರಸಕ್ತವಾಗಿದೆ); ಅದಕ್ಕೆ ಅನುಸಾರವಾಗಿ ಯಾವುದಕ್ಕೆ ಪ್ರಾಮಾಣ್ಯ ಸ್ವತಸ್ತ್ವವನ್ನು ತಿಳಿಯಬೇಕೆಂಬುದನ್ನು ವಿಚಾರಮಾಡು (೭೭೧). ಪ್ರಜ್ಞಪ್ತಿ, ಪ್ರಮಿತಿ, ಪ್ರಜ್ಞಾ, ಪ್ರಮಾ, ಪ್ರಜ್ಞಾನ, ಈ ಎಲ್ಲ ಶಬ್ದಗಳೂ, ಧಾತು ಪ್ರತ್ಯಯಗಳ ಸಮತ್ವದಿಂದ ಏಕಾರ್ಥವುಳ್ಳ, (ಒಂದೇ ವಸ್ತುಬೋಧಕ) ಪರ್ಯಾಯಪದಗಳು; ಶಕ್ಯಾರ್ಥ ಶೋಧನೆಯಿಂದ ಹೀಗೆಂಬುದು ಸಿದ್ಧವಾಗುತ್ತದೆ; ಎಲ್ಲ ಶಬ್ದಗಳು ಪ್ರಮಾಣವೆಂಬ ಅರ್ಥವುಳ್ಳವೇ ಆಗಿವೆ; (೭೭೨). ಶ್ರವಣ, ಮನನ, ಧ್ಯಾನ,

**ಗರ್ಭಾಧಾನಂ ಚ ಜನನಂ ತಥೋಪನಯನಂ ಚ ಕಿಂ ।**
**ಯಜನಾಧ್ಯಯನೇ ದಾನಭೋಜನೇ ಕೇ ವಿಚಾರಯ ॥ ೭೭೪ ॥**

**ಭಾವಾರ್ಥಕಲ್ಯುಡಂತೋಕ್ತಿಬಾಹುಲ್ಯಸ್ಯೈವ ದರ್ಶನಾತ್ ।**
**ಅರ್ಥೋಽಸೌ ಪ್ರಥಮಪ್ರೋಕ್ತೋ ಮುಖ್ಯಸ್ತಸ್ಯೇತಿ ಮೇ ಮತಿಃ ।**
**ತಲ್ಲ್ಯುಟೋ ಭಾವವಾಚಿತ್ವಂ ಮರಣೇಽಪಿ ನ ಗಚ್ಛತಿ ॥ ೭೭೫ ॥**

ಲ್ಯುಟ್ ಪ್ರತ್ಯಯಾಂತ ಪದವು ಮುಖ್ಯವಾಗಿ ಕರಣಾರ್ಥವುಳ್ಳದ್ದು – ಭಾವಾರ್ಥವು ಮುಖ್ಯವಲ್ಲ; ಆದ್ದರಿಂದ ಜ್ಞಾನವು ಪ್ರಮಾಣವು ಹೇಗೆ ಆಗುತ್ತದೆಂಬ ಮಂದಾಶಂಕೆಯನ್ನು, ಭಾವಾರ್ಥದಲ್ಲಿಯೇ ಪ್ರಯೋಗಬಾಹುಲ್ಯವನ್ನು ತೋರಿಸಿ, ಅದೇ ಮುಖ್ಯಾರ್ಥವೆಂದು ಉಪಪಾದಿಸಿ, ಪರಿಹರಿಸುತ್ತಾರೆ; (ಪಾಣಿನಿಯ ಅನುಶಾಸನವು ಉಪಲಕ್ಷಣಮಾತ್ರವು) :—

ಶ್ರವಣಂ–ಶ್ರವಣವು (ಶ್ರೋತವ್ಯಂ ಎಂದು ಹೇಳುವಲ್ಲಿ ಭಾವಾರ್ಥವೇ ಮುಖ್ಯವಾಗಿ ತೋರುತ್ತದೆ); ಮನನಂ–ಮನನವೂ, ಧ್ಯಾನಂ–ಧ್ಯಾನವೂ, ದರ್ಶನಂ–ದರ್ಶನವೂ, ತಥಾ–ಹಾಗೂ, ಸ್ಮರಣಂ–ಸ್ಮರಣವೂ (ಈ ಎಲ್ಲ ಪದಗಳ ಲ್ಯುಟ್ ಪ್ರತ್ಯಯವು ಭಾವಾರ್ಥವನ್ನೇ ಮುಖ್ಯವಾಗಿ ತಿಳಿಸುತ್ತದೆಯಲ್ಲದೇ, ಕರಣಾರ್ಥವನ್ನಲ್ಲ (ಶ್ರೋತವ್ಯದಂತೆ, ಮಂತವ್ಯ, ಧ್ಯಾತವ್ಯ, ದರ್ಶಿತವ್ಯ, ಸ್ಮರ್ತವ್ಯ ಇತ್ಯಾದಿಗಳನ್ನು ತಿಳಿಯಬೇಕು); (ಇನ್ನು) ಲ್ಯುಟ್‌ಪ್ರತ್ಯಯವು ಭಾವಾರ್ಥದಲ್ಲಿ ಪ್ರಯೋಗವಿರುವ ಅನ್ಯಉದಾಹರಣೆಗಳನ್ನು ತೋರಿಸುತ್ತಾರೆ) ಗಮನಂ–ಗಮನವು, ಬಂಧಾತ್–ಬಂಧದಿಂದ, ಮೋಚನಂ–ಮುಕ್ತಿಯು, ರಮಣಂಚ–ಆನಂದಿಸುವುದೂ,

---

ದರ್ಶನ, ಸ್ಮರಣ, ಮತ್ತು ಗಮನ, ಬಂಧದಿಂದ ಮುಕ್ತಿ, ಆನಂದ, ಈ ಎಲ್ಲ ಪದಗಳ ಪ್ರತ್ಯಯವು ಕರಣಾರ್ಥಕವೋ, ಭಾವಾರ್ಥಕವೋ ನೀನೇ ಹೇಳು; ಗರ್ಭಾಧಾನ, ಜನನ, ಉಪನಯನ, ಇವು ಏನು? ಕರಣಾರ್ಥಕ ಪ್ರತ್ಯಯವುಳ್ಳವೋ ಹೇಗೆ? ಹೀಗೆಯೇ ಯಜನ, ಅಧ್ಯಯನ, ದಾನ, ಭೋಜನಗಳೆಂಬ ಪದಗಳು ಯಾವ ಗುಂಪಿಗೆ ಸೇರುತ್ತವೆ? ವಿಚಾರಮಾಡು; ಭಾವಾರ್ಥಕ ಲ್ಯುಡಂತ ಶಬ್ದಗಳ ಬಾಹುಲ್ಯವೇ ಕಂಡುಬರುವುದರಿಂದ, ಭಾವಾರ್ಥವೇ (ಮೊದಲಿಗೆ ಹೇಳಿದುದೇ) ಮುಖ್ಯವಾದುದು, ಎಂಬುದು ನನ್ನ ನಿಶ್ಚಿತವು;

ಕಿಂ-(ಭಾವಾರ್ಥಕಲ್ಯುಟೋ ಕರಣಾರ್ಥಕವೋ) ಏನು, ಉಚ್ಯತಾಂ-ಹೇಳೋಣ ವಾಗಲಿ ; ಗರ್ಭಾಧಾನಂ – ಗರ್ಭಾಧಾನವೂ, ಜನನಂ – ಜನನವೂ, ತಥಾ– ಮತ್ತು, ಉಪನಯನಂ – ಉಪನಯನವೂ, ಚ – ಸಹ, ಕಿಂ – (ಭಾವಾರ್ಥಕ ವಲ್ಲದೆ) ಮತ್ತೇನು ? ಯಜನಾಧ್ಯಯನೇ – ಯಜನ, ಅಧ್ಯಯನಗಳು, ದಾನ ಭೋಜನೇ – ದಾನಭೋಜನಗಳು, ಕೇ – ಯಾವುವು ? ವಿಚಾರಯ–ವಿಚಾರ ಮಾಡು (ಭಾವಾರ್ಥಗಳೋ, ಕರಣಾರ್ಥವೋ ಯೋಚಿಸು) ; ಭಾವಾರ್ಥಕ ಲುಡ್ಯಂತೋಕ್ತಿ ಬಾಹುಲ್ಯಸ್ಯ–ಭಾವಾರ್ಥವುಳ್ಳ ಲ್ಯುಟ್‌ಪ್ರತ್ಯಯಾಂತ ಪದಗಳ ಬಹು ನಿದರ್ಶನಗಳನ್ನು, ದರ್ಶನಾತ್ ಏವ – ತೋರಿಸಿರುವುದರಿಂದಲೇ, ಪ್ರಥಮತಃ ಉಕ್ತಃ–ಮೊದಲು ಹೇಳಿದ, ಅಸೌ ಅರ್ಥಃ–ಈ ಅರ್ಥವು, ತಸ್ಯ– ಅದರ, ಮುಖ್ಯಃ–ಮುಖ್ಯಾರ್ಥವು, ಇತಿ ಮತಿಃ–ಎಂದು (ನನ್ನ) ನಿಶ್ಚಯವು ; ತತ್–ಆದ್ದರಿಂದ, ಲ್ಯುಟಃ–ಲ್ಯುಟ್ ಪ್ರತ್ಯಯದ, ಭಾವವಾಚಿತ್ವಂ – ಭಾವಾರ್ಥಕ ವೆಂಬುದು, ಮರಣೇಪಿ – ಸತ್ತರೂ (ಏನು ಮಾಡಿದರೂ – ಯಾವ ಕಾರಣ ದಿಂದಲೂ), ನ ಗಚ್ಛತಿ–ಬಿಟ್ಟುಹೋಗುವುದಿಲ್ಲ.

**ಪ್ರಮಾಣೀಭೂತಭಾವಾರ್ಥಮನುಸೃತ್ಯೈವ ತಲ್ಲ್ಯುಟಃ ।**
**ಕರಣೇಪಿ ಪ್ರವೃತ್ತಿಃ ಸ್ಯಾತ್ ಧಾತ್ವರ್ಥಸ್ಯ ಪ್ರವೇಶನಾತ್ ॥ ೭೭೬ ॥**

ಜ್ಞಾನಕ್ಕೆ ಕರಣಾರ್ಥಕತ್ವವನ್ನು ಅನುಸರಿಸದೇ, ಸ್ವಶಕ್ತಿಯಿಂದಲೇ ಪ್ರಮಾಣಶಬ್ದವಾಚ್ಯತ್ವವಿರುವುದರಿಂದ, ಕರಣಾರ್ಥವು ಜ್ಞಾನವನ್ನು ಅನುಸರಿ ಸಿಯೇ ಪ್ರಮಾಣವಾಗಬಲ್ಲದು, ಎನ್ನುತ್ತಾರೆ :—

ಪ್ರಮಾಣೀಭೂತಭಾವಾರ್ಥಂ – ಪ್ರಮಾಣವಾದ ಭಾವಾರ್ಥವನ್ನು, ಅನುಸೃತ್ಯಏವ – ಅನುಸರಿಸಿಯೇ, ತಲ್ಲ್ಯುಟಃ – (ಪ್ರಜ್ಞಾನಪದಗತಲ್ಯುಟ್)– ಲ್ಯುಟ್ ಪ್ರತ್ಯಯಕ್ಕೆ, ಕರಣೇ ಅಪಿ–ಕರಣದಲ್ಲಿಯಾದರೂ, ಪ್ರವೃತ್ತಿಃ ಸ್ಯಾತ್–

---

ಲ್ಯುಡಂತ ಪ್ರತ್ಯಯವು ಭಾವವಾಚಿತ್ವವುಳ್ಳದ್ದು ; ಯಾವ ಕಾರಣದಿಂದಲೂ ಅದು ಆ ಅರ್ಥವನ್ನು ತ್ಯಜಿಸುವುದಿಲ್ಲ (೭೭೩–೭೭೫). ಶಬ್ದವು ಭಾವಾರ್ಥಕವೋ ಕರಣಾರ್ಥಕವೋ ಎಂಬುದು, ಪ್ರತ್ಯಯ ಸೂಚಿತವಾದ ಕರಣಾರ್ಥವು ಧಾತ್ವರ್ಥ ಭೂತವಾದ ಭಾವಾರ್ಥ ಪ್ರವೇಶದಿಂದ, ಚಕಿತವಾಗಿ ಸಾಧಿಸುತ್ತದೆಯಲ್ಲದೇ,

ಪ್ರವೃತ್ತಿಯು ಉಂಟಾಗುತ್ತದೆ; ಧಾತ್ವರ್ಥ ಪ್ರವೇಶನಾತ್–(ಹೀಗೆ ಮಾಡುವುದರಲ್ಲಿ) ಧಾತ್ವರ್ಥವೂ (ಕೇವಲ ಪ್ರತ್ಯಯಾರ್ಥವಲ್ಲ) ಪ್ರವೇಶಿಸುವುದರಿಂದ (ಇದು ಸಿದ್ಧವಾಗುತ್ತದೆ).

**ತತ್ಕೇವಲಂ ಪ್ರಮಾಣಂ ಸ ಕರಣೇऽನುಪ್ರಮಾಣತಾ ।**
**ಯತೋಽನುಶಾಸನಂ ಚಾನು ತತೋಽಪ್ಯೇತದ್ಗುಣೋಚಿತಂ ॥ ೭೭೭ ॥**

ತತ್–ಆದ್ದರಿಂದ, ಪ್ರಮಾಣಂ–ಅನ್ಯಾಪೇಕ್ಷೆಯಿಲ್ಲದೇ ಪ್ರಮಾಣವಾಗುತ್ತದೆ (ಭಾವಾರ್ಥದಲ್ಲಿ–ಅಲ್ಲಿಯೇ ಜ್ಞಾನದ ಪ್ರಮಾಶಬ್ದಪ್ರವೃತ್ತಿಯು); ಕೇವಲಂ–ಅದು ಕೇವಲ ಪ್ರಮಾಣವು; ಕರಣೇ–ಕರಣಾರ್ಥದಲ್ಲಿ, ಅನುಪ್ರಮಾಣತಾ–ಅದು ಅನುಸರಿಸಿ (ಇಂದ್ರಿಯಾದಿ ಅಥವಾ ಮನಸ್ಸನ್ನು ಅನುಸರಿಸಿ) ಪ್ರಮಾಣವಾಗುತ್ತದೆ (ಕೇವಲ ಪ್ರಮಾಣವಾಗುವುದಿಲ್ಲ); (ಜ್ಞಾನವನ್ನು ಅನು–ಅನಂತರ ವಸ್ತುಜ್ಞಾನವು, ನಂತರ ಜ್ಞಾನದ ಪ್ರಾಮಾಣ್ಯವು), ಆಗ ಅದು ಅನುಪ್ರಮಾಣವೆನಿಸುವುದು (ಪ್ರತ್ಯಕ್ಷ, ಅನುಮಾನ, ಆಗಮಗಳು ಅನುಪ್ರಮಾಣಗಳು–ಸಾಕ್ಷಿಜ್ಞಾನವು ಕೇವಲ ಪ್ರಮಾಣವು); ಯತಃ – ಏಕೆಂದರೆ, ಅನುಶಾಸನಂ–ಅನುಶಾಸನವು (ಪ್ರಾಮಾಣ್ಯವು), ಅನು–ಅನುಸರಿಸಿ (ನಂತರದಲ್ಲಿ), ತತಃ–ಆದ್ದರಿಂದಲೂ, ಏತತ್ ಗುಣೋಚಿತಂ–ಈ ವಿಭಾಗವು ಯೋಗ್ಯವೇ ಆಗುತ್ತದೆ.

**ಆಧಾರಾಖ್ಯಾಧಿಕರಣಂ ಭೂಮ್ನ್ಯಾದಿರ್ನ ಪ್ರಯೋಗವಾನ್ ॥ ೭೭೮ ॥**

ಭಾವೇ ಮತ್ತು ಕರಣೇ ಸಹ ಪ್ರಮಾಣಶಬ್ದದ ಪ್ರವೃತ್ತಿಯೆಂದು ವ್ಯಾಕರಣವು ಹೇಳುತ್ತಿರಲು, ಸಮವಾದ ಅಧಿಕರಣವಿರಲು ಏಕೆ ಪ್ರಮಾಣಶಬ್ದದ ಪ್ರವೃತ್ತಿಯಿಲ್ಲವೆಂಬುದನ್ನು ಉತ್ತರಿಸುತ್ತಾರೆ :—

---

ಕೇವಲ ಲ್ಯುಟ್ ಪ್ರತ್ಯಯದಿಂದಲ್ಲ; ಧಾತ್ವರ್ಥವಾದ ಭಾವಾರ್ಥವೇ ಮುಖ್ಯವಾದುದು (೭೭೬). ಭಾವಾರ್ಥದಲ್ಲಿಯೇ ಶಬ್ದ ಪ್ರವೃತ್ತಿಯಿರುವುದರಿಂದ, ಅದರಂತೆ ಉಂಟಾಗುವುದು ಕೇವಲ ಪ್ರಮಾಣವೆನಿಸುತ್ತದೆ; ಕರಣಾರ್ಥದಲ್ಲಿ (ಪ್ರತ್ಯಯಾನುಸಾರವಾದ) ಆಗುವ ಅರ್ಥವು ಅನುಪ್ರಮಾಣವೆನಿಸುತ್ತದೆ; ಈ ಜ್ಞಾನದ ಪ್ರಾಮಾಣ್ಯವು ಅನ್ಯಸಹಾಯದಿಂದ ದೊರೆಯುವುದರಿಂದ, ಈ (ಕೇವಲ – ಅನುಪ್ರಮಾಣ) ವಿಭಾಗವು ಯೋಗ್ಯವಾಗುತ್ತದೆ (೭೭೭). 'ಆಧಾರೋಧಿಕರಣಂ' ಎಂದು ಜ್ಞಾನವೆಂಬ ಕ್ರಿಯಾವಿಷಯವಾದ ಘಟಾದಿಗೆ,

ಆಧಾರಾಖ್ಯಾಧಿಕರಣಂ–('ಆಧಾರೋಧಿಕರಣಂ' ಎಂಬ ವಚನಾನುಸಾರ ವಾಗಿ) ಜ್ಞಾನರೂಪಕ್ರಿಯಾವಿಷಯವಾದ ಘಟಾದಿಗೆ ಆಧಾರವಾದ ಭೂತಲವೇ ಅಧಿಕರಣವು; ಭೂಮ್ಯಾದಿಃ–ಭೂಮಿ ಮುಂತಾದುದು; ಅಲ್ಲಿ ಪ್ರಮಾಣಶಬ್ದ ವನ್ನು ಎಲ್ಲಿಯೂ (ಯಾರೂ) ಪ್ರಯೋಗಿಸುವುದಿಲ್ಲ – ವ್ಯಾಕರಣವಾದರೋ ಪ್ರಯೋಗವೇ ಮೂಲವಾಗಿ ಉಳ್ಳದ್ದು; ಆದ್ದರಿಂದ ಅಲ್ಲಿ ಪ್ರಮಾಣಶಬ್ದಪ್ರವೃತ್ತಿ ಯಿರುವುದಿಲ್ಲ; ನ ಪ್ರಯೋಗವಾನ್ – ಘಟಶಬ್ದವು (ಭೂಮ್ಯಾದಿಯಲ್ಲಿ) ಪ್ರಯೋಗಿಸಲ್ಪಡುವುದಿಲ್ಲ.

**ನಾರಾಯಣಾದಿಶಬ್ದೇಷು ಲ್ಯುಟೋಧಿಕರಣೇ ಗತಿಂ ।**
**ಸೂಚಯನ್ನೇವ ತಂ ಪ್ರಾಹ ಕರ್ತ್ರರ್ಥೇನಾನುಶಾಸಿತಂ ॥ ೭೭೯ ॥**

ಹಾಗೆ ಅಧಿಕರಣದಲ್ಲಿ ಅನುಶಾಸನವು ವ್ಯರ್ಥವೆಂದರೆ ಹೇಳುತ್ತಾರೆ :—

ನಾರಾಯಣಾದಿಶಬ್ದೇಷು–(ಆದಿಪದದಿಂದ, ಶಯನ, ಆಸನ, ಸ್ಥಾನಾದಿ ಶಬ್ದಗಳನ್ನು ಗ್ರಹಿಸಬೇಕು) ನಾರಾಯಣ ಮೊದಲಾದ ಶಬ್ದಗಳಲ್ಲಿ, ಲ್ಯುಟಃ– ಲ್ಯುಟ್ ಪ್ರತ್ಯಯಕ್ಕೆ ಅಧಿಕರಣೇ–ಅಧಿಕರಣದಲ್ಲಿ (ಆಶ್ರಯಸ್ಥಾನದಲ್ಲಿ), ಗತಿಂ– ಪ್ರವೃತ್ತಿಯನ್ನು, ಸೂಚಯನ್ ಏವ–ಸೂಚಿಸಿಯೇ, ತಂ–ಲ್ಯುಟ್ ಪ್ರತ್ಯಯ ವನ್ನು, ಪ್ರಾಹ–(ಅಧಿಕರಣದಲ್ಲಿ) ಅನುಶಾಸನಮಾಡಿರುವರು (ಲ್ಯುಡಂತ ಸಕಲ ಶಬ್ದಗಳಲ್ಲಿಯೂ ಇದನ್ನು ಸೂಚಿಸಲಿಕ್ಕೆ ಅನುಶಾಸನವು – ನಿಯಮವು);[1]

---

ಆಧಾರವಾದುದು ಭೂತಲವೇ ಆದರೂ, ಯಾರೂ (ಘಟಶಬ್ದ ಬೋಧಿತ ವಾದುದೆಂದು) ಭೂತಲವೆಂಬರ್ಥವು ಪ್ರಮಾಣವೆಂದು ಪ್ರಯೋಗಿಸುವುದಿಲ್ಲ; ವ್ಯಾಕರಣವು (ಅನುಶಾಸನವು) ಪ್ರಯೋಗವೇ ಮೂಲವಾಗಿವುಳ್ಳದ್ದು; ಭೂಮ್ಯಾದಿಯನ್ನು ಘಟವೆಂದು ಯಾರೂ ಕರೆಯುವುದಿಲ್ಲ (ಆದ್ದರಿಂದ ಕರಣಾರ್ಥ ಪ್ರತ್ಯಯವು ಶಬ್ದ ಪ್ರವೃತ್ತಿಯನ್ನು ನಿಯಂತ್ರಿಸುವುದಿಲ್ಲ) (೭೭೮). ವ್ಯಾಕರಣ ಶಾಸ್ತ್ರದ ಈ ಅಧಿಕರಣದಲ್ಲಿ, ಲ್ಯುಟ್ ಪ್ರತ್ಯಯಕ್ಕೆ ಸಂಬಂಧಿಸಿದ ಅನುಶಾಸನವು

---

[1] ಕರ್ತನಾದ ಈಶ್ವರನಿಗೆ, ತನ್ನ ಜ್ಞಾನವನ್ನು ಲಕ್ಷಿಸಿ, ಅದರ ವಿವಕ್ಷೆಯಿಂದ, ಆಧಾರನಾದ್ದರಿಂದ, ಅಧಿಕರಣವಿರುತ್ತದೆಯಷ್ಟೆ; ಅಲ್ಲಿ ತಾರ್ಕಿಕರು 'ಈಶ್ವರಜ್ಞಾನವು' ಪ್ರಮಾಣವೆಂದು ಪ್ರಯೋಗಿಸುತ್ತಾರೆ; ಆದ್ದರಿಂದ, ಅದು ಅನುಶಾಸನ ವಿಷಯವೇ ಆಗಲಿ, ಎಂಬುದೂ ಹೊಂದುವುದಿಲ್ಲವೇ? (ಹೊಂದುತ್ತದೆ).

ಕರ್ತ್ರರ್ಥೇನ–ಕರ್ತನನ್ನು ಅನುಲಕ್ಷಿಸಿಯೂ ಆ ನಿಯಮವು ಅನುಶಾಸಿತಂ–ರಚಿಸಲಾಗಿದೆ.

**ಷಟ್ಕಾರಕಮತೇ ಕರ್ತಾ ನೈವಾಧಿಕರಣಂ ಕಿಲ ।**
**ಕರ್ತೃಪ್ರಾಮಾಣ್ಯವಾದಂ ತದ್ಧಂತಿ ಪಾಣಿನಿರೇವ ಸಃ ॥ ೭೮೦ ॥**

ಷಟ್ಕಾರಕಮತೇ – ಕರ್ತೃಕಾರಕ, ಕರ್ಮಕಾರಕ, ಕರಣಕಾರಕ, ಸಂಪ್ರದಾನಕಾರಕ, ಅಪಾದಾನಕಾರಕ, ಅಧಿಕರಣಕಾರಕವೆಂಬ ಷಟ್ಕಾರಕಮತದಲ್ಲಿ, ಕರ್ತಾ–ಕರ್ತನು, ಅಧಿಕರಣಂ ನೈವಕಿಲ–(ಭೂತಲೇ ಘಟಂ ಪಶ್ಯತಿ, ಭೂತಲೇ ದಾರುಚ್ಛಿನತ್ತಿ, ಇತ್ಯಾದಿಗಳಲ್ಲಿ ಷಟ್ಕಾರಕಮತದಂತೆ, ಯಾವ ದೇವದತ್ತಾದಿಯಂತೆ ಇರುವ, ಸರ್ವಕರ್ತನೆಂಬ ಈಶ್ವರನಾಗಲಿ ಅಧಿಕರಣದಲ್ಲಿ (ಅನುಶಾಸನದಲ್ಲಿ–ಅಧಿಕರಣದಲ್ಲಿ) ಸೇರುವುದಿಲ್ಲ ; ಕಿಂತು ಭೂತಲಮಾತ್ರವೇ ಅಧಿಕರಣದಂತೆ ಅನುಶಾಸನ ವಿಷಯವು, ಎಂದೇ ಹೇಳಬೇಕಾಗುತ್ತದೆ) ; ಕರ್ತೃಪ್ರಾಮಾಣ್ಯವಾದಂ–ಕರಣವಾಚಕಕರ್ತನೂ ಪ್ರಮಾಣನೆಂಬ ವಾದವನ್ನು, ಸಃ ಪಾಣಿನಿಃ ಏವ–(ಅನುಶಾಸನಕರ್ತನಾದ) ಪಾಣಿನಿಯೇ, ತತ್–ಅದ್ದರಿಂದ (ಪ್ರಮಾಣಶಬ್ದ ಪ್ರಯೋಗವಿಲ್ಲದ್ದರಿಂದ–ಪ್ರಮಾಣಶಬ್ದದಲ್ಲಿ ಪ್ರಯುಕ್ತವಾದ ಲ್ಯುಟ್‌ಪ್ರತ್ಯಯವು, ಪಾಣಿನಿಶಾಸನಾವಿಷಯದಲ್ಲಿ), ಹಂತಿ–ತನ್ನ ನಿಯಮವನ್ನು ತಾನೇ ಭಗ್ನಗೊಳಿಸಿದಂತೆಯೇ ಸರಿ.

---

(ನಿಯಮವು) ನಾರಾಯಣಾದಿ ಶಬ್ದಗಳಂತೆ, ಆಶ್ರಯಸ್ಥಾನವನ್ನು ಸೂಚಿಸುತ್ತದೆ ಮತ್ತು 'ಈಶ್ವರನ ಜ್ಞಾನವು ಪ್ರಮಾಣವು' ಎಂಬಲ್ಲಿ (ತಾರ್ಕಿಕರು ಹೇಳುವಂತೆ) ಕರ್ತೃವನ್ನು ಸೂಚಿಸಲೂ, ಈ ನಿಯಮವು ರಚಿತವಾಗಿದೆ (೭೭೯). ತಾರ್ಕಿಕರಂತೆ ಷಟ್‌ಕಾರಕ ಮತದಲ್ಲಿ ಕಾರಕಗಳೆಂದು ಹೇಳುವ, ಕರ್ಮ, ಕರಣಾದಿ ಆರರಲ್ಲಿ, ಸರ್ವಕರ್ತನೆಂದು (ಜಗತ್ಸೃಷ್ಟ್ಯಾದಿ ಕರ್ತನೆಂದು) ಹೇಳುವ ಈಶ್ವರನು, ಸೇರಿರುವುದಿಲ್ಲ; ಭೂತಲೇ ಘಟಂ ಪಶ್ಯತಿ, ಭೂತಲೇ ದಾರುಚ್ಛಿನತ್ತಿ ಇತ್ಯಾದಿ ಪ್ರಯೋಗದಲ್ಲಿ ಕಂಡುಬರುವಂತೆ, ಭೂತಲಮಾತ್ರವೇ ಅನುಶಾಸನದ ವಿಷಯವೆಂದು ಹೇಳಬೇಕಾಗಿಬರುತ್ತದೆ; ಆಗ, ಪಾಣಿನಿಯೇ ತನ್ನಿಂದ ರಚಿತವಾದ ನಿಯಮವನ್ನು ಭಗ್ನಗೊಳಿಸಿದಂತೆ ಆಗುತ್ತದೆ ; ಕರಣವಾಚಕ ಕರ್ತನು ಪ್ರಮಾಣವೆಂಬ ವಾದವು ಸತ್ತಂತೆಯೇ ಸರಿ; ಪ್ರಮಾಣಶಬ್ದ ಪ್ರಯುಕ್ತ ಲ್ಯುಟ್ ಪ್ರತ್ಯಯವು ಆ ನಿಯಮ ಬದ್ಧವಲ್ಲವೆಂದೇ ಪ್ರಾಪ್ತವಾಗುತ್ತದೆ (೭೮೦).

**ಯಾಥಾರ್ಥ್ಯಮೇವ ಪ್ರಾಮಾಣ್ಯಂ ಯತಃ ಸ್ವವಚನೇ ಜನಃ ।**
**ಪ್ರಮಾಣತಾಯೈ ಮೇ ವಾಕ್ಯಂ ಯಥಾರ್ಥಮಿತಿ ಶಂಸತಿ ।**
**ವ್ಯವಹಾರಾನುಕೂಲತ್ವಾಲ್ಲಕ್ಷಣಂ ಚ ತದೇವ ತತ್ ॥ ೭೮೧ ॥**

ಸರ್ವವ್ಯವಹಾರೋಪಯೋಗಿಯಾದ್ದರಿಂದ ನಮ್ಮ ಆಚಾರ್ಯರು ಹೇಳುವ ಪ್ರಮಾಣಲಕ್ಷಣವನ್ನೇ ಅನುಸರಿಸಬೇಕು—ಅನ್ಯವನ್ನಲ್ಲ, ಎನ್ನುತ್ತಾರೆ:—

ಪ್ರಮಾಣತಾಯೈ — ಪ್ರಮಾಣತ್ವ ಪ್ರತಿಪಾದನೆಗಾಗಿ, ವ್ಯವಹಾರಾನುಕತ್ವಾತ್—ವ್ಯವಹಾರಕ್ಕೂ ಅನುಕೂಲವಾಗುವುದರಿಂದ, ಮೇ—ನನ್ನ, ವಾಕ್ಯಂ—ವಾಕ್ಯವನ್ನು ಯಾಥಾರ್ಥ್ಯಂ ಏವ — ವಸ್ತುವನ್ನು ಇದ್ದಂತೆ ತಿಳಿಸುವುದೇ, ಪ್ರಾಮಾಣ್ಯಂ—ಪ್ರಾಮಾಣ್ಯ (ಜ್ಞಾನದ) ಪ್ರಾಮಾಣ್ಯವೆಂದು (ಪ್ರಮಾಣವನ್ನಾಗಿ) (ತಿಳಿಯತಕ್ಕದ್ದು); ಯತಃ — ಏಕೆಂದರೆ, ಸ್ವವಚನೇ — ತಮ್ಮ ಮಾತಿನಲ್ಲಿ, (ಪ್ರಮಾಣತಾಯೈ — ಪ್ರಮಾಣಸಿದ್ಧಿಗಾಗಿ, ವ್ಯವಹಾರಾನುಕೂಲತ್ವಾತ್ ಚ — ವ್ಯವಹಾರಾನುಕೂಲಕ್ಕಾಗಿಯೂ), ಜನಃ—ಲೋಕದ ಜನರೂ, ಯಥಾರ್ಥಂ—ಯಥಾರ್ಥವನ್ನು ಶಂಸತಿ—ಹೇಳುವರು; ತತ್—ಆದ್ದರಿಂದ, ತದೇವ ಲಕ್ಷಣಂ—ಅದೇ ಪ್ರಮಾಣದ ಲಕ್ಷಣವು.

**ಯದಾ ಯತ್ರ ಯಥಾ ಯೋಽರ್ಥಸ್ತಥಾ ತದ್ವಿಷಯೀಕೃತೌ ।**
**ಪಾರಂಪರ್ಯೇಣ ಸಾಕ್ಷಾದ್ವಾ ಯಥಾರ್ಥಂ ವಕ್ತಿ ತಜ್ಜನಃ ॥ ೭೮೨ ॥**

ಉಕ್ತಲಕ್ಷಣವು ಸವಿಷಯಕ ಕೇವಲ ಜ್ಞಾನದ ಲಕ್ಷಣವಾಗಬಹುದು; ನಿರ್ವಿಷಯಕ ಪ್ರಮಾಣದ ಲಕ್ಷಣವು ಹೇಗಾಗುತ್ತದೆಂದರೆ ವಿವರಿಸಿ ಹೇಳುತ್ತಾರೆ:—

---

ಯಥಾರ್ಥವನ್ನು ಹೇಳುವ (ವಸ್ತು—ವಿಷಯವನ್ನು ಇದ್ದಂತೆ ತಿಳಿಸುವ) ವಾಕ್ಯವೇ ಪ್ರಮಾಣವು; ಜನರೂ ತಮ್ಮ ಮಾತಿನ ಸತ್ಯತೆಯನ್ನು ತಿಳಿಸಲಿಕ್ಕಾಗಿ ತಮ್ಮ ನುಡಿಯು ಪ್ರಮಾಣವೆಂದೇ ಹೇಳುತ್ತಾರೆ; ಸತ್ಯವನ್ನು ಇದ್ದುದನ್ನು ಇದ್ದಂತೆ ನಿರೂಪಿಸುವ ಸತ್ಯಪ್ರತಿಪಾದಕ ಶಬ್ದವೇ—ವಾಕ್ಯವೇ ಪ್ರಮಾಣವು; ಈ ಲಕ್ಷಣವು ವ್ಯವಹಾರಾನುಕೂಲವೂ ಆಗಿದೆ—ಇದೇ ಪ್ರಮಾಣದ ಲಕ್ಷಣವು (೭೮೧). ಯಾವುದೊಂದು ಶಬ್ದ (ವಾಕ್ಯವು) ಸ್ವಯಂ ವಿಷಯ ಬೋಧಕವಲ್ಲವೋ, ಅದು,

ಯದಾ–ಯಾವಾಗ, ಯತ್ರ–ಎಲ್ಲಿ, ಯಥಾ–ಹೇಗೆ, ಯೋ ಅರ್ಥಃ–ಯಾವ ವಸ್ತುವು (ಇರುವುದೋ), ತಥಾ–ಹಾಗೆ, ತತ್–ಅದು, ವಿಷಯೀಕೃತಾ–ಗ್ರಹಿಸಲ್ಪಟ್ಟರೆ (ತಿಳಿಯಲ್ಪಟ್ಟರೆ), ತತ್–ಆ ಜ್ಞಾನವನ್ನು, ಜನಃ–ಲೋಕವು, ಯಥಾರ್ಥಂ–ಯಥಾರ್ಥವನ್ನಾಗಿ, ವಕ್ತಿ–ಹೇಳುತ್ತದೆ ; (ಈ ರೀತಿಯ ಯಥಾರ್ಥ ಜ್ಞಾನವು) ಪಾರಂಪರ್ಯೇಣ–ಪರಂಪರೆಯಿಂದಾಗಲಿ, ವಾ–ಅಥವಾ, ಸಾಕ್ಷಾತ್–ಸ್ವಯಂ ತಾನೇ ಆಗಲಿ (ಪದ ಅಥವಾ ವಾಕ್ಯವು ತಿಳಿಸುತ್ತಿರಬೇಕು) ; [ಜ್ಞಾನ ಬೋಧಕ ಪದವಾಗಲಿ, ವಾಕ್ಯವಾಗಲಿ ಸ್ವಯಂ ಅರ್ಥವನ್ನು ವಿಷಯೀಕರಿಸುವುದೆಂಬ ಯಥಾರ್ಥವು ಇಲ್ಲದಿದ್ದರೂ, ಒಂದು ಸಂದರ್ಭದಲ್ಲಿ ನಿಶ್ಚಯಿಸಲಾದ ಅರ್ಥವು, ಅನ್ಯತ್ರ ಅದೇ ಶಬ್ದ ಅಥವಾ ವಾಕ್ಯವನ್ನು ಪ್ರಯೋಗಿಸಿದಾಗಲೂ, ಆಗುತ್ತಿದ್ದರೆ, ಮೊದಲು ಹುಟ್ಟಿದ ಯಥಾರ್ಥಜ್ಞಾನವು, ನಂತರದ ಯಥಾರ್ಥ ಜ್ಞಾನಕ್ಕೆ ಪರಂಪರೆಯಿಂದ ಸಾಧನವಾಗುವುದೂ ಉಂಟಷ್ಟೆ—ಇದನ್ನು ಪರಂಪರಾ ಸಾಧನೆಯ ನಿಧರ್ಶನವೆನ್ನಬಹುದು.][1]

---

ಪರಂಪರೆಯಿಂದಲೂ ಪ್ರಮಾಣವಾಗಿರಬಹುದು ; ಯಾವ ವಿಷಯವು ಎಲ್ಲಿ, ಹೇಗೆ ಇರುವುದೋ, ಅದನ್ನು ಇದ್ದಂತೆ ಗ್ರಹಿಸಿದರೆ ಯಥಾರ್ಥವೆಂದು ಹೇಳುವರು; ಅದೇ ಅರ್ಥವನ್ನು (ವಿಷಯವನ್ನು) ಅದೇ ಶಬ್ದ (ವಾಕ್ಯವು) ಬೇರೊಂದು ಸಂದರ್ಭದಲ್ಲಿ ಪ್ರಯೋಗವಾದಾಗಲೂ ಬೋಧಿಸಿದರೆ, ಆಗಲೂ ಅದು ಯಥಾರ್ಥವೇ ಆದ್ದರಿಂದ, ಪ್ರಮಾಣವೇ ; ಅನ್ಯಜ್ಞಾನದ್ವಾರಾ ವಸ್ತುಜ್ಞಾನವನ್ನುಂಟುಮಾಡುವುದು, ಪರಂಪರಾ ಪ್ರಮಾಣವು–ಸಾಕ್ಷಾತ್ತಾಗಿ ವಸ್ತುವಿಷಯಕ ಜ್ಞಾನಸಾಧಕವಲ್ಲವೆಂಬ.

1 ಲೌಕಿಕವಾಕ್ಯದಲ್ಲಿ, 'ಈ ವಾಕ್ಯವು ಸತ್ಯವೇ'; 'ಸತ್ಯಂವಾ.' ಇತ್ಯಾದಿ ಶ್ರುತಿಯಲ್ಲಿ 'ಸತ್ಯಂ ಮೇ ವ್ಯಾಹೃತಂ ಸತಿ' ಇತ್ಯಾದಿ ಪ್ರಯೋಗಿಸಲ್ಪಡುವ ವಾಕ್ಯಗಳು, ಯಥಾರ್ಥವಚನವೆಂಬರ್ಥದ ಸತ್ಯಪದವು ನಿರ್ಮೂಲ (ಅರ್ಥವಿಲ್ಲದ) ಶಬ್ದವೆಂದಾಗುತ್ತದೆ; ಶಬ್ದಾದಿ ವಿಷಯಗಳಿಗೆ, ಅವುಗಳನ್ನು ವಿಷಯೀಕರಿಸುವ (ಜ್ಞಾನಜನಕ) ಶ್ರೋತ್ರಾದಿ ಇಂದ್ರಿಯಗಳನ್ನು ಕುರಿತು ವಿಷಯತ್ವವಿಲ್ಲದಿದ್ದರೆ, 'ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ' |) 'ಶಬ್ದಾದೀನ್ ವಿಷಯಾನನ್ಯೇ ಇಂದ್ರಿಯಾಗ್ನಿಷು ಜುಹ್ವತಿ' (ಗೀತಾ) 'ಷಡಿಂದ್ರಿಯಾಣಿ, ಷಡ್ವಿಷಯಾಃ' (ಪರಕೀಯ ಗ್ರಂಥಗಳಲ್ಲಿ) ರೂಪರಸಾದಿಗಳಿಗೆ ಚಕ್ಷುರಾದಿ ಇಂದ್ರಿಯ ವಿಷಯತ್ವವೂ ಬ್ರಹ್ಮನು ಯುಕ್ತಿರೂಪ ವಿಚಾರ ವಿಷಯನೂ, ಎಂಬುದೂ, ಶಬ್ದರೂಪದ ಶಾಸ್ತ್ರ ವಿಷಯನೂ, ಆಗಿರುವನೆಂಬುದು, ವ್ಯರ್ಥವಾಗುತ್ತದೆ ; ಆದ್ದರಿಂದ ಇಂದ್ರಿಯ ವಿಷಯರೂಪ ಸಂಬಂಧವೂ, ದೇಹದ ಹಸ್ತಾದಿಗಳ ದ್ವಾರಾ

**ಪ್ರಾಮಾಣ್ಯವಾದೇ ಜ್ಞಾನಸ್ಯ ಪ್ರಾಮಾಣ್ಯಂ ವರ್ತತೇ ಕಿಲ ।**
**ಸ್ಮರ್ತಾನ್ಯಸ್ಯಾಸ್ಯ ವಿಸ್ಮರ್ತಾ ಲಕ್ಷಣೋಕ್ತೌ ಸ ಕಿಂ ಬುಧಃ ॥ ೭೮೩ ॥**

ಪ್ರಾಮಾಣ್ಯದ ಸ್ವತಸ್ತ್ವವಾದದಲ್ಲಿ ಸೂಚಿತವಾದ ಪ್ರಮೇಯವನ್ನು ಸೂಚಿಸುತ್ತಾ ಹೇಳುತ್ತಾರೆ :—

ಪ್ರಾಮಾಣ್ಯವಾದೇ-ಪ್ರಾಮಾಣ್ಯಸ್ವತಸ್ತ್ವವಾದದಲ್ಲಿ, ಜ್ಞಾನಸ್ಯ-ಜ್ಞಾನದ, ಪ್ರಾಮಾಣ್ಯಂ-ಪ್ರಾಮಾಣ್ಯವೆಂಬುದು (ಪ್ರಮಾಣತ್ವವೆಂಬುದು), ವರ್ತತೇ ಕಿಲ-ಇರುವುದಷ್ಟೆ; ಲಕ್ಷಣೋಕ್ತೌ - ಲಕ್ಷಣವಾಕ್ಯದಲ್ಲಿ, ಅಸ್ಯ - ಇದರ (ಜ್ಞಾನ ಪ್ರಾಮಾಣ್ಯದ) ವಿಸ್ಮರ್ತಾ-ವಿಸ್ಮರಣೆಯುಳ್ಳವನು ಅನ್ಯಸ್ಯ-ಕರಣಪ್ರಾಮಾಣ್ಯದ, ಸ್ಮರ್ತಾ-ಸ್ಮರಣೆಯುಳ್ಳವನಾದ, ಸಃ-ಆತನು (ತಾರ್ಕಿಕನು), ಬುಧಃ ಕಿಂ - ವಿವೇಕಿಯೆನಿಸುವನೇ ? (ಇಲ್ಲ).

**ಅದುಷ್ಟಕರಣಂ ಚಕ್ಷುಃ ಪ್ರಮಾವ್ಯಾಪ್ತಂ ಯಥಾ ಭವೇತ್ ।**
**ತಥಾ ಪ್ರಮಾತಾ ಜೀವೋಽಪಿ ಪ್ರಮಾವ್ಯಾಪ್ತಃ ಕುತೋ ನ ತೇ ॥ ೭೮೪ ॥**

---

ಮಾತ್ರದಿಂದ, ಪ್ರಾಮಾಣ್ಯವನ್ನು ತಿರಸ್ಕರಿಸಲು ಬರುವುದಿಲ್ಲ (೭೮೨). ಇಂದ್ರಿಯ ಜನ್ಯಜ್ಞಾನದಲ್ಲಿ ಪ್ರಾಮಾಣ್ಯ ಬುದ್ಧಿ ಇಲ್ಲದವನು (ಜ್ಞಾನ ಪ್ರಾಮಾಣ್ಯವನ್ನು ಮರೆತವನು), ಕರಣ (ಇಂದ್ರಿಯ) ಪ್ರಾಮಾಣ್ಯ ಬುದ್ಧಿಯನ್ನು ಮಾತ್ರ ಸ್ಮರಿಸಿದರೆ, ವಿವೇಕಿ ಎನಿಸಲಾರನು ; ಹೀಗೆ ವಾದಿಸುವ ತಾರ್ಕಿಕನು, ಪ್ರಾಮಾಣ್ಯದ ಲಕ್ಷಣವನ್ನು ಗ್ರಹಿಸಲಾರನು (೭೮೩). ತಾರ್ಕಿಕನು, ತಮ್ಮ ಈಶ್ವರನು, ಪ್ರಮಾವ್ಯಾಪ್ತನಾದ್ದರಿಂದ (ಜ್ಞಾನವಿಷಯನಾದ್ದರಿಂದ) ಸತ್ಯನೆಂದು ಹೇಳುವನು,

---

ಸಂಬಂಧವುಳ್ಳ (ತರು-ಕಟ್ಟಿಗೆ) ಇತ್ಯಾದಿವಸ್ತುಸಂಬಂಧದಂತೆ, ಯೋಗ್ಯಸಂಬಂಧವುಳ್ಳದ್ದೇ ಆಗಿರುತ್ತದೆ ; ಏವಂಚ, ಸಾಕ್ಷಾತ್ತಾಗಿ (ಇಂದ್ರಿಯವಿಷಯಗಳಂತೆ) ಮತ್ತು ಹಸ್ತಾದಿಗಳ ದ್ವಾರಾ (ಪರಂಪರೆಯಿಂದ) ದೇಹಸಂಬಂಧವುಳ್ಳ ವಸ್ತುಗಳಂತೆ, ಪ್ರಮಾಣದ ಲಕ್ಷಣಕ್ಕೆ ಸಂಬಂಧವಿರುವುದರಿಂದ, ಲಕ್ಷಣಕ್ಕೆ ಅವ್ಯಾಪ್ತಿ ಎಂಬ ದೋಷವಿಲ್ಲದೇ, ಶ್ರೀಮಧ್ವಸೂರ್ಯರ ಲಕ್ಷಣ ಸರಣಿಯು ಅನುಸರಿಸಲು ಅತಿಶಯವಾಗಿ ಯೋಗ್ಯವಾಗಿದೆ ; ಏವಂಚ-ಸಾಕ್ಷಾತ್ತಾಗಿ ಪ್ರತಿಪಾದಿಸಲ್ಪಡುವ ವಿಷಯವಿಲ್ಲವೆಂಬ ಕಾರಣದಿಂದ ಪ್ರಮಾಣಲಕ್ಷಣ ನಿರೂಪಣೆಯು, ಸ್ವಯಂ ನಿರ್ವಿಷಯ ಪದವಾಕ್ಯಗಳ ಪ್ರಾಮಾಣ್ಯಕ್ಕೆ ಅನ್ವಯಿಸುವುದಿಲ್ಲವೆಂಬುದು ಯುಕ್ತವಲ್ಲ.

ಪ್ರಮಾ (ಜ್ಞಾನ) ವ್ಯಾಪ್ತನೆಂಬ ಕಾರಣದಿಂದ ಈಶ್ವರನಿಗೆ, ಪ್ರಮಾಣತ್ವ ವಿದ್ದರೆ, ಜೀವನಿಗೂ ಅದೇ ಕಾರಣದಿಂದ ಪ್ರಾಮಾಣ್ಯವೇಕಿಲ್ಲ, ಎಂಬ ವಾದವನ್ನು ತಿರಸ್ಕರಿಸಲು, ಪ್ರತಿವಾದವನ್ನು ಮುಂದಿಡುತ್ತಾರೆ (ಹಾಗೆಂದರೆ ಕರಣಪದವಾಚ್ಯ); ಇಂದ್ರಿಯದಲ್ಲಿ ಪ್ರಮಾವ್ಯಾಪ್ತಿಯು ಇಲ್ಲವೆಂದರೆ (ಅದುಷ್ಟವೆಂಬ ಅವಸ್ಥಾವಿಶೇಷ ದಲ್ಲಿ ವ್ಯಾಪ್ತಿ ಇರಬಹುದೆಂದರೆ, ಜೀವನಲ್ಲಿಯೂ ಪ್ರಮಾವ್ಯಾಪ್ತಿಯು ಇರಬಹುದು) ಕರಣದಲ್ಲಿ ಪ್ರಮೆಯ ವ್ಯಾಪ್ತಿ, ಅವ್ಯಾಪ್ತಿಗಳೆರಡೂ ಇರುವುದೆಂಬ ಅನುಪ ಪತ್ತಿಯೂ ಉಂಟಾಗುವುದೆಂಬ ಮುಂತಾದ ವಾದಗಳಿಂದ, ಪರನ ವಾದವನ್ನು ದೂಷಿಸುತ್ತಾರೆ :—

ಅದುಷ್ಟಕರಣಂ – ದೋಷರಹಿತ ಇಂದ್ರಿಯವಾದ, ಚಕ್ಷುಃ – ಚಕ್ಷು ರಿಂದ್ರಿಯವು, ಯಥಾ-ಹೇಗೆ, ಪ್ರಮಾವ್ಯಾಪ್ತಂ-ಪ್ರಮೆಯಿಂದ ವ್ಯಾಪ್ತವಾದುದು, ಭವೇತ್ – ಆಗುವುದೋ, ತಥಾ – ಹಾಗೆಯೇ, ಪ್ರಮಾತಾ – ಪ್ರಮಾತನಾದ (ತಿಳಿಯುವವನಾದ ಪ್ರಮಾತೃವಾದ), ಜೀವಃ ಅಪಿ–ಜೀವನೂ ಸಹ, ತೇ– ನಿನ್ನಂತೆ, ಕುತಃ–ಯಾವ ಕಾರಣದಿಂದ, ನ ಪ್ರಮಾವ್ಯಾಪ್ತಃ–ಪ್ರಮೆಯಿಂದ (ಜ್ಞಾನದಿಂದ) ವ್ಯಾಪ್ತನಲ್ಲ.

**ಅಶಿಷ್ಟಕರ್ತೃಪ್ರಾಮಾಣ್ಯೇ ಕರ್ತೃಮಾತ್ರೇ ತದುಚ್ಯತಾಂ ।**
**ನ ಚೇತ್ಸಭಾ ಸ್ವಶಿಷ್ಟಸ್ತ್ವಂ ಶಿಷ್ಟಮಧ್ಯೇ ಭವಿಷ್ಯಸಿ ॥ ೭೮೫ ॥**

ಅಶಿಷ್ಟಕರ್ತೃ ಪ್ರಾಮಾಣ್ಯೇ (ಸತಿ) – ಅಶಿಷ್ಟನಾದ (ಪೂರ್ಣನಲ್ಲದ), ಕರ್ತನಾದ ಈಶ್ವರನ ವಿಷಯದಲ್ಲಿ, ಪ್ರಾಮಾಣ್ಯವು (ಪ್ರಮಾವ್ಯಾಪ್ತಿಯು)

---

ಹಾಗೆಂದರೆ ಜೀವನಿಗೂ ಅದೇ ಕಾರಣದಿಂದ ಸತ್ಯತ್ವವನ್ನು (ಪ್ರಾಮಾಣ್ಯವನ್ನು) ಅಂಗೀಕರಿಸಬೇಕು; ಕರಣಕ್ಕೆ (ಇಂದ್ರಿಯಕ್ಕೆ) ಪ್ರಮಾ ವ್ಯಾಪ್ತಿಯನ್ನು ಹೇಳುವಂತೆ, ಜೀವನಿಗೂ ಈ ವ್ಯಾಪ್ತಿಯನ್ನು ತಿಳಿಯಬಹುದಲ್ಲವೇ ? ದೋಷರಹಿತವಾದ ಕರಣಕ್ಕೆ ಮಾತ್ರ ಪ್ರಮಾವ್ಯಾಪ್ತಿಯನ್ನು ಒಪ್ಪುವೆವೆಂದರೆ, ಪ್ರಮಾತನಾದ ಜೀವನಿಗೂ ಒಪ್ಪಬಹುದು–ಜೀವನು ಏಕೆ ಪ್ರಮಾವ್ಯಾಪ್ತನಲ್ಲ ? ಹೀಗೆ ಹೇಳಿದರೆ ಕರಣದಲ್ಲಿ ಪ್ರಮೆಗೆ ವ್ಯಾಪ್ತಿ, ಅವ್ಯಾಪ್ತಿಗಳೆರಡನ್ನೂ ಹೇಳಿದಂತಾಗುತ್ತದೆ; ಇತ್ಯಾದಿ ದೋಷಗಳಿಂದ ಪ್ರಮಾವ್ಯಾಪ್ತಿಯಿಂದ ಈಶ್ವರನು ಸಿದ್ಧನಾಗುವನೆಂಬ ತಾರ್ಕಿಕನ ವಾದವು ಯುಕ್ತವಾಗುವುದಿಲ್ಲ (೭೮೪). ಅಪೂರ್ಣನಾದ (ಶಿಷ್ಟನಲ್ಲದ

ಪಾಣಿನಿಯು ಅಂಗೀಕರಿಸಿದರೆ, ಕರ್ತೃಮಾತ್ರೇ – ಚೇತನಮಾತ್ರನಾದ ಜೀವನಲ್ಲಿಯೂ, ತದುಚ್ಯತಾಂ–ಪ್ರಾಮಾಣ್ಯವು ಹೇಳಲ್ಪಡಲಿ; ನ ಚೇತ್–ಹಾಗೆ ಹೇಳದಿದ್ದರೆ, (ಪ್ರಮಾವ್ಯಾಪ್ತಿಯಿಂದ ಜ್ಞಾನಪ್ರಾಮಾಣ್ಯವು ಅಂಗೀಕರಿಸಲ್ಪಡದಿದ್ದರೆ), ಶಿಷ್ಟಮಧ್ಯೇ–ಪಂಡಿತಮಧ್ಯದಲ್ಲಿ, ಸಭಾಸು–ವಿದ್ವತ್ಸಭೆಗಳಲ್ಲಿ, ತ್ವಂ–ನೀನು, ಅಶಿಷ್ಟಃ–ಅಪಂಡಿತನು; ಭವಿಷ್ಯಸಿ–ಆಗುವಿ.

**ಯದಿ ಸ್ಮೃತೇರ್ನ ಮಾನತ್ವಂ ನ ಸ್ಯಾತ್ತರ್ಹ್ಯನುಭೂತಿಷು ।**
**ಸಮಾನವಿಷಯಜ್ಞಾನದ್ವಯೇ ಯನ್ನ ದ್ವಯೀ ಗತಿಃ ॥ ೭೮೬ ॥**

ಈಗ ಸ್ಮೃತಿಗಳಿಗೆ ಪ್ರಾಮಾಣ್ಯವನ್ನು ಸಮರ್ಥಿಸುತ್ತಾರೆ :—

ಮಾನತ್ವಂ – ಯಥಾರ್ಥತೆಯು, ಸ್ಮೃತೇಃ – ಸ್ಮೃತಿಗೆ, ಯದಿ ನ–ಇಲ್ಲವೆಂದರೆ, ತರ್ಹಿ–ಆಗ, ಅನುಭೂತಿಷು–ಪ್ರಮಾರೂಪದ ಅನುಭವದಲ್ಲಿ (ವಿವಿಧ ಅನುಭವಗಳಲ್ಲಿ), ನ ಸ್ಯಾತ್–ಇಲ್ಲವೆಂದಾಗಲಿ; ಯತ್–ಏಕೆಂದರೆ, ಸಮಾನ ವಿಷಯ ಜ್ಞಾನದ್ವಯೇ–(ಅನ್ಯಸಂಸ್ಕಾರಜನ್ಯವಾದ ಸ್ಮೃತಿಯಲ್ಲಿ, ಅವಶ್ಯವಾಗಿ ಪ್ರಮಾರೂಪದಲ್ಲಿ ಸಾಮ್ಯವಿರುವುದರಿಂದ), ವಿಷಯಜ್ಞಾನಗಳೆಂಬ ಎರಡರಲ್ಲಿ, ದ್ವಯೀ ಗತಿಃ – ಯಥಾರ್ಥತ್ವ, ಅಯಥಾರ್ಥತ್ವಗಳೆಂಬ ಎರಡು ವಿಧ ಗತಿಯೂ, ನ–ಯುಕ್ತವಾಗುವುದಿಲ್ಲ.

---

ಸರ್ವೋತ್ತಮನಲ್ಲದ) ಕರ್ತನೆಂಬ ಈಶ್ವರನ ವಿಷಯಕ್ಕೆ ಪಾಣಿನಿಯು (ವ್ಯಾಕರಣ ಶಾಸ್ತ್ರಕರ್ತನು),ಪ್ರಮಾವ್ಯಾಪ್ತಿಯನ್ನು ಅಂಗೀಕರಿಸುವನೆಂದರೆ, ಕರ್ತೃಮಾತ್ರನಾದ (ಚೇತನಮಾತ್ರನಾದ) ಜೀವನಲ್ಲಿಯೂ, ಅದೇ ಕಾರಣದಿಂದ, ಪ್ರಾಮಾಣ್ಯವನ್ನು ಅಂಗೀಕರಿಸಬೇಕು; ಪ್ರಮಾವ್ಯಾಪ್ತಿಯು ಜ್ಞಾನಪ್ರಾಮಾಣ್ಯದ ಸಾಧನವೆಂಬುದೇ ಇಲ್ಲದಿದ್ದರೆ, ವಿದ್ವತ್ಸಭೆಗಳಲ್ಲಿ ನೀನು (ತಾರ್ಕಿಕನು) ಅಪಂಡಿತನೆನಿಸುವಿ (೭೮೫). ಸ್ಮೃತಿಗಳಿಗೆ ಪ್ರಾಮಾಣ್ಯವಿಲ್ಲವೆಂಬುದೂ ಯುಕ್ತವಲ್ಲ; ಸ್ಮೃತಿಗೆ ಪ್ರಮಾಣ ವಿಲ್ಲೆಂದರೆ, ಅನುಭವಗಳಿಗೂ ಪ್ರಮಾಣವಿಲ್ಲವೆಂದಂತಾಗುತ್ತದೆ; ಅನುಭವವೇ ಪ್ರಮಾರೂಪವು; ಸರ್ವರ ಅನುಭವಗಳಿಗೂ ಪ್ರಮಾಣಗಳನ್ನು ತಿರಸ್ಕರಿಸಬೇಕು; ಸ್ಮೃತಿಯು ಸಂಸ್ಕಾರ ಜನ್ಯವಾದುದು; ಇಬ್ಬರ ಸ್ಮೃತಿಯೆಂಬ ಪ್ರಮೆಯಲ್ಲಿ, ವಿಷಯ ಮತ್ತು ಜ್ಞಾನಗಳೆಂಬ ಎರಡರಲ್ಲಿ ಸಾಮ್ಯವಿದ್ದು, ಒಂದು ಯಥಾರ್ಥವೂ ಮತ್ತೊಂದು ಅಯಥಾರ್ಥವೂ ಎಂದು ತಿಳಿಯುವುದು ಯುಕ್ತವಾಗುವುದಿಲ್ಲ;

**ಯಸ್ಮಿನ್ ಕಾಲೇ ಯತ್ರ ದೇಶೇ ತದ್ಘಟಂ ಸಂಸ್ಮರೇತ್ಕಿಲ ।**
**ತದಾನೀಂ ತತ್ರ ಸೋಽರ್ಥೋಽಭೂದಿದಾನೀಮಸ್ತಿ ವಾ ನ ವಾ ।**
**ಸ್ಮರ್ತಾರೋಽಪೀತ್ಥಮೇವಾಹುಸ್ತತ್ಕೇನಾಸ್ಯಾಮಮಾನತಾ ॥ ೭೮೭ ॥**

ಒಂದು ಘಟವನ್ನು ಸ್ಮರಿಸಿದರೆ, ಆಗ (ಸ್ಮರಣಕಾಲದಲ್ಲಿ) ಅದು ಇರಲೇಬೇಕೆಂಬ ನಿಯಮವಿಲ್ಲ; ಆದ್ದರಿಂದ ಸ್ಮರಣೆಯು (ಸ್ಮೃತಿಯು) ಹೇಗೆ ಯಥಾರ್ಥವು ? ಈಗ ಅಲ್ಲಿ ಘಟವಿದೆ ಎಂದು ಸ್ಮರಣೆಯುಂಟಾದರೆ ಅದು ಇಲ್ಲದ್ದರಿಂದ, ಸ್ಮರಣೆಯೂ ಅಯಥಾರ್ಥವೇ ಆಗುತ್ತದೆ; ಆದರೆ ಸ್ಮೃತಿಯ ಆಕಾರವು (ರೂಪವು) ಹೀಗಿಲ್ಲ; ಆಗ ಅಲ್ಲಿ ಹಾಗಿತ್ತು; ಹಾಗೆ ನಡೆಯಿತು; ಎಂದೇ ಸ್ಮೃತಿಯು, ಆದ್ದರಿಂದ ಅದರ ಸತ್ಯತೆಗೆ ಬಾಧವಿಲ್ಲ; ಅನುಭವಕಾಲದಲ್ಲಿ ಅಲ್ಲಿ ಘಟವಿಲ್ಲದಿದ್ದರೆ, ಸ್ಮೃತಿಕಾಲದಲ್ಲಿಯೂ ಇರದಿದ್ದರೆ ಏನು ಹಾನಿಯು; ಎಂದು ಶಂಕಾವಿವರಣದಿಂದ ಉತ್ತರವನ್ನು ಹೇಳುತ್ತಾರೆ:—

ಯಸ್ಮಿನ್ ಕಾಲೇ—ಯಾವ ಕಾಲದಲ್ಲಿ, ಯತ್ರ ದೇಶೇ—ಯಾವ ದೇಶದಲ್ಲಿ, ತದ್ಘಟಂ—ಆ ಘಟವನ್ನು, ಸಂಸ್ಮರೇತ್—ಸ್ಮರಿಸುವನೋ, ಕಿಲ—ಸಂಶಯಜ್ಞಾನವೇ ಹುಟ್ಟುತ್ತದೆಂಬುದು ಸ್ಪಷ್ಟವಿದೆ; ತದಾನೀಂ—ಆಗ, ತತ್ರ—ಅಲ್ಲಿ, ಸಃ ಅರ್ಥಃ—ಆ ವಸ್ತುವು, ಅಭೂತ್—ಇದ್ದಿತು, ಇದಾನೀಂ—ಈಗ, ಅಸ್ತಿ ವಾ ನವಾ—ಇದೆಯೋ ಅಥವಾ ಇಲ್ಲವೋ, ಸ್ಮರ್ತಾರಃ ಅಪಿ—(ಘಟವನ್ನು) ಸ್ಮರಿಸುವವರು ಸಹ, ಇತ್ಥಂ ಏವ—ಹೀಗೆಂದೇ, ಆಹುಃ—ಹೇಳುವರು; ತತ್ (ತಸ್ಮಾತ್)—ಆದ್ದರಿಂದ (ಸ್ಮೃತಿಕರ್ತರೂ ಹೀಗೆಯೇ ಹೇಳುವುದರಿಂದ), ಅಸ್ಯಾಂ—ಸ್ಮೃತಿವಾಕ್ಯಗಳಲ್ಲಿ (ಆ ಕಾಲದ ಪರಿಸ್ಥಿತಿಗಳನ್ನು ನಿರೂಪಿಸುವ ವಾಕ್ಯಗಳಲ್ಲಿ), ಅಮಾನತಾ—ಅಯಥಾರ್ಥತ್ವವು

---

ಆದ್ದರಿಂದ ಅನುಭವವು ಪ್ರಮಾಣವು—ಸತ್ಯವನ್ನೇ ತಿಳಿಸುತ್ತದೆ (೭೮೬). ಘಟಸ್ಮರಣೆಯ ಪ್ರಾಮಾಣ್ಯವನ್ನು ವಿಚಾರಿಸುವಾ; ಯಾವಾಗ ಎಲ್ಲಿ ಘಟವನ್ನು ಸ್ಮರಿಸಿದರೂ, ಆಗ ಅಲ್ಲಿ ಆ ವಸ್ತುವು ಇದ್ದಿತು—ಈಗ ಅಲ್ಲಿದೆಯೋ ಇಲ್ಲವೋ ಎಂಬ ರೀತಿಯ ಸಂಶಯ ಜ್ಞಾನವೇ ಉಂಟಾಗುತ್ತದೆ; ಆದ್ದರಿಂದ ಸ್ಮೃತಿವಾಕ್ಯಗಳಲ್ಲಿ (ಆ ಕಾಲದ ಪರಿಸ್ಥಿತಿ ಮತ್ತು ಸಂಭವಿಸಿದ ವಿಷಯಗಳನ್ನು ನಿರೂಪಿಸುವ ವಾಕ್ಯಗಳಲ್ಲಿ) (ಈಗ ಅಯೋಧ್ಯೆಯಲ್ಲಿ ಸೀತಾರಾಮರಿರುವರೆಂಬ ನಿಶ್ಚಯಜ್ಞಾನವು ಯಾರಿಗೂ ಹುಟ್ಟುವುದಿಲ್ಲ) ಸುಳ್ಳನ್ನೇ ಹೇಳುತ್ತವೆಂಬ ನಿಶ್ಚಯಜ್ಞಾನವು

(ಸುಳ್ಳೆಂಬುದು), ಕೇನ – ಯಾವ ಕಾರಣದಿಂದ ? (ಉಂಟಾಗುತ್ತದೆ)? (ಕಾರಣವಿಲ್ಲ).

**ಕಾಲಾತ್ಯಯಸ್ಯ ಸಂಸ್ಕಾರಾಭಾವಾನ್ನ ಸ್ಮರಣಂ ಯದಿ ।**
**ತರ್ಹಿ ತತ್ಕಾಲಮದ್ಯಾಪಿ ವರ್ತಮಾನಂ ಚ ನ ಸ್ಮರೇತ್ ।**
**ಘಟಮಾತ್ರಗ್ರಾಹಿಣೀಯಂ ಕುತೋ ವಾ ಮಾನತಾಂ ತ್ಯಜೇತ್**
|| ೭೮೮ ||

ಕಾಲಾತ್ಯಯಸ್ಯ–ಕಾಲನಾಶದ (ಧ್ವಂಸದ), ಸಂಸ್ಕಾರಾಭಾವಾತ್–ಅನುಭವ ವಿರುವುದಿಲ್ಲವಾದ್ದರಿಂದ, ಯದಿ ನ ಸ್ಮರಣಂ–ಘಟಸ್ಮರಣದಲ್ಲಿ ಕಾಲದ ಸ್ಮರಣವಿಲ್ಲ, ಎಂದರೆ, ತರ್ಹಿ–ಆಗ, ತತ್ಕಾಲಂ–ಆ ಕಾಲವು (ಅಚಾಕ್ಷುಷವಾದ್ದರಿಂದ, ಘಟದಂತೆ ಕಣ್ಣಿಗೆ ತೋರುವುದಿಲ್ಲವಾದ್ದರಿಂದ), ಅದ್ಯಾಪಿ–ಈಗಲೂ, ವರ್ತಮಾನಂ–(ಸ್ಮೃತಿಕಾಲದಲ್ಲಿ) ಇರತಕ್ಕದ್ದೆಂಬ ಸ್ಮರಣೆಯೂ, ನ ಸ್ಮರೇತ್–ಸ್ಮರಣೆಗೆ ಬರಲು ಕಾರಣವಿಲ್ಲ (ಕಾಲವಿಶಿಷ್ಟವಾದ ಘಟದ ಸ್ಮರಣೆಯು, ಕಾಲವು ನಷ್ಟವಾಗಿದ್ದರೂ, ಘಟಮಾತ್ರದ ಸ್ಮರಣೆಯು ಉಂಟಾಗುತ್ತದೆ.); (ಆಗ ಆ ಸ್ಮರಣೆಯು ಅಯಥಾರ್ಥ ವಾಗುವುದಿಲ್ಲ); [1] ಘಟಮಾತ್ರಗ್ರಾಹಿಣೀ ಇಯಂ–ಘಟಮಾತ್ರವನ್ನು ವಿಷಯೀ ಕರಿಸುವ ಈ ಸ್ಮೃತಿಯು, ಕುತಃ–ಯಾವ ಕಾರಣದಿಂದ, ಮಾನತಾಂ–ಪ್ರಮಾಣ ತ್ವವನ್ನು (ಪ್ರಾಮಾಣ್ಯವನ್ನು) ತ್ಯಜೇತ್–ತ್ಯಜಿಸುತ್ತದೆ? (ಕಾರಣವಿಲ್ಲ–ಅದು ಪ್ರಮಾಣವೇ ಆಗಿರುತ್ತದೆ).

---

ಯಾರಿಗೂ ಸ್ಮೃತಿಯಿಂದ ಉಂಟಾಗುವುದಿಲ್ಲ (೭೮೭). ಕಾಲವು ಕಣ್ಣಿಗೆ ಗೋಚರವಾಗುವುದಲ್ಲ; ಆಗಿದ್ದ ಘಟದ ಸ್ಮರಣೆಯಲ್ಲಿ, ಕಾಲ ವಿಶಿಷ್ಟವಾದ ಘಟದ ಸ್ಮೃತಿ ಇಲ್ಲ; ಏಕೆಂದರೆ, ಕಾಲದ ಅತ್ಯಯವು (ನಾಶವು) ಚಾಕ್ಷುಷವಲ್ಲ; ಕೇವಲ ಘಟಮಾತ್ರದ ಸ್ಮರಣೆಯು, (ವರ್ತಮಾನಕಾಲವಿಶಿಷ್ಟವೆಂಬ ಕಾಲದ ಜ್ಞಾನವೂ ಬಾರದಿರುವುದರಿಂದ) ಅಯಥಾರ್ಥವಲ್ಲ (ಸುಳ್ಳಲ್ಲ–ಸತ್ಯವೇ)

1 ಅನುಭವ ಕಾಲದಲ್ಲಿ ಸುಗಂಧಯುಕ್ತವಾದ ಗಂಧದಚಂದನ ಚಕ್ಕೆಯು ಪೂರ್ವಾನು ಭೂತವಾದುದು ಸ್ಮರಣೆಗೆ ಬಂದರೂ, ಅಚಾಕ್ಷುಷವಾದ ಪರಿಮಳವು ಪಾಷಾಣದಲ್ಲಿ ತೋರು ವುದಿಲ್ಲ.–ಸ್ಮೃತಿಯು ಅಲ್ಲಿ ಗಂಧವನ್ನು ಉಲ್ಲೇಖಿಸುವುದಿಲ್ಲ: ಆದ್ದರಿಂದ ಸ್ಮೃತಿಜ್ಞಾನವು ಅಯಥಾರ್ಥವಲ್ಲ.

**ಸುಹೃದ್ಭಾವೇನ ಪೃಚ್ಛಂತಂ ಪ್ರತಿ ತೂತ್ತರಮುಚ್ಯತೇ ।**
**ಯಥಾನುಭವಕಾಲೋಽಪಿ ಸಾಕ್ಷಿಣೈವೋಪನೀಯತೇ ।**
**ತಥಾ ತದಪ್ಯಯೋಽಪ್ಯತ್ರ ಸಾಕ್ಷಿಣೈವೋಪನೀಯತಾಂ ॥ ೭೮೯ ॥**

ಹಿಂದೆ ಅಲ್ಲಿ ಘಟವಿತ್ತು ಎಂಬುದರ ಸ್ಮರಣೆಯ ಆಕಾರವನ್ನು ಹೇಳುವಾಗ, ಅತೀತಕಾಲದ ಅದರ ಧ್ವಂಸದ ಉಲ್ಲೇಖವಾದರೂ ಇರಬೇಡವೇ? ಎಂದು ಸ್ನೇಹಭಾವದಿಂದ ಪ್ರಶ್ನಿಸುವವರಿಗೆ ಉತ್ತರವನ್ನು ಹೇಳುತ್ತಾರೆ :—

ಸುಹೃದ್ಭಾವೇನ – ಸ್ನೇಹಭಾವದಿಂದ (ವಾದಮಾತ್ರಕ್ಕಾಗಿ ಅಲ್ಲ), ಪೃಚ್ಛಂತಂ ಪ್ರತಿ ತು–ಪ್ರಶ್ನಿಸುವವನನ್ನು ಕುರಿತಾದರೋ, ಉತ್ತರಂ–ಉತ್ತರವು, ಉಚ್ಯತೇ–ಹೇಳಲಾಗುತ್ತದೆ, ಯಥಾ–ಹೇಗೆ, ಅನುಭವಕಾಲಃ ಅಪಿ–ಘಟಾನುಭವಕಾಲವೂ, ಸಾಕ್ಷಿಣಾ ಏವ–ಸಾಕ್ಷಿಯಿಂದಲೇ (ಆತ್ಮನಿಂದಲೇ) (ಜೀವನಿಂದ), ಉಪನೀಯತೇ–ಗ್ರಹಿಸಲ್ಪಡುತ್ತದೆಯೋ, ತಥಾ–ಹಾಗೆ, ತದಪ್ಯಯಃ ಅಪಿ–(ಕಾಲದ) ಅದರ ಧ್ವಂಸವೂ (ನಾಶವೂ), ಸಾಕ್ಷಿಣಾ ಏವ–ಜೀವನಿಂದಲೇ, ಉಪನೀಯತಾಂ–ಗ್ರಹಿಸಲ್ಪಡಲಿ.

**ಮನೋಽಂತಃಕರಣಂ ತಸ್ಯ ಸಾಚಿವ್ಯಂ ಕುರುತೇ ಹಿ ಸಃ ।**
**ಜ್ಞಾತಜ್ಞಾಪನದೋಷಂ ಚ ದೂರೀಚಕ್ರೇ ತತಃ ಸ್ಮೃತಿಃ ॥ ೭೯೦ ॥**

ಬಹಿರಿಂದ್ರಿಯಗಳಾದ ಚಕ್ಷುರಾದಿಗಳಕಿಂತ, ಅಂತರಿಂದ್ರಿಯವಾದ ಮನೋ ಇಂದ್ರಿಯದಿಂದ ಕಾಲಧ್ವಂಸವನ್ನು ಗ್ರಹಿಸುವುದು ಸುಲಭವಾಗುತ್ತದೆಂದು ಹೇಳುತ್ತಾರೆ :—

---

ಸುಳ್ಳಾಗಲು ಕಾರಣವೇನಿದೆ? (೭೮೮). ವಾದಮಾತ್ರಕ್ಕಾಗಿ ಅಲ್ಲದೇ ಸ್ನೇಹಭಾವದಿಂದ ಕೇಳುವವನಿಗೆ ಈ ಸಂಶಯಕ್ಕೆ ಉತ್ತರವು ಸ್ಪಷ್ಟವೇ ಇದೆ; ಸ್ಮೃತಿಯಿಂದಾಗುವ ಘಟಾನುಭವದ ವರ್ತಮಾನ ಕಾಲವು ಹೇಗೆ ಸಾಕ್ಷಿಯಿಂದ (ಚೇತನನಿಂದ) ಗ್ರಾಹ್ಯವಾಗುತ್ತದೆಯೋ ಹಾಗೆ ಅತೀತ ಕಾಲದ ಘಟದ (ಅತೀತ) ಕಾಲಧ್ವಂಸವೂ, ಸಾಕ್ಷಿಯೇ ಗ್ರಹಿಸುವನೆಂದು ತಿಳಿಯಲು ಬರುತ್ತದೆಯಲ್ಲವೇ? (೭೮೯). ಅಂತರಿಂದ್ರಿಯವಾದ (ಅಂತಃಕರಣ) ಮನಸ್ಸಿನಿಂದ ಕಾಲಧ್ವಂಸವನ್ನು ಗ್ರಹಿಸುವುದು ಸುಲಭವಾಗುತ್ತದೆ; ಚಕ್ಷುರಿಂದ್ರಿಯಕ್ಕಿಂತ ಮನಸ್ಸಿನ ಸಹಾಯವು

ಸಃ–ಸಾಕ್ಷಿಯು, ತಸ್ಯ–ಅದರ, ಸಾಚಿವ್ಯಂ–ಸಹಾಯವನ್ನು, ಕುರುತೇ–ಮಾಡುತ್ತದೆ; ಮನಃ–ಮನಸ್ಸು, ಅಂತಃಕರಣಂ–ಅಂತರಿಂದ್ರಿಯವು (ಆಗಿದೆ), ಹಿ – ಯಾವ ಕಾರಣದಿಂದಲೋ, ತತಃ – ಆದ್ದರಿಂದ, ಸ್ಮೃತಿಃ – ಸ್ಮರಣವು (ಸ್ಮೃತಿಯು), ಜ್ಞಾತಜ್ಞಾಪನದೋಷಂ – ತಿಳಿದುದನ್ನೇ ಜ್ಞಾಪಿಸಿಕೊಡುವುದೆಂಬ ದೋಷವನ್ನು, ದೂರೀಚಕ್ರೇ–ದೂರವೇ ಉಳಿಯುವಂತೆ ಮಾಡಿತು.

**ಅತೋ ಜ್ಞಾನಸ್ಯ ಮಾನತ್ವಮಪವಾದೇನ ಹೀಯತೇ ।**
**ನ ಚೇಜ್ಜ್ಞಾನಗ್ರಾಹಿಣೈವ ಗೃಹ್ಯತೇ ನಾತ್ರ ಸಂಶಯಃ ।**
**ಅಪೌರುಷೇಯವೇದೋಕ್ತೇಃ ಪ್ರಾಮಾಣ್ಯಂ ಸ್ಥಿರಮೇವ ತತ್**
॥ ೭೯೦ ॥

ಅತಃ–ಆದ್ದರಿಂದ, ಜ್ಞಾನಸ್ಯ–ಜ್ಞಾನದ, ಮಾನತ್ವಂ – ಪ್ರಾಮಾಣ್ಯವು, ಅಪವಾದೇನ – ಬಾಧಾದಿಗಳಿಂದ, ಹೀಯತೇ – ನಷ್ಟವಾಗುತ್ತದೆ; ನ ಚೇತ್ – ಅಪವಾದವಿಲ್ಲದಿದ್ದರೆ, ಜ್ಞಾನಗ್ರಾಹಿಣಾ ಏವ–ಜ್ಞಾನಗ್ರಾಹಿಯಿಂದಲೇ (ಜ್ಞಾನವನ್ನು ಗ್ರಹಿಸುವವನಿಂದಲೇ), ಗೃಹ್ಯತೇ – ಗ್ರಹಿಸಲ್ಪಡುತ್ತದೆ, ಅತ್ರ – ಈ ವಿಷಯದಲ್ಲಿ, ಸಂಶಯಃ ನ – ಸಂಶಯವಿಲ್ಲ (ಅನ್ಯಕಾರಣದಿಂದ ಜ್ಞಾನವು ಗ್ರಹಿಸಿದುದು ಅಪ್ರಮಾಣವಾಗುವುದಿಲ್ಲ); ತತ್–ಆದ್ದರಿಂದ, ಅಪೌರುಷೇಯ ವೇದೋಕ್ತೇ–(ವೇದವು ಅಪೌರುಷೇಯವಾದ್ದರಿಂದ ಅದರ ಜ್ಞಾನ ಪ್ರಾಮಾಣ್ಯಕ್ಕೆ ಅನ್ಯಬಾಧವಿರುವುದಿಲ್ಲವಾದ್ದರಿಂದ) ವೇದೋಕ್ತವಿಷಯದಲ್ಲಿ, ಪ್ರಾಮಾಣ್ಯಂ – ಪ್ರಾಮಾಣ್ಯವು ಸ್ಥಿರಂ ಏವ–ಸುನಿಶ್ಚಯವೇ (ಆಯಿತು–ಈ ಪ್ರಮೇಯವು ಗುಣಸೌರಭದಲ್ಲಿ ಸ್ವತಃ ಪ್ರಾಮಾಣ್ಯ ಪ್ರಸಕ್ತಿಯಲ್ಲಿ ವಿವರವಾಗಿ, ಚರ್ಚಿಸಲಾಗಿದೆ).

---

ಸಾಕ್ಷಿಗೆ, ಜ್ಞಾತ ಜ್ಞಾಪನವೆಂಬ ದೋಷವನ್ನು, ಸ್ಮೃತಿಗೆ ಪರಿಹರಿಸಿಕೊಳ್ಳಲು, ಚಕ್ಷುರಾದಿಕರಣಗಳಕಿಂತ ಅಧಿಕವಾಗಿ ಉಪಯೋಗವಾಗುತ್ತದೆ; ಆದ್ದರಿಂದ ಸ್ಮೃತಿಜ್ಞಾನಕ್ಕೆ ಯಾವ ದೋಷವೂ ಇರುವುದಿಲ್ಲ (೭೯೦). ಆದ್ದರಿಂದ, ಜ್ಞಾನದ ಪ್ರಾಮಾಣ್ಯವು, ಅಪವಾದದಿಂದಲೇ (ಬಾಧಾದಿಗಳಿಂದಲೇ) ಕುಂದಾಗುತ್ತದೆ; ಬಾಧರಹಿತವಾದ ಜ್ಞಾನವು, ಜ್ಞಾನವನ್ನು ಗ್ರಹಿಸುವುದರಿಂದಲೇ, ಪ್ರಾಮಾಣ್ಯಸಹಿತವಾಗಿ ಗ್ರಹಿಸಲ್ಪಡುತ್ತದೆ; ಇದರಲ್ಲಿ ಯಾವ ಸಂಶಯವೂ ಇಲ್ಲ; ಇದರಿಂದ, ಅಪೌರುಷೇಯ ವೇದದಲ್ಲಿ ಹೇಳಿದುದು ಬಾಧಾದಿ ಅಪವಾದವಿಲ್ಲದಿದ್ದರೆ, ಸ್ವತಃ

*

**ಆನಂದಶ್ರುತಿತೋ ಬ್ರಹ್ಮಾನಂದರೂಪಂ ಪ್ರದೀಪ್ಯತೇ ।**
**ತರ್ಹಿ ಪ್ರಿಯಶಿರಸ್ತ್ವಾದಿ ಶ್ರುತೇರಾನಂದಮೂರ್ತಿತಾ ॥ ೭೯೨ ॥**
**ಅಪ್ಯಂಗೀಕ್ರಿಯತಾಂ ನೋ ಚೇನ್ನೋಭಯಂ ಚ ಪ್ರಸಿದ್ಧ್ಯತಿ ।**
**ಜಯೀತಾರ್ಕಿಕಬಾಲಸ್ಯಾತ್ತ್ವಂ ತು ಭೂಯಾಃ ಪರಾಜಯೀ ॥೭೯೩॥**

ಆನಂದಶ್ರುತಿತಃ–ಆನಂದಶ್ರುತಿಯಿಂದ, ಬ್ರಹ್ಮ–ಬ್ರಹ್ಮನು (ಭಗವಂತನು), ಆನಂದರೂಪಂ – ಆನಂದಮಯ ವಿಗ್ರಹತ್ವವು (ರೂಪವುಳ್ಳವನೆಂದು), ಪ್ರದೀಪ್ಯತೇ – ಸಿದ್ಧವಾಗುತ್ತದೆ ; ತರ್ಹಿ – ಹಾಗಾದರೆ, ಪ್ರಿಯಶಿರಸ್ತ್ವಾದಿಶ್ರುತೇಃ– (' ತಸ್ಯಪ್ರಿಯಮೇವಶಿರಃ ' ಇತ್ಯಾದಿ) ಪ್ರಿಯಶಿರಸ್ಸುಳ್ಳವನೆಂಬ ಶ್ರುತಿಗೆ, ಆನಂದ ಮೂರ್ತಿತಾ–ಆನಂದ ತಲೆ ಕೈ ಕಾಲುಗಳುಳ್ಳ (ಅವಯವಗಳುಳ್ಳ) ರೂಪತ್ವವು, (ಸಿದ್ಧವಾಗುತ್ತದೆ) ; ಅಪಿ–ಇದನ್ನಾದರೂ, ಅಂಗೀಕ್ರಿಯತಾಂ–ಅಂಗೀಕರಿಸು ; ನೋಚೇತ್ – ಹಾಗಲ್ಲದಿದ್ದರೆ (ಆನಂದರೂಪತ್ವವನ್ನು ಹೇಳುವ ಶ್ರುತಿಯು ಔಪಚಾರಿಕವೆಂದರೆ)। ಉಭಯಂ ಚ–ನನ್ನಂತೆ ಬ್ರಹ್ಮನು ಆನಂದರೂಪನೆಂಬುದೂ, ನಿನ್ನಂತೆ ಕೇವಲ ಆನಂದಸ್ವರೂಪತ್ವವೂ), ನ ಪ್ರಸಿದ್ಧ್ಯತಿ–ಸಿದ್ಧವಾಗುವುದಿಲ್ಲ ; ತಾರ್ಕಿಕಬಾಲಃ–ಬ್ರಹ್ಮನು ಎಂಟುಗುಣಗಳನ್ನು ಮಾತ್ರ ಉಳ್ಳವನೆಂದು ಹೇಳುವ ತಾರ್ಕಿಕ ಅಜ್ಞಾನಿಯು, ಭೂಯಾಃ – ಅತಿಶಯವಾಗಿ, ತ್ವಂ ತು–ನಿನ್ನನ್ನೇ, ಪರಾಜಯೀ–ಗೆಲ್ಲುವವನು, ಸ್ಯಾತ್–ಆಗುತ್ತಾನೆ.

---

ಪ್ರಮಾಣವೇ (ವೇದಗಳ ಸ್ವತಸ್ತ್ವವೂ ಈ ಪ್ರಮೇಯದಿಂದಲೇ ಸಿದ್ಧವಾಗುತ್ತದೆ (೭೯೧). ತೈತ್ತಿರೀಯೋಪನಿಷತ್ತಿನ ಆನಂದ ಶ್ರುತಿಯಿಂದ ಬ್ರಹ್ಮನು ಆನಂದ ಸ್ವರೂಪನೆಂದು ಸಮರ್ಥಿತವಾಗುತ್ತದೆ ; ಆಗ ಅಲ್ಲಿಯೇ ಇರುವ ಪ್ರಿಯಶಿರಸ್ತ್ವಾದಿ ಶ್ರುತಿಬಲದಿಂದ ಆನಂದವೇ ಆದ ಶಿರಸ್ಸು ಇತ್ಯಾದಿ ಅವಯಗಳುಳ್ಳ ಮೂರ್ತಿಯುಳ್ಳವನೆಂದೂ ಸಿದ್ಧವಾಗುತ್ತದೆ ; ಇದನ್ನು ನೀನು ಅಂಗೀಕರಿಸದೇ ಈ ಆನಂದ ಶ್ರುತಿಯು ಔಪಚಾರಿಕವೆಂದರೆ, ನಮ್ಮ ಉಭಯರ ಮತವೂ ಸಿದ್ಧವಾಗುವುದಿಲ್ಲ– ಬ್ರಹ್ಮನು ಆನಂದರೂಪನೆಂಬುದೂ, ಸಕಲ ಗುಣಪೂರ್ಣನೆಂಬುದೂ ಮತ್ತು ಅನುಭವವಿಲ್ಲದ ಕೇವಲ ಆನಂದಸ್ವರೂಪನೆಂಬ ಉಭಯವೂ ಸಿದ್ಧವಾಗದೇ, ಎಂಟು ಗುಣಗಳು ಮಾತ್ರವುಳ್ಳವನೆಂದು ವಾದಿಸುವ ತಾರ್ಕಿಕನು (ಅಪಂಡಿತನು)

**ಯದ್ಯೈಕ್ಯಂ ನಿರ್ಗುಣತ್ವಂ ಚ ವಾಕ್ಯಸ್ಯ ಬಲತಸ್ತವ ।**
**ತರ್ಹಿ ಭೇದಶ್ಚ ಸುಗುಣಾಸ್ತತ್ತದ್ವಾಕ್ಯಬಲಾನ್ಮಮ ॥ ೭೯೪ ॥**

ವಾಕ್ಯಸ್ಯ ಬಲತಃ–ವೇದವಾಕ್ಯದ ಬಲದಿಂದ (ಮೇಲೆ ತೋರುವ ಅರ್ಥ ಮಾತ್ರದಿಂದ, 'ಕೇವಲೋನಿರ್ಗುಣಶ್ಚ' ಇತ್ಯಾದಿ ವಾಕ್ಯಗಳ ವಿಮರ್ಶೆಯು ಈ ಹಿಂದೆ ವಿಸ್ತಾರವಾಗಿ ಮಾಡಲಾಗಿದೆ), ಯದಿ–ಒಂದು ಪಕ್ಷ, ಐಕ್ಯಂ-(ಜೀವೇಶರ) ಐಕ್ಯವೂ, ನಿರ್ಗುಣತ್ವಂ ಚ–ಪರಬ್ರಹ್ಮನು ನಿರ್ಗುಣನೆಂಬುದೂ, ತವ–ನಿನಗೆ, (ಸಿದ್ಧವಾಗುವುದೆಂದರೆ), ತರ್ಹಿ–ಆಗ, ಭೇದಶ್ಚ-ಜೀವೇಶಭೇದವೂ, ಸುಗುಣಾಃ–ಸದ್ಗುಣಗಳೂ, ಮಮ – ನನ್ನಂತೆ, ತತ್ತದ್ವಾಕ್ಯಬಲಾತ್ – ಭೇದ, ಗುಣಪ್ರತಿಪಾದಕವೇದವಾಕ್ಯಗಳ ಬಲದಿಂದ (ಸಿದ್ಧವಾಗುತ್ತದೆ).

**ಯದಿ ಸಿದ್ಧಾನುವಾದೇನ ಮದ್ವಾಕ್ಯಂ ದುರ್ಬಲಂ ತವ ।**
**ಸಿದ್ಧತ್ವದ್ಬ್ರಹ್ಮವಾಕ್ತರ್ಹಿ ಗರ್ಹ್ಯಾ ಮಹ್ಯಂ ನ ರೋಚತೇ ॥ ೭೯೫ ॥**

ಸಿದ್ಧಾನುವಾದೇನ–ಸಿದ್ಧವಾದ (ಜೀವೇಶ್ವರಭೇದಾದಿ) ಭೇದಾದಿಯನ್ನು ಅನುವಾದಮಾಡುವುದರಿಂದ, ಮದ್ವಾಕ್ಯಂ–ನನ್ನ ಪರವಾದ 'ದ್ವಾಸುಪರ್ಣಾ' ಇತ್ಯಾದಿ ವಾಕ್ಯಸಮೂಹವು, ತವ–ನಿನಗೆ (ನಿನ್ನಂತೆ), ಯದಿ ದುರ್ಬಲಂ–ದುರ್ಬಲವೆಂದರೆ (ಪ್ರಮಾಣವಲ್ಲವೆಂದರೆ) ತರ್ಹಿ – ಆಗ, ಸಿದ್ಧತ್ವದ್ಬ್ರಹ್ಮವಾಕ್–ಸಿದ್ಧನೆಂಬ ನಿನ್ನ ಬ್ರಹ್ಮನನ್ನು ಹೇಳುವ ವಾಕ್ಯವು ('ಅಸ್ತಿಬ್ರಹ್ಮ ಇತಿ' ಇತ್ಯಾದಿ, ವಾಕ್ಯವು, ಬ್ರಹ್ಮನು ಸ್ವಪ್ರಕಾಶನೆಂದು ಹೇಳುವ ನಿನ್ನಂತೆ), ಗರ್ಹ್ಯಾ–ತುಚ್ಛವಾದುದಾಗಿ, ಮಹ್ಯಂ – ನನಗೆ, ನ ರೋಚತೇ – ರುಚಿಸುವುದಿಲ್ಲ (ಗ್ರಾಹ್ಯವೆನಿಸುವುದಿಲ್ಲ).

---

ನಿನ್ನನ್ನೇ ಅತಿಶಯವಾಗಿ ಜಯಿಸುತ್ತಾನೆ (೭೯೨–೭೯೩). ತತ್ತ್ವಮಸಿ, ಕೇವಲೋ ನಿರ್ಗುಣಶ್ಚ, ಇತ್ಯಾದಿ ವೇದವಾಕ್ಯ ಬಲದಿಂದ ಐಕ್ಯವೂ, ನಿರ್ಗುಣತ್ವವೂ ನಿನ್ನಂತೆ ಸಿದ್ಧವಾಗುವುದಾದರೆ, ಭೇದ ಮತ್ತು ಗುಣಪ್ರತಿಪಾದಕ ಆಯಾ ವೇದವಾಕ್ಯಗಳ ಬಲದಿಂದ, ನನಗೂ ಜೀವೇಶಭೇದವೂ ಭಗವಂತನ ಸದ್ಗುಣಗಳೂ ಸಿದ್ಧವಾಗುತ್ತವೆ (೭೯೪). ನನ್ನ ವಾಕ್ಯಗಳು ಸಿದ್ಧವಾದ ಭೇದವನ್ನು ಅನುವಾದ ಮಾತ್ರ ಮಾಡುತ್ತವೆಯಾದ್ದರಿಂದ ಜೀವೇಶಭೇದ ಸಾಧನೆಯಲ್ಲಿ ದುರ್ಬಲವೆಂದು

**ಅಪೂರ್ವಶಶಶೃಂಗೋಕ್ತ್ಯಾ ಬಲವತ್ತ್ಯಾ ತದಾಪತೇತ್ ।**
**ಪರೇಣ ಪೂರ್ವಬಾಧಶ್ಚೇದ್ಬ್ರಹ್ಮವೃತ್ತ್ಯಾ ನಿವರ್ತ್ಯತಾಂ ॥ ೭೯೬ ॥**

ಅಪೂರ್ವ ಶಶಶೃಂಗೋಕ್ತ್ಯಾ – ಅಪೂರ್ವವಾದ (ಹಿಂದೆಂದೂ ಎಲ್ಲಿಯೂ ಕಾಣದ ಅಸದ್ವಸ್ತುವಾದ) ಮೊಲದಕೋಡು, ಎಂದು ಹೇಳುವುದರಿಂದ, ತದಾ–ಆಗ, ಬಲವತ್ತ್ಯಾ–ಸಿದ್ಧವಿಷಯವಲ್ಲವೆಂಬ ಬಲದಿಂದ (ಅವಶ್ಯಕವಾಗಿ, ಅನ್ಯಮಾರ್ಗವಿಲ್ಲದೇ), ತತ್–ಮೊಲದ ಕೊಂಬು ಸಹ, ಆಪತೇತ್–ಬಂದು (ಈ ವಾದದಲ್ಲಿ) ಸೇರಿಕೊಳ್ಳುತ್ತದೆ ; ಪರೇಣ – ಪರನಿಂದ (ಪ್ರತಿಕಕ್ಷಿಯಿಂದ). ಪೂರ್ವಬಾಧಃ ಚೇತ್–ಪೂರ್ವದಲ್ಲಿರುವಿಕೆಯು ಬಾಧವೆಂದರೆ, ವೃತ್ತ್ಯಾ–ಶ್ರವಣಜನಿತ ಅಂತಃಕರಣ ಸಾಕ್ಷಾತ್‌ವೃತ್ತಿಯಿಂದ, ಬ್ರಹ್ಮ–ಬ್ರಹ್ಮನೂ, ನಿವರ್ತ್ಯತಾಂ–(ಈ ವಾದದಿಂದ–ಅಪೂರ್ವತ್ವವೆಂಬ ವಾದದಿಂದ) ಬಿಡಿಸಲ್ಪಡಲಿ, (ಏತೇನ ನಿನ್ನ ಬ್ರಹ್ಮನು ಶಶಶೃಂಗ ಸಮನಾಗಬೇಕಾಯಿತು).

**ಪೂರ್ವೇಣ ಪರಬಾಧಶ್ಚೇದ್ಬಂಧಾನ್ಮುಕ್ತಿರ್ನಿವರ್ತ್ಯತಾಂ ।**
**ಸ್ತುತ್ಯಂ ಮಿಥ್ಯಾ ಯದಿ ಭವೇದ್ದೃಶ್ಯಂ ಮಿಥ್ಯಾ ನ ಕಿಂ ತವ ॥೭೯೭॥**

ಪೂರ್ವೇಣ–ಹಿಂದಿನದರಿಂದ, (ಹಿಂದೆ ಇರುವುದರಿಂದ), ಪರಬಾಧಶ್ಚೇತ್–ಮುಂದಿನದಕ್ಕೆ ಬಾಧವೆಂದರೆ, ಬಂಧಾತ್–(ಮೊದಲಿರುವ) ಸಂಸಾರಬಂಧದಿಂದ,

---

ನಿನ್ನ ಮತವಾದರೆ, (ದ್ವಾಸುಪರ್ಣಾದಿ ವಾಕ್ಯಗಳು ಅನುವಾದಕ ಮಾತ್ರವೆಂದು ದುರ್ಬಲಗಳೆಂದು ನೀನು ತಳ್ಳಿಹಾಕಿದರೆ, ಸಿದ್ಧನಾದ ಬ್ರಹ್ಮನನ್ನು ಪ್ರತಿಪಾದಿಸುವ ವಾಕ್ಯವೂ (ಅಸ್ತಿಬ್ರಹ್ಮೇತಿಚೇದ್ವೇದ,) ನನಗೆ ಸಮ್ಮತವಲ್ಲ (ಸ್ವಪ್ರಕಾಶನೆಂಬ ನಿನ್ನ ಬ್ರಹ್ಮನು ಇದ್ದಂತೆ ತಿಳಿದರೆ) ಎಂಬ ವಾಕ್ಯವು ತಿರಸ್ಕಾರಾರ್ಹವೇ ಸರಿ (೭೯೫). ಅಪೂರ್ವತಾ ಸಿದ್ಧಿಗಾಗಿ ವೇದವಾಕ್ಯವು ಸ್ವಪ್ರಕಾಶತ್ವ ಸಿದ್ಧವಾದರೂ ಹಾಗೆಲ್ಲ ಹೇಳುವುದುಂಟು ; ಎಂದರೆ, ಎಂದೂ ಎಲ್ಲಿಯೂ ಕಾಣದ ಅಸದ್ವಸ್ತುವಾದ ಶಶಶೃಂಗವನ್ನು ಅಪೂರ್ವತ್ವ ಸಿದ್ಧಿಗಾಗಿ ಉದಾಹರಿಸಿದರೆ, ಆಗ, ಬ್ರಹ್ಮನು ಸಿದ್ಧ ವಿಷಯನಲ್ಲವೆಂದೂ, ಶಶವಿಷಾಣ ಸದೃಶನೆಂದೂ ಈ ವಾದದಲ್ಲಿ ಸೇರಿಹೋಗುತ್ತದೆ; ಬ್ರಹ್ಮನು ಪೂರ್ವದಿಂದ ಇರುವುದರಿಂದ ಬಾಧವೆಂದರೆ, ಶ್ರವಣಜನಿತ ಅಂತಃಕರಣ ವೃತ್ತಿಯಲ್ಲಿ ಬ್ರಹ್ಮನು ಇರುವುದಾದರೆ, ಶಶವಿಷಾಣವೂ ಕಲ್ಪನೆಯಲ್ಲಿ ಮನೋಗತವೇ ಆಗುತ್ತದೆ (೭೯೬). ಪೂರ್ವದಿಂದ ಉತ್ತರಕಾಲದ್ದಕ್ಕೆ ಬಾಧವಾದರೆ,

ಮುಕ್ತಿಃ – ಮುಕ್ತಿಯು, ನಿವರ್ತ್ಯತಾಂ – ನಿವೃತ್ತವಾಗಲಿ ; ಮಿಥ್ಯಾ – ಮಿಥ್ಯೆಯಾದುದೇ, ಸ್ತುತ್ಯಂ–ಪ್ರಶಂಸಾಯೋಗ್ಯವು, ಯದಿ ಭವೇತ್–ಆಗುವುದಾದರೆ, ದೃಶ್ಯಂ – ದೃಶ್ಯವಾದುದು (ಚಕ್ಷುವಿಗೆ ಗೋಚರವಾಗುವುದು), ತವ – ನಿನ್ನಂತೆ ('ಯದ್ದೃಶ್ಯಂ ತನ್ಮಿಥ್ಯಾ' ಎಂಬುದು ನಿನಗೆ ಅಭಿಮತವಷ್ಟೆ), ಮಿಥ್ಯಾ ನ ಕಿಂ–ಮಿಥ್ಯೆಯಾಗದಿರುವುದೇ ?

**ಶ್ರುತ್ಯುತ್ಪನ್ನದೃಶೇಃ ಸಚ್ಚೇಚ್ಛ್ರುತ್ಯುತ್ಪನ್ನಸ್ತುತೇಶ್ಚ ಸನ್ ।**
**ಏಕಪಂಗ್ತಿಸ್ಥಗೇಹಾನಾಂ ದಾಹಾದಾಹೌ ಕಥಂ ವದ ।**
**ಪ್ರತಿಬಂದೀ ತತೋ ಬಂದೀ ಕರೋತಿ ಭವತಃ ಶ್ರುತಿಂ ॥ ೭೯೮ ॥**

ಶ್ರುತ್ಯುತ್ಪನ್ನದೃಶೇಃ–ಶ್ರುತಿಯಿಂದ ಜನಿಸುವ ಜ್ಞಾನಕ್ಕೆ (ಜ್ಞಾನವಿಷಯಕ್ಕೆ–ಬ್ರಹ್ಮನಿಗೆ) ಸತ್ ಚೇತ್–ಸತ್ಯನೆಂದಾದರೆ, ಶ್ರುತ್ಯುತ್ಪನ್ನಸ್ತುತೇಃ ಚ–ಶ್ರುತಿಯಿಂದ ಪ್ರತಿಪಾದಿಸಲ್ಪಡುವ ಸ್ತುತಿಯೂ (ಭೇದ, ಭಗವದ್ಗುಣಾದಿಗಳೂ), ಸನ್–ಸತ್ಯವೇ (ಆಗುತ್ತವೆ) ; ಏಕಪಂಗ್ತಿಸ್ಥಗೇಹಾನಾಂ–ಒಂದು ಸಾಲಿನಲ್ಲಿರುವ ಮನೆಗಳಿಗೆ, ದಾಹಾದಾಹೌ–ದಹಿಸಲ್ಪಡುವುದು, ದಹಿಸದಿರುವುದು, ಕಥಂ–ಹೇಗೆ ಸಂಭಾವ್ಯವಾಗುತ್ತದೆ, ವದ–ಹೇಳು ; ತತಃ–ಆದ್ದರಿಂದ, ಪ್ರತಿಬಂದೀ–ಈ ಪ್ರತಿಬಂದೀ ದೃಷ್ಟಾಂತವು, ಭವತಃ–ನಿನ್ನ, ಶ್ರುತಿಂ–ಶ್ರುತಿವಾಕ್ಯವನ್ನು (ನಿನ್ನಮತ ಸಾಧಕಗಳೆಂಬ ಶ್ರುತಿಗಳನ್ನು), ಬಂದೀಕರೋತಿ–(ನಿನಗೆ ಅನುಕೂಲವಾದ ಅರ್ಥಪ್ರತಿಪಾದನೆಯನ್ನು) ಪ್ರತಿಬಂಧಿಸುತ್ತದೆ.

---

ಹಿಂದಿನ ಸಂಸಾರ ಬಂಧದಿಂದ ಮುಂದಿನ ಮುಕ್ತಿಗೆ ಬಾಧವಾಗಬಹುದಲ್ಲವೇ ? ಮಿಥ್ಯೆಯಾದುದೇ ಪ್ರಶಂಸಾರ್ಹವಾದರೆ, ದೃಶ್ಯವಾದುದು ಮಿಥ್ಯೆಯೆಂಬ ನಿನಗೆ, ದೃಶ್ಯವಾದ ಜಗತ್ತು ಮಿಥ್ಯೆ ಎಂಬುದು ಸ್ತುತ್ಯವೆಂದೇ ಆಯಿತು (೭೯೭). ಶ್ರುತಿಯಿಂದ ಉತ್ಪನ್ನವಾಗುವ (ಜ್ಞಾನವು) ಬ್ರಹ್ಮದರ್ಶನವು ಸತ್ಯವಾದರೆ, ಗುಣಪೂರ್ಣತ್ವಾದಿ ಸ್ತುತಿಯೂ ಸತ್ಯವೇ ಆಗುತ್ತದೆ ; ಒಂದು ಸಾಲಿನಲ್ಲಿರುವ ಗೃಹಗಳಲ್ಲಿ ಒಂದು ದಹಿಸುವುದೂ ಮತ್ತೊಂದು ದಹಿಸದೇ ನಿಲ್ಲುವುದೆಂಬುದು ಉಂಟೇ ? ಈ ಪ್ರತಿಬಂದಿಯು ಐಕ್ಯ ನಿರ್ಗುಣತ್ವಾದಿ ವಾಕ್ಯಗಳು ಪ್ರತಿಪಾದಿಸುವು

**ಕಿಂ ಚಾಖಂಡಾರ್ಥವಾದಾಖ್ಯಮಯಶ್ಚಣಕಮಶ್ನುತಃ ।**
**ದಂತಾಃ ಪೇತುರ್ಭವದ್ವಾಕ್ಯಭುಜಂಗಸ್ಯ ಫಣೇ ನ ಕಿಂ ॥ ೭೯೯ ॥**

ಐಕ್ಯವನ್ನು, ಗುಣಮಿಥ್ಯಾತ್ವವನ್ನು ಪ್ರತಿಪಾದಿಸುತ್ತವೆಂಬ ಪರನ ವೇದ ವಾಕ್ಯಗಳ, ಈ ಹಿಂದೆ ವಿವರಿಸಿರುವ ದೋಷಗಳನ್ನು ಜ್ಞಾಪಿಸಿಕೊಡುತ್ತಾರೆ :—

ಕಿಂಚ–ಮತ್ತು ಏನೆಂದರೆ ; ಅಖಂಡಾರ್ಥವಾದಾಖ್ಯಂ ಅಯಶ್ಚಣಕಂ–ಅಖಂಡಾರ್ಥವನ್ನು ವಾದಿಸುವುದೆಂಬುದೇ ಪ್ರಧಾನವಾಗಿವುಳ್ಳ ಕಬ್ಬಿಣದ ಕಡಲೆಯನ್ನು, ಅಶ್ನುತಃ–ತಿನ್ನಲು ಹಚ್ಚಿದ, ಭವದ್ವಾಕ್ಯಭುಜಂಗಸ್ಯ–ನಿನ್ನ ವೇದವಾಕ್ಯಗಳೆಂಬ ಸರ್ಪದ, ದಂತಾಃ–(ಶ್ರುತಿಮುಖದಲ್ಲಿದ್ದುವೆಂಬ) ಹಲ್ಲುಗಳು, ಫಣೇ–ಸರ್ಪದ ಮುಖದಲ್ಲಿಯೇ (ಹೆಡೆಯಲ್ಲಿಯೇ), ಪೇತುಃ ನ ಕಿಂ–ಮುರಿದು ಬೀಳಲಿಲ್ಲವೇನು (ಐಕ್ಯಾದಿಯನ್ನು ಸಾಧಿಸಲು ಅಸಮರ್ಥಗಳಾಗಲಿಲ್ಲವೇ ?)

**ಅಪೌರುಷೇಯನಿರ್ದೋಷವಾಕ್ಯೇಷ್ವೇಷು ಯದೀಷ್ಯತೇ ।**
**ಸರ್ವಥಾಽಮಾನತಾ ತರ್ಹಿ ಗತಾ ಪ್ರಚ್ಛನ್ನಬೌದ್ಧತಾ ॥ ೮೦೦ ॥**

ಭೇದವಾಕ್ಯಗಳಿಗೆ ಅತತ್ವಾವೇದಕತ್ವವನ್ನು ಹೇಳುವ ಪರನಿಗೆ ದೂಷಣವನ್ನು ಹೇಳುತ್ತಾರೆ :—

ಅಪೌರುಷೇಯ ನಿರ್ದೋಷವಾಕ್ಯೇಷು – ಅಪೌರುಷೇಯವೂ ದೋಷರಹಿತವೂ ಆದ (ವೇದ) ವಾಕ್ಯಗಳಲ್ಲಿ, ಸರ್ವಥಾ-ಸರ್ವಪ್ರಕಾರದಿಂದ (ಅರ್ಥಾಂತರವನ್ನು ಹೇಳುವುದರ ವಿನಹ, ಅತತ್ವಾವೇದಕವೆಂಬ ಕೇವಲ ಅಪ್ರಾಮಾಣ್ಯವನ್ನು ಹೇಳುವ), ಅಮಾನತಾ–ಅಪ್ರಾಮಾಣ್ಯವು, ಯದಿ ಇಷ್ಯತೇ–ನಿನಗೆ ಇಚ್ಛಿತ

---

ದನ್ನು, ವಿರೋಧಿಸುತ್ತದೆ (ಪ್ರತಿಬಂಧಿಸುತ್ತದೆ) (೭೯೮). ಐಕ್ಯವನ್ನು, ನಿರ್ಗುಣತ್ವವನ್ನು ಪ್ರತಿಪಾದಿಸುತ್ತವೆಂಬ ಅರ್ಥವನ್ನು 'ತತ್ತ್ವಮಸಿ', 'ಕೇವಲೋನಿರ್ಗುಣಶ್ಚ' ಎಂಬ ವಾಕ್ಯಗಳಿಗೆ ಹೇಳಲು ಹಚ್ಚಿ, (ವಾಕ್ಯಮುಖದಲ್ಲಿಟ್ಟು ಹೇಳಿಸುವ ಪ್ರಯತ್ನದಲ್ಲಿ ಸರ್ಪದ ದಂತಗಳಂತೆ, ಉಕ್ಕಿನ ಕಡ್ಲೆ ತಿನ್ನಲು ಯತ್ನಿಸಿದಂತೆ, ಮುರಿದು ಹೋದವೆನ್ನುತ್ತಾರೆ), ವಾಕ್ಯಗಳೆಂಬ (ದುರರ್ಥಪ್ರತಿಪಾದಕ ಭುಜಂಗ ದಂತಗಳು) ಮುರಿದುಬಿದ್ದವು (೭೯೯). ಭೇದಪರವಾಕ್ಯಗಳು ಅತತ್ವಾವೇದಕ

ವಾದರೆ, ತರ್ಹಿ–ಆಗ, ಪ್ರಚ್ಛನ್ನ ಬೌದ್ಧತಾ–(ನೀನು ಪ್ರಚ್ಛನ್ನ ಬೌದ್ಧನೆಂಬುದು) ನಿನ್ನ ವಾದವು ಬೌದ್ಧವಾದವನ್ನೇ ಮುಚ್ಚಿಟ್ಟುಕೊಂಡು ಬ್ರಹ್ಮವಾದವನ್ನು ಮಂಡಿಸುತ್ತದೆಂಬುದು, ಗತಾ–ಬಿಟ್ಟುಹೋಯಿತು (ಕೇವಲ ಅಪ್ರಾಮಾಣ್ಯವನ್ನು ಸ್ಪಷ್ಟವಾಗಿ ವೇದಗಳಿಗೆ ಹೇಳುವ ಸ್ಪಷ್ಟಬೌದ್ಧಮತವೇ ಆಗುತ್ತದೆ).

**ಅಮಾನತ್ವಸ್ವತಸ್ತ್ವಾಖ್ಯತತ್ವಸ್ಯ ವ್ಯಕ್ತವಕ್ತರಿ ।**
**ಅಮಾನತಾಕಾಲಕೂಟಂ ಯದಿ ವಕ್ತ್ರೇ ವಸೇತ್ತವ ।**
**ಸಮಾನೋಚ್ಚಾರಣೇ ಶಕ್ತಿರ್ಗಮಿಷ್ಯತಿ ಮರಿಷ್ಯಸಿ ॥ ೮೦೧ ॥**

ಪ್ರಕಾರಾಂತರದಿಂದಲೂ ಪರನ ಪ್ರಚ್ಛನ್ನ ಬೌದ್ಧತ್ವವನ್ನು ಉಪಪಾದಿಸುತ್ತಾರೆ :—

ಅಮಾನತ್ವ ಸ್ವತಸ್ತ್ವಾಖ್ಯತತ್ವಸ್ಯ–ಅಪ್ರಾಮಾಣ್ಯ ಮತ್ತು ಸ್ವತಸ್ತ್ವಗಳೆಂಬ ತತ್ವದ (ಪ್ರಮೇಯದ), ವ್ಯಕ್ತವಕ್ತರಿ–(ಸ್ಪಷ್ಟವಾಗಿ ಪರತಃ ಪ್ರಾಮಾಣ್ಯವೆಂದೂ, ಸ್ವತಃ ಅಪ್ರಮಾಣವೆಂದೂ, ವಿರುದ್ಧವಾಗಿ) ವಾದಿಸುವ ಪರನಲ್ಲಿ, ತವ ವಕ್ತ್ರೇ–ನಿನ್ನ ಮುಖದಲ್ಲಿ, ಅಮಾನತಾ ಕಾಲಕೂಟಂ–ಅಪ್ರಾಮಾಣ್ಯವೆಂಬ ಕಾಲಕೂಟ ವಿಷವು, ಯದಿ ವಸೇತ್–ಇರುವುದಾದರೆ, ಸಮಾನೋಚ್ಚಾರಣೇ–ನಿರ್ವಿಷವೆಂಬ ಸಾಮ್ಯೋಚ್ಚಾರಣೆಯಲ್ಲಿ ಶಕ್ತಿಃ–ಸಾಮರ್ಥ್ಯವು, ಗಮಿಷ್ಯತಿ–ಬಿಟ್ಟುಹೋಗುತ್ತದೆ ; ಮರಿಷ್ಯಸಿ –(ಸ್ವೇಷ್ಟಸಾಧನವೆಂಬ ಹಿತವನ್ನು ಸಾಧಿಸಲು ಅಶಕ್ತನಾಗಿ) ಮೃತಪ್ರಾಯನಾಗುವಿ.

---

ವೆಂದು ಹೇಳಿ, ಅಪೌರುಷೇಯವಾದ ನಿರ್ದುಷ್ಟವೇದವಾಕ್ಯಗಳಿಗೆ ಸರ್ವಥಾ ಅಪ್ರಾಮಾಣ್ಯವನ್ನು ಹೇಳುತ್ತಿರುವಿ ; ನಿನ್ನ ಮತದ ಪ್ರಚ್ಛನ್ನ ಬೌದ್ಧತ್ವವು ನಷ್ಟವಾಗಿ, ಸ್ಪಷ್ಟ ಬೌದ್ಧಮತವೆಂದೇ ಪ್ರಾಪ್ತವಾಯಿತು (೮೦೦). ವೇದಗಳಿಗೆ ಅಪ್ರಾಮಾಣ್ಯ ಸ್ವತಸ್ತ್ವವನ್ನು, ಪ್ರಾಮಾಣ್ಯವನ್ನು ಪರತಃ ಎಂದೂ ಸ್ಪಷ್ಟವಾಗಿ ಹೇಳುವ ಪರನ ಮುಖದಲ್ಲಿ ಅಪ್ರಾಮಾಣ್ಯ ಕಾಲಕೂಟ ವಿಷವು ಪ್ರಾಮಾಣ್ಯ, ಅಪ್ರಾಮಾಣ್ಯಗಳ ನಿನ್ನ ನಿರೂಪಣೆಯು ನನ್ನಂತೆಯೇ ಆದರೆ, ನಿನ್ನನ್ನು ಕೊಲ್ಲುತ್ತದೆ ; ನಿನ್ನ ಮತ ಪ್ರಮೇಯಗಳ ವಿನಾಶವೇ ಸಂಭವಿಸುತ್ತದೆ (೮೦೧).

**ತಸ್ಮಾದಬಾಧಿತಾರ್ಥಾನಿ ವಾಕ್ಯಾನಿ ಸ್ಯುರ್ಯಥಾಶ್ರುತಂ ।**
**ಬಾಧಿತಾರ್ಥಾನಿ ವಾಕ್ಯಾನಿ ಯೋಗ್ಯಾರ್ಥೇಷು ನಯೇದ್ಬುಧಃ** ॥ ೮೦೨ ॥

ಮಧ್ಯೆ ಬಂದ ಪ್ರಮೇಯವನ್ನು ಉಪಸಂಹರಿಸುತ್ತಾರೆ :—

ತಸ್ಮಾತ್–ಆದ್ದರಿಂದ, ಅಬಾಧಿತಾರ್ಥಾನಿ–ಅಬಾಧಿತವಾದ ಅರ್ಥಗಳುಳ್ಳ, ವಾಕ್ಯಾನಿ–ಶ್ರುತಿವಾಕ್ಯಗಳು, ಯಥಾಶ್ರುತಂ ಸ್ಯುಃ–ಶ್ರುತಿಯು ಹೇಳುವಂತೆಯೇ ಆಗಿರುತ್ತವೆ (ಅನ್ಯಾರ್ಥಕಲ್ಪನೆಗೆ ಅವಕಾಶವಿಲ್ಲ) ; ಬಾಧಿತಾರ್ಥಾನಿ ವಾಕ್ಯಾನಿ–ಬಾಧಿತವಾಕ್ಯಗಳ ಅರ್ಥಗಳನ್ನು, ಯೋಗ್ಯಾರ್ಥೇಷು, ಯೋಗ್ಯವಾದ ಅರ್ಥಗಳಲ್ಲಿ, ಬುಧಃ–ವಿವೇಕಿಯು, ನಯೇತ್–ಯೋಜನೆ ಮಾಡಿಕೊಳ್ಳಬೇಕು.

**ನಿರ್ದುಃಖಸುಖಭೋಗಾಖ್ಯೋ ಮೋಕ್ಷೋ ವಾಚ್ಯಸ್ತ್ವಯಾ ಮಯಾ ।**
**ಯತ್ರತ್ವಸ್ಯೇತಿ ವಾಕ್ಯಂ ತು ಜ್ಞಾನಮಾತ್ರಂ ನಿಷೇಧತಿ ॥ ೮೦೩ ॥**
**ತಚ್ಛ್ರುತ್ವಾ ತಾರ್ಕಿಕೋ ಹೃಷ್ಯೇತ್ತತ್ಸ್ವಾ ತರ್ಕೇಣ ತಾರ್ಕಿಕಂ ।**
**ಹಂತುಂ ಸಂತ್ವಖಿಲಾ ಭೋಗಾ ಮುಕ್ತೌ ಸರ್ವಜನಪ್ರಿಯಾಃ ॥೮೦೪॥**

ಬಾಧವೆಂಬುದನ್ನು ಲೇಶತಃ ತೋರಿಸುತ್ತಾರೆ :—

ನಿರ್ದುಃಖಸುಖಭೋಗಾಖ್ಯಃ – ದುಃಖಲೇಶವಿಲ್ಲದ ನಿತ್ಯಸುಖಾನುಭವವೆಂಬುದು, ಮೋಕ್ಷಃ–ಮೋಕ್ಷವು, ವಾಚ್ಯಃ–ಎಂದು ಹೇಳಲ್ಪಡಬೇಕು ; ಮಯಾ–

---

ಆದ್ದರಿಂದ ಅಬಾಧಿತ ಅರ್ಥಗಳನ್ನು ತಿಳಿಸುವ ವೇದವಾಕ್ಯಗಳ ಯಥಾಶ್ರುತ ಅರ್ಥವೇ ಗ್ರಾಹ್ಯವು ; ಬಾಧಿತಾರ್ಥಗಳನ್ನು ಹೇಳುತ್ತಿದ್ದರೆ, ಯೋಗ್ಯವಾದ ಅರ್ಥಗಳಲ್ಲಿ, ಆ ವಾಕ್ಯಗಳನ್ನು ಯೋಜಿಸಿಕೊಳ್ಳಬೇಕು ; ಇದು ವಿವೇಕಿಯ ರೀತಿಯು. (೮೦೨). ತಾರ್ಕಿಕನು, ಮುಕ್ತಿಯಲ್ಲಿ ಜ್ಞಾನವನ್ನು ಹೇಳುವುದಿಲ್ಲ ; 'ಯತ್ರತ್ವಸ್ಯ' ಎಂಬ ಶ್ರುತಿವಾಕ್ಯವು ಜ್ಞಾನಮಾತ್ರವನ್ನು ನಿಷೇಧಿಸುತ್ತದೆ ; ನಿರ್ದುಃಖಸುಖಭೋಗವೆಂಬುದು ಉಭಯವಾದಿಗಳಿಂದಲೂ ಅಂಗೀಕರಿಸಬೇಕಷ್ಟೆ ; ಈ ಶ್ರುತಿಯು ಜ್ಞಾನವನ್ನು ಮುಕ್ತರಿಗೆ ಹೇಳುವುದಿಲ್ಲವೆಂಬುದರಿಂದ ತಾರ್ಕಿಕನು ಹರ್ಷಿಸಬಹುದು ; ಆದರೆ ಪ್ರಸಕ್ತಶ್ರುತಿಯಲ್ಲಿ ಮುಕ್ತರಿಗೆ

ನನ್ನಿಂದಲೂ, ತ್ವಯಾ-ನಿನ್ನಿಂದಲೂ, (ಅಂಗೀಕರಿಸಲ್ಪಡತಕ್ಕದ್ದೇ); ಯತ್ರತ್ವಸ್ಯೇತಿ ವಾಕ್ಯಂತು-'ಯತ್ರತ್ವಸ್ಯ' ಎಂಬ ಶ್ರುತಿ ವಾಕ್ಯವಾದರೋ, ಜ್ಞಾನಮಾತ್ರಂ-ಜ್ಞಾನವನ್ನು ಮಾತ್ರ, ನಿಷೇಧತಿ-ನಿಷೇಧಿಸುತ್ತದೆ (ಮುಕ್ತಿಯಲ್ಲಿ ಹೇಳುವುದಿಲ್ಲ) ; ತಚ್ಛ್ರುತ್ವಾ-ಅದನ್ನು (ಈ ವಾಕ್ಯವನ್ನು) ಕೇಳಿ, ತಾರ್ಕಿಕಃ- ತಾರ್ಕಿಕನು, ಹೃಷ್ಯೇತ್-ಹರ್ಷಿಸುವನು (ತನ್ನ ಮತಕ್ಕೆ ಈ ಶ್ರುತಿಯು ಅನುಕೂಲವೆಂದು ಹಿಗ್ಗುವನು) ; ತತ್ - ಆದ್ದರಿಂದ ( ಆಪಾತತಃ ತೋರುವ ಅರ್ಥವು ಜ್ಞಾನ ನಿಷೇಧಕವಲ್ಲ ; ತಾರ್ಕಿಕಂ-ತಾರ್ಕಿಕವಾದಿಯನ್ನು, ತರ್ಕೇಣ-ಯುಕ್ತಿಯಿಂದಲೇ (ತರ್ಕದಿಂದಲೇ) ಹಂತುಂ-ಭಗ್ನಗೊಳಿಸಲು, ಸರ್ವಜನಪ್ರಿಯಾಃ-ಸಮಸ್ತ ಜನರಿಗೆ ಪ್ರಿಯಗಳಾದ, ಭೋಗಾಃ ಅಖಿಲಾಃ - ಸಮಸ್ತ ಭೋಗಗಳೂ ( ಸ್ತ್ರೀಪುರುಷರ ಅನ್ಯೋನ್ಯ ದರ್ಶನ, ಸ್ಪರ್ಶನ, ಪುಷ್ಪಾಘ್ರಾಣಾದಿಗಳೆಲ್ಲವೂ), ಸಂತು-ಈ 'ಯತ್ರತ್ವಸ್ಯ' ಎಂಬ ಶ್ರುತಿಯಲ್ಲಿ ಇರುತ್ತವೆ. (ಸುಖಭೋಗವನ್ನು ವರ್ಣಿಸುತ್ತದೆ).

**ಸುಖಾನುಭವಸಿದ್ಧ್ಯರ್ಥಂ ಸ್ವಾವೇದ್ಯತ್ವಂ ಪರಿತ್ಯಜ ।**
**ಸುಖಾವಿಷಯಕಜ್ಞಾನರೂಪಂ ಸುಖಮಯಂ ಮನಃ ।**
**ಕಿಂ ತೇನ ಫಲವತ್ಕಿಂತು ತದ್ದ್ರಷ್ಟುಃ ಸಾಕ್ಷಿಣಃ ಫಲಂ ॥ ೮೦೫ ॥**

ಪರನಿಗೆ ಅಭಿಮತವಾದ ಸ್ವಾವೇದ್ಯತ್ವರೂಪದ (ತನ್ನನ್ನು ತಾನು ತಿಳಿಯದ) ಸ್ವಪ್ರಕಾಶತ್ವವೂ ಯುಕ್ತವಾಗುವುದಿಲ್ಲವೆನ್ನುತ್ತಾರೆ :—

ಸುಖಾನುಭವಸಿದ್ಧ್ಯರ್ಥಂ-ಸುಖಾನುಭವದ ಸಿದ್ಧಿಗಾಗಿ, ಸ್ವಾವೇದ್ಯತ್ವಂ-ತನಗೆ ತಾನು ಅವೇದ್ಯನೆಂಬುದನ್ನು (ತಿಳಿಯಲಾರದವನೆಂಬುದನ್ನು), ಪರಿತ್ಯಜ-

---

ಹೇಳಲಾಗುವ ಸಮಸ್ತ ಭೋಗಗಳನ್ನು ಅಂಗೀಕರಿಸಿದರೆ ತಾರ್ಕಿಕನ ಮತವನ್ನು ಖಂಡನೆ ಮಾಡಲು ಸಾಕಷ್ಟು ಯುಕ್ತಿಗಳು ದೊರೆಯುತ್ತವೆ (೮೦೩-೮೦೪). ಸುಖಾನುಭವದ ಸಿದ್ಧಿಗಾಗಿ, ಸ್ವಾವೇದ್ಯತ್ವವನ್ನು ತಾನು ತನ್ನ ಜ್ಞಾನದ ವಿಷಯನಲ್ಲವೆಂಬ ನಿನ್ನ ಪ್ರಮೇಯವನ್ನು) ಪರಿತ್ಯಜಿಸು ; ಸುಖವಿಷಯಕವಲ್ಲದ ಕೇವಲ ಸುಖಪೂರ್ಣವಾದ ಮುಕ್ತರ ಮನಸ್ಸಿನಿಂದ, ಮುಕ್ತರಿಗೆ ಏನು ಪ್ರಯೋಜನ ? (ಇಲ್ಲ) ; ಶ್ರುತ್ಯುಕ್ತ ಸುಖಭೋಗವುಳ್ಳ ಸಾಕ್ಷಿಗೆ ಆ ಸುಖಮಯವಾದ ಮನಸ್ಸಿ

ತ್ಯಜಿಸು ; ಸುಖಾವಿಷಯಕ ಜ್ಞಾನರೂಪಂ–ಸುಖವಿಷಯಕವಲ್ಲದ, ಜ್ಞಾನರೂಪವಾದ ಮನಃ–(ಮುಕ್ತರ) ಚಿದಾತ್ಮಕಮನಸ್ಸು ಸುಖಮಯಂ–ಸುಖಸ್ವರೂಪವೇ ಆದುದು, ಕೇನ–ಸುಖರೂಪನೆಂಬ ಜ್ಞಾನಮಾತ್ರದಿಂದ, ದ್ರಷ್ಟುಃ–ಮಾನಸಸುಖವನ್ನು ಅನುಭವಿಸುವ, ಸಾಕ್ಷಿಣಃ–ಸಾಕ್ಷಿಗೆ (ಜೀವನಿಗೆ), ಫಲವತ್ ಕಿಂ–ಸುಖಾದಿ ಫಲವುಳ್ಳದ್ದು ಆಗುವುದೇನು ? (ಇಲ್ಲ).[1] ಕಿಂತು–ಮತ್ತೇನೆಂದರೆ, ತದ್ದ್ರಷ್ಟುಃ–ಸಾಕ್ಷಿಣಃ–ಫಲಂ–ಜೀವನಿಗೆ ಸುಖಾನುಭವವೇ ಫಲವು (ಇದನ್ನು 'ಯತ್ರತ್ವಸ್ಯ' ಎಂಬ ಶ್ರುತಿಯು ಮುಕ್ತಜೀವನಿಗೆ ಉಂಟೆಂದು ಸಾಧಿಸುತ್ತದೆ).

**ಕಿಂಚಾಭಿಮಾನಿವ್ಯಪದೇಶಸ್ತ್ವಿತ್ಯತ್ರ ಸ ಸೂತ್ರಕೃತ್ ।**
**ಯತೋ ಮೃದಬ್ರವೀದಿತ್ಯಾದ್ಯಾಪಾತಾನುಪಪನ್ನವಾಕ್ ।**
**ತದ್ಗದೇವ ಪರೇತ್ಯಾಹ ತನ್ನೇತ್ಯಾಹ ಮತಂ ತವ ॥ ೮೦೬ ॥**

'ತತ್ತ್ವಮಸಿ' 'ಸರ್ವಂ ಖಲ್ವಿದಂ ಬ್ರಹ್ಮ' ಇತ್ಯಾದಿ ವಾಕ್ಯಾನುಸಾರ ಅಹಂ ಮುಂತಾದ ಪದಗಳಿಗೆ, ಅಂತರ್ಯಾಮಿ ಪರದೇವತಾ ವಿಷಯತ್ವವಿದ್ದ ಪ್ರಯುಕ್ತ, ನಾನೇ ಸರ್ವಾಂತರ್ಯಾಮಿ ಎಂದು ಹೇಳಬೇಕಲ್ಲದೇ ಐಕ್ಯವನ್ನು ಹೇಳಕೂಡದೆಂದು ಹೇಳುತ್ತಾ ಸೂತ್ರಪ್ರಕ್ರಿಯೆಯಿಂದ ಅದನ್ನೇ ಪ್ರತಿಪಾದಿಸುತ್ತಾರೆ ;—

ಕಿಂಚ–ಮತ್ತೇನೆಂದರೆ, ಸೂತ್ರಕೃತ್–ಶ್ರೀಬಾದರಾಯಣರು, ಅಭಿಮಾನಿವ್ಯಪದೇಶಸ್ತು – 'ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ', ಇತ್ಯತ್ರ –

---

ನಿಂದ ಏನು ಫಲವೂ ಇಲ್ಲವಷ್ಟೆ (೮೦೫). 'ಅಭಿಮಾನಿವ್ಯಪದೇಶಸ್ತು' ಎಂಬ ಸೂತ್ರದಲ್ಲಿ ಶ್ರೀಬಾದರಾಯಣರು, 'ಮೃದಬ್ರವೀತ್ ಆಪೋಬ್ರುವನ್' ಇತ್ಯಾದಿ ವೇದಾರ್ಥಗಳ ಅನುಪಪನ್ನತೆಯನ್ನು ಅಧಿಷ್ಠಾನಭೂತ ಪೃಥ್ವಿ ಜಲಾದಿಗಳ ಅಂತರ್ಯಾಮಿ ದೇವತಾಪರವೆಂಬ ನಿರ್ಣಯವನ್ನು ನಿರೂಪಿಸಿ, ಪರಿಹರಿಸಿರುವರು;

---

1 ಅನುಭವವೆಂಬುದು ಜ್ಞಾನರೂಪವಾದುದು, ಆದರೆ ಜ್ಞಾನಮಾತ್ರವು ಅನುಭವವಾಗುವುದಿಲ್ಲ—ಜ್ಞಾನಪೂರ್ವಕವಾದ ಭೋಗವೇ ಅನುಭವವು ; ನಾನು ಸುಖಿಯಾಗಿರುವೆನು ಎಂಬ ಜ್ಞಾನವುಳ್ಳವನೇ ಸುಖಿಯು ; ಧ್ಯಾನಾವಸ್ಥೆಯಲ್ಲಿರುವ ಮುಕ್ತನಿಗೆ ತನ್ನ ಸ್ವರೂಪವೇ ತನ್ನಿಂದ ಭೋಗ್ಯವಾಗಿದ್ದು ಆನಂದಾನುಭವವುಳ್ಳವನಾಗಿರುತ್ತಾನೆ.

ಎಂಬ ಸೂತ್ರದಲ್ಲಿ,[1] ಯತಃ–ಯಾವ ಕಾರಣದಿಂದ, ಮೃದಬ್ರವೀತ್ ಇತ್ಯಾದ್ಯಾಃ– 'ಮಣ್ಣು ಮಾತನಾಡಿತು' ಎಂಬ ಮುಂತಾದ ವೇದವಾಕ್ಯಗಳು, ಆಪಾತಾನುಪ ಪನ್ನವಾಕ್–ಮೇಲೆ ತೋರುವ ಅರ್ಥವು ಅನುಪಪನ್ನ (ಯುಕ್ತಿಸಮ್ಮತವಲ್ಲದ) ವಾಕ್ಯವೆಂಬುದರಿಂದ, ತದ್ಗದೇವಪರಾ ಇತಿ–ಅಂತರ್ಯಾಮಿ ದೇವತಾಪರವೆಂದು, ಆಹ–ಹೇಳಿರುವರೋ, ತತ್–ಆದ್ದರಿಂದ, ತತ್ ನ–(ಅಹಮಾದಿ ಪದಗಳು ಅಂತ ರ್ಯಾಮಿದೇವತಾಪರವಲ್ಲದೇ) ಅಧಿಷ್ಠಾನಪರವಲ್ಲವೆಂದು ಆಪಾತಾರ್ಥಪರವಾಗಲಿ, ತವ ಮತಂ – ಐಕ್ಯವೆಂಬ ನಿನ್ನಮತವನ್ನಾಗಲಿ ನ ಇತಿ – ಅಲ್ಲವೆಂದು, ಆಹ – ಹೇಳಿರುವರು. (ಬಾಧಿತವಾದ ಜೀವಪರವಲ್ಲ; ಸರ್ವಾಂತರ್ಯಾಮಿಯಾದ ಬ್ರಹ್ಮ ಪರವೇ ಆಗುತ್ತದೆ). (ಅಧಿಷ್ಠಾನದಲ್ಲಿರುವ ಅಭಿಮಾನಿದೇವತೆಗಳೂ ಭೂಮ್ಯಾದಿ ಅಧಿಷ್ಠಾನಗಳಲ್ಲಿದ್ದು ಸ್ವಯೋಗ್ಯಕಾರ್ಯವನ್ನು ಸಾಧಿಸುವ ಶಕ್ತಿಯುಳ್ಳವರೂ ಆಗಿರುವರು.)

**ಪ್ರತ್ಯುದ್ಗಮಂ ಪ್ರಶ್ರಯಣಮಭಿವಾದನಮೇವ ಚ ।**
**ಗುಹಾಶಯಾಯ ಕುರ್ವಂತಿ ನ ತು ತದ್ದೇಹಮಾನಿನೇ ॥ ೮೦೭ ॥**

ಇದರಿಂದಲೂ ನಿನ್ನ ಮತವು ಸಿದ್ಧಿಸುವುದಿಲ್ಲ; ಅದ್ವೈತಿಯು ತಾನು ಸರ್ವಾಂತರ್ಯಾಮಿಯೆಂದು ಹೇಳಬೇಕಲ್ಲದೇ ಐಕ್ಯವನ್ನಲ್ಲ; ಮುಕ್ತರಿಗೆ ಸುಖಾನು ಭವಕ್ಕೆ ಅವಶ್ಯಕವಾದ ಅಂತಃಕರಣವಿಲ್ಲೆಂದು ಹೇಳಬೇಕು ಅಥವಾ ಇದ್ದರೆ ಅದು ಅಂತರ್ಯಾಮಿ ದೇವತೆಯನ್ನು (ಬ್ರಹ್ಮನನ್ನು) ಹೇಳುತ್ತದೆನ್ನಬೇಕು; ಹೀಗೆ ಯಾವ ರೀತಿಯಿಂದಲೂ 'ಅತ್ರತ್ವಸ್ಯ' ಎಂಬ ಶ್ರುತ್ಯುಕ್ತ ಸಮಸ್ತ ಭೋಗಗಳು ಮುಕ್ತರಿಗೆ ಯುಕ್ತವಾಗುವುದಿಲ್ಲ (೮೦೬). ಎದ್ದುಹೋಗಿ ಬರಮಾಡಿಕೊಳ್ಳು ವುದು, ನಮ್ರನಾಗಿ ನಮಸ್ಕರಿಸುವುದು, ಇತ್ಯಾದಿಗಳು, ಒಬ್ಬರಿಗೊಬ್ಬರು

[1] ಸೂತ್ರದ ಅರ್ಥವು ಹೀಗಿದೆ:—ಅಭಿಮಾನಿವ್ಯಪದೇಶಸ್ತು–'ಮೃದಬ್ರವೀದಾ-ಪೋಬ್ರುವನ್' ಇತ್ಯಾದಿ ವಾಕ್ಯಗಳು ಭೂಮಿ, ಜಲಾದಿಗಳ ಅಭಿಮಾನಿದೇವತೆಗಳನ್ನು ಹೇಳುತ್ತವೆ. (ಆದ್ದರಿಂದ ಅನುಪಪನ್ನವಲ್ಲ); ವಿಶೇಷಾನುಗತಿಭ್ಯಾಂ–ಅಭಿಮಾನಿದೇವತೆಗಳಿಗೆ ವಿಶೇಷ ವ್ಯಾಪ್ತಿಯಿರುವುದರಿಂದ, (ಅವರೂ ಕಾರ್ಯಮಾಡುವರೆಂಬುದು ಅಸಂಭಾವಿತ ವಲ್ಲ–ಸರ್ವಪ್ರೇರಕನಾದ ಭಗವಂತನು ಅವರಿಗೂ ಪ್ರೇರಕನಾಗಿರುವನು); ಶ್ರುತಿ ಪ್ರಾಮಾಣ್ಯವು ಅನಿಶ್ಚಿತವಾದರೆ ವಿಷ್ಣುವಿಗೆ ಜನ್ಮಾದಿಕಾರಣತ್ವವೆಂಬ ಲಕ್ಷಣವು ಸಿದ್ಧವಾಗು ವುದಿಲ್ಲವೆಂಬ ಸಂಶಯವನ್ನು ಈ ಅಧಿಕರಣದಲ್ಲಿ ಪರಿಹರಿಸಲಾಗಿದೆ.

**ಇತಿ ಯಃ ಸ್ಮಾಹ ಗಿರಿಶಃ ಸೋಽಪಿ ನೇತ್ಯಾಹ ತೇ ಮತಂ ।**
**ಗುಹಾಶಯೋ ದೇಹಮಾನೀತ್ಯುಕ್ತೌ ಯದ್ದೇಹಗೌ ಜಗೌ ॥ ೮೦೮ ॥**

'ಪ್ರತ್ಯುದ್ಗಮಪ್ರಶ್ರಯಣಾಭಿವಾದನಂ ವಿಧೀಯತೇ ಸಾಧುಮಿಥಃ ಸುಮಧ್ಯಮೇ । ಪ್ರಾಜ್ಞೈಃ ಪರಸ್ಮೈ ಪುರುಷಾಯ ಚೇತಸಾ ಗುಹಾಶಯಾಯೈವ ನದೇಹಮಾನಿನೇ ॥' ಎಂಬ ಭಾಗವತದಲ್ಲಿನ ರುದ್ರವಾಕ್ಯದಿಂದಲೂ ಜೀವೇಶ್ವರರ ಭೇದಕಥನವೇ ಉಚಿತವಾಗುತ್ತದೆನ್ನುತ್ತಾರೆ :—(ಭಾಗವತವಾಕ್ಯವು ಅರ್ಥತಃ ಸಂಗೃಹೀತವೆಂದು ತಿಳಿಯಬೇಕು) :[1]

ಪ್ರತ್ಯುದ್ಗಮಂ-ಎದುರು ಹೋಗುವುದು ; ಪ್ರಶ್ರಯಣಂ ಅಭಿವಾದನಂ-ನಮ್ರೀಭೂತನಾಗಿ ನಮಸ್ಕರಿಸುವುದು, ಏವ ಚ – ಈ ಎಲ್ಲವೂ, ಗುಹಾಶಯಾಯ–ಹೃದ್ಗುಹವಾಸಿಯಾದ ಅಧೋಕ್ಷಜಶಬ್ದವಾಚ್ಯನಾದ ಶ್ರೀಹರಿಗೆ, ಕುರ್ವಂತಿ–(ಸಜ್ಜನರು) ಮಾಡುತ್ತಾರೆ (ಬ್ರಹ್ಮರುದ್ರಾದಿಗಳು ಮಾಡುವ ನಮಸ್ಕಾರಾದಿಗಳು ಅಂತರ್ಯಾಮಿಯಾದ ಅಧೋಕ್ಷಜನಿಗಲ್ಲದೇ ಅನ್ಯರಿಗಲ್ಲ) ; ದೇಹಮಾನಿನೇ ನತು–ದೇಹಾಭಿಮಾನಿಯಾದ ಜೀವನಿಗೆ ಅಲ್ಲ ; ಇತಿ–ಎಂದು, ಯಃ ಗಿರಿಶಃ–

---

ಪರಸ್ಪರವಾಗಿ ಗೌರವವನ್ನು ಸಲ್ಲಿಸುವುದು, ಅವರ ಹೃದಯ ಗುಹಾವಾಸಿಯಾದ ಪರಮಪುರುಷನಿಗೆ (ಪುರುಷೋತ್ತಮನಿಗೆ–ಶ್ರೀವಿಷ್ಣುವಿಗೆ) ಅಲ್ಲದೇ ತುಚ್ಛವಾದ ದೇಹದಲ್ಲಿ ಅಭಿಮಾನಿಯುಳ್ಳ ಜೀವನಿಗಾಗಿ ಅಲ್ಲ; ಹೀಗೆಂಬ ರುದ್ರದೇವನ ನುಡಿಯು, ನಿನ್ನ ಅಭೇದ ಮತವನ್ನು (ಐಕ್ಯವನ್ನು) ನಿರಾಕರಿಸುತ್ತದೆ; ಗುಹಾಶಯ ಮತ್ತು ದೇಹಮಾನಿಗಳೆಂಬ ಇಬ್ಬರೂ ಒಂದೇ ದೇಹದಲ್ಲಿದ್ದವರನ್ನೇ ಇಲ್ಲಿ

---

[1] ಶ್ಲೋಕಾರ್ಥವು ಹೀಗಿದೆ :—ಪ್ರತ್ಯುದ್ಗಮ ಪ್ರಶ್ರಯಣಾಭಿವಾದನಂ–ಮೇಲೆದ್ದು ಎದುರುಗೊಳ್ಳುವುದು, ಆಲಿಂಗನ ನಮಸ್ಕಾರಾದಿಗಳಿಂದ ಗೌರವಿಸುವುದು ಇವುಗಳನ್ನು, ಸುಮಧ್ಯಮೇ–ಹೇಮಂಗಳಾಂಗಿ ! ಕೃಶೋದರಿ ! ಸತೀದೇವಿ ! ಪ್ರಾಜ್ಞೈಃ–ಜ್ಞಾನಿಗಳಿಂದ ಮಿಥಃ–ಪರಸ್ಪರವಾಗಿ ಗುಹಾಶಯಾಯ–ಹೃದ್ಗುಹಾವಾಸಿಯಾದ, ಭೂಯಸೇ–ಗುಣಪೂರ್ಣನಾದ, ಪರಸ್ಮೈ ಪುರುಷಾಯ–ಪುರುಷೋತ್ತಮನಿಗಾಗಿ, ವಿಧೀಯತೇ–ಮಾಡಲ್ಪಡುತ್ತದೆ ; ದೇಹಮಾನಿನೇ–ಜೀವನಿಗೆ, ನ–ಅಲ್ಲ ; ಸಾಧು–ಇದು ಶಾಸ್ತ್ರ ಸಮ್ಮತವೇ ಆಗಿದೆ ; ಅಂತಸ್ಥತ್ವಾಧಿಕರಣದ ಗುಣಸೂತ್ರಪಾದ 'ಭೇದವ್ಯಪದೇಶಾಚ್ಚಾನ್ಯಃ' ಎಂಬ ಸೂತ್ರವು ಇದನ್ನೇ ಸಾಧಿಸಿದೆ ; ಭೇದ ವ್ಯಪದೇಶಾತ್–ಭೇದವನ್ನು ಹೇಳಿರುವುದರಿಂದ, ಚ–ಸಹ, ಅನ್ಯಃ–ಅಂತಸ್ಥ ಪುರುಷನು (ಇಂದ್ರಾದಿಗಳಿಂದ) ಭಿನ್ನನೇ.

ಯಾವ ರುದ್ರದೇವನು, ಪ್ರಾಹ–ಹೇಳಿದನೋ, ಸೋಪಿ–ಅದು ಸಹ, ತೇವಮತಂ–ಜೀವೇಶ್ವರಿಗೆ ಏಕತ್ವಕಥನ ರೂಪದ ನಿನ್ನ ಮತವನ್ನೂ, ನ ಇತ್ಯಾಹ–ಅಲ್ಲವೆಂದೇ ಹೇಳಿತು ; ಗುಹಾಶಯಃ–ಗುಹಾಶಯನು, ದೇಹಮಾನೀ–ದೇಹಾಭಿಮಾನಿಯು, ಇತ್ಯುಕ್ತೌ–ಎಂದು ಹೇಳಲ್ಪಟ್ಟವರು ದೇಹಗೌ–ಒಂದೇ ದೇಹಸ್ಥಿತರನ್ನು, ಜಗೌ–ಹೇಳಿತು.

**ಯದ್ದೇಹಮಾನಿನಂ ಪ್ರಾಹ ಜೀವಮೇವ ಮಹೇಶ್ವರಃ ।**
**ಸೋತ್ಯಲ್ಪಗುಣವಾಕ್ಯಾನಿ ಜೀವೇಷ್ವೇವಾನುಶಾಸ್ತಿ ತತ್ ॥ ೬೦೯ ॥**
**ಉಪಾಚಾರಾರ್ಹಸುಗುಣಸ್ತೋಮೋಕ್ತೇಃ ಪರಮಾತ್ಮನಿ ।**
**ಸೋನ್ವಶಿಕ್ಷದ್ಯತಃ ಪ್ರತ್ಯುದ್ಗಮಾದ್ಯಮುದಿಶತ್ ಪ್ರಭೋಃ ॥ ೬೧೦ ॥**
**ಅತಃ ಶ್ರುತಿಪುರಾಣಾದೌ ರುದ್ರಾದ್ಯುತ್ಕರ್ಷವಾಕ್ತು ಯಾ ।**
**ಸಾಂತರ್ಯಾಮ್ಯಧಿದೈವಾದಿಷ್ವಿತ್ಯುಕ್ತಾಂತರಗೋಚರಾ ॥ ೬೧೧ ॥**

ಈ ಭಾಗವತ ವಾಕ್ಯಬಲದಿಂದಲೇ ಬೇರೆ ಪ್ರಮೇಯವೂ ಸಿದ್ಧವೆನ್ನುತ್ತಾರೆ :—

ಯತ್ (ಯಸ್ಮಾತ್)–ಯಾವ ಕಾರಣದಿಂದ, ಮಹೇಶ್ವರಃ–ರುದ್ರದೇವನು, ದೇಹಮಾನಿನಂ – ದೇಹಾಭಿಮಾನಿಪದವಾಚ್ಯನೆಂದು (ದೇಹದಲ್ಲಿ ತನ್ನದೆಂಬ ಅಭಿಮಾನವಿರುವುದರಿಂದ) ಜೀವಂ ಏವ–ಜೀವನನ್ನೇ, ಪ್ರಾಹ–ಹೇಳಿರುವನೋ, ತತ್–(ತಸ್ಮಾತ್)–ಆ ಕಾರಣದಿಂದ, ಸಃ–ಮಹೇಶ್ವರನು, ಅತ್ಯಲ್ಪಗುಣವಾಕ್ಯಾನಿ–

---

ಹೇಳಿರುವುದು–ಪ್ರತ್ಯೇಕ ದೇಹಗಳಲ್ಲಿರುವವರಲ್ಲ (೬೦೭–೬೦೮). ಈ ವಾಕ್ಯದಲ್ಲಿ ದೇಹಾಭಿಮಾನಿಪದವನ್ನು ಪ್ರಯೋಗಿಸಿ, ಮಹೇಶ್ವರನು ಜೀವನನ್ನೇ ಹೇಳಿರುವನು ; ಭಗವಂತನಲ್ಲಿ ಕೂಡದ ಅಲ್ಪ ಗುಣಗಳನ್ನೇ ಹೇಳಿರುವುದರಿಂದಲೂ ಇದೇ ನಿಶ್ಚಯವಾಗುತ್ತದೆ ; ಗೌರವದಿಂದ ಉಪಚರಿಸುವುದೆಂಬ ಭಾವವನ್ನು ಸ್ಪಷ್ಟಗೊಳಿಸುವ ಪ್ರತ್ಯುದ್ಗಮ, ಪ್ರಶ್ರಯಣಾಭಿವಾದನ, ಪದಗಳನ್ನುಪಯೋಗಿಸಿ, ಪ್ರಭುವಿನಲ್ಲಿರುವ ಮಹದ್ಗುಣಗಳನ್ನು ಸೂಚಿಸಿರುವನು ; ಗೌರವ, ಉಪಚಾರಗಳಿಗೆ ಅರ್ಹವಾದ ಮಹದ್ಗುಣಗಳು ಪರಮಾತ್ಮನಲ್ಲಿರುವುವೆಂದು ಶ್ರುತಿ ಪುರಾಣಗಳು ಸ್ಪಷ್ಟವಾಗಿ ಘೋಷಿಸುತ್ತವೆ ; ರುದ್ರಾದಿ ಅನ್ಯರ ಉತ್ಕರ್ಷವು ಎಲ್ಲಿ

(ಭಗವಂತನಲ್ಲಿ ಉಪಪನ್ನವಲ್ಲದ) ಅತ್ಯಲ್ಪಗುಣಪ್ರತಿಪಾದಕ ವಾಕ್ಯಗಳನ್ನು, ಜೀವೇಷ್ವೇವ – ಜೀವರಲ್ಲಿಯೇ (ಭಗವಂತನಲ್ಲಲ್ಲ), ಅನುಶಾಸ್ತಿ –ವಿಧಾಯಕ ವೆಂದಿದ್ದಾನೆ (ವಿಧಿಸಿರುವನು); ಉಪಚಾರಾರ್ಹ ಸುಗುಣಸ್ತೋಮೋಕ್ತೀಃ– ಗೌರವಿಸಿ ಉಪಚರಿಸಲು ಯೋಗ್ಯವಾದ ನುಡಿಗಳನ್ನು (ಪ್ರತ್ಯುದ್ಗಮಾದಿ, ಸರ್ವ ಹೃದ್ಗುಹವಾಸತ್ವವೇ ಮೊದಲಾದ ಗುಣಸಮೂಹಗಳನ್ನು), ಪರಮಾತ್ಮನಿ– ಭಗವಂತನಲ್ಲಿ, ಸಃ–ಮಹೇಶ್ವರನು, ಅನ್ವಶಿಕ್ಷತ್–ತಿಳಿಸಿಕೊಟ್ಟನು; ಯತಃ– ಏಕೆಂದರೆ, ಪ್ರಭೋಃ – ಭಗವಂತನಿಗೆ, ಪ್ರತ್ಯುದ್ಗಮಾದ್ಯಂ – ಪ್ರತ್ಯುದ್ಗಮಾದಿ ಗಳನ್ನು, ಅದಿಶತ್–ಉಪದೇಶಿಸಿರುವನು; ಅತಃ–ಆದ್ದರಿಂದ, ಶ್ರುತಿಪುರಾಣಾದೌ– ಶ್ರುತಿಪುರಾಣಗಳಲ್ಲಿ, ರುದ್ರಾದ್ಯುತ್ಕರ್ಷವಾಕ್–ರುದ್ರಾದಿದೇವತೆಗಳ ಉತ್ತಮತ್ವ ಪ್ರತಿಪಾದಕವಾಕ್ಯವು, ಯಾ ತು–ಯಾವುದೋ, ಸಾ–ಅದು, ಅಂತರ್ಯಾಮ್ಯಧಿ ದೈವಾದಿಷು–ಅಂತರ್ಯಾಮ್ಯಧಿದೈವಾದಿಷು, ತದ್ಧರ್ಮವ್ಯಪದೇಶಾತ್,[1] ಎಂಬ ಸೂತ್ರದ, ಇತ್ಯುಕ್ತಾಂತರಗೋಚರಾ–ನಿರ್ಣಯದೊಳಗೆ ಸೇರುತ್ತದೆ.

**ಅಧೋಕ್ಷಜೋ ಮೇ ಮನಸಾ ವಿಧೀಯತ ಇತೀಶ್ವರಃ ।**
**ಸ ಏವ ತಂ ಯದ್ವ್ಯನಕ್ತಿ ಗುಹಾಶಯಪದೋದಿತಂ ॥ ೬೧೨ ॥**

---

ಯಾದರೂ ಕಂಡರೆ ಅದನ್ನು 'ಅಂತರ್ಯಾಮ್ಯಧಿದೈವಾದಿಷು' ಎಂಬ ಸೂತ್ರದಲ್ಲಿ ಮಾಡಲಾಗಿರುವ ನಿರ್ಣಯದಂತೆ, ಅವರ ಅಂತರ್ಯಾಮಿಯೂ ಆದ ವಿಷ್ಣು ಪರವಾಗಿಯೇ ಅರ್ಥಮಾಡಿಕೊಳ್ಳಬೇಕು (೬೦೯–೬೧೧). ಅನ್ಯರಿಗೆ ವಂದನಾದಿ ಗಳನ್ನು ಮಾಡುವಾಗ, ಮನಸ್ಸಿನಿಂದ ನಾನು ಅಧೋಕ್ಷಜನನ್ನೇ ಧಾರಣ ಮಾಡಿರುವುದರಿಂದ, ಎಂಬುದಾಗಿ ಮುಂದಿನ ವಾಕ್ಯದಲ್ಲಿ ರುದ್ರನು ಹೇಳುವುದ ರಿಂದ, 'ಗುಹಾಶಯಾಯ' ಎಂಬ ಪದದಿಂದ ಶ್ರೀವಿಷ್ಣುವೆಂಬ ಅರ್ಥವೇ ತಿಳಿದು ಬರುತ್ತದೆ; ಏವಂಚ ಸರ್ವಾಗಮ ವಾಕ್ಯಗಳ ತಾತ್ಪರ್ಯವು ವಿಷ್ಣುಸರ್ವೋತ್ತ ಮತ್ವದಲ್ಲಿಯೇ ಇರುತ್ತದೆಂದು ರುದ್ರದೇವನೇ ಹೇಳಿರುವನು; ಹೀಗೆಂದು, ತನ್ನ

[1] ಈ ಸೂತ್ರದ ಅರ್ಥವು ಹೀಗಿದೆ:—ಅಂತರ್ಯಾಮಿ–ಒಳಗಿದ್ದು ನಿಯಾಮಕನು ವಿಷ್ಣುವೇ; ಅಧಿದೈವಾದಿಷು–ಅಧಿದೈವ, ಅಧ್ಯಾತ್ಮ, ಆಧಿಭೌತಿಕ ಮುಂತಾದ ಪ್ರಕರಣ ಗಳಲ್ಲಿ (ಉಕ್ತರಾದ ಸಕಲದೇವತೆಗಳಲ್ಲಿಯೂ), ತದ್ಧರ್ಮವ್ಯಪದೇಶಾತ್–ಪ್ರಸಿದ್ಧ ವಿಷ್ಣು ಧರ್ಮಗಳನ್ನೇ ಹೇಳಿರುವುದರಿಂದ (ವಿಷ್ಣುವೇ ಅನ್ಯರಲ್ಲ).

ಏವಂ ಚ ವಿಷ್ಣೋರುತ್ಕರ್ಷೇ ಸರ್ವಾಗಮಗಿರಾಂ ಭರಂ ।
ಯೋ ಹರೋ ವಕ್ತಿ ಸರ್ವಸ್ಯ ಸ ಗುರುರ್ನಾತ್ರ ಸಂಶಯಃ ।
ತ್ರಿಲೋಚನನಮತಾಯಾಸ್ಮೈ ಕೋ ವಾ ದ್ರುಹ್ಯೇದ್ದ್ವಿಲೋಚನಃ
॥ ೮೧೩ ॥

ಗುಹಾಶಯಶಬ್ದದಿಂದ ಹೇಳಲ್ಪಟ್ಟವನು ಶ್ರೀಹರಿಯೇ ಎಂಬುದು ಮುಂದಿನ ರುದ್ರವಾಕ್ಯದಿಂದಲೇ ಸ್ಪಷ್ಟವಾಗುತ್ತದೆನ್ನುತ್ತಾರೆ :—[1]

ಅಧೋಕ್ಷಜೋ ಮೇ ಮನಸಾ—ಅಧೋಕ್ಷಜನು (ಶ್ರೀವಿಷ್ಣುವು), ನನ್ನ ಮನಸ್ಸಿನಿಂದ, ವಿಧೀಯತೇ—ವಿಶೇಷವಾಗಿ ಧರಿಸಲ್ಪಟ್ಟಿರುವನು, ಇತಿ—ಎಂದು,

---

ಮೇಲೆ ಗೌರವದಿಂದ ವರ್ತಿಸಲಿಲ್ಲವೆಂದು ಕುಪಿತನಾದ ದಕ್ಷನಿಗೆ ವಂದನಾದಿಗಳನ್ನು ಮಾಡಲಿಲ್ಲವೆಂದು, ಸತೀದೇವಿಗೆ ಉಪದೇಶಿಸುವುದರಿಂದ, (ತನ್ನ ಭಾರ್ಯೆಗೇ ಈ ಉಪದೇಶಮಾಡಿರುವುದರಿಂದ) ಸರ್ವರಿಗೆ ವಿಷ್ಣುಸರ್ವೋತ್ತಮತ್ವವನ್ನೇ ಉಪದೇಶಿ

---

[1] 'ಸತ್ತ್ವಂ ವಿಶುದ್ಧಂ ವಸುದೇವಶಬ್ದಿತಂ ಯದೀಯತೇ ತತ್ರ ಪುಮಾನಪಾವೃತಃ । ಸತ್ತ್ವಂ ಚ ಯಸ್ಮಿನ್ ಭಗವಾನ್ ವಾಸುದೇವೋ ಹ್ಯಧೋಕ್ಷಜೋ ಮೇ ಮನಸಾ ವಿಧೀಯತೇ।' ಎಂಬ ಭಾಗವತದ ಮುಂದಿನ ಶ್ಲೋಕವು ಇಲ್ಲಿ ವಿವಕ್ಷಿತವಾಗಿದೆ : ಇದರ ಅರ್ಥವೇನೆಂದರೆ ; ಯತ್—ಯಾವ ಕಾರಣದಿಂದ, ತತ್ರ—(ಸತ್ತ್ವಗುಣ) ಮನಸ್ಸಿನಲ್ಲಿ (ಪ್ರಚುರವಾಗಿರಲು), ಅಪಾವೃತಃ—(ಅಪಗತಂ ಆವರಣಂ ಯಸ್ಮಾತ್) ಪ್ರಕೃತಿ ಎಂಬ ಆವರಣವು ಯಾರಿಂದ ತೆರೆಯಲ್ಪಡುವುದೋ, ಪುಮಾನ್—(ಅ) ಪರಮಪುರುಷನು (ಶ್ರೀಹರಿಯು), ಈಯತೇ—ಜ್ಞಾತನಾಗುವನೋ, (ಆದ್ದರಿಂದ), ವಿಶುದ್ಧಂ—ರಜಸ್ತಮೋಗುಣ ಮಿಶ್ರವಲ್ಲದ, ಸತ್ತ್ವಂ—ಸತ್ತ್ವಗುಣವು, ವಸುದೇವಶಬ್ದಿತಂ—(ಸರ್ವತ್ರ) ನಿವಸನಸ್ವಭಾವದ ಪರಮಾತ್ಮನು) ವಸುದೇವ ಶಬ್ದವಾಚ್ಯನು, (ದೀವ್ಯತೇ ಪ್ರಕಾಶತೇ ಅನೇನ ಎಂಬ ವ್ಯುತ್ಪತ್ತಿಯಿಂದ ವಸುದೇವ ಶಬ್ದ ಪ್ರತಿಪಾದ್ಯನು) ; (ರಜಸ್ತಮೋಗುಣ ಪ್ರಚುರದೈತ್ಯ ಸಂಹಾರದಿಂದ ಸತ್ತ್ವಗುಣ ಪ್ರಚುರರಾದ ದೇವತೆಗಳ ರಕ್ಷಣವಾಗುತ್ತದೆ ; ಸತ್ತ್ವಗುಣವು ಯಾರ ಅಧೀನವೋ ಅವನು ವಸುದೇವನ ರಕ್ಷಕನಾಗಿರುವುದರಿಂದ ವಾಸುದೇವ ಶಬ್ದವಾಚ್ಯನಾದ ಪರಮಾತ್ಮನು, (ವಸುದೇವ ಪುತ್ರನೆಂಬುದರಿಂದಲೇ ವಾಸುದೇವನಲ್ಲ), ಯಸ್ಮಿನ್—ಯಾವ ಸತ್ತ್ವಗುಣ ಪ್ರಚುರವಾದ ವಸುದೇವನ ಮನಸ್ಸಿನಲ್ಲಿ, ಭಗವಾನ್ ಅಧೋಕ್ಷಜಃ—ಭಗವಂತನು (ವಾಸುದೇವ ಶಬ್ದವಾಚ್ಯನಾದ) ಅಧೋಕ್ಷಜನು, ಮೇ—ನನ್ನ, ಮನಸಾ—ಮನಸ್ಸಿನಿಂದ, ವಿಧೀಯತೇ—ವಿಶೇಷವಾಗಿ ಧರಿಸಲ್ಪಟ್ಟಿರುವನು.

(i) ಸತ್ವಾದಿ ತ್ರಿಗುಣ ವರ್ಜಿತನೆಂಬ ನಿರ್ಗುಣ ಶ್ರುತಿಯ ವಿರೋಧವೂ ಬರಬಹುದು; ಸತ್ವಗುಣಮಾತ್ರ ಸಂಪರ್ಕವುಳ್ಳವನೆಂಬ ಅರ್ಥವನ್ನು ತಿಳಿಯುವುದರಿಂದ ಈ ದೋಷವು

ಈಶ್ವರಃ–ರುದ್ರದೇವನು, ಯತ್–ಯಾವ ಕಾರಣದಿಂದ, ಸಃ ಏವ–ತಾನೇ, ಗುಹಾಶಯ ಪದೋದಿತಂ–ಗುಹಾಶಯಪದದಿಂದ ಹೇಳಿರುವನೋ, ತಂ ವ್ಯನಕ್ತಿ–ವಿಷ್ಣುವನ್ನಾಗಿ ಸ್ಪಷ್ಟಗೊಳಿಸಿರುವನೋ (ಆದ್ದರಿಂದ), ಏವಂ ಚ – ಹೀಗೆ, ವಿಷ್ಣೋಃ–ಶ್ರೀವಿಷ್ಣುವಿನ, ಉತ್ಕರ್ಷೇ–ಉತ್ತಮತ್ವದಲ್ಲಿ, ಸರ್ವಾಗಮಗಿರಾಂ–ಭಾಗವತಾದಿಸರ್ವಶಾಸ್ತ್ರವಾಕ್ಯಗಳ, ಭರಂ – ವಿಶ್ವಾಸವು (ಶ್ರದ್ಧೆಯು); ಯಃ ಹರಃ–ಯಾವ ರುದ್ರದೇವನು, ವಕ್ತಿ–(ಈ ಸರ್ವೋತ್ತಮತ್ವವನ್ನು) ಉಪದೇಶಿಸುವನೋ, ಸಃ–ಆತನು, ಸರ್ವಸ್ಯ–ಸಕಲರ, ಗುರುಃ–ಗುರುವು (ಜಗದ್ಗುರುವು);

---

ಸುವ ರುದ್ರದೇವನೇ ಜಗದ್ಗುರುವೆಂದು ಸಿದ್ಧವಾಗುತ್ತದೆ; ತ್ರಿಲೋಚನನಾದ ಈ ಜಗದ್ಗುರುವಿನ ಉಪದೇಶವನ್ನು ಯಾವ ವಿವೇಕಿಯು ತಿರಸ್ಕರಿಸುವನು? ಮನುಷ್ಯಮಾತ್ರರೆಲ್ಲರೂ ದ್ವಿಲೋಚನರಷ್ಟೆ (ಎರಡು ಕಣ್ಣುಗಳನ್ನು ಮಾತ್ರ

---

ಶಂಕಿತವಾಗುತ್ತದೆ. ಸಾತ್ವಿಕರಾದ ಸನಕಾದಿಗಳ ಉತ್ಪತ್ತಿಯಂತೆ ಶ್ರೀಕೃಷ್ಣನೂ ಎಂಬ ಸಂಶಯವೂ ಬರಬಹುದು; ಅಧೋಕ್ಷಜನನೆಂಬ ಶಬ್ದವೂ ಕೂಡುವುದಿಲ್ಲ; ಸತ್ವಗುಣವು ಸರ್ವರಿಂದ (ವಿಶೇಷವಾಗಿ ಬ್ರಹ್ಮದೇವನಿಂದ) ಧಾರ್ಯಮಾಣವಾಗಿದೆ; ಹೀಗಿರಲು ಶ್ರೀಕೃಷ್ಣನು ಸತ್ವಪ್ರಚುರವಾದ ಮನಸ್ಸಿನಿಂದ, ಸನಕಾದಿ ಮಾನಸಪುತ್ರರಂತೆ ಜನಿಸಿದವನೆಂಬ ಶಂಕೆಗೂ ಅವಕಾಶವಾಗುತ್ತದೆ ಮೇಲಾಗಿ 'ಸತ್ವಾತ್ಸಂಜಾಯತೇ ಜ್ಞಾನಂ' ಎಂಬ ವಚನದಂತೆ, ಮನೋವೃತ್ತಿರೂಪ ಭಗವತ್ಸಾಕ್ಷಾತ್ಕಾರ ಕಾರಣವಾದ (ಕರಣವಾದ) ಮನಸ್ಸು ಜೀವರಿಗೇ ಇರುವುದರಿಂದ ಅಲ್ಲಿಯೇ ಉಚಿತವಾಗುವುದರಿಂದ, ಭಗವನ್ನಿಷ್ಠತ್ವವನ್ನು ಸತ್ವಗುಣಕ್ಕೆ ಹೇಳುವುದು ಯುಕ್ತವಾಗುವುದಿಲ್ಲ; ಮತ್ತು 'ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ । ಸಾತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ।' ಎಂದು ತ್ರಿವಿಧಪದಸೂಚಿತವಾದ ಜೀವಸ್ವರೂಪಭೂತ ಸಾತ್ವಿಕತ್ವಾದಿಸ್ವಭಾವತ್ರಯಶಬ್ದಸೂಚಿತವಾದ, ಸಾತ್ವಿಕ ಸಾತ್ವಿಕ, ಸಾತ್ವಿಕ ರಾಜಸ, ಸಾತ್ವಿಕ ತಾಮಸಗಳೆಂಬ ಜೀವನಿಷ್ಠ ಗುಣನಿಮಿತ್ತ ತ್ರೈವಿಧ್ಯಗಳೂ; ರಾಜಸ ಸಾತ್ವಿಕ, ರಾಜಸ ರಾಜಸ, ರಾಜಸ ತಾಮಸಗಳೆಂಬ ಮಧ್ಯಮಜೀವನಿಷ್ಠ ಪ್ರಾಕೃತ ಗುಣನಿಮಿತ್ತ ತ್ರೈವಿಧ್ಯಗಳೂ, ತಾಮಸಸಾತ್ವಿಕ, ತಾಮಸ ರಾಜಸ, ತಾಮಸ ತಾಮಸಗಳೆಂಬ ಅಧಮಜೀವನಿಷ್ಠ ಪ್ರಾಕೃತಗುಣನಿಮಿತ್ತ ತ್ರೈವಿಧ್ಯಗಳೂ ಎಂಬ ಈ ಒಂಭತ್ತು ವಿಧದ ಬಾಹ್ಯವಿಭಾಗಕ್ಕೆ ಕಾರಣೀಭೂತವಾದ ಜೀವಸ್ವರೂಪ ಸಾತ್ವಿಕಾದಿ ವಿಭಾಗ ಕಥನದ ನಿರೂಪಣೆಯು, 'ದೇಹಿನಾಂ ಸಾ ಸ್ವಭಾವಜಾ' ಎಂಬಲ್ಲಿ ಪ್ರಯೋಗಿಸಲಾಗಿರುವ 'ದೇಹೀ' ಎಂಬ ಪದೋಕ್ತ ಜೀವರಲ್ಲಿಯೇ ಯುಕ್ತವಾಗುತ್ತದೆ; ಸ್ವರೂಪಭೂತಗಳಾದ, ಸ್ವರೂಪ ಜ್ಞಾನಾನಂದಾದಿಗಳು ಸದಾ ವ್ಯಕ್ತವಾಗಿರುವುದೆಂಬುದು ಸಾತ್ವಿಕ ಸಾತ್ವಿಕ ಶ್ರದ್ಧೆಯ ಜೀವರಿಗೆ ಮುಕ್ತಿಯಲ್ಲಿ ಮಾತ್ರ ಕೂಡುತ್ತದೆ. ಅವರಿಗೆ ಸ್ವರೂಪ

ಅತ್ರ–ಈ ವಿಷಯದಲ್ಲಿ, ಸಂಶಯಃ ನ–ಸಂಶಯವಿಲ್ಲ; ತ್ರಿಲೋಚನ ಮತಾ–ರುದ್ರದೇವನ ಈ ಸಿದ್ಧಾಂತವಾದ, ಯಾ–ಯಾವ ವಿಷ್ಣು ಸರ್ವೋತ್ತಮತ್ವ ವಾದವೋ, ಅಸ್ಮೈ–ಈ ಪ್ರಮೇಯಕ್ಕೆ (ಈ ಸಿದ್ಧಾಂತವನ್ನು ಉದ್ದೇಶಿಸಿ), ಕೋವಾ–ಯಾವ, ದ್ವಿಲೋಚನಃ–ಎರಡು ಕಣ್ಣುಳ್ಳ ಮನುಷ್ಯನು (ಮನುಷ್ಯ ಮಾತ್ರನು), ದ್ರುಹ್ಯೇತ್–ದ್ವೇಷವನ್ನು ಹೊಂದಬಹುದು? (ಯಾರು ದ್ವೇಷಿಸುವವರು? ಇಲ್ಲ–ಎಲ್ಲರೂ ತಲೆಬಾಗುವರು).

**ಭೇದಸ್ಯ ವ್ಯಾವಹಾರ್ಯತ್ವೇ ಸ್ಯಾದೈಕ್ಯಂ ಪ್ರಾತಿಭಾಸಿಕಂ ।**
**ಭೇದೋ ಹ್ಯೈಕ್ಯನಿಷೇಧಾತ್ಮಾ ತಸ್ಯಾದ್ಯೈವ ನಿಷಿದ್ಧತಾ ।**
**ಕಿಂ ನ ದದ್ಯಾತ್ತ್ವದದ್ವೈತೇ ಬ್ರಹ್ಮಜ್ಞಾನಾನ್ಯಬಾಧ್ಯತಾಂ ॥ ೮೧೪ ॥**

ಬೇರೊಂದು ಪ್ರಮೇಯದ ಪ್ರತಿಬಂದಿಯನ್ನು ಸೂಚಿಸುತ್ತಾರೆ :—

---

ಉಳ್ಳವರು ಯಾರಿಂದಲೂ ತಿರಸ್ಕಾರಾರ್ಹವಲ್ಲ) (೮೧೨–೮೧೩). ಭೇದವು ವ್ಯಾವಹಾರಿಕವೆಂದು ಪರನು ವಾದಿಸಿದರೆ, ಅದು ಶುಕ್ತಿರಜತದಂತೆ ಪ್ರಾತಿಭಾಸಿಕವೂ ಎಂದೇಕೆ ಆಗಬಾರದು? ಎಂಬ ವಾದಕ್ಕೆ ಎದುರಿಲ್ಲದಾಗುತ್ತದೆ;

---

ಜ್ಞಾನದ ವ್ಯಕ್ತಿಯು ಸದಾ ಇರುತ್ತದೆ ; ಆದರಲ್ಲಿಯೂ, ಸಾತ್ವಿಕ ಸಾತ್ವಿಕರು ಸರ್ವದಾ ಇಹದಲ್ಲಿ ಈ ಶಕ್ತಿಯುಳ್ಳವರಾಗಿರುವರು; ಇಹದಲ್ಲಿ, ಕದಾಚಿತ್ ಸ್ವರೂಪ ಜ್ಞಾನದ ಅಭಿವ್ಯಕ್ತಿಯ ಶಕ್ತಿಯುಳ್ಳವರು, ಮಧ್ಯಮರು ; ಯಾವಾಗಲೂ ಸ್ವರೂಪ ಜ್ಞಾನವ್ಯಕ್ತಿಯಿಲ್ಲದವರು ತಾಮಸರು; ಮಧ್ಯಮರಲ್ಲಿ ಸ್ವರೂಪದೋಷಗಳೂ ಇರುವುದರಿಂದ ಯಾವ ಉಪದ್ರವವೂ ಇಲ್ಲ ; ಬಾಹ್ಯತತ್ವಜ್ಞಾನಕರಣವಾದ ಸತ್ವಗುಣಕ್ಕೆ ಹೇಯತ್ವ ಘಟನೆಗಾಗಿ (ಸತ್ವಗುಣವೂ ಬಂಧಕವೇ ಆದ್ದರಿಂದ) ಸ್ವರೂಪ ಜ್ಞಾನಕ್ಕೆ ಒಂದು ಆವರಣದ ಅವಶ್ಯಕವಿದೆ ; ಈ ಆವರಣವು ಸತ್ವಾತ್ಮಕವಾಗಿದ್ದು, ವಸುದೇವನಲ್ಲಿ ಅದು ನಿವಾರಣವಾದೊಡನೆ ಶ್ರೀಕೃಷ್ಣನು ಅಲ್ಲಿ ಅಭಿವ್ಯಕ್ತನಾದನು) ; ಈ ಮುಂತಾದ ಕಾರಣಗಳಿಂದ ಸಂಸಾರಾವಸ್ಥೆಯಲ್ಲಿ ಮಾನಸ ಜ್ಞಾನವೈಚಿತ್ರ್ಯಕ್ಕಾಗಿ ಪ್ರಾಕೃತ ಗುಣತ್ರಯವು ಅಪೇಕ್ಷಿತವಾಗಿದೆ ;

(ii) ಸಜ್ಜೀವರಲ್ಲಿ ಬಹಿಃ ರಾಜಸತಾಮಸತ್ವಗಳ ಪ್ರವೇಶವೇಕಿರಬೇಕು ; ಮತ್ತು ದುರ್ಜೀವರಲ್ಲಿ ಸಾತ್ವಿಕರಾಜಸತ್ವಗಳ ಪ್ರವೇಶವೇಕೆ? ಮಧ್ಯಮ ಜೀವರಲ್ಲಿ, ಸಾತ್ವಿಕ ರಾಜಸತ್ವಗಳ ಪ್ರಯೋಜನವೇನು ಎಂಬುದೂ ತಿಳಿಯಬೇಕಾದುದೇ ಸರಿ ; ಸಜ್ಜೀವರಿಗೆ, ಕಾದಾಚಿತ್ಕ (ಒಂದು ಕಾಲದಲ್ಲಿ ಸಂಭವಿಸುವ) ಸಾಂಸಾರಿಕ ಭ್ರಮಪ್ರಮಾದಿಗಳಿಗೆ, ಕ್ರಮವಾಗಿ ರಾಜಸ, ತಾಮಸತ್ವಗಳ ಪ್ರವೇಶವು ಕಾರಣವಾಗುತ್ತದೆ ; ಸಾತ್ವಿಕಸಾತ್ವಿಕರಲ್ಲಿ ತಾತ್ವಿಕಯೋಗಿಗಳಾದ ರುದ್ರಾದಿಗಳಲ್ಲಿ ಪ್ರಮಾದಾದಿಗಳು ಅತ್ಯಲ್ಪವಾದ್ದರಿಂದ, ಅವರು

*

ಭೇದಸ್ಯ–(ಜೀವೇಶ್ವರ) ಭೇದಕ್ಕೆ, ವ್ಯಾವಹಾರ್ಯತ್ವೇ–ವ್ಯಾವಹಾರಿಕತ್ವ ವಿದ್ದರೆ (ವ್ಯಾವಹಾರಿಕವೆಂದು ವಾದಿಸಿದರೆ), ಐಕ್ಯಂ–(ನೀನು ಹೇಳುವ) ಜೀವೇಶ್ವ-ರೈಕ್ಯವು, ಪ್ರಾತಿಭಾಸಿಕಂ ಸ್ಯಾತ್–ಪ್ರಾತಿಭಾಸಿಕ ಭೇದವೆಂದು ಆಗಲಿ; ಭೇದಃ–ಭೇದವೆಂಬುದು, ಐಕ್ಯನಿಷೇಧಾತ್ಮಾ–ಅದ್ವೈತದ ನಿಷಿದ್ಧತ್ವವೇ (ನಿಷಿದ್ಧರೂಪವೇ) ಆಗಿದೆ; ತಸ್ಯ–ಅದರ (ಐಕ್ಯಕ್ಕೆ), ಅದ್ಯೈವ–ಈಗಲೇ, ನಿಷಿದ್ಧತಾ–ನಿಷೇಧವನ್ನು ಸಾಧಿಸುವುದು, ಬ್ರಹ್ಮಜ್ಞಾನಾನ್ಯಬಾಧ್ಯತಾಂ–ಬ್ರಹ್ಮಜ್ಞಾನ ಭಿನ್ನಜ್ಞಾನದಿಂದ ಬಾಧ್ಯತ್ವವನ್ನು, ಕಿಂ ನ ದದ್ಯಾತ್–ತಂದುಕೊಡುವುದಿಲ್ಲವೇನು ?

---

ಅದ್ವೈತದ ನಿಷೇಧರೂಪವಾದುದಷ್ಟೇ ಭೇದವು ? ರಜತದ ಅಸ್ತಿತ್ವವು ಈಗಲೇ ಬಾಧಿತವಾಗಿರಲು, ಬ್ರಹ್ಮಜ್ಞಾನ ಮಾತ್ರ ಬಾಧ್ಯವೆಂದು ಅದ್ವೈತವನ್ನು ಹೇಳುವುದೇಕೆ ? ವ್ಯಾವಹಾರಿಕವೆಂಬುದೂ ವಸ್ತುಗತ್ಯಾ ಇಲ್ಲದುದಷ್ಟೆ ; ಈಗಲೇ

---

ವಿವಕ್ಷಿತರಲ್ಲ ; ಅನ್ಯಸಾತ್ವಿಕರಿಗೆ, ಕ್ರಮವಾಗಿ ಆಗಾಗ ಪ್ರಾಪ್ತವಾಗುವ ಮಿಥ್ಯಾಜ್ಞಾನಕ್ಕೆ ಬಹುತ್ವಕ್ಕೆ ಮತ್ತು ದುರ್ಜೀವರ ಸ್ವರೂಪದಲ್ಲಿ ಸರ್ವತ್ರರಜೋಗುಣ ನಿಮಿತ್ತವಾದ ಮಿಥ್ಯಾಜ್ಞಾನಾದಿಗಳಿಗೆ, ಆಧಿಕ್ಯವನ್ನು ತಂದುಕೊಡಲು ರಜೋಗುಣವೂ, ಪ್ರಮಾದಗಳ ಆಧಿಕ್ಯಕ್ಕೆ ತಮೋಗುಣವೂ ನಿಮಿತ್ತಗಳಾಗುತ್ತವೆ ; ಮಧ್ಯಮ ಜೀವಪಕ್ಷದಲ್ಲಿ ರಾಜಸ ರಾಜಸ ಮತ್ತು ತಮಸ್ಸುಗಳ ಪ್ರವೇಶದಿಂದ, ಯಾವ ಗಣನೀಯವಾದ ಆಧಿಕ್ಯವೂ ಇಲ್ಲದ್ದರಿಂದ, ಅಲ್ಪಸತ್ವ ತಮಗಳ ಪ್ರವೇಶವು ಅವಿವಕ್ಷಿತವಾಗಿದೆ ; ಅಧಮಜೀವ ಪಕ್ಷದಲ್ಲಿ, ಸತ್ವಪ್ರವೇಶದಿಂದ ರಜಃ ಪದದ್ವಯಗಳ ಅಭಾವದಿಂದ, ತಮಃಪದ ಪ್ರವೇಶದಿಂದ, ಪೂರ್ವೋಕ್ತ ನ್ಯಾಯದಿಂದ ತಾಮಸಜ್ಞಾನದ ಅಲ್ಪತ್ವವೇ ಸಿದ್ಧವಾಗುತ್ತದೆ ; ಇವರಿಗೆ ತಾಮಸತ್ವೋಕ್ತಿಯು ಸಾರ್ಥಕವಾಗುತ್ತದೆ ; ರಾಜಸರಾಜಸರೆಂದು ಹೇಳಲ್ಪಟ್ಟ ಮಧ್ಯಮ ಜೀವರಲ್ಲಿ ಸತ್ಕರ್ಮ ದುಷ್ಕರ್ಮಗಳ ಒಂದಲ್ಲದಿದ್ದರೆ ಮತ್ತೊಂದರ ಆಧಿಕ್ಯವೇ ಲಭಿಸುತ್ತದೆ ; ಉಭಯಕ್ಕೂ ಸತ್ವಲಾಭದಿಂದ ಮಧ್ಯಮತ್ವವೇ ಸಿದ್ಧವಾಗುತ್ತದೆ ; ಬೇರೆ ಯಾವ ವಾದವೂ ತಾಮಸಜೀವರಲ್ಲಿ ಯುಕ್ತವಾಗುವುದಿಲ್ಲ ; ಅಧಮರಲ್ಲಿ ಜ್ಞಾನೋತ್ಕರ್ಷವು ಯುಕ್ತವಾಗುವುದಿಲ್ಲ ; ಇವರ ವಿಷಯದಲ್ಲಿ ಸತ್ವಪದದಿಂದ ಆಧಾರಾಧೇಯ ಸಂಬಂಧವನ್ನು ಮಾತ್ರ ತಿಳಿಯತಕ್ಕದ್ದು ; ರಾಜಸಪದದಿಂದ ಮಾಯಾಬಂಧವನ್ನು ಬಿಗಿಮಾಡುವ ಪ್ರವೃತ್ತಿಗಳ ಆಧಿಕ್ಯವನ್ನು ತಿಳಿಯಬೇಕು.

(iii) ಸಿದ್ಧಾರ್ಥವಾದ ವಸುದೇವ ಪುತ್ರತ್ವವನ್ನೇ ವಾಸುದೇವ ಪದದಿಂದ ಏಕೆ ತಿಳಿಯಕೂಡದು ? ಇದರ ಉತ್ತರರೂಪವಾಗಿ 'ಅಧೋಕ್ಷಜಃ ಹಿ' ಎಂದಿರುತ್ತದೆ. 'ಯಸ್ಮಾದಧಸ್ತಾದೇವ ಅಕ್ಷಜಂ ಅಕ್ಷಜನಿತಂ ಜ್ಞಾನಂ ಸೋಽಧೋಕ್ಷಜಃ' ಎಂಬ ವ್ಯುತ್ಪತ್ತಿಯಿಂದ ಮನುಷ್ಯರ ಕಣ್ಣಿಗೆ ಅದೃಶ್ಯನಾದ ನಾರಾಯಣನು ಹೇಗೆ ಮನುಷ್ಯನೊಬ್ಬನ ಪುತ್ರ

**ಇದಾನೀಮೇವ ಬಾಧ್ಯತ್ವಾಚ್ಛುಕ್ತಿರೂಪ್ಯೇಽಪಿ ಸಾ ದಶಾ ।**
**ಅತೋ ವೃದ್ಧ್ಯರ್ಥಿನಶ್ಚಿತ್ರಂ ಮೂಲನಾಶೋ ಭವೇತ್ತವ ॥ ೮೧೫ ॥**

ಇದಾನೀಂ ಏವ–ಈಗಲೇ, ಬಾಧ್ಯತ್ವಾತ್–ಬಾಧ್ಯವಾದ್ದರಿಂದ, ಸಾ ದಶಾ–ಆ ಅವಸ್ಥೆಯು (ಪ್ರಾತಿಭಾಸಿಕತ್ವವು), ಶುಕ್ತಿರೂಪ್ಯೇಽಪಿ–ಶುಕ್ತಿಯಲ್ಲಿ ತೋರುವ ರಜತದಲ್ಲಿಯೂ ಇರುವುದರಿಂದ, ಅತಃ–ಆದ್ದರಿಂದ, ವೃದ್ಧ್ಯರ್ಥಿನಃ–ಬಡ್ಡಿಯನ್ನು ಇಚ್ಛಿಸುವವ, ತವ–ನಿನಗೆ, ಮೂಲನಾಶಃ–ಮೂಲಧನದ ನಾಶದಂತೆ, ಭವೇತ್–ಆಗುತ್ತದೆ, ಚಿತ್ರಂ–ಆಶ್ಚರ್ಯವು; (ಜೀವೇಶ್ವರರ ಭೇದಕ್ಕೆ ವ್ಯಾವಹಾರಿಕತ್ವವನ್ನು ಹೇಳಲು ಹೊರಟು, ಐಕ್ಯಕ್ಕೆ ಪ್ರಾತಿಭಾಸಿಕತ್ವವನ್ನು ಒಪ್ಪಿದಂತಾಗಿ, ನಿನ್ನ ಮತಮೂಲವೇ ನಷ್ಟವಾದಂತಾಗುತ್ತದೆ).

---

ಬಾಧ್ಯವಾದ ಭೇದವನ್ನು ಬ್ರಹ್ಮಜ್ಞಾನವೇಕೆ ಬಾಧಿಸಬೇಕು ? (೮೧೪). ಬಡ್ಡಿಯ ಆಶೆಯಿಂದ ಮೂಲಧನವನ್ನೇ ಕಳೆದುಕೊಂಡವನಂತೆ, ಜೀವೇಶ್ವರ ಭೇದಕ್ಕೆ ವ್ಯಾವಹಾರಿಕತ್ವವನ್ನು ಹೇಳಲು ಹೊರಟು, ಐಕ್ಯಕ್ಕೆ ಪ್ರಾತಿಭಾಸಿಕತ್ವವನ್ನು ಒಪ್ಪಿದಂತಾಗುತ್ತದೆ–ಇದರಿಂದ ನಿನ್ನ ಮತಮೂಲವೇ ಭಗ್ನವಾಗುತ್ತದೆ (೮೧೫). ಹೀಗೆಯೇ, ವ್ಯಾವಹಾರಿಕ ಸತ್ವವೂ, ತ್ರೈಕಾಲಿಕ ನಿಷೇಧದ ಅಭಾವವೆಂದೇ ಆದರೆ, ಮಿಥ್ಯಾತ್ವವೆಂಬುದು ಪ್ರಾತಿಭಾಸಿಕವೆಂದು ಪ್ರಾಪ್ತವಾಗುತ್ತದೆ; 'ನಾಸ್ತಿ ನಾಸೀನ್ನ ಭವಿಷ್ಯತಿ ಇತ್ಯಾಕಾರಕ ಜ್ಞಾನವಿಷಯತ್ವಂ ಮಿಥ್ಯಾತ್ವಂ' ಎಂಬುದು ಅದ್ವೈತಿಗಳ ಮಿಥ್ಯಾತ್ವಪರಿಷ್ಕಾರವು ; ರಜತವು ತ್ರಿಕಾಲಗಳಲ್ಲಿಯೂ ಇಲ್ಲ; ಆದ್ದರಿಂದ ಅದು ಮಿಥ್ಯೆಯು ; ಶ್ರೀಹರಿಯ ಭಾವರೂಪ ಗುಣಗಳು ಇಲ್ಲದಂತಾಗಿ (ನಿಷೇಧಿಸಲ್ಪಟ್ಟು) ಪ್ರಾತಿಭಾಸಿಕತ್ವವು ನೈರ್ಗುಣ್ಯವೆಂದೇ (ಗುಣಶೂನ್ಯತ್ವವೆಂದೇ) ಪ್ರಾಪ್ತವಾಗುತ್ತದೆ; ಅದನ್ನೇ ವ್ಯಾವಹಾರಿಕತ್ವವೆಂದರೆ, ಘಟವುಳ್ಳ ಭೂತಲವು ಘಟರಹಿತ ಭೂತಲದ ಬಾಧವನ್ನು ಸಾಧಿಸುವುದಿಲ್ಲವೇ ? ಭಾವವಸ್ತುವು ಅಬಾಧ

---

ನಾಗುವನು ? 'ಮೇ ಮನಸಾ ವಿಧತ್ತೇ' ಎಂಬುದಕ್ಕೆ ಬೇರೆ ಅರ್ಥವನ್ನೂ ತಿಳಿಯಬಹುದು ; 'ಮಾಂ ವಿಧತ್ತೇ' ಇತ್ಯಾದಿ ವಾಕ್ಯಗಳಿಗೆ, ಶುಕರೂಪದಿಂದ (ಇದೇ ರುದ್ರದೇವನು) 'ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಇತ್ಯಾದಿ ವಿಧಿಯು ಹೇಳಲ್ಪಟ್ಟು, ವಿಷ್ಣುವೇ ಸರ್ವರಿಂದ ಸೇವ್ಯನೂ ನಮಸ್ಕಾರಾರ್ಹನೂ ಆಗಿರುವನೆಂದು, 'ವಿಕಲ್ಪಾಪೋಹ್ಯ' ಇತ್ಯಾದಿ ವಿಧಿಯೂ ಇದರಿಂದಲೇ ಉಕ್ತವಾಯಿತೆಂದೂ ತಿಳಿಯಬೇಕು, ಗುರೂಪದಿಷ್ಟವಾದುದನ್ನೂ ಗ್ರಹಿಸಿ ಪಾಲಿಸುವುದರಲ್ಲಿ ಸಮರ್ಥನಾದ್ದರಿಂದ ದಕ್ಷನೆಂಬ ನಾಮವುಳ್ಳ ನೀನು ಅದಕ್ಷನಾದೆಯಲ್ಲಾ? ಎಂಬ ಫಲಿತಾರ್ಥವೂ ಸೂಚಿತವೆಂದು ತಿಳಿಯಬಹುದು.

**ಏವಮೇವ ತ್ರಿಕಾಲೇಷು ನಿಷೇಧಾಭಾವರೂಪಿಣೀ ।**
**ಸತ್ಯತಾ ವ್ಯಾವಹಾರ್ಯಾ ಚೇನ್ಮಿಥ್ಯಾತ್ವಂ ಪ್ರಾತಿಭಾಸಿಕಂ ॥ ೮೧೬ ॥**
**ಭವೇತ್ಪೂರ್ವೋಕ್ತಮಾರ್ಗೇಣ ಗುಣಾಭಾವನಿಷೇಧಕಾಃ ।**
**ಅಭಾವಾಭಾವರೂಪತ್ವಾದ್ಭಾವರೂಪಾ ಗುಣಾಃ ಪ್ರಭೋಃ ॥ ೮೧೭ ॥**
**ವ್ಯಾವಹಾರ್ಯಾ ಯದಿ ತದಾ ನೈರ್ಗುಣ್ಯಂ ಪ್ರಾತಿಭಾಸಿಕಂ ।**
**ಭವೇದಘಟಭೂಮೇಃ ಕಿಂ ಸಘಟಾಭೂರ್ನ ಬಾಧಿಕಾ ॥ ೮೧೮ ॥**

ಈ ದೋಷವನ್ನೇ ಅನ್ಯಪ್ರಮೇಯದ್ವಯಗಳಲ್ಲಿ ಅತಿದೇಶ ಮಾಡುತ್ತಾರೆ :—

ಏವಂ ಏವ – ಇದೇ ರೀತಿಯಿಂದಲೇ, ತ್ರಿಕಾಲೇಷು – ವರ್ತಮಾನ, ಭೂತ, ಭವಿಷ್ಯತ್ಕಾಲಗಳಲ್ಲಿ, ನಿಷೇಧಾಭಾವರೂಪಿಣೀ–ಇಲ್ಲವೆಂಬ ಅಭಾವರೂಪವಾದುದೇ, ವ್ಯಾವಹಾರ್ಯಾ ಸತ್ಯತಾ–ವ್ಯಾವಹಾರಿಕಸತ್ಯವೆಂಬುದು, ಚೇತ್–ಆದರೆ, ಪ್ರಾತಿಭಾಸಿಕಂ ಮಿಥ್ಯಾತ್ವಂ – ಪ್ರಾತಿಭಾಸಿಕ ಮಿಥ್ಯಾತ್ವವೇ (ಶುಕ್ತಿರಜತದಂತೆ), ಭವೇತ್–ಆಗುತ್ತದೆ; ಪ್ರಭೋಃ–ಶ್ರೀಹರಿಯ (ಭಗವಂತನ), ಗುಣಾಃ–ಗುಣಗಳು, ಪೂರ್ವೋಕ್ತಮಾರ್ಗೇಣ–ಹಿಂದೆ ಹೇಳಿದ ರೀತಿಯಿಂದ, ಭಾವರೂಪಗುಣಾಃ–ಭಾವರೂಪದ (ಇರುವ) ಗುಣಗಳು, ವ್ಯಾವಹಾರ್ಯಾಯದಿ–ವ್ಯಾವಹಾರಿಕ ಸತ್ಯತ್ವವುಳ್ಳವೆಂದರೆ, ಭಾವನಿಷೇಧಕಾಃ–ಭಾವವನ್ನು ನಿಷೇಧಿಸುವ ( ಇಲ್ಲವೆಂದು ಹೇಳುವ ), ಅಭಾವಾಭಾವರೂಪತ್ವಾತ್ – ಅಭಾವಸ್ವರೂಪಗಳಾದ್ದರಿಂದ, ಪ್ರಾತಿಭಾಸಿಕಂ – ಪ್ರಾತಿಭಾಸಿಕವಾಗಿ (ಶುಕ್ತಿರಜತದಂತಾಗಿ), ನೈರ್ಗುಣ್ಯಂ – ನಿರ್ಗುಣತ್ವವನ್ನೇ, ಭವೇತ್ – ಹೊಂದುವುವು (ವ್ಯತ್ಯಾಸವಿಲ್ಲದಂತಾಗುತ್ತವೆ–ತ್ರಿಕಾಲದಲ್ಲಿಯೂ ಗುಣಶೂನ್ಯನೆಂದು ಹೇಳಿದಂತೆಯೇ ಆಗುತ್ತದೆ); (ಈ ವಿಷಯಕ್ಕೆ ದೃಷ್ಟಾಂತವನ್ನು ತೋರಿಸುವರು) ; ಅಘಟಭೂಮೇಃ–ಘಟರಹಿತ ಭೂಮಿಗೆ, ಸಘಟಾಭೂಃ–ಘಟವುಳ್ಳ ಭೂಮಿಯು, ಬಾಧಿಕಾ–ಬಾಧವನ್ನುಂಟುಮಾಡುವುದು, ನ ಭವೇತ್ ಕಿಂ–ಆಗುವುದಿಲ್ಲವೇನು ? (ಬಾಧಕವೇ ಆಗುತ್ತದೆ) (ಭಾವವಸ್ತುವು ಅಭಾವನಿಷೇಧಕವೆಂಬಲ್ಲಿ ಈ ದೃಷ್ಟಾಂತವು).

---

ನಿಷೇಧಕವೇ ಆಗಿರುತ್ತದೆ; ಗುಣಾಭಾವದ ನಿಷೇಧಕವೆಂದರೆ ಸಗುಣತ್ವವೇ ಪ್ರಾಪ್ತವಾಗುತ್ತದೆ; ವ್ಯಾವಹಾರಿಕವು ಸತ್ಯವೆಂದರೆ ಪ್ರಾತಿಭಾಸಿಕವು ಮಿಥ್ಯೆಯು; ಪ್ರಾತಿಭಾಸಿಕವೆಂದರೆ ನೈರ್ಗುಣ್ಯವೇ ಪ್ರಾಪ್ತವಾಗುತ್ತದೆ; ಹೀಗೆ ಈ ದೋಷವು

**ಪ್ರಾತಿಭಾಸಿಕಮಾನಾನಿ ಮಾನಾನ್ಯಾಸನ್ ಯತಸ್ತವ ।**
**ತಸ್ಮಾನ್ಮನ್ಮಾನಮಾರ್ತಾಂಡಃ ಪ್ರಲಯಾರ್ಕೋ ಭವೇದ್ದ್ವಿಷಾಂ ॥ ೭೧೯ ॥**

ತವ–ನಿನ್ನ (ಐಕ್ಯವಾದಿಯ), ಮಾನಾನಿ–ಐಕ್ಯ, ಮಿಥ್ಯಾತ್ವ ಮತ್ತು ನಿರ್ಗುಣತ್ವ ಪ್ರತಿಪಾದಕ ಪ್ರಮಾಣಗಳು, ಪ್ರಾತಿಭಾಸಿಕಮಾನಾನಿ-ಪ್ರಾತಿಭಾಸಿಕ ಐಕ್ಯಾದಿ ಪ್ರತಿಪಾದಕ ಪ್ರಮಾಣಗಳು, ಯತಃ–ಯಾವ ಕಾರಣದಿಂದ, ಆಸನ್–ಆಗಿರುವುವೋ, ತಸ್ಮಾತ್–ಆ ಕಾರಣದಿಂದ, ಮನ್ಮಾನ ಮಾರ್ತಾಂಡಃ–ನನಗೆ ಅಭಿಲಷಿತಗಳಾದ, ಭೇದ, ಸತ್ಯತ್ವ, ಸಗುಣತ್ವ ಪ್ರತಿಪಾದಕ ಪ್ರಮಾಣಗಳೆಂಬ ಸೂರ್ಯನು, ದ್ವಿಷಾಂ–ದ್ವೇಷಿಗಳಿಗೆ, ಪ್ರಲಯಾರ್ಕಃ ಭವೇತ್–ಪ್ರಲಯಕಾಲದ ಸೂರ್ಯನು ಆಗಿರುವನು.

**ಐಕ್ಯನೈರ್ಗುಣ್ಯಮಿಥ್ಯಾತ್ವಾನ್ಯಧಃಕೃತ್ಯೈವ ಯದ್ಭವಾನ್ ।**
**ಭೇದಸದ್ಗುಣಸತ್ಯತ್ವಾನ್ಯಾಲಂಬ್ಯೇಶ್ವರಪೂಜನಂ ॥ ೭೨೦ ॥**
**ಗುಣಾನುಸ್ಮರಣಂ ಶ್ರೌತಸ್ಮಾರ್ತಕರ್ಮಾಣಿ ಚಾನಿಶಂ ।**
**ಕರೋಷಿ ಕೇನ ಕಸ್ಯಾತೋ ಬಾಧೋಽನಾದೌ ಭವೇದ್ವದ ॥ ೭೨೧ ॥**

ಐಕ್ಯಾದಿಗಳಿಗೆ ಪ್ರಾಗುಕ್ತಬಾಧವು ಪರನಿಗೂ ಅನುಭವಸಿದ್ಧವೆಂದು ತೋರಿಸಲು ಹೇಳುತ್ತಾರೆ :—

---

ಅದ್ವೈತಮತಕ್ಕೆ ಅಪರಿಹಾರ್ಯವಾಗಿದೆ (೭೧೬–೭೧೮). ಐಕ್ಯ, ಮಿಥ್ಯಾತ್ವ ಮತ್ತು ನಿರ್ಗುಣತ್ವಗಳನ್ನು ಪ್ರತಿಪಾದಿಸುವುವೆಂಬ ವಾಕ್ಯಗಳೂ, ಪ್ರಾತಿಭಾಸಿಕ ಐಕ್ಯ, ಮಿಥ್ಯಾತ್ವ ನಿರ್ಗುಣತ್ವ ಪ್ರತಿಪಾದಕಗಳೇ ಆಗಿರುವುದರಿಂದ, ಐಕ್ಯಾದಿ ಪ್ರಮೇಯ ಸಾಧಕ ಪ್ರಮಾಣಗಳಿಲ್ಲದಂತೆಯೇ ಆಯಿತು ; ಭೇದಾದಿಗಳನ್ನು ಸಾಧಿಸುವ ತತ್ವವಾದಿಯ ಪ್ರಮಾಣಗಳು ಪ್ರಲಯಕಾಲದ ಸೂರ್ಯನಂತೆ ಭಗವದ್ದ್ವೇಷಿಗಳನ್ನು ದಹಿಸುತ್ತದೆ (೭೧೯). ಹೀಗೆ, ಐಕ್ಯ, ನೈರ್ಗುಣ್ಯ ಮಿಥ್ಯಾತ್ವಗಳನ್ನು ಅನಾದರಿಸಿಯೇ ಬಾಧ್ಯಗಳೆಂದೇ ತಿಳಿದು, ಭೇದ, ಸದ್ಗುಣತ್ವ, ಸತ್ಯತ್ವಗಳನ್ನೇ ಅವಲಂಬಿಸಿ, ನಿನ್ನ ಅನುಭವವನ್ನೇ ತಿಳಿದುನೋಡು ! ಭೇದ ಸಾಪೇಕ್ಷವಾದ ಈಶ್ವರ ಪೂಜೆಯನ್ನು, ಸದ್ಗುಣ ಸಾಪೇಕ್ಷವಾದ ಹರಿಗುಣ ಧ್ಯಾನವನ್ನೂ, ಸತ್ಯತ್ವ ಸಾಪೇಕ್ಷವಾದ ಶ್ರೌತಸ್ಮಾರ್ತಕರ್ಮಾನುಷ್ಠಾನವನ್ನು ನಿತ್ಯವೂ ಆಚರಿಸುವಿಯಲ್ಲವೇ ? ನಿನ್ನ ಅನುಭವವೇ, ನಿನಗೆ ಅಭಿಲಕ್ಷಿತವಾದ

ಯತ್–ಯಾವ ಕಾರಣದಿಂದ, ಐಕ್ಯನೈರ್ಗುಣ್ಯ ಮಿಥ್ಯಾತ್ವಾನಿ–ಐಕ್ಯ, ನಿರ್ಗುಣತ್ವ, ಮಿಥ್ಯಾತ್ವಗಳನ್ನು, ಅಧಃ ಕೃತ್ಯ ಏವ–(ಸಂಸಾರದಲ್ಲಿ ವ್ಯವಹಾರಕ್ಕೆ ಅನುಕೂಲಗಳಿಲ್ಲವೆಂಬ ಕಾರಣದಿಂದ) ಅನಾದರಮಾಡಿಯೇ, ಭೇದ ಸದ್ಗುಣ ಸತ್ಯತ್ವಾನಿ – ಭೇದ, ಸದ್ಗುಣತ್ವ, ಸತ್ಯತ್ವಗಳನ್ನು, ಆಲಂಬ್ಯ – ಆಶ್ರಯಿಸಿ (ಪುರಸ್ಕರಿಸಿ), ಭವಾನ್–ನೀನೂ ಸಹ, ಈಶ್ವರಪೂಜನಂ–ಭಗವಂತನ (ಭೇದ ಸಾಪೇಕ್ಷವಾದ–ಭೇದವಿಲ್ಲದೇ ಕೂಡದಿರುವ) ಪೂಜೆಯನ್ನು, ಗುಣಾನುಸ್ಮರಣಂ–ಸದ್ಗುಣ ಸಾಪೇಕ್ಷವಾದ) ಭಗವಂತನ ಗುಣಧ್ಯಾನವನ್ನು, ಶ್ರೌತಸ್ಮಾರ್ತಕರ್ಮಾಣಿ ಚ– (ಸತ್ಯತ್ವವನ್ನು ಅಪೇಕ್ಷಿಸುವ) ನಿತ್ಯನೈಮಿತ್ತಿಕ (ಶ್ರೌತಸ್ಮಾರ್ತ) ಕರ್ಮಗಳನ್ನು, ಅನಿಶಂ–ನಿತ್ಯವೂ, ಕರೋಷಿ ಚ–ಮಾಡುತ್ತೀಯೋ (ಇಲ್ಲದಿದ್ದರೆ ಇವುಗಳಿಗೆ ವ್ಯಾವಹಾರಿಕತ್ವವೇ ಯುಕ್ತವಾಗುವುದಿಲ್ಲ) ; ಅತಃ–ಈ ಕಾರಣದಿಂದ, ಕಸ್ಯ–ಯಾರಿಗೆ (ಯಾರ ಅನುಭವದಲ್ಲಿ), ಆದೌ–(ಅನಾದಿಯಾದ ಭೇದಾದಿಗಳಿಂದ) ಈಗಲೇ, ಬಾಧಃ – (ಐಕ್ಯಾದಿಗಳಿಗೆ) ಬಾಧವು, ನ – ಇರುವುದಿಲ್ಲ ? (ಬಾಧವು ಈಗಲೇ–ಬ್ರಹ್ಮಜ್ಞಾನಾನಂತರದಲ್ಲಿ ಅಲ್ಲ) ಇದ್ದೇ ಇರುತ್ತದೆ; ವದ–ಅಲ್ಲವೇ ? ನೀನೇ ಹೇಳು (ಬಾಧವಿದ್ದರೂ ಹೀಗೆ ನಡವಳಿಕೆಗಳುಳ್ಳವನಾಗುವುದು ಹೇಗೆ ಯುಕ್ತವಾದೀತು ? ಹೇಳು).

**ಚಿದೇಕತಾಂ ನ ಬಾಧೇತ ಯದ್ಯಯಂ ತರ್ಹಿ ಸಾಪ್ಯಮುಂ ।**
**ನ ಬಾಧೇತ ನ್ಯಾಯಸಾಮ್ಯಾತ್ತದ್ಭೇದೋಽಭೂದಬಾಧಿತಃ ॥ ೮೨ ॥**

ಜೀವನೇ ವಿಶಿಷ್ಟನು ; ಕೇವಲ ಚೇತನನು ಚಿತ್ ಮಾತ್ರನು ; ವಿಶಿಷ್ಟರ ಭೇದವು ವಿಶಿಷ್ಟರ ಐಕ್ಯವನ್ನೇ ಬಾಧಿಸುತ್ತದೆ ; ಚಿತ್‌ಗಳ ಐಕ್ಯವನ್ನಲ್ಲ ; ಆದ್ದರಿಂದ ಚಿತ್‌ಗಳ ಐಕ್ಯವು, ಚಿತ್ತುಗಳ ಭೇದವನ್ನು ಬಾಧಿಸುತ್ತದೆ–ವಿಶಿಷ್ಟರ ಭೇದವನ್ನಲ್ಲ; ಏವಂ ಚ ಬ್ರಹ್ಮಜ್ಞಾನದಲ್ಲಿ ಸಹ ಐಕ್ಯಬಾಧಗಳ ವಿವೇಕವನ್ನು ತಿಳಿಯಬೇಕು ; ಆದ್ದರಿಂದ ಜೀವೇಶ್ವರರ ಭೇದವು ವಜ್ರಲೇಪದಂತೆ ಸುಭದ್ರವಾಯಿತೆನ್ನುತ್ತಾರೆ:—

---

ಐಕ್ಯಾದಿಗಳ ಬಾಧವನ್ನು (ಐಕ್ಯಾದಿಬಾಧವನ್ನು ಈಗಲೇ, ಬ್ರಹ್ಮಜ್ಞಾನ ಮಾತ್ರದಿಂದ ಅಲ್ಲವಾದ್ದರಿಂದ ಆ ಪ್ರಮೇಯಗಳನ್ನು ವ್ಯಾವಹಾರಿಕವೆಂಬುದು ಹೇಗೆ ಯುಕ್ತವಾಗುತ್ತದೆ?) ಉಂಟುಮಾಡಿಲ್ಲವೇ ? ನೀನೇ ಹೇಳು (೮೦–೮೧). ವಿಶಿಷ್ಟ ಭೇದವು ಚಿದೈಕ್ಯವನ್ನು ನಿಷೇಧಿಸದಿದ್ದರೆ (ಬಾಧಿಸದಿದ್ದರೆ), ಆಗ

ಚಿದೇಕತಾಂ–ಚಿತ್ತುಗಳ ಏಕತ್ವವನ್ನು, ಅಯಂ–ವಿಶಿಷ್ಟರ ಭೇದವು (ಜೀವರ ಭೇದವು), ಯದಿ ನ ಬಾಧೇತ–ಬಾಧಿಸದಿದ್ದರೆ (ನಿಷೇಧಿಸದಿದ್ದರೆ), ತರ್ಹಿ–ಆಗ, ಸಾಪಿ – ಚಿತ್ತುಗಳ ಐಕ್ಯವು, ಅಮುಂ – ವಿಶಿಷ್ಟರ ಭೇದವನ್ನು, ನ್ಯಾಯ–ಸಾಮ್ಯಾತ್ –ಯುಕ್ತಿಯು ಸಮಾನವೇ ಆದ್ದರಿಂದ, ನ ಬಾಧ್ಯೇತ–ಬಾಧಿಸಲಾರದು ; ತತ್–ಆದ್ದರಿಂದ, ಭೇದಃ – ಜೀವೇಶಭೇದವು ಅಬಾಧಿತಃ–ಬಾಧವಿಲ್ಲದ್ದು, ಅಭೂತ್–ಆಯಿತು.[1]

**ವಿಶಿಷ್ಟೈಕ್ಯಪರಂ ವಾಕ್ಯಂ ಪ್ರಾತಿಭಾಸಿಕಮಾನತಾಂ ।**
**ಗತಂ ಚಿತೋರೇಕತಾತನ್ಮಾನಾಭಾವಾದಸತ್ಯಭೂತ್ ॥ ೮೨೩ ॥**

ಪರನಿಗೆ ಅಭಿಮತವಾದ ಚಿತ್ತುಗಳ ಐಕ್ಯವೂ ಪ್ರಮಾಣಾಭಾವದಿಂದ ಶಶವಿಷಾಣದಂತಾಯಿತೆನ್ನುತ್ತಾರೆ :—

ವಿಶಿಷ್ಟೈಕ್ಯ ಪರಂ ವಾಕ್ಯಂ–(ಚಿತ್ತುಗಳ ಐಕ್ಯವನ್ನೂ, ವಿಶಿಷ್ಟರ ಐಕ್ಯ ಸಾಧಕ (ಪ್ರತಿಪಾದಕ ವಾಕ್ಯಬಲದಿಂದಲೇ ಹೇಳಬೇಕು) ಆ ವಿಶಿಷ್ಟೈಕ್ಯ ಪ್ರತಿಪಾದಕ ವಾಕ್ಯವಾದರೋ, ಪ್ರಾತಿಭಾಸಿಕಮಾನತಾಂ – ಪ್ರಾತಿಭಾಸಿಕ ಪ್ರಮಾಣದಂತೆ (ಈಗಲೇ ಬಾಧ್ಯವಾದ ಶುಕ್ತಿರಜತದಂತೆ) ಜೀವರ ಐಕ್ಯವು ಬಾಧಿತವಾದ್ದರಿಂದ (ಪ್ರಾತಿಭಾಸಿಕ) ಪ್ರಮಾಣತ್ವವನ್ನು, ಗತಂ–ಹೊಂದಿತು ; ತತ್–ಆದ್ದರಿಂದ, ಮಾನಾಭಾವಾತ್–ಚಿತ್ತುಗಳ ಐಕ್ಯಕ್ಕೆ ಪ್ರಮಾಣವಿಲ್ಲದ್ದರಿಂದ, ಚಿತೋಃ–ಚಿತ್ತುಗಳ, ಏಕತಾ – ಐಕ್ಯವು, ಅಸತ್ಯಭೂತ್ – ಶಶವಿಷಾಣದಂತೆ ಅಸತ್ತಿನಲ್ಲಿಯೇ ಸೇರಿತು.

---

ಚಿದೈಕ್ಯವೂ, ಸಮಾನ ಯುಕ್ತಿಬಲದಿಂದ, ವಿಶಿಷ್ಟ ಭೇದವನ್ನು ಬಾಧಿಸಲಾರದು ; ಆದ್ದರಿಂದ ಭೇದವು ಅಬಾಧಿತವಾಯಿತು (೮೨೨). ಪರಾಭಿಲಷಿತವಾದ ಚಿತ್ತುಗಳ ಐಕ್ಯವೂ ಪ್ರಮಾಣವಿಲ್ಲದೇ, ಅಪ್ರಾಮಾಣಿಕವಾದ ಅಸತ್ತೇ (ಶಶವಿಷಾಣದಂತೆಯೇ) ಆಗುತ್ತದೆ ; ಏಕೆಂದರೆ, ವಿಶಿಷ್ಟದ ಐಕ್ಯವನ್ನು ಹೇಳುವ ವಾಕ್ಯವು ಪ್ರಾತಿಭಾಸಿಕತ್ವವನ್ನು ಹೊಂದಿದ್ದರಿಂದ, ಚಿತ್ತುಗಳ ಐಕ್ಯವನ್ನು ಅದೇ ವಾಕ್ಯಗಳ

---

1 ವಸ್ತುಗತ್ಯಾ ಜೀವೇಶ್ವರರೆಂಬ ವಿಶಿಷ್ಟರಲ್ಲಿ ಭೇದಗ್ರಾಹಿಯಾದ ಸಾಕ್ಷಿಯೇ ದುಃಖವನ್ನು ಅನುಭವಿಸದ ಚಿತ್ ಮಾತ್ರವು ತನ್ನಿಂದ ವಿರುದ್ಧ ಸ್ವಭಾವದ ಜೀವಭೇದವನ್ನು ಈಗಲೂ ಗ್ರಹಿಸಿಯೇ ಇರುತ್ತದೆ ; ಆದ್ದರಿಂದ ಐಕ್ಯವು ಬಾಧಿತವಾಗಿ, ಪ್ರಾತಿಭಾಸಿಕತ್ವವೂ ಪರಿಹಾರವಾಗುವುದಿಲ್ಲ.

**ಅತತ್ತ್ವಾವೇದಕಂ ವಾಕ್ಯಮುಪೇಕ್ಷ್ಯಂ ಭೇದವಾಕ್ಯವತ್ ।**
**ಕಃ ಶುಕ್ತಿರೂಪ್ಯತಾವಾಕ್ಯಮುದ್ದಿಧೀರ್ಷತಿ ಶುದ್ಧಧೀಃ ॥ ೬೨೪ ॥**

ಅತತ್ತ್ವಾವೇದಕ ಭೇದವಾಕ್ಯವನ್ನು ಅಂಗೀಕರಿಸುವಂತೆ, ಅತತ್ತ್ವಾವೇದಕ ವಾದರೂ, ಕಥಂಚಿತ್ ಪ್ರಾಮಾಣ್ಯ ರಕ್ಷಣಾರ್ಥವಾಗಿ, ಅನ್ಯರೀತಿಯಿಂದ ಯೋಜನೆಮಾಡಿಕೊಂಡು, ಐಕ್ಯಾದಿಸಾಧನೆಗೆ ಉಪಯೋಗಿಸಿಕೊಳ್ಳುವುದು ಉಚಿತವಾಗುತ್ತದೆಂಬ ವಾದವನ್ನು ನಿರಾಕರಿಸುತ್ತಾರೆ :—

ಅತತ್ತ್ವಾವೇದಕಂ—ತತ್ತ್ವವನ್ನು ಹೇಳದ, ವಾಕ್ಯಂ—ವೇದವಾಕ್ಯವನ್ನು ಭೇದ ವಾಕ್ಯವತ್ [1]—ಭೇದವಾಕ್ಯದಂತೆ, ಉಪೇಕ್ಷ್ಯ—(ಗತಿಸಾಮಾನ್ಯಾತ್ [2] ಎಂಬ ಸೂತ್ರ ನ್ಯಾಯದಂತೆ) ತತ್ತ್ವಮಸ್ಯಾದಿವಾಕ್ಯಗಳ ಪ್ರಾಮಾಣ್ಯ ರಕ್ಷಣೆಗಾಗಿ) ಉಪೇಕ್ಷಿಸಿ, ಕಃ—ಯಾವ, ಶುದ್ಧಧೀಃ—ಸದ್ಬುದ್ಧಿಯುಳ್ಳವನು, ಶುಕ್ತಿರೂಪ್ಯತಾ ವಾಕ್ಯಂ—ಪ್ರಾತಿಭಾಸಿಕ ಅರ್ಥಪ್ರತಿಪಾದಕ ವಾಕ್ಯಕ್ಕೆ ಪ್ರಾಮಾಣ್ಯವೇ ಇಲ್ಲವಾದ್ದ ರಿಂದ, ಅದನ್ನು, ಉದ್ದಿಧೀರ್ಷತಿ—ಉದಹರಿಸಿ ಅರ್ಥಾಂತರದಲ್ಲಿ ಯೋಜಿಸುವ ಪ್ರಯತ್ನವನ್ನು ಕೈಗೊಳ್ಳುವನು ?

---

ಆಧಾರದಿಂದಲೇ ಹೇಳುವೆಯಾದ್ದರಿಂದ, ಐಕ್ಯವೂ ಪ್ರಾತಿಭಾಸಿಕವೆಂದೇ (ಅಸತ್ತೆಂದೇ) ಸಿದ್ಧವಾಗುತ್ತದೆ (೬೨೩). ಅತತ್ತ್ವಾವೇದಕಗಳೆಂಬ 'ದ್ವಾ- ಸುಪರ್ಣಾದಿ' ಭೇದವಾಕ್ಯಗಳನ್ನು, ಉಪೇಕ್ಷಿಸಿ (ಲಕ್ಷಿಸದೇ), ಐಕ್ಯಸಾಧಕ ತತ್ತ್ವಮಸ್ಯಾದಿ ವಾಕ್ಯಗಳ ಪ್ರಾಮಾಣ್ಯ ರಕ್ಷಣೆಗಾಗಿ, ಅರ್ಥಾಂತರ ಯೋಜನೆ ಯಿಂದ ಉಪಯೋಗಿಸಿಕೊಳ್ಳುವುದೂ, ಉಚಿತವಾಗಬಹುದುದೆಂಬ ವಾದವೂ ಯುಕ್ತವಲ್ಲ; ಯಾವ ಶುದ್ಧಮನಸ್ಕನೂ ಈ ಯತ್ನದಲ್ಲಿ ತೊಡಗುವುದಿಲ್ಲ; ಪ್ರಾತಿಭಾಸಿಕ (ಶುಕ್ತಿ ರಜತದಂತೆ)ವಾದ ಅಸತ್ ಪ್ರತಿಪಾದಕ ವಾಕ್ಯಗಳು ಅಪ್ರಮಾಣಗಳೇ ಆಗಿವೆ ; ಅವುಗಳನ್ನು ಅರ್ಥಾಂತರದಲ್ಲಿ ಯೋಜಿಸಿಕೊಳ್ಳುವುದು

---

1 ಭೇದವಾಕ್ಯವು ಅತತ್ತ್ವಾವೇದಕವೆಂದು ಅಭ್ಯುಪಗಮ್ಯ (ಒಪ್ಪಿಕೊಂಡು ಈ ವಾದವು.

2 'ಗತಿಸಾಮಾನ್ಯಾತ್' ಎಂಬ ಬ್ರಹ್ಮ ಸೂತ್ರದ ಅರ್ಥವು ಹೀಗಿದೆ; ಗತೇಃ— ಬ್ರಹ್ಮಜ್ಞಾನಕ್ಕೆ ಸಾಮಾನ್ಯಾತ್—(ಎಲ್ಲ ವೇದ ವಾಕ್ಯಗಳು) ಏಕರೀತಿಯಾದ ಅರ್ಥವಿರುವುದ ರಿಂದ, (ಬ್ರಹ್ಮಪ್ರತಿಪಾದಕವೇ ಆದ್ದರಿಂದ).

**ನ ಚೇದ್ವೇದಪ್ರಮಾಣಂ ಚ ದೃಷ್ಟೇಽರ್ಥೇ ವ್ಯಾವಹಾರಿಕೇ ।**
**ಜೀವಬ್ರಹ್ಮಚಿತೋರೇವ ಭೇದಂ ಲಕ್ಷಣಯಾ ವದೇತ್ ॥ ೮೨೫ ॥**

ಬೇರೆ ಬಾಧಕವನ್ನು ಹೇಳುತ್ತಾರೆ :—

ನ ಚೇತ್–ವೇದವಾಕ್ಯದಲ್ಲಿ ಸರ್ವಥಾ ಅಪ್ರಾಮಾಣ್ಯವನ್ನು ಹೇಳಕೂಡ ದೆಂದರೆ, ದೃಷ್ಟೇ–ಸಿದ್ಧವಾದ, ಅರ್ಥೇ–ವಿಶಿಷ್ಟರ (ಜೀವರ) ಭೇದದಲ್ಲಿ, ವ್ಯಾವ ಹಾರಿಕೇ – ವ್ಯಾವಹಾರಿಕತ್ವವನ್ನು ಹೇಳುವ ವಾಕ್ಯದಲ್ಲಿ (ಅರ್ಥಾಂತರದಲ್ಲಿ ಯೋಜಿಸಿಕೊಳ್ಳುವ, ಅವಶ್ಯಕವು ); ಜೀವಬ್ರಹ್ಮ ಚಿತೋಃ – ಜೀವಬ್ರಹ್ಮರ ಚೇತನ ಮಾತ್ರರಲ್ಲಿ, ಭೇದಂ–ಭೇದವನ್ನು (ನ್ಯಾಯಪ್ರಾಪ್ತವಾದ ಸತ್ಯವಾದ ಭೇದವನ್ನು ), ಲಕ್ಷಣಾಯಾ–ಲಕ್ಷಣದಿಂದ, ವದೇತ್–ಹೇಳಬೇಕು (ಪ್ರಾತಿ ಭಾಸಿಕತ್ವವನ್ನು ಹೇಳುವುದೆಂಬ ಅರ್ಥವನ್ನಲ್ಲ.)

**ಅತಃ ಪುನಶ್ಚಿದೇಕತ್ವಂ ಪ್ರಾತಿಭಾಸಿಕತಾಂ ಗತಂ ।**
**ಏವಂ ಚ ಘಟ್ಟಕುಟ್ಯಾಂತೇ ಪ್ರಭಾತೋಽಭೂನ್ನ ಸಂಶಯಃ ॥೮೨೬॥**

ಅತಃ – ಈ ಕಾರಣದಿಂದ, ಚಿದೇಕತ್ವಂ – ಚಿದೈಕ್ಯವು (ವಿಶಿಷ್ಟಧರ್ಮ ಯುಕ್ತರಾದ ಜೀವೇಶ್ವರರ ಚೇತನಮಾತ್ರದ ಐಕ್ಯವು), ಪ್ರಾತಿಭಾಸಿ- ಕತಾಂ – ಪ್ರಾತಿಭಾಸಿಕತ್ವವನ್ನು, (ಶುಕ್ತಿರಜತ ಸಾದೃಶ್ಯವನ್ನು), ಪುನಃ– ಸರ್ವಜ್ಞತ್ವ ಅಲ್ಪಜ್ಞತ್ವರೂಪ ವಿರುದ್ಧ ಧರ್ಮರೂಪಯುಕ್ತಿಗಳಿಂದ, ಮತ್ತೆ,

---

ಸರಿಯಲ್ಲ (೮೨೪). ವೇದವಾಕ್ಯದ ಪ್ರಾಮಾಣ್ಯವನ್ನು ರಕ್ಷಣೆಮಾಡುವುದು ಹೀಗಲ್ಲ; ಅನುಭವ ಸಿದ್ಧವಾದ ಜೀವೇಶ್ವರರ ಭೇದ ಪ್ರತಿಪಾದಕ ವಾಕ್ಯದಲ್ಲಿ, ವ್ಯಾವಹಾರಿಕತ್ವವನ್ನು ಹೇಳಿ, ಅರ್ಥಾಂತರವನ್ನು ತಿಳಿಯಬೇಕೆಂಬುದಕ್ಕೆ ಬದಲಾಗಿ, ಜೀವಬ್ರಹ್ಮರ ಚಿತ್ತುಗಳಲ್ಲಿಯೂ ಲಕ್ಷಣಾ ವೃತ್ತಿಯಿಂದ ಭೇದವನ್ನು ಸಾಧಿಸಲುದ್ಯುಕ್ತನಾಗುವುದು ಶ್ರೇಯಸ್ಕರವು; ವ್ಯಾವಹಾರಿಕತ್ವ ಕಲ್ಪನೆಗಿಂತ ಇದೇ ಉತ್ತಮಮಾರ್ಗವು (೮೨೫). ಹಾಗೆ ಮಾಡದಿದ್ದರೆ, ದ್ವಾಸುಪರ್ಣಾ ಶ್ರುತಿಗೆ ವ್ಯಾವಹಾರಿಕತ್ವವನ್ನು (ವ್ಯಾವಹಾರಿಕ ಭೇದವನ್ನು) ಹೇಳದಿದ್ದರೆ, ಪುನಃ ಜೀವಬ್ರಹ್ಮೈಕ್ಯವು ಈ ಹಿಂದೆ ಉಪಪಾದಿಸಿದಂತೆ, ಪ್ರಾತಿಭಾಸಿಕವೆಂದು ಪ್ರಾಪ್ತವಾಗುತ್ತದೆ; ರಾತ್ರಿ ಎಲ್ಲ, ಸುಂಕದ ಕಟ್ಟೆಯನ್ನು ತಪ್ಪಿಸಲು ಸುತ್ತಿ ತಿರುಗಿ, ಪುನಃ ಬೆಳಗಾಗುವುದರಲ್ಲಿ ಅಲ್ಲಿಗೇ (ಕಟ್ಟೆಗೇ) ಬಂದು ಸೇರಿದಂತಾಗು

ಗತಂ–ಹೊಂದಿತು (ಹೊಂದಿಸಲ್ಪಡುತ್ತದೆ) ; ಐಕ್ಯವು–ಚಿದೈಕ್ಯವು ಬಾಧಿತವಾದ್ದರಿಂದ, ಪುನಃ ಎಂದು ಹೇಳಲಾಗಿದೆ) ; ಏವಂಚ–ಹೀಗೆ, ಘಟಕುಟ್ಯಾಂತೇ–ಘಟಗಳಿಗೆ ಸುಂಕವನ್ನು ಕೊಡಬೇಕಾದ ಕಟ್ಟೆಯು, (ರಾತ್ರಿಯೆಲ್ಲಾ ಅದನ್ನು ತಪ್ಪಿಸಲು ಸುತ್ತಿ), ಕಟ್ಟೆಯು ಸಿಗುವಹೊತ್ತಿಗೆ, ಪ್ರಭಾತಃ – ಪ್ರಾತಃಕಾಲವು, ಅಭೂತ್ ನ ಸಂಶಯಃ–ಆಯಿತು, ಸಂಶಯವಿಲ್ಲ (ಹೀಗಾಯಿತು, ಪುನಃ ಪ್ರಾತಿಭಾಸಿಕತ್ವದ ಪ್ರಾಪ್ತಿಯು).

**ವಸ್ತುತಸ್ತು ಚಿತೋರೇವ ವಿಶೇಷಣಬಲಾತ್ತಯೋಃ ।**
**ಭಿದಾ ಸಂಪಾದ್ಯತೇ ತೇನ ಚೋದ್ಯಸ್ಯಾವಸರೋಽಪಿ ನ ॥ ೮೨೭ ॥**

ವಿಶಿಷ್ಟಭೇದಬೋಧಕ ವಾಕ್ಯದಿಂದ ಲಕ್ಷಣಯಾ ಐಕ್ಯಭೇದವೂ ಸಿದ್ಧವಾಗುತ್ತದೆಂಬುದು ಯುಕ್ತವಲ್ಲವೆಂಬುದನ್ನು, ನಿರಾಕರಿಸಿ, ವಿಶಿಷ್ಟಬೋಧಕವಾಕ್ಯವು ಭೇದಬೋಧಕ ಸಮಯದಲ್ಲಿಯೇ, ಚೈತನ್ಯಮಾತ್ರರ ಭೇದವನ್ನೂ ತಿಳಿಸುತ್ತದೆಂದು ಹೇಳುತ್ತಾರೆ :—

ವಸ್ತುತಸ್ತು – ಯಥಾಸ್ಥಿತವಾದ ಅರ್ಥವೆಂದರೆ, ವಿಶೇಷಣ ಬಲಾತ್–ವಿಶಿಷ್ಟರ ವಿಶೇಷಣಗಳ ಬಲದಿಂದಲೇ, ತಯೋಃ ಚಿತೋಃ – ಆ ಉಭಯ ಚೇತನದ, ಭಿದಾ – ಭೇದವು, ಸಂಪಾದ್ಯತೇ – ಸ್ಪಷ್ಟವಾಗಿ ತಿಳಿಯುತ್ತದೆ ; (ಸರ್ವಜ್ಞತ್ವ, ಅಲ್ಪಜ್ಞತ್ವಾದಿ ವಿರುದ್ಧ ವಿಶೇಷಣಗಳ ಸಂಬಂಧವನ್ನು ಸ್ಪಷ್ಟವಾಗಿ ಗ್ರಹಿಸುವ ಮೊದಲೇ ಉಭಯ ಚೇತನಗಳ ಭೇದವು ಅಪೇಕ್ಷಿತವಾಗಿದೆ) (ಈ ವಿರುದ್ಧ ವಿಶೇಷಣಗಳ ಸಂಬಂಧವಾಗುವ ಮೊದಲೇ[1] ಚೇತನಗಳು ಭಿನ್ನವಾಗಿರಬೇಕಲ್ಲದೇ ಅನ್ಯಥಾ ಅನ್ಯೋನ್ಯಾಶ್ರಯ ದೋಷವು ತಗಲುತ್ತದೆ ;

---

ತ್ತದೆ; ಸಂಶಯವಿಲ್ಲ; ಪ್ರಾತಿಭಾಸಿಕವೆಂದರೆ ಶುಕ್ತಿ ರಜತದಂತೆ, ತ್ರಿಕಾಲಗಳಲ್ಲಿಯೂ ಇರದ ಅಸದ್ವಸ್ತುವೇ ಸರಿ (೮೨೬). ವಿಶಿಷ್ಟ ಭೇದಬೋಧಕವಾಕ್ಯವು, ಭೇದವನ್ನು ಹೇಳುವಾಗಲೇ (ಸರ್ವಜ್ಞತ್ವ ಅಲ್ಪಜ್ಞತ್ವಾದಿ ವಿರುದ್ಧ ವಿಶೇಷಣ

---

1 ಆಕಾಶಗತವಾದ ಭೇದವು (ಭಿನ್ನಪ್ರದೇಶಗಳುಳ್ಳದ್ದೆಂಬುದು) ಘಟಾದಿ ಉಪಾಧಿ ಸಂಬಂಧದಿಂದ ಪ್ರಕಟವಾಗುವುದಲ್ಲದೇ ಉಪಾಧಿಯಿಂದ ಇಲ್ಲದ ಭೇದವು ಹುಟ್ಟುವುದಿಲ್ಲ ; ಇದರಂತೆ, ಜೀವಾದಿ ಧರ್ಮವೆಂಬ ಉಪಾಧಿಯು ಇದ್ದ ಭೇದವನ್ನೇ ಸುವ್ಯಕ್ತಗೊಳಿಸುತ್ತದೆ ; ಆದ್ದರಿಂದ ಚೇತನಗಳ ಭೇದವು, ವಿಶಿಷ್ಟರ ಭೇದಬೋಧಕಕಾಲದಲ್ಲಿಯೇ ತಿಳಿಯಬರುತ್ತದೆ.

(ಶುದ್ಧಚಿತ್ತುಗಳಲ್ಲಿ ಇದ್ದ ಭೇದವೇ ವಿರುದ್ಧ ಧರ್ಮಸಂಬಂಧದಿಂದ ವ್ಯಕ್ತವಾಯಿತೆಂದು ಹೇಳಬೇಕಾಗುತ್ತದೆ)[1], ತೇನ–ಈ ಕಾರಣದಿಂದ, ಚೋದ್ಯಸ್ಯ–ಪ್ರಶ್ನೆಗೆ (ಸಂಶಯಕ್ಕೆ), ಅವಸರಃ ಅಪಿ ನ–ಅವಕಾಶವೂ ಇಲ್ಲ.

**ಅನ್ಯದೌಪಾಧಿಕಂ ಸರ್ವಮುಪಾಧೌ ಸತಿ ಜಾಯತೇ ।**
**ಉಪಾಧ್ಯಪಗಮೇ ಗಚ್ಛೇತ್ ಭೇದಸ್ತು ನ ತಥಾ ಕಿಲ ॥ ೮೨೮ ॥**

ಜಪಾಕುಸುಮಸನ್ನಿಧಾನದಿಂದ ಸ್ಫಟಿಕದಲ್ಲಿ ಕೆಂಪುಬಣ್ಣವು ಹುಟ್ಟಿ; ಕುಸುಮವೆಂಬ ಉಪಾಧಿಯು ನಷ್ಟವಾದಾಗ (ವಿರುದ್ಧಧರ್ಮವೆಂಬ ಉಪಾಧಿಯಿಂದ ರಕ್ತಿಮವು ತೋರಿ) ನಷ್ಟವಾಗುವಂತೆ ಏಕಾಗಬಾರದೆಂದರೆ ಹೇಳುತ್ತಾರೆ :—

ಅನ್ಯತ್–(ನಿತ್ಯವಸ್ತುವಾದ ಚೇತನಭಿನ್ನ) ಅನ್ಯವಸ್ತುವು, ಉಪಾಧೌ ಸತಿ–ಉಪಾಧಿಯಿರುತ್ತಿರಲು, ಜಾಯತೇ–(ಧರ್ಮವು) ಹುಟ್ಟುತ್ತದೆ ; ಉಪಾಧ್ಯ-ಪಗಮೇ–ಉಪಾಧಿಯು ಸರಿದುಹೋದರೆ (ಸಂಬಂಧತಪ್ಪಿದರೆ), ಗಚ್ಛೇತ್–ನಷ್ಟವಾಗುತ್ತದೆ ; ಭೇದಸ್ತು–ಭೇದವಾದರೂ, ನ ತಥಾ ಕಿಲ–ಹಾಗಲ್ಲವಷ್ಟೆ.

---

ಗಳನ್ನು ಹೇಳುವಾಗಲೇ) ಭೇದಧರ್ಮಗಳ ಸಂಬಂಧವನ್ನು ಹೊಂದುವ ಪೂರ್ವದಲ್ಲಿಯೇ ಉಭಯಚಿತ್ತುಗಳು ಭಿನ್ನವಾಗಿರಬೇಕೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ- ಇದ್ದ ಭೇದವನ್ನು, ವಿರುದ್ಧ ಧರ್ಮಗಳೆಂಬ ಉಪಾಧಿಗಳು ಸುವ್ಯಕ್ತಗೊಳಿಸುತ್ತವೆಯಲ್ಲದೇ, ಇಲ್ಲದ ಭೇದವನ್ನು ಉತ್ಪಾದಿಸುವುದಿಲ್ಲ ; ಆದ್ದರಿಂದ ಸಂಶಯನಿವಾರಣೆಗಾಗಿ ಯಾವ ಪ್ರಶ್ನೆಯನ್ನು ಕೇಳುವುದೂ ಕೂಡುವುದಿಲ್ಲ (೮೨೭). ಅನಿತ್ಯಗಳಾದ ಜಡವಸ್ತುಗಳಲ್ಲಿ, ಜಪಾಕುಸುಮ ಸನ್ನಿಧಾನದಿಂದ ಸ್ಫಟಿಕದಲ್ಲಿ ರಕ್ತಿಮಾದಂತೆ, ಅನ್ಯಧರ್ಮವೆಂಬ ಉಪಾಧಿಯಿಂದ ಭೇದವು ತೋರಬಹುದು ; ಉಪಾಧಿಯ ಅಪಸರಣದಿಂದ, ಭೇದವೂ ನಷ್ಟವಾಗುತ್ತದೆ ; ಚೇತನಭೇದವು ಹಾಗಲ್ಲ ; ಪಿಶಾಚಿಯ ಆವೇಶವು ಕಂಡರೂ, ಚೇತನನು ಪಿಶಾಚಿಯಾಗುವುದಿಲ್ಲ; ಪಿಶಾಚಗ್ರಸ್ತ ದೇಹವು ಮಾತ್ರ ಬಿಡುಗಡೆಯನ್ನು ಹೊಂದುತ್ತದಷ್ಟೆ (೮೨೮).

---

1 ವಿವಿಧ ಬಣ್ಣದ ನೂಲುಗಳಿಂದಾದ ವಸ್ತ್ರದಲ್ಲಿರುವ ಬಣ್ಣದ ವೈವಿಧ್ಯವು, ಬಣ್ಣದಿಂದ ಜನ್ಯವಲ್ಲ ; ನೂಲುಗಳಲ್ಲಿ ಮೊದಲೇ ಇದ್ದ ಭೇದವನ್ನು, ಈ ಬಣ್ಣಗಳು ವ್ಯಕ್ತಗೊಳಿಸುವಂತೆ, ಎಂಬ ದೃಷ್ಟಾಂತವನ್ನು ಇಲ್ಲಿ ಗಮನಿಸಬಹುದು.

**ಸ್ವಸಂಬಂಧ್ಯೇಕದೇಶಸ್ಯ ಸ್ವಾಸಂಬಂಧಿಪ್ರದೇಶತಃ ।**
**ಭೇದಂ ಸಕಾಲಯೇತ್ಕಿಂ ಸ್ಯಾದ್ಘಟಾಭ್ರಾಂತರ್ಘಟಾದ್ಭಿದಾ ॥ ೮೨೯ ॥**

ಸಃ–ಭೇದೋಪಾಧಿಯು, ಸ್ವಸಂಬಂಧ್ಯೇಕದೇಶಸ್ಯ ತನ್ನ (ಘಟದ) ಸಂಬಂಧವುಳ್ಳ (ಆಕಾಶದ ಏಕದೇಶಕ್ಕೆ, ಸ್ವಾಸಂಬಂಧಿ ಪ್ರದೇಶತಃ–ತನ್ನ ಸಂಬಂಧವಿಲ್ಲದ (ಘಟೋದರಸ್ಥ–ಘಟದ ಒಳಗಿನ) ಆಕಾಶದಿಂದ ಭೇದಂ–ಭೇದವನ್ನು, ಕಾಲಯೇತ್–(ಸಾಧಿಸುವುದೆಂಬುದುದು) ಜ್ಞಾಪಿಸುತ್ತದೆ; ಘಟಾತ್–ಘಟೋಪಾದಿಯಿಂದ, ಘಟಾಭ್ರಾಂತಃ–ಘಟವು ತನ್ನ ಸಂಬಂಧವಿಲ್ಲದ ಪ್ರದೇಶಾಂತರದಿಂದ ಭೇದವನ್ನು ತಿಳಿಸುವುದಲ್ಲದೆ, ಘಟದೊಳಗಿನ ಆಕಾಶದ ಅಂಶಗಳೊಳಗಿನ ಪರಸ್ಪರ ಭೇದವನ್ನಲ್ಲವೆಂಬುದನ್ನು ತಿಳಿದವನು), ಭಿದಾ ಸ್ಯಾತ್ ಕಿಂ–ಆ ಭೇದವು ಘಟೋಪಾಧಿಜನ್ಯವೆಂದು ತಿಳಿಯುವನೇ ? (ಇಲ್ಲ).

**ಅತಃ ಸ್ವತೋ ವಿಶೇಷಂ ವಾ ಭೇದಂ ವಾ ಭೇದ್ಯವಸ್ತುನಿ ।**
**ಯೋಽಪೇಕ್ಷತೇ ಸ್ವಯೋಗಾಯ ಸ್ವಯಮೇವ ಕಥಂ ಪುನಃ ।**
**ಕುರ್ಯಾದುಪಾಧಿಸ್ತೌ ಪೂರ್ವೌ ನ ಹಿ ಸ ಸ್ವಪಿತುಃ ಪಿತಾ ॥೮೩೦॥**

ಉಪಾಧಿಯ ಸಂಬಂಧ, ಅಸಂಬಂಧವು ಮೊದಲೇ ಇರುವ (ಇದ್ದ) ಭೇದವನ್ನು ಅಪೇಕ್ಷಿಸುತ್ತದೆ; ಉಪಾಧಿಯು ಭೇದಕಾರಕವಲ್ಲವೆನ್ನುತ್ತಾರೆ: —

ಅತಃ – ಆದ್ದರಿಂದ, ಸ್ವತಃ – ತಾನೇ, ವಿಶೇಷಂ ವಾ–ವಿಶೇಷವನ್ನಾಗಲಿ, ಭೇದಂ ವಾ–ಭೇದವನ್ನಾಗಲಿ, ಅಭೇದ್ಯವಸ್ತುನಿ–ಅಭಿನ್ನವಾದ ವಸ್ತುವಿನಲ್ಲಿ; ಸ್ವಯೋಗಾಯ–ತನ್ನ ಸಾಮರ್ಥ್ಯದ್ಯೋತನೆಗೆ (ತನ್ನ ಸಂಬಂಧಕ್ಕೆ) ಯಃ–ಯಾವ ಉಪಾಧಿಯು (ಅದರ ಸಂಬಂಧ ಅಸಂಬಂಧಗಳು) ಅಪೇಕ್ಷತೇ–ಅವಶ್ಯಕವಾಗಿ ಇಚ್ಛಿಸುತ್ತದೆಯೋ, ಸ್ವಯಂ ಏವ – ತಾನೇ, ಪುನಃ – ಮತ್ತೆ, ಕಥಂ–ಹೇಗೆ,

---

ಘಟವು ತನ್ನ ಸಂಬಂಧವುಳ್ಳ (ಆಕಾಶದ ಏಕದೇಶವಾದ) ಪ್ರದೇಶಕ್ಕೆ ತನ್ನ ಸಂಬಂಧವಿಲ್ಲದ ಪ್ರದೇಶದಿಂದ ಭೇದವನ್ನು ಜ್ಞಾಪಿಸುತ್ತದೆ; ಘಟವ್ಯಾಪಾರದ ಭ್ರಾಂತಿಯಿಲ್ಲದ ವಿವೇಕಿಯು (ಘಟದೊಳಗಿನ ಆಕಾಶದ ವಿವಿಧ ಅಂಶಗಳಲ್ಲಿರುವ ಭೇದವನ್ನು ತಿಳಿದವನಿಗೆ), ಆ ಭೇದವು ಘಟೋಪಾಧಿಜನ್ಯವೆಂದು ತಿಳಿಯುವನೇ? (ಇಲ್ಲ) (೮೨೯). ವಸ್ತುವಿನಲ್ಲಿ ಭೇದವನ್ನಾಗಲಿ ವಿಶೇಷವನ್ನಾಗಲಿ ಉಂಟುಮಾಡುವ (ಆಕಾಶದಲ್ಲಿ ಘಟದಂತಿರುವ) ಉಪಾಧಿಯು, ಮೊದಲೇ ಇದ್ದ

ಉಪಾಧೀ—ಈ ಉಪಾಧಿಯು, ತೌ—ಆ ಎರಡು ಪರಿಸ್ಥಿತಿಗಳನ್ನು, ಕುರ್ಯಾತ್—ಸಾಧಿಸುತ್ತದೆ ? ಹಿ—ಏಕೆಂದರೆ, ಪೂರ್ವಃ ಸಃ—ಮೊದಲಿದ್ದ (ಭೇದವು), ಸ್ವಪಿತುಃ—ನನ್ನ ತಂದೆಯ, ಪಿತಾ—ಉತ್ಪಾದಕನು (ತಂದೆಯು), ನ—ಅಲ್ಲ. (ಘಟವು ಭೇದವನ್ನು ಉತ್ಪಾದಿಸುತ್ತದೆಂದರೆ, ಭೇದವು ತನ್ನ ಜನಕನ ತಂದೆ ಎಂಬಂತೆ ಅಸಂಭವವೇ ಸರಿ).

**ವೃಕ್ಷಾಗ್ರೇ ಕಪಿಸಂಯೋಗೋ ವೃಕ್ಷಮೂಲೇ ಪರಂ ನ ಸಃ ।**
**ಭಾವಾಭಾವವಿರೋಧಸ್ಯ ನ ಚೇಚ್ಛಾಂತಿರ್ಭವಿಷ್ಯತಿ ।**
**ತತ್ಸಂಯೋಗಸ್ವಭಾವಾಚ್ಚ ಪರಿಹಾರೋ ಭವೇನ್ನ ತೇ ॥ ೬೩೧ ॥**

ಒಂದು ವೃಕ್ಷದಲ್ಲಿಯೇ ಕಪಿಸಂಬಂಧವೂ, ಅದರ ಅಭಾವವೂ ಇರಬಹುದಾದಂತೆ, ಆಕಾಶದಲ್ಲಿ ಘಟಸಂಬಂಧವೂ ಅಸಂಬಂಧವೂ ಇರುತ್ತದೆನ್ನುತ್ತಾರೆ :—

ವೃಕ್ಷಾಗ್ರೇ—ಗಿಡದ ಮೇಲ್ಭಾಗದಲ್ಲಿ, ಕಪಿಸಂಯೋಗಃ—ಕಪಿಯ ಸಂಬಂಧವೂ, ವೃಕ್ಷಮೂಲೇ ಪರಂ—ಬುಡದಲ್ಲಿ ಅದರೋ, ನ ಸಃ—ಆ ಸಂಬಂಧವಿಲ್ಲ ; ನ ಚೇತ್—ಹಾಗಿಲ್ಲದಿದ್ದರೆ, ಭಾವಾಭಾವವಿರೋಧಸ್ಯ—ಭಾವ, ಅಭಾವಗಳ ವಿರೋಧದ, ಶಾಂತಿಃ—ಪರಿಹಾರವು, ನ ಭವಿಷ್ಯತಿ—ಇರುವುದಿಲ್ಲ ; ತತ್—ಆದ್ದರಿಂದ, ಸಂಯೋಗಸ್ವಭಾವಾತ್ ಚ—ಸಂಬಂಧವೆಂಬುದರ ಸ್ವಭಾವದಿಂದಲೇ, ತೇ—ನಿನಗೆ, ಪರಿಹಾರಃ—ಪರಿಹಾರವು, ನ ಭವೇತ್—ಉಂಟಾಗುವುದಿಲ್ಲ.

---

ಭೇದಾವಧಿಯನ್ನೇ ಅಪೇಕ್ಷಿಸುತ್ತದೆ ; ಉಪಾಧಿಯು ಭೇದಜ್ಞಾಪಕವಲ್ಲದೇ, ಭೇದಕಾರಕವಲ್ಲ ; ತನ್ನ ಸಂಯೋಗದಿಂದ ಭೇದವನ್ನು ಪ್ರಕಟಗೊಳಿಸುವ ಉಪಾಧಿಯು ತಾನೇ ಭೇದದ ಉತ್ಪಾದಕವೆಂದರೆ, ತನ್ನ ತಂದೆಗೆ ತಾನೇ ತಂದೆಯಾದಂತೆ ಆಗುತ್ತದೆ ; ಭೇದವಿಲ್ಲದೇ ಪ್ರಕಟಗೊಳಿಸುವುದೆಂಬ ಕಾರ್ಯವನ್ನೇ ಉಪಾಧಿಯು ನಿರ್ವಹಿಸುವಂತಿಲ್ಲ ; ಈ ಕಾರ್ಯದಿಂದ ಭೇದವು ತಿಳಿಯುಬರುವುದರಿಂದ ಭೇದಜನಕವೆಂದರೆ, ತನ್ನ ಉತ್ಪಾದಕನಿಗೆ ತಾನೇ ಜನಕನೆಂದಂತೆಯೇ ಆಗುತ್ತದೆ (೬೩೦). ಹೀಗೆಯೇ, ವೃಕ್ಷದ ಮೇಲ್ಭಾಗದಲ್ಲಿ ವೃಕ್ಷಕ್ಕೆ ಕಪಿಸಂಬಂಧವಿದ್ದು, ಬುಡದಲ್ಲಿಲ್ಲದಿರಬಹುದು, ಅಲ್ಲವೇ ? ಈರೀತಿ, ಉಪಾಧಿಯ ಸಂಬಂಧ, ಅಸಂಬಂಧವೆಂಬ ವಿರೋಧವನ್ನು ಪರಿಹರಿಸಿಕೊಳ್ಳಬೇಕು ; ಇಲ್ಲದಿದ್ದರೆ

**ಏವಂ ಚ ಭೇದಮಾತ್ರಸ್ಯೋಪಾಧೇರ್ಜನ್ಮ ನ ಯುಕ್ತಿಮತ್ ।**
**ತದ್ವಿದ್ಯಮಾನಭೇದಸ್ಯ ಜ್ಞಾಪಕೋಽಸೌ ನ ಕಾರಕಃ ॥ ೮೩೨ ॥**

ಏವಂಚ–ಹೀಗೆಯೇ, ಉಪಾಧೇಃ–ಉಪಾಧಿಯಿಂದ, ಭೇದಮಾತ್ರಸ್ಯ ಕೇವಲ ಭೇದಮಾತ್ರದ, ಜನ್ಮ–ಉತ್ಪತ್ತಿಯು, ನ ಯುಕ್ತಿಮತ್ – ಯುಕ್ತಿಯುಕ್ತವಾಗುವುದಿಲ್ಲ (ಉಪಪನ್ನವಲ್ಲ) ; ತತ್–ಆದ್ದರಿಂದ, ಅಸೌ–ಭೇದೋಪಾಧಿಯು, ವಿದ್ಯಮಾನಭೇದಸ್ಯ–ಮೊದಲಿಂದ ಇರುವ ಭೇದದ, ಜ್ಞಾಪಕಃ–ಜ್ಞಾಪಕವು (ತಿಳಿಸುವುದು), ನ ಕಾರಕಃ–ಭೇದವನ್ನುಂಟುಮಾಡುವುದಲ್ಲ.

**ಅತೋ ವಿಶಿಷ್ಟಭೇದಶ್ಚ ಸ್ವತಶ್ಚಿದ್ಭೇದಮಾಕ್ಷಿಪೇತ್ ।**
**ದ್ವಿರ್ಬದ್ಧಭೇದಾದ್ಬಾಧಸ್ತಚ್ಚಿದೈಕ್ಯಸ್ಯೈವ ಘಾತಕಃ ॥ ೮೩೩ ॥**

ಅತಃ–ಆದ್ದರಿಂದ, ಸ್ವತಃ–ಸ್ವಭಾವದಿಂದಲೇ, ದ್ವಿರ್ಬದ್ಧಭೇದಾತ್–ವಿಶಿಷ್ಟ ಸ್ವಭಾವಗತ ಚಿದ್ಭೇದದಿಂದ (ಪೂರ್ವೋಕ್ತಲಕ್ಷಣ ಬಲದಿಂದ ಪ್ರಾಪ್ತವಾದ ಚಿದ್ಭೇದದಿಂದಲೂ) ವಿಶಿಷ್ಟಭೇದಃ–ವಿಶಿಷ್ಟಭೇದವು, (ಸ್ವತಃ), ಚಿದ್ಭೇದವನ್ನು ಆಕ್ಷಿಪೇತ್–ವಿರೋಧಿಸಿದರೂ, ಬಾಧಃ–ಬಾಧವು, ತತ್–ಆದ್ದರಿಂದ (ದ್ವಿವಿಧ ಪ್ರಮಾಣ ಸಿದ್ಧವಾದ್ದರಿಂದ), ಚಿದೈಕ್ಯಸ್ಯ-ಚಿದೈಕ್ಯದ, ಘಾತಕಃ ಏವ–ನಾಶವನ್ನೇ ಮಾಡುತ್ತದೆ).

**ತದ್ಯಾಮಿಕಾನಾಂ ಸದಸಿ ಕಿಂ ಸ್ಯಾತ್ತಸ್ಕರಕೈತವೈಃ ।**
**ಉಕ್ತಿವ್ಯತ್ಯಾಸೇಽಪಿ ಕುರ್ಯುಃ ಶೌರ್ಯಸ್ಯ ಸ್ಥೈರ್ಯಮೇವ ತೇ**
**॥ ೮೩೪ ॥**

ಲೋಕರೀತಿಯಿಂದ ಪರನನ್ನು ಅಪಹಾಸಮಾಡುತ್ತಾರೆ :—

ತತ್–ಆದ್ದರಿಂದ, ಯಾಮಿಕಾನಾಂ–ರಾತ್ರಿ ಕಾವಲುಗಾರರ, ಸದಸಿ–ಗುಂಪಿನಲ್ಲಿ (ಸಮೂಹದಲ್ಲಿ), ತಸ್ಕರಕೈತವೈಃ–ಕಳ್ಳರ ಕಪಟಗಳಿಂದ (ವಂಚನೆ

ಈ ವಿರೋಧದ ಶಾಂತಿಯೆಂಬುದುಸಾಧ್ಯವಿಲ್ಲ (೮೩೧). ಹೀಗೆ ಉಪಾಧಿಯು ಭೇದಜನಕವೆಂಬುದು ಉಪಪನ್ನವಾಗುವುದಿಲ್ಲ ; ಉಪಾಧಿಯು ಭೇದಜ್ಞಾಪಕವಲ್ಲದೇ ಭೇದಕಾರಕವಲ್ಲ (೮೩೨). ವಿಶಿಷ್ಟದ (ಜೀವನ) ಭೇದವು ಸ್ವಯಂ ಚಿದೈಕ್ಯವನ್ನು ಆಕ್ಷೇಪಿಸಿದರೂ, ಎರಡೂ ವಿಧ ಪ್ರಮಾಣಗಳಿಂದ ಬಾಧವು ಸಿದ್ಧವಾದ್ದರಿಂದ, ಚಿದೈಕ್ಯದ ಘಾತಕವೇ ಆಗುತ್ತದೆ (೮೩೩). ಕಳ್ಳತನಮಾಡಿದ ಕಳ್ಳರ ವಂಚನೆಯ ನುಡಿಗಳು ಯಾಮಿಕರಿಗೆ (ಕಳ್ಳರನ್ನು ಪತ್ತೆಮಾಡುವ ಅಧಿಕಾರಿ

ಗಳಿಂದ), ಕಿಂ ಸ್ಯಾತ್–ಏನಾಗುತ್ತದೆ? (ಏನನ್ನೂ ಸಾಧಿಸಲಾರವು); ಉಕ್ತಿ ವ್ಯತ್ಯಾಸೇಪಿ–ನುಡಿಯಭೇದವಿದ್ದರೂ, ತೇ–ನಿನ್ನ, ಚೌರ್ಯಸ್ಯ – ವಂಚನೆಯ, ಸ್ಥೈರ್ಯಂ ಏವ–ದಾರ್ಢ್ಯವನ್ನೇ, ಕುರ್ಯುಃ–ಮಾಡುತ್ತವೆ; (ವ್ಯಾವಹಾರಿಕ, ಪ್ರಾತಿಭಾಸಿಕವೆಂಬ ಭಿನ್ನಶಬ್ದಗಳ ಪ್ರಯೋಗದಿಂದ ಯಾವ ಫಲವನ್ನೂ ಸಾಧಿಸಲಾರನು; ಐಕ್ಯಮಿಥ್ಯಾತ್ವಗಳು ತಮ್ಮ ನಿಜಸ್ವರೂಪವನ್ನು – ಅಸತ್ಯತೆಯನ್ನು ಮುಚ್ಚಿಡಲಾರವು).

**ಪರೇSವ್ಯಯೇ ಸರ್ವ ಏಕೀಭವಂತೀತಿ ಚ ಯಾ ಶ್ರುತಿಃ ।**
**ಸಾ ಚ ಗೋಷ್ಠೇ ಗಾವ ಏಕೀಭವಂತೀತ್ಯಾದಿ ವಾಕ್ಯವತ್ ।**
**ಮುಕ್ತಾನಾಮೇಕತಾಮಾಹ ಗವಾಮಿವ ಪರಸ್ಪರಂ ॥ ೮೩೫ ॥**

'ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇವ್ಯಯೇ ಸರ್ವ ಏಕೀಭವಂತಿ' ಎಂಬ, ಐಕ್ಯ ಸಾಧಕವೆಂಬ ಪರಾಭಿಮತ ವೇದವಾಕ್ಯದ ಅರ್ಥವನ್ನು ಸ್ಪಷ್ಟಗೊಳಿಸುತ್ತಾರೆ :—

ಪರೇ ಅವ್ಯಯೇ–ನಿತ್ಯನಿರ್ವಿಕಾರನಾದ ಪರಮಾತ್ಮನಲ್ಲಿ, ಸರ್ವೇ–ಎಲ್ಲ ಜೀವರೂ, ಏಕೀಭವಂತಿ–ಒಂದಾಗುತ್ತಾರೆ, ಇತಿ ಚ ಶ್ರುತಿಃ–ಎಂಬ ಶ್ರುತಿಯು (ಇದೆ; ಆದರೆ) ಸಾ ಚ–ಆ ವಾಕ್ಯವಾದರೂ, ಗೋಷ್ಠೇ–ಗೋಶಾಲೆಯಲ್ಲಿ, ಗಾವಃ–ಗೋವುಗಳು, ಏಕೀ ಭವಂತಿ–ಒಂದೆಡೆಯಲ್ಲಿ ಸೇರುತ್ತವೆ, ಇತ್ಯಾದಿ ವಾಕ್ಯವತ್–ಎಂಬ ಮುಂತಾದ ವಾಕ್ಯಗಳಂತೆ, ಮುಕ್ತಾನಾಂ–ಮುಕ್ತಜೀವರಿಗೆ, ಪರಸ್ಪರಂ–ಅನ್ಯೋನ್ಯವಾಗಿ, ಗವಾಂ ಇವ–(ಗೋಶಾಲೆಯಲ್ಲಿ ಗೋವುಗಳಂತೆ, ಏಕತಾಂ–ಏಕತ್ವವನ್ನು (ಒಂದು ಸ್ಥಲದಲ್ಲಿ ಸೇರುವಿಕೆಯನ್ನು), ಆಹ–ಹೇಳಿತು.

---

ಗಳಾದ, ರಾತ್ರೆ ಕಾವಲುಗಾರರ ಅಧಿಕಾರಿಗಳಿಗೆ) ಯಾವ ವಂಚನೆಯನ್ನೂ ಸಾಧಿಸದೇ ಚೌರ್ಯವನ್ನೇ ಸ್ಥಿರಪಡಿಸುವಂತೆ, ಪರನ, ವ್ಯಾವಹಾರಿಕ, ಪ್ರಾತಿಭಾಸಿಕಾದಿ ಭಿನ್ನನುಡಿಗಳು, ಆತನ ವಂಚನೆಯನ್ನೇ ಸಾಧಿಸುತ್ತವೆ; ನಿಜವಾದ ಸತ್ಯತ್ವವನ್ನು ಮರೆಮಾಚಲಾರವು (೮೩೪). 'ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇSವ್ಯಯೇ ಸರ್ವ ಏಕೀಭವಂತಿ' ಎಂಬ ವಾಕ್ಯವು ಮುಕ್ತಜೀವರೆಲ್ಲರೂ ಪರಬ್ರಹ್ಮನಿಂದ ಐಕ್ಯವನ್ನು ಹೊಂದುವರೆಂದು ಶ್ರುತಿಯು ಸ್ಪಷ್ಟವಾಗಿ ಹೇಳುತ್ತಿರಲು, 'ವಂಚನೆ ಎಲ್ಲಿದೆ? ಎನ್ನಬೇಡಿರಿ', ಎಂಬುದೂ ಯುಕ್ತವಲ್ಲ;

**ಆಧಾರಂ ಗೋಷ್ಠವದ್ಬ್ರಹ್ಮ ಪರಂ ಸರ್ವೋತ್ತಮತ್ವತಃ ।**
**ಪೂರ್ಣತ್ವತೋ ವಾ ಮಹಿಮವ್ಯಯಸ್ಯಾಭಾವತೋಽವ್ಯಯಂ ॥**
॥ ೬೩೬ ॥

**ಅನುಶಾಸ್ತಿ ನ ಚೇಚ್ಚ್ವಿಸ್ತತ್ತ್ವಂ ಹಿನಸ್ತೀತಿ ಮತಿರ್ಮಮ ।**
**ಅಭೂತತದ್ಭಾವವಾದೀ ಭೂತತದ್ಭಾವವಾದಿನಂ ॥ ೬೩೭ ॥**

ಗೋಷ್ಠವತ್ – ಗೋಷ್ಠದಂತೆ, ಬ್ರಹ್ಮಪರಂ – ಪರಬ್ರಹ್ಮನು, ಆಧಾರಂ – (ಮುಕ್ತರೆಂಬ) ಗೋವುಗಳಿಗೆ ಆಶ್ರಯನು ; [1] ಸರ್ವೋತ್ತಮತ್ವತಃ–ಸರ್ವೋತ್ತಮನಾದ್ದರಿಂದಲೂ, ಪೂರ್ಣತ್ವತಃ ವಾ–ಪೂರ್ಣತ್ವವಿದ್ದ ಕಾರಣದಿಂದಲೂ, ಮಹಿಮವ್ಯಯಸ್ಯ–(ತನ್ನ) ಮಹಿಮೆಯ ವ್ಯಯದ (ನಾಶದ, ಕೊರತೆಯ), ಅಭಾವತಃ–ಅಭಾವದಿಂದ (ಇಲ್ಲದ ಕಾರಣದಿಂದ), ಅವ್ಯಯಂ–ಅವ್ಯಯನೆಂದು ಕರೆಸಲ್ಪಡುವನೆಂದು, ಅನುಶಾಸ್ತಿ–ವಿಧಿಸುತ್ತದೆ ; ನ ಚೇತ್–ಹಾಗಲ್ಲದಿದ್ದರೆ, (ಸ್ಥಾನೈಕ್ಯವನ್ನು ಹೇಳದಿದ್ದರೆ), ಚ್ವಿಃ – ಏಕೀ ಭವಂತಿ ಎಂಬಲ್ಲಿರುವ ಚ್ವಿಃ ಎಂಬ ಪ್ರತ್ಯಯವು, ( ಅಭೂತಭಾವಾರ್ಥಕ ಚ್ವಿ ಪ್ರತ್ಯಯವು ), ಅಭೂತತದ್ಭಾವವಾದೀ–ಹಿಂದಿಲ್ಲದ ಏಕೀಭಾವವನ್ನು–ವೈಕುಂಠದಲ್ಲಿ ಏಕತ್ರ ಸೇರುವಿಕೆಯನ್ನು ಹೇಳುವುದಲ್ಲದೇ(ಸಂಸಾರ ದಶಾದಲ್ಲಿಯೂ ಇರುವುದೆಂದು ಅಂಗೀಕೃತವಾದ ಜೀವಬ್ರಹ್ಮೈಕ್ಯದ ಪ್ರತಿಪಾದನ ಪರವಾಗುವಂತಿಲ್ಲ), ಭೂತತದ್ಭಾವವಾದಿನಂ–ಮೊದಲೇ ಇದ್ದ ಬ್ರಹ್ಮಭಾವವನ್ನು ಹೇಳುವ ವಾದಿಯನ್ನು, ಹಿನಸ್ತಿ–ಕೆಡಿಸುತ್ತದೆ (ವಾದವನ್ನು ಭಂಗಗೊಳಿಸುತ್ತದೆ), ಇತಿ–ಎಂದು ಮಮ ಮತಿಃ–ನನ್ನ ನಿಶ್ಚಯವು.

---

ಗೋವುಗಳು ಗೋಶಾಲೆಯಲ್ಲಿ ಎಲ್ಲವೂ ಏಕತ್ರ ಸೇರುವಂತೆ, ಮುಕ್ತರೆಲ್ಲರೂ ಪರಸ್ಪರ ಪರಬ್ರಹ್ಮನಲ್ಲಿ ಸೇರುತ್ತಾರೆಂಬ ಅರ್ಥವನ್ನು ಈ ಶ್ರುತಿಯು ಹೇಳುತ್ತದೆ ; ಅವ್ಯಯನೂ ಸರ್ವೋತ್ತಮನೂ ಆದ ಪರಮಾತ್ಮನಲ್ಲಿ (ಸ್ಥಾನೈಕ್ಯವನ್ನು) ಸೇರುತ್ತಾರೆಂದೇ ಅರ್ಥವು (೬೩೫). ಸರ್ವೋತ್ತಮನೂ ಪೂರ್ಣನೂ ಆದ್ದರಿಂದ ಪರಬ್ರಹ್ಮನು ಗೋಷ್ಠದಂತೆ ಮುಕ್ತರಿಗೆ ಆಶ್ರಯಸ್ಥಾನನಾಗಿರುವನು ; ಸರ್ವೋತ್ತಮತ್ವಾದಿ ಮಹಿಮೆಗಳಿಗೆ ನಾಶ (ಕೊರತೆ–ಹೀನತೆ) ಇಲ್ಲದ್ದರಿಂದ ಆತನು 'ಅವ್ಯಯ'ನು ; ಹೀಗೆಂದು ಪ್ರಸಕ್ತ ಶ್ರುತಿಯು ವಿಧಿಸುತ್ತದೆ ; ಹೀಗಲ್ಲ

[1] ' ಪರೇ ಅವ್ಯಯೇ ' ಎಂದು ಸಪ್ತಮೀ ವಿಭಕ್ತಿ ಬಲದಿಂದ ಆಧಾರತ್ವವು ಸಿದ್ಧವಾಗುತ್ತದೆ.

**ಕಾಲಾನಾಂ ಕರ್ಮಣಾಂ ಚೈವ ಜಡಾನಾಂ ಕಥಮೇಕತಾ ।**
**ಪರೇಣೈಕೀಭವಂತೀತಿ ಪ್ರಯೋಗಶ್ಚ ಭವೇತ್ತದಾ ।**
**ಸಪ್ತಮೀಯಂ ಭವದ್ಗ್ರಂಥಸ್ಯಾಷ್ಟಮೀಂ ಕುರುತೇ ಸದಾ ॥ ೮೩೮ ॥**

ಕಲಾನಾಂ–'ಗತಾಃ ಕಲಾ ಪಂಚದಶ' ಎಂಬಲ್ಲಿ ಉಕ್ತವಾದ ಕಲೆಗಳಿಗೂ, ಕರ್ಮಣಾಂ–'ಕರ್ಮಾಣಿ ಸರ್ವೇ' ಎಂಬಲ್ಲಿ ಹೇಳಲಾದ ಕರ್ಮಗಳಿಗೂ, ಜಡಾನಾಂ ಚ ಏವ–ಈ ಉಭಯ (ಕಲೆ, ಕರ್ಮಗಳಿಗೆ) ಜಡಗಳಿಗೂ, ಕಥಂ–ಹೇಗೆ, ಏಕತಾ–ಐಕ್ಯವು, ಪರೇಣ–ಪರಬ್ರಹ್ಮನಿಂದ, ಏಕೀಭವಂತಿ–ಐಕ್ಯವನ್ನು ಹೊಂದುತ್ತವೆ, ಇತಿ ಪ್ರಯೋಗಃ–ಎಂಬ ಪ್ರಯೋಗವು, ಭವೇತ್–ಸಂಭಾವ್ಯವಾಗುತ್ತದೆ? (ಯುಕ್ತವಲ್ಲ–ಆದ್ದರಿಂದ ಬ್ರಹ್ಮನಿಂದ ಜಡಗಳಿಗೆ ಐಕ್ಯವು ಯುಕ್ತವಲ್ಲ (ಅವು ಬ್ರಹ್ಮಸ್ವರೂಪಗಳೇ ಎಂದು ಈ ಪ್ರಕರಣದಲ್ಲಿ ಎಲ್ಲಿಯೂ ಉಕ್ತವಾಗಿಲ್ಲ) ; ತದಾ–ಆಗ (ಹಾಗೆ ಅವುಗಳ ಐಕ್ಯವನ್ನು ಹೇಳಿದರೆ), ಇಯಂ ಸಪ್ತಮೀ–'ಪರೇಽವ್ಯಯೇ' ಎಂಬಲ್ಲಿರುವ ಸಪ್ತಮೀ (ವಿಭಕ್ತಿಯು), ಭಗವದ್ಗ್ರಂಥಸ್ಯ–ನಿನ್ನ ಅದ್ವೈತಶಾಸ್ತ್ರ ಗ್ರಂಥಕ್ಕೆ, ಸದಾ–ನಿತ್ಯದಲ್ಲಿ, ಅಷ್ಟಮೀಂ–ಅಷ್ಟಮೀ (ಅನಧ್ಯಯನ ತಿಥಿಯನ್ನಾಗಿ) (ಅಧ್ಯಯನಯೋಗ್ಯವಲ್ಲದ್ದನ್ನಾಗಿ, ನಿತ್ಯವೂ ಅಷ್ಟಮೀ ಇದ್ದಂತೆ ಭಾವಿಸಿ ಅಭ್ಯಾಸ ಮಾಡದಿರಬೇಕೆಂದು), ಕುರುತೇ–ಮಾಡುತ್ತದೆ.

---

ದಿದ್ದರೆ, 'ಏಕೀಭವಂತಿ' ಎಂಬಲ್ಲಿರುವ ಚ್ವಿಃ ಎಂಬ ಪ್ರತ್ಯಯವು, ಸದಾ ಅಭೂತ ಭಾವಾರ್ಥ–ಹಿಂದಿಲ್ಲದ್ದು ಆಗುವುದೆಂಬ ಅರ್ಥವುಳ್ಳದ್ದು, ಬಾಧಿಸುತ್ತದೆ; ಸಂಸಾರ ದಶಾದಲ್ಲಿಯೇ ಇದ್ದಿತೆಂಬ ಜೀವ ಬ್ರಹ್ಮೈಕ್ಯವು ಪುನಹ ಉಂಟಾಗುವುದೆಂಬುದು ಕೂಡುವುದಿಲ್ಲ–ಅದು ತನಗೆ ತಾನೇ ಅಪ್ರಕಟವಾಗಿರುವುದೆಂಬುದು ಯುಕ್ತವಾಗುವುದಿಲ್ಲ; ಈ ಚ್ವಿ ಪ್ರತ್ಯಯವು, ಮೊದಲಿರದ ವೈಕುಂಠ ಸ್ಥಾನವಾಸವು, ಮುಕ್ತರಿಗೆ ದೊರೆಯಿತೆಂಬ ಅರ್ಥವನ್ನೇ ತಿಳಿಸುತ್ತದೆ; ಮೊದಲಿಗೇ ಬ್ರಹ್ಮೈಕ್ಯವು ಇದ್ದಿತೆಂದು ಹೇಳುವ ವಾದಿಯನ್ನು ಈ ಚ್ವಿ ಪ್ರತ್ಯಯವು ಭಂಗಗೊಳಿಸುತ್ತದೆಂದು ನನ್ನ ನಿಶ್ಚಿತಾಭಿಪ್ರಾಯವಾಗಿದೆ (೮೩೬–೮೩೭). 'ಗತಾಃ ಕಲಾಃ' ಎಂಬಲ್ಲಿ ಉಕ್ತವಾದ ಕಲೆಗಳಿಗೂ, 'ಕರ್ಮಾಣಿ ಸರ್ವೇ' ಎಂಬಲ್ಲಿ ಹೇಳಲಾದ ಕರ್ಮಗಳೂ ಜಡಗಳಾಗಿವೆ; ಇವುಗಳಿಗೆ ಪರಬ್ರಹ್ಮನಿಂದ ಐಕ್ಯವು ಹೇಗೆ ಯುಕ್ತವಾಗುತ್ತದೆ? ಈ ಪ್ರಯೋಗವು ಅಸಂಗತವಾಗುತ್ತದೆ; ಮತ್ತು 'ಪರೇಽವ್ಯಯೇ' ಎಂಬಲ್ಲಿರುವ ಸಪ್ತಮೀ ವಿಭಕ್ತಿಯು (ಆಶ್ರಯ ಸ್ಥಾನವನ್ನು ಹೇಳುವುದಾಗಿದ್ದು), ನಿನ್ನ (ಪರನ)

*

**ವಕ್ತಿ ಕಾರಣಮಾತ್ರಸ್ಯ ಸತ್ಯತಾಂ ಮೃತ್ತಿಕಾಶ್ರುತಿಃ ।**
**ಕಾರ್ಯಮಾತ್ರಸ್ಯ ಸದ್ಭಾವಂ ವಕ್ತಿ ಕಾರ್ಷ್ಣಾಯಸಶ್ರುತಿಃ ॥ ೮೩೯ ॥**

ವಾಚಾರಂಭಣ ಶ್ರುತಿಯಿಂದ ಸತ್ಯತ್ವಸಾಧನ ಪ್ರಕಾರವನ್ನು ಹೇಳುತ್ತಾರೆ:—

ಮೃತ್ತಿಕಾಶ್ರುತಿಃ – 'ಯಥಾ ಸೌಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್ ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ' ಎಂಬ ಶ್ರುತಿಯು[1] ಕಾರಣಮಾತ್ರಸ್ಯ–ಉಪಾದಾನ ಕಾರಣ ಸಮುದಾಯದ, ಸತ್ಯತಾಂ–ಸತ್ಯತ್ವವನ್ನು, ವಕ್ತಿ–ಹೇಳುತ್ತದೆ (ಪ್ರತಿಪಾದಿಸುತ್ತದೆ); (ಅಕಾರಣನೆಂದು ಪರನಿಂದ ಅಭಿಮತನಾದ ಬ್ರಹ್ಮ ಚಿನ್ಮಾತ್ರನನ್ನಲ್ಲ); ಕಾರ್ಯಮಾತ್ರಸ್ಯ–ಕಾರ್ಯಮಾತ್ರವಾದ 'ನಖನಿಕೃಂತನ'ವೆಂಬ ಉಕ್ಕಿನ (ಉಪಲಕ್ಷಣದಿಂದ ಸಕಲ ಕಾರ್ಯದ) ಸರ್ವಥಾ ಅಕಾರ್ಯನಾದ ಬ್ರಹ್ಮ ಚಿನ್ಮಾತ್ರನನ್ನಲ್ಲ), 'ಸದ್ಭಾವಂ–ಸತ್ಯತ್ವವನ್ನು, ಕಾರ್ಷ್ಣಾಯಸಶ್ರುತಿಃ–'ಯಥಾ ಸೌಮ್ಯೈಕೇನ ನಖನಿಕೃಂತನೇನ ಸರ್ವಂ ಕಾರ್ಷ್ಣಾಯಸಂ ಜ್ಞಾತಂ ಸ್ಯಾತ್ । ವಾಚಾರಂಭಣಂ ವಿಕಾರೋ ನಾಮಧೇಯಂ ಕಾರ್ಷ್ಣಾಯಸಂ ।' ಎಂಬ ಶ್ರುತಿವಾಕ್ಯವು,[2] ವಕ್ತಿ–ಹೇಳುತ್ತದೆ.

---

ಶಾಸ್ತ್ರ ಗ್ರಂಥಗಳ ಅಭ್ಯಾಸವನ್ನು ನಿಷೇಧಿಸುವ, ಅನಧ್ಯಯನವಾದ ಅಷ್ಟಮೀ ತಿಥಿಯನ್ನಾಗಿ ಮಾಡುತ್ತದೆ (೮೩೮). ವಾಚಾರಂಭಣ ಶ್ರುತಿಯು ಪ್ರಪಂಚ

---

[1] ಮೃತ್ತಿಕಾಶ್ರುತ್ಯರ್ಥವು ಹೀಗಿದೆ; (ಶ್ರುತಿವಾಕ್ಯಕ್ಕೆ ಅರ್ಥಭಾಗವನ್ನು ನೋಡಿರಿ). ಸೌಮ್ಯ–ಹೇ ವಿನೀತನೇ, ಸೋಮಪಾನಯೋಗ್ಯ! ಏಕೇನ ಮೃತ್ಪಿಂಡೇನ–ಒಂದು ಮಣ್ಣುಂಡೆಯಿಂದ, ಮೃಣ್ಮಯಂ–ಸರ್ವಂ–ಮಣ್ಣಿನಿಂದ ನಿರ್ಮಿತವಾದುದೆಲ್ಲವೂ, ಯಥಾ–ಹೇಗೆ, ವಿಜ್ಞಾತಂ ಸ್ಯಾತ್–ತಿಳಿದಂತಾಗುವುದೋ, ವಾಚಾರಂಭಣಂ–ನಾಮರೂಪಾತ್ಮಕವಾದ (ವಾಗಿಂದ್ರಿಯದಿಂದ ಹೇಳಲಾಗುವ), ನಾಮಧೇಯಂ–ನಾಮವು, ವಿಕಾರಂ–ವಿಕಾರವುಳ್ಳದ್ದಾದರೂ, ಮೃತ್ತಿಕೇತ್ಯೇವ–ಮೃತ್ತಿಕೆಯಂತೆಯೇ, ಸತ್ಯಂ–ಸತ್ಯವಾದುದು.

[2] ಕಾರ್ಷ್ಣಾಯಸ ಶ್ರುತ್ಯರ್ಥದ ವಿವರಣೆಯು ಹೀಗಿದೆ (ಶ್ರುತಿವಾಕ್ಯವು ಅರ್ಥದಲ್ಲಿರುವುದನ್ನು ನೋಡಿರಿ): ಸರ್ವಂ–ಎಲ್ಲ, ಕಾರ್ಷ್ಣಾಯಸಂ–ಉಕ್ಕಿನಿಂದ ತಯಾರಿಸಲ್ಪಟ್ಟಿದ್ದೆಲ್ಲವೂ, (ಕಾರ್ಯವೆಲ್ಲವೂ) ಕಾರ್ಷ್ಣಾಯಸಂ ಏವ ಸತ್ಯಂ–ಸತ್ಯವಾದುದೇ (ನಖನಿಕೃಂತನದಂತೆಯೇ, ಸರ್ವಕಾರ್ಯ ಸಮೂಹವೂ ಸತ್ಯವೇ).

**ಉಪಾದಾನಸ್ಯ ಸತ್ಯತ್ವೇ ಕಾರ್ಯಸತ್ತ್ವಮಭೂದ್ಬಲಾತ್ ।**
**ಉಪಾದೇಯಸ್ಯ ಸತ್ಯತ್ವೇ ತತ್ಸತ್ತ್ವಂ ಚ ಭವೇದ್ಬಲಾತ್ ।**
**ಅತೋ ದ್ವಿರ್ಬದ್ಧಸತ್ಯತ್ವಂ ಕೋ ವಾ ಮೋಚಯಿತುಂ ಕ್ಷಮಃ**
॥ ೮೪೦ ॥

ಕಾರ್ಯಕಾರಣ ಸತ್ಯತ್ವವನ್ನು ಹೇಳಿ, ಅರ್ಥಾತ್ ಪ್ರಾಪ್ತವಾದ ಕಾರ್ಯ ಕಾರಣಾತ್ಮಕ ಪ್ರಪಂಚದ ಸತ್ಯತ್ವವೇ ಸಿದ್ಧವಾಗುವುದೆನ್ನುತ್ತಾರೆ :—

• ಉಪಾದಾನಸ್ಯ–ಉಪಾದಾನದ, ಸತ್ಯತ್ವೇ–ಸತ್ಯತ್ವವಿದ್ದಲ್ಲಿ, ಬಲಾತ್–ಅನ್ಯಮಾರ್ಗವಿಲ್ಲದೇ, ಕಾರ್ಯಸತ್ವಂ–ಕಾರ್ಯದ ಸತ್ಯತ್ವವೂ ಅಭೂತ್–ಆಯಿತು (ಸಿದ್ಧವೇ ಆಗುತ್ತದೆ) ; ಉಪಾದೇಯಸ್ಯ–ಕಾರ್ಯದ, ಸತ್ಯತ್ವೇ–ಸತ್ಯತ್ವವಿರಲು, ಬಲಾತ್–ಬಲಾತ್ಕಾರದಿಂದ, ತತ್ಸತ್ವಂ–ಉಪಾದಾನದ ಸತ್ವವೂ (ಉಪಾದಾನ, ಉಪಾದೇಯಗಳ ಅಭಿನ್ನತ್ವವಿದ್ದರೆ, ಒಂದು ಸತ್ಯವಾದರೆ ಮತ್ತೊಂದರ ಸತ್ಯತ್ವವೂ ಅವಶ್ಯಕವೇ ಆದ್ದರಿಂದ) ಭವೇತ್–ಆಗುತ್ತದೆ ; ಅತಃ–ಆದ್ದರಿಂದ, ದ್ವಿರ್ಬದ್ಧ ಸತ್ಯತ್ವಂ–ವಾಕ್ಯ ಮತ್ತು ಅರ್ಥಗಳಿಂದ ಸಹ ಪ್ರಾಪ್ತವಾದ ಸತ್ಯತ್ವವನ್ನು, ಕೋವಾ – ಯಾವನೊಬ್ಬನು, ಮೋಚಯಿತುಂ – ತ್ಯಜಿಸಲು, ಕ್ಷಮಃ – ಶಕ್ತನಾಗುವನು ? (ಎರಡು ಪ್ರಕಾರದಿಂದಲೂ ಸತ್ಯವಾದುದನ್ನು ತಿರಸ್ಕರಿಸಲು ಶಕ್ಯವಿಲ್ಲ), (ಬ್ರಹ್ಮಸತ್ಯತ್ವ ಮತ್ತು ಜಗನ್ಮಿಥ್ಯಾತ್ವಗಳೆರಡೂ ವಾಚಾರಂಭಣ ಶ್ರುತಿಯಿಂದ ಸಿದ್ಧವಾಗುವುದಿಲ್ಲ) ; (ವಿಷ್ಣುತತ್ವನಿರ್ಣಯಾದಿ ವಾಕ್ಯಾದಿಗಳಿಂದ ವಿವರವನ್ನು ತಿಳಿಯಬೇಕು).

---

ಸತ್ಯತ್ವವನ್ನೇ ಸಾಧಿಸುತ್ತದೆ-ವ್ಯಾವಹಾರಿಕತ್ವ (ಮಿಥ್ಯಾತ್ವ) ವನ್ನಲ್ಲ; ಈ ಶ್ರುತಿಯು ಉಪಾದಾನ ಕಾರಣ ಸಮುದಾಯದ ಸತ್ಯತ್ವವನ್ನು, 'ಯಥಾಸೌಮ್ಯೈಕೇನ ಮೃತ್ಪಿಂಡೇನ' ಇತ್ಯಾದಿ ವಾಕ್ಯದಿಂದ, ಸಾಧಿಸುತ್ತದೆ; 'ಯಥಾಸೌಮ್ಯೈಕೇನ ನಖನಿಕೃಂತನೇನ' ಇತ್ಯಾದಿ ವಾಕ್ಯದಿಂದ ಕಾರ್ಯರೂಪ (ಉಪಾದೇಯ) ಪ್ರಪಂಚದ ಸತ್ಯತ್ವವನ್ನು ಹೇಳುತ್ತದೆ; ಅಕಾರಣನೂ, ಅಕಾರ್ಯನೂ ಎಂದು ಪರನಿಗೆ ಅಭಿಮತನಾದ ಬ್ರಹ್ಮಚಿನ್ಮಾತ್ರನನ್ನಲ್ಲ (೮೩೯). ಉಪಾದಾನವು ಸತ್ಯವಾದರೆ, ಕಾರ್ಯವೂ ಸತ್ಯವೆಂದೇ ಅವಶ್ಯವಾಗಿ ಸಿದ್ಧಿಸುತ್ತದೆ ; ಉಪಾದೇಯವು ಸತ್ಯವೆಂದರೆ ಉಪಾದಾನವೂ ಸತ್ಯವೆಂದೇ ಸಿದ್ಧವಾಗುತ್ತದೆ; ಹೀಗೆ ಎರಡು ವಿಧದಿಂದ ಸತ್ಯತ್ವ ಬದ್ಧವಾದ, ಪ್ರಪಂಚ ಸತ್ಯತ್ವವನ್ನು ತ್ಯಜಿಸಲು ಯಾವ

**ವಾಚಾರಂಭಣವಾಕ್ ತಸ್ಮಾದ್ಯಥಾಪೂರ್ವಮಿತಿ ಶ್ರುತೇಃ ।**
**ನಾಮರೂಪಾತ್ಮಕಸ್ಯಾಸ್ಯ ವಕ್ತ್ಯೇಕವಿಧತಾಂ ಸದಾ ।**
**ಉಕ್ತಂ ವಿಕಾರಸತ್ಯತ್ವಂ ತ್ವದರ್ಥಂ ಬಾಧತೇ ಯತಃ ॥ ೮೪೧ ॥**

ಶ್ರುತಿಯ ಪದಶಕ್ತಿಯಿಂದಲೇ ಲಭಿಸುವ ಮೂಲಗ್ರಂಥಾನುಕೂಲವಾದ ಬೇರೆ ಅರ್ಥವನ್ನು ಹೇಳುತ್ತಾರೆ :—

ವಾಚಾರಂಭಣವಾಕ್-ವಾಚಾರಂಭಣ ಶ್ರುತಿಯು (ವಾಚಾ-ವಾಗಿಂದ್ರಿಯದಿಂದ, ಆರಂಭಣಂ ಯಸ್ಯತತ್-ಹೇಳಲಾಗುವುದರ, ನಾಮಧೇಯಂ-ಘಟವೃತ್ತಿಕಾದಿ ನಾಮಧೇಯವು,) ಯಥಾಪೂರ್ವಂ-'ಧಾತಾ ಯಥಾಪೂರ್ವಂ', ಇತಿ ಶ್ರುತೇಃ-ಎಂಬ ಶ್ರುತಿಯಿಂದ, ನಾಮರೂಪಾತ್ಮಕಸ್ಯ ಅಸ್ಯ-ನಾಮರೂಪಾತ್ಮಕವಾದ (ಕಾರ್ಯಕಾರಣಾತ್ಮಕವಾದ ನಾಮರೂಪಾತ್ಮಕವೇ ಆದ) ಈ ಪ್ರಪಂಚದ, ಸದಾ-ಸರ್ವದಾ, ಏಕವಿಧತಾಂ-ಒಂದೇ ವಿಧವಾಗಿರುವಿಕೆಯನ್ನು, ವಕ್ತಿ-ಹೇಳುತ್ತದೆ (ಈ ಅರ್ಥವು ಶ್ರೌತಪದ ಲಭ್ಯವೇ ಆಗಿದೆ), ಯತಃ-ಯಾವ ಕಾರಣದಿಂದ, ತ್ವದರ್ಥಂ-(ಜಗತ್ತು ಮಿಥ್ಯೆಯೆಂಬರ್ಥವನ್ನು) ನಿನ್ನ ಅರ್ಥವನ್ನು ಬಾಧತೇ-ಬಾಧಿಸುತ್ತದೆಯೋ ; ವಿಕಾರಸತ್ಯತ್ವಂ-ವಿಕಾರದ (ಜಗತ್ತಿನ) ಸತ್ಯತ್ವವು, ಉಕ್ತಂ - ಹೇಳಲಾಗಿದೆಯೋ, ತಸ್ಮಾತ್-ಆದ್ದರಿಂದ, ವಕ್ತಿ-ಈ ಅರ್ಥವು ಶ್ರೌತಪದ ಲಭ್ಯವೇ ಆಗುತ್ತದೆ).

**ಅಕ್ಲೀಬೇನ ಸಹೋಕ್ತೌ ಚ ಕ್ಲೀಬೋಽಸೌ ಶಿಷ್ಯತೇ ಕಿಲ ।**
**ಶಿಷ್ಯಮಾಣಸ್ಯ ತಸ್ಯೈಕವದ್ಭಾವೋಽಪ್ಯುಚಿತಃ ಕಿಲ ॥ ೮೪೨ ॥**

ಈ ಶ್ರುತ್ಯರ್ಥವು ಹೇಗೆ ಲಭಿಸುವುದೆಂಬುದನ್ನು ಶಂಕಿಸಿ, ಅಲ್ಲಿ ಅಡಕವಾದ ವ್ಯಾಕರಣಾಂಶವನ್ನು ಸ್ಪಷ್ಟಗೊಳಿಸುತ್ತಾರೆ :—

---

ವಿವೇಕಿಗೆ ಶಕ್ಯವಾಗುತ್ತದೆ? (ಇಲ್ಲ) (೮೪೦). 'ಧಾತಾ ಯಥಾಪೂರ್ವಮಕಲ್ಪಯತ್' ಎಂಬ ಶ್ರುತಿಯೊಂದಿಗೆ ವಾಚಾರಂಭಣಶ್ರುತಿಯೂ, ನಾಮರೂಪಾತ್ಮಕವಾದ, ಈ ಜಗತ್ತಿಗೆ ಸದಾ ಏಕ ವಿಧತ್ವವನ್ನು ಸಾಧಿಸಿಕೊಡುತ್ತದೆ ; ವಿಕಾರ ಸತ್ಯತ್ವವನ್ನು ಹೇಳುವುದರಿಂದ, (ಮೃಣ್ಮಯಕ್ಕೂ ಸತ್ಯವನ್ನೇ ಹೇಳುವುದರಿಂದ) ನಿನ್ನ ಅರ್ಥವು (ಮಿಥ್ಯಾತ್ವಕಥನವು) ಬಾಧಿತವಾಗುತ್ತದೆ (೮೪೧). 'ನಪುಂಸಕೇನೈಕವಚನಂ-' ಇತ್ಯಾದಿ ಸೂತ್ರ ಸೂಚಿತವಾದ ನಪುಂಸಕ ಪದವು

ಅಕ್ಲೀಬೇನ–ನಪುಂಸಕವಲ್ಲದ (ಸ್ತ್ರೀಲಿಂಗ, ಪುಲ್ಲಿಂಗಾಂತ) ಪದದೊಡನೆ, ಸಹೋಕ್ತೌ–ಕೂಡಿಸಿ ಹೇಳಲ್ಪಟ್ಟರೆ, (ಸ್ತ್ರೀಲಿಂಗ, ಪುಲ್ಲಿಂಗ, ನಪುಂಸಕಪದಗಳೊಂದಿಗೆ ಒಂದೇ ವಾಕ್ಯದಲ್ಲಿ ಸಹಪಾಠವಿದ್ದರೆ), ಕ್ಲೀಬಃ ಅಸೌ–ಈ ನಪುಂಸಕ ಪದವೇ, ಶಿಷ್ಯತೇ–ಉಳಿಯುತ್ತದೆ ; ಕಿಲ–ಈ ಪ್ರಸಿದ್ಧಿಯಿದೆಯಷ್ಟೆ; ಶಿಷ್ಯಮಾಣಸ್ಯ ತಸ್ಯ–ಉಳಿಯುವ ಆ ಶಬ್ದದ (ಪದದ), ಏಕವದ್ಭಾವಃ–ಏಕವಚನಾಂತದಲ್ಲಿರುವಿಕೆಯು, ಅಪಿ–ಸಹ, ಉಚಿತಃ–ಯೋಗ್ಯವೇ ಆಗುತ್ತದೆ ; ('ಮೃತ್ತಿಕೇತ್ಯೇವ ಸತ್ಯಂ' ಎಂಬಲ್ಲಿ, ಮೃತ್ತಿಕಾದಿ ತ್ರಿಲಿಂಗಾಂತವಿಶೇಷಣ ಪದಗಳಿಂದ ಹೇಳಲಾದ್ದರ ಪರಾಮರ್ಶೆಯಲ್ಲಿ, ನಪುಂಸಕಾಂತ, ಸತ್ಯಂ ಎಂಬ ಏಕವಚನವೇ ಅವಶಿಷ್ಟವಾಗುವುದು, 'ನಪುಂಸಕೇನೈಕವಚನಂ ಅನ್ಯತರಸ್ಯಾಂ' ಎಂಬ ಸೂತ್ರದಂತೆ, (ಅಥವಾ ಬಹುವಚನಾಂತ ನಪುಂಸಕ ಪದವೂ) ಉಚಿತವೇ ಆಗುತ್ತದೆ ; ಎಂಬ ವಿಶೇಷವು 'ಕಿಲ' ಶಬ್ದದಿಂದ ಸೂಚಿತವಾಗಿದೆ.

**ಮೃಜ್ಞಾನೇ ಸರ್ವಮೃತ್ಕಾರ್ಯಜ್ಞಾನಂ ಸರ್ವತ್ರ ಸರ್ವದಾ ।**
**ನಾಮಾದ್ಯವ್ಯತ್ಯಯೇ ಸತ್ಯೇವ ಸ್ಯಾದಿತ್ಯಾಹ ತಂ ಚ ವಾಕ್ ॥ ೮೪೩ ॥**

ಶ್ರುತಿಯು ನಾಮರೂಪಗಳ ವ್ಯತ್ಯಾಸರಾಹಿತ್ಯವನ್ನು ಏಕೆ ಹೇಳುತ್ತದೆಂಬುದನ್ನು ಸಕಾರಣವಾಗಿ ನಿರೂಪಿಸುತ್ತಾರೆ :—

ಮೃಜ್ಞಾನೇ–ಮೃತ್ತಿನ ಜ್ಞಾನವಿದ್ದಲ್ಲಿ, ಸರ್ವಮೃತ್ಕಾರ್ಯಜ್ಞಾನಂ–ಮಣ್ಣಿನ ಕಾರ್ಯವಾದ ಸಕಲವಸ್ತುಗಳ ಜ್ಞಾನವು, ನಾಮಾದ್ಯವ್ಯತ್ಯಯೇ ಸತಿ ಏವ–ನಾಮಾದಿಗಳ ವ್ಯತ್ಯಾಸವಿಲ್ಲದಿದ್ದರೆ ಮಾತ್ರವೇ, ಸರ್ವತ್ರ – ಎಲ್ಲೆಲ್ಲಿಯೂ, ಸರ್ವದಾ – ಸರ್ವಕಾಲಗಳಲ್ಲಿಯೂ (ಭಿನ್ನಕಲ್ಪಗಳ ಘಟಾದಿಗಳ ಆಕಾರದಲ್ಲಿ

---

ಏಕವಚನಾಂತವಾಗಿ ಉಳಿದಿದೆ; ಮೃತ್ತಿಕಾದಿ ವಿವಿಧ ಲಿಂಗಾಂತವಾದ ಪದಗಳು ಏಕವಾಕ್ಯದಲ್ಲಿ ಸಹಪಠಿತವಾದಾಗ ಕಡೆಯಲ್ಲಿ ನಪುಂಸಕಾಂತ ಏಕವಚನವೇ ನಿಲ್ಲುತ್ತದೆ – ಬಹುವಚನವಾದರೂ ಇರಬಹುದೆಂದು ಸೂತ್ರವು ಹೇಳುತ್ತದೆ ; ಆದ್ದರಿಂದ 'ಮೃತ್ತಿಕೇತ್ಯೇವ ಸತ್ಯಂ' ಎಂಬುದು ಸಾಧುವಾಗಿದೆ; ಸ್ತ್ರೀಲಿಂಗ, ಪುಲ್ಲಿಂಗಾಂತ ಪದಗಳನ್ನು ನಪುಂಸಕಾಂತ ಪದದೊಂದಿಗೆ ಕೂಡಿಸಿ ಹೇಳಿದಾಗ ಕೊನೆಯಲ್ಲಿ ಅವಶಿಷ್ಟವಾಗುವುದು ನಪುಂಸಕಾಂತ ಪದವೇ ಆಗಿರುತ್ತದೆ–ಬೇರೆ ಲಿಂಗಾಂತಪದದಿಂದಲ್ಲ (೮೪೨). ಮೃತ್ತಿಕೆಯ ಜ್ಞಾನವಿದ್ದರೆ, ಮೃಣ್ಮಯವಾದ

ವ್ಯತ್ಯಾಸವಿದ್ದರೂ), ಸ್ಯಾತ್–ಆಗುತ್ತದೆಂದು, (ಸಾದೃಶ್ಯದಿಂದ; ಏಕ ವಿಜ್ಞಾನ ದಿಂದ ಸರ್ವವಿಜ್ಞಾನವೂ, ನಾಮರೂಪಗಳಲ್ಲಿ ವ್ಯತ್ಯಾಸವಿಲ್ಲದಿದ್ದರೆ ಮಾತ್ರ ಆಗು ತ್ತದೆಂದು), ವಾಕ್–ವಾಚಾರಂಭಣ ಶ್ರುತಿವಾಕ್ಯವು, ತಂ ಚ–ಆಹ–ಅದನ್ನೇ (ವ್ಯತ್ಯಾಸವಿಲ್ಲದಂತೆ) ಹೇಳಿರುತ್ತದೆ.

**ವ್ಯತ್ಯಾಸಾಭಾವತಃ ಸ್ವೋಕ್ತಸತ್ಯತ್ವಸ್ಥಾಪನಾಯ ಚ ।**
**ಮಹಾವಾಕ್ಯೋಕ್ತತತ್ವೇಽಸ್ಮಿನ್ ವ್ಯಾವಹಾರಿಕತಾ ಚ ನ ॥ ೮೪೪ ॥**

ಸತ್ಯಪದಕ್ಕೆ ವ್ಯಾವಹಾರಿಕತ್ವವನ್ನು ನಿವಾರಿಸುತ್ತಾರೆ :—

ವ್ಯತ್ಯಾಸಾಭಾವತಃ – (ನಾಮರೂಪಗಳಲ್ಲಿ) ವ್ಯತ್ಯಾಸವಿಲ್ಲದಿರುವುದ ರಿಂದಲೂ, ಚ–ಹಾಗೂ, ಸ್ವೋಕ್ತಸತ್ಯತ್ವಸ್ಥಾಪನಾಯ–ತನ್ನಿಂದಲೇ ಉಕ್ತವಾದ ಸತ್ಯತ್ವವನ್ನು ಸ್ಥಾಪನೆಮಾಡಲಿಕ್ಕೂ (ವ್ಯತ್ಯಾಸವಿಲ್ಲದಂತೆ ಶ್ರುತಿಯು ನಿರೂಪಿಸಿರು ತ್ತದೆ); ಚ–ಆದ್ದರಿಂದಲೇ, ಮಹಾವಾಕ್ಯೋಕ್ತತತ್ವೇ ಅಸ್ಮಿನ್–ಮಹಾವಾಕ್ಯದಲ್ಲಿ ಹೇಳಲಾದ ಈ ತತ್ವದಲ್ಲಿ ವ್ಯಾವಹಾರಿಕತಾ – ವ್ಯಾವಹಾರಿಕತ್ವವೂ, ನ – ಇರುವುದಿಲ್ಲ.

**ಏವಕಾರೋಽಕಾರಣಸ್ಯಾಽಕಾರ್ಯಸ್ಯ ಚ ನ ಸತ್ಯತಾ ।**
**ಇತ್ಯಾಹ ತೇನ ಸತ್ತಾಯಾಸ್ತ್ರೈವಿಧ್ಯಂ ಪ್ರತ್ಯಷಿಧ್ಯತ ॥ ೮೪೫ ॥**

ವಾಚಾರಂಭಣಶ್ರುತಿವಾಕ್ಯದಲ್ಲಿರುವ ಏವಕಾರವು ದೇಹಲೀದೀಪನ್ಯಾಯ ದಿಂದ ಪೂರ್ವೋತ್ತರಗಳೆರಡಕ್ಕೂ ಸಂಬಂಧಿಸುತ್ತದೆ; 'ಇತ್ಯೇವ ಸತ್ಯಂ ನಾನ್ಯತ್'–ಎಂಬುದರಿಂದ ಪರನು ಹೇಳುವಂತೆ ಸತ್ಯತ್ವವಲ್ಲವೆಂಬ ಅರ್ಥವೂ ಸಿದ್ಧವಾಗುತ್ತದೆನ್ನುತ್ತಾರೆ :—

---

ಸರ್ವಕಾರ್ಯಗಳ ಜ್ಞಾನವು, ಸರ್ವದಾ ಸರ್ವತ್ರ ಸಾಧ್ಯವಿರುತ್ತದೆ; ನಾಮ ರೂಪಗಳಲ್ಲಿ ವ್ಯತ್ಯಾಸವಿಲ್ಲದಿದ್ದರೆ ಮಾತ್ರ, ಸಾದೃಶ್ಯದಿಂದ ಶಕ್ಯವಾಗುತ್ತದೆಂದೇ ಶ್ರುತಿಯು ನಾಮರೂಪಗಳ ಸಾದೃಶ್ಯವನ್ನು ಬಿಡದೇ ಹೇಳುತ್ತದೆ; ಏಕ ವಿಜ್ಞಾನ ದಿಂದ ಸರ್ವವಿಜ್ಞಾನವೆಂಬ ತತ್ವವು ಯುಕ್ತವೂ ಆಗಿದೆ (೮೪೩). ವ್ಯತ್ಯಾಸ ವಿಲ್ಲದ್ದರಿಂದಲೂ, ತನ್ನಿಂದಲೇ ಉಕ್ತವಾದ ಸತ್ಯತ್ವ ಸ್ಥಾಪನೆಯಾಗಿಯೂ, ಶ್ರುತಿಯು ನಾಮರೂಪಗಳ ಸಾದೃಶ್ಯವನ್ನು ವ್ಯತ್ಯಾಸವಿಲ್ಲದಂತೆ ಹೇಳಿರುತ್ತದೆ; ಆದ್ದರಿಂದ ಇಲ್ಲಿ ಹೇಳಿರುವ ಸತ್ಯತ್ವದಲ್ಲಿ ವ್ಯಾವಹಾರಿಕತ್ವವೂ ಇಲ್ಲವೆಂದು ನಿಶ್ಚಿತ ವಾಗುತ್ತದೆ (೮೪೪). 'ಮೃತ್ತಿಕೇತ್ಯೇವ ಸತ್ಯಂ' ಎಂಬಲ್ಲಿರುವ ಏವಕಾರದಿಂದ,

ಏವಕಾರಃ – ಶ್ರುತಿಯಲ್ಲಿರುವ ಏವಕಾರವು, ಅಕಾರಣಸ್ಯ – ಅಕಾರಣದ, ಅಕಾರ್ಯಸ್ಯ ಚ–ಅಕಾರ್ಯದ, ಸತ್ಯತಾ–(ಪರನು ಹೇಳುವ) ಸತ್ಯತ್ವವು, ನ–ಇರುವುದಿಲ್ಲ ; (ಎಂದರೆ ಉಪಾದಾನ, ಉಪಾದೇಯಗಳಿಗೆ) ವ್ಯಾವಹಾರಿಕ ಅಥವಾ ಪ್ರಾತಿಭಾಸಿಕ ಸತ್ಯತ್ವವಿಲ್ಲ–ಪರಮಸತ್ಯವೇ ಆಗಿವೆ), ಇತಿ ಆಹ–ಎಂದು ಹೇಳಿತು ; ಸತ್ತಾಯಾಃ–ಸತ್ಯತ್ವದ, ತ್ರೈವಿಧ್ಯಂ–ತ್ರಿವಿಧ ಸತ್ಯ ಎಂಬುದನ್ನು, ಪ್ರತ್ಯಷಿಧ್ಯತ–ನಿಷೇಧಿಸುತ್ತದೆ (ನಿಷೇಧಿಸಿತು).

**ಯನ್ನಾಮರೂಪಯೋಃಶ್ಚಾನ್ಯಥಾತ್ವಂ ನ ಸ ಕದಾನ್ಯಥಾ ।**
**ಕಾರ್ಯಕಾರಣರೂಪಂ ಚ ನಾಮರೂಪಾತ್ಮಕಂ ಜಗತ್ ।**
**ದ್ವೇಧಾ ನಿರ್ದಿಶ್ಯ ತತ್ಸತ್ತ್ವಮಪಿ ವಕ್ತಿ ಸಯುಕ್ತಿಕಂ ॥ ೮೪೬ ॥**

ಹಾಗೆಂದರೆ, (ಬ್ರಹ್ಮನು ಜಗತ್ತಿಗೆ) ಕಾರಣನೂ (ಉಪಾದಾನನೂ) ಅಲ್ಲ, ಕಾರ್ಯನೂ ಅಲ್ಲವೆಂಬುದರ ಈ ಪರಿಸ್ಥಿತಿಯು ಬರುವುದೆಂದರೆ, ಬ್ರಹ್ಮನಲ್ಲಿ ಮತ್ತು ಜಗತ್ತಿನಲ್ಲಿ ಸಹ ಸತ್ತೆಯ ತ್ರೈವಿಧ್ಯವಾಗಲಿ ಎಂದರೆ, ಈ ಹಿಂದೆ ನಿರಾಕರಿಸಿರುವ ಈ ಪ್ರಕ್ರಿಯೆಯನ್ನು ಈಗ ಶ್ರುತಿಮರ್ಯಾದಾನುಸಾರವಾಗಿ ದೂಷಿಸುತ್ತಾರೆ :—

ಯತ್–ಯಾವ ಕಾರಣದಿಂದ, ನಾಮರೂಪಯೋಃ–ನಾಮರೂಪಗಳ, ಅನ್ಯಥಾತ್ವಂ–ವೈಪರೀತ್ಯವನ್ನು (ನಾಮರೂಪಾತ್ಮಕ ಜಗತ್ತಿನ ಸ್ವರೂಪವು ಬೇರೆ ರೀತಿಯಲ್ಲವೆಂದು), ನ–ನಕಾರದಿಂದ ಪ್ರತಿಪಾದಿಸಿ, ಸಃ–ಅದು, ಕದಾ–ಯಾವಾಗ, ಅನ್ಯಥಾ–ಬೇರೆಯು (ಮಿಥ್ಯಾಭೂತವಾದುದು) (ಯಾವಾಗಲೂ ಅಲ್ಲವೆಂದು ಹೇಳಿ), ಕಾರ್ಯಕಾರಣ ರೂಪಂ–ಕಾರ್ಯಕಾರಣ ರೂಪದ, ನಾಮರೂಪಾತ್ಮಕಂ–ನಾಮರೂಪಗಳುಳ್ಳ, ಜಗತ್–ಜಗತ್ತನ್ನು, ದ್ವೇಧಾ – ಎರಡು ಪ್ರಕಾರದಿಂದ, ನಿರ್ದಿಶ್ಯ–ಹೇಳಿ, ತತ್ಸತ್ತ್ವಂ ಅಪಿ–ಅದರ ಸತ್ಯತ್ವವನ್ನಾದರೋ, ಸಯುಕ್ತಿಕಂ–

---

ಅಕಾರಣ ಅಕಾರ್ಯಗಳೆರಡಕ್ಕೂ ಪರಮ ಸತ್ಯವೇ, ಬೇರೆ ಯಾವ ವಿಧದ ಸತ್ಯತ್ವವೂ ಇಲ್ಲವೆಂದೂ ಸಾಧಿಸುತ್ತದೆ ; ಪರನು ಹೇಳುವ ಸತ್ತಾತ್ರೈವಿಧ್ಯವನ್ನು (ಪ್ರಾತಿಭಾಸಿಕ, ವ್ಯಾವಹಾರಿಕ, ಪಾರಮಾರ್ಥಿಕವೆಂಬ ತ್ರಿವಿಧ ಸತ್ಯವನ್ನು) ಇದರಿಂದ ನಿಷೇಧಿಸಿದರೆ – ಸತ್ಯವೆಂದರೆ ಪರಮ ಸತ್ಯವೇ ಆಗಿದೆ (೮೪೫). ಉಪಾದಾನ, ಉಪಾದೇಯಗಳಿಗೆ ಸತ್ಯತ್ವವಲ್ಲದೇ (ಅನ್ಯಥಾತ್ವವು) ಇಲ್ಲವೆಂದು ನಿಷೇಧಿಸಿದ ಶ್ರುತಿಯು, ಬ್ರಹ್ಮನಿಗೆ ಹೇಗೆ ಅನ್ಯವಿಧ ಸತ್ಯತ್ವವನ್ನು ಹೇಳುತ್ತದೆ ?

ಯುಕ್ತಿಸಹಿತವಾಗಿ, (ನಾಮಾಭಿಧೇಯವುಳ್ಳದ್ದೂ, ರೂಪತ್ವವುಳ್ಳದ್ದೂ, ಕಾರಣ ರೂಪವುಳ್ಳದ್ದೂ, ಕಾರ್ಯರೂಪವುಳ್ಳದ್ದೂ ಎಂಬ ನಾಲ್ಕು ವಿಧ ಯುಕ್ತಿಗಳನ್ನು ಸೂಚಿಸಲು, ಜಗತ್ ಎಂದು ಹೇಳಿ ಸತ್ಯವೆಂದು ಹೇಳದೇ, ಅದರ ವಿಭಾಗಗಳನ್ನು ಸೂಚಿಸಿ), ವಕ್ತಿ–ಹೇಳುತ್ತದೆ.

**ಯದಾ ಮೃದಪಿ ವಿಜ್ಞಾತಾ ಸಾದೃಶ್ಯಾಜ್ಜ್ಞಾಪಯೇಜ್ಜಗತ್ ।**
**ತದಾ ಸಮರ್ಥಃ ಸಾಮರ್ಥ್ಯಾದ್ವಿಜ್ಞಾತಃ ಪುರುಷೋತ್ತಮಃ ।**
**ಕಥಂ ನ ದದ್ಯಾತ್ಸಾರ್ವಜ್ಞ್ಯಮಿತಿ ಕೈಮುತ್ಯತಃ ಪ್ರಭೋಃ ॥ ೮೪೭ ॥**
**ಸಾರ್ವಜ್ಞ್ಯದಾನಶಕ್ತಿಂ ಸಾ ಬೋಧಯಂತೀ ಮುಹುರ್ಮುಹುಃ ।**
**ನಿದರ್ಶನತ್ರಯಮಿದಂ ನೃಣಾಂ ಪ್ರಾದರ್ಶಯಚ್ಛ್ರುತಿಃ ॥ ೮೪೮ ॥**

'ಯಥಾಸೋಮ್ಯ' ಎಂದು ಆರಂಭವಾಗುವ ಮೂರು ಶ್ರುತಿವಾಕ್ಯಗಳಿಗೆ 'ಯೇನಾಶ್ರುತಂ ಶ್ರುತಂ ಭವತಿ ; ಅಮತಂ ಮತಂ ; ಅವಿಜ್ಞಾತಂ ವಿಜ್ಞಾತಂ ಭವತಿ' ಎಂಬ ಮೂಲದ ಆರಂಭವಾಕ್ಯದಿಂದ ಸಂಗತಿಯನ್ನು ಹೇಳುತ್ತಾರೆ :—

ಯದಾ–ಯಾವಾಗ (ಯಾವ ಪಕ್ಷದಲ್ಲಿ), ವಿಜ್ಞಾತಾ – ತಿಳಿಯಲ್ಪಟ್ಟ, ಮೃತ್ ಅಪಿ–ಮೃತ್ತಿಕೆಯೂ (ಮಣ್ಣು ಸಹ), ಸಾದೃಶ್ಯಾತ್–ಸಾದೃಶ್ಯದಿಂದ, ಜಗತ್–ಜಗತ್ತನ್ನು, ಜ್ಞಾಪಯೇತ್ – ತಿಳಿಸಿಕೊಡುವುದಾದರೆ, ತದಾ – ಆಗ, ಸಾಮರ್ಥ್ಯಾತ್-(ತನ್ನಜ್ಞಾನ) ಬಲದಿಂದ, ವಿಜ್ಞಾತಃ–ತಿಳಿಯಲ್ಪಟ್ಟ, ಸಮರ್ಥಃ– ಸರ್ವಶಕ್ತನಾದ, ಪುರುಷೋತ್ತಮಃ–ಶ್ರೀಹರಿಯು, ಕಥಂ–ಹೇಗೆ, ಸಾರ್ವಜ್ಞ್ಯಂ– (ಸ್ವಯೋಗ್ಯ) ಸರ್ವಜ್ಞತ್ವವನ್ನು, ನ ದದ್ಯಾತ್–ಕೊಡಲಿಕ್ಕಿಲ್ಲ (ತಪ್ಪದೇ ಕೊಡು

---

ಈ ಸತ್ಯತ್ವವನ್ನು ಶ್ರುತಿಯು ನಾಲ್ಕುವಿಧ ಯುಕ್ತಿಗಳಿಂದ ಸಾಧಿಸಿದೆ ; ನಾಮವುಳ್ಳದ್ದಾದ್ದರಿಂದಲೂ, ರೂಪವುಳ್ಳದ್ದಾದ್ದರಿಂದಲೂ, ಸತ್ಯವಾದ ಕಾರಣ (ಉಪಾದಾನ) ವುಳ್ಳದಾದ್ದರಿಂದಲೂ, ಸತ್ಯವಾದ ಕಾರ್ಯರೂಪವಾದ್ದರಿಂದಲೂ ಪ್ರಪಂಚವು (ಜಗತ್ತು) ಬ್ರಹ್ಮನಂತೆ ಸತ್ಯವೇ ಆಗಿದೆ ಎಂದು, ಶ್ರುತಿಯು ನಾಲ್ಕು ಯುಕ್ತಿಗಳನ್ನು ಸೂಚಿಸಿದೆ (೮೪೬). ಮೃತ್ತಿಕೆಯು ತಿಳಿಯಲ್ಪಟ್ಟರೆ ಸದೃಶಜ್ಞಾನದಿಂದ ಜಗತ್ತನ್ನೇ ತಿಳಿಸಿಕೊಡುವಂತೆ, ಬ್ರಹ್ಮನನ್ನು ಸತ್ಯನೆಂದು ತಿಳಿದರೆ, ಸರ್ವಜ್ಞನಾದ ಪುರುಷೋತ್ತಮನು, ತನ್ನನ್ನು ತಿಳಿದ ಜ್ಞಾನಿಯನ್ನು ಸ್ವಸದೃಶನನ್ನಾಗಿ (ಯಥಾಯೋಗ್ಯ) ಸರ್ವಜ್ಞನನ್ನಾಗಿ ಮಾಡುವನೆಂಬ ಕೈಮುತ್ಯವನ್ನು ಈ ಶ್ರುತಿಯು

ವನು), ಇತಿ–ಎಂಬ, ಕೈಮುತ್ಯತಃ–ಕೈಮುತ್ಯನ್ಯಾಯದಿಂದ (ಹೇಳದೇ ಸಿದ್ಧವೆಂದು ಪ್ರಾಪ್ತವಾಗುತ್ತದೆಂಬ ಯುಕ್ತಿಯಿಂದ), ಪ್ರಭೋಃ – ಭಗವಂತನ, ಸಾರ್ವಜ್ಞದಾನಶಕ್ತಿಂ–ಸರ್ವಜ್ಞತ್ವ ಪ್ರದಾನಶಕ್ತಿಯನ್ನು, ಸಾ–'ಯಥಾಸೋಮ್ಯ' ಎಂಬ ಶ್ರುತಿಃ–ಶ್ರುತಿಯು, ಮುಹುಃ ಮುಹುಃ–ಪುನಃ ಪುನಃ, ಬೋಧಯಂತೀ–ತಿಳಿಸಿಕೊಡಲಿಕ್ಕಾಗಿಯೇ, ಇದಂ – ಈ, ನಿದರ್ಶನತ್ರಯಂ – (ಮೃಣ್ಮಯ, ಕಾರ್ಷ್ಣಾಯಸ, ಲೋಹಮಣಿಗಳೆಂಬ) ಮೂರು ದೃಷ್ಟಾಂತಗಳನ್ನು, ನೃಣಾಂ–ಮನುಷ್ಯರಿಗೆ, ಪ್ರಾದರ್ಶಯತ್ – (ಅತಿ ಸ್ಪಷ್ಟೀಕರಣಕ್ಕಾಗಿ ಪ್ರವೃತ್ತವಾದ ಶ್ರುತಿಯು–ಸಾದೃಶ್ಯಪ್ರಾಧಾನ್ಯಾದಿಗಳ ಸತ್ಯತ್ವವನ್ನು ಪ್ರದರ್ಶಿಸಿ, ಮಿಥ್ಯಾತ್ವವನ್ನು ನಿರಾಕರಿಸಲು) ತೋರಿಸಿರುತ್ತದೆ.

**ಇತ್ಯೇವ ವಾಚ್ಯಃ ಶ್ರುತ್ಯರ್ಥೋ ನೋ ಚೇತ್ಕುಪ್ಯೇದಿಯಂ ಕೃತಿಃ ।**
**ಹಯಗ್ರೀವಪ್ರಸಾದೋತ್ಥಸಾಮರ್ಥ್ಯಕೃತಕೌತುಕಾ ॥ ೮೪೯ ॥**

ಶ್ರುತ್ಯರ್ಥಃ – ವಾಚಾರಂಭಣ ಶ್ರುತ್ಯರ್ಥವು, ಇತ್ಯೇವ – ಹೀಗೆಯೇ, ವಾಚ್ಯಃ–ಹೇಳಲ್ಪಡಬೇಕು ; ನೋಚೇತ್–ಸಾರ್ವಜ್ಞನೆಂಬ ಫಲಸಿದ್ಧಿ ಪ್ರತಿಪಾದಕವಲ್ಲದಿದ್ದರೆ, (ಪರನನ್ನು ದೂಷಿಸದಿದ್ದರೆ) ಇಯಂ ಕೃತಿಃ–ಈ ಗ್ರಂಥವು, ಕುಪ್ಯೇತ್–ಸಿಟ್ಟಾಗುವುದು (ವ್ಯರ್ಥವಾಗುವುದು), (ಈ ಕೃತಿಯು), ಹಯಗ್ರೀವ ಪ್ರಸಾದೋತ್ಥಸಾಮರ್ಥ್ಯ ಕೃತ ಕೌತುಕಾ – ಶ್ರೀಹಯಗ್ರೀವನ (ಶ್ರೀಹರಿಯ) ಪ್ರಸಾದಜನ್ಯ ಶಕ್ತಿಯಿಂದ ರಚಿತವಾದ ಅದ್ಭುತ ಗ್ರಂಥವಾಗಿದೆ.

---

ಸೂಚಿಸುತ್ತದೆ; ಮುಕ್ತಿಗೆ ಆ ಶಕ್ತಿ ಇರಲು, ಪೂರ್ಣಚೇತನನಾದ ಬ್ರಹ್ಮನಿಗೆ ಇಲ್ಲವೇ ? ಜೀವರಿಗೆ ಯಥಾಯೋಗ್ಯವಾದ ಪೂರ್ಣಜ್ಞಾನವನ್ನು ದಾನಮಾಡುವ. ಸಾಮರ್ಥ್ಯವು ಪರಮಾತ್ಮನಲ್ಲಿರುತ್ತದೆಂಬುದನ್ನು, ಮತ್ತೆ ಮತ್ತೆ ಮೂರು ನಿದರ್ಶನಗಳಿಂದ ಬೋಧಿಸುವ ಈ ಶ್ರುತಿಯು, ಮನುಷ್ಯರಿಗೆ ಈ ಪ್ರಕ್ರಿಯೆಯನ್ನು ಸ್ಪಷ್ಟಗೊಳಿಸಿ, ಜಗನ್ಮಿಥ್ಯಾತ್ವವನ್ನು ನಿರಾಕರಿಸಿರುತ್ತದೆ–ಬ್ರಹ್ಮ ಮತ್ತು ಜಗತ್ತು, ಎರಡೂ ಪರಮ ಸತ್ಯಗಳೆಂದೂ ಸಮರ್ಥಿಸಿರುತ್ತದೆ (೮೪೭–೮೪೮). ವಾಚಾರಂಭಣ ಶ್ರುತಿಯ ಅರ್ಥವನ್ನು ಹೀಗೆಂದೇ ಹೇಳತಕ್ಕದ್ದು ; ಹಾಗೆ ಹೇಳದಿದ್ದರೆ, ಸ್ವಪೂರ್ಣ ಜ್ಞಾನದಾತನೆಂಬ ಅರ್ಥಪ್ರತಿಪಾದಕವೆಂದು ಹೇಳಿ (ಪರಮತವನ್ನು) ದೂಷಿಸದಿದ್ದರೆ, ಈ ಕೃತಿಯೇ (ಗ್ರಂಥವೇ) ವ್ಯರ್ಥವಾಗುವುದು ; ಇದು ಶ್ರೀ ಹಯಗ್ರೀವದೇವನ ಕೃಪಾಬಲದಿಂದ ರಚಿತವಾದ ಅದ್ಭುತ ಗ್ರಂಥವಾಗಿದೆ ;

**ಶ್ರುತ್ಯಾ ದ್ವಿತೀಯಮಾತ್ರಸ್ಯ ನಿಷೇಧೇ ಸತಿ ತೇ ಮತೇ ।**
**ಅತ್ಯಂತಾಭಾವೋಽಪಿ ನೇತಿ ದ್ವಿತೀಯಂ ಪುನರಾಪತೇತ್ ॥ ೮೫೦ ॥**

'ಏಕಮೇವಾದ್ವಿತೀಯಂ' ಎಂಬ ಶ್ರುತಿಯು, ಭಾವಾಭಾವಾತ್ಮಕ ಎರಡನೇ ವಸ್ತು ನಿಷೇಧಕವೋ, ಸಕಲವಸ್ತು (ಭಾವಗಳ) ನಿಷೇಧಕವೋ, ಅಥವಾ (ಸಕಲ ಭಾವವಸ್ತುಗಳ ಸ್ವರೂಪ ನಿಷೇಧಕವೋ) ಬ್ರಹ್ಮವ್ಯತಿರಿಕ್ತ ಸಕಲಭಾವರೂಪವಸ್ತು ನಿಷೇಧಕವೋ, ಇತ್ಯಾದಿ ವಿಕಲ್ಪಗಳನ್ನು ಮನಸ್ಸಿನಲ್ಲಿಟ್ಟು, ಕ್ರಮವಾಗಿ ದೂಷಿಸುತ್ತಾರೆ :—

ಶ್ರುತ್ಯಾ – 'ಏಕಮೇವಾದ್ವಿತೀಯಂ' ಎಂಬ ಶ್ರುತಿಯಿಂದ, ದ್ವಿತೀಯಮಾತ್ರಸ್ಯ–ಭಾವಾಭಾವಾತ್ಮಕ ಎರಡನೆಯ ವಸ್ತುಮಾತ್ರದ, ನಿಷೇಧೇ ಸತಿ– ನಿಷೇಧವಿರುತ್ತಿರಲು, ತೇ ಮತೇ–ನಿನ್ನ ಮತದಲ್ಲಿ, ಅತ್ಯಂತಾಭಾವಃ ಅಪಿ ನ– ಅತ್ಯಂತಾಭಾವವೂ ಇಲ್ಲವೆಂದು ಹಿಡಿದು, ದ್ವಿತೀಯಂ-ಭಾವರೂಪದ ದ್ವಿತೀಯವು, ಪುನಃ–ಮತ್ತೆ, ಆಪತೇತ್–ಪ್ರಾಪ್ತವಾಗುತ್ತದೆ, (ಅಭಾವದ ಅಭಾವವೂ ಭಾವ ರೂಪವೇ ಆದ್ದರಿಂದ, ಅತ್ಯಂತಾಭಾವದ ಅಭಾವವನ್ನು ಹೇಳುತ್ತದೆಂದರೆ ಭಾವ ವಸ್ತುವನ್ನೇ ಎರಡನೆಯ ವಸ್ತುವನ್ನಾಗಿ ಹೇಳಿದಂತಾಗುತ್ತದೆ).

---

'ಏಕಮೇವಾದ್ವಿತೀಯಂ ಬ್ರಹ್ಮ' ಎಂಬ ಶ್ರುತಿಯು ಪರನು ಹೇಳುವಂತೆ, ಬ್ರಹ್ಮ ವ್ಯತಿರಿಕ್ತ ಸಕಲವೂ (ಜಗತ್ತೆಲ್ಲವೂ) ಮಿಥ್ಯೆಯೆಂಬ ಅರ್ಥವನ್ನು ಪ್ರತಿಪಾದಿಸುವುದಿಲ್ಲವೆಂದು ತೋರಿಸುವುದೂ ಈ ಗ್ರಂಥರಚನೆಯ ಉದ್ದೇಶಗಳಲ್ಲಿ ಪ್ರಧಾನವಾದುದಾಗಿದೆ; ಪರನ ವಾದವನ್ನು ವಿವಿಧವಾಗಿ ವಿಕಲ್ಪಿಸಿ, ಒಂದೊಂದೂ ಪಕ್ಷದ ದೋಷಗಳನ್ನು ಉಪಪಾದಿಸುವುದು ಯುಕ್ತವಾಗುತ್ತದೆ; ಹಾಗಲ್ಲದಿದ್ದರೆ ಶ್ರೀ ಹಯಗ್ರೀವ ಪರಮಾತ್ಮನ ಕೃಪಾಬಲದಿಂದ ಉತ್ಪನ್ನವಾದ ಈ ಅದ್ಭುತ ಕೃತಿಯು ಕುಪಿತವಾಗುತ್ತದೆ; ಎಂದರೆ ವ್ಯರ್ಥವೇ ಆಗುತ್ತದೆ; (೮೪೯). ಪ್ರಸಕ್ತ ಶ್ರುತಿಯು, ಭಾವಾಭಾವಾತ್ಮಕವಾದ ದ್ವಿತೀಯ (ಎರಡನೆಯ) ವಸ್ತುಮಾತ್ರ ನಿಷೇಧಕವೆಂದರೆ, (ಅಭಾವದ ಅಭಾವ–ನಿಷೇಧ, ಎಂದರೆ ಭಾವವೆಂದೇ ಪ್ರಾಪ್ತವಾಗಿ) ಅಭಾವದ ಅಭಾವವಿದೆ, ಎಂದಂತೆ ಆಗಿ, ಭಾವರೂಪದ ದ್ವಿತೀಯ ವಸ್ತುವಿನ ಅಸ್ತಿತ್ವವೇ ಸಿದ್ಧವಾಗುತ್ತದೆ; ಏಕಮೇವ ಎಂಬುದು ಬಿದ್ದುಹೋದಂತಾಗುತ್ತದೆ (೮೫೦).

**ಭಾವಸ್ಯೈವ ನಿಷೇಧೇ ಸತ್ಯಭಾವಾಭಾವಸಂಭವಾತ್ ।**
**ತದಾಕಾರೇಣ ಸಕಲಂ ದ್ವಿತೀಯಂ ಪುನರಾಪತೇತ್ ॥ ೮೫೧ ॥**

ಎರಡನೇ ಪಕ್ಷವನ್ನು ದೂಷಿಸುತ್ತಾರೆ :—

ಭಾವಸ್ಯ ಏವ—ಅಭಾವದ ಅಭಾವರೂಪದ ಭಾವವನ್ನೇ, ನಿಷೇಧೇಸತಿ—ನಿಷೇಧಿಸಿದರೆ, ಅಭಾವಾಭಾವಸಂಭವಾತ್—ಅಭಾವದ ಅಭಾವರೂಪದಿಂದ (ಭಾವದ) ಅವಸ್ಥಾನವೇ ಸಿದ್ಧಿಸುತ್ತದೆಯಾದ್ದರಿಂದ, ತದಾಕಾರೇಣ—ಅದೇ ರೂಪದಿಂದ, ಸಕಲಂ—ಎಲ್ಲವೂ, ದ್ವಿತೀಯಂ—ದ್ವಿತೀಯವು (ಎರಡನೆಯದು) ಪುನಃ ಆಪತೇತ್—ಮತ್ತೆ ಬಂದು ನಿಲ್ಲುತ್ತದೆ.

**ಭಾವಸ್ವರೂಪಮಾತ್ರಸ್ಯಾಸತ್ತ್ವಾತ್ತಸ್ಯಾಪಿ ಬಾಧನೇ ।**
**ಬ್ರಾಹ್ಮ್ಯಾಶ್ಚಿತೋಽಪಿ ಬಾಧೇನ ದ್ವಿತೀಯಂ ಪುನರಾಪತೇತ್ ॥೮೫೨॥**

ಮೂರನೇ ಕಲ್ಪವನ್ನು ದೂಷಿಸುತ್ತಾರೆ :—

ಭಾವ ಸ್ವರೂಪಮಾತ್ರಸ್ಯ-ಭಾವರೂಪದ ವಸ್ತು ಮಾತ್ರವನ್ನು(ಅದು ಯಾವ ಆಕಾರದ ಭಾವತ್ವವುಳ್ಳದ್ದಾದರೂ ಭಾವಸ್ವರೂಪದ ಸಮಸ್ತವನ್ನೂ (ನಿಷೇಧೇ ಸತಿ—ನಿಷೇಧಿಸುವಲ್ಲಿ), ಅಸತ್ತ್ವಾತ್—(ಭಾವಾತ್ಮಕವೆಲ್ಲವೂ) ಮಿಥ್ಯೆ ಆದ್ದರಿಂದ, ತಸ್ಯಾಪಿ—ಅದರ ಬಾಧವನ್ನು (ಹೇಳಿದರೆ), ಬ್ರಾಹ್ಮ್ಯಾಃ—ಪರಬ್ರಹ್ಮ ಸಂಬಂಧಿಯಾದ, ಚಿತಃ ಅಪಿ—ಚೇತನದ, (ಬ್ರಹ್ಮಚಿತ್ತಿನ), ಬಾಧೇನ—ನಿಷೇಧ ಪ್ರಸಂಗದಿಂದ (ಬ್ರಹ್ಮಾಭಾವವು ಇಚ್ಛಿತವಲ್ಲದ್ದರಿಂದ), ದ್ವಿತೀಯಂ — (ಭಾವರೂಪದ) ಜಗತ್ತು, ಪುನಃ ಆಪತೇತ್—ಬಂದುಳಿಯುತ್ತದೆ.

---

ಭಾವಮಾತ್ರದ ನಿಷೇಧವೆಂದರೆ ಅಭಾವದ ಅಭಾವವು (ಭಾವವು) ಇರುತ್ತೆಂದೇ ಪ್ರಾಪ್ತವಾಗುತ್ತದೆ; ಅಭಾವಾಭಾವರೂಪದಿಂದ ಎಲ್ಲ ದ್ವಿತೀಯ ವಸ್ತುವೂ ವಿದ್ಯಮಾನವೆಂದು ಪ್ರಾಪ್ತವಾಗುತ್ತದೆ (೮೫೧). ಭಾವಸ್ವರೂಪಮಾತ್ರವನ್ನು (ಅದು ಯಾವ ರೂಪದ ಭಾವತ್ವವೇ ಆಗಲಿ) ನಿಷೇಧಿಸುತ್ತದೆಂದು, ಪ್ರಸಕ್ತ ಶ್ರುತಿಯ ಅರ್ಥವನ್ನು ಹೇಳಿದರೆ, ಭಾವರೂಪವೇ ಆದ ಬ್ರಹ್ಮಚಿತ್ತಿನ ನಿಷೇಧ ಪ್ರಸಂಗವು ಪ್ರಾಪ್ತವಾಗುತ್ತದೆ; ಅದು ಪರನಿಗೆ ಇಚ್ಛಿತವಲ್ಲ; ಬ್ರಹ್ಮನೂ ಮಿಥ್ಯೆ

**ಬ್ರಹ್ಮರೂಪಸ್ಯ ಭಾವಸ್ಯಾನಿಷೇಧೇ ತದ್ಗುಣಾಂಬುಧೇಃ ।**
**ಅಬಾಧಸಂಭವೇನ ತ್ವದ್ದ್ವಿತೀಯಂ ಪುನರಾಪತೇತ್ ॥ ೮೫೩ ॥**

ಅನ್ಯವಿಕಲ್ಪದೋಷವನ್ನು ಉಪಪಾದಿಸುತ್ತಾರೆ :—

ಬ್ರಹ್ಮರೂಪಸ್ಯ ಭಾವಸ್ಯ – ಪರಬ್ರಹ್ಮಸ್ವರೂಪವೆಂಬ ಭಾವದ (ಭಾವ ವಸ್ತುವಿನ), ಅನಿಷೇಧೇ–ನಿಷೇಧವಿಲ್ಲದಿದ್ದಲ್ಲಿ, ತದ್ಗುಣಾಂಬುಧೇಃ–ಆತನ ಗುಣ ಸಮುದ್ರದ, ಅಬಾಧ ಸಂಭವೇನ–(ನಮ್ಮಂತೆ–ತತ್ವವಾದಿಮತದಂತೆ, ಗುಣಗುಣಿ ಗಳಲ್ಲಿ ಅಭೇದವಿರುವುದರಿಂದ) ಗುಣಗಳ ನಿಷೇಧವೂ ಇಲ್ಲದಂತಾಗುವುದರಿಂದ, ತ್ವದ್ದ್ವಿತೀಯಂ – ಗುಣರಾಶಿಗಳೆಂಬ (ನಿನಗೆ ಅನಭಿಪ್ರೇತವಾದ) ದ್ವಿತೀಯ ವಸ್ತುವಿನ ಅಸ್ತಿತ್ವವು, ಪುನಃ ಆಪತೇತ್–ಮತ್ತೆ ಅವಶಿಷ್ಟವಾಗಿ (ಏಕಮೇವಾ ದ್ವಿತೀಯಂ ಎಂಬುದು ಯುಕ್ತವಾಗುವುದಿಲ್ಲ).

**ಏಕಶೇಷೇಣ ತದ್ಬಾಧೇ ಪುನರ್ಜ್ಞಾನನಿಷೇಧನಾತ್ ।**
**ಬ್ರಹ್ಮಣೋ ಜಡತಾಪತ್ತ್ಯಾ ದ್ವಿತೀಯಂ ಪುನರಾಪತೇತ್ ॥ ೮೫೪ ॥**

ಘಟ, ಶರೀರಗಳಲ್ಲಿ ಒಂದಲ್ಲದಿದ್ದರೆ ಒಂದು ಆ ವಸ್ತುವು ಆಗಿರಲೇಬೇಕೆಂಬ (ಏಕಶೇಷನ್ಯಾಯದಿಂದ), ನಿಯಮದಿಂದ, ಅಭಿನ್ನಗಳಾದ ಬ್ರಹ್ಮ ಮತ್ತು ಗುಣಗಳಲ್ಲಿ, ಒಂದು ಉಳಿಯುವ ನ್ಯಾಯದಿಂದ ; ಪ್ರಧಾನ್ಯವಿವಕ್ಷೆಯಿಂದ ಬ್ರಹ್ಮನು ಮಾತ್ರ ಅವಶಿಷ್ಟವಾದರೆ ಪ್ರಾಪ್ತವಾಗುವ ದೋಷವನ್ನು ಹೇಳುತ್ತಾರೆ :—

ಏಕಶೇಷೇಣ–ಏಕಶೇಷದಿಂದ, (ಬ್ರಹ್ಮನು ಅವಶಿಷ್ಟವೆಂದರೆ) [1] ಬ್ರಹ್ಮಣಃ– ಬ್ರಹ್ಮನಿಗೆ, ಜಡತಾಪತ್ತ್ಯಾ–ಜಡತ್ವವು (ಜ್ಞಾನಗುಣಶೂನ್ಯನಾದ್ದರಿಂದ) ಪ್ರಾಪ್ತ

ಎಂದಾಗುತ್ತದೆ; ಜಗತ್ತು (ಭಾವವು) ನಿಲ್ಲುತ್ತದೆ (೮೫೨). ಭಾವರೂಪದ ಬ್ರಹ್ಮ ಸ್ವರೂಪವನ್ನು ಈ ಶ್ರುತಿಯು ನಿಷೇಧಿಸದಿದ್ದರೆ, ಆತನ ಗುಣರಾಶಿಯು ಉಳಿಯು ತ್ತದೆ ; ದ್ವಿತೀಯತ್ವವು ಪುನಃ ಪ್ರಾಪ್ತವಾಯಿತು ; (ಪರನಂತೆ ಗುಣಗುಣಿಗಳಲ್ಲಿ ಭೇದಾಭೇದವು ತತ್ವವಾದದಂತೆ ಅತ್ಯಂತ ಅಭಿನ್ನಗಳಲ್ಲ)(೮೫೩). ಬ್ರಹ್ಮಸ್ವರೂಪವು

[1] ಪರನು ಗುಣಗುಣಿಗಳ ಭೇದಾಭೇದವಾದಿಯು ; ಬ್ರಹ್ಮನಿಗೂ ಬ್ರಹ್ಮಗುಣಗಳಿಗೂ, ಭೇದಪಕ್ಷದಲ್ಲಿ ಏಕಶೇಷನ್ಯಾಯದಿಂದ, 'ಏಕಮೇವಾದ್ವಿತೀಯಂ' ಎಂಬುದು ಯುಕ್ತ ವಾಗುವುದಿಲ್ಲ ; ತತ್ವವಾದಿಗಳಂತೆ ವಿಶೇಷಬಲದಿಂದ ಅತ್ಯಂತ ಅಭೇದವೇ ಯುಕ್ತವಾಗುವು ದರಿಂದ ಏಕಶೇಷನಿಯಮವು ಸಂಬಂಧಿಸುವುದಿಲ್ಲ (ಸಂಗತವಲ್ಲ).

ವಾಗಿ ಪುನಃ–ಮತ್ತೆ ತದ್ಬಾಧೇ–ಬ್ರಹ್ಮಸ್ವರೂಪವನ್ನು ನಿಷೇಧಿಸಿದರೆ, ದ್ವಿತೀಯಂ–ಜಡಗುಣಗಳ ಅವಶೇಷವೂ, ಪುನಃ – ಮತ್ತೆ, ಆಪತೇತ್ – ಬಂದುಳಿಯುತ್ತದೆ (ದ್ವಿತೀಯವು ಉಳಿದಂತಾಗುತ್ತದೆ).

**ಶ್ರುತ್ಯಬಾಧೇ ವೇದರೂಪಂ ದ್ವಿತೀಯಂ ಪುನರಾಪತೇತ್ ।**
**ಶ್ರುತೇರ್ಬಾಧೇ ತ್ವಬಾಧ್ಯಂ ತದ್ದ್ವಿತೀಯಂ ಪುನರಾಪತೇತ್ ॥ ೮೫೫ ॥**

ಬೇರೆ ರೀತಿಯಿಂದ ಸಹ ದ್ವಿತೀಯದ ಅಸ್ತಿತ್ವವನ್ನು ಅನಿವಾರ್ಯವೆಂದು ಉಪಪಾದಿಸುತ್ತಾರೆ :—

ಶ್ರುತ್ಯಬಾಧೇ–ಶ್ರುತಿಯು ಅಬಾಧ್ಯವಾದರೆ (ಬಾಷ್ಪಾರೋಪಿತ ಧೂಮದಂತೆ, ಅಗ್ನಿಜ್ಞಾನಕತ್ವವು ಅಸಂಭವವಾದ್ದರಿಂದ, ಮಿಥ್ಯಾಭೂತವಾದ ವೇದವು ಅಬಾಧ್ಯವೆಂದರೆ), ವೇದರೂಪಂ–ವೇದರೂಪದ, ದ್ವಿತೀಯಂ–ದ್ವಿತೀಯವಸ್ತುವು, ಪುನಃ–ಮತ್ತೆ, ಆಪತೇತ್–ಪ್ರಾಪ್ತವಾಗುತ್ತದೆ ; ಶ್ರುತೇಃ–ಶ್ರುತಿಗೆ, ಬಾಧೇ–ಬಾಧವಿದ್ದಲ್ಲಿ, ತತ್–ಜಗತ್ತು, ಅಬಾಧ್ಯಂ–ಅಬಾಧ್ಯವೆಂದಾಗುತ್ತದೆ (ಬಾಧ್ಯವೆಂದು ಹೇಳುವ ಪ್ರಮಾಣವೇ ಇಲ್ಲದ್ದರಿಂದ) ; ದ್ವಿತೀಯಂ ಪುನಃ ಆಪತೇತ್–(ಜಗತ್ತು, ಬ್ರಹ್ಮ ಹೀಗೆ ತಿರಿಗಿ ಎರಡು ವಸ್ತುಗಳು ಸಿದ್ಧವಾಗುತ್ತವೆ.)

**ವಿಶ್ವಾನ್ಯದ್ಬ್ರಹ್ಮ ನಾಶಾಸ್ಯಂ ದ್ವಿತೀಯಸ್ಯೈವ ದೂಷಣೇ ।**
**ತಚ್ಛೇಷೇನ್ಯಸ್ಯ ತನ್ನ್ಯಾಯಾದ್ದ್ವಿತೀಯಂ ಪುನರಾಪತೇತ್ ॥ ೮೫೬ ॥**

ದ್ವಿತೀಯ ಶಬ್ದವು ಸರ್ವನಾಮವಾದ್ದರಿಂದ ಜಗತ್ತಿನಿಂದ, ದ್ವಿತೀಯನು ಬ್ರಹ್ಮನೂ ಆಗುತ್ತಾನೆ ; ಸಕಲ ದ್ವಿತೀಯದ ನಿಷೇಧವನ್ನು, ಪ್ರಸಕ್ತ ಶ್ರುತಿಯು

---

ಏಕಶೇಷನ್ಯಾಯದಿಂದ ಅವಶಿಷ್ಟವೆಂದರೂ, ಅಥವಾ ಬ್ರಹ್ಮಗುಣಗಳು (ಜಡಗುಣಗಳು) ಅವಶಿಷ್ಟವೆಂದರೂ, ದ್ವಿತೀಯವು ಉಳಿದಂತಾಗುತ್ತದೆ ; ಜ್ಞಾನಾದಿ ಗುಣ ನಿಷೇಧವನ್ನು ಹೇಳಿದರೆ, ಬ್ರಹ್ಮನಿಗೆ ಜಡತ್ವವು ಪ್ರಾಪ್ತವಾಗುತ್ತದೆ (೮೫೪). ಶ್ರುತಿಯು (ವೇದವು) ಅಬಾಧ್ಯವೆಂದರೆ, ವೇದವು ನಿಂತು, ದ್ವಿತೀಯತ್ವವು ಸಿದ್ಧವಾಗುತ್ತದೆ ; ಶ್ರುತಿಯು ಬಾಧ್ಯವೆಂದರೆ, (ಶ್ರುತಿಯೇ ಇಲ್ಲವೆಂದಾದರೆ, ಜಗತ್ತಿಗೆ ಬಾಧ್ಯತ್ವವನ್ನು ತಿಳಿಸುವ ಪ್ರಮಾಣವೇ ಇಲ್ಲದಂತಾಗಿ) ಜಗತ್ತು, ಬ್ರಹ್ಮಗಳೆರಡರ ವಿದ್ಯಮಾನತ್ವವೂ ಸಿದ್ಧವಾಗಿ 'ಏಕಮೇವ' ಎಂಬುದು ಕೂಡುವುದೇ ಇಲ್ಲ (೮೫೫). ದ್ವಿತೀಯ ಶಬ್ದವು ಸರ್ವನಾಮಶಬ್ದವು; ಜಗತ್ತಿನಿಂದ

ಹೇಳುವುದಾದರೆ, ಬ್ರಹ್ಮ ನಿಷೇಧಕವೂ ಆಗಬೇಕಾಗುತ್ತದೆ ; ಪ್ರಾಮಾಣಿಕನಾದ್ದರಿಂದ ಬ್ರಹ್ಮನಿಷೇಧವು ಕೂಡುವುದಿಲ್ಲವೆಂದರೆ, ಬ್ರಹ್ಮ ವಿಷಯಕ್ಕೆ ಸಂಕೋಚ ಮಾಡಿದರೆ, ಜಗತ್ತಿನಿಂದಲೂ ಸಂಕೋಚವನ್ನೇಕೆ ತಿಳಿಯಬಾರದು ? ಆದ್ದರಿಂದ ಅಪ್ರಾಮಾಣಿಕವಾದ, ಶೂನ್ಯ, ನಿರ್ಗುಣಾದಿ ದ್ವಿತೀಯವನ್ನು ನಿಷೇಧಿಸುತ್ತದೆಂಬುದು ಉಚಿತವೆನ್ನುತ್ತಾರೆ :—

ವಿಶ್ವಾನ್ಯದ್ಬ್ರಹ್ಮ– ಜಗದನ್ಯನಾದ ಬ್ರಹ್ಮನು, ದ್ವಿತೀಯಸ್ಯೈವ – ದ್ವಿತೀಯವಸ್ತುಮಾತ್ರದ, ದೂಷಣೇ–ಬಾಧ್ಯತ್ವವೆನ್ನುವುದರಲ್ಲಿ, ನ ಆಶಾಸ್ಯಂ– ಸೇರಿಸಲ್ಪಡತಕ್ಕವನಲ್ಲ ; ತಚ್ಛೇಷೇ–ಬ್ರಹ್ಮನು ಸೇರದೆ ಉಳಿದರೆ, ತನ್ನ್ಯಾಯಾತ್– ಅದೇ ನ್ಯಾಯದಿಂದ, ಅನ್ಯಸ್ಯ–ಜಗತ್ತಿನ ಶೇಷವೂ ಪುನಃ–ಮತ್ತೆ, ದ್ವಿತೀಯಂ– ದ್ವಿತೀಯವೆಂದು, ಆಪತೇತ್–ಪ್ರಾಪ್ತವಾಗುತ್ತದೆ.[1]

**ಅಭಾವಸ್ಯ ಯಥಾ ರಕ್ಷಾ ವಾಕ್ಯಪ್ರಾಮಾಣ್ಯಗುಪ್ತಯೇ ।**
**ತಥಾ ಭಾವಸ್ಯ ರಕ್ಷಾಯಾಂ ದ್ವಿತೀಯಂ ಪುನರಾಪತೇತ್ ॥ ೮೫೭ ॥**

ದ್ವಿತೀಯ ಪಕ್ಷದಲ್ಲಿ ಬೇರೆ ದೂಷಣವನ್ನು ಹೇಳಿ ದ್ವಿತೀಯತ್ವವು 'ಏಕಮೇವಾದ್ವಿತೀಯತ್ವಂ' ವಾಕ್ಯಕ್ಕೆ ತಪ್ಪುವುದಿಲ್ಲವೆಂದು ಉಪಪಾದಿಸುತ್ತಾರೆ :—

ವಾಕ್ಯಪ್ರಾಮಾಣ್ಯಗುಪ್ತಯೇ – 'ಏಕಮೇವಾದ್ವಿತೀಯಂ' ವಾಕ್ಯದ ಪ್ರಾಮಾಣ್ಯ ರಕ್ಷಣೆಗಾಗಿ, ಅಭಾವಸ್ಯ–ಅಭಾವದ, ರಕ್ಷಾ–ರಕ್ಷಣೆಯು, ಯಥಾ–

---

ದ್ವಿತೀಯನು ಬ್ರಹ್ಮನೂ ಆಗುತ್ತಾನೆ ; ಸಕಲ ದ್ವಿತೀಯಗಳ ಅಭಾವವನ್ನು (ನಿಷೇಧವನ್ನು) ಶ್ರುತಿಯು ಹೇಳಿದರೆ, ಬ್ರಹ್ಮನ ಅಭಾವವೂ ಪ್ರಾಪ್ತವಾಗುತ್ತದೆ ; ಬ್ರಹ್ಮನು ಪ್ರಾಮಾಣಿಕನಾದ್ದರಿಂದ (ಪ್ರಮಾಣಸಿದ್ಧನಾದ್ದರಿಂದ) ಬ್ರಹ್ಮವಿಷಯಕ್ಕೆ ಸಂಕೋಚಮಾಡಿದರೆ, ಜಗದ್ವಿಷಯಕ್ಕೂ ಅದೇ ಕಾರಣದಿಂದ ಸಂಕೋಚವೇಕೆ ಮಾಡಿ, ಶೂನ್ಯ, ನಿರ್ಗುಣತ್ವಾದಿ ದ್ವಿತೀಯವನ್ನು ಗ್ರಹಿಸಬಹುದಲ್ಲವೇ? (೮೫೬). ಶ್ರುತಿವಾಕ್ಯದ ಪ್ರಾಮಾಣ್ಯ ರಕ್ಷಣೆಗಾಗಿ, ಅದು ಅಭಾವವನ್ನು ನಿಷೇಧಿಸುವು

---

1 'ಸದೇವೇದಮಗ್ರ, ಆಸೀತ್' ಎಂದು ಮೊದಲಿಗೆ ಬ್ರಹ್ಮನು ಪ್ರಸ್ತುತನಾದ್ದರಿಂದ ನಿಷೇಧವನ್ನು ಬ್ರಹ್ಮವಿಷಯಕ್ಕೆ ಸಂಕೋಚಗೊಳಿಸಬೇಕೆಂದರೆ, 'ಇದಂ' ಪದ ಬೋಧ್ಯವಾದ ಜಗತ್ತನ್ನು, 'ಅಗ್ರೇ' ಎಂಬ ಪದ ವಿವಕ್ಷಿತವಾದ ಕಾಲಾದಿ ಪ್ರಪಂಚದ ವಿಷಯಕ್ಕೂ ಈ ಸಂಕೋಚವು ಅನ್ವಯಿಸಬೇಕಾಗುತ್ತದೆ ; ಅಲ್ಲವೇ ? ಎಂಬುದನ್ನು ಸೂಚಿಸಲಾಗಿದೆ.

ಹೇಗೋ, ತಥಾ–ಹಾಗೆ, (ಅಭಾವ ನಿಷೇಧಕವಲ್ಲೆಂದು–ಅಭಾವದ ಅಭಾವವನ್ನು ಹೇಳುವುದಿಲ್ಲವೆಂದಂತೆ), ಭಾವಸ್ಯ–ಭಾವವಸ್ತುವಿನ, ರಕ್ಷಾಯಾಂ–ರಕ್ಷಣೆಯನ್ನು ಮಾಡುತ್ತಿರುವಲ್ಲಿ ( ಆ ವಾಕ್ಯದ ನಿಷೇಧದಿಂದ ಉಳಿಸಿಕೊಂಡಲ್ಲಿ), ದ್ವಿತೀಯಂ–ದ್ವಿತೀಯವು, ಪುನಃ–ಮತ್ತೆ, ಆಪತೇತ್–ಬಂದು ಪ್ರಾಪ್ತವಾಗುತ್ತದೆ.

**ಅನ್ಯೋನ್ಯಾಭಾವರೂಪತ್ವಾಭಾವಾದ್ಭಿನ್ನಂ ಭವನ್ಮತೇ ।**
**ಭೇದಪಂಚಕರೂಪಂ ಚ ದ್ವಿತೀಯಂ ಪುನರಾಪತೇತ್ ॥ ೮೫೮ ॥**

ಬೇರೆ ದೋಷವನ್ನೂ ಹೇಳುತ್ತಾರೆ :—

ಭವನ್ಮತೇ–ನಿನ್ನ ಮತದಂತೆ, ಅನ್ಯೋನ್ಯಾಭಾವರೂಪತ್ವಾತ್–ಭಾವಾದಿ ಭಿನ್ನಂ – ಅನ್ಯೋನ್ಯಾಭಾವವೆಂಬ ಅಭಾವಭಿನ್ನವಾದುದು ಇಲ್ಲದ್ದರಿಂದ (ಘಟಾಭಾವವು ಪಟದಲ್ಲಿ, ಪಟಾಭಾವವು ಘಟದಲ್ಲಿ, ಎಂಬಲ್ಲಿ ಭಾವರೂಪ ವಸ್ತುವಿನ ಅಸ್ತಿತ್ವವು–ವಿದ್ಯಮಾನತ್ವವು, ನಮ್ಮ ಮತದಂತೆ ಇರುವುದು), ಭೇದ ಪಂಚಕರೂಪಂ–ಈ ಪ್ರಕಾರವಾದ ವಿಕಲ್ಪಗಳ ವಿವೇಚನೆಯಿಂದ ('ಏಕಮೇವಾ ದ್ವಿತೀಯಂ' ಎಂಬ ವಾಕ್ಯದಿಂದಲೇ) ಪಂಚಭೇದವೂ (ಸಿದ್ಧವಾಗಿ), ದ್ವಿತೀಯಂ ಚ–ಎರಡನೆ ವಸ್ತುವಾದರೋ (ಎರಡು ಮಾತ್ರವಲ್ಲ–ಪಂಚಭೇದವೂ), ಪುನಃ–ಮತ್ತೆ, ಆಪತೇತ್–(ತಪ್ಪದೇ) ಪ್ರಾಪ್ತವಾಗುತ್ತದೆ.

**ದಶಪ್ರಮತಿನಾಮಾ ಮೇ ಗುರುಸ್ತ್ರಿದಶತೋಽಚಿತಃ ।**
**ಯೋಽದೀದಿಶದ್ದೋಷಮೇಕಂ ದೂಷ್ಯೇಷು ದಶಸು ಪ್ರಭುಃ ॥ ೮೫೯ ॥**

ಹತ್ತೂ ಪಕ್ಷಗಳಲ್ಲಿ ಒಂದೊಂದರ ದೋಷವನ್ನು ಎತ್ತಿತೋರಿಸುವ ಕುಶಲತೆಯು, ನಮ್ಮ ಆಚಾರ್ಯರಿಗೇ ಸಲ್ಲುವುದೆಂದು ಹೇಳಿ, ಅವರ ದೇವತ್ವ ವನ್ನು ಉಪಪಾದಿಸುತ್ತಾರೆ :—

---

ದಿಲ್ಲವೆಂದರೆ (ಅಭಾವದ ಅಭಾವವು ಭಾವರೂಪವೇ ಆಗುವುದರಿಂದ), ಭಾವ ನಿಷೇಧಕವಲ್ಲೆಂದರೂ ದ್ವಿತೀಯತ್ವವು ಪುನಃ ಪ್ರಾಪ್ತವಾಗುತ್ತದೆ ( ಹೀಗೆ ಅಭಾವ, ಭಾವಗಳೆರಡರ ನಿಷೇಧಕವೂ ಆಗಲಾರದು) (೮೫೭). ಭಾವದಿಂದ ಭಿನ್ನವಾದ ಅನ್ಯೋನ್ಯಾಭಾವವೆಂಬ ಅಭಾವವು ನಿನ್ನ ಮತದಂತೆ ಇರುವುದಿಲ್ಲವಾದ್ದರಿಂದ ಭಾವಾಭಾವಾತ್ಮಕ ಜಗತ್ತು ಮತ್ತು ಬ್ರಹ್ಮ ಈ ಮೂರರಿಂದ ಪಂಚಭೇದವು 'ಏಕಮೇವಾದ್ವಿತೀಯಂ' ಎಂಬ ವಾಕ್ಯದಿಂದಲೇ ದ್ವಿತೀಯದ ವಿವೇಚನೆಯಿಂದ ಸಿದ್ಧವಾಗುತ್ತದೆ (೮೫೮). ಪೂರ್ವೋಕ್ತ ದಶವಿಕಲ್ಪಗಳಲ್ಲಿಯೂ, ಆರಂಭದಲ್ಲಿ

ಮೇ ಗುರುಃ–ನನ್ನ ಗುರುಗಳು, ದಶಪ್ರಮತಿನಾಮಾ–ದಶಪ್ರಮತಿ ಎಂಬ ನಾಮವುಳ್ಳವರು (ಶ್ರುತ್ಯುಕ್ತನಾಮವಿದು) ; ತ್ರಿದಶೋಚಿತಃ-(ಅವರಿಗೆ) ದೇವತ್ವವು ಯೋಗ್ಯವೇ ಆಗಿದೆ ; ಯಃ–ಇವರು (ಯಾರು), ಪ್ರಭುಃ–ಸಮರ್ಥರಾದ ಮಹಾ ಜ್ಞಾನಿಗಳು (ಆದ್ದರಿಂದ), ದೂಷ್ಯೇಷು–ದೋಷಯುಕ್ತಗಳಾದ, ದಶಸು–ಹತ್ತು ಪಕ್ಷಗಳಲ್ಲಿ (ವಿಕಲ್ಪಗಳಲ್ಲಿ), ಏಕಂ–(ಪ್ರತಿಯೊಂದರಲ್ಲಿ) ದೋಷಗಳನ್ನು, ಆದೀ ದಿಶತ್–ತೋರಿಸಿಕೊಟ್ಟಿರುವರು. (ಪ್ರತಿಪಕ್ಷದಲ್ಲಿಯೂ ಮೂರು ಮೂರು ದೋಷ ಗಳನ್ನು ಹೇಳಿ–ಒಂದೊಂದು ಪಕ್ಷಕ್ಕೂ, ಹಿಂದೆ ನಿರೂಪಿಸಿದಂತೆ ತ್ರಿವಿಧದೋಷ ಗಳಿಂದ ಪರನು ಹೇಳುವ ಅರ್ಥವು 'ಏಕಮೇವಾದ್ವಿತೀಯಂ' ಶ್ರುತಿಗೆ ಯೋಗ್ಯ ವಾಗುವುದಿಲ್ಲವೆಂದು ತೋರಿಸುವ ಶಕ್ತರಿವರು; ತನ್ಮೂಲಕ, 'ತ್ರಯೋ ದೋಷಾಃ ದಶಸು ಯಸ್ಯ' ಎಂಬ ವ್ಯುತ್ಪತ್ತಿಯಿಂದ ತ್ರಿದಶತ್ವವು ಸಿದ್ಧವಾಗುತ್ತದೆ–ತ್ರಿದಶ ರೆಂಬುದು ದೇವತೆಗಳ ನಾಮವು).

**ಕಿಂ ಚ ದ್ವಿತೀಯಾಜ್ಞಾನಸ್ಯ ಕಾರ್ಯತ್ವಾದ್ಬ್ರಹ್ಮಣೋ ಜಗತ್ ।**
**ತೃತೀಯಂ ತೇನ ಗೌರ್ದೋರ್ಗಿ್ರ್ೀ ವಿದ್ಯತೇ ತೇನ ಕಾಚನ ॥ ೮೬೦ ॥**

'ನ ವಿದ್ಯತೇ ದ್ವಿತೀಯಂ ಯಸ್ಯ' ಎಂಬ ಪರಾಭಿಮತ ಸಮಾಸದಿಂದಲೂ, ಬ್ರಹ್ಮಪ್ರತಿಯೋಗಿಕ ದ್ವಿತೀಯವನ್ನು ನಿಷೇಧಿಸುವುದೆಂಬ ಅರ್ಥದಿಂದ, ಅನಾದಿ ಯಿಂದ ಬ್ರಹ್ಮನಿಗಿರುವುದೆಂದು ಪರನು ಅಂಗೀಕರಿಸುವ ಅಜ್ಞಾನವೆಂಬ ದ್ವಿತೀಯದ ನಿಷೇಧವನ್ನು 'ಏಕಮೇವಾದ್ವಿತೀಯಂ' ಎಂಬ ವಾಕ್ಯವು ಸಾಧಿಸುತ್ತದೆ ; ಆ ಅಜ್ಞಾನದ ಕಾರ್ಯವೆಂಬ ತೃತೀಯದ ನಿಷೇಧವನ್ನಲ್ಲ ; ಹೀಗೆ ಬ್ರಹ್ಮಾಶ್ರಿತ ಅಜ್ಞಾನವನ್ನೇ ಖಂಡನೆಮಾಡುವುದರಿಂದ, ಅಜ್ಞಾನವೇ ಇಲ್ಲದಿರಲು ಜಗನ್ಮಿ ಥ್ಯಾತ್ವವನ್ನೇ (ಜಗತ್ತಿಗೆ ಅಜ್ಞಾನ ಕಾರ್ಯತ್ವರೂಪಮಿಥ್ಯಾತ್ವವನ್ನು ಪರನು

---

ಉಕ್ತವಾದ ಮೂರು ವಿಕಲ್ಪಗಳಲ್ಲಿಯೂ ಒಂದೊಂದೂ ದೋಷವುಳ್ಳದ್ದೆಂದು ತೋರಿಸಿಕೊಟ್ಟ ನಮ್ಮ ಆಚಾರ್ಯರಿಗೆ ತ್ರಿದಶತ್ವವು (ದೇವತ್ವವು) ಉಚಿತವಾಗು ತ್ತದೆ; ದೋಷಯುಕ್ತಗಳಾದ ಹತ್ತು ಪಕ್ಷಗಳಲ್ಲಿ ದೋಷಗಳನ್ನು ತೋರಿಸಿದ್ದ ರಿಂದಲೇ 'ದಶಪ್ರಮತಿ' ಎಂಬ ನಾಮವೂ ನಮ್ಮ ಗುರುಗಳಿಗೆ ವೇದಪ್ರಸಿದ್ಧ ವಾಗಿದೆ 'ತ್ರಿದಶಾಃ ವಿಬುಧಾಃ ಸುರಾಃ' ಎಂಬ ಕೋಶದಂತೆ, ತ್ರಿದಶತ್ವವು ದೇವ ವಾಚಕವಾದುದು (೮೫೯). ಇದೂ ಅಲ್ಲದೇ 'ನ ವಿದ್ಯತೇ ದ್ವಿತೀಯಂ ಯಸ್ಯ'

ಹೇಳುವುದರಿಂದ) ನಿಷೇಧಿಸಿ, ಎರಡು ವಿಧದಿಂದ ಪರನಿಗೆ ಅನಿಷ್ಟವನ್ನೇ ಸಾಧಿಸುತ್ತದೆ–ಪರನಿಗೆ ಅಭಿಮತವಾದ ಎರಡು ಪ್ರಧಾನ ಪ್ರಮೇಯಗಳನ್ನು ಈ ವಾಕ್ಯವು ಖಂಡಿಸುವುದರಿಂದ, ನಮಗೆ ಅನುಕೂಲವೇ ಆಗಿರುತ್ತದೆನ್ನುತ್ತಾರೆ :—

ಕಿಂಚ–ಮತ್ತೂ ಏನೆಂದರೆ, ದ್ವಿತೀಯಾಜ್ಞಾನಸ್ಯ – (ದ್ವಿತೀಯಂ ಯದಜ್ಞಾನಂ ತಸ್ಯ) ಅನಾದ್ಯಜ್ಞಾನವೇ ಎರಡನೆಯದಾಗಿವುಳ್ಳ, ಅಜ್ಞಾನದ, ಕಾರ್ಯತ್ವಾತ್–ಕಾರ್ಯವಾದ್ದರಿಂದ, ಜಗತ್–ಜಗತ್ತೇ, ತೇನ–ಆ ಕಾರಣದಿಂದ, ತೃತೀಯಂ–ಮೂರನೆಯದು ; (ತೃತೀಯವನ್ನು ಈ ವಾಕ್ಯವು ನಿಷೇಧಿಸುವುದಿಲ್ಲವಾದ್ದರಿಂದ, ಜಗತ್ತು ಸತ್ಯವೇ ಆಯಿತು–ನಿನಗೆ ಅನಿಷ್ಟವನ್ನು, ನನಗೆ ಇಷ್ಟವಾದ ಮಿಥ್ಯಾತ್ವವನ್ನು ನಿವಾರಿಸುವುದೂ ಆದ ಕ್ಷೀರವನ್ನು ಈ ಶ್ರುತಿಯು ಕೊಟ್ಟಿತು), ಗೌಃ–(ಗೋವಿನಂತೆ ಶುದ್ಧವಾದ) ವೇದರೂಪದ ಹಸುವು, ದೋಗ್ಧ್ರೀ–ಹಾಲು ಕರೆಯುವುದು, ಕಾಚನ–ಯಾವುದೊಂದನ್ನು, ತೇ–ನಿನಗೆ, ನ ವಿದ್ಯತೇ–(ಇಕ್ಷಿತ ಕ್ಷೀರವು) ಇರುವುದಿಲ್ಲ.

**ಯದಖಂಡಾರ್ಥವಾದೀ ತ್ವಂ ತೃಣಖಂಡಂ ಚ ನಾದಿಶಃ ।**
**ತೈಲಂ ಧೂಲಿಷು ನಿಕ್ಷಿಪ್ತಂ ಪಿಣ್ಯಾಕಂ ಭಸ್ಮಸಾತ್ಕೃತಂ ।**
**ನಿಷೇಧೋ ನ ನಿಷೇಧ್ಯಂ ನ ಕೇನ ವಾ ಗೌರ್ಜಿಜೀವಿಷೇತ್ ॥೮೬೧॥**

---

ಎಂಬ ಪರಾಭಿಮತ ಸಮಾಸದಂತೆ ಸಹ, ಅನಾದಿಯಿಂದ ಬ್ರಹ್ಮಾಶ್ರಿತವೆಂಬ, ಬ್ರಹ್ಮಪ್ರತಿಯೋಗಿಕ ಅಜ್ಞಾನವೆಂಬುವ ದ್ವಿತೀಯ ವಸ್ತುವನ್ನು ಈ ಶ್ರುತಿಯು ನಿಷೇಧಿಸುತ್ತದೆಂದು ತಿಳಿಯಲು ಬರುತ್ತದೆ ; ಅಜ್ಞಾನ (ದ್ವಿತೀಯ)ವೇ ಇಲ್ಲದಿರಲು, (ಪರನು ಜಗತ್ತಿಗೆ ಅಜ್ಞಾನ ಕಾರ್ಯರೂಪ ಮಿಥ್ಯಾತ್ವವನ್ನು ಹೇಳುತ್ತಾನಾಗಿ) ಮಿಥ್ಯಾತ್ವವನ್ನು ನಿಷೇಧಿಸಿದಂತೆ ಆಗುತ್ತದೆ; ಅಜ್ಞಾನ ಕಾರ್ಯರೂಪದ ಜಗತ್ತು 'ತೃತೀಯ'ವು ; ಶ್ರುತಿಯು ದ್ವಿತೀಯ ನಿಷೇಧಕ ಮಾತ್ರವಾದುದು ; ಬ್ರಹ್ಮಾಶ್ರಿತವೆಂಬ ಅಜ್ಞಾನವನ್ನು, ಜಗನ್ಮಿಥ್ಯಾತ್ವವನ್ನು ನಿರಾಕರಿಸಿ, ನಿನ್ನ (ಪರನ) ಅನಿಷ್ಟವನ್ನೇ ಸಾಧಿಸಿದೆ; ಅದೇ ಕಾರಣದಿಂದ ಈ ಪ್ರಧಾನ ಪ್ರಮೇಯಗಳ ನಿರಾಕರಣೆಯಿಂದ, ನಮ್ಮ ಇಷ್ಟವನ್ನೇ ಸಾಧಿಸಿ, ನಮಗೆ ಅನುಕೂಲವೇ ಆಗಿದೆ; ಹೀಗೆ, ಗೋರೂಪದ ವೇದವು ನನಗೆ ಅಭೀಷ್ಟವಾದ ಅಮೃತವನ್ನೇ (ಕ್ಷೀರವನ್ನೇ ಕರೆದಿತಲ್ಲದೇ–ನಿನ್ನ ಇಷ್ಟವನ್ನು ಸಾಧಿಸಲಿಲ್ಲ; ವೇದವು ಹಸುವಿನಂತೆ ಪರಮಪೂಜ್ಯ ಶುದ್ಧವಸ್ತುವೇ ಆಗಿದೆ) (೮೬೦). ಪ್ರಸಕ್ತ ಶ್ರುತಿ

*

ವೇದವನ್ನು ಗೋವೆಂದು ವರ್ಣಿಸಿರುವುದರಿಂದ, ಅದೇ ನಿದರ್ಶನದಿಂದ ಪರಸಿದ್ಧಾಂತದ ಹೇಯತ್ವವನ್ನು, ಸ್ವಸಿದ್ಧಾಂತದ ಉಪಾದೇಯತ್ವವನ್ನು (ಅಂಗೀಕಾರಾರ್ಹತ್ವವನ್ನು) ಉಪಪಾದಿಸುತ್ತಾರೆ :—

ಯತ್—ಯಾವ ಕಾರಣದಿಂದ, ತೃಣಖಂಡಂ ಚ—ಹುಲ್ಲು ತುಂಡನ್ನು (ಒಂದು ಕಡ್ಡಿಯನ್ನು) ಸಹ, ನ ಅದಿಶಃ—(ಗೋವಿಗೆ) ಕೊಡದಿರುವ, ಅಖಂಡವಾದೀ—ಬ್ರಹ್ಮನು ಅಖಂಡನೆಂದು ವಾದಿಸುವ, ತ್ವಂ—ನೀನು (ಸ್ವಪ್ರಕಾಶನೆಂಬ ಅರ್ಥವನ್ನು ಸಹ ಹೇಳದೇ, ಐಕ್ಯವನ್ನೇ ಈ ವಾಕ್ಯದ ಅರ್ಥವೆಂದು ಸಾಧಿಸುವ ನೀನು, ನಿನ್ನಂತೆ ಸಿದ್ಧವಾಗುವ ಅರ್ಥವನ್ನು ಹೇಳದೇ), ತೈಲಂ—ತೈಲದಂತಿರುವ (ವಾಕ್ಯದ ಪ್ರಾಮಾಣ್ಯರಕ್ಷಣೆಗಾಗಿ, ವಿಚಾರವೆಂಬ ಮಥನದಿಂದ ಸಿದ್ಧವಾಗುವ ನಿಷೇಧಪರವಾದ) ಅರ್ಥವು, ಧೂಲಿಷು ನಿಕ್ಷಿಪ್ತಂ—ಧೂಳಿನಲ್ಲಿ ಚಲ್ಲಲ್ಪಟ್ಟಿರುತ್ತದೆ ; (ಸರ್ವಮಿಥ್ಯಾತ್ವವಾದದಿಂದ ನಾಶಮಾಡಲ್ಪಟ್ಟಿತು) ; ಪಿಣ್ಯಾಕಂ—(ಎಣ್ಣೆಯನ್ನು ತೆಗೆದ ಮೇಲೆ ಉಳಿಯುವ) ಹಿಂಡಿಯು, (ಅದರಲ್ಲಿ ಸಹ ಅಲ್ಪ ತೈಲವಿರುತ್ತದೆ), ಭಸ್ಮಸಾತ್ ಕೃತಂ—ಸುಟ್ಟು ಬೂದಿಮಾಡಲ್ಪಟ್ಟಿತು, (ಹಿಂಡಿಯ ಸ್ಥಾನದಲ್ಲಿರುವ ಜಗತ್ತು ಸಹ ತಿರಸ್ಕರಿಸಲ್ಪಟ್ಟಿತು), ನಿಷೇಧ—ನಿಷೇಧವೂ, ನ—ಇಲ್ಲ ; ನಿಷೇಧ್ಯಂ—ನಿಷೇಧ್ಯವೂ ಇಲ್ಲ (ತೈಲವೂ ಇಲ್ಲ, ಹಿಂಡಿಯೂ ಇಲ್ಲ) ; ಗೌಃ—ಗೋವಿನಂತಿರುವ ವೇದವಾಕ್ಯವು, ಕೇನ ವಾ – ಯಾವುದರಿಂದ, ಜಿಜೀವಿಷೇತ್ – ಜೀವಿಸಬಲ್ಲದು. (ಆಹಾರವಿಲ್ಲದೇ ಕೊಂದ ಹಾಗೆ ಆಯಿತು–ನಿನ್ನ ಈ ಅರ್ಥ ಪ್ರತಿಪಾದನೆಯು).

---

ವಾಕ್ಯಕ್ಕೆ ಬ್ರಹ್ಮನು ಸ್ವಪ್ರಕಾಶನೆಂಬ, ನಿನಗೆ ಅಭಿಮತವಾದ ಅರ್ಥವನ್ನು ಸಹ ಹೇಳದೇ, ಐಕ್ಯವಾದಿಯಾದ (ಅಖಂಡಾರ್ಥವಾದಿಯಾದ) ಪರನು ಗೋರೂಪದ ಶ್ರುತಿಗೆ ಒಂದು ಹುಲ್ಲು ಕಡ್ಡಿಯನ್ನೂ ಕೊಡಲಿಲ್ಲ ; ವಿಚಾರವೆಂಬ ಮಥನದಿಂದ ಸಿದ್ಧವಾಗುವ ನಿಷೇಧಪರವಾದ ತೈಲವೆಂಬ (ಸಾರಭೂತವಾದ) ಅರ್ಥವನ್ನು ಧೂಳಿನಲ್ಲಿ ಚೆಲ್ಲಿಕೊಟ್ಟಿರುವಿ ; ಉಳಿಯುವ ಹಿಂಡಿಯನ್ನು ಗೋವಿಗೆ ಕೊಡದೇ ಸುಟ್ಟು ಭಸ್ಮಮಾಡಿರುವಿ; ಆದ್ದರಿಂದ ಈ ವಾಕ್ಯಕ್ಕೆ ಪ್ರತಿಪಾದಿಸುವ ನಿಷೇಧವೆಂಬುದಾಗಲಿ, ನಿಷೇಧ್ಯವಾದು (ಹಿಂಡಿಯಲ್ಲಿಯೂ ಅಲ್ಪತೈಲದ ಭಾಗವಿರುತ್ತದೆಯಷ್ಟೆ) ದಾಗಲಿ, ಎರಡೂ ಸಿದ್ಧಿಸುವುದಿಲ್ಲ ; ಗೋವಿಗೆ ಆಹಾರ ಕೊಡದೇ ಕೊಂದಿರುವಿ ; ಶ್ರುತಿಯನ್ನು ವ್ಯರ್ಥಗೊಳಿಸಿರುವಿ. ಹೀಗೆ, ನಿರಾಶರಾದ (ಆಹಾರವಿಲ್ಲದೇ ತಪ್ತವಾದ)ವೇದರೂಪ ಗೋವುಗಳು, ಮಾರ್ಗತಪ್ಪಿ ರೋದನಮಾಡುತ್ತಾ, ರಕ್ಷಕನುಳ್ಳ

**ಏವಂ ನಿರಾಶಾಸ್ತಾಃ ಸರ್ವಾಃ ಕ್ರಂದಂತ್ಯೋ ವಾಜಿನೋಽನುಗಾಃ ।**
**ವಾಜಿ ಕಿಂಕರಮಧ್ವಾಖ್ಯಯೋಗೀಂದ್ರೇಣ ಪದೇ ಪದೇ ॥ ೮೬೨ ॥**
**ದತ್ತಗ್ರಾಸಾಃ ಸತಾಂ ವೃಂದಾರಣ್ಯಮೇತ್ಯ ಕೃತೋತ್ಸವಾಃ ।**
**ಗೋವಿಂದಮೇವ ಪರಿತಃ ಪ್ರಾಪುರಿತ್ಯತಿಮಂಗಲಂ ॥ ೮೬೩ ॥**

ಏವಂ–ಹೀಗೆ, ನಿರಾಶಾಃ–(ಆಹಾರವಿಲ್ಲದೇ) ನಿರಾಶೆಗಳಾದ, ತಾಃ ಗಾಃ–ವೇದರೂಪದ ಗೋವುಗಳು, (ರಕ್ಷಕರಿಲ್ಲದ ವೇದವಾಕ್ಯಗಳು), ಸರ್ವಾಃ–ಎಲ್ಲವೂ, ಕ್ರಂದಂತ್ಯಃ–(ಮಾರ್ಗ ಕಾಣದ ಗೋವುಗಳಂತೆ) ರೋದನಮಾಡುತ್ತಾ, ವಾಜಿನಃ–ಹಯಗ್ರೀವನ, ಅನುಗಾಃ–ಅನುಸರಿಸಿದವುಗಳಾಗಿ, ವಾಜಿ ಕಿಂಕರ ಮಧ್ವಾಖ್ಯಯೋಗೀಂದ್ರೇಣ–ಹಯಗ್ರೀವನ ಸೇವಕ (ಅಶ್ವರಕ್ಷಕನಾದ) ಮಧ್ವರೆಂಬ ಯೋಗೀಂದ್ರನಿಂದ, ಪದೇ ಪದೇ–ಆಗಾಗ (ಮೇಲಿಂದ ಮೇಲೆ), ದತ್ತಗ್ರಾಸಾಃ–ಕೊಡಲ್ಪಟ್ಟ ಆಹಾರವುಳ್ಳವಾಗಿ, ಸತಾಂ–ಸಜ್ಜನರ, ವೃಂದಾರಣ್ಯಂ–ಬೃಂದಾವನವನ್ನು; ಏತ್ಯ–ಹೊಂದಿ, ಕೃತೋತ್ಸವಾಃ–(ಆಹಾರಾದಿ–ತೃಣಾದಿ) ಮಹೋತ್ಸವವುಳ್ಳವರಾಗಿ, ಪರಿತಃ–ಎಲ್ಲ ಕಡೆಯಿಂದ (ನಿರಂತರವಾಗಿ), ಗೋವಿಂದಂ ಏವ–ಶ್ರೀಕೃಷ್ಣನನ್ನೇ (ವೇದಮುಖ್ಯ ಪ್ರತಿಪಾದ್ಯನಾದ ಶ್ರೀಹರಿಯನ್ನೇ), ಪ್ರಾಪುಃ–ಹೊಂದಿದವು (ಪ್ರತಿಪಾದಿಸಲು ಎಂದಿನಂತೆ ಉದ್ಯುಕ್ತವಾದವು); ಇತಿ–ಹೀಗೆ, ಅತಿಮಂಗಲಂ–ಅತ್ಯಂತ ಶುಭವನ್ನೇ [1] ಹೊಂದಿದವು.

---

ಅಶ್ವವನ್ನು ಕಂಡು, ಅಶ್ವವನ್ನು ಹಿಂಬಾಲಿಸಿದರೆ, ತಮಗೆ ಆಶ್ರಯಸ್ಥಾನವು ದೊರೆಯಬಹುದೆಂಬ ಆಶೆಯಿಂದ, ಅಶ್ವವನ್ನು ಹಿಂಬಾಲಿಸಿದವು; ಅಶ್ವರಕ್ಷಕನಾದ ಹಯಗ್ರೀವ ಕಿಂಕರನಾದ (ಅಶ್ವರಕ್ಷಕನೆಂಬ) ಮಧ್ವಾಖ್ಯಯೋಗೀಂದ್ರನಿಂದ ಪದೇ ಪದೇ ಒದಗಿಸಲ್ಪಟ್ಟ ಆಹಾರವುಳ್ಳವುಗಳಾಗಿ, ವೃಂದಾವನವೆಂಬ ಸಜ್ಜನ ಪ್ರಿಯಕವಾದ, ವನಭಾಗವನ್ನು ಸೇರಿ ತೃಣಜಲಾದಿಗಳಿಂದ ಉತ್ಸಾಹಗೊಂಡು,

1 ಪರನು ಪೂರ್ವಪಕ್ಷವನ್ನು ಈ ಶ್ರುತ್ಯರ್ಥಕ್ಕೆ, ಈ ಮುಂದಿನಂತೆ ಇಡುತ್ತಾನೆ (ಇಡಬಹುದು): 'ಅಥ ಯೋಽನ್ಯಾಂ ದೇವತಾಮುಪಾಸ್ತೇ ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುರೇವಂ' ಎಂದು ಭೇದೋಪಾಸಕರ ನಿಂದೆಯು ಶ್ರುತಿಯಲ್ಲಿ ಯುಕ್ತವಾಗುವುದಿಲ್ಲ; ಈ ಪೂರ್ವಪಕ್ಷವು ಉಪಪನ್ನವಲ್ಲ; ಏಕೆಂದರೆ: 'ನೀನು ಅಭೇದವು ಉಪಾಸನೆಗೆ ಅರ್ಹವಲ್ಲವೆಂದು ಅಂಗೀಕರಿಸಿರುವಿ; ಉಪಾಸನಾಕಾಲದಲ್ಲಿ ಭೇದೋಪಾಸನೆಯನ್ನೇ ಅಂಗೀಕರಿಸಿರುವಿ; ಆದ್ದರಿಂದ ಈ ನಿಂದೆಯು ನಿನಗೂ ಸಮಾನವೇ ಆಗುತ್ತದೆ: ಈ ಶ್ರುತ್ಯರ್ಥವೇನೆಂದರೆ:—ಯಃ–ಯಾವನು, ಅನ್ಯಾಂ–ಭಿನ್ನನಾದ ಬೇರೊಬ್ಬ ದೇವತೆ

ಯನ್ನು 'ಅನ್ಯೋಽಸಾವನ್ಯೋಽಹಂ' ಎಂದು ಉಪಾಸನೆ ಮಾಡಿದರೆ, ಅದು ವೇದವಿಷಯಕ ವಲ್ಲ ; ಸಃ–ಆತನು, ಪಶುರೇವ–ಅಜ್ಞಾನಿಯೇ ಸರಿ; ಅಥವಾ ವಿಷ್ಣೋರನ್ಯಾಂ–ವಿಷ್ಣು ಭಿನ್ನ ನಾದ ಶಿವಾದಿ ದೇವತೆಯನ್ನು, ಅನ್ಯೋಽಸೌ–(ದ್ವಾರಮಾತ್ರನಾದ ಈತನು) ಸ್ವಾಮಿಯು, ಅನ್ಯೋಽಹಂ–ನಾನು ದಾಸನು, ಎಂದು ಉಪಾಸಿಸುವನು, ನ ವೇದ–ತಿಳಿಯಲಿಲ್ಲವು, ಸಃ ಪಶುರೇವ ಇತ್ಯಾದಿ ಅಥವಾ ಅನ್ಯೋಽಸೌ–ವೈಷ್ಣಕುಲೋತ್ಪನ್ನನು, ಅನ್ಯೋಽಹಂ–ಶೈವ ಕುಲೋತ್ಪನ್ನನು ಇತ್ಯಾದಿ, ಶೈವಶಾಕ್ತಾದಿ ಮತನಿಂದಾಪರನೆಂದು ತಿಳಿಯಬಹುದಾಗಿದೆ ; ಈ ಅರ್ಥವಿಶೇಷಗಳು ಶ್ರುತಿವಾಕ್ಯದ ಪದಸಂಪತ್ತಿನಿಂದಲೇ ಲಭ್ಯವಾಗುತ್ತವೆ :

(i) 'ತದಿದಮಪಿ ಏತರ್ಹಿ ಯ ಏವಂ ವೇದಾಹಂ ಬ್ರಹ್ಮಾಸ್ಮೀತಿ ಇದಂ ಸರ್ವಂ ಭವತಿ' ಎಂಬ ವಾಕ್ಯದಲ್ಲಿ ಐಕ್ಯಜ್ಞಾನವೇ ಸ್ಪಷ್ಟವಾಗಿ ಉಪದಿಷ್ಟವಾಗಿರುತ್ತದೆಂಬುದೂ ಉಪಪನ್ನವಲ್ಲ ; ಈ ಶ್ರುತಿಯ ಪೂರ್ವವಾಕ್ಯವು (ಹಿಂದಿನ ವಾಕ್ಯವು) 'ಬ್ರಹ್ಮ ವಾ ಇದಮಗ್ರ ಆಸೀತ್ತದಾತ್ಮಾನಮೇವಾವೇದಹಂ ಬ್ರಹ್ಮಾಸ್ಮೀತಿ ತಸ್ಮಾತ್ತತ್ಸರ್ವಮಭವತ್' ಎಂಬ ವಾಕ್ಯವು, ಅದಕ್ಕೂ ಹಿಂದಿನ ವಾಕ್ಯದಲ್ಲಿ ಪ್ರಸ್ತುತನಾದ ಬ್ರಹ್ಮನೇ ಇವನೆಂದು ಪರಾಮರ್ಶಿಸಿ, ಆ ಬ್ರಹ್ಮನೇ ಹೀಗೆ 'ಅಹಂ ಬ್ರಹ್ಮಾಸ್ಮೀತಿ' ತಿಳಿದನೆಂದು ಹೇಳುತ್ತದೆ ; ಅಹಂ ಎಂಬ ಪದವು 'ಹಾತುಂ ಯೋಗ್ಯಂ ನ ಭವತೀತ್ಯಹಂ'—ತ್ಯಜಿಸಲು ಉಚಿತ ವಲ್ಲದ್ದು ಅಹಂ ಎಂದೂ, 'ಸದಾ ಅಸ್ತಿತಯಾ ಮೀಯಮಾನಮಸ್ಮಿ' ಎಂಬ ವ್ಯುತ್ಪತ್ತಿ ಯಿಂದ, 'ಆಸೀತ್' ಎಂಬುದರಿಂದ ಕೇವಲ ಭೂತಕಾಲದ ಅಸ್ತಿತ್ವಮಾತ್ರವುಳ್ಳದ್ದೆಂಬ ಶಂಕಾಪರಿಹಾರಕ್ಕಾಗಿ, ತ್ರಿಕಾಲದಲ್ಲಿ ಇರುವನೆಂದೇ ಗ್ರಹಿಸಲ್ಪಡತಕ್ಕವನೆಂದೂ ಹೇಳುತ್ತವೆ; ಪರಾಭಿಲಷಿತವಾದ ಜೀವೈಕ್ಯಕ್ಕೆ ಅವಕಾಶವೇ ಇರುವುದಿಲ್ಲ ; 'ಅಹಮಸ್ಮಿ' ಎಂಬ ಪದ ದಿಂದ ಜೀವನನ್ನು ಹಿಡಿದರೆ, ಪೂರ್ವೋಕ್ತ 'ಏವಂ' ಪದವು ವ್ಯರ್ಥವೆಂದಾಗುತ್ತದೆ ; ಮತ್ತು ಉತ್ತರವಾಕ್ಯದ (ವ್ಯಾಕೋಪವೂ) ವಿರೋಧವೂ ಬರುತ್ತದೆ ; ಮುಂದಿನ ವಾಕ್ಯವು 'ಏಷತ ಆತ್ಮಾಂತರ್ಯಾಮೀ ಯ ಆತ್ಮನಿ ತಿಷ್ಠನ್ ಆತ್ಮನೋಂತರೋಯಮಾತ್ಮಾನಂ ವೇದ' ಎಂದು ಮತ್ತೆ ಮತ್ತೆ ಹೇಳುವುದರಿಂದ, ವೇದತಾತ್ಪರ್ಯಕ್ಕೆ ವಿರೋಧವೆಂದೂ (ಅಂತ ರ್ಯಾಮಿಯಾಗಿ ಜೀವರಲ್ಲಿದ್ದರೂ, ಜೀವ ಭಿನ್ನನೆಂದು ತನ್ನನ್ನು ತಿಳಿದಿರುವನೆಂಬ ಅರ್ಥದ ವಿರೋಧವೂ) ಪ್ರಾಪ್ತವಾಗುತ್ತವೆ ;

(ii) ಆದ್ದರಿಂದ, ಯೋನ್ಯಾಂ–ಯಾರು ಸಕಲಜೀವಭಿನ್ನನಾದ ಪರದೇವತೆಯನ್ನು, ಅನ್ಯೋಽಸೌ–ಬ್ರಹ್ಮಶಬ್ದಾರ್ಥನಾದ ವಿಷ್ಣುವು, ಅಹಮಸ್ಮಿ–(ಅನ್ಯನಾದ ಜೀವನೆಂದು ತಿಳಿದು) 'ಅಹಂ ಬ್ರಹ್ಮಾಸ್ಮಿ' ಎಂದು ಉಪಾಸನೆಮಾಡುವನೋ, (ಮೊದಲಿನ ವಾಕ್ಯದಲ್ಲಿ ಪ್ರಸಕ್ತನಾದವನು ಜೀವನೆಂದು ತಿಳಿದು, ಜೀವಾಭಿನ್ನನೆಂದು ಉಪಾಸಿಸುವನೋ), ನ ಸ ವೇದ ಯಥಾ ಪಶುಃ–ಆತನು ಪಶುವಿನಂತೆ–ತಿಳಿದವನಲ್ಲ, ಎಂಬ ವಾಕ್ಯಾರ್ಥವನ್ನು ಗ್ರಹಿಸ ಬೇಕು (ಪೂರ್ವಪಕ್ಷದ ಶ್ರುತಿವಾಕ್ಯವು ಹೀಗೆ ಅಭೇದಜ್ಞಾನಿಯ ನಿಂದಾರೂಪವೇ ಆಗಿದೆ) ; 'ಇದಂ ಸರ್ವಂ ಭವತಿ' ಎಂಬ ಈ ವಾಕ್ಯದ ಉಪಸಂಹಾರಪದಗಳು ಸ್ಪಷ್ಟವಾಗಿ, ಇದಂ

ಸರ್ವಂ–ಮೋಕ್ಷವೆಂಬ ಮುಮುಕ್ಷುವಿನ ಭಾವನೆಯಂತೆ ಸರ್ವವನ್ನೂ (ಬಹುವಿಷಯ ಭೋಗರೂಪವೂ ಆದ ಆನಂದಾತಿಶಯವನ್ನು, ಭವತಿ–ಹೊಂದುತ್ತಾನೆಂದು ಫಲವನ್ನು ಹೇಳುತ್ತದೆ ; ಭೂ ಪ್ರಾಪ್ತಾವಿತಿ ಧಾತುವ್ಯಾಖ್ಯಾನವೂ ಇರುವುದರಿಂದ, ಭವತಿ ಎಂಬುದಕ್ಕೆ ಹೊಂದುವನೆಂಬ ಅರ್ಥವೂ ಯೋಗ್ಯವೇ ಆಗುತ್ತದೆ ; 'ಭವತಿ' ಎಂಬ ಪರಸ್ಮೈ ಪದವು ಫಲವು ಪರಾಧೀನವೆಂಬುದನ್ನು ಜ್ಞಾಪಿಸುತ್ತದೆ—ಪಶುಪಕ್ಷಿ ಮೊದಲಾದ ಜಗದಾಕಾರದಿಂದ ಪರಿಣಾಮ ಹೊಂದುವುದೆಂಬ, ಸಂಸಾರವು (ಸರ್ವಭಾವವು) ಬ್ರಹ್ಮವಿದ್ಯೆಯ ಫಲವೂ ಅಲ್ಲ : ಸರ್ವಸಂಸಾರನಿವೃತ್ತಿಯೇ ಅಲ್ಲಿ ಉಕ್ತವೆಂದು ತಿಳಿಯುವುದೂ ಯುಕ್ತವಲ್ಲ ; ಈ ಅರ್ಥವು ಪದಬೋಧ್ಯವೂ ಅಲ್ಲ—ವಾಕ್ಯಾರ್ಥವೂ ಅಲ್ಲ ; ಮುಖ್ಯಾರ್ಥವು ಸಂಭಾವ್ಯವಾಗಿರಲು ಅಮುಖ್ಯಾರ್ಥವನ್ನು ಗ್ರಹಿಸುವುದು ಯುಕ್ತವೂ ಅಲ್ಲ ; ಮತ್ತು ಹಿಂದೆಯೇ ಬ್ರಹ್ಮನು ಪಶುಪಕ್ಷ್ಯಾದಿ ಜಗದಾಕಾರದಿಂದ ಪರಿಣಾಮಹೊಂದಿದ್ದನೆಂದು ಅವಶ್ಯವಾಗಿ ಹೇಳಬೇಕಾಗುತ್ತದೆ—ಅದರಿಂದ ಉಪಕ್ರಮವಿರೋಧವೂ ಬರುತ್ತದೆ ; 'ಅಹಂ ಮನುರಭವಂ' ಇತ್ಯಾದಿ ವಾಮದೇವಋಷಿವಾಕ್ಯಕ್ಕೆ, ದೇವಾಸುರವಿಭಾಗವನ್ನು ಹೇಳುವ ಗೀತಾವಾಕ್ಯದಿಂದ ಅಭೇದವಾದಿಗಳ ನಿಂದೆಯೂ, ಭೇದವಾದಿಯ ಪ್ರಶಂಸೆಯೂ ಯುಕ್ತವಾಗದೇ ವಿರೋಧವೇ ಉಂಟಾಗುತ್ತದೆ ; ಬ್ರಹ್ಮವಿದ್ಯೆಯಿಂದ ಸರ್ವವೂ ಆಗುವನೆಂಬ ಜ್ಞಾನವು ಮನುಷ್ಯನಿಗೆ ಉಂಟಾದರೆ, 'ಬ್ರಹ್ಮವೇದ್ಯಸ್ಮಾತ್ಸರ್ವಮಭವತ್' ಮತ್ತು 'ಬ್ರಹ್ಮ ವಾ ಇದಮಗ್ರ ಆಸೀತ್, ತದಾತ್ಮಾನಮೇವ ಅವೇದಹಂ ಬ್ರಹ್ಮಾಸ್ಮಿ', 'ತದ್ಯೋದೇವಾನಾಂ ಪ್ರತ್ಯಬುಧ್ಯತ ಸ ಏವ ತದಭವತ್, ತಥರ್ಷೀಣಾಂ ತಥಾ ಮನುಷ್ಯಾಣಾಂ, ತದ್ಧೈತತ್ಪಶ್ಯನ್ ಋಷಿರ್ವಾ ದೇವಃ' ಎಂಬಂತೆ ಬ್ರಹ್ಮನೇ ಸರ್ವ ಸಂಸಾರಭಾವವನ್ನು ಹೊಂದುವನೆಂದು ಹೇಳಲೇನು ! ಆಗ ಯಾವನು 'ವೇದಾಹಂ ಬ್ರಹ್ಮಾಸ್ಮೀತಿ, ಸ ಇದಂ ಸರ್ವಂ ಭವತಿ ಎಂಬುದು ಅದ್ವೈತವಿಷಯಶಬ್ದಶ್ರವಣ ಮಾತ್ರದಿಂದ ಪ್ರಾಪ್ತವಾಗುವ ಫಲವಾದರೆ, ಅದ್ವೈತಸಾಕ್ಷಾತ್ಕಾರವೆಂಬ ಸ್ವಾಭಿಮತ ಬ್ರಹ್ಮವಿದ್ಯೆಯಿಂದ, ಆ ಉಪಾಸನೆಯಿಂದ, ಪಶುಪಕ್ಷ್ಯಾದಿ ಜಗದಾಕಾರದಿಂದ ಪರಿಣಾಮಹೊಂದುವರೆಂದು ಸಿದ್ಧವಾಗುತ್ತದೆ ; ಬ್ರಹ್ಮವಿದ್ಯೆಯ ಸಾಧನೆಯಿಂದ ಪ್ರಲಯದಲ್ಲಿ ಸರ್ವವೂ ನಷ್ಟವಾದರೂ, ಪುನಃ ಜಗದಾಕಾರವಾಗಿ ಬ್ರಹ್ಮವಿದ್ಯೆಯುಳ್ಳವನು ಜಗದಾಕಾರದಿಂದ ಸಂಸಾರದಲ್ಲಿ ಬೀಳುವರೆಂದು ಸಿದ್ಧವಾದಂತೆ ಆಗುತ್ತದೆ ; 'ಪೂರ್ವಾಚಾರ್ಯಾಃ' ಎಂದು ಹೇಳುವ ವೇದದ್ರಷ್ಟನ ವಚನವೂ ಇದರಿಂದ ಅಸಂಗತವಾಗುತ್ತದೆ ; ಆದ್ದರಿಂದ, 'ಅಹಂ ಮನುರಹಂ' ಎಂಬ ಶ್ರುತಿಯು ಈ ಅಸಂಭಾವ್ಯಪ್ರಮೇಯರೂಪದ ಅಜ್ಞಾನವನ್ನು ಪರಿಹರಿಸಲು ಪ್ರವೃತ್ತವಾಗಿದೆ, ಎಂದು ತಿಳಿಯುವುದು ಯುಕ್ತವಾಗುತ್ತದೆ, (ಸೂರ್ಯಾದಿಗಳ ಅಂತರ್ಯಾಮಿಯೇ, ದೇವೇಂದ್ರನಲ್ಲಿ ಆವಿಷ್ಟನೆಂಬ ಪ್ರಮೇಯವನ್ನು ಉಪದೇಶಿಸುತ್ತದೆ) ; ಆದ್ದರಿಂದ ಅದ್ವೈತಭಾವನೆಯ ಫಲವು ಮೋಕ್ಷವಲ್ಲ ; 'ನೀವೀಮೋಕ್ಷೋಹಿಮೋಕ್ಷಃ' ಎಂಬ ಅಮರೋಕ್ತ ಉಪದೇಶದಂತೆ ವನಿತಾವಿಷಯಕವಾದ ಅನುಭವವೇ ಫಲವೆಂದು ಉಪಹಾಸ ಮಾಡಬಹುದಾಗಿದೆ ; ದುರ್ಮತವನ್ನು ಅನು

**ಈಶಾತ್ಸರ್ವೇಶ್ವರಾದ್ವಿಷ್ಣೋರಪೇತಸ್ಯ ತತಃ ಪ್ರಭೋಃ ।**
**ಬ್ರಹ್ಮಣಸ್ತು ದ್ವಿತೀಯೇಽಪಿ ಬ್ರಹ್ಮಣ್ಯಭಿನಿವೇಶತಃ ॥ ೮೬೪ ॥**
**ನಿರ್ಗುಣಾಖ್ಯೇಽಭಿಮಾನೇನ ಭಯಂ ಭವತಿ ಯನ್ನೃಣಾಂ ।**
**ವಿಪರ್ಯಯೋ ಸ್ಮೃತಿಶ್ಚ ಸ್ಯಾನ್ಮುಕುಂದಬ್ರಹ್ಮನೋಚನಾತ್॥೮೬೫॥**

'ಭಯಂದ್ವಿತೀಯಾಭಿನಿವೇಶತಃ ಸ್ಯಾದೀಶಾದಪೇತಸ್ಯ ವಿಪರ್ಯಯೋಃ ಸ್ಮೃತಿಃ। ಯೆನ್ಮಾಯಯಾತೋ ಬುಧ ಆಭಜೇತ್ತಂ ಭಕ್ತ್ಯೈಕಯೇಶಂ ಗುರು ದೇವತಾತ್ಮಾ।' ಎಂಬ ಭಾಗವತ ಶ್ಲೋಕವು ಈ ಹಿಂದೆ ವ್ಯಾಖ್ಯಾತವಾಗಿದ್ದರೂ, ಸವಿಸ್ತರವಾದ ಅರ್ಥಾಂತರವನ್ನು ಹೇಳುತ್ತಾರೆ:—

---

ಗೋವಿಂದನನ್ನು (ಶ್ರೀಕೃಷ್ಣನನ್ನು) ಸುತ್ತಿಕೊಂಡು (ಆತನನ್ನೇ ಸ್ತುತಿಸುತ್ತ) ಆನಂದಿಸಿ ಪರಮಮಂಗಲವನ್ನು ಹೊಂದಿದವು (೮೬೨-೮೬೩). ಈಶಶಬ್ದ ವಾಚ್ಯನೂ, ಸರ್ವನಿಯಾಮಕನೂ, ಆದ ಪ್ರಭುವಾದ ವಿಷ್ಣುವೇ ಬ್ರಹ್ಮಶಬ್ದ ವಾಚ್ಯನು; ವಿಷ್ಣುತ್ವವಿಲ್ಲದ, ನಿರ್ಗುಣನೆಂಬ ಬ್ರಹ್ಮನಲ್ಲಿ ಮನಸ್ಸನ್ನಿಟ್ಟು, ಅಲ್ಲಿ ಅಭಿಮಾನದಿಂದ ಆಸಕ್ತನಾದ ಮನುಜನಿಗೆ ಅನರ್ಥರೂಪದ (ಸಂಸಾರ ಮತ್ತು ತಮಸ್ಸುಗಳೆಂಬ ವಿರುದ್ಧ ಫಲಪ್ರಾಪ್ತಿರೂಪದ) ಭಯವು ತಪ್ಪಿದ್ದಲ್ಲ; ಸಗುಣನಿಂದ (ಗುಣಪೂರ್ಣನಿಂದ ಭಿನ್ನನೇ (ದ್ವಿತೀಯನೇ) ನಿರ್ಗುಣನು; ನಿರ್ಗುಣೋ ಪಾಸನೆಯು, ಮೋಕ್ಷಪ್ರದನಾದ, ಅತಏವ, ಮುಕುಂದಪದ ವಾಚ್ಯನಾದ

---

ವಾದಿಸಿ, ಅದರಿಂದ ದೊರೆಯುವ ಫಲವನ್ನು ನಿಂದಿಸಿ, ಭೇದವಾದಿಯನ್ನು ಸ್ತುತಿಸುವುದೇ ಶ್ರುತಿತಾತ್ಪರ್ಯವಾಗಿದೆ; 'ಅನ್ಯೋಽಸೌ ವಿಷ್ಣುಃ ಅಹಂ ತು ಜೀವೋಽನ್ಯೋಽಸ್ಮಿ' ಎಂದು ಜೀವಾಂತರ್ಯಾಮಿ ವಿಷ್ಣುವೂ, ಜೀವನೂ ಭಿನ್ನರೆಂದು ಹೇಳಿ, ಇದಕ್ಕೆ ವಿರುದ್ಧವಾದ ಅಭೇದೋಪಾಸನೆಯಲ್ಲಿ ತೊಡಗುವವನು, ಪಶುವೇ ಸರಿ; ಈ ಹಿಂದೆ ಹೇಳಿದ ಮಿಥ್ಯಾ ಜ್ಞಾನಿಯೇ ಸರಿ; ಭೇದಜ್ಞಾನಿಯು ಗುಣಗಳನ್ನೇ ಶ್ರುತಿಯು ಹೇಳುತ್ತದೆ; 'ಸ ದೇವಾನಾಂ ಪಶುಃ; ಕಾಮಧೇನುಃ' ಇತ್ಯಾದಿವಾಕ್ಯದಿಂದ, ಈಗ ಭೇದಜ್ಞಾನಿಯಾಗಿದ್ದು, ಜನ್ಮಾಂತರ ದಲ್ಲಿ ಕರ್ಮವಶದಿಂದ ಅಭೇದವಾದಿಕುಲದಲ್ಲಿ ಜನ್ಮಬಂದರೆ, ಆಗ ಮನುಷ್ಯ ಪಶುಗಳೇ ಆಗುವರು; ಹಿಂದೆ ಹೇಳಿದಂತೆ ಮಿಥ್ಯಾಜ್ಞಾನಿಗಳೇ ಆಗುವರು—ಅದು ಅಪ್ರಿಯವು; ತಥಾ ಚ—ಅಪ್ರಿಯವಾದ ಪರನ ದುರ್ಬೋಧವನ್ನು ಉಪೇಕ್ಷಿಸಿ, ವೈಷ್ಣವಮತವನ್ನೇ ಅವ ಲಂಬಿಸುವ, (ಗೀತೋಕ್ತವಾದ, ಶ್ರೀಕೃಷ್ಣವಾಚಕ ಗೋವಿಂದ ಪದವನ್ನೇ ಮೂಲದಲ್ಲಿ ಪ್ರಯೋಗಿಸುವರು) ಹಿತೋಪದೇಶವನ್ನು ಮಾಡಿರುತ್ತದೆ.

ಬ್ರಹ್ಮಣಃ–ಬ್ರಹ್ಮಶಬ್ದವಾಚ್ಯನಾದ, ಪ್ರಭೋಃ ಸರ್ವಸ್ವಾಮಿಯಾದವನ, ತತಃ–[1] ದೆಶೆಯಿಂದ, ದ್ವಿತೀಯೇ–ಭಿನ್ನನಾದ, ಈಶಾತ್–ಈ ಶಬ್ದವಾಚ್ಯನೂ ಆದ, ಈಶ್ವರಾತ್–ಸರ್ವನಿಯಾಮಕನಾದ, ವಿಷ್ಣೋಃ–ವಿಷ್ಣುವಿನಿಂದ, ಅಪೇತಸ್ಯ–ರಹಿತನಾದ, ಬ್ರಹ್ಮಣಿ–ಬ್ರಹ್ಮನೆಂಬ, ನಿರ್ಗುಣಾಖ್ಯೇ–ನಿರ್ಗುಣನಾಮಕನಲ್ಲಿ, ಅಭಿನಿವೇಶತಃ–ಮನಸ್ಸನ್ನು ಪ್ರವೇಶಗೊಳಿಸಿ, ಅಭಿಮಾನೇನ–ಅಭಿಮಾನದಿಂದ (ಅಭಿನಿವೇಶತಃ ಎಂಬುದರ ಅರ್ಥವಿವರಣವಿದು), ಯತ್–ಏಕೆಂದರೆ, ನೃಣಾಂ–ಮಾನವರಿಗೆ, ಭಯಂ–ಭಯವು (ಅನರ್ಥದ ಭಯವು), ಭವತಿ–ಉಂಟಾಗುತ್ತದೆ ; ಮುಕುಂದ ಬ್ರಹ್ಮಮೋಚನಾತ್–ಮೋಕ್ಷಪ್ರದನಾದ ಬ್ರಹ್ಮ (ವಿಷ್ಣುವಿನ) ವಿಷಯವಿಲ್ಲದ್ದರಿಂದ, ವಿಪರ್ಯಯಃ–ವಿರುದ್ಧವಾದ, ಸ್ಮೃತಿಃ–ಧ್ಯಾನವೂ, ಸ್ಯಾತ್–ಆಗುತ್ತದೆ ( ಆದ್ದರಿಂದ ದ್ವಿತೀಯೋಪಾಸನವೆಂದರೆ, ನಿರ್ಗುಣಬ್ರಹ್ಮೋಪಾಸನೆಯೆಂದೇ ಅರ್ಥವು).

**ಸಗುಣಸ್ಯ ದ್ವಿತೀಯಂ ಹಿ ನಿರ್ಗುಣಂ ಸ್ಯಾನ್ನ ಚಾಪರಂ ।**
**ನಿರರ್ಥೋಽಸಿ ನಿರರ್ಥಾಖ್ಯಭೇದಕಂ ಯದಿ ಮುಂಚಸಿ ॥ ೮೬೬ ॥**

ದ್ವಿತೀಯ ಶಬ್ದದಿಂದ ನಿರ್ಗುಣನನ್ನೇ ಏಕೆ ತಿಳಿಯಬೇಕೆಂದರೆ ಹೇಳುತ್ತಾರೆ :—

ಸಗುಣಸ್ಯ–ಸಗುಣದ (ಗುಣವುಳ್ಳದ್ದರ) ದ್ವಿತೀಯಂ–ಎರಡನೆಯದು (ಭಿನ್ನವಾದುದು), ಹಿ–ಯಾವ ಕಾರಣದಿಂದ, ನಿರ್ಗುಣಂ–ಗುಣರಹಿತವಾದುದು,

---

ವಿಷ್ಣುವನ್ನು ತ್ಯಜಿಸುವಂತೆ ಮಾಡುತ್ತದೆ; ಆದ್ದರಿಂದ ನಿರ್ಗುಣೋಪಾಸನೆಯೇ ದ್ವಿತೀಯನ ಉಪಾಸನೆಯು–ಬೇರೆಯಲ್ಲ (೮೬೪–೮೬೫). ಸಗುಣವೆಂಬುದರ ದ್ವಿತೀಯವೇ ನಿರ್ಗುಣವೆಂಬುದು–ಬೇರೆಯಲ್ಲ ಸಗುಣನಿಂದ ವ್ಯಾವರ್ತಿಸುವ, ನಿರ್ಗುಣತ್ವವನ್ನು 'ನಿಃ' ಎಂಬ ಉಪಸರ್ಗವು ಹೇಳುವುದೆಂಬುದನ್ನು ಬಿಟ್ಟರೆ, ಬೇರಾವುದು ಸೂಚಿಸಬಲ್ಲದು? ಈ ನಿರ್ಗುಣತ್ವವನ್ನು ಆಶ್ರಯಿಸಿದರೆ,

[1] 'ಮನ್ಯೇಽಕುತಶ್ಚಿದ್ಭಯಮಚ್ಯುತಸ್ಯ ಪಾದಾಂಬುಜೋಪಾಸನಮತ್ರ ನಿತ್ಯಂ । ಉದ್ವಿಗ್ನಬುದ್ಧೇರಸದಾತ್ಮಭಾವಾದ್ವಿಶ್ವಾತ್ಮನಾ ಯತ್ರ ನಿವರ್ತತೇ ಭೀಃ ।' ಎಂಬ ಹಿಂದಿನ ಭಾಗವತಶ್ಲೋಕದಲ್ಲಿ ಸ್ಪಷ್ಟವಾಗಿ ವಿಷ್ಣುವೇ ಪ್ರಸ್ತುತನಾಗಿರುವುದರಿಂದ, ಮುಂದಿನ ಶ್ಲೋಕದಲ್ಲಿ ಆ ವಿಷ್ಣುವೇ ಈಶ ಪದದಿಂದ ಹೇಳಲ್ಪಟ್ಟಿರುವನೆಂಬುದನ್ನು ಸೂಚಿಸಲು ಇಲ್ಲಿ 'ತತಃ' ಎಂಬ ಪದವು ಉಪಯೋಗಿಸಲ್ಪಟ್ಟಿರುತ್ತದೆ.

ಸ್ಯಾತ್-ಆಗುತ್ತದೆಯೋ, ಅಪರಂ ನ ಚ-ಬೇರೆಯಲ್ಲವೋ, (ಆದ್ದರಿಂದ), ಯದಿ-ಯಾವ ಪಕ್ಷದಲ್ಲಿ, ನಿರರ್ಥಾಖ್ಯ ಭೇದಕಂ-ಸಗುಣದಿಂದ ವ್ಯಾವರ್ತಕವಾದುದನ್ನು[1] ಎಂಬ ಉಪಸರ್ಗದ ಗುಣರಾಹಿತ್ಯವೆಂಬ ಅರ್ಥವನ್ನು ಮುಂಚಿಸಿ-ತ್ಯಜಿಸುವೆಯಾದರೆ, ನಿರರ್ಥಃ ಅಪಿ-ಫಲವಿಲ್ಲದವನಾಗುತ್ತೀ.

**ದ್ವಿತೀಯಕೋಟಿಸ್ಥೇಶಾತ್ತೇ ದ್ವಿತೀಯಂ ಸ್ಯಾತ್ತದೇವ ಹಿ ॥ ೮೬೭ ॥**

ಅಲ್ಪಜ್ಞತ್ವಾದಿ ವಿರುದ್ಧ ಧರ್ಮಗಳುಳ್ಳ, ಬ್ರಹ್ಮರುದ್ರಾದಿದೇವತೆಗಳನ್ನೇಕೆ ದ್ವಿತೀಯ ಶಬ್ದವು ಹೇಳುವುದಿಲ್ಲವೆಂದೂ ನಿರ್ಗುಣನನ್ನೇ ಏಕೆ ತಿಳಿಯೇಕೆಂದೂ, ಈ ಶ್ಲೋಕದಿಂದ ವಿವರವಾಗಿ ತಿಳಿಸುತ್ತಾರೆ:—

ಪ್ರಸಕ್ತ ಭಾಗವತ ಶ್ಲೋಕದಲ್ಲಿ ದ್ವಿತೀಯ ಶಬ್ದದಿಂದ ಎರಡನೆಯ ಗುಂಪಿಗೆ ಸೇರಿದವರೆಂಬ, ಬ್ರಹ್ಮರುದ್ರಾದಿಗಳು ವಾಚ್ಯರಲ್ಲ; ಏಕೆಂದರೆ ಅವರಲ್ಲಿ ಸಹ ಅಂತರ್ಯಾಮಿಯಾಗಿ, ಸರ್ವೋತ್ತಮತ್ವಾದಿಗುಣವಿಶಿಷ್ಟನಾದ ವಿಷ್ಣುವೇ ಇದ್ದಾನೆ; ಆದ್ದರಿಂದ ಸಗುಣನಿರ್ಗುಣರಲ್ಲಿರುವಂತೆ ಸಾಕ್ಷಾದ್ವಿರುದ್ಧಭಾವವು, ಇವರಿಗೂ ವಿಷ್ಣುವಿಗೂ ಇರುವುದಿಲ್ಲ—ಆದ್ದರಿಂದ ನಿರ್ಗುಣನೇ ದ್ವಿತೀಯಪದವಾಚ್ಯನು; ದ್ವಿತೀಯಕೋಟಿಸ್ಥ ಈಶಾತ್-ಎರಡನೆ ಗುಂಪಿನ ಅನ್ಯದೇವತೆಗಳಲ್ಲಿ ಸೇರುವ ಈಶನಿಂದ, (ವಿಷ್ಣ್ವಧೀನರಾದ ಬ್ರಹ್ಮಾದಿಗಳ ದೆಸೆಯಿಂದ), ತೇ-ನಿನ್ನಂತೆ, ತದೇವ-ನಿರ್ಗುಣನೇ, ದ್ವಿತೀಯಂ ಸ್ಯಾತ್-ದ್ವಿತೀಯನಾಗುತ್ತಾನೆ; ಹಿ-ಬ್ರಾಹ್ಮಣ ಕೋಟಿಯಲ್ಲಿ ಯಾರೊಬ್ಬನು ದ್ವಿತೀಯ ಶಬ್ದವಾಚ್ಯನಾಗದೇ

---

ನಿರರ್ಥಕನೂ (ಫಲರಹಿತನೂ) ಆಗುವಿ; ಆದ್ದರಿಂದ ದ್ವಿತೀಯೋಪಾಸನೆಯುನ್ನು ನಿಷೇಧಿಸಲಾಗಿದೆ (೮೬೬). ನಿನ್ನ ಮತದಂತೆ, ದ್ವಿತೀಯ ಶಬ್ದವಾಚ್ಯನು ನಿರ್ಗುಣ ಬ್ರಹ್ಮನೇ ಅಲ್ಲದೇ, ಬ್ರಹ್ಮರುದ್ರಾದಿ ಅಂತರ್ಯಾಮಿಯಾದ ಈಶ ಶಬ್ದವಾಚ್ಯನಾದ ವಿಷ್ಣುವಲ್ಲ; ಅಧಿಷ್ಠಾನ ಭೂತರಾದ ರುದ್ರಾದಿಗಳು ಈಶರೂ ಅಲ್ಲ (೮೬೭).

---

1 'ಏಕಮೇವಾದ್ವಿತೀಯಂ' ಎಂಬ ವಾಕ್ಯದಲ್ಲಿ ದ್ವಿತೀಯ ಶಬ್ದದಿಂದ ಭಿನ್ನವೆಂಬ ಅರ್ಥವೇ ಗ್ರಾಹ್ಯವು; ಇಲ್ಲಿಯಾದರೋ ದ್ವಿತೀಯ ಶಬ್ದದಿಂದ, ನಿರ್ಗುಣನೇ ಗ್ರಾಹ್ಯನು; ಭಾಗವತದ ಪೂರ್ವೋತ್ತರ ಶ್ಲೋಕಗಳಲ್ಲಿ, ಅಚ್ಯುತ, ನಾರಾಯಣಾದಿ ಪದಗಳಿಂದ ಸಗುಣನಾದ (ಗುಣಪೂರ್ಣನಾದ) ವಿಷ್ಣುವೇ ಪ್ರಸ್ತುತನಾಗಿದ್ದಾನೆ; ಆದ್ದರಿಂದ ತದ್ವಿರುದ್ಧ ಧರ್ಮವುಳ್ಳ ನಿರ್ಗುಣನನ್ನೇ ದ್ವಿತೀಯ ಶಬ್ದದಿಂದ ತಿಳಿಯಲು ಯೋಗ್ಯವಾಗುತ್ತದೆ; ಎಂಬ ಯುಕ್ತಿಯನ್ನು ಇಲ್ಲಿ ನಿರಾಕರಿಸಲಾಗಿದೆ.

ಶೂದ್ರನೆಂದೇ ಹೇಗೆ ತಿಳಿಯಬೇಕೋ, ಹಾಗೆ ಜಾತಿಯ ಹೊರಗಿನವನಾದ ಅತ್ಯಂತ ನಿರ್ಗುಣನೇ ದ್ವಿತೀಯನೆಂದು ಸಿದ್ಧನೆಂಬ ಲೌಕಿಕ ಯುಕ್ತಿಯನ್ನು ಸೂಚಿಸುತ್ತದೆ; (ಈ ಶ್ಲೋಕವು ಪರನಿಗೆ ನಿರ್ಗುಣನ ಘಾತಕವಲ್ಲವೇ ಆಗುತ್ತದೆಯಲ್ಲದೇ, ಸಾಧಕವಲ್ಲ).

**ಅತೋ ಭಕ್ತ್ಯಾ ತಮೇವೇಶಂ ಭಜೇದ್ಯಶ್ಚ ಗುರುರ್ಭುವಿ ।**
**ದೇವತಾ ಚ ಭವೇತ್ತಾದೃಶಾಚಾರ್ಯೇ ಯತ್ನವಾನ್ ಬುಧಃ ।**
**ಇತಿ ವಾಕ್ಯಾರ್ಥಮಾಲೋಚ್ಯ ತ್ಯಜಾನ್ಯದ್ಭಜ ನಃ ಪ್ರಭುಂ ॥ ೮೬೮ ॥**

ಪ್ರಸಕ್ತ ಭಾಗವತಶ್ಲೋಕದಲ್ಲಿರುವ, 'ಗುರುದೇವತಾತ್ಮಾ' ಎಂಬ ಪದದ ಅರ್ಥವನ್ನು ವಿಶದಗೊಳಿಸುತ್ತಾರೆ:—

ಅತಃ—ಆದ್ದರಿಂದ, ತಂ ಏವ ಈಶಂ—ಆ ಸರ್ವನಿಯಾಮಕನಾದ ಶ್ರೀವಿಷ್ಣುವನ್ನೇ, ಭಕ್ತ್ಯಾ—ಭಕ್ತಿಯಿಂದ, ಭಜೇತ್—ಸೇವಿಸತಕ್ಕದ್ದು; ಯಃ—ಯಾರು (ಯಾವ ಶ್ರೀಮಧ್ವರು), ಭುವಿ—ಭೂಮಿಯಲ್ಲಿ, ಗುರುಃ—ತತ್ತ್ವೋಪದೇಶಕರೋ, ದೇವತಾ ಚ—(ವಾಯುದೇವನಾದ್ದರಿಂದ) ದೇವತೆಯೂ, ಭವೇತ್—ಆಗಿರುವರೋ, ತಾದೃಶಾಚಾರ್ಯೇ—ಆ ಪ್ರಕಾರದ ಮಹಿಮೆಯುಳ್ಳ ಆಚಾರ್ಯರಲ್ಲಿ, ಯತ್ನವಾನ್—ಯತ್ನವುಳ್ಳವನು, ಬುಧಃ—ವಿವೇಕಿಯು (ಭವೇತ್—ಎನಿಸುವನು)[1] ಇತಿ—ಹೀಗೆಂಬ, ವಾಕ್ಯಾರ್ಥಂ—ಶ್ಲೋಕಾರ್ಥವನ್ನು, ಆಲೋಚ್ಯ—ವಿವೇಚಿಸಿ ತಿಳಿದು, ನಃ—ನಮ್ಮ, ಪ್ರಭುಂ—(ಸ್ವಾಮಿಯಾದ) ವಿಷ್ಣುವನ್ನು (ಲೋಕದಲ್ಲಿ ನಾನಾ ಆಚಾರ್ಯರೆಂದು ಕರೆಯಲ್ಪಡುವವರನ್ನು ಬಿಟ್ಟು ಶ್ರೀಮಧ್ವರ ಚರಣಾನುಸರಣೆಯನ್ನೇ ಜ್ಞಾನಾರ್ಥಿಗಳಾದ ವಿವೇಕಿಗಳು ಮಾಡತಕ್ಕದ್ದೆಂದೂ ಸೂಚಿತ

---

ಪ್ರಸಕ್ತ ಭಾಗವತ ಶ್ಲೋಕದಲ್ಲಿರುವ 'ಗುರುದೇವತಾತ್ಮಾ' ಎಂಬುದು ಗುರುವೂ ದೇವ ಸ್ವರೂಪನೂ ಆದ, ವಾಯುದೇವನ ಅವತಾರರೂ, ತತ್ತ್ವೋಪದೇಶಕರೂ ಆದ, ಶ್ರೀಮಧ್ವರನ್ನೇ ಆಶ್ರಯಿಸೆಂದು ಹೇಳುತ್ತದೆ; ಅವರಲ್ಲಿರುವ ವಿಷ್ಣುವನ್ನೇ ಸೇವಿಸಬೇಕು; ಅನ್ಯರನ್ನು ತ್ಯಜಿಸಿ, ನಮ್ಮ ಪ್ರಭುಗಳನ್ನೇ ಶರಣುಹೊಂದು,

---

[1] 'ಆತ್ಮಾ ಜೀವೇ ಧೃತೌ ಯತ್ನೇ ಸ್ವಭಾವೇ ಪರಮಾತ್ಮನಿ' ಎಂಬ ಕೋಶದಿಂದ, ಗುರುಶ್ಚ ಸಾ ದೇವತಾ ಚ ಗುರುದೇವತಾ; ಗುರುದೇವತಾಯಾಂ ಆತ್ಮಾ ಯಸ್ಯ ' ಎಂಬ ಸಮಾಸವು ಸೂಚಿತವಾಗಿದೆ; 'ಗುರುದೇವತಾತ್ಮಾ' ಎಂದರೆ ಗುರುವೂ ದೇವತೆಯೂ ಆಗಿರುವ ಆಚಾರ್ಯನನ್ನು ಹೊಂದುವುದರಲ್ಲಿ ಯತ್ನಶೀಲವನು (ಆತ್ಮಾ) ಆಗಬೇಕೆಂದರ್ಥ.

ವಾಗಿದೆ), ಭಜ–ಸೇವಿಸು, ಅನ್ಯತ್–ಬೇರೆ ದೇವತೆಯನ್ನು (ಗುರುವನ್ನು), ತ್ಯಜ – ಬಿಡು (ಆಶ್ರಯಿಸಬೇಡ) (ಅನ್ಯತ್ – ಎಂಬುದರಿಂದ ನಿರ್ಗುಣನನ್ನು ತ್ಯಜಿಸೆಂಬುದೂ ಸೂಚಿತವಾಗಿದೆ.

**ಅವಿದ್ಯಮಾನೋಽಹ್ಯತ್ಯಂತಾಸನ್ನಪಿ ದ್ವಯಶಬ್ದಿತಃ ।**
**ದ್ವಿತೀಯೋ ನಿರ್ಗುಣಾಖ್ಯಾತ್ಮಾ ಧ್ಯಾತುರ್ನೈರ್ಗುಣ್ಯವಾದಿನಃ॥೮೬೯॥**
**ದುರ್ಧಿಯಾ ಭಾತಿ ತತ್ವಂ ತು ತನ್ನ ಕಿಂ ತ್ವಚ್ಯುತಾಭಿಧಃ ।**
**ಅಸ್ಮಾತ್ಪದ್ಯದ್ವಯಾತ್ಪೂರ್ವಪದ್ಯೇ ಸ್ಪಷ್ಟೋದಿತಃ ಕಿಲ ।**
**ಉಪರ್ಯುಪರಿ ಚಕ್ರಾಂಕೋಽಧೋಽಧೋ ನಾರಾಯಣಶ್ಚ ಯಃ**
**॥ ೮೭೦ ॥**

ಈ ಮುಂದೆ, 'ಅವಿದ್ಯಮಾನೋಽಹ್ಯವಭಾತಿ ಹಿ ದ್ವಯೋ ಧ್ಯಾತುರ್ಧಿಯಾ ಸ್ವಪ್ನಮನೋರಥೋ ಯಥಾ । ತತ್ಕರ್ಮ ಸಂಕಲ್ಪ ವಿಕಲ್ಪಕಂ ಮನೋಬುಧೋ ನಿರುಂಧ್ಯಾದಭಯಂ ಯತಃ ಸ್ಯಾತ್ ।' ಎಂಬ ಭಾಗವತದ ಶ್ಲೋಕಾರ್ಥವನ್ನೇ[1] ವಿಶದವಾಗಿ ನಿರೂಪಿಸುತ್ತಾರೆ :—

ಎಂಬುದೇ ಈ ಶ್ಲೋಕದ ತಾತ್ಪರ್ಯವಾಗುತ್ತದೆ.(೮೬೮). ಅವಿದ್ಯಮಾನೋಽಪ್ಯವಭಾವ ಹಿ ದ್ವಯಂ' ಎಂಬ ಶ್ಲೋಕದಲ್ಲಿ ದ್ವಯಶಬ್ದ ವಾಚ್ಯವಾದುದು, ಅತ್ಯಂತ ಅಸ್ವತಂತ್ರಗಳಾದ ಸ್ವಪ್ನ ಮನೋರಥಗಳಂತೆ, ಅಸ್ವತಂತ್ರ ವಸ್ತುವೇ ಆಗಿದೆ; ನಿರ್ಗುಣತ್ವವಾದಿಯೇ ದುಷ್ಟ ಮನಸ್ಸಿನಿಂದ ಧ್ಯಾನವಿಷಯನೆಂಬ ನಿರ್ಗುಣನಲ್ಲ; ಅದೇ ನೈರ್ಗುಣ್ಯವಾದಿಗೆ ತತ್ವವೆಂದು ತೋರುತ್ತದೆ ; ಆದರೆ ಸತ್ಯವಾದ ತತ್ವವು ಅಚ್ಯುತನಾಮಕನಾದ ವಿಷ್ಣುವೇ ಆಗಿದ್ದಾನೆ; ಪ್ರಸಕ್ತ ಶ್ಲೋಕದ ಹಿಂದಿನ ಪದ್ಯದಲ್ಲಿ ಅಚ್ಯುತನೆಂದು ಸ್ಪಷ್ಟವಾಗಿ ಭಾಗವತವೇ ಹೇಳಿದೆ; ಮುಂದಿನ

[1] ಭಾಗವತ ಶ್ಲೋಕಾರ್ಥವು ಹೀಗಿದೆ :—ಯಥಾ–ಹೇಗೆ, ಸ್ವಪ್ನಮನೋರಥಃ–ಸ್ವಪ್ನ ಮನೋರಥಗಳು, ಧ್ಯಾತುಃ–ಚಿಂತಿಸುವನ, ಧಿಯಾ–ಮನಸ್ಸಿನಿಂದ, ಅವಿದ್ಯಮಾನಃ–ಅಸ್ವತಂತ್ರಗಳೇ ಆಗಿದ್ದು, ದ್ವಯಃ–ದ್ವಯಶಬ್ದವಾಚ್ಯ (ಈ ಸ್ವಪ್ನ ಮನೋರಥಗಳು) ಅವಭಾತಿ ಹಿ–ತಿಳಿಯಬರುತ್ತದೆಯೋ, (ತಥಾ–ಹಾಗೆ) ತತ್–ಆ ಕಾರಣದಿಂದ, ಕರ್ಮ ಸಂಕಲ್ಪವಿಕಲ್ಪಂ – ಕರ್ಮಕಾರಣವಾದ ಸಂಕಲ್ಪವಿಕಲ್ಪ ರೂಪದಿಂದ ಕೆಲಸಮಾಡುವ, ಮನಃ–ಮನಸ್ಸನ್ನು, ಬುಧಃ–ಜ್ಞಾನಿಯು, ನಿರುಂಧ್ಯಾತ್–ನಿಗ್ರಹಿಸಬೇಕು (ಸ್ವತಂತ್ರನಾದ ಶ್ರೀಹರಿವ್ಯಾಪಾರಗಳೆಂದು ತಿಳಿಯಬೇಕು) ; ಯತಃ–ಏಕೆಂದರೆ (ಯಾವ ಕಾರಣದಿಂದ), ಅಭಯಂ–ನಿರ್ಭಯನು (ಮುಕ್ತಿ ಪಾತ್ರನು), ಸ್ಯಾತ್–ಆಗುವನು.

ನೈರ್ಗುಣ್ಯವಾದಿನಃ–ನಿರ್ಗುಣನ ಉಪಾಸನೆಯನ್ನು ಹೇಳುವ, ನಿರ್ಗುಣಾಖ್ಯಾತ್ಮಾ–ನಿರ್ಗುಣನೆಂಬ ಬ್ರಹ್ಮನು, ಧ್ಯಾತುಃ–ಧ್ಯಾನಿಸುವವನ, ದ್ವಿತೀಯಃ–ದ್ವಿತೀಯನು (ದ್ವಿತೀಯ ಶಬ್ದವಾಚ್ಯನು); ದ್ವಯಶಬ್ದಿತಃ–'ದ್ವಯ' ಪದದಿಂದ ಹೇಳಲಾಗಿದೆ; ಅವಿದ್ಯಮಾನಃ ಅಯಂ ಹಿ–(ಜಾಗ್ರತ್ ಪ್ರಪಂಚದಂತೆ ಇರದ) ಈ ಸ್ವಪ್ನನ ಮನೋರಥಗಳು; ಅತ್ಯಂತ ಅಸತ್ ಅಪಿ–ಅತ್ಯಂತ ಅಸ್ವತಂತ್ರಗಳಾದರೂ (ದ್ವಿತೀಯ ಶಬ್ದವಾಚ್ಯನೆಂಬ ನಿರ್ಗುಣಬ್ರಹ್ಮನಲ್ಲ); ತತ್–ಧ್ಯಾನ ಮಾಡಲ್ಪಡುವ ವಸ್ತುವು, ದುರ್ಧಿಯಾ–ದುಷ್ಟಮನಸ್ಸಿನಿಂದ, ತತ್ವಂ ಭಾತಿ–ನಿರ್ಗುಣಬ್ರಹ್ಮನೆಂದು ತೋರುತ್ತದೆ; (ತತ್–ಆ ನಿರ್ಗುಣನೆಂಬುವನು), ನ–ಅಲ್ಲ; ಕಿಂತು–ಮತ್ತೆನೆಂದರೆ, ಅಚ್ಯುತಾಭಿಧಃ–ಅಚ್ಯುತನಾಮಕ ವಿಷ್ಣುವೇ; ಅಸ್ಮಾತ್ ಪದ್ಯದ್ವಯಾತ್–ಈ ಎರಡು ಪದ್ಯಗಳಿಂದ, ಪೂರ್ವಪದ್ಯೇ–ಹಿಂದಿನ ಶ್ಲೋಕದಲ್ಲಿ ('ಮನ್ಯೇಽಕುತಶ್ಚಿದ್ಭಯಮಚ್ಯುತಸ್ಯ' ಎಂಬಲ್ಲಿ), ಸ್ಪಷ್ಟೋದಿತಃ ಕಿಲ–ಸ್ಪಷ್ಟವಾಗಿ ಉಕ್ತನಾಗಿರುವನಷ್ಟೆ; ಉಪರ್ಯುಪರಿ–ಅವ್ಯವಹಿತವಾದ ಮೇಲಿನ ಶ್ಲೋಕದಲ್ಲಿ, ಚಕ್ರಾಂಕಃ–ರಥಾಂಗಪಾಣಿ ಶಬ್ದೋಕ್ತನಾದ ವಿಷ್ಣುವೂ, ಅಧೋಧಃ–ಮುಂದಿನ ('ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾನುಸೃತಸ್ವಭಾವಃ । ಕರೋತಿ ಯದ್ಯತ್ಸಕಲಂ ಪರಸ್ಮೈ ನಾರಾಯಣೇತಿ ಸಮರ್ಪಯೇತ್ತತ್ ।' ಎಂದು), ಯಃ–ಯಾವ, ನಾರಾಯಣಶ್ಚ–ನಾರಾಯಣನೇ ಉಕ್ತನಾಗಿರುವನು.[1]

**ದೈವತ್ವೇನಾಸದೀಶಾದೇರ್ವಾ ದ್ವಯಸ್ಯಾಗ್ರಹಾಚ್ಚ ಭೀಃ ।**
**ಗುರುತ್ವೇನ ತು ತತ್ಸೇವ್ಯಾಸೂಚಿಪೂರ್ವವಿಶೇಷಣಾತ್ ॥ ೮೭೧ ॥**

ಪದ್ಯದಲ್ಲಿ ಚಕ್ರಪಾಣಿಯೆಂದೂ, ಇನ್ನೂ ಮುಂದೆ ನಾರಾಯಣನೆಂದೂ ನಾಮಗಳನ್ನು ಆತನಿಗೇ ಹೇಳುತ್ತದೆ; ನಿರ್ಗುಣನ ಪ್ರಸಕ್ತಿಯೇ ಆದಿಮಧ್ಯ, ಅಂತ್ಯಗಳಲ್ಲದಿರುವಾಗ ದ್ವಿತೀಯ ಶಬ್ದದಿಂದ ನಿರ್ಗುಣನು ಹೇಗೆ ವಾಚ್ಯನಾಗುವನು? (ಶಕ್ಯವಿಲ್ಲ) (೮೬೯–೮೭೦). ಬ್ರಹ್ಮಾದಿ ಅನ್ಯದೇವತೆಗಳಿಗೆ ದೇವತ್ವವಿದ್ದರೂ ಪರದೇವತಾತ್ವವಿಲ್ಲ; ಅವರು ಪರಾಧೀನರೂ ಆಗಿರುವರು; ಅವರಿಗೆ ನಿರ್ಗುಣತ್ವವು

[1] ಹೀಗೆ ನಿರ್ಗುಣನು ಈ ಅಧ್ಯಾಯೋಕ್ತ ಪ್ರಮೇಯ ವಿರುದ್ಧನು; ಉಪಕ್ರಮ ಪದ್ಯದಲ್ಲಿ, ಮಧ್ಯ ಮತ್ತು ಉಪಸಂಹಾರಗಳಲ್ಲಿ ಹರಿಯಲ್ಲಿಯೇ ಪ್ರಸಿದ್ಧಗಳಾದ ನಾರಾಯಣ, ಅಚ್ಯುತಾದಿ ಶಬ್ದಗಳಿಂದ ಸಗುಣನೇ ಪ್ರತಿಪಾದ್ಯನಾಗಿದ್ದಾನೆ.

'ಅವಿದ್ಯಮಾನೋಽಹ್ಯವಭಾತಿ ಹಿ ದ್ವಯಂ' ಎಂಬ ಭಾಗವತ ಶ್ಲೋಕ ಚರಣದ ಅರ್ಥಾಂತರವನ್ನು ಹೇಳುತ್ತಾರೆ :—

ದೈವತ್ವೇನ–ದೇವತ್ವವಿರುವುದರಿಂದ (ಪರದೇವತ್ವವಿಲ್ಲದ್ದರಿಂದ), ಬ್ರಹ್ಮಾದಿ ದೇವತೆಗಳಿಗೆ ನಿರ್ಗುಣತ್ವವು ಅಸಂಮತವಾದ್ದರಿಂದ), ಅಸದೀಶಾದೇಃ – ಪರ ದೇವತ್ವವಿಲ್ಲದ ರುದ್ರಾದಿಗಳಿಗೆ, ದ್ವಯಸ್ಯ–ಭಿನ್ನರಾದ್ದರಿಂದ ದ್ವಯಪದೋಕ್ತರಾದ ವರಿಗೆ (ದೇವತಾ ಸಮೂಹವೇ ಉಕ್ತವಾದ್ದರಿಂದ, ಏಕವಚನವಿದೆ), (ಉಪಲಕ್ಷಣ ದಿಂದ 'ಭಯಂದ್ವಿತೀಯಾಭಿನಿವೇಶತಃ' ಎಂಬಂತೆ ದ್ವಿತೀಯ ಪದದಿಂದ ಹೇಳ ಲಾದವರಿಗೆ), ಅಗ್ರಹಾತ್ ಚ – ಪರದೇವತಾತ್ವವು ಹಿಡಿಯುವುದಿಲ್ಲವಾದ್ದರಿಂದ ಭೀಃ–(ನಿನಗೆ) ಅಸದುಪಾಸನೆಯ ಭಯವು; (ಗುರುದೇವತಾತ್ಮಾ ಪದವು ಸಂಬಂಧಿ ಸುವುದಿಲ್ಲ), ತತ್ಸೇವಾ),–ರುದ್ರಾದಿಗಳ ಸೇವೆಯು, ಗುರುತ್ವೇನ ತು–ಗುರುಭಾವ ದಿಂದಲಾದರೂ, ಪೂರ್ವವಿಶೇಷಣಾತ್–('ಗುರು ದೇವತಾತ್ಮಾ' ಎಂಬ ಹಿಂದಿನ ವಿಶೇಷಣದಿಂದ, ಅಸೂಚಿ–(ದೇವತ್ವಗುರುತ್ವಭಾವದಿಂದ ಅವರ ಸೇವೆಯು ಕರ್ತ ವ್ಯವೆಂದು) ಸೂಚಿಸಲಾಗಿದೆ–ಕಿಂತು ಪರದೇವತೆಗಳಿಂದಲ್ಲ).

**ತತ್ತೇಷಾಂ ನಿರ್ಗುಣಾದೀನಾಂ ಪ್ರಾಪ್ತ್ಯೈ ಕರ್ಮಾದಿಕಂ ಚರೇತ್ ।**
**ಬುಧೋ ನಿರುಂಧ್ಯಾದ್ಧಿ ಮನೋ ವಿಷ್ಣಾವೇವ ನಿಯೋಜಯೇತ್**
॥ ೮೭೨ ॥

'ತತ್ಕರ್ಮ ಸಂಕಲ್ಪವಿಕಲ್ಪಕಂ ಮನಃ' ಎಂಬುದರ ಅರ್ಥವನ್ನು ಹೇಳು ತ್ತಾರೆ :—

---

ನಿನಗೂ (ಪರನಿಗೂ) ಸಂಮತವಲ್ಲ; ಹೀಗಿರುವ ದ್ವಯಶಬ್ದವಾಚ್ಯರಾದ ಪರಬ್ರಹ್ಮಭಿನ್ನರಾದ ರುದ್ರಾದಿಗಳಿಗೆ ಪರದೇವತಾತ್ವವು ಯುಕ್ತವಲ್ಲ; ಆದರೆ ಗುರುದೇವತಾತ್ಮಪದವು ಅವರ ವಾಚಕವೂ ಆಗಿದೆ; ರುದ್ರಾದಿಗಳಿಗೆ ಗುರುತ್ವವೂ ದೇವತ್ವವೂ ಇರುವುದು ಸತ್ಯವೆಂದು 'ಗುರುದೇವತಾತ್ಮಾ' ಎಂಬ ವಿಶೇಷಣದಿಂದ ಈ ಮೊದಲೇ ಸೂಚಿತವಾಗಿವೆ; ಆದ್ದರಿಂದ ಅವರ ಸೇವೆಯೂ ಯುಕ್ತವೇ ಆಗುತ್ತದೆ (೮೭೧). ಆದರೆ ನಿರ್ಗುಣತ್ವಾದಿ ಫಲಪ್ರಾಪ್ತಿಗಾಗಿ, ಅವರು ಶ್ರವಣ, ಮನನ, ಧ್ಯಾನ, ಯಜನಾದಿ ಕರ್ಮಗಳಿಂದ ಪರದೇವತೆಯನ್ನು ಉಪಾಸಿಸುವುದು, ಯುಕ್ತವಲ್ಲ; ಆದ್ದರಿಂದ ಸಂಕಲ್ಪ ವಿಕಲ್ಪ ರೂಪದ ಮನಸ್ಸಿನ ವ್ಯಾಪಾರಗಳನ್ನು ನಿರೋಧಿಸಿ, ಶ್ರೀವಿಷ್ಣುವಿನಲ್ಲಿಯೇ ಮನಸ್ಸನ್ನು, ವಿವೇಕಿಯು ಯೋಚಿಸ

ತತ್ (ತಸ್ಮಾತ್) ಆದ್ದರಿಂದ, ತೇಷಾಂ ನಿರ್ಗುಣಾದೀನಾಂ–ನಿರ್ಗುಣರೆಂಬ ಆ ರುದ್ರಾದಿಗಳ, ಪ್ರಾಪ್ತ್ಯೈ–ಪ್ರಾಪ್ತಿಗಾಗಿ (ಅವರನ್ನು ಹೊಂದಲಿಕ್ಕಾಗಿ), ತೇಷಾಂ–ಅವರಿಗಾಗಿ, (ಅವರ ಪ್ರೀತ್ಯರ್ಥವಾಗಿ), ಕರ್ಮಾದಿಕಂ–(ಪರದೇವತೆಗಳೆಂಬುದರಿಂದ ಆಚರಿಸುವ ಶ್ರವಣಮನನ ಧ್ಯಾನ ಯಜನಾದಿ) ಕರ್ಮಗಳನ್ನು ಚರತ್–ಆಚರಿಸುವ, ಮನಃ–ಮನಸ್ಸನ್ನು, ಬುಧಃ–ವಿವೇಕಿಯು ಸಂಕಲ್ಪವಿಕಲ್ಪ ರೂಪದ ಕರ್ಮಾನುಷ್ಠಾನಾದಿಗಳನ್ನು) ನಿರುಂಧ್ಯಾತ್ – ನಿರೋಧಿಸತಕ್ಕದ್ದು (ನಿರೋಧಿಸಿ), ವಿಷ್ಣೌ ಏವ–ವಿಷ್ಣುವಿನಲ್ಲಿಯೇ, ನಿಯೋಜಯೇತ್–ಯೋಜಿಸಬೇಕು (ಮನಸ್ಸನ್ನು ವಿಷ್ಣುವಿನಲ್ಲಿ ಪ್ರವೃತ್ತಿಸುವಂತೆ ಮಾಡಬೇಕು).

**ಮುಕುಂದಾದಚ್ಯುತಾಖ್ಯಾಚ್ಚ ತತಃ ಸ್ಯಾದಭಯಂ ಕಿಲ ।**
**ಅಸತಃ ಸತ್ತ್ವಶೂನ್ಯಸ್ಯ ನಿರ್ಗುಣಸ್ಯಾತ್ಮಭಾವನಾತ್ ॥ ೮೭೩ ॥**

**ಉದ್ವಿಗ್ನಬುದ್ಧೇಃ ಪುಂಸಃ ಶ್ಯಾದ್ಯಾತ್ಮನಾಭೀರಭೂದ್ಧಿಯಾ ।**
**ವಿಶ್ವಾಂತಃ ಪಾತಿ ರುದ್ರಾದೇರ್ನಾ ಭೀರ್ನಿಶ್ಚಸ್ವಭಾವತಃ ॥ ೮೭೪ ॥**

**ಸಾ ಯತ್ರಾಚ್ಯುತಪಾದಾಬ್ಜೋಪಾಸನಾಯಾಂ ನಿವರ್ತತೇ ।**
**ಸರ್ವಾತ್ಮನಾ ವಿಶ್ವಪದಮಿತ್ಥಂ ಪಂಚಾರ್ಥವದ್ಧ್ರುವಂ ॥ ೮೭೫ ॥**

'ಮನ್ಯೇಕುತಶ್ಚಿದ್ಭಯುವಚ್ಯುತಸ್ಯ ಎಂಬ ಭಾಗವತಶ್ಲೋಕಾರ್ಥವನ್ನು ನಿರೂಪಿಸುತ್ತಾರೆ :—[1]

---

ಬೇಕಾದುದು ಅವಶ್ಯ ಕರ್ತವ್ಯವಾಗಿದೆ (೮೭೨). ಅಚ್ಯುತನಾಮಕನಾದ ಮುಕುಂದನಿಂದಲೇ, ಅಭಯವು (ಮೋಕ್ಷವು) ದೊರೆಯುತ್ತದೆ; ಅತ್ಯಂತ ಅಸತ್ತಾದ (ಪರಾಧೀನರಾದ ರುದ್ರಾದಿಗಳನ್ನು) ಪರದೇವತೆಯೆಂದು ಧ್ಯಾನಿಸು

[1] 'ಮನ್ಯೇಽಕುತಶ್ಚಿದ್ಭಯುಮುಚ್ಯುತಸ್ಯ । ಪಾದಾಂಬುಜೋಪಾಸನಮತ್ರ ನಿತ್ಯಂ । ಉದ್ವಿಗ್ನಬುದ್ಧೇರಸದಾತ್ಮಭಾವಾ । ದ್ವಿಶ್ವಾತ್ಮನಾ ಯತ್ರ ನಿವರ್ತತೇ ಭೀಃ ॥' ಎಂಬುದು ಭಾಗವತ ಮೂಲ ಶ್ಲೋಕವು; ಈ ಶ್ಲೋಕಾರ್ಥವನ್ನು ಇಲ್ಲಿ ವಿವರಿಸಲಾಗಿದೆ; ಇದರ ಭಾವಾರ್ಥವೇನೆಂದರೆ: ಅಚ್ಯುತನ ಪಾದಾಂಬುಜಗಳ ನಿತ್ಯ ಉಪಾಸಕನಿಗೆ ಯಾವ ಕಡೆಯಿಂದಲೂ ಭಯವಿಲ್ಲದ ಸ್ಥಾನವು (ಮೋಕ್ಷವು) ಸಿದ್ಧವೇ ಆಗುತ್ತದೆ; ಅಸದಾತ್ಮಭಾವವುಳ್ಳವರಿಗೆ, ಎಂದರೆ ಜನನ ಮರಣಾದಿಗಳುಳ್ಳ ಜೀವ ಸ್ವಭಾವದ ರುದ್ರಾದಿಗಳನ್ನು ಪರದೇವತೆಯೆಂದು (ನಿರ್ಗುಣ ಬ್ರಹ್ಮನೆಂದು) ಉಪಾಸಿಸುವುದರಿಂದ ಉಂಟಾಗುವ ಹೀನ ಯೋನಿಗಳಲ್ಲಿ ಸುತ್ತುವುದೆಂಬ ಸಂಸಾರಭಯವು, ಅಚ್ಯುತನ ಭಕ್ತರಿಗೆ ಸರ್ವಥಾ ಇರುವುದಿಲ್ಲ.

ಅಚ್ಯುತಾಖ್ಯಾತ್–ಅಚ್ಯುತನೆಂಬ ನಾಮವುಳ್ಳ, ತತಃ ಮುಕುಂದಾತ್– ಆ ಮೋಕ್ಷಪ್ರದನಾದ ಮುಕುಂದನಿಂದಲೇ, ಅಭಯಂ–ಅಭಯವು (ನಿರ್ಭಯವಾದ ನಿತ್ಯಾನಂದ ಸ್ಥಿತಿಯು), ಸ್ಯಾತ್ – ಆಗುತ್ತದೆ, ಕಿಲ – ಪ್ರಸಿದ್ಧವು ; (ಅಚ್ಯುತನ ಪಾದಕಮಲದ ಉಪಾಸನೆಯೇ ಅಕುತಶ್ಚಿದ್ಭಯವು) ; ಅಸತಃ–ಸತ್ವವಿಲ್ಲದ, ಸತ್ವಶೂನ್ಯಸ್ಯ–ಅತ್ಯಂತ ಅಸತ್ತಾದ, ನಿರ್ಗುಣಸ್ಯ–ನಿರ್ಗುಣನ(ನನ್ನು), ಆತ್ಮಭಾವನಾತ್–ಪರಮಾತ್ಮನೆಂದು ಉಪಾಸಿಸುವುದರಿಂದ, ಅಸದಾತ್ಮಭಾವಾತ್ ಎಂಬುದರ ಅರ್ಥವಿದು), ಉದ್ವಿಗ್ನಬುದ್ಧೇಃ –ಕ್ಷೋಭೆಗೊಂಡ ಮನಸ್ಸುಳ್ಳವನಿಗೆ, ಪಕ್ಷಿಶ್ವಾದ್ಯಾತ್ಮನಾ – ಪಕ್ಷಿ ಶ್ವಾ (ನಾಯಿ) ಮುಂತಾದ ದೇಹದಿಂದ, (ವಿವಿಧ ಜನ್ಮಗಳಿಂದ ಸುತ್ತುವ), ಭೀಃ–(ಸಂಸಾರ) ಭಯವು, ಧಿಯಾ–ಮನಸ್ಸಿನಿಂದಲೇ, ಅಭೂತ್ – ಉಂಟಾಗಿದೆ (ವಿಶ್ವಾತ್ಮನಾ ಎಂಬುದರ ಅರ್ಥವಿವರಣೆಯಿದು) ; ವಿಶ್ವಾಂತಃಪಾತಿ ರುದ್ರಾದೇಃ ವಾ – ವಿಶ್ವದೊಳಗೇ ಸೇರಿದ ರುದ್ರಾದಿಗಳಿಂದಲೇ[1] ಆಗಲಿ, ಯಾ ಭೀಃ–(ನಿರ್ಗುಣಭಾವನೆಯಿಂದ ರುದ್ರಾದಿಗಳನ್ನು ಪರದೇವತೆಯೆಂದು ಉಪಾಸಿಸುವವರಿಗೆ, ಹೀನ ಯೋನಿಗಳನ್ನು ಹೊಂದುವುದೆಂಬ) ಯಾವ ಭಯವೋ, ವಿಶ್ವಸ್ವಭಾವತಃ–(ರುದ್ರಾದಿಗಳೇ ಪರದೇವತೆ ಎಂಬ) ಭಾವನೆಯಿಂದ ಉಂಟಾಗುವ ಭಯವು, ಸಾ–ಅದು (ಆ ಭಯವು), ಅಚ್ಯುತಪಾದಾಬ್ಜೋಪಾಸನಾಯಾಂ–ವಿಷ್ಣುಪಾದಪದ್ಮಗಳ ಉಪಾಸನೆಯಲ್ಲಿ ತೊಡಗಲು, ಸರ್ವಾತ್ಮನಾ–ಸರ್ವಪ್ರಕಾರದಿಂದ, ನಿವರ್ತತೇ–ತೊಲಗುತ್ತದೆ ; ವಿಶ್ವಪದಂ–(ಇಲ್ಲಿ) ವಿಶ್ವಪದವು, ಇತ್ಥಂ–ಹೀಗೆ, ಪಂಚಾರ್ಥವತ್–ಐದು ವಿವಿಧಾರ್ಥವುಳ್ಳದ್ದು, ಧ್ರುವಂ–ನಿಶ್ಚಯವು.[2]

---

ವುದರಿಂದ ಮನಸ್ಸು ಉದ್ವಿಗ್ನವಾಗುತ್ತದೆ; ಪಕ್ಷಿ, ಶ್ವಾದಿ ಹೀನಯೋನಿಗಳ ಪ್ರಾಪ್ತಿಯೆಂದು ಮನಸ್ಸು ಭಯಗೊಳ್ಳುತ್ತದೆ; ರುದ್ರಾದಿಗಳೂ ಜಗತ್ತಿನಲ್ಲಿ

[1] ರುದ್ರಾದಿಗಳೂ ಸರ್ವಪ್ರಕಾರದಿಂದ ಜನನಮರಣಾದಿ ಭಯಗ್ರಸ್ತರಾದ್ದರಿಂದ, ಯಾವ ಭಯವುಳ್ಳವರೋ ;

[2] ‘ ವಿಶ್ವಾತ್ಮನೇ ’ ಎಂಬಲ್ಲಿ ದ್ವಂದ್ವಸಮಾದಿಂದ, ಆವೃತ್ತಿ ಮಾಡಿಕೊಳ್ಳುವುದರಿಂದ ಎರಡರ್ಥಗಳೂ, ಯಥಾಸ್ಥಿತ ಪದಗಳಿಂದ ಮೂರು ಅರ್ಥಗಳು (ಅಸತಃ–ನಿರ್ಗುಣನಿಗೆ ಆತ್ಮಭಾವಾತ್–ಜೀವನೆಂಬ ಭಾವನೆ : ಸರ್ವಾತ್ಮನಾ–ಗುಣಪೂರ್ಣನಾದ ಪರಮಾತ್ಮನಿಂದ ಅಭಿನ್ನನೆಂದು ತಿಳಿಯುವುದು ಮತ್ತು ಪಕ್ಷ್ಯಾದಿ ಯೋನಿ ಪ್ರಾಪಕವೆಂಬ ಮುಂತಾದ ಸರ್ವಪ್ರಕಾರದ ಭಯವು : ರುದ್ರಾದಿಗಳನ್ನು ನಿರ್ಗುಣ ಬ್ರಹ್ಮನೆಂದು ಉಪಾಸಿಸುವುದರ, ಫಲವು) ಇತ್ಯಾದಿಗಳು ಹೀಗೆ ಒಟ್ಟಾಗಿ ಪಂಚಾರ್ಥಗಳು ವಿವಕ್ಷಿತವಾಗಿರುತ್ತವೆ.

**ನೋ ಚೇತ್ಸಾರ್ವಜನೀನೋಕ್ತಿತ್ಯಾಗೋ ನಿರ್ಹೇತುಕೋ ಭವೇತ್ ।**
**ವಾದೀಭಪಂಚವಕ್ತ್ರಾಭಮದೋ ವಿಶ್ವಪದಂ ತತಃ ॥ ೮೭೬ ॥**

ನೋ ಚೇತ್ – ಈ ಪ್ರಕರಣವು ನಿರ್ಗುಣಾದಿ ನಿರಾಕರಣಪರವಲ್ಲದಿದ್ದರೆ, (ನಿರ್ಗುಣಾದಿಗಳನ್ನೇ ಪ್ರತಿಪಾದಕವೆಂದಾದರೆ), ಸಾರ್ವಜನೀನೋಕ್ತಿತ್ಯಾಗಃ – ಸರ್ವಜನಪ್ರಸಿದ್ಧವಾದ ಅಚ್ಯುತಾದಿ ಪದತ್ಯಾಗವು ನಿರ್ಹೇತುಕಃ–ಕಾರಣವಿಲ್ಲದ್ದು, ಭವೇತ್–ಆಗಬೇಕಾಗುತ್ತದೆ; (ಅಥವಾ ನೋಚೇತ್–ವಿಶ್ವಪದವು ಪಕ್ಷಿ ಶ್ವಾದಿ ಹೀನ ಜಗತ್ತಿನ ಸ್ಮಾರಕವು ಅಲ್ಲದಿದ್ದರೆ, ಸಾರ್ವಜನೀನೋಕ್ತಿಃ–ಸರ್ವಾತ್ಮನಾ ಎಂಬ ಉಕ್ತಿಯ ತ್ಯಾಗವು, ಭವೇತ್–ಆಗಬೇಕಾಗುತ್ತದೆ); ತತಃ–ಆದ್ದರಿಂದ, ಅದಃ ವಿಶ್ವಪದಂ–ಅಲ್ಲಿರುವ ವಿಶ್ವಪದವು, ವಾದೀಭಪಂಚವಕ್ತ್ರಾಭಂ–ವಾದಿಗಳೆಂಬ ಗಜಗಳಿಗೆ ಸಿಂಹಪ್ರಾಯವು (ಆಯಿತು; ಹೀಗೆ ವಿಶ್ವಪದವು ಪ್ರಶಂಸನೀಯವೇ ಆಗಿದೆ).

**ಅತ್ರ ಷಣ್ಮತಧರ್ಮಾಣಾಂ ಮಧ್ಯೇ ಮಧ್ವಮತಾಧ್ವನಾ ।**
**ಅಕುತಶ್ಚಿದ್ಭಯಂ ಮನ್ಯೇ ತದೇವೇತ್ಯನುಶಾಸ್ತಿ ತತ್ ॥ ೮೭೭ ॥**

ಪ್ರಸಕ್ತ ಭಾಗವತ ಪದ್ಯದಲ್ಲಿರುವ 'ಅತ್ರ' ಪದದ ಅರ್ಥವನ್ನು ಈಗ ಹೇಳುತ್ತಾರೆ :—

---

ಸೇರಿರುವರು; ಅವರನ್ನೇ ಪರದೇವತೆಯೆಂದು ಉಪಾಸಿಸುವ ರುದ್ರಾದಿಗಳಿಗೂ ಈ ಭಯವು ತಪ್ಪಿದ್ದಲ್ಲ; ಆ ಸಂಸಾರ ಭಯವು, ಅಚ್ಯುತಚರಣೋಪಾಸನೆಯಿಂದ ಪರಿಹೃತವಾಗಿ ತೊಲಗುತ್ತದೆ; ಹೀಗೆ, 'ವಿಶ್ವಂ, ಸರ್ವಾತ್ಮನಾ' ಎಂಬ ಪದಗಳು, ನಿಶ್ಚಿತವಾಗಿ ಪಂಚಾರ್ಥವುಳ್ಳವಾಗಿವೆ–ಸತ್ಯವು; (೮೭೩–೮೭೫). ಈ ಭಾಗವತದ ಅಧ್ಯಾಯವು, ನಿರ್ಗುಣಾದಿ ನಿರಾಕರಣಪರವಲ್ಲದಿದ್ದರೆ, (ನಿರ್ಗುಣೋಪಾಸನಾ ಪರವೆಂದರೆ) ಅಲ್ಲಿ ಪ್ರಯೋಗಿಸಲಾಗಿರುವ, ಅಚ್ಯುತ, ನಾರಾಯಣಾದಿ ನಾಮಗಳು ಸರ್ವಜನ ಪ್ರಸಿದ್ಧವಾಗಲೂ ಕಾರಣವಿಲ್ಲ; ಅನಾಮಗಳನ್ನು ತ್ಯಜಿಸುವುದೂ ಕಾರಣವಿಲ್ಲದಂತೆ ಆಗುತ್ತದೆ; ಸರ್ವಾತ್ಮನಾ ಮತ್ತು ವಿಶ್ವ ಎಂಬ ಪದಗಳು ವಾದಿಗಳೆಂಬ ಗಜಗಳಿಗೆ ಸಿಂಹ ಪ್ರಾಯವಾಗಿ, ಪಂಚಾರ್ಥವುಳ್ಳದ್ದಾಗುತ್ತವೆ (೮೭೬). ಷಣ್ಮತಗಳೆಂಬ ಸಿದ್ಧಾಂತಗಳ ಮಧ್ಯದಲ್ಲಿ ಶ್ರೀಮಧ್ವ ಮಾರ್ಗವೇ ಅಕುತಶ್ಚಿದ್ಭಯ ವಾದುದು (ಎಲ್ಲಿಂದಲೂ ಭಯವಿಲ್ಲದುದು – ಮೋಕ್ಷಪ್ರದವು) ಆದ್ದರಿಂದ

ಅತ್ರ–ಇಲ್ಲಿ (ಎಂದರೆ), ಷಣ್ಮತಥರ್ವಾಣಾಂ ಮಧ್ಯೇ–ಷಣ್ಮತಗಳೆಂಬ ಆರು ಸಿದ್ಧಾಂತಥರ್ವಗಳ ಮಧ್ಯದಲ್ಲಿ, ಮಧ್ವಮತಾಧ್ವನಾ–ಮಧ್ವಮತವೆಂಬ ಮಾರ್ಗದಿಂದ ಗಮನವೇ, ತತ್–ಆದ್ದರಿಂದ (ಅನ್ಯರಿಂದ ಕ್ರಿಯಮಾಣವಾದ 'ತತ್ಕರ್ಮ ಸಂಕಲ್ಪ ವಿಕಲ್ಪ' ವೆಂಬ ಶ್ಲೋಕದಲ್ಲಿ ನಿಂದಿತವಾದ್ದರಿಂದ), ತದೇವ–ಅದೇ (ಅಚ್ಯುತಪಾದೋಪಾಸನೆಯೇ), ಅಕುತಶ್ಚಿದ್ಭಯಂ–ಯಾವ ಭಯವೂ ಇಲ್ಲದ ಮಾರ್ಗವನ್ನಾಗಿ, ಅನುಶಾಸ್ತಿ–ವಿಧಿಸುತ್ತದೆಂದು, ಮನ್ಯೇ–ತಿಳಿಯುತ್ತೇನೆ.

**ನಿತ್ಯಮಿತ್ಯುಕ್ತಿತೋ ಮುಕ್ತೌ ಚೋಪಾಸ್ತಿಮನುಶಾಸ್ತಿ ಸಃ ।**
**ಪದಾಂಬುಜೋಕ್ತ್ಯಾ ಚಾಕಾರಂ ಸೌಂದರ್ಯಾದಿಗುಣಾನಪಿ ॥೮೭೮॥**

ಈ ಶ್ಲೋಕದ ಪದಗಳಿಂದ ಅನ್ಯಪ್ರಯೋಜನವನ್ನು ಹೇಳುತ್ತಾರೆ:—

ಸಃ–ಆತನು (ಕವಿನಾಮಕಋಷಿಯು), ನಿತ್ಯಂ ಇತ್ಯುಕ್ತಿತಃ–ನಿತ್ಯವೆಂಬ ಪದದಿಂದ, ಮುಕ್ತೌ ಚ–ಮುಕ್ತಿಯಲ್ಲಿಯೂ, ಉಪಾಸ್ತಿಂ–ಉಪಾಸನೆಯನ್ನು (ವಿಷ್ಣೂಪಾಸನೆಯನ್ನು), ಅನುಶಾಸ್ತಿ–ವಿಧಿಸುತ್ತದೆ; ಪದಾಂಬುಜೋಕ್ತ್ಯಾ–ಪಾದಪದ್ಮವೆಂಬ ಉಕ್ತಿಯಿಂದ, ಆಕಾರಂ ಚ–(ವಿಷ್ಣುವಿನ) ಆಕಾರವನ್ನು, ಸೌಂದರ್ಯಾದಿಗುಣಾನ್ ಅಪಿ–ಸೌಂದರ್ಯಾದಿ ಗುಣಗಳನ್ನೂ (ಅನುಶಾಸ್ತಿ–ವಿಧಿಸುತ್ತದೆ–ಇರುವುದೆಂದು ಹೇಳುತ್ತದೆ).

**ಪ್ರಾಚೀನಪದ್ಯಂ ತದ್ರೀತ್ಯಾ ಸರ್ವಂ ನಿರ್ಣೇಯಮುತ್ತರಂ ।**
**ಪುಂಜಂ ಭಯಾನಾಂ ಭುಂಜಾನಂ ತಂ ಜಾನನ್ ಕೋ ಭಯಂ ಜಯೇತ್ ॥ ೮೭೯ ॥**

---

'ಮನ್ಯೇಽಕುತಶ್ಚಿತ್' ಎಂಬ ಭಾಗವತ ಶ್ಲೋಕವು ಅದನ್ನೇ ಎಲ್ಲ ವಿವೇಕಿಗಳಿಗೂ ವಿಧಿಸುತ್ತದೆ (೮೭೭). ಕವಿ ಋಷಿಯು ಭಗವದುಪಾಸನೆಯನ್ನು ನಿತ್ಯದಲ್ಲಿಯೂ ಆಚರಿಸತಕ್ಕದ್ದೆಂದು ವಿಧಿಸುವುದರಿಂದ, ಮುಕ್ತಿಯಲ್ಲಿ ಸಹ (ಮುಕ್ತರಿಗೆ) ಉಪಾಸನೆಯುಂಟು, ಎಂದು ಸಿದ್ಧವಾಗುತ್ತದೆ; ಶ್ರೀಹರಿ ಪಾದಾಂಬುಜವನ್ನು ಧ್ಯಾನಿಸಬೇಕೆಂಬ ಉಕ್ತಿಯಿಂದ, ಚರಣಾದಿ ಮೊದಲಾದ ಅವಯವಗಳುಳ್ಳ ದಿವ್ಯಸುಂದರ ಮೂರ್ತಿಯೇ (ಆಕಾರವೇ) ವಿಷ್ಣುವಿಗೆ ನಿತ್ಯದಲ್ಲಿರುತ್ತದೆಂದೂ ಸ್ಥಿರಗೊಳ್ಳುತ್ತದೆ (೮೭೮). 'ಮನ್ಯೇಽಕುತಶ್ಚಿದ್ಭಯಮಚ್ಯುತಸ್ಯ' ಇತ್ಯಾದಿ ಹಿಂದಿನ ಶ್ಲೋಕದಂತೆ,

ತದ್ರೀತ್ಯಾ-(ತಚ್ಛಬ್ದಬಲದಿಂದ) ಆ ಹಿಂದಿನಂತೆ, ಪ್ರಾಚೀನ ಪದ್ಯಂ-ಹಿಂದಿನ ಶ್ಲೋಕವು, ಸರ್ವಂ-ಎಲ್ಲವೂ, ನಿರ್ಣೇಯಂ-ನಿಶ್ಚಯಿಸಲ್ಪಡತಕ್ಕದ್ದು; ಉತ್ತರಂ-ಮುಂದಿನ ಪದ್ಯವು, ಭಯಾನಾಂ-ಭಯಗಳ, ಪುಂಜಂ-ಸಮೂಹವನ್ನು, ಭುಂಜಾನಂ - ಭೋಗಿಸುವವನನ್ನಾಗಿ, ಜಾನನ್ - ತಿಳಿದವನಾಗಿ, ಕಃ-ಯಾವನು (ಯಾವ ವಿವೇಕಿಯು), ಭಯಂ-ಭಯವನ್ನು ಜಯೇತ್-(ನಿರ್ಗುಣೋಪಾಸನೆಯಿಂದ) ಗೆಲ್ಲುವನು? (ಶಕ್ಯವಿಲ್ಲ).

**ಯಂ ಭೀರ್ಬಿಭೇತಿ ತಂ ಭೀರುಃ ಸಂಭಜೇತ್ ಸ್ತಂಭಸಂಭವಂ ।**
**ಇತಿ ಪ್ರಾಚೀನಪದ್ಯಸ್ಯ ಹೃದಯಂ ಹೃದಯೋ ಹಿ ತೇ ॥ ೬೬೦ ॥**

ಯಂ-ಯಾರನ್ನು, ಭೀಃ-ಭಯವು ('ಭೀರಪಿಯಂಬಿಭೇತಿ' ಎಂದಂತೆ) (ಯಾವ ನಾರಾಯಣನನ್ನು ಸಂಸಾರಭಯವೂ ಹೆದರಿಸುವುದಿಲ್ಲವೋ), ಬಿಭೇತಿ-ಹೆದರುತ್ತದೆಯೋ, ತಂ-ಆ ಭಯವನ್ನು, ಭೀರುಃ-(ಸಂಸಾರ) ಭಯಗ್ರಸ್ತನು, ಸ್ತಂಭಸಂಭವಂ-(ಸ್ತಂಭದಿಂದ ಉದಯಿಸಿದ) ನರಸಿಂಹನನ್ನು, ಸಂಭಜೇತ್-ಪೂರ್ಣವಾಗಿ ಆಶ್ರಯಿಸಬೇಕು; ಇತಿ-ಎಂದು, ಪ್ರಾಚೀನಪದ್ಯಸ್ಯ - ಹಿಂದಿನ ಶ್ಲೋಕದ, ಹೃದಯಂ-ಅಭಿಪ್ರಾಯವು, ತೇ-ನಿನಗೆ, ಹೃದಯಃ ಹಿ-ಹೃದಯಕ್ಕೆ ಉಕ್ಕಿನಂತೆ ಅಭೇದ್ಯವಾಗುವುದೆಂಬುದು ಸಿದ್ಧ.

**ಯಸ್ಮಾದುಪಾಸ್ತಿರ್ನೋವಾಹ ಮುಕ್ತ್ಯೈ ಮುನಿಪರಂಪರಾ ।**
**ತಸ್ಮಾನ್ನಿರ್ಗುಣೋಪಾಸ್ತಿವಾರ್ತಾ ಹೃತ್ಸ್ಥಾ ಗರ್ತೇ ಪತತ್ತವ ॥ ೬೬೧ ॥**

---

ಮುಂದಿನ ಶ್ಲೋಕಾರ್ಥಗಳನ್ನು ನಿರ್ಣಯಿಸಿಕೊಳ್ಳತಕ್ಕದ್ದು; ಹೀಗಿರುವಾಗ, ಸಂಸಾರದ ವಿವಿಧ ಭಯ ಸಮೂಹಗಳನ್ನು ಅನುಭವಿಸುವ ಯಾವ ವಿವೇಕಿಯು, ಆ ಭಯ ಪರಿಹಾರಕ್ಕಾಗಿ ನಿರ್ಗುಣನನ್ನು ಉಪಾಸಿಸಿ, ಪರಿಹಾರವನ್ನು ಹೊಂದಬಹುದು? ಆದ್ದರಿಂದ ನಿರ್ಗುಣೋಪಾಸನೆಯು ಪರಿತ್ಯಾಜ್ಯವು (೬೫೯). ಸಂಸಾರ ಭಯಗ್ರಸ್ತನು, ಪ್ರಹ್ಲಾದನ ರಕ್ಷಣೆಗಾಗಿ ಸಭಾಮಧ್ಯದಲ್ಲಿ ಕಂಭದಿಂದ ಪ್ರಕಟನಾದ ನೃಸಿಂಹರೂಪೀ ಶ್ರೀನಾರಾಯಣನನ್ನು ಭಜಿಸಬೇಕು; ಸಂಸಾರ ಭಯವು ಆತನನ್ನು ಸಮೀಪಿಸಲು (ತಾನೇ) ಹೆದರುತ್ತದೆ; ಶ್ರೀನೃಸಿಂಹನನ್ನೇ ಉಪಾಸಿಸೆಂದು ಹಿಂದಿನ ಪದ್ಯದ ಉಪದೇಶವು (ಆ ಶ್ಲೋಕದ ಅಭಿಪ್ರಾಯವು) ನಿನ್ನ (ನಿರ್ಗುಣೋಪಾಸಕನ) ಉಕ್ಕಿನಂತೆ ಅಭೇದ್ಯವಾಗುತ್ತದೆ (೬೬೦). ಋಷಿ

*

ಇದೇ ಭಾಗವತಶ್ಲೋಕದಿಂದ ಅನ್ಯಪ್ರಯೋಜನವೂ ಸಿದ್ಧವಾಯಿತೆನ್ನುತ್ತಾರೆ :—

ಯಸ್ಮಾತ್–ಯಾವ ಕಾರಣದಿಂದ, ಮುನಿಪರಂಪರಾ–ಋಷಿಪರಂಪರೆಯು (ಜ್ಞಾನಿಸಂತತಿಯು), ಮುಕ್ತ್ಯೈ–ಸನ್ಮುಕ್ತಿಗಾಗಿ, ಉಪಾಸ್ತಿಂ ಏವ–(ಅಚ್ಯುತನ) ಉಪಾಸನೆಯನ್ನೇ, ಆಹ–ಹೇಳಿರುವುದೋ, ತಸ್ಮಾತ್–ಆಕಾರಣದಿಂದ, ಮಿಥ್ಯೋಪಾಸ್ತಿವಾರ್ತಾ–ಮಿಥ್ಯೋಪಾಸನೆಯ ನಿರ್ಗುಣೋಪಾಸನೆಯ ವಾರ್ತೆಯೂ, ತವ ಹೃತ್ಸ್ಥಾ–(ನಿನ್ನ) ಮನಸ್ಸಿನಲ್ಲಿದ್ದುದು, ಗರ್ತೇ–ಗುಂಡಿಯಲ್ಲಿ (ತಗ್ಗಿನಲ್ಲಿ ಮೇಲೇಳದಂತೆ), ಅಪತತ್–ಬಿದ್ದಿತು.

**ಏಕೈಕಸ್ಯಾಪಿ ಪಶುಪಕ್ಷ್ಯಾದಿಭಾವೇನ ದೇಹಿನಃ ।**
**ನಾನಾತ್ತ್ವಂ ಸಂಸೃತಾವೇವ ಮುಕ್ತಾವೇಕಪ್ರಕಾರತಾ ॥ ೮೮೨ ॥**

ಗುಣವೈಷಮ್ಯವಿರುವವರೆಗೆ, ಜೀವನಿಗೆ ನಾನಾ (ಪಶುಕ್ಷ್ಯಾದಿ) ಭಾವವು ಉಂಟಾಗುತ್ತದೆ ; 'ನಾನಾತ್ವಮಾತ್ಮನೋಯಾವತ್ತಾವದಸ್ಯಾ ಸ್ವತಂತ್ರತಾ । ಯಾವದಸ್ಯಾಸ್ವತಂತ್ರತ್ವಂ ತಾವದೀಶ್ವರತೋ ಭಯಂ । ಯ ಏತತ್ಸಮುಪಾಸೀರಂಸ್ತೇ ಮುಹ್ಯಂತಿ ಶುಚಾರ್ಪಿತಾಃ' ॥ ಎಂಬ ಭಾಗವತದ ಸಾರ್ಧಶ್ಲೋಕವು, ಮುಕ್ತಿಯಲ್ಲಿ, ನಾನಾತ್ವ (ಬಹುತ್ವ)ವಿಲ್ಲದ್ದರಿಂದ, ಆದ್ದರಿಂದಲೇ ಅಧಿಪತಿಯೂ ಇಲ್ಲವೆಂದೂ, ಪರಾಧೀನತ್ವವೇ ದುಃಖಕಾರಣವೆಂದೂ ಹೇಳಿರುವುದರಿಂದ, ಉಕ್ತವಾದ (ಮನ್ಯೇಕುತಶ್ಚಿದ್ಭಯಂ) ಪೂರ್ವಶ್ಲೋಕಾರ್ಥವು ಯುಕ್ತವಲ್ಲ ; ಈಶ್ವರನಿಂದ ಭಿನ್ನನಾದ ಅನ್ಯನಿಂದ ಭಯವಿಲ್ಲವೆಂಬ ಅರ್ಥವು ; 'ಭಯಂ ದ್ವಿತೀಯಾಭಿನಿವೇಶತಃ' ಇತ್ಯಾದಿ ಶ್ಲೋಕಾರ್ಥವೂ ಇದೇ ಎಂದು ಹೇಳಲೇನಿದೆ ? ಎಂಬ, ಪೂರ್ವಪಕ್ಷ ವಾದವನ್ನು ವಿಮರ್ಶಿಸುತ್ತಾರೆ :—

---

(ಜ್ಞಾನಿ) ಪರಂಪರೆಯು, ಮುಕ್ತಿಗಾಗಿ, ಅಚ್ಯುತನ ಉಪಾಸನೆಯನ್ನೇ ಉಪದೇಶಿಸುವುದರಿಂದ, ಮಿಥ್ಯೋಪಾಸನೆಯು (ನಿರ್ಗುಣನ ಉಪಾಸನೆಯು, ಹೆಸರಿಲ್ಲದಂತೆ ಗರ್ತದಲ್ಲಿ ಬಿದ್ದು, ತಲೆ ಎತ್ತದಂತೆ ಆಯಿತಲ್ಲವೇ ? ಹೇ ಅದ್ವೈತಿಯೇ ! (೮೮೧). ನಾನಾತ್ವವಿರುವವರೆಗೆ ಅಸ್ವಾತಂತ್ರ್ಯವು; ಅಸ್ವತಂತ್ರನಿಗೆ ಈಶ್ವರನಿಂದ ಭಯ ; ಆದ್ದರಿಂದ, 'ಯ ಏತತ್ಸಮುಪಾಸೀರಂಸ್ತೇ ಮುಹ್ಯಂತಿ ಶುಚಾರ್ಪಿತಾಃ ।' ಎಂಬ ಭಾಗವತಶ್ಲೋಕ ಭಾಗದಲ್ಲಿ ನಿಶ್ಚಯಿಸಿದಂತೆ, ಪರಾಧೀನವೇ ದುಃಖಕಾರಣವು ; ಸಗುಣತ್ವವಿರುವವರೆಗೆ ಮುಕ್ತಿಯಿಲ್ಲವೆಂಬ ಪರನ

ಏಕೈಕಸ್ಯ ಅಪಿ ದೇಹಿನಃ–ಒಬ್ಬೊಬ್ಬ ಜೀವನಿಗೂ, ಪಶುಪಕ್ಷ್ಯಾದಿ ಭಾವೇನ–ಪಶುಪಕ್ಷಿ ಮೊದಲಾದ ದೇಹ ಪ್ರಾಪ್ತಿಯಿಂದ, ಸಂಸೃತೌ ಏವ–ಸಂಸಾರ ದೆಶೆಯಲ್ಲಿಯೇ, (ಸಂಸಾರದಲ್ಲಿರುವಾಗಲೇ) ನಾನಾತ್ವಂ–ಬಹುತ್ವವು (ಎರಡನೆಯ ಜನ್ಮವೇ ಸದ್ವಿತೀಯತ್ವವೂ ಆಗುವುದೆಂದು ತಿಳಿಯಬೇಕು) ; ಮುಕ್ತೌ–ಮೋಕ್ಷ ದಲ್ಲಿ (ಮುಕ್ತ್ಯವಸ್ಥೆಯಲ್ಲಿ), ಏಕ ಪ್ರಕಾರತಾ–(ಅದಿಲ್ಲದ್ದರಿಂದ) ಏಕರೀತಿಯಿಂದಿರು ವಿಕೆಯು (ನಾನಾತ್ವವಾಗಲಿ, ಸದ್ವಿತೀಯತ್ವವಾಗಲಿ ಇರುವುದಿಲ್ಲ) ; (ಆದ್ದರಿಂದ ಭಾಗವತಶ್ಲೋಕವು ಅಧಿಪತಿ ಹೀನರೆಂದು ಮುಕ್ತರನ್ನು ನಿರೂಪಿಸುವುದಿಲ್ಲ).

**ರಾಜಾದಿತುಚ್ಛಂ ಮ್ಲೇಚ್ಛಾದೇರೀಶ್ವರಸ್ಯಾಪಿ ತಂತ್ರತಾ ।**
**ಸಂಸೃತೌ ಸ್ಯಾದ್ವಿಮುಕ್ತೌ ತು ಸ್ವಭಾವೇಶ್ವರತಂತ್ರತಾ ।**
**ನಾಪರಸ್ಯ ತತೋ ಮುಕ್ತಿರೇವ ಪ್ರಾರ್ಥ್ಯಾ ವಿವೇಕಿಭಿಃ ॥ ೮೮೩ ॥**

**ಇತ್ಯಾಹ ಭಗವಾನ್ ವ್ಯಾಸೋ ಯಸ್ಮಾದ್ಭಾಗವತೇ ಸ್ಫುಟಂ ।**
**ತತೋಽಪ್ಯಭವಮುನ್ವಿಚ್ಛನ್ನುಪಾಸೀತಾಚ್ಯುತಂ ಪ್ರಭುಂ ॥ ೮೮೪ ॥**

ಮ್ಲೇಚ್ಛಾದೇಃ – ಮ್ಲೇಚ್ಛ ಮೊದಲಾದ (ಸ್ವಭಾವಸಿದ್ಧವಲ್ಲದವರ, ಈಶ್ವರಸ್ಯ ಅಪಿ–ರಾಜನ, ತಂತ್ರತಾ–ಅಧೀನತ್ವವು, ಸಂಸೃತೌ–ಸಂಸಾರದಲ್ಲಿ, ಸ್ಯಾತ್–ಉಂಟಾಗುತ್ತದೆ; ರಾಜಾದಿ–(ಅಸ್ವಾಭಾವಿಕ) ರಾಜತ್ವ ಮೊದಲಾದುದು, ತುಚ್ಛಂ ತು–ಕೀಳಾದುದೇ ಸರಿ ; ಮುಕ್ತೌ ತು – ಮುಕ್ತಿಯಲ್ಲಿ ಆದರೂ,

---

ವಾದವೂ ಯುಕ್ತವಾಗುವುದಿಲ್ಲ; ನಾನಾತ್ವವು ತಪ್ಪುವುದಿಲ್ಲ; ನಾನಾತ್ವನೆಂಬುದೇ ಸದ್ವಿತೀಯತ್ವವು-ಪಶುಪಕ್ಷ್ಯಾದಿ ನಾನಾ ಯೋನಿಗಳನ್ನು ಜೀವನು ಹೊಂದುವುದು; ಮುಕ್ತಿಯಲ್ಲಿ ಸದ್ವಿತೀಯತ್ವವಿಲ್ಲ-ಜೀವನು ಸ್ವಸ್ವರೂಪದಿಂದ ನಿತ್ಯಸ್ಥಿತನಾಗಿರು ತ್ತಾನೆ ; ಅಚ್ಯುತನು ಮುಕ್ತರ ಈಶ್ವರನು ; ಆತನನ್ನು ಸದಾ ಉಪಾಸಿಸುವವರು ಮುಕ್ತರು ; (೮೮೨). ಮ್ಲೇಚ್ಛಾದಿ ಹೀನಶಾಸಕರ ರಾಜತ್ವವು (ಜೀವರ ಅಸ್ವತಂತ್ರತೆಯು ) ಸಂಸಾರಾವಸ್ಥೆಯಲ್ಲಿ ಮಾತ್ರ ; ಅವರು ಸ್ವಾಭಾವಿಕ (ನೈಸರ್ಗಿಕ) ರಾಜತ್ವವುಳ್ಳವರಲ್ಲ ; ಮುಕ್ತಿಯಲ್ಲಿ ಆದರೋ ಸ್ವಭಾವಸಿದ್ಧವಾದ ರಾಜನು ಆಳುವ ಪ್ರಭುವು–ಅಲ್ಲಿ ಅನ್ಯರಾರೂ ನಿಯಾಮಕರಲ್ಲ; ಆತನು ಅನನ್ಯಾಧಿಪತಿಯು ; ಆದ್ದರಿಂದ ವಿವೇಕಿಗಳು ಮುಕ್ತಿಯನ್ನೇ ಇಚ್ಛಿಸಬೇಕು ; ಭಗವಾನ್ ವ್ಯಾಸರು ಭಾಗವತದಲ್ಲಿ ಸ್ಪಷ್ಟವಾಗಿ ನುಡಿದಿರುವರು ; ಆದ್ದರಿಂದ

ಸ್ವಭಾವೇಶ್ವರ ತಂತ್ರತಾ–ಸ್ವಭಾವದಿಂದಲೇ ಸಿದ್ಧವಾದ ರಾಜತ್ವವುಳ್ಳ ವಿಷ್ಣುವಿನ ಅಧೀನತ್ವವು; ಅಪರಸ್ಯ ನ–ಅನ್ಯಾಧೀನತ್ವವಿಲ್ಲ; ತತಃ–ಆದ್ದರಿಂದ, ವಿವೇಕಿಭಿಃ–ವಿವೇಕಿಗಳಿಂದ, ಮುಕ್ತಿಃ ಏವ–ಮೋಕ್ಷವೇ, ಪ್ರಾರ್ಥ್ಯಾ–ಇಚ್ಛಿಸಲ್ಪಡತಕ್ಕದ್ದು; ಇತಿ–ಹೀಗೆಂದು, ಭಾಗವತೇ–ಭಾಗವತದಲ್ಲಿ, ಸ್ಫುಟಂ–ಸ್ಪಷ್ಟವಾಗಿ, ಭಗವಾನ್ ವ್ಯಾಸಃ–ಭಗವಾನ್ ವ್ಯಾಸಪ್ರಭುಗಳು, ಯಸ್ಮಾತ್ ಆಹ–ಯಾವ ಕಾರಣದಿಂದ ಹೇಳಿರುವರೋ, ತತಃ ಅಪಿ–ಆದ್ದರಿಂದ ಸಹ (ನಾನಾ ಯೋನಿಗಳಲ್ಲಿ ಸುತ್ತುವ ಸಂಸಾರವು ಅಸಾರವಾದ್ದರಿಂದ), ಅಭವಂ–(ಪುನರ್ಜನ್ಮರಹಿತವಾದ) ಮೋಕ್ಷವನ್ನು, ಅನ್ವಿಚ್ಛನ್–ಇಚ್ಛಿಸುವನಾಗಿ, ಅಚ್ಯುತಂ ಪ್ರಭುಂ–ಮಹಾಸ್ವಾಮಿಯಾದ ಅಚ್ಯುತನನ್ನು, ಉಪಾಸೀತ–ಉಪಾಸಿಸುವನಾಗು (ಸೇವಿಸು–ಭಜಿಸು).

**ಧರ್ಮಾನ್ ಭಾಗವತಾನ್ ಪೃಷ್ಟಃ ಕವಿರ್ವಾದಿವಿವಾದತಃ ।**
**ಭಗವಂತಂ ಚ ತದ್ಧರ್ಮಂ ವಿವಿಚ್ಯೇತ್ಥಮವರ್ಣಯತ್ ॥ ೮೮೫ ॥**

'ಮನ್ಯೇಽಕುತಶ್ಚಿದ್ಭಯಮಚ್ಯುತಸ್ಯ' ಇತ್ಯಾದಿ ಶ್ಲೋಕಾರ್ಥವನ್ನು ಉಪಸಂಹರಿಸುತ್ತಾರೆ :—

ಕವಿಃ – ಕವಿನಾಮಕ ಋಷಿಯು, ಪೃಷ್ಟಃ–(ವಿದೇಹರಾಜನಿಂದ) ಕೇಳಲ್ಪಟ್ಟು, ವಾದಿವಿವಾದತಃ – ವಾದಕಥಾರೂಪದಿಂದ (ತಿಳಿಯಬೇಕೆಂಬ ಇಚ್ಛೆಯಿಂದ), ಭಾಗವತಾನ್ ಧರ್ಮಾನ್–ಭಗವತ್ಸಂಬಂಧಿಯಾದ ಧರ್ಮಗಳನ್ನು, ಭಗವಂತಂ ಚ – ಭಗವಂತನನ್ನು, ತದ್ಧರ್ಮಂ – (ಧರ್ಮಪರಿಜ್ಞಾನಕ್ಕಾಗಿ, ಭಗವಂತನ ಜ್ಞಾನವೂ ಅಪೇಕ್ಷಿತವಾದ್ದರಿಂದ, ಭಗವಂತನನ್ನು, ಭಾಗವತ ಧರ್ಮವನ್ನು), ವಿವಿಚ್ಯ–ವಿವೇಕಿಸಿ, ಇತ್ಥಂ–ಈ ಪ್ರಕಾರದಿಂದ, ಅವರ್ಣಯತ್–ವರ್ಣಿಸಿದನು.

**ಅಚ್ಯುತೋ ಭಗವಾಂಸ್ತಸ್ಯೋಪಾಸ್ತಿರ್ಧರ್ಮೋ ಮಹಾನ್ ಕಿಲ ।**
**ಭಗವತ್ಯರ್ಪಣಂ ಚ ಸ್ಯಾತ್ತದ್ಧರ್ಮೋಽಖಿಲಕರ್ಮಣಾಂ ॥ ೮೮೬ ॥**

---

ಮೋಕ್ಷವನ್ನೇ ಇಚ್ಛಿಸಿ ಪ್ರಭುವಾದ ಅಚ್ಯುತನನ್ನೇ ಉಪಾಸಿಸತಕ್ಕದ್ದು (೮೮೩–೮೮೪). ಭಗವಂತನನ್ನು ಆತನ ಪ್ರಾಪ್ತಿಗಾಗಿ ಆಚರಿಸಬೇಕಾದ ಧರ್ಮಗಳನ್ನು ತಿಳಿಯಲಿಚ್ಛಿಸಿ, ಪ್ರಶ್ನೆಮಾಡಿದ ರಾಜನನ್ನು ಕುರಿತು, ಕವಿನಾಮಕ ಋಷಿಯು, ಭಾಗವತ ಧರ್ಮಗಳನ್ನು ವಿವೇಚಿಸಿ ವರ್ಣಿಸಿರುವನು; ಆ ಉಪದೇಶದ ಪ್ರಯೋಜನವನ್ನು ಸರ್ವವಿವೇಕಿಗಳೂ ಹೊಂದಬೇಕು (೮೮೫). ಭಗವಂತನನ್ನೂ,

ಭಗವಂತನು ಯಾರು ಮತ್ತು ಋಷಿಯು ಯಾವ ಧರ್ಮವನ್ನು ವಿವೇಚಿಸಿ ಹೇಳಿದನೆಂಬುದನ್ನು ಹೇಳುತ್ತಾರೆ :—

ಅಚ್ಯುತಃ–ಅಚ್ಯುತನೇ, ಭಗವಾನ್–ಭಗವಂತನು, ತಸ್ಯ–(ಪೂರ್ವೋಕ್ತ) ಅಚ್ಯುತನ, ಉಪಾಸ್ತಿಃ–ಉಪಾಸನೆಯು, ಮಹಾನ್‌ಧರ್ಮಃ–ಉತ್ಕೃಷ್ಟಧರ್ಮವು (ಶಾಸ್ತ್ರಾಭ್ಯಾಸವೂ ಧ್ಯಾನವೂ ಸಕಲ ಧರ್ಮಗಳಿಕ್ಕಿಂತ ಶ್ರೇಷ್ಠವು); ಅಖಿಲ ಕರ್ಮಣಾಂ–ಎಲ್ಲ ಕಾಯಿಕವಾಚಿಕ ಮಾನಸಿಕವೆಂಬ ನಿತ್ಯನೈಮಿತ್ತಿಕ ಕರ್ಮ ಗಳಿಗೆ, ತದ್ಧರ್ಮಃ–(ಉಪಾಸನೆಯೇ ಮುಖ್ಯಧರ್ಮವು; ನಿತ್ಯನೈಮಿತ್ತಿಕ ಕರ್ಮಗಳನ್ನು ಭಗವಂತನಲ್ಲಿ ಅರ್ಪಿಸುವುದೇ) ಅಂಗಭೂತವಾದ ಅವಾಂತರ ಧರ್ಮವು; ('ಮನ್ಯೇಽಕುತಶ್ಚಿದ್ಭಯಮಚ್ಯುತಸ್ಯ ಪದಾಂಬುಜೋಪಾಸನ....' ಎಂಬ ಮೊದಲ ಶ್ಲೋಕದಲ್ಲಿ ಭಗವದುಪಾಸನೆಯೂ, ನಂತರದ 'ಕಾಯೇನ ವಾಚಾ ಮನಸೇಂದ್ರಿಯೈರ್ವಾ' ಎಂಬ ಶ್ಲೋಕದಲ್ಲಿ ಅರ್ಪಣರೂಪವಾದ ಅವಾಂತರ ಭಗವದ್ಧರ್ಮವೂ ಉಕ್ತವಾಗಿರುತ್ತದೆ; 'ಶೃಣ್ವನ್ ಸುಭದ್ರಾಣಿ' ಎಂಬ ಉಪ ಸಂಹಾರ ಶ್ಲೋಕದಲ್ಲಿ ಶ್ರವಣವು ನಿತ್ಯಕರ್ತವ್ಯವೆಂದೂ ಹೇಳಲಾಗಿದೆ–ಶ್ರವಣವೂ ಉಪಾಸನೆಯ ಒಂದು ಭಾಗವೇ ಆಗಿದೆ).

**ವಿಮತೋ ವಿಷ್ಣುರೇವೈಕೋ ಭಗವಾನಭಯತ್ವತಃ ।**
**ವ್ಯತಿರೇಕೇಣ ನಾಶಾದಿಭಯಗ್ರಸ್ತಜಡಾದಿವತ್ ।**
**ಭಕ್ತಾಭಯಕರತ್ವಾದ್ವಾ ಭಗವಾನ್ ಸ ಮಹಾಪ್ರಭುಃ ॥ ೮೮೭ ॥**

---

ಭಗವದ್ಧರ್ಮಗಳನ್ನೂ ವಿವೇಚನೆಮಾಡಿದ ನಿರೂಪಣೆಯು ಹೀಗಿದೆ; ಅಚ್ಯುತನೇ ಭಗವಂತನು; ಆತನ ಉಪಾಸನೆಯೇ (ಆತನನ್ನು ಪ್ರತಿಪಾದಿಸುವ ಶಾಸ್ತ್ರಗಳ ಅವಲೋಕನ ಮತ್ತು ವಿಧ್ಯನುಸಾರವಾದ ಧ್ಯಾನಗಳು) ಮಹಾಧರ್ಮವು. (ಪರಮ ಮುಖ್ಯಧರ್ಮವು); ಅನ್ಯವಾದ ನಿತ್ಯ ನೈಮಿತ್ತಿಕ ಕರ್ಮಗಳನ್ನಾಚರಿಸಿ, ಅಚ್ಯುತನಲ್ಲಿ ಅರ್ಪಿಸುವುದೇ ಅವಾಂತರ (ಅಂಗಭೂತವಾದ) ಭಾಗವತಧರ್ಮವು ನಿತ್ಯ ಹರಿಕಥಾ ಶ್ರವಣವೂ, ನಿತ್ಯಕರ್ಮದಲ್ಲಿ ಸೇರುವ ಶ್ರವಣೋಪಾಸನವೆಂಬ ಮುಖ್ಯ (ಪ್ರಧಾನ) ಭಾಗವತ ಧರ್ಮವೇ ಆಗಿದೆ) (೮೮೬). ವಿವಾದ ವಿಷಯನಾದ ವಿಷ್ಣುವೇ ಮುಖ್ಯವಾಗಿ ಭಗವಚ್ಛಬ್ದವಾಚ್ಯನು; ಅಭಯತ್ವ ವುಳ್ಳವನಾದ್ದರಿಂದ; ವ್ಯತಿರೇಕದಿಂದ ನಾಶಭಯವುಳ್ಳ ಜಡವಸ್ತುಗಳಂತೆ; (ಜಡಕ್ಕೆ

**ವಿಮತೋ ನಿರ್ಗುಣಾದಿರ್ನ ಭಗವಾನ್ ಸ ಭಯತ್ವತಃ ।**
**ಅನ್ವಯೇನೈವ ಸಭಯಚೈತ್ರಮೈತ್ರಾದಿಜೀವವತ್ ॥ ೮೮೮ ॥**
**ವಿಮತಂ ವಿಷ್ಣುಭಜನಂ ಧರ್ಮೋ ಭಾಗವತೋ ಭವೇ ।**
**ಭವಭೀಭಂಗಹೇತುತ್ವಾದ್ವ್ಯತಿರೇಕೇಣ ಭುಕ್ತಿವತ್ ॥ ೮೮೯ ॥**
**ವಿಮತಾ ನಿರ್ಗುಣಾದ್ಯರ್ಚಾ ಧರ್ಮೋ ಭಾಗವತೋ ನ ಸಾ ।**
**ಭಯಹೇತುತ್ವತಃ ಕುಂಭೀಪಾಕಸಾಧನಪಾಪವತ್ ॥ ೮೯೦ ॥**
**ಇತಿ ಪಂಚಾನುಮಾನಾನಿ ಸೋಽಭಿಪ್ರೈತಿ ಕವಿಃ ಕವಿಃ ॥ ೮೯೧ ॥**

ಜ್ಞಾನಿಯಾದ ಕವಿನಾಮಕಯೋಗಿಯ ವಚನವಾದ್ದರಿಂದ, ಯುಕ್ತಿಗರ್ಭಿತವಾದ ಈ ಶ್ಲೋಕಗಳಲ್ಲಿರುವ ಯುಕ್ತಿಗಳನ್ನು ತೋರಿಸುತ್ತಾರೆ :—

ವಿಮತಃ–ವಿವಾದ ವಿಷಯನಾದ, ವಿಷ್ಣುರೇವ ಏಕಃ–ವಿಷ್ಣು ಒಬ್ಬನೇ, ಭಗವಾನ್-ಭಗವಂತನು, ಅಭಯತ್ವತಃ-ಭಯರಹಿತನಾದ್ದರಿಂದ, ವ್ಯತಿರೇಕೇಣ–ವ್ಯತಿರೇಕಪ್ರಯೋಗದಿಂದ, ನಾಶಾದಿ ಭಯಗ್ರಸ್ತ ಜಡಾದಿವತ್–ನಾಶಾದಿಭಯವುಳ್ಳ ಜಡಾದಿಗಳಂತೆ ; (ಜಡಜಗತ್ತು ಪ್ರಲಯದಲ್ಲಿ ನಾಶಗೊಳ್ಳುತ್ತದೆ-ಭಗವಂತನು ನಾಶರಹಿತನು) ; ಭಕ್ತಾಭಯಕರತ್ವಾತ್‌ವಾ–**ಅಥವಾ** (ಮತ್ತು), ಭಕ್ತರನ್ನು ಭಯರಹಿತರನ್ನಾಗಿ ಮಾಡುವುದರಿಂದ, ಸಃ ಮಹಾ ಪ್ರಭುಃ – ಆ ಮಹಾ ಸ್ವಾಮಿಯೇ (ವಿಷ್ಣುವೇ), ಭಗವಾನ್-ಭಗವಂತನು ; ವಿಮತಃ-ವಿವಾದ ವಿಷಯನಾದ ಬ್ರಹ್ಮನು, ನಿರ್ಗುಣಾದಿಃ ನ–ನಿರ್ಗುಣ ಮೊದಲಾದವನು, ಅಲ್ಲವು ; ಅನ್ವಯೇನ ಏವ–ಅನ್ವಯಾನುಮಾನದಿಂದಲೇ, ಸ ಭಯ ಚೈತ್ರಮೈತ್ರಾದಿ ಜೀವವತ್–ಭಯವುಳ್ಳ ಚೈತ್ರ, ಮೈತ್ರಾದಿ ಜೀವರಂತೆ (ಜೀವರು ಭಯವುಳ್ಳವರು,

---

ನಾಶವಿದೆ ; ಅದು ಭಗವಚ್ಛಬ್ದವಾಚ್ಯವಲ್ಲ ; ನಾಶಭಯವಿಲ್ಲದ್ದೇ ಭಗವಂತನು–ಅವನೇ ವಿಷ್ಣುವು ; ಭಕ್ತರಿಗೆ ಅಭಯವನ್ನುಂಟುಮಾಡುವುದರಿಂದಲೂ ಆ ಮಹಾ ಸ್ವಾಮಿಯು, ಭಗವಂತನು ; ಭಗವಂತನು ನಿರ್ಗುಣನಲ್ಲ ; ಅನ್ವಯದಿಂದ, ಭಯವುಳ್ಳ (ಸಂಸಾರಾದಿಭಯವುಳ್ಳ) ಚೈತ್ರಮೈತ್ರಾದಿ ಜೀವನಂತೆ ; (ಭಯಾದಿ ಗುಣತ್ವವಿದ್ದಲ್ಲಿ ನಿರ್ಗುಣತ್ವವಿಲ್ಲ ; ಜೀವರನ್ನು ಅಭಯ ಪ್ರದಾನಕ್ಕಾಗಿ ಸ್ವೀಕರಿಸುವುದರಿಂದ ನಿರ್ಗುಣನಲ್ಲ ಸಭಯನೇ ಸರಿ) ; ವಿವಾದ ವಿಷಯವಾದ ವಿಷ್ಣು ಭಜನೆಯು (ಉಪಾಸನೆಯು) ಸಂಸಾರ ದೆಶೆಯಲ್ಲಿ ಭಾಗವತ ಧರ್ಮವೇ ಆಗಿದೆ ;

ಆದ್ದರಿಂದ ಸಗುಣರು ; ನಿರ್ಗುಣನಲ್ಲದವನು ಭಯರಹಿತನಲ್ಲ) ; ವಿಮತಂ–ವಿವಾದ ವಿಷಯವಾದ, ವಿಷ್ಣುಭಜನಂ–ವಿಷ್ಣುಭಜನೆಯು (ಉಪಾಸನೆಯು), ಭವೇ – ಸಂಸಾರದೆಶೆಯಲ್ಲಿ ಭಾಗವತೋ ಧರ್ಮಃ–ಭಾಗವತ ಧರ್ಮವು ; ಭವಭೀಭಂಗ ಹೇತುತ್ವಾತ್–ಸಂಸಾರ ಭಯವನ್ನು ಪರಿಹರಿಸುವುದರಿಂದ (ಆ ಭಯ ಭಂಗದ–ನಾಶದ ಕಾರಣವಾದ್ದರಿಂದ) ವ್ಯತಿರೇಕೇಣ–ವ್ಯತಿರೇಕದಿಂದ, ಭುಕ್ತಿವತ್–ಭೋಜನ ಮಾಡಿದಂತೆ (ಉಂಡರೆ ಹಸಿವು ಅಡಗುತ್ತದೆ–ಇಲ್ಲದಿದ್ದರೆ ಇಲ್ಲ–ಭಾಗವತಧರ್ಮಾಚರಣೆಯಿಲ್ಲದಿದ್ದರೆ ಸಂಸಾರದಿಂದ ಮುಕ್ತಿಯಿಲ್ಲ) ; ವಿಮತಾ–ವಿವಾದಾಸ್ಪದವಾದ ನಿರ್ಗುಣಾದ್ಯರ್ಚಾ – ನಿರ್ಗುಣಾದಿ ಚಿಂತನೆಯು (ಪೂಜೆಯು), ಭಾಗವತಃ–ಭಗವಂತನ ಪ್ರಾಪ್ತಿ ಸಾಧನವಾದ, ಧರ್ಮಃ–ಧರ್ಮವು ನ–ಅಲ್ಲ ; ಸಾ–ಅದು (ನಿರ್ಗುಣಾದಿ ಪೂಜೆಯು), ಭಯಹೇತುತ್ವತಃ–ಭಯಕಾರಣವಾದ್ದರಿಂದ, ಕುಂಭೀ ಪಾಕ ಸಾಧನಪಾಪವತ್–ಕುಂಭೀಪಾಕವೆಂಬ ನರಕದಲ್ಲಿ ಬೀಳಲು ಸಾಧನವಾಗುವ ಪಾಪದಂತೆ ; ಇತಿ–ಹೀಗೆ, ಪಂಚಾನುಮಾನಾನಿ–ಐದು ಅನುಮಾನ ಪ್ರಯೋಗಗಳನ್ನು ಸಃ–ಆಜ್ಞಾನಿಯು, ಅಭಿಪ್ರೈತಿ – ಉದ್ದೇಶಿಸಿ ಈ ಉಪದೇಶಗಳನ್ನು ಭಾಗವತದಲ್ಲಿ ಮಾಡಿರುವನು, (ಆತನು) ಕವಿಃ–ಕವಿನಾಮಕ ಯೋಗಿಯು, ಕವಿಃ–ಯೋಗಿಗಳಲ್ಲಿ ಜ್ಞಾನಿಯು.

**ಯಾವತ್ಸ್ಯಾದ್ಗುಣವೈಷಮ್ಯಂ ತಾವನ್ನಾನಾತ್ವಮಾತ್ಮನಃ ।**
**ನಾನಾತ್ವಮಾತ್ಮನೋ ಯಾವತ್ತಾವದೀಶ್ವರತಂತ್ರತಾ ॥ ೮೯೨ ॥**

---

ಭೋಜನದಂತೆ, ವ್ಯತಿರೇಕದಿಂದ, ಸಂಸಾರ ಮೋಕ್ಷವೂ ಇಲ್ಲ ; ವಿಮತವಾದ ನಿರ್ಗುಣೋಪಾಸನೆಯು ಭಾಗವತ ಧರ್ಮವಲ್ಲ ; ಅದು ಭಯಕಾರಣವಾದ್ದರಿಂದ; ಕುಂಭಿಪಾಕವೆಂಬ ನರಕದಲ್ಲಿ ಬೀಳಲು ಸಾಧನವಾದ ಪಾಪದಂತೆ, ಹೀಗೆ ಪಂಚಾನುಮಾನಗಳನ್ನು, ಕವಿ ನಾಮಕ ಋಷಿಯು (ಜ್ಞಾನಿಯು), ಮನಸ್ಸಿನಲ್ಲಿಟ್ಟು ವಿದೇಹರಾಜನಿಗೆ ಈ ಉಪದೇಶಗಳನ್ನು (ಭಗವಂತ ಮತ್ತು ಭಾಗವತ ಧರ್ಮಗಳ ವಿವೇಚನೆಯನ್ನು) ಮಾಡಿರುತ್ತಾರೆ (೮೮೭–೮೯೧). ಅದ್ವೈತ ಮತವನ್ನು ಅನುವಾದಮಾಡಿ ನಿರಾಕರಿಸುತ್ತಾರೆ : ಸತ್ವಾದಿಗುಣ ವ್ಯತ್ಯಾಸಗಳಿರುವವರೆಗೆ ( ಗುಣಬಂಧವು ಎಲ್ಲಿಯವರೆಗೋ ) ಆವರೆಗೆ ವಿವಿಧ ಪಶ್ವಾದಿ ಯೋನಿಗಳಲ್ಲಿ (ದೇಹತಃ ಜನ್ಮವು) ಜೀವನಿಗೆ ಉಂಟಾಗುತ್ತದೆ ; ಹೀಗೆ ಬಹು ದೇಹಯೋಗವಿರುವವರೆಗೆ, ನಿಯಾಮಕನಾದ ಈಶ್ವರನ ಅಧೀನವು ತಪ್ಪುವುದಿಲ್ಲ;

**ಯಾವದಸ್ಯಾಸ್ವತಂತ್ರತ್ವಂ ತಾವದೀಶ್ವರತೋ ಭಯಂ ।**
**ಯ ಏತತ್ಸಮುಪಾಸೀರಂಸ್ತೇ ಮುಹ್ಯಂತಿ ಶುಚಾರ್ಪಿತಾಃ ॥ ೮೯೩ ॥**

**ಇತಿ ಭಾಗವತೇ ಸ್ಪಷ್ಟಂ ಮುಕ್ತಾವದ್ವೈತಮಿಚ್ಛತಾಂ ।**
**ಭೇದಾದೇಃ ಸಂಸೃತಾವೇವ ಸತ್ವಂ ಸಂಸದಿ ಶಂಸತಾಂ ।**
**ಮತಂ ಸರ್ವಮನೂದ್ಯಾಂತೇ ನಿಷೇಧೋಪಿ ವಿಧೀಯತೇ ॥ ೮೯೪ ॥**

**ಯ ಏತತ್ಪೂರ್ವಕಥಿತಂ ಪ್ರಮೇಯಂ ಸಮುಪಾಸತೇ ।**
**ತೇಽಥೇತಮಸಿ ಶೋಕೇನ ಮೂರ್ಛಾಂ ಯಾಂತೀತಿ ಯಜ್ಜಗೌ ॥ ೮೯೫ ॥**

**ಅತೋ ಭಾಗವತಂ ಸರ್ವಂ ಮುಕ್ತೌ ಚೇಶ್ವರತಂತ್ರತಾಂ ।**
**ಭೇದಸ್ಯ ಚ ಸದಾ ಸತ್ವಂ ಶಾಸ್ತೀತ್ಯೇವ ಮನೋರಮಂ ॥ ೮೯೬ ॥**

ಭಾಗವತದ ಅನ್ಯವಾಕ್ಯಗಳಿಂದ ಮಾಯಿಮತವು ಸ್ಪಷ್ಟವಾಗಿ ನಿಂದಿತವಾಗಿರುತ್ತದೆಯೆನ್ನುತ್ತಾರೆ :—

ಯಾವತ್ – ಎಲ್ಲಿವರೆಗೆ, ಗುಣವೈಷಮ್ಯಂ – ಸತ್ವಾದಿಗುಣವೈಷಮ್ಯವು, ಸ್ಯಾತ್–ಇರುವುದೋ, ತಾವತ್–ಅಲ್ಲಿಯವರೆಗೆ, ಆತ್ಮನಃ–ಜೀವನಿಗೆ (ಚೇತನನಿಗೆ), ನಾನಾತ್ವಂ–ವಿವಿಧ (ಪಶುಪಕ್ಷ್ಯಾದಿ) ಯೋನಿಗಳ ಪ್ರಾಪ್ತಿಯು (ಇರುತ್ತದೆ); ಆತ್ಮನಃ ನಾನಾತ್ವಂ ಯಾವತ್–ಜೀವನು ಬಹುವಿಧ ಯೋನಿಗಳನ್ನು ಹೊಂದುವವರೆಗೆ, ತಾವತ್–ಆವರೆಗೆ, ಈಶ್ವರ ತಂತ್ರತಾ – ಈಶ್ವರನ ಪರಾಧೀನತೆಯು (ಇರುತ್ತದೆ) ; ಅಸ್ಯ–ಜೀವನಿಗೆ, ಯಾವತ್ ಅಸ್ವತಂತ್ರತ್ವಂ – ಯಾವವರೆಗೆ ಪರಾಧೀನತೆಯೋ, ತಾವತ್ ಈಶ್ವರತಃ ಭಯಂ – ಆವರೆಗೆ, ಈಶ್ವರನಿಂದ ಭಯವು ; ಯೇ–ಯಾರು, ಏತತ್–ಈ ರೀತಿ (ಹೀಗೆ), ಸಮುಪಾಸೀರನ್–ಉಪಾಸನೆ ಮಾಡಿದರೋ, ತೇ – ಅವರು, ಶುಚಾರ್ಪಿತಾಃ – ದುಃಖಿತರಾಗಿ,

---

ಜೀವನು ಅಸ್ವತಂತ್ರನಾಗಿರುವರೆಗೆ ಈಶ್ವರನಿಂದ ಭಯವು ತಪ್ಪಿದ್ದಲ್ಲ; ಹೀಗೆ ಜೀವನ ನಿತ್ಯ (ಮುಕ್ತಿಯಲ್ಲಿ ಸಹ) ಪರಾಧೀನತ್ವವನ್ನು ತಿಳಿದು ಚಿಂತಿಸುವವರೂ ಅಂಥ ತಮಸ್ಸಿನಲ್ಲಿ ಮೂರ್ಛಾವಸ್ಥೆಯಲ್ಲಿ ಬಿದ್ದು ನಾನಾ ದುಃಖಗಳನ್ನು ಅನುಭವಿಸುತ್ತಾರೆ; ಎಂದು ಮುಂತಾಗಿ ಭೇದಮುಕ್ತಿಯನ್ನು ಅನುವಾದಮಾಡಿ ಅದರಿಂದ ದುಃಖ ಪಾರತಂತ್ರಗಳನ್ನೇ ತೋರಿಸಿ, ರಾಜಸಭೆಯಲ್ಲಿ ಪ್ರಶ್ನಿಸಿದ, ಅದ್ವೈತವಾದಿಗಳಿಗೆ (ಭೇದವಾದವೇ ಸತ್ಯವೋ ಎಂಬಂತೆ) ಅದ್ವೈತವನ್ನು ಅನುವಾದ

ಮುಹ್ಯಂತಿ –(ಮೂರ್ಛೆ) ಮೋಹದಲ್ಲಿಯೇ ಬಿದ್ದಿರುವರು ; ಇತಿ – ಎಂದು, ಭಾಗವತೇ–ಭಾಗವತದಲ್ಲಿ, ಸ್ಪಷ್ಟಂ–ಸಂಶಯವಿಲ್ಲದಂತೆ ಹೇಳಲ್ಪಟ್ಟಿದೆ; ಮುಕ್ತೌ–ಮುಕ್ತಿಯಲ್ಲಿ, ಅದ್ವೈತಂ–ನಾನಾತ್ವದ ಅಭಾವವನ್ನು (ಅದ್ವಿತೀಯತ್ವವನ್ನು ), ಇಚ್ಛತಾಂ – ಇಚ್ಛಿಸುವ, ಸತಾಂ – ಜನರಿಗೆ, ಭೇದಾದೇಃ – ಭೇದಾದಿಗಳಿಗೆ, ಸಂಸೃತೌ ಏವ–ಸಂಸಾರದಲ್ಲಿಯೇ (ಎಂದೂ), ಸತ್ವಂ–ಸಾತ್ವಿಕ ಸ್ವಭಾವವನ್ನೇ, ಸಂಸದಿ – ರಾಜಸಭೆಯಲ್ಲಿ, ಶಂಸತಾಂ – ಸಂದೇಹಪಟ್ಟವರಿಗೆ, ಸರ್ವಂ ಮತಂ–ಅದ್ವೈತಮತವೆಲ್ಲವನ್ನೂ, ಅನೂದ್ಯ–ಅನುವಾದಮಾಡಿ, ಅಂತೇ–ಉಪಸಂಹಾರದಲ್ಲಿ, ನಿಷೇಧಃ ಅಪಿ–ನಿಷೇಧವೂ ಸಹ, ವಿಧೀಯತೇ–ವಿಧಿಸ (ಹೇಳಲ್ಪಡುತ್ತದೆ) ಲಾಗಿದೆ ; ಯತ್–ಯಾವ ಕಾರಣದಿಂದ, ಯೇ–ಯಾರು, ಏತತ್ಪೂರ್ವ ಕಥಿತಂ–ಈ ಹಿಂದೆ ಹೇಳಿದ, ಪ್ರಮೇಯಂ–ಅದ್ವೈತ ತತ್ವವನ್ನು, ಸಮುಪಾಸತೇ–ಉಪಾಸಿಸುವರೋ, ತೇ–ಅವರು, ಶೋಕೇನ–ದುಃಖದಿಂದ, ಅಂಧೇ ತಮಸಿ–ಅಂಧತಮಸ್ಸಿನಲ್ಲಿ, ಮೂರ್ಛಾಂ – ಮೋಹವನ್ನು (ಮೂರ್ಛಾವಸ್ಥೆಯನ್ನು ), ಯಾಂತಿ–ಹೊಂದುವರು, ಇತಿ ಜಗೌ–ಎಂದು ಹೇಳಿರುವರೋ, ಅತಃ–ಆದ್ದರಿಂದ, (ಹಾಗೆ ಫಲವನ್ನು ಅದ್ವೈತೋಪಾಸನೆಗೆ ಹೇಳಿರುವುದರಿಂದ), ಭಾಗವತಂ–ಭಾಗವತವು, ಸರ್ವಂ–(ಎಲ್ಲವೂ–ಎಲ್ಲರೂ) ಸರ್ವತ್ರವೂ, ಮುಕ್ತೌ–ಮುಕ್ತಿಯಲ್ಲಿ, ಈಶ್ವರತಂತ್ರತಾಂ ಚ–ಈಶ್ವರಾಧೀನತ್ವವನ್ನೇ, ಚ ಮತ್ತು, ಭೇದಸ್ಯ ಸದಾ ಸತ್ವಂ–ಭೇದದ ಸದಾ ಅಸ್ತಿತ್ವವನ್ನು (ಭೇದವು ಸರ್ವದಾ ಮುಕ್ತಿಯಲ್ಲಿರುವುದೆಂದೂ), ಶಾಸ್ತಿ–ವಿಧಿಸುತ್ತದೆ, ಇತ್ಯೇವ–ಹೀಗೆಂಬುದೇ, ಮನೋರಮಂ–ಮನೋಹರವಾದ (ಹಿತಕರವಾದ) ತತ್ವವು.

**ಭಗವತ್ಪರಮೇವಾಹುರ್ಯತೋ ಭಾಗವತಂ ಬುಧಾಃ ।**
**ಭಗವಾನ್ ಭಾಗ್ಯವಾಂಶ್ಚ ಸ್ಯಾತ್ಪೂಜ್ಯಶ್ಚ ಸ್ಯಾನ್ನ ಚಾಪರಃ ।**
**ಅತೋಽಸ್ಮಿನ್ನಿರ್ಗುಣಸ್ಯೋಕ್ತಿರೈಕ್ಯೋಕ್ತಿಶ್ಚ ನ ಶೋಭತೇ ॥ ೮೯೭ ॥**

---

ಮಾಡಿ, ಭೇದಾದಿಗಳು ಸಂಸಾರಾವಸ್ಥೆಯಲ್ಲಿ ಮಾತ್ರವೇ, ಮುಕ್ತಿಯಲ್ಲಿಲ್ಲವೆಂದೂ (ತ್ರಿಗುಣ ಸಂಬಂಧರಹಿತರಾದ್ದರಿಂದ ಮುಕ್ತರಿಗೆ ನಾನಾತ್ವವಿಲ್ಲವೆಂದೂ ; ಅದ್ವೈತೋಪಾಸನೆಯಿಂದ ಅಂಧತಮಸ್ಸೇ ಪ್ರಾಪ್ತಿಯೆಂದೂ) ಹೇಳಿ ಅದ್ವೈತವನ್ನು ನಿಷೇಧಿಸಿರುವರು ; ಈ ಕವಿಗಳೇ ಮಹಾಜ್ಞಾನಿಗಳು (೮೯೨–೮೯೬). ಏಕೆಂದರೆ, ಜ್ಞಾನಿಗಳು ಭಾಗವತವನ್ನು ಭಗವತ್ಪರವೆಂದೇ ಹೇಳುವರು ; ಭಾಗ್ಯ

ಯತಃ–ಯಾವ ಕಾರಣದಿಂದ, ಬುಧಾಃ–ಜ್ಞಾನಿಗಳು, ಭಾಗವತಂ–ಭಾಗವತವನ್ನು, ಭವತ್ಪರಂ ಏವ–ಭಗವತ್ಪರವೇ ಎಂದು ಆಹುಃ–ಹೇಳುವರೋ, ಚ–ಹಾಗೂ, ಭಾಗ್ಯವಾನ್–ಮಹಾ ಪುಣ್ಯವಂತನೇ, ಭಗವಾನ್–ಭಗವಾನ್ ಎಂಬ ಶಬ್ದ ಪ್ರಯೋಗಾರ್ಹನೂ, ಪೂಜ್ಯಶ್ಚ – ಪೂಜ್ಯನೂ, ಸ್ಯಾತ್ – ಆಗುವನು, ಅಪರಃ ನ–ಅನ್ಯನಲ್ಲವೋ ; ಅತಃ–ಆದ್ದರಿಂದ, ಅಸ್ಮಿನ್ – ಭಾಗವತಗ್ರಂಥದಲ್ಲಿ, ನಿರ್ಗುಣಸ್ಯ ಉಕ್ತಿಃ-ನಿರ್ಗುಣನ ಪ್ರಸಕ್ತಿಯೂ, ಐಕ್ಯೋಕ್ತಿಶ್ಚ-ಜೀವಬ್ರಹ್ಮೈಕ್ಯದ ನಿರೂಪಣೆಯೂ, ನ ಶೋಭತೇ-ಶೋಭಿಸುವುದಿಲ್ಲ (ಭಗವದ್ಗುಣಗಳಿಂದ ತುಂಬಿದ ಮನಸ್ಸುಳ್ಳ ಭಗವಾನ್ ಶುಕಾಚಾರ್ಯರು ಭಾಗವತವನ್ನು ಹೇಳಿರುವುದರಿಂದಲೂ, ಹರಿಗುಣ ಶ್ರವಣವನ್ನೇ, ವಿಷ್ಣುಜನಪ್ರಿಯವೆಂದು, ಭಾಗವತವನ್ನು ಪಠನಮಾಡಿರುವುದರಿಂದಲೂ, ನಿರ್ಗುಣತ್ವ, ಐಕ್ಯತ್ವಗಳಿಗೆ ಇಲ್ಲಿ ಸರ್ವಥಾ ಅವಕಾಶವೇ ಇಲ್ಲ).

**ಕದಾಚಿನ್ನಾಸ್ತಿತಾರೂಪಂ ಮಿಥ್ಯಾತ್ವಂ ತು ತವಾಪಿ ನ ।**
**ಲಯೇಷ್ವಭಾವಮಾತ್ರೇಣ ಸಾಧ್ಯಸಿದ್ಧಿಪ್ರಸಂಗತಃ ॥ ೬೯೮ ॥**
**ತ್ರಿಕಾಲನಾಸ್ತಿತಾರೂಪೋ ಯೋತ್ಯಂತಾಭಾವ ಉಚ್ಯತೇ ।**
**ಸತ್ತಾರ್ಥಕತ್ವಾದ್ಭೂಧಾತೋರತ್ಯಂತಾಸತ್ತ್ವಮೇವ ತತ್ ॥ ೬೯೯ ॥**
**ಸತ್ತ್ವಪ್ರತ್ಯಕ್ಷಬಲತೋ ಯದ್ಯಸತ್ತ್ವಂ ನಿವಾರ್ಯತೇ ।**
**ಪ್ರಮಾರೂಪಂ ತದಧ್ಯಕ್ಷಂ ಬ್ರಹ್ಮಣೋಪ್ಯುಭಯಂ ಕ್ಷಿಪೇತ್ ॥೭೦೦॥**

---

ವಂತನೇ (ಮಹಾಪುಣ್ಯವಂತನೇ) ಭಗವಾನ್ ಶಬ್ದವಾಚ್ಯನೂ, ಪೂಜ್ಯನೂ ಆಗಿರುವನು–ಅನ್ಯನಲ್ಲ; ಆದ್ದರಿಂದ ಅಲ್ಲಿ (ಭಾಗವತದಲ್ಲಿ) ನಿರ್ಗುಣೋಕ್ತಿಯೂ, ಐಕ್ಯೋಕ್ತಿಯೂ (ಬ್ರಹ್ಮನೈರ್ಗುಣ್ಯವೂ, ಜೀವಬ್ರಹ್ಮರ ಐಕ್ಯವೂ ಯೋಗ್ಯವಾಗುವುದಿಲ್ಲ (೬೯೭). ಯಾವುದಾದರೊಂದು ಕಾಲದಲ್ಲಿ ಇಲ್ಲದಿರುವುದೆಂಬುದು ನಿನ್ನಂತೆಯೂ ಮಿಥ್ಯಾತ್ವವಲ್ಲ; ಹಾಗಾದರೆ ಪ್ರಲಯಕಾಲದಲ್ಲಿ ಜಗತ್ತು ನಷ್ಟವಾದರೆ, ಅದರಿಂದ ಜಗತ್ತು ಮಿಥ್ಯೆಯೆಂದಾಗಬೇಕಾಗುತ್ತದೆ; (೬೯೮). ತ್ರಿಕಾಲಗಳಲ್ಲಿ (ಭೂತ, ಭವಿಷ್ಯತ್, ವರ್ತಮಾನಕಾಲಗಳಲ್ಲಿ) ಇಲ್ಲದ ವಸ್ತುವನ್ನು, ಅತ್ಯಂತಾಭಾವವೆನ್ನುವರಷ್ಟೆ; ಭೂಧಾತುವು ಸತ್ತಾರ್ಥಕವಾದ್ದರಿಂದ, ಅತ್ಯಂತಾಭಾವವೆಂದರೆ, ಅತ್ಯಂತ ಅಸತ್ತೇಸರಿ (೬೯೯). ಪ್ರತ್ಯಕ್ಷದ ಬಲದಿಂದ ಅಸತ್ತ್ವವನ್ನು ನಿವಾರಿಸಬಹುದೆಂದರೆ, ಉತ್ತಮ ಪ್ರಮಾಣವಾದ ಪ್ರತ್ಯಕ್ಷವು, ಬ್ರಹ್ಮನಿಗೂ

ಭ್ರಮರೂಪಂ ಯದಿ ಭವೇತ್ಸಾಹ್ಯತದ್ವತಿ ತಸ್ಯ ಧೀಃ ।
ಸತ್ತ್ವಾಭಾವಸ್ಯೈವ ತರ್ಹಿ ದ್ವಿರ್ಬದ್ಧಸ್ಯ ಸುಬದ್ಧತಾ ॥ ೯೦೧ ॥

ಪ್ರತ್ಯಕ್ಷಂ ಚಾಕ್ಷಸಂಯುಕ್ತಚಕ್ಷುರಾದೀಂದ್ರಿಯೈರ್ಯದಿ ।
ತರ್ಹೀಂದ್ರಿಯಾಣಾಮರ್ಥಾನಾಂ ಸಂಯೋಗೋತ್ಪತ್ತಯೇ ಪುರಾ ।
ಸತ್ತಾಪಿ ವಾಚ್ಯಾ ತಚ್ಚೋಚ್ಯಾ ಹಂತಾಭೂದನುಮೈವ ತೇ ॥೯೦೨॥

ಅತೋ ಸತ್ತ್ವನಿರಾಸಾ ಯಾ ನೀತಪ್ರತ್ಯಕ್ಷಶಕ್ತಿತಃ ।
ತ್ರಿಕಾಲನಾಸ್ತಿತಾರೂಪಮಿಥ್ಯಾತ್ವಸ್ಯಾಪಿ ಬಾಧನಾತ್ ॥ ೯೦೩ ॥

ನ ಚಾಂಬುನಾ ಕರ್ಣಲಗ್ನಸ್ಯಾಂಚೀನಾಂಬುನಿವೃತ್ತಿಮತ್ ।
ಅನುಮಾ ಬಾಧಿತೈವಾಭೂತ್ಸಾರ್ಥೋ ಭೂತ್ತಸ್ಕರಸ್ತವ ॥ ೯೦೪ ॥

ಅಸನ್ನಿಕೃಷ್ಟಾಕ್ಷಜಂ ತದಸತ್ತ್ವಸ್ಯೈವ ಸಾಧಕಂ ।
ನೃಶಿರಃ ಸಂಗಿ ಯಚ್ಚಕ್ಷುರ್ನ ತಚ್ಛೃಂಗೇಣ ಸಂಗವತ್ ॥ ೯೦೫ ॥

---

ಇರುವುದಾದರೆ, ನಿನ್ನಂತೆ, ಅದು ಪ್ರತ್ಯಕ್ಷವನ್ನು, ಜಗತ್ತಿನ ಅಸತ್ತ್ವವನ್ನು ಎರಡನ್ನೂ ನಿರಾಕರಿಸುತ್ತದೆ; (೯೦೦). ಸತ್ತ್ವವಿಲ್ಲದ್ದರಲ್ಲಿ ಸತ್ತ್ವದ ಜ್ಞಾನವು (ಅಸ್ತಿತ್ವದ ಜ್ಞಾನವು) ಭ್ರಮರೂಪವೆಂದು ಹೇಳಿದರೆ, ಆಗ ಅರ್ಥೇಂದ್ರಿಯಗಳ ಉಭಯ ಸಂಬಂಧವು ದೃಢವಾಗುತ್ತದೆ; ಬ್ರಹ್ಮನಿಗೆ ಭ್ರಮಜ್ಞಾನವುಂಟಾಗಲು ಯಾವ ಕಾರಣವೂ ಇಲ್ಲ (೯೦೧). ಪ್ರತ್ಯಕ್ಷಜ್ಞಾನವು ಚಕ್ಷುರಾದಿ ಇಂದ್ರಿಯಗಳ ಸಂಬಂಧದಿಂದ ಆದುದಾದರೆ, (ಸಾಕ್ಷಿಗೆ ಆ ಜ್ಞಾನವು ಉಂಟಾಗುವುದಾದರೆ), ಇಂದ್ರಿಯಾರ್ಥಗಳ ಸಂಯೋಗವು ಮೊದಲಿಗೆ (ಜ್ಞಾನೋತ್ಪತ್ತಿಗೆ ಮೊದಲೇ) ಇರಬೇಕಾಗುತ್ತದೆ; ಆಗ ಅವುಗಳ ಅಸ್ತಿತ್ವ (ಸತ್ತಾ)ವನ್ನು ಅಂಗೀಕರಿಸಬೇಕಾಗುತ್ತದೆ; ಹೀಗೆ ಪರನ ಅನುಮಾನವು ಜ್ಞಾನಿಗಳಿಗೆ ಶೋಕಾರ್ಹವೆಂದೇ ತೋರುತ್ತದೆ (೯೦೨). ಪ್ರತ್ಯಕ್ಷಜ್ಞಾನದಿಂದ ನಿಯಮವಾಗಿ ಪದಾರ್ಥಜ್ಞಾನವು ಲಭಿಸುವುದರಿಂದ, ಅಸತ್ತ್ವವೂ, ತ್ರಿಕಾಲನಾಸ್ತಿತ್ವ ರೂಪದ ಮಿಥ್ಯಾತ್ವವೂ ಬಾಧಿತವಾಗುತ್ತವೆ (೯೦೩). ಕರ್ಣಲಗ್ನವಾದ ಜಲವನ್ನು ಜಲದಿಂದ ತೊಳೆದಂತೆ, ಯಾವ ಹೊಸ ಪ್ರಯೋಜನವೂ ನಿನ್ನ ವಂಚಕತನದಿಂದ, ಸಾಧಿಸಲ್ಪಡಲಿಲ್ಲ; ನಿನ್ನ ಅನುಮಾನವು ವ್ಯರ್ಥವಾಯಿತು (೯೦೪). ಅರ್ಥ ಸಂಬಂಧವಿಲ್ಲದ ಇಂದ್ರಿಯದಿಂದ ಆದ ಜ್ಞಾನವು ಅಸತ್ತ್ವಸಾಧಕವೇ ಆಗಿದೆ; ನರವಿಷಾಣದ ಸಂಬಂಧ ಹೊಂದದ ಚಕ್ಷುವು

ಏವಂ ಚಾಸನ್ನಿಕೃಷ್ಟಾಕ್ಷಾ ಶುಕ್ತಿರೂಪ್ಯನಿರೀಕ್ಷಣಂ ।
ಅಸತ್ತ್ವಾಂ ಗಮಯೇತ್ತಸ್ಯ ನ ತ್ವಸತ್ತೋ ವಿಭಿನ್ನತಾಂ ।
ಅರ್ಥಾಪತ್ತ್ಯಾಪ್ಯನರ್ಥೋಽಭೂನ್ನತ್ವರ್ಥೋಽಭೂತ್ಪರಸ್ಯ ತತ್ ॥ ೯೦೬ ॥

ವ್ಯಾವಹಾರಿಕಸತ್ತಾ ಚ ಭ್ರಾಂತ್ಯಾಽಭ್ರಾಂತವಿಕಲ್ಪನೇ ।
ಅಸತ್ತ್ವಸಾಧಿಕಾ ವಾ ಸ್ಯಾತ್ಸ್ಯಾದ್ವಾ ಮಿಥ್ಯಾತ್ವಬಾಧಿಕಾ ॥ ೯೦೭ ॥

ಸದ್ವಿವಿಕ್ತತ್ವಮಪಿ ತೇ ಸತ್ತ್ವಾನಾಧಾರತೈವ ಯತ್ ।
ಅತಸ್ತಸ್ಯಾಪಿ ಸಾಧ್ಯತ್ವೇ ಸ್ಯಾನ್ನೃಶೃಂಗೋಪಮಂ ಜಗತ್ ॥ ೯೦೮ ॥

ಅತೋ ಮಿಥ್ಯಾತ್ವವಾದೇಽಸ್ಮಿನ್ ಬ್ರಹ್ಮಾನ್ಯತ್ಸಕಲಂ ಜಗತ್ ।
ಅಸದೇವಾಭವತ್ತೇನ ಮಾನೇ ಸ್ಯಾದ್ದೂಷಣಂ ಬಹು ॥ ೯೦೯ ॥

ಸಾಧ್ಯಬಾಧಾಶ್ರಯಾಸಿದ್ಧೀ ಸ್ವರೂಪಾಸಿದ್ಧಿರೇವ ಚ ।
ವ್ಯಾಪ್ಯತ್ವಾಸಿದ್ಧತಾ ಚ ಸ್ಯಾದ್ದೃಷ್ಟಾಂತಾಸಿದ್ಧಿರೇವ ಚ ॥ ೯೧೦ ॥

---

ನರವಿಷಾಣವನ್ನು ಕಂಡಂತೆ (೯೦೫). ಹೀಗೆಯೇ ಇಂದ್ರಿಯ ಸಂಬಂಧವಿರದ ಇಂದ್ರಿಯದಿಂದ ಕಾಣುವ ಶುಕ್ತಿರೂಪ್ಯದ ದರ್ಶನವೂ ಆಗಿರುತ್ತದೆ; ಅದೂ ಅಸತ್ತ್ವವನ್ನೇ ತಿಳಿಸುವುದಲ್ಲದೇ, ಅಸತ್ತಿನಿಂದ ಭಿನ್ನವಾದ ವಸ್ತುವನ್ನಲ್ಲ; ಶುಕ್ತಿ ರಜತಜ್ಞಾನವು ಅನ್ಯಥಾ ಉಪಪನ್ನವಲ್ಲವೆಂಬ ಪರನ ಅರ್ಥಾಪತ್ತಿ ರೂಪದ ಯುಕ್ತಿಯು, ವ್ಯರ್ಥವಾಯಿತಲ್ಲದೇ, ಪರನಿಗೆ ಯಾವ ಪ್ರಯೋಜನವೂ ಆಗಲಿಲ್ಲ (೯೦೬); ವ್ಯಾವಹಾರಿಕ ಸತ್ತ್ವವೆಂಬ ವಾದವನ್ನು ವಿವೇಚಿಸಿದರೆ, ಭ್ರಮೆಯೋ, ಅಭ್ರಮವೋ ಎಂದು ವಿಕಲ್ಪಿಸಿ ಚಿಂತಿಸಿದರೆ, ಭ್ರಮೆಯೆಂದರೆ, ಹಿಂದೆ ನಿರೂಪಿಸಿ ದಂತೆ ಅಸತ್ತೆಂದೂ, ಭ್ರಮೆಯಿಲ್ಲವೆಂದರೆ, ಮಿಥ್ಯೆ ಅಲ್ಲವೆಂದು ಸಿದ್ಧವಾಗುತ್ತದೆ; (೯೦೭). ಸದ್ವಿವಿಕ್ತ (ಸದ್ಭಿನ್ನ)ವೆಂಬುದೇ ಸಾಧ್ಯವೆಂದರೂ ಜಗತ್ತು ನರವಿಷಾಣ ದಂತೆ ಅಸತ್ತೆಂದೇ ಪ್ರಾಪ್ತವಾಗುತ್ತದೆ; ಸದ್ಭಿನ್ನವಾದುದಕ್ಕೆ ಸತ್ಯದ ಆಧಾರವೇ ಇಲ್ಲ; (೯೦೮). ಬ್ರಹ್ಮಭಿನ್ನವಾದ ಸಕಲ ಜಗತ್ತು ಮಿಥ್ಯೆಎಂಬಲ್ಲಿ ಈ ಯುಕ್ತಿಯು ಪ್ರಮಾಣವೆಂದರೆ, ಬಹುದೋಷಗಳಿಂದ, ಜಗತ್ತು ಅಸತ್ತೆಂದೇ ಸಿದ್ಧವಾಗುತ್ತದೆ; (೯೦೯). ಪರನ ಅನುಮಾನವು ಸಾಧ್ಯವನ್ನೇ ಬಾಧಿಸುತ್ತದೆ; ಆಶ್ರಯಾಸಿದ್ಧಿ, ಅವ್ಯಾಪ್ತಿ ಮುಂತಾದ, ಹೇತುವಿರೋಧ ನಿರೂಪಣದ ಎಲ್ಲ ದೋಷಗಳೂ ಇಲ್ಲಿ

ಮಾನಾನುಗಸ್ಯ ತೇ ಮಾನೋಽಪ್ಯಪಸಿದ್ಧಾಂತದೋಷತಃ ।
ಭಗ್ನಸ್ಸ್ಯಾತ್ಸತ್ತ್ವಮಾತ್ರಸ್ಯ ಬಾಧೇ ತಸ್ಯ ತು ಧರ್ಮಿಣಾಂ ।
ಸ್ವಸ್ವರೂಪೇಣ ಚಾಬಾಧೇ ಸದದ್ವೈತಮತಕ್ಷತಿಃ ॥ ೯೧೧ ॥
ಯಥಾಽಬಾಧ್ಯಬ್ರಹ್ಮರೂಪಂ ಸದೇಕಮನುಭವತ್ತಥಾ ।
ಜಡಾಬಾಧ್ಯಜಗದ್ರೂಪಮಪಿ ಯಸ್ಮಾದಭೂದ್ಧಿ ಸತ್ ॥ ೯೧೨ ॥
ಸ್ವರೂಪಸ್ಯಾಪಿ ಬಾಧೇ ತು ಪ್ರಾಗುಕ್ತಂ ದೂಷಣಂ ಭವೇತ್ ।
ಏವಂ ಚೋಭಯತಃ ಪಾಶಾರಜ್ಜುರ್ಬಧ್ನಾತಿ ತೇ ಗಲಂ ॥ ೯೧೩ ॥
ಅನ್ಯತ್ತ್ವಂ ಸದಸದ್ಭ್ಯಾಂ ಚ ಯದಿ ಮಿಥ್ಯಾತ್ವಮೀರ್ಯತೇ ।
ಅಪ್ರಸಿದ್ಧಂ ತದಾ ಸಾಧ್ಯಂ ಭವೇದ್ಧಿ ಪ್ರತಿವಾದಿನಂ ॥ ೯೧೪ ॥
ದೃಷ್ಟಾಂತೇ ಸಾಧ್ಯವೈಕಲ್ಯಶಲ್ಯಂ ಚೈವ ಭವೇತ್ತ್ವ ।
ಸತ್ತ್ವಭ್ರಾಂತಿಃ ಸನ್ನಿಕರ್ಷಶೂನ್ಯಪ್ರತ್ಯಕ್ಷಮೇವ ಚ ॥ ೯೧೫ ॥

---

ತೋರುತ್ತವೆ ; ದೃಷ್ಟಾಂತ ವಿರೋಧವೂ ಬರುತ್ತದೆ (ಇವುಗಳ ವಿವರವನ್ನು ಅಡಿ ಟಿಪ್ಪಣಿಯಿಂದಲೂ ಅದರ ಸಹಾಯ ಮತ್ತು ಗುರುಮುಖದಿಂದಲೂ ಸ್ಪಷ್ಟಪಡಿಸಿ ಕೊಳ್ಳಬೇಕು) (೯೧೦). ತಾನು ಪ್ರಮಾಣಾನುಗನೆಂದು ಹೇಳಿಕೊಳ್ಳುವ ಮಾನಿಯಾದ ಪರನು, ಈ ಯುಕ್ತಿಯನ್ನು ಮುಂದರಿಸಿ ಅಪಸಿದ್ಧಾಂತದೋಷಕ್ಕೂ ಗುರಿಯಾಗುತ್ತಾನೆ ; ವಸ್ತುಗಳ ಸತ್ತ್ವಮಾತ್ರ ನಿಷೇಧದಿಂದ ಪರನ ಅಭೀಷ್ಟವೂ ಸಾಧಿಸುವುದಿಲ್ಲ; ಅವುಗಳ ಸ್ವರೂಪವನ್ನು ನಿಷೇಧಿಸದಿದ್ದಲ್ಲಿ, ಅದ್ವೈತಮತವೇ ಕುಸಿದುಬೀಳುತ್ತದೆ ; ಯುಕ್ತಿಯು ಧರ್ಮಿಗಳ ಸ್ವಸ್ವರೂಪವನ್ನು ಬಾಧಿಸುವುದಿಲ್ಲ; (೯೧೧). ಅಬಾಧ್ಯವಾದ ಬ್ರಹ್ಮಸ್ವರೂಪವು ಹೇಗೆ ಇರುವ ಒಂದೇ ಪದಾರ್ಥವೆಂದು ನೀನು ಸಾಧಿಸುವಿಯೋ, ಹಾಗೆಯೇ ಜಡವಾದ ಜಗತ್ತು ಸಹ ಅಬಾಧ್ಯ ಸ್ವರೂಪ ವುಳ್ಳದ್ದಾಗಿ, ಅದೂ ಬ್ರಹ್ಮನಂತೆ ಸದ್ವಸ್ತುವೇ ಆಗುತ್ತದೆ ; (೯೧೨) ; ಸ್ವರೂಪವೂ ಬಾಧ್ಯವೆಂದರೆ, ಹಿಂದೆ ಹೇಳಿದ ದೋಷವು ತಗಲುತ್ತದೆ; ಆದ್ದರಿಂದ ವಸ್ತು ಸ್ವರೂಪವು ಬಾಧ್ಯವೆಂದರೂ, ಅಲ್ಲವೆಂದರೂ, ನಿನ್ನ (ಪರನ) ಕಂಠವು ಪಾಶದಿಂದ ಬಂಧಿತವಾಗಿ ನಿಲ್ಲಬೇಕಾಗುತ್ತದೆ; (೯೧೩). ಸತ್, ಅಸತ್‌ಗಳಿಂದ ಭಿನ್ನ ವಾದುದು, ಮಿಥ್ಯಾತ್ವವೆಂದು ಪರನು ಹೇಳಿದರೆ, ಸಾಧ್ಯವೆಂಬ ಮಿಥ್ಯಾತ್ವವು ಅಪ್ರಸಿದ್ಧವಾಗುತ್ತದೆ ; (೯೧೪) ; ಯಾವ ದೃಷ್ಟಾಂತವನ್ನು ಹೇಳಿದರೂ, ಸಾಧ್ಯ

ಅಸತ್ತ್ವಂ ಸ್ಥಿರಯೇದುಕ್ತವಿಧೆಯಾ ನ ನಿವಾರಯೇತ್ ।
ಅತಃ ಪ್ರಸಾಧ್ಯಕಾಂಗಂ ಚ ನಾಸೀದೇತನ್ನಿದರ್ಶನಂ ॥ ೯೧೬ ॥
ಕಿಂಚಾಸತ್ತ್ವನಿಷೇಧೇಪಿ ಸತ್ತ್ವಸ್ಯಾಭಾವಮಾತ್ರತಃ ।
ಪ್ರಾಗುಕ್ತಪಂಚದೋಷಾಣಾಂ ನೈವೋದ್ಧಾರೋ ಭವೇತ್ತವ ॥೯೧೭॥
ಬಾಷ್ಪಾರೋಪಿತಧೂಮಸ್ಯ ಸತ್ತ್ವಾಭಾವೇನ ಕೇವಲಂ ।
ಅಸದ್ವಿಲಕ್ಷಣಸ್ಯಾಪಿ ಕಿಂ ನಾಸಿದ್ಧಿರ್ಭವನ್ಮತೇ ॥ ೯೧೮ ॥
ಏವಂ ಚ ಸದ್ವಿವಿಕ್ತೇಷು ರಜ್ಜುಸರ್ಪಾದಿಕೇಷು ತೇ ।
ಅಸದ್ಭಿನ್ನೇಷ್ವಪಿ ಯತಸ್ತದ್ಯೋಗ್ಯಾರ್ಥೋ ನ ದೃಶ್ಯತೇ ॥ ೯೧೯ ॥
ತತ್ಸತ್ತ್ವರಹಿತತ್ವಾಖ್ಯಮಸತ್ತ್ವಂ ಸರ್ವಸಂಮತಂ ।
ಮಿಥ್ಯಾತ್ವಮಸ್ತು ಸರ್ವತ್ರ ಪುನಸ್ತಸ್ಯಾಸತೋಽನ್ಯತಾ ।
ವ್ಯರ್ಥಾ ಕಿಮರ್ಥಂ ಸ್ವೀಕಾರ್ಯಾ ಯಾ ವ್ಯಾಹತ್ಯಾ ಚ
ದೂಷಯೇತ್ ॥ ೯೨೦ ॥

---

ವೈಕಲ್ಯಾದಿ ದೃಷ್ಟಾಂತವಿರೋಧವೆಂಬ ಅನುಮಾನದೋಷವು ತಪ್ಪುವುದಿಲ್ಲ; ಅರ್ಥೇಂದ್ರಿಯಗಳ ಸನ್ನಿಕರ್ಷ ಶೂನ್ಯತ್ವವು ಭ್ರಾಂತಿಯನ್ನುಂಟುಮಾಡುವುದಿಲ್ಲ; (೯೧೫). ಕಿಂತು ಅಸತ್ತ್ವವನ್ನೇ ದೃಢಗೊಳಿಸುತ್ತದೆ—ಹಿಂದೆ ಹೇಳಿದಂತೆ, ನಿವಾರಿಸುವುದಿಲ್ಲ; ಆದ್ದರಿಂದ ದೃಷ್ಟಾಂತವು, ಸಾಧ್ಯಸಾಧಕ ಅಂಗ (ಸಹಾಯಕ ವಿಲ್ಲದ್ದು) ರಹಿತವೇ ಆಗುತ್ತದೆ (೯೧೬). ಕಿಂಚ ಅಸತ್ತ್ವವನ್ನು ನಿಷೇಧಿಸಿದರೂ ಸತ್ವದ ಅಭಾವಮಾತ್ರದಿಂದ, ಹಿಂದೆ ನಿರೂಪಿಸಲಾದ ಪಂಚದೋಷಗಳ ಪರಿಹಾರ ವಾಗುವುದಿಲ್ಲ; ಬ್ರಹ್ಮಮಾತ್ರನು ಸತ್ಯನೆಂಬ ಅದ್ವೈತ ಪ್ರಕ್ರಿಯೆಯು ಸಿದ್ಧ ವಾಗುವುದಿಲ್ಲ (೯೧೭). ಕಣ್ಣೀರಿನ ಪ್ರಭಾವದಿಂದ ಹೊಗೆಯಂತೆ ತೋರುವ ಹೇತುವಿನಿಂದ, ಅಸದ್ವಿಲಕ್ಷಣವಾದ (ಸತ್ತ್ವಾರ–ಸತ್ಯವಾದ) ಅಗ್ನಿಯ ಜ್ಞಾನವು ಎಂದೂ ಆಗುವುದಿಲ್ಲವೇನು? (ಆಗಬಹುದು–ಏವಂಚ–ಆ ಹೇತುವಿನಿಂದಾದುದಲ್ಲ–ಹೇತುವು ಅಸತ್ತಾದರೂ, ಸದ್ವಸ್ತುವು ಸಿದ್ಧಿಸಬಹುದು); (೯೧೮) ಆದರೆ ಅಸದ್ಭಿನ್ನ ವಸ್ತುಗಳಾದ ರಜ್ಜುಸರ್ಪಾದಿಗಳ ಜ್ಞಾನವು ಅಂಥ ಹೇತುವಿನಿಂದ ಸಿದ್ಧಿಸುವುದಿಲ್ಲ; (೯೧೯); ಆದ್ದರಿಂದ ಸತ್ತ್ವರಹಿತವೆಂದು ಎಲ್ಲರೂ ಒಪ್ಪಬಹು ದಾದುದು, ಮಿಥ್ಯೆಯೆಂದಾಗಲಿ; ಸರ್ವತ್ರ ಅದು ಅಸದ್ಭಿನ್ನವೆಂದು ಏಕೆ

ದೋಷೇ ಸತ್ಯೇವ ದೃಶ್ಯತ್ವಂ ಯೋಗಸ್ಯಾಯೋಗ್ಯತಾ ತಥಾ ।
ಅಸತ್ತ್ವಸ್ಯೈವ ಸಿದ್ಧ್ಯರ್ಥಂ ಲಿಂಗಭೂತೇ ನ ಸಂಶಯಃ ।
ಉಕ್ತಾ ಸಿದ್ಧ್ಯಾದಿದೋಷಾಣಾಂ ತಸ್ಮಾನ್ನಾಸ್ತಿ ತದೌಷಧಂ ॥ ೯೨೧ ॥

ವ್ಯಾವಹಾರಿಕಸತ್ತಾ ಚ ಪ್ರಾಗುಕ್ತೇನೈವ ವರ್ತ್ಮನಾ ।
ನ ವಿಕಲ್ಪಸಹಾ ತಸ್ಮಾನ್ಮಿಥ್ಯಾತ್ವಾಶಾಂ ಪರಿತ್ಯಜ ॥ ೯೨೨ ॥

ಜ್ಞಾನೇನ ನಾಶ್ಯತಾ ಯಾ ತು ಸಾಪಿ ನಾಸ್ತಿ ನಿದರ್ಶನೇ ॥ ೯೨೩ ॥

ಕಿಂಚ ಭೇದೇ ತವ ಮತೇಽಪ್ಯನಾದೌ ಜ್ಞಾನನಾಶ್ಯತಾ ।
ತ್ವದ್ರೀತ್ಯೈವ ನ ಯಸ್ಮಾತ್ಸೋಽಪ್ಯುಪಾದೇಯಕ್ಷಯರೂಪಿಣೀ ।
ಅತೋಂಽಶತೋ ಬಾಧಿತಾಭೂತ್ತ್ವನ್ನಯೇನೈವ ತೇಽನುಮಾ ॥ ೯೨೪ ॥

---

ಅಂಗೀಕರಿಸಬೇಕು ? ಅಸದ್ಭಿನ್ನವೆಂಬುದು ಮಿಥ್ಯೆಯನ್ನು ವ್ಯಾಹತಗೊಳಿಸುವುದಿಲ್ಲವೇ ? ಎರಡೂ ಪರಸ್ಪರ ವಿರೋಧಗಳೆಂದಾಗುವುದಿಲ್ಲವೇ ? (೯೨೦). ಪದಾರ್ಥದಲ್ಲಿ ದೋಷವಿದ್ದರೆ, (ಮಿಥ್ಯೆಯಾದರೆ) ದೃಶ್ಯತ್ವವು (ದೃಷ್ಟಿಗೋಚರವಾಗುವಿಕೆಯು), ಇಲ್ಲದಿದ್ದರೆ (ದೃಶ್ಯತ್ವದ ಅರ್ಹತೆ ಇಲ್ಲದಿದ್ದರೆ) ಅಸತ್ತ್ವವು, ಎಂಬೀ ಲಕ್ಷಣಗಳನ್ನು ನಿನಗೆ ಬೇಕಾದ ದೋಷ ಸಿದ್ಧಿಗಾಗಿ ಹೇಳಿಕೊಳ್ಳುವಿ ; ಆದ್ದರಿಂದ, ನಿನ್ನ ಆಗ್ರಹಕ್ಕೆ (ಅದರ ಪರಿಹಾರಕ್ಕೆ) ಔಷಧಿಯೇ ಇಲ್ಲ (೯೨೧) ; ಪರನು ಜಗತ್ತನ್ನು ವ್ಯಾವಹಾರಿಕ ಸತ್ತ್ವವುಳ್ಳದ್ದೆಂದು ಹೇಳುತ್ತಾನೆ ; ಈ ಹಿಂದೆ ಹೇಳಿದ (ದೋಷವಿದ್ದರೆ ದೃಶ್ಯತ್ವವೆಂಬ ಇತ್ಯಾದಿ) ಲಕ್ಷಣ ಕಲ್ಪನೆಯನ್ನು ವ್ಯಾವಹಾರಿಕತ್ವವು ಸಹಿಸುವುದಿಲ್ಲ ; ಆದ್ದರಿಂದ, ಜಗನ್ಮಿಥ್ಯಾತ್ವವನ್ನು ಯುಕ್ತಿಯಿಂದ ಸಾಧಿಸಬಹುದೆಂಬ ನಿನ್ನ ಆಶೆಯನ್ನು ತ್ಯಜಿಸು (೯೨೨). ವ್ಯಾವಹಾರಿಕ ಸತ್ತ್ವವು, ಬ್ರಹ್ಮಜ್ಞಾನದಿಂದ ಬಾಧ್ಯವೆಂಬ (ನೀನು ಹೇಳುವ ಲಕ್ಷಣವೂ) ನಿದರ್ಶನದಲ್ಲಿ ಇಲ್ಲ—ಆದ್ದರಿಂದ ಜಗತ್ತು ವ್ಯಾವಹಾರಿಕವೆಂದೂ ಸಿದ್ಧವಾಗುವುದಿಲ್ಲ (೯೨೩) ; ನಿನ್ನ ಮತದಂತೆ ಸಹ ಅನಾದಿಯಾದ ಜೀವೇಶ್ವರ ಭೇದವು ಬ್ರಹ್ಮಜ್ಞಾನದಿಂದ ನಾಶವಾಗುವುದಿಲ್ಲ (ಅನಾದಿಯಾದುದಕ್ಕೆ ಜ್ಞಾನನಾಶ್ಯತ್ವವು ನಿನ್ನ ಮತದಂತೆ ಇರುವುದಿಲ್ಲ) ; ಅನಾದಿತ್ವವು ಉಪಾದಾನಕಾರಣ ಜನ್ಯವಲ್ಲ ; ಈ ಕಾರಣದಿಂದಲೂ, ನಿನ್ನ ಪ್ರಕ್ರಿಯೆಯಂತೆ ಸಹ ನಿನ್ನ ಯುಕ್ತಿಯು ಭಾಗಶಃ ಬಾಧಿತವಾಗುತ್ತದೆ ; (ಉಪಾದಾನ ಜನ್ಯವಾದುದಕ್ಕೆ ನಾಶವುಂಟೆಂಬುದು ಪರನಿಗೂ

ಹಾ ಹಂತ ಕಿಂ ತೇ ಸ್ಖಲನಮಂಧಸ್ಯೇವ ಪದೇ ಪದೇ ।
ಅವಿದ್ಯೋಪಾದಾನತಾ ಚ ತಮಸೀವ ನ ದೂಷಣಂ ॥ ೯೨೫ ॥

ಅಜ್ಞಾನಸ್ಯಾನುಪಾದೇಯಮಜ್ಞಾನಂ ಸತ್ಯಮೇವ ಯತ್ ।
ಅಜ್ಞಾನೋಪಾದಾನತಯಾ ಕಿಂ ನಶ್ಛಿನ್ನಂ ತತೋ ವದ ॥ ೯೨೬ ॥

ಸ್ವಾತ್ಯಂತಾಭಾವಸಾಹಿತ್ಯಂ ವಿರೋಧಾದ್ಬಾಧಿತಂ ತವ ।
ಅವಿರೋಧೇ ಜಗತ್ಸತ್ತ್ವಸಿದ್ಧೇರ್ಮಮ ನ ದೂಷಣಂ ॥ ೯೨೭ ॥

ಕಿಂಚೈವಂ ಸದಸತ್ತ್ವಾಖ್ಯಪಕ್ಷಸ್ಯಾಪ್ಯವಿರೋಧತಃ ।
ಅನಿರ್ವಾಚ್ಯತ್ವವೃಕ್ಷಸ್ಯ ಮೂಲಚ್ಛೇದೋಭವತ್ತವ ॥ ೯೨೮ ॥

ದೃಶ್ಯಧ್ಯಸ್ತತ್ವರೂಪಂ ಯದ್ದೃಶ್ಯತ್ವಂ ತವ ಸಂಮತಂ ।
ಸಾಧ್ಯಾ ವೈಶಿಷ್ಟ್ಯದೋಷೇಣ ನ ತನ್ಮಿಥ್ಯಾತ್ವಸಾಧಕಂ ॥ ೯೨೯ ॥

---

ಅಭಿಮತವಾಗಿದೆ (೯೨೪) ; ಪರನು ಅದೆಷ್ಟು ಶೋಕಾರ್ಹನು ! ಕುರುಡನಂತೆ ಪ್ರತಿ ಹೆಜ್ಜೆಯಲ್ಲಿ ಜಾರುತ್ತಾನೆ (ಎಡವುತ್ತಾನೆ) ; ತಮಸ್ಸಿನಲ್ಲಿ ಅವಿದ್ಯೆ ಎಂದಂತೆ, ಜಗತ್ತಿಗೆ ಅವಿದ್ಯೆಯೇ ಉಪಾದಾನವೆಂಬುದು (ಅವಿದ್ಯಾ ನಿರ್ಮಿತವೆಂಬುದು) ದೋಷವೇ ಅಲ್ಲವೇ ? (ತಮಸ್ಸಿಗೆ ತಮಸ್ಸೇ ಉಪಾದಾನವಾಗಿ ರೂಪಾಂತರವನ್ನು ಹೊಂದಿತೇ ? ಆಶ್ಚರ್ಯವು !) (೯೨೫) ; ಅಜ್ಞಾನವು ಸತ್ಯವಾದುದು ಎಂದರೆ, ಅದ್ವೈತವು ಭಗ್ನವಾಗುತ್ತದೆ ; ಮತ್ತು ಅದು ಉಪಾದೇಯ ವಸ್ತುವಲ್ಲವೆಂದೇ ಹೇಳಬೇಕಾಗುತ್ತದೆ ; ಅದಕ್ಕೆ ಮತ್ತೊಂದು ಉಪಾದಾನವೆಂದರೆ ಅನವಸ್ಥಾ ದೋಷಪ್ರಾಪ್ತವಾಗುತ್ತದೆ ; ಈ ಅಜ್ಞಾನವೇ ಜಗತ್ತಿನ ಉಪಾದಾನವೆಂದರೆ, ಈ ವಾದವೇ, ನಮ್ಮಂತೆ, ಕಡಿದು ಬೀಳುವುದಿಲ್ಲವೇ ? (೯೨೬); ವಸ್ತುವೂ ಅದರ ಅತ್ಯಂತಾಭಾವವೂ–ಕಾಲತ್ರಯಗಳಲ್ಲಿ ಇಲ್ಲದಿರುವಿಕೆಯೂ, ಪರಸ್ಪರ ವಿರುದ್ಧಗಳೇ ಆಗಿವೆ ; ಹಾಗಿಲ್ಲದಿದ್ದರೆ, (ಪರಸ್ಪರ ವಿರೋಧಿಗಳಲ್ಲದಿದ್ದರೆ) ನನಗೇನೂ ದೋಷವಿಲ್ಲ–ಜಗತ್ತು ಸತ್ಯವೆಂದೇ ಸಿದ್ಧವಾಗುತ್ತದೆ (೯೨೭). ಹೀಗೆಯೇ ವಸ್ತುವಿಗೂ ಅದರ ಸದಸತ್ತ್ವವೆಂಬ (ಉಭಯಾತ್ಮಕ) ಸ್ಥಿತಿಗೂ ವಿರೋಧವಿಲ್ಲವೆಂದರೆ, ನಿನ್ನ (ಪರನ) ಅನಿರ್ವಾಚ್ಯತ್ವವೆಂಬ ವೃಕ್ಷವು (ಕಲ್ಪಿತವೃಕ್ಷವು) ಬುಡಸಹಿತ ಕಿತ್ತುಬೀಳುತ್ತದೆ (೯೨೮). ದೃಶ್ಯತ್ವವೂ ಜಗನ್ಮಿಥ್ಯಾತ್ವವನ್ನು ಸಾಧಿಸಲಾರದು ; ದೃಶ್ಯತ್ವವೆಂಬುದು, ಗುಣವಿಶಿಷ್ಟವೆಂಬ ದೋಷಯುಕ್ತವಾದ ಹೇತುವಾಗಿ, ಸಾಧ್ಯವು ಬಾಧಿತವಾಗುತ್ತದೆ–ಹೇತುವು ನಿರ್ದುಷ್ಟವಲ್ಲ–ನಿರ್ದುಷ್ಟ ಹೇತುವು ಸಾಧ್ಯವನ್ನು ನಿಯಮೇನ

ಹೇತೋರನ್ಯತರಾಸಿದ್ಧಿಶ್ಚ ಸ್ಯಾದೀದೃಶಿ ಸಾಧನೇ ।
ಬಾಧ್ಯತ್ವಂ ಚ ಮಮಾಸಿದ್ಧಂ ಕೇನ ಸಾಧ್ಯಂ ಪ್ರಸಾಧ್ಯತೇ ॥ ೯೩೦ ॥

ನಾಪಿ ವೃತ್ತಿವ್ಯಾಪ್ಯತಾ ತೇ ಮತೇ ಭವತಿ ದೃಶ್ಯತಾ ।
ಸಂಬಂಧಸ್ಯಾನಿರುಕ್ತ್ಯಾ ಚ ಬ್ರಹ್ಮಣಿ ವ್ಯಭಿಚಾರತಃ ।
ಯತಸ್ತೇ ಚರಮಾವೃತ್ತಿರ್ಬ್ರಹ್ಮಚಿನ್ಮಾತ್ರಗೋಚರಾ ॥ ೯೩೧ ॥

ಸಾಕ್ಷಿವೇದ್ಯೇ ಶುಕ್ತಿರೂಪ್ಯೇ ತ್ವದ್ದೃಷ್ಟಾಂತೇಽಪ್ಯವರ್ತನಾತ್ ।
ಸಾಕ್ಷಿವೇದ್ಯಾಜ್ಞಾನಪೂರ್ವೇ ಭಾಗಾಸಿದ್ಧಿಪ್ರಸಂಗತಃ ॥ ೯೩೨ ॥

ಕಥಂಚಿದ್ಯುಕ್ತಿವೇದ್ಯತ್ವಾಚ್ಛ್ರುತಿವೇದ್ಯತ್ವತಶ್ಚ ತತ್ ।
ವೃತ್ತಿವ್ಯಾಪ್ಯಂ ಯದಿ ತದಾ ಸ್ಯಾದ್ದೈಕ್ಯೇ ವ್ಯಭಿಚಾರಿತಾ ॥ ೯೩೩ ॥

---

ಸಾಧಿಸುವುದೆಂಬುದು ಕಂಡಿಲ್ಲ (೯೨೯); ಹೀಗೆ ಯಾವ ಸಾಧನದಿಂದಲಾದರೂ ಯಾವ ಸಾಧ್ಯವನ್ನು ಸಾಧಿಸಬಹುದಾದರೆ, ಸಾಧನವು (ಹೀಗಿದ್ದಲ್ಲಿ) ಜಗತ್ಸತ್ಯತ್ವವು (ನನ್ನ ಸಾಧ್ಯವು) ಹೇಗೆ ಬಾಧ್ಯವಾಗುತ್ತದೆ? ಅದು ಅಸಿದ್ಧವಾಗುವುದಿಲ್ಲ; ಪರನು ಮಿಥ್ಯಾತ್ವವನ್ನು ಹೇಗೆ ಸಾಧಿಸುವನು? (ಶಕ್ಯವಿಲ್ಲ) (೯೩೦). ದೃಶ್ಯತ್ವವು ಸ್ವವೃತ್ತಿಯಿಂದ ವ್ಯಾಪ್ಯವೆಂದು ಹೇಳಲು ಬರುವುದಿಲ್ಲ; ಬ್ರಹ್ಮನಲ್ಲಿ ಅದರ ಸಂಬಂಧವನ್ನು ಹೇಳಿಯೂ ಇಲ್ಲವಾದ್ದರಿಂದ ಬ್ರಹ್ಮನಲ್ಲಿ ವ್ಯಭಿಚಾರವೇ ಸಿದ್ಧವಾಗುತ್ತದೆ (ಅಥವಾ ಜ್ಞಾನಗೋಚರತ್ವವು ನಿನ್ನಂತೆ ಬ್ರಹ್ಮನಲ್ಲಿಯೂ ಇರುತ್ತದೆ); ಚರಮಾವಸ್ಥೆಯಲ್ಲಿ ಚಿನ್ಮಾತ್ರಗೋಚರನು, ಬ್ರಹ್ಮನಷ್ಟೆ (೯೩೧). ಸಾಕ್ಷಿವೇದ್ಯವೆಂಬ (ಆತ್ಮನು ತಿಳಿಯುವನೆಂಬ) ಮಾತ್ರದಿಂದ ದೃಶ್ಯತ್ವ ಹೇತುವು ಸಿದ್ಧವಾಗುವುದಿಲ್ಲ ಅಜ್ಞಾನವೂ ಸಾಕ್ಷಿವೇದ್ಯವೇ ಆಗಿದೆ; ಶುಕ್ತಿರಜತವೂ ಸಾಕ್ಷಿವೇದ್ಯವು; ಹೀಗೆ ದೃಷ್ಟಾಂತದಿಂದ ಅನ್ಯತ್ರವೂ ಹೇತುವು ಇರುವುದೆಂದು ತಿಳಿಯಬಂದು, ಭಾಗಾಸಿದ್ಧಿಯೆಂಬ ಅನುಮಾನ ದೋಷವೂ ಈ ಯುಕ್ತಿಗೆ ತಗಲುತ್ತದೆ (೯೩೨); ಕಷ್ಟದಿಂದ ಯುಕ್ತಿಯನ್ನು ಗ್ರಹಿಸುವಂತೆ ಮಾಡಬಹುದಾದ್ದರಿಂದಲೂ ಶ್ರುತಿಯಿಂದಲೂ (ದೃಶ್ಯತ್ವ ಹೇತುವಿನಿಂದ) ಮಿಥ್ಯಾತ್ವವು ಸಾಧಿಸಲ್ಪಡಲು ಶಕ್ಯವಾದ್ದರಿಂದಲೂ, ಬುದ್ಧಿಯಿಂದ ಗ್ರಹಿಸಿದರೂ (ಬುದ್ಧಿ

*

ಅತ್ಯಂತಾಸತ್ಯಪಿ ಜ್ಞಾನಮರ್ಥೇ ಶಬ್ದಃ ಕರೋತಿ ಹಿ ।
ಇತ್ಯುಕ್ತೇಃ ಶಶಶೃಂಗಾದೌ ತ್ವದ್ರೀತ್ಯಾ ವ್ಯಭಿಚಾರಿತಾ ॥ ೯೩೪ ॥

ವೃತ್ತ್ಯಾಕಾರಾಕಾರಿತಾಯಾಂ ಹೇತ್ವಸಿದ್ಧಿಶ್ಚ ಮೇ ಭವೇತ್ ॥ ೯೩೫ ॥

ಕಿಂಚ ದೃಶ್ಯತ್ವಜಡತಾಪರಿಚ್ಛಿನ್ನತ್ವಪೂರ್ವಕೇ ।
ಧರ್ಮೇ ಸತ್ಯಪಿ ಶುಕ್ತಿಸ್ತೇನ ಮಿಥ್ಯಾ ಕೇನ ಹೇತುನಾ ॥ ೯೩೬ ॥

ತದ್ರೂಪ್ಯಸ್ಯೈವ ಮಿಥ್ಯಾತ್ವೇ ಬಾಧ ಏವ ಪ್ರಯೋಜಕಃ ।
ವಾಚ್ಯಸ್ತ್ವಯಾಪಿ ನ ತ್ವನ್ಯಃ ಸ ತು ನಾಸ್ತ್ಯೇವ ಮನ್ಯತೇ ॥ ೯೩೭ ॥

ನಿಷ್ಪ್ರಕಾರಕಧೀಪಕ್ಷೇ ಬಾಧಸ್ತು ಭವತೋಽಪಿ ನ ।
ನಾಸ್ತಿತ್ವಾಕಾರಬೋಧಂ ಯದ್ಬಾಧಮಾಹುರ್ವಿಪಶ್ಚಿತಃ ॥ ೯೩೮ ॥

---

ವ್ಯಾಪ್ತವಾದರೂ), ಐಕ್ಯಸಾಧನೆಯಲ್ಲಿ ವ್ಯಭಿಚರಿತವಾಗಿ ಅಸಮರ್ಥವಾಗುತ್ತದೆ (೯೩೩). ಅತ್ಯಂತ ಅಸತ್ತಿನ ವಿಷಯಕ್ಕೂ ಶಬ್ದವು ವಸ್ತುಜ್ಞಾನವನ್ನುಂಟುಮಾಡುತ್ತದೆಯಲ್ಲವೇ ? ಹೀಗೆಂದರೆ ಈ ನಿಯಮವು ಶಶವಿಷಾಣಾದಿ ವಸ್ತುವಿಷಯದಲ್ಲಿ ನಿಯಮವು ವ್ಯಭಿಚರಿತವಾಗುತ್ತದೆ ( ತಪ್ಪುತ್ತದೆ ) (೯೩೪); ಅತ್ಯಂತಾಸದ್ವಿಷಯ ಶಬ್ದವು, ವೃತ್ತಿಯಲ್ಲಿ (ಅಂತಃಕರಣದಲ್ಲಿ) ಯಾವುದೊಂದು ಆಕಾರವನ್ನು ಉತ್ಪಾದಿಸುತ್ತದೆಂದರೆ, ನನಗೆ ಹೇತುವಿನ ಅಸಿದ್ಧಿಯೇ ದೊರೆತಂತಾಗುತ್ತದೆ (೯೩೫). ಜಗತ್ತಿನಲ್ಲಿ ದೃಶ್ಯತ್ವ, ಜಡತ್ವ, ಪರಿಚ್ಛಿನ್ನತ್ವ ಮೊದಲಾದ ಧರ್ಮಗಳಿದ್ದರೂ, ಶುಕ್ತಿಯ ಮಿಥ್ಯಾತ್ವವು ಯಾವ ಹೇತುವಿನಿಂದ ಸಾಧಿಸಲಾಗುತ್ತದೆ? ದೃಶ್ಯತ್ವಾದಿಗಳಿಂದ ಜಗತ್ತಿನ ಮಿಥ್ಯಾತ್ವವು ಹೇಗೆ ಸಿದ್ಧಿಸುತ್ತದೆ? (೯೩೬). ರಜತದ ಮಿಥ್ಯಾತ್ವವನ್ನು ನಿರ್ಧರಿಸುವಲ್ಲಿ, ಬಾಧವೇ (ರಜತದ ಅಭಾವಜ್ಞಾನವೇ) ಪ್ರಯೋಜಕವೆಂದು ನೀನಾದರೂ ಹೇಳಲೇಬೇಕು–ಬೇರೆಯಲ್ಲ; ಅನ್ಯನಿಗೆ ಈ ಬಾಧಜ್ಞಾನವು (ಇಲ್ಲವೆಂಬ ಜ್ಞಾನವು ಇದ್ದೇ ಇರುತ್ತದೆ ಅಥವಾ ಅನ್ಯನಿಗೆ ಬಾಧಜ್ಞಾನವೇ ಇರುವುದಿಲ್ಲ) (೯೩೭). ರಜತದ ನಿಷ್ಪ್ರಕಾರಕ ಜ್ಞಾನವಿವಕ್ಷೆಯಿಂದ, ನಿನಗಾದರೂ ಬಾಧವೇ ಇಲ್ಲ; ವಿವೇಕಿಗಳು ಇಲ್ಲೆಂಬ ರೂಪದ ಜ್ಞಾನವನ್ನು ಬಾಧವೆಂದು ಹೇಳುತ್ತಾರೆ (ಆ ಜ್ಞಾನವು ನಿನಗೆಲ್ಲಿದೆ? ಬೆಳ್ಳಿಯಿಲ್ಲವೆಂಬ ವಸ್ತುಭಾವವು ಪ್ರಬಲ ಪ್ರತ್ಯಕ್ಷದಿಂದ ಸಿದ್ಧವಾಯಿತು, ಮಾತ್ರ, ಅಲ್ಲವೇ ?) (೯೩೮);

**ಬಾಧಬಾಧೇಪಿ ಬಾಧೇನ ತದಭಾವೇ ಸ ಏವ ಸನ್ ।**
**ಅತೋ ಮಿಥ್ಯಾತ್ವವಾದಸ್ತೇ ಯುಕ್ತೇರ್ಮಿಥ್ಯಾತ್ವಮಾನಯತ್ ॥**
**ಸತ್ಯತ್ವವಾದಿನಾಮೇವ ಸಹಾಯಮುಕೋರದಹೋ ।**
**ವಿಸ್ತರಸ್ತ್ವಸ್ಯ ಸರ್ವಸ್ಯ ಮೂಲಶಾಸ್ತ್ರೇ ಪ್ರದೃಶ್ಯತಾಂ ॥ ೯೪೦ ॥**

ಶ್ಲೋಕ ೮೯೭ರಲ್ಲಿ ಸಂಗ್ರಹಿಸಿ ಹೇಳಲಾದ, ನೈರ್ಗುಣ್ಯ ಮತ್ತು ಐಕ್ಯಗಳ ಅಭಾವವನ್ನು ಸ್ಪಷ್ಟಗೊಳಿಸುವ, ಭಾಗವತದಲ್ಲಿಯೇ ಪ್ರಯೋಗಿಸಲ್ಪಟ್ಟ, ಯುಕ್ತಿಗಳ ಸಂಗ್ರಹವನ್ನು ಈ ಮುಂದೆ ೯೪೦ನೇ ಶ್ಲೋಕದ ವರೆಗೆ, ನಿರೂಪಿಸ ಲಾಗುತ್ತದೆ:—

ತವಾಪಿ – ನಿನ್ನ ಮತದಂತೆ ಆದರೂ, ಕದಾಚಿತ್ – ಯಾವುದೊಂದು ಕಾಲದಲ್ಲಿ, ನಾಸ್ತಿತಾರೂಪಂ–ನಾಸ್ತಿತ್ವ (ಇಲ್ಲವೆಂಬ) ರೂಪವುಳ್ಳದ್ದು, ಮಿಥ್ಯಾತ್ವಂ– ಮಿಥ್ಯಾತ್ವವು, ನತು – ಅಲ್ಲವೇ ಅಲ್ಲ : ಲಯೇಷು – ಪ್ರಲಯಗಳಲ್ಲಿ ( ಪ್ರತಿ ಪ್ರಲಯದಲ್ಲಿ) ಅಭಾವ ಮಾತ್ರೇಣ–ವಿಶ್ವವು (ಜಗತ್ತು ನಷ್ಟವಾಗಿ) ಇಲ್ಲವೆಂದಮಾತ್ರ ದಿಂದ, ಸಾಧ್ಯಸಿದ್ಧಿಪ್ರಸಂಗತಃ–ಸಾಧ್ಯವಾದ ಮಿಥ್ಯಾತ್ವವು ಸಿದ್ಧವಾಯಿತೆಂದು ಹೇಳುವ ಪ್ರಸಂಗಬರುವುದರಿಂದ (ನ–ಅಲ್ಲಿ ಕದಾಚಿದಭಾವವು ಮಿಥ್ಯಾತ್ವವಲ್ಲ : (೮೯೮) : ತ್ರಿಕಾಲ ನಾಸ್ತಿತಾ ರೂಪಃ – ತ್ರಿಕಾಲದಲ್ಲಿಯೂ ಇಲ್ಲವೆಂಬುದು, ಅತ್ಯಂತಾಭಾವಃ ಉಚ್ಯತೇ – ಅತ್ಯಂತಾಭಾವವೆಂದು ಹೇಳಲ್ಪಡುತ್ತದೆ : ಭೂ– ಧಾತೋಃ–ಭೂ ಧಾತುವಿಗೆ, ಸತ್ತಾರ್ಥಕತ್ವಾತ್–ಇರುವುದೆಂಬ (ಅಸ್ತಿ ಎಂಬ) ಅರ್ಥವಿರುವುದರಿಂದ, ತತ್–ಅದು (ಅತ್ಯಂತಾಭಾವವೆಂಬುದು), ಅತ್ಯಂತಾಸತ್ತ್ವಂ ಏವ–ಅತ್ಯಂತ ಅಸತ್ತ್ವವೆಂದೇ ಅರ್ಥವು : (೮೯೯). ಸತ್ತ್ವಪ್ರತ್ಯಕ್ಷಬಲತಃ– ಸತ್ತ್ವವು (ಅಸ್ತಿತ್ವವು) ಪ್ರತ್ಯಕ್ಷ ವಿಷಯವಾದುದೆಂಬ ಬಲದಿಂದ, ಅಸತ್ತ್ವಂ– ಅಸತ್ತ್ವವನ್ನು, ಯದಿ ನಿವಾರ್ಯತೇ – ನಿವಾರಣಮಾಡಿಕೊಳ್ಳುವಿಯಾದರೆ, ಪ್ರಮಾರೂಪಂ – ಜ್ಞಾನರೂಪವಾದ, ತದಧ್ಯಕ್ಷಂ – ಉತ್ತಮವಾದ ಪ್ರತ್ಯಕ್ಷವು, ಬ್ರಹ್ಮಣಿ–ಬ್ರಹ್ಮನಲ್ಲಿ, ಉಭಯಂ–ಎರಡನ್ನೂ (ಪ್ರತ್ಯಕ್ಷವನ್ನು, ಅಸತ್ತ್ವವನ್ನೂ), ಕ್ಷಿಪೇತ್–ನಿರಾಕರಿಸುತ್ತದೆ (೯೦೦) : ಸತ್ತ್ವಾಭಾವಸ್ಯ ಏವ–ಸತ್ತ್ವವಿಲ್ಲದ

---

ಆದ್ದರಿಂದ ಬಾಧಜ್ಞಾನದ ಅಭಾವದಿಂದ, ಬಾಧವಿಲ್ಲದಂತಾಗಿ, ಮೊದಲಿನ ರಜತವೇ ಇರುವುದಾಯಿತು ; ಮಿಥ್ಯಾತ್ವವು ಸಿದ್ಧಿಸಲಿಲ್ಲ ; ಯುಕ್ತಿಯೇ ಮಿಥ್ಯೆ ಆಯಿತು (೯೩೯). ಇದರಿಂದ ಸತ್ಯತ್ವವಾದಿಗಳಿಗೇ (ಜಗತ್ತು ಸತ್ಯವೆಂದು ಸಾಧಿಸಲು)

(ಅಸ್ತಿತ್ವವಿಲ್ಲದ)ದುದಕ್ಕೆ, ಅತದ್ವತಿ–ಅದಿಲ್ಲದಿರುವಲ್ಲಿ, ತಸ್ಯಧೀಃ–ಅದರ ಜ್ಞಾನವು (ಅಸ್ತಿತ್ವದ ಜ್ಞಾನವು), ಯದಿ ಭ್ರಮರೂಪಂ ಭವೇತ್–ಭ್ರಮರೂಪವೆಂದು ತಿಳಿದರೆ, ತರ್ಹಿ–ಆಗ, ದ್ವಿರ್ಬದ್ಧಸ್ಯ–ಎರಡರ ಸಂಬಂಧವುಳ್ಳದ್ದಕ್ಕೆ(ಅರ್ಥೇಂದ್ರಿಯಗಳ ಉಭಯ ಸಂಬಂಧವುಳ್ಳದ್ದು), ಸುಬದ್ಧತಾ–ದೃಢವಾಗುತ್ತದೆ (ಬ್ರಹ್ಮನಿಗೆ ಭ್ರಮೆ ಯಾಗಲು ಕಾರಣವಿಲ್ಲ): (೯೦೧) ಯರ್ಹಿ (ಯದಿ)-ಒಂದು ಪಕ್ಷದಲ್ಲಿ, ಪ್ರತ್ಯಕ್ಷಂ ಚ–ಪ್ರತ್ಯಕ್ಷಜ್ಞಾನವೇ ಚಕ್ಷುರಾದೀಂದ್ರಿಯೈಃ–ಚಕ್ಷುರಾದಿ ಇಂದ್ರಿಯಗಳೆಂಬ, ಅಕ್ಷಸಂಯುಕ್ತಂ–ಇಂದ್ರಿಯಗಳ ಸಂಬಂಧವಾದುದೆಂದರೆ, (ಪ್ರತ್ಯಕ್ಷವು ಇಂದ್ರಿಯ ರೂಪದ ಚಕ್ಷುರಾದಿ ಇಂದ್ರಿಯಗಳಿಂದ ಉಂಟಾದುದೆಂದರೆ–ಅಕ್ಷಸಂಯುಕ್ತ ಚಕ್ಷು ರಾದೀಂದ್ರಿಯೈಃ, ಎಂಬ ಸಮಾಸಪದವಿದ್ದರೆ), ತರ್ಹಿ–ಆಗ, ಇಂದ್ರಿಯಾಣಾಂ– ಇಂದ್ರಿಯಗಳ, ಅರ್ಥಾನಾಂ–ವಸ್ತುಗಳ, ಸಂಯೋಗಃ–ಸಂಬಂಧವು, ಪುರಾ– ಮೊದಲಿಗೆ, ಉತ್ಪತ್ತಯೇ–ಜ್ಞಾನೋತ್ಪತ್ತಿಗೆ, ಸತ್ತಾಪಿ–ಇರಬೇಕೆಂದೂ, ವಾಚ್ಯಾ–ಹೇಳಬೇಕಾಗುತ್ತದೆ; ತೇ ಅನುಮಾ ಏವ–ನಿನ್ನ ಅನುಮಾನವೇ ಶೋಚ್ಯಾ ಅಭೂತ್–ಶೋಕಾರ್ಹವಾಯಿತು: ಹಂತ–ನೀನು (ಪರನು) ಶೋಕಾರ್ಹನು (ಕೃಪೆಯಿಂದ ದುಃಖ ವಿಷಯನಾಗುವಿ): (೯೦೨): ಅತೋ– ಆದ್ದರಿಂದ, ಸತ್ತ್ವನಿರಾಸಾ ಯಾ ನೀತಪ್ರತ್ಯಕ್ಷ ಶಕ್ತಿತಃ–ಅಸ್ತಿತ್ವನಿರಾಕರಣೆಯು, ನಿಯಮೇನ ಸತ್ಯಜ್ಞಾನವನ್ನುಂಟುಮಾಡುವ ಪ್ರತ್ಯಕ್ಷದ ಶಕ್ತಿಯಿಂದಲೂ, ನಾಸ್ತಿತಾರೂಪಮಿಥ್ಯಾತ್ವಸ್ಯ–ಅಸತ್ತ್ವರೂಪದ ಮಿಥ್ಯಾತ್ವದ, ಬಾಧನಾತ್ ಅಪಿ– ಬಾಧಿತವಾಗುವುದರಿಂದಲೂ (೯೦೩); ಅಂಬುನಾ–ಜಲದಿಂದ, ಕರ್ಣಲಗ್ನ ಪ್ರಾಚೀನಾಂಬು ನಿವೃತ್ತಿಮತ್–ಹಿಂದೆ ಕಿವಿಯಲ್ಲಿ ನಿಂತಿದ್ದ ಜಲದ ನಿವೃತ್ತಿ ಯಾದಂತೆ, ತವ–ನಿನ್ನ, ಅನುಮಾ–ಅನುಮಾನವು, ಬಾಧಿತಾ ಏವ ಸ್ಯಾತ್– ಬಾಧಿತವೇ ಆಯಿತು; (ತವ) ತಸ್ಕರಃ–ಕಳ್ಳತನವು, ಸಾರ್ಥಃ–ಫಲವುಳ್ಳದ್ದು, ನ ಅಭೂತ್–ಆಗಲಿಲ್ಲವು (೯೦೪); ಅಸನ್ನಿಕೃಷ್ಟಾಕ್ಷಜಂ–ಇಂದ್ರಿಯಸಂಯೋಗ ವಿಲ್ಲದ ಇಂದ್ರಿಯಜನ್ಯ ಜ್ಞಾನವು, ಅಸತ್ತ್ವಸ್ಯ ಏವ–ಅಸತ್ತಿನ ಜ್ಞಾನಕ್ಕೇ, ಸಾಧಕಂ–ಸಾಧಕವಾಗುತ್ತದೆ (ವಸ್ತು–ಅರ್ಥಜ್ಞಾನಕ್ಕಲ್ಲ); ನೃಶಿರಃಸಂಗಿಯತ್ ಚಕ್ಷುಃ–ನರವಿಷಾಣದವನ್ನು ನೋಡುವ ಚಕ್ಷುರಿಂದ್ರಿಯವು, ತಚ್ಛೃಂಗೇಣ– ಆ ಕೋಡಿನಿಂದ, ಸಂಗವತ್–ಸಂಗವುಳ್ಳದ್ದೆ (ಸಂಬಂಧವುಳ್ಳದ್ದು), ನ–ಅಲ್ಲ; (ಅಸತ್ತಿಗೂ ಇಂದ್ರಿಯಕ್ಕೂ ಸಂಬಂಧವಿರುವುದೇ ಇಲ್ಲ); (೯೦೫) ಏವಂಚ–

ಹೀಗೆಯೇ, ಅಸನ್ನಿಕೃಷ್ಟಾಕ್ಷ್ಣಾ–ಸಂಬಂಧವಿಲ್ಲದ ಚಕ್ಷುರಿಂದ್ರಿಯದಿಂದ, ಶುಕ್ತಿರೂಪ್ಯನಿರೀಕ್ಷಣಂ–ಶುಕ್ತಿರಜತದ (ಪ್ರಾತಿಭಾಸಿಕ ಸತ್ಯತ್ವವುಳ್ಳದ್ದೆಂಬ) ನಿರೀಕ್ಷಣವೂ (ಕಾಣುವಿಕೆಯೂ), ಅಸತ್ತಾಂ–ಅಸತ್ತನ್ನೇ (ಇಲ್ಲದುದನ್ನೇ), ಗಮಯೇತ್–ತಿಳಿಸುತ್ತದೆ; ತಸ್ಯ–ಅದಕ್ಕೆ, ಅಸತ್ತಃ–ಅಸತ್ತಿನಿಂದ, ವಿಭಿನ್ನತಾಂ–ಭೇದವು (ವ್ಯತ್ಯಾಸವು), ನತು–ಇಲ್ಲವೇ ಇಲ್ಲ; ಅರ್ಥಾಪತ್ತ್ಯಾಪಿ–ಅರ್ಥಾಪತ್ತಿಯಿಂದಲೂ (ಜೀವನಿಗೆ ರಜತಜ್ಞಾನವು ಅನ್ಯಥಾ ಉಂಟಾಗಲಾರದೆಂಬ ಯುಕ್ತಿಯೂ), ಅನರ್ಥಃ ಅಭೂತ್–ವ್ಯರ್ಥವೇ ಆಯಿತು; ತತ್–(ಈ ಯುಕ್ತಿಯು), ಪರಸ್ಯ–ಪರನಿಗೆ (ಮಾಯಾವಾದಿಗೆ), ನತು ಅರ್ಥಃ ಅಭೂತ್ – ಪ್ರಯೋಜನಕಾರಿಯಾಗಲಿಲ್ಲ; (೯೦೬); ವ್ಯಾವಹಾರಿಕ ಸತ್ತಾ ಚ – ವ್ಯಾವಹಾರಿಕಾಸತ್ತೆಯೆಂಬುದು, ಭ್ರಾಂತಾ–ಭ್ರಮೆಯೋ, ಅಭ್ರಾಂತಾ–ಅಭ್ರಮವೋ, ವಿಕಲ್ಪನೇ–(ಎಂದು) ವಿವೇಕಿಸಿದರೆ, ಅಸತ್ತ್ವಸಾಧಿಕಾ ವಾ–ಅಸತ್ತ್ವವನ್ನೇ ಸಾಧಿಸುವುದು, ಸ್ಯಾತ್ – ಆಗುತ್ತದೆ; ವಾ – ಅಥವಾ, ಮಿಥ್ಯಾತ್ವಬಾಧಿಕಾ – ಮಿಥ್ಯಾತ್ವವನ್ನು ಬಾಧಿಸುವುದೂ (ಸ್ಯಾತ್–ಆಗುತ್ತದೆ–ವ್ಯಾವಹಾರಿಕ ಸತ್ಯತ್ವವೆಂಬುದು ಭ್ರಮೆಯೆಂದರೆ ಅಸತ್ತ್ವವನ್ನೇ ಸಾಧಿಸುತ್ತದೆ; ಭ್ರಮೆಯಿಲ್ಲವೆಂದರೆ, ಮಿಥ್ಯೆಯಲ್ಲವೆಂದೇ ಸಾಧಿಸುತ್ತದೆ); (೯೦೭), ತೇ–ನಿನ್ನಂತೆ, ಸದ್ವಿವಿಕ್ತತ್ವಂ–ಸತ್ಯಭಿನ್ನವೆಂಬವಾದವು, ಯತ್–ಯಾವ ಕಾರಣದಿಂದ, ಸತ್ತ್ವಾನಾಧಾರತಾ ಏವ–ಸತ್ಯತ್ವದ ಆಧಾರವಲ್ಲವಾದ್ದರಿಂದಲೇ, (ಆಗುವುದೋ) ಅತಃ–ಈ ಕಾರಣದಿಂದ, ತಸ್ಯಾಪಿ–ಅದಕ್ಕೂ, ಸಾಧ್ಯತ್ವೇ–ಸಾಧ್ಯತ್ವವಿದ್ದರೆ (ಸದ್ಭಿನ್ನವೆಂಬುದೇ ಸಾಧ್ಯವೆಂದರೂ), ಜಗತ್ – ಜಗತ್ತು, ನೃಶೃಂಗೋಪಮಂ – ನರವಿಷಾಣಸದೃಶವೇ, ಸ್ಯಾತ್ – ಆಗುತ್ತದೆ; (೯೦೮); ಅತಃ–ಆದ್ದರಿಂದ, ಅಸ್ಮಿನ್ ಮಿಥ್ಯಾತ್ವವಾದೇ–ಈ ಜಗನ್ಮಿಥ್ಯಾತ್ವವಾದದಲ್ಲಿ, ಬ್ರಹ್ಮಾನ್ಯತ್ಸಕಲಂ ಜಗತ್–ಬ್ರಹ್ಮಭಿನ್ನವಾದ ಸರ್ವಜಗತ್ತು, ಅಸತ್ ಏವ ಅಭವತ್–ಅಸತ್ತೇ ಆಯಿತು, ತೇನ–ಈ ಕಾರಣದಿಂದ, ಮಾನೇ–ಇದು ಪ್ರಮಾಣವೆಂದಲ್ಲಿ, ದೂಷಣಂ ಬಹು ಸ್ಯಾತ್–ಬಹುದೋಷವುಳ್ಳದ್ದಾಗುತ್ತದೆ; (೯೦೯); ಸಾಧ್ಯಬಾಧಾಶ್ರಯಾಸಿದ್ಧೀ–ಸಾಧ್ಯದಬಾಧವೂ, ಆಶ್ರಯಾಸಿದ್ಧಿಯೂ, ಸ್ವರೂಪಾಸಿದ್ಧಿಃ ಏವಚ–ಸ್ವರೂಪಾಸಿದ್ಧಿಯೂ,[1] ವ್ಯಾಪ್ಯತ್ವಾ

---

[1] ವಿವಿಧ, ನೈಯ್ಯಾಯಿಕ, ಪ್ರಾಭಾಕರ, ಭಾಟ್ಟ ಮೊದಲಾದ ದರ್ಶನಕಾರರು ಅನುಮಾನದೋಷಗಳನ್ನು ಬಹುಪ್ರಕಾರವಾಗಿ ವಿಭಾಗಿಸಿ, ತಾರ್ಕಿಕರು ೨೩ ದೋಷಗಳೇ ಆದಿ

ಯಾಗಿ ವಿವಿಧವಾಗಿ ಹೇಳುತ್ತಾರೆ ; ಆದರೆ, ಆ ಎಲ್ಲವೂ ಮುಖ್ಯವಾದ ೬ ದೋಷಗಳಲ್ಲಿ ಅಡಕವಾಗುತ್ತವೆಂದು ತತ್ವವಾದಿಗಳು ನಿಶ್ಚಯಿಸಿರುವರು ; (೧) ವಿರೋಧ, (೨) ಅಸಂಗತಿ, (೩) ನ್ಯೂನತೆ, (೪) ಆಧಿಕ್ಯ (೫) ಸಂವಾದ ಮತ್ತು (೬) ಅನುಕ್ತಿಗಳೆಂಬುವೇ ಅವು ; ನ್ಯೂನತೆ ಆಧಿಕ್ಯಗಳು ಕೇವಲ ವಾಚನಿಕ ದೋಷಗಳೆಂದೂ, ಸಂವಾದ–ಅನುಕ್ತಿಗಳು ಪರಾಜಯವನ್ನು ನಿಶ್ಚಯಿಸುವ, ವಕ್ತೃಗತ ದೋಷಗಳೆಂದೂ ತಿಳಿಯಬರುತ್ತವೆ ; ಅನುಮಾನಗಳಿಗೆ ನೇರವಾಗಿ ಸಂಬಂಧಪಡುವವುಗಳೆಂದರೆ, ವಿರೋಧ ಅಸಂಗತಿಗಳು ಮಾತ್ರವೇ (ಸಂವಾದವು, ವಿವಾದದ ವಿಷಯವಾದ ಪ್ರಮೇಯವನ್ನು ಪರನು ಹೇಳಿದಂತೆ ಒಪ್ಪಿಕೊಳ್ಳುವುದೇ ಆಗಿದೆ) ; ಈ ವಿರೋಧ ಮತ್ತು ಅಸಂಗತಿಗಳಲ್ಲಿ ಪರರು ನಿರೂಪಿಸುವ ಅನುಮಾನ ದೋಷಗಳೆಲ್ಲವೂ ಅಡಕವಾಗುತ್ತವೆ ; (i) ಪ್ರತಿಜ್ಞಾ ವಿರೋಧ, ಹೇತುವಿರೋಧ ಮತ್ತು ದೃಷ್ಟಾಂತವಿರೋಧವೆಂದು ವಿರೋಧವು ಮೂರು ವಿಧ, ಪ್ರಮಾಣ ವಿರೋಧ ಮತ್ತು ಸ್ವವಚನ ವಿರೋಧವೆಂದು ಪ್ರತಿಜ್ಞಾ ವಿರೋಧವೂ ಎರಡು ಪ್ರಕಾರ—ಇದರಲ್ಲಿ ಸಮಬಲ ಪ್ರಮಾಣ ವಿರೋಧ, ಪ್ರಬಲ ಪ್ರಮಾಣ ವಿರೋಧಗಳೇ ಮುಂತಾದ ಅವಾಂತರ ಪ್ರಭೇದಗಳೂ ಇವೆ ;

(ii) ಹೇತು ವಿರೋಧವೆಂಬುದು, ಸ್ವರೂಪಾಸಿದ್ಧಿ ಮತ್ತು ಅವ್ಯಾಪ್ತಿ ಎಂದು ಎರಡು ವಿಧ ; 'ಶಬ್ದವು ಅನಿತ್ಯ—ಹಾಗೆ ಕಾಣುವುದರಿಂದ' ಎಂಬ ಅನುಮಾನವು, ಶಬ್ದವು ಚಕ್ಷುರಿಂದ್ರಿಯಕ್ಕೆ ವಿಷಯವಲ್ಲದ್ದರಿಂದ ಸ್ವರೂಪಾಸಿದ್ಧಿಗೆ ದೃಷ್ಟಾಂತವಾಗುತ್ತದೆ , ಅವ್ಯಾಪ್ತಿ ಎಂಬುದು; (೧) ಹೇತುವು ಸಾಧ್ಯ ಮತ್ತು ಸಾಧ್ಯಾಭಾವಗಳಲ್ಲಿರುವುದು, ಶಬ್ದವು ಪ್ರಮಾಣ ಗೋಚರವಾದ್ದರಿಂದ, ಎಂದು ಹೇತುವನ್ನು, (ಅದೇ ಅನುಮಾನ ಹೇಳಿದರೆ, ಪ್ರಮಾಣ ಗೋಚರತ್ವವು, ನಿತ್ಯ, ಅನಿತ್ಯವಸ್ತುವಿನಲ್ಲಿಯೂ, ನಿತ್ಯ ವಸ್ತುವಿನಲ್ಲಿಯೂ ಇರಬಹುದಾದ್ದರಿಂದ, ಸಾಧ್ಯ ಮತ್ತು ಸಾಧ್ಯಾಭಾವಗಳಲ್ಲಿ ಸಹ ಇರಬಹುದೆಂಬ ಅವ್ಯಾಪ್ತಿದೋಷವು ; ಅನಿತ್ಯದಲ್ಲಿ ಮಾತ್ರವಿರುವಿಕೆ, ಎಂಬ ವ್ಯಾಪ್ತಿಗೆ ಭಂಗಬರುತ್ತದೆ ; (೨) ಸಾಧ್ಯದಲ್ಲಿರದೇ ಹೇತುವು ಅದರ ಅಭಾವದಲ್ಲಿ ಮಾತ್ರವಿರುವುದೂ, ಸಹ ಅವ್ಯಾಪ್ತಿದೋಷವು : 'ಶಬ್ದವು ನಿತ್ಯ, ಹುಟ್ಟಿದ್ದಾದ್ದರಿಂದ' ಎಂದರೆ ಈ ಅವ್ಯಾಪ್ತಿ ದೋಷ ಬರುವುದು ; ಹುಟ್ಟುವುದು ಅನಿತ್ಯವಸ್ತುವಿಗೆ ಮಾತ್ರ ಸಲ್ಲುತ್ತದೆ ; (೩) ಸಾಧ್ಯ ಮತ್ತು ಸಾಧ್ಯಾಭಾವದಲ್ಲಿ ಸಹ ಹೇತುವಿಲ್ಲದಿರುವುದು ; 'ಎಲ್ಲವೂ ಅನಿತ್ಯ—ಇರುವುದರಿಂದ' ಎಂಬಲ್ಲಿ ಎಲ್ಲವೂ ಪಕ್ಷವೇ ಆಗುತ್ತದೆ—ವ್ಯಾಪ್ತಿಜ್ಞಾನಕ್ಕೆ ಅವಕಾಶವೇ ಇಲ್ಲ ; ಇರುವಿಕೆ (ಅಸ್ತಿತ್ವ) ಎಂಬ ಹೇತು ಇದ್ದಲ್ಲಿ ಮಾತ್ರ ಅನಿತ್ಯತ್ವವೆಂಬ ಸಾಧ್ಯವಿರುತ್ತದೆಂಬ ವ್ಯಾಪ್ತಿಜ್ಞಾನಕ್ಕೆ ಎಲ್ಲಿ ಅವಕಾಶವಿದೆ ? ಹೇತ್ವಾಭಾಸಗಳೆಂದು ಅನ್ಯರು ಕರೆಯುವ, ಅನೇಕಾಂತ, ಸಪ್ರತಿಪಕ್ಷ; ಅಸಿದ್ಧಿ, ಬಾಧಗಳೂ ಸಹ ಈ ಭಾಗದ ದೋಷದಲ್ಲಿಯೇ ಅಡಕವಾಗುತ್ತವೆ ;

(iii) ದೃಷ್ಟಾಂತ ವಿರೋಧವೆಂಬುದು, ಸಾಧ್ಯವೈಕಲ್ಯ ಮತ್ತು ಸಾಧನವೈಕಲ್ಯವೆಂದು ಎರಡು ವಿಧ : ಪರನ ಅನುಮಾನವನ್ನು ದೋಷ ಯುಕ್ತವೆಂದು ತೋರಿಸಲು ಮಾಡ

ಬಹುದಾದ ಆಪಾದನೆಗಳು ನಾನಾ ವಿಧವಾಗಿವೆ ; ಅವುಗಳಲ್ಲಿ ಮುಖ್ಯವಾದವು, ಆತ್ಮಾಶ್ರಯ, ಅನ್ಯೋನ್ಯಾಶ್ರಯ, ಚಕ್ರಕಾಶ್ರಯ, ಅನವಸ್ಥಾ, ಕಲ್ಪನಾ ಗೌರವ, ಶ್ರುತಹಾನ, ದೃಷ್ಟ ಹಾನಗಳೆಂಬುವು ; ಇವು ಸಹ ಅನುಮಾನ ದೋಷಗಳಲ್ಲಿಯೇ ಸೇರುತ್ತವೆ ; ಪಟದಿಂದ ಹುಟ್ಟಿತ್ತದೆಂದು ಹೇಳಿದರೆ ಆತ್ಮಾಶ್ರಯ ; ಅನ್ವಯ—ವ್ಯತಿರೇಕಗಳೆರಡು ರೂಪದಿಂದ ಆಪಾದಿಸಲು ಬರುತ್ತದೆ ; ಅನ್ಯೋನ್ಯಾಶ್ರಯವೆಂದರೆ, ಎರಡು ಪದಾರ್ಥಗಳಲ್ಲಿ ಒಂದ ಕ್ಕೊಂದು ಕಾರಣವೆಂದು ಹೇಳಿದರೆ, ಈ ದೋಷಕ್ಕೆ ಅವಕಾಶವಾಗುತ್ತದೆ ; ಚಕ್ರಕಾಶ್ರಯ ವೆಂದರೆ, ಬಹುವಸ್ತುಗಳಲ್ಲಿ ಒಂದಕ್ಕೆ ಮತ್ತೊಂದು ಕಾರಣವೆಂದು ಹೇಳುತ್ತ ಬಂದು ಕೊನೆಗೆ ಮೊದಲಿನದು ಕಾರಣವೆಂದು ಹೇಳುವುದು ; ಅನವಸ್ಥಾ ಎಂದರೆ, ಇದಕ್ಕೆ ಎರಡನೆಯದು ಕಾರಣ, ಅದಕ್ಕೆ ಮೂರನೆಯದು ಎಂದು ಹೇಳಿ, ಎಷ್ಟು ಕಲ್ಪಿಸುತ್ತ ಹೋದರೂ ಪ್ರಮಾಣ ಸಿದ್ಧವಾದ ಮೂಲಕಾರಣವು ಲಭಿಸದಿರುವುದು ; ಶ್ರುತಹಾನವೆಂದರೆ ವೇದಸಿದ್ಧ ಪ್ರಮೇಯ ವನ್ನು ಕೈಬಿಟ್ಟು ವಾದಿಸುವುದು ; ದೃಷ್ಟಹಾನ ಎಂಬುದು, ಪ್ರತ್ಯಕ್ಷದಲ್ಲಿ ಹೊಗೆಯನ್ನು ಒಪ್ಪಿ, ಅಗ್ನಿಯಿಲ್ಲವೆನ್ನುವುದು, ಬೆಂಕಿ ಇಲ್ಲದಿದ್ದರೆ ಹೊಗೆಯೂ ಇಲ್ಲದೇ ಹೋಗಲಿ ಎಂಬ ಆರೋಪಕ್ಕೆ ಒಳಗಾಗುತ್ತದೆ ; ಕಲ್ಪನಾಗೌರವವೆಂದರೆ ; ಪ್ರತ್ಯಕ್ಷ ಸಿದ್ಧವಲ್ಲದ್ದನ್ನು ಕಲ್ಪಿಸು ವುದು ಅದೃಷ್ಟ ಕಲ್ಪನೆಯು ; ವೇದೋಕ್ತವಲ್ಲದುದನ್ನು ಕಲ್ಪಿಸುವುದು ಅಶ್ರುತಕಲ್ಪನೆಯು ; ಅಶ್ರುತ, ಅದೃಷ್ಟಕಲ್ಪನೆಗಳು ಅನೇಕವಾದರೆ ಕಲ್ಪನಾಗೌರವವೆಂಬ ದೋಷಕ್ಕೆ ಅವಕಾಶ ವಾಗುತ್ತದೆ ; ಉದಾಹರಣೆ: ಮೊಲದ ಕೋಡಿನಲ್ಲಿ ಬಂಜೆಯ ಮಗನಾದ ಕುರುಡನು ಹಗಲಿನಲ್ಲಿ ನಕ್ಷತ್ರಗಳನ್ನು ಗಣನೆಮಾಡುತ್ತಾನೆ !

ಏವಂಚ ಸ್ವಪಕ್ಷಸಾಧಕ – ಪರಪಕ್ಷದೂಷಣಾನುಮಾನಗಳೆಂದು ಅನುಮಾನಗಳು ದ್ವಿವಿಧವು ; ಇತ್ಯಾದಿ ನಿಗ್ರಹಸ್ಥಾನಗಳೆಲ್ಲವೂ ಅಸಿದ್ಧಿಯಲ್ಲಿಯೂ, ಅಸಿದ್ಧಿ ಮೊದಲಾದವೂ ಸಹ ವಿರೋಧ ಅಸಂಗತಿಗಳಲ್ಲಿ ಸೇರುತ್ತವೆ ;

ಅಸಂಗತಿ ಎಂಬುದು, ವಾದಿಯು ಹೇಳುವ ವಾಕ್ಯಕ್ಕೆ ಅವನಿಗೆ ಸಮ್ಮತವಲ್ಲದ ಅರ್ಥ ವನ್ನು ತೋರಿಸಿ, ಅವನ ಉದ್ದೇಶವನ್ನು ಭಂಗಗೊಳಿಸುವುದು ; ಇದನ್ನು 'ಛಲ'ವೆಂದೂ ಕರೆಯುವರು ; ಉದಾಹರಣೆ—ಗಾಮಾನಯ, ಗೋಶಬ್ದಕ್ಕೆ ಹಸು ಮತ್ತು ಭೂಮಿ ಎಂಬ ಉಭಯಾರ್ಥಗಳಿವೆ; ಗೋ ತರುವುದು ಅವಶ್ಯಕವೆಂದು ತೋರಿಸುವುದು 'ವಾಕ್ ಛಲ'ವೂ ಆಗುತ್ತದೆ ; ನ್ಯೂನತೆ, ಆಧಿಕ್ಯ, ಸಂವಾದ, ಅನುಕ್ತಿಗಳೂ ಅಸಂಗತಿಯಲ್ಲಿಯೇ ಅಂತರ್ಭಾವ ಗೊಳ್ಳುತ್ತವೆ ; ಅನುಮಾನ ದೋಷಗಳನ್ನು ಗ್ರಹಿಸುವುದಕ್ಕೆ ತರ್ಕಶಾಸ್ತ್ರದಲ್ಲಿ ತುಂಬಾ ಗತಿ ಇರಬೇಕಾಗುತ್ತದೆ ; ಈ ವಿವರಗಳನ್ನು ಗುರುಮುಖೇನ ಅಭ್ಯಾಸಮಾಡಿ ತಿಳಿದುಕೊಳ್ಳ ಬೇಕು ; ಆದರೂ ಸಂಕ್ಷೇಪದಿಂದ, ಸಂಗ್ರಹಿಸಿ, ಅನುಮಾನ ದೋಷಗಳನ್ನು ನಿರೂಪಿಸುವ ಪಾರಿಭಾಷಿಕ ಶಬ್ದಗಳ ಭಾವವನ್ನು ಗ್ರಹಿಸಲು ಮಾತ್ರ ಅವಶ್ಯಕವಾದುದನ್ನು ಇಲ್ಲಿ ನಿರೂಪಿಸ ಲಾಗಿದೆ ; ಓದುಗರಿಗೆ ಸಹಾಯವಾಗಬಹುದೆಂದು ನಂಬಿದ್ದೇನೆ.

ಸಿದ್ಧತಾ ಚ–ವ್ಯಾಪ್ಯತ್ವದ ಅಸಿದ್ಧಿಯೂ, ಸ್ಯಾತ್–ಬರುತ್ತದೆ; ದೃಷ್ಟಾಂತಾಸಿದ್ಧಿಃ ಏವ ಚ–ಯಾವ ದೃಷ್ಟಾಂತವೂ (ಅನುಮಾನಕ್ಕೆ) ದೊರೆಯುವುದೇ ಇಲ್ಲ; (೯೧೦); ಮಾನಾನುಗಸ್ಯ–ಪ್ರಮಾಣವನ್ನು ಅನುಸರಿಸುವೆನೆಂಬ, ತೇ–ನಿನಗೆ, ಮಾನಃ ಅಪಿ–ಪ್ರಮಾಣವೂ, ಅಪಸಿದ್ಧಾಂತ ದೋಷತಃ–ಅಪಸಿದ್ಧಾಂತವೆಂಬ ದೋಷದಿಂದ,[1] ಭಗ್ನಃ ಸ್ಯಾತ್–ಮುರಿದುಬೀಳುತ್ತದೆ (ನಿನ್ನ ಅಭೀಷ್ಟಸಾಧಕವಾಗುವುದಿಲ್ಲ); ಧರ್ಮಿಣಾಂ–ವಸ್ತುಗಳ, ಸತ್ತ್ವಮಾತ್ರಸ್ಯ–ಸತ್ತ್ವಮಾತ್ರದ, ಬಾಧೇ–ನಿಷೇಧವಾಗುತ್ತಿರಲು, ತಸ್ಯ–ಅದರ, ಸ್ವಸ್ವರೂಪೇಣ–ಸ್ವರೂಪದಿಂದ (ವಸ್ತುಗಳು ತಮ್ಮ ತಮ್ಮ ಸ್ವರೂಪದಿಂದ), ಅಬಾಧೇ–ನಿಷೇಧಿಸಲ್ಪಡದಿದ್ದಲ್ಲಿ, ಸದದ್ವೈತಮತಕ್ಷತಿಃ–ಸತ್ಯವೊಂದೇ (ಬ್ರಹ್ಮಮಾತ್ರಸತ್ಯವು) ಎಂಬ ಅದ್ವೈತದ ನಷ್ಟವು (ಭಂಗವು) (ಉಂಟಾಗುತ್ತದೆ) (೯೧೧); ಯಥಾ–ಹೇಗೆ ಅಬಾಧ್ಯಬ್ರಹ್ಮರೂಪಂ–ಬಾಧವಿಲ್ಲದ (ನಿಷೇಧಕ್ಕೆ ಅವಕಾಶವಿಲ್ಲದ) ಬ್ರಹ್ಮಸ್ವರೂಪವೋ, ಸತ್–ಸದ್ವಸ್ತುವು, ಏಕಂ–ಒಂದೇ, ಅಭವತ್–ಆಯಿತೋ, ತಥಾ–ಹಾಗೆಯೇ, ಜಡಾಬಾಧ್ಯಜಗದ್ರೂಪಂ ಅಪಿ–ಜಡವಾದ ಜಗತ್ತಿನ ಸ್ವರೂಪವೂ, ಯಸ್ಮಾತ್–ಯಾವ ಕಾರಣದಿಂದ, ಸತ್–ಸತ್ಯವಾದುದು, ಅಭೂತ್–ಆಯಿತೋ (ಆಗುವುದೋ); (೯೧೨); ಸ್ವರೂಪಸ್ಯ ಅಪಿ ಬಾಧೇತು–ಸ್ವರೂಪವೇ ಬಾಧ್ಯವೆಂದರೆ, ಪ್ರಾಗುಕ್ತಂ–ಹಿಂದೆ ಹೇಳಿದ, ದೂಷಣಂ ಭವೇತ್–ದೋಷವೇ ಉಂಟಾಗುತ್ತದೆ; ಏವಂ ಚ–ಹೀಗೆ, ಉಭಯತಃ–ಎರಡೂ ಕಡೆಯಿಂದ, ಪಾಶಾರಜ್ಜುಃ–ಬಿಗಿಯುವ ಹಗ್ಗವು, ತೇ ಗಲಂ–ನಿನ್ನ ಕಂಠವನ್ನು, ಬಧ್ನಾತಿ–ಬಿಗಿಯುತ್ತದೆ; (೯೧೩); ತ್ವಂ–ನೀನು (ಮಾಯಾವಾದಿಯು), ಸದಸದ್ಭ್ಯಾಂ–ಸದಸತ್ತುಗಳಿಂದ, ಅನ್ಯತ್–ಬೇರೆಯದನ್ನಾಗಿ, ಯದಿ–ಒಂದು ಪಕ್ಷ, ಮಿಥ್ಯಾತ್ವಂ–ಮಿಥ್ಯಾತ್ವವನ್ನು, ಈರ್ಯತೇ–ಹೇಳುವುದಾದರೆ, ತದಾ–ಆಗ, ಸಾಧ್ಯಂ–ಸಾಧ್ಯವಾದುದು ಸದಸದ್ವಿಲಕ್ಷಣವೆಂಬುದು), ಅಪ್ರಸಿದ್ಧಂ–ಅಪ್ರಸಿದ್ಧವಾದ (ಎಲ್ಲಿಯೂ ಇರದ ವಸ್ತುವಾಗಿ), ಭವೇತ್–ಆಗುತ್ತದೆ; ಪ್ರತಿವಾದಿನಂ–ಪ್ರತಿವಾದಿಯನ್ನು (ಪರನನ್ನು) ಉದ್ದೇಶಿಸಿ, ಹಿ–ಹೇಳಲು ಬರುತ್ತದೆಂಬುದು ಸ್ಪಷ್ಟವಿದೆ; (೯೧೪); ದೃಷ್ಟಾಂತೇ–(ಪರನು)

---

[1] ಪರನು, ತಾನು ಸಾಧಿಸಲು ಹೊರಟ ಮತದ ಪೂರ್ವಾಚಾರ್ಯರು ಒಪ್ಪಿರುವ ಅಭಿಪ್ರಾಯದ ವಿರುದ್ಧವಾದುದನ್ನು ಒಪ್ಪಿದರೆ, ಅದು 'ಅಪಸಿದ್ಧಾಂತವು'. ಇದೂ ವಿರೋಧವೆಂಬ ಅನುಮಾನದೋಷದ ಪ್ರಭೇದವೇ ಆಗಿದೆ.

ಹೇಳುವ ಯಾವ ದೃಷ್ಟಾಂತದಲ್ಲಿಯೂ, ಸಾಧ್ಯವೈಕಲ್ಯಶಲ್ಯಂ–ಸಾಧ್ಯರಾಹಿತ್ಯವೆಂಬ ಶಲ್ಯರೂಪದ ದೋಷವು, ತವ–ನಿನಗೆ (ಪರನಿಗೆ) ಭವೇತ್ ಏವ–ತಪ್ಪದೇ ಬರುತ್ತದೆ; ಸತ್ತ್ವಭ್ರಾಂತಿಃ–ಸತ್ತ್ವದ ಭ್ರಮೆಯು, ಸನ್ನಿಕರ್ಷಶೂನ್ಯಪ್ರತ್ಯಕ್ಷಂ ಏವ ಚ–ಇಂದ್ರಿಯ ಸನ್ನಿಕರ್ಷವಿಲ್ಲದ ಪ್ರತ್ಯಕ್ಷವೇ (ಕಾರಣವೆಂದು) ಸಿದ್ಧವಾಗುತ್ತದೆ (೯೧೫); ಉಕ್ತವಿಧಯಾ–ಹಿಂದೆ ಹೇಳಿದ ರೀತಿಯಿಂದ, ಅಸತ್ತ್ವಂ–ಅಸತ್ತ್ವವನ್ನೇ, ಸ್ಥಿರಯೇತ್–ದೃಢಪಡಿಸುತ್ತದೆ; ನ ನಿವಾರಯೇತ್–(ಅಸತ್ತ್ವವನ್ನು) ಪರಿಹರಿಸುವುದಿಲ್ಲ; ಅತಃ–ಆದ್ದರಿಂದ, ಏತತ್–ಈ ನಿದರ್ಶನಂ–ದೃಷ್ಟಾಂತವು, ಪ್ರಸಾಧ್ಯಕಾಂಗಂ – ಸಾಧ್ಯವನ್ನು ಸಿದ್ಧಿಸುವ ಸಹಾಯಕವು, ನ ಆಸೀತ್–ಆಗಲಿಲ್ಲವು; (೯೧೬); ಕಿಂ ಚ–ಮತ್ತೇನೆಂದರೆ, ಅಸತ್ತ್ವನಿಷೇಧೇಪಿ–ಅಸತ್ತ್ವವು ನಿಷೇಧಿಸಲ್ಪಟ್ಟರೂ, ಸತ್ತ್ವಸ್ಯ–ಸತ್ತ್ವದ, ಅಭಾವಮಾತ್ರತಃ–ಅಭಾವ ಮಾತ್ರದಿಂದ, ಪ್ರಾಗುಕ್ತ ಪಂಚದೋಷಾಣಾಂ–ಹಿಂದೆ ಹೇಳಲಾದ ಐದು ಅನುಮಾನ ದೋಷಗಳಿಗೆ, ಉದ್ಧಾರಃ – ಪರಿಹಾರವು, ತವ – ನಿನ್ನಂತೆ, ನ ಭವೇತ್ – ಆಗುವುದಿಲ್ಲ; (೯೧೭); ಬಾಷ್ಪಾರೋಪಿತ ಧೂಮಸ್ಯ–ಕಣ್ಣೀರಿಂದ ಆರೋಪಿತವಾದ ಧೂಮಕ್ಕೆ, ಸತ್ತ್ವಾಭಾವೇನ–ಸತ್ತ್ವವಿಲ್ಲವೆಂಬ ಕಾರಣದಿಂದ, ಕೇವಲಂ–ಅಸ್ತುಮಾತ್ರದಿಂದ, ಅಸದ್ವಿಲಕ್ಷಣಸ್ಯ ಅಪಿ–ಸತ್ತ್ವವುಳ್ಳ (ಅಗ್ನಿಯ ಜ್ಞಾನದ) ಪದಾರ್ಥದ, ಸಿದ್ಧಿಃ–ಸಿದ್ಧಿಯು, ಕಿಂ ನ ಭವಿಷ್ಯತಿ–ಉಂಟಾಗುವುದಿಲ್ಲವೇನು? (ಅಗ್ನಿಯ ಜ್ಞಾನವೂ ಆಗಬಹುದು); (೯೧೮); ಏವಂಚ–ಹೀಗೆಯೇ, ಸದ್ವಿವಿಕ್ತೇಷು–ಸತ್ತಿನಿಂದ ಭಿನ್ನಗಳಾದ, ರಜ್ಜು ಸರ್ಪಾದಿಕೇಷು–ರಜ್ಜುಸರ್ಪಾದಿ, ಅಸದ್ಭಿನ್ನೇಷು ಅಪಿ–ಅಸತ್ತಿನಿಂದ ಭಿನ್ನಗಳಲ್ಲಿ ಸಹ, ತೇ–ನಿನ್ನಂತೆ, ಯತಃ–ಯಾವ ಕಾರಣದಿಂದ, ತದ್ಯೋಗ್ಯಾರ್ಥಃ – (ಆ ಯುಕ್ತಿಯ) ಯೋಗ್ಯವಾದ ಪ್ರಯೋಜನವು, ನ ದೃಶ್ಯತೇ–ತೋರುವುದಿಲ್ಲವೋ (೯೧೯); ತತ್–ಆದ್ದರಿಂದ, ಸತ್ತ್ವರಹಿತ್ವಾಖ್ಯಂ–ಸತ್ತ್ವವಿಲ್ಲೆಂಬ, ಅಸತ್ತ್ವಂ–ಅಸತ್ತ್ವವು, ಸರ್ವಸಂಮತಂ–ಎಲ್ಲರೂ ಒಪ್ಪಬಹುದಾದ ಮಿಥ್ಯಾತ್ವಂ–ಮಿಥ್ಯಾತ್ವವು, ಅಸ್ತು–ಆಗಲಿ, ಪುನಃ–ಮತ್ತೆ, (ಅದರೊಂದಿಗೆ), ಸರ್ವತ್ರ – ಎಲ್ಲೆಲ್ಲಿಯೂ, ತಸ್ಯ–ಅದಕ್ಕೆ, ಅಸತಃ ಅನ್ಯತಾ–ಅಸತ್ತಿನಿಂದ ಭೇದವೆಂಬುದು, ವ್ಯರ್ಥಾ–ಯಾವ ಪ್ರಯೋಜನವೂ ಇಲ್ಲದೇ, ಕಿಮರ್ಥಂ–ಏತಕ್ಕೆ, ಸ್ವೀಕಾರ್ಯಾ–ಅಂಗೀಕರಿಸಬೇಕು? ಯಾ–ಯಾವ ಇದು, ವ್ಯಾಹತ್ಯಾ ಚ–ವ್ಯಾಹತಿಯಿಂದ (ವಿರುದ್ಧವೆಂಬ ದೋಷದಿಂದ), ದೂಷ

ಯೇತ್ – ನಿಂದಿತವಾಗುತ್ತದೆ ? (ಮಿಥ್ಯಾತ್ವವೆಂದು ಮಾತ್ರವೆಂದು ಹೇಳದೇ ಅಸತ್ತ್ವರಹಿತವೆಂದು ಅಂಗೀಕರಿಸುವ ಅವಶ್ಯಕವಿಲ್ಲ) ; (೯೨೦) ದೋಷೇ – ದೋಷವು, ಸತ್ಯೇವ–ಇದ್ದರೆ ಮಾತ್ರ, ದೃಶ್ಯತ್ವಂ–ದೃಶ್ಯತ್ವವು ; ತಥಾ–ಹಾಗೂ, ಯೋಗ್ಯಸ್ಯ–ಆಸಂಬಂಧಕ್ಕೆ (ದೋಷ ಸಂಬಂಧಕ್ಕೆ), ಅಯೋಗ್ಯತಾ–(ದೃಶ್ಯತ್ವ) ಯೋಗ್ಯವಲ್ಲದಿರುವಿಕೆಯೂ, ಅಸತ್ತ್ವಸ್ಯಏವ–ಅಸತ್ತ್ವದ, ಸಿದ್ಧ್ಯರ್ಥಂ–ಸಿದ್ಧಿಗಾಗಿಯೇ, ಲಿಂಗ ಭೂತೇ–ಲಕ್ಷಣಗಳು, ನ ಸಂಶಯಃ–ನಿಶ್ಚಯವು ; ಉಕ್ತಸಿದ್ಧ್ಯಾದಿದೋಷಾಣಾಂ–ಹೇಳಲಾದ ದೃಶ್ಯತ್ವದಸಿದ್ಧಿ ಮೊದಲಾದ ದೋಷಗಳಿಗೆ, ತಸ್ಮಾತ್–ಆದ್ದರಿಂದ, ತವ–ನಿನಗೆ (ನಿನ್ನ ಆಗ್ರಹಕ್ಕೆ), ಔಷಧಂ–ಪರಿಹಾರವು, ನಾಸ್ತಿ–ಇರುವುದಿಲ್ಲ. (೯೨೧); ಪ್ರಾಗುಕ್ತೇನ ವರ್ತ್ಮನಾ–ಹಿಂದೆ ಹೇಳಿದ ಮಾರ್ಗದಿಂದ, ವ್ಯಾವಹಾರಿಕ ಸತ್ತಾ ಚ–ವ್ಯಾವಹಾರಿಕ ಸತ್ತ್ವವೂ, ವಿಕಲ್ಪಸಹಾ ನ–ಈ ವಿಧದ ಕಲ್ಪನೆಯನ್ನು ಸಹಿಸುವುದಿಲ್ಲ ; ತಸ್ಮಾತ್–ಆದ್ದರಿಂದ, ಮಿಥ್ಯಾತ್ವಾಶಾಂ–ಮಿಥ್ಯಾತ್ವದ ಆಶೆಯನ್ನು (ಜಗನ್ಮಿಥ್ಯಾ ಎಂದು ಸಾಧಿಸಬಹುದೆಂಬ ಆಶೆಯನ್ನು), ಪರಿತ್ಯಜ–ಬಿಡು (೯೨೨) ; ಯಾ ತು–ಯಾವ (ಲಕ್ಷಣವಾದರೋ) ಜ್ಞಾನೇನ–(ಬ್ರಹ್ಮಜ್ಞಾನದಿಂದ), ನಾಶ್ಯತಾ – ನಷ್ಟವಾಗುವುದೆಂಬ ಲಕ್ಷಣವೋ, ಸಾಪಿ–ಅದೂಕೂಡ, ನಿದರ್ಶನೇ–ದೃಷ್ಟಾಂತದಲ್ಲಿ, ನಾಸ್ತಿ–ಇರುವುದಿಲ್ಲ; (೯೨೩) ಕಿಂಚ–ಮತ್ತೇನೆಂದರೆ, ತವ ಮತೇ–ನಿನ್ನ ಮತದಂತೆ, ಭೇದೇ–ಭೇದವು (ಜೀವೇಶ್ವರ ಭೇದವು) ಅನಾದೌ–ಅನಾದಿಯಾಗಿದ್ದಲ್ಲಿ, ಜ್ಞಾನನಾಶ್ಯತಾ–ಬ್ರಹ್ಮಜ್ಞಾನದಿಂದ ನಾಶಹೊಂದುವುದೆಂಬುದು, ತ್ವದ್ರೀತ್ಯಾ ಏವ – ನಿನ್ನಂತೆಯೇ, ಸ್ವೋಪಾದೇಯಕ್ಷಯರೂಪಿಣೀ–ತನ್ನಿಂದಲೇ ಜನ್ಯವಾದುದೆಂಬುದರ ನಾಶವು, ಯಸ್ಮಾತ್ ನ–ಯಾವ ಕಾರಣದಿಂದ ಇರುವುದಿಲ್ಲವೋ, ಅತಃ–ಆದ್ದರಿಂದ, ತೇ–ನಿನ್ನ, ಅನುಮಾ–ಅನುಮಾನವು, ತ್ವನ್ನಯೇನ ಏವ–ನಿನ್ನ ನ್ಯಾಯದಿಂದಲೇ, ಅಂಶತಃ–ಭಾಗಶಃ ಒಂದು ಭಾಗವು), ಬಾಧಿತಾ–ವಿರೋಧಿಸಲ್ಪಟ್ಟದ್ದು, ಅಭೂತ್–ಆಯಿತು (೯೨೪); ಹಾ ಹಂತ–ಎಷ್ಟು ಶೋಕಾರ್ಹನು, ನೀನು ! ಅಂಧಸ್ಯ ಇವ–ಕುರುಡನಂತೆ, ಪದೇ ಪದೇ–ಹೆಜ್ಜೆ ಹೆಜ್ಜೆಗೆ, ಸ್ಖಲನಂ–ಮುಗ್ಗರಿಸುವುದು, ತೇ ಕಿಂ–ನಿನಗೇಕೆ ? ತಮಸಿ ಇವ–ತಮಸ್ಸಿನಲ್ಲಿ ಎಂಬಂತೆ (ಕತ್ತಲಲ್ಲಿ ಎಂಬಂತೆ), ಅವಿದ್ಯೋಪಾದಾನತಾ–ಅವಿದ್ಯೆಯೇ ಉಪಾದಾನವೆಂಬುದು, ದೂಷಣಂ ನ–ದೋಷವೇ ಅಲ್ಲ (೯೨೫) ; ಯತ್–ಯಾರ ಕಾರಣದಿಂದ, ಅಜ್ಞಾನಂ–ಅಜ್ಞಾನವು, ಸತ್ಯಂ ಏವ–

ಸತ್ಯವೇ ಆಗಿದೆಯೋ, ಅಜ್ಞಾನಸ್ಯ-ಅಜ್ಞಾನಕ್ಕೆ, ಅನುಪಾದೇಯಂ-ಉಪಾದೇಯವಿಲ್ಲದುದೋ ತತಃ-ಆಕಾರಣದಿಂದ, ಅಜ್ಞಾನೋಪಾದಾನತಯಾ-ಅಜ್ಞಾನವೇ ಉಪಾದಾನವಾಗಿವುಳ್ಳದ್ದೆಂಬ ರೀತಿಯಿಂದ, ನಃ-ನಮ್ಮಂತೆ, ಛಿನ್ನಂ ನ ಕಿಂ-ಕಡಿದು ಬೀಳಲಿಲ್ಲವೇನು ? ವದ-ನೀನೇ ಹೇಳು (೯೨೬) ತವ-ನಿನ್ನಂತೆ, ಸ್ವಾತ್ಯಂತಾಭಾವ ಸಾಹಿತ್ಯಂ-ತಾನು, ತನ್ನ ಅತ್ಯಂತಾಭಾವದಿಂದ ಜೊತೆಯಲ್ಲಿರುವುದು, ವಿರೋಧಾತ್-ವಿರೋಧವಾದ್ದರಿಂದ (ವಸ್ತುವೂ ಅದರ ಅತ್ಯಂತ ಅಭಾವವೂ ಪರಸ್ಪರ ವಿರೋಧಗಳೇ ಅಲ್ಲವೇ ?), ಬಾಧಿತಂ-ಬಾಧಿತವೇ ಆಗಿರುತ್ತದೆ ; ಅವಿರೋಧೇ-(ಅವುಗಳಲ್ಲಿ) ವಿರೋಧವಿಲ್ಲವೆಂದರೆ, ಜಗತ್ಸತ್ತ್ವ ಸಿದ್ಧೇಃ-ಜಗತ್ತಿನ ಸತ್ಯತ್ವವೇ ಸಿದ್ಧವಾಗುವುದರಿಂದ, ಮಮ-ನನಗೆ, ನ ದೂಷಣಂ-ದೋಷವಿಲ್ಲ (೯೨೭). ಕಿಂಚ-ಇದೂ ಅಲ್ಲದೇ, ಏವಂ-ಹೀಗೆಯೇ ಸದಸತ್ತ್ವಾಖ್ಯ ಪಕ್ಷಸ್ಯ ಅಪಿ-ಸದಸತ್ತ್ವವೆಂಬ ಪಕ್ಷಕ್ಕೂ, ಅವಿರೋಧತಃ-ಅವಿರೋಧವಿದ್ದಲ್ಲಿ (ವಸ್ತುವಿಗೂ ಅದರ ಸದಸತ್ತ್ವಕ್ಕೂ ವಿರೋಧವಿಲ್ಲೆಂದರೆ), ಅನಿರ್ವಾಚ್ಯತ್ವವೃಕ್ಷಸ್ಯ-(ಪರನ) ಅನಿರ್ವಾಚ್ಯತ್ವವೆಂಬ ವೃಕ್ಷದ, ಮೂಲಚ್ಛೇದಃ-ಮೂಲವೇ ಕತ್ತರಿಸಿಬೀಳುವುದು, ತವ-ನಿನಗೆ, ಅಭವತ್-ಉಂಟಾಯಿತು (ಉಂಟಾಗುತ್ತದೆ) ; (೯೨೮) ದೃಶ್ಯಧ್ಯಸ್ತತ್ವರೂಪಂ-ದೃಶ್ಯತ್ವವು (ಜಗತ್ತಿನಲ್ಲಿ) ಆರೋಪಿತವಾಗಿದೆ, ಎಂಬ, ಯದ್ದೃಶ್ಯತ್ವಂ-ಯಾವ ದೃಶ್ಯತ್ವವು (ಕಣ್ಣಿಗೆ ಕಾಣುವಿಕೆಯು), ತವ-ನಿನಗೆ (ಪರನಿಗೆ) ಸಂಮತಂ-ಒಪ್ಪಿತವೋ, ವೈಶಿಷ್ಟ್ಯದೋಷೇಣ-ಗುಣವುಳ್ಳದ್ದೆಂಬ ದೋಷದಿಂದ, ಯುಕ್ತವಾಗಿದೆಯಾದ್ದರಿಂದ, ಸಾಧ್ಯಾ-ಸಾಧ್ಯವಾದ ದೃಶ್ಯತ್ವವು, ತತ್-ಅದು, ಮಿಥ್ಯಾತ್ವ ಸಾಧಕಂ-ಮಿಥ್ಯಾತ್ವವನ್ನು ಸಾಧಿಸುವುದು, ನ-ಆಗುವುದಿಲ್ಲ ; (೯೨೯). ಹೇತೋಃ-ಹೇತುವಿನಿಂದ, ಅನ್ಯತರಾ ಸಿದ್ಧಿಶ್ಚ-ಬೇರೊಂದರ ಸಿದ್ಧಿಯಾದರೂ (ವ್ಯಾಪ್ತಿನಿಯಮವಿಲ್ಲದೆ) ಯಾವುದರಿಂದ ಯಾವುದರ ಸಿದ್ಧಿಯಾದರೂ, ಸ್ಯಾತ್-ಆಗಲಿ (ಆಗಬಹುದು) ; ಈದೃಶತಿ ಸಾಧನೇ-ಸಾಧನವು (ಹೇತುವು), ಹೀಗಿದ್ದಲ್ಲಿ, ಮಮ-ನನಗೆ, (ಸತ್ಯತ್ವಕ್ಕೆ), ಬಾಧ್ಯತ್ವಂ-ಬಾಧವು, ಅಸಿದ್ಧಂ-ಸಿದ್ಧವಾಗುವುದಿಲ್ಲ ; ಕೇನ-ಯಾವುದರಿಂದ, ಸಾಧ್ಯಂ-(ಸಾಧ್ಯವಾದ) ಮಿಥ್ಯಾತ್ವವು, ಪ್ರಸಾಧ್ಯತೇ-ಸಾಧಿಸಲ್ಪಡುತ್ತದೆ ; (೯೩೦) ತೇ ಮತೇ-ನಿನ್ನ ಮತದಂತೆ, ದೃಶ್ಯತಾ-ದೃಶ್ಯತ್ವವು, ವೃತ್ತಿವ್ಯಾಪ್ಯತಾ-ವೃತ್ತಿಯಿಂದ ವ್ಯಾಪಕವು, ನಾಪಿ-ಆಗುವುದಿಲ್ಲ ; ಸಂಬಂಧಸ್ಯ-ಅದರ ಸಂಬಂಧದ,

ಅನಿರುಕ್ತ್ಯಾ—ಹೇಳಿಲ್ಲವಾದ್ದರಿಂದಲೂ ಚ—ಮತ್ತು, ಬ್ರಹ್ಮಣಿ—ಬ್ರಹ್ಮನಲ್ಲಿ, ವ್ಯಭಿಚಾರತಃ — ವ್ಯಾಪ್ತಿಗೆ (ದೃಶ್ಯತ್ವದ ವ್ಯಾಪ್ತಿಗೆ), ವ್ಯಭಿಚಾರ ಬರುವುದರಿಂದಲೂ (ಬ್ರಹ್ಮನಲ್ಲಿ ದೃಶ್ಯತ್ವವು ಇರುವುದಿಲ್ಲವಾದ್ದರಿಂದಲೂ), (ಹೇತುವಿಗೆ ವ್ಯಾಪ್ತಿಯನ್ನು ಸಾಧಿಸಲಾಗುವುದಿಲ್ಲ) ; (ಅಲ್ಲದೇ, ಮತ್ತೆ ಯಾವ ಕಾರಣವೆಂದರೆ), ಯತಃ—ಯಾವ ಕಾರಣದಿಂದ, ತೇ—ನಿನ್ನಂತೆ, ಚರಮಾವೃತ್ತಿಃ—ಚರಮ ಜ್ಞಾನವು, ಬ್ರಹ್ಮಚಿನ್ಮಾತ್ರಗೋಚರಾ—ಬ್ರಹ್ಮವು ಚಿನ್ಮಾತ್ರಗೋಚರವು (ಅಲ್ಲಿ ಹೇತುವಿನ ವ್ಯಭಿಚಾರವಿಲ್ಲೆಂದು ಹೇಳಲು ಬರುವುದಿಲ್ಲ) ; (೯೩೧) ; ಸಾಕ್ಷಿವೇದ್ಯೇ—ಸಾಕ್ಷಿಯು ತಿಳಿಯುವ, ಶುಕ್ತಿರೂಪ್ಯೇ ತು — ಶುಕ್ತಿರಜತದಲ್ಲಿಯೂ, ಅದೃಷ್ಟಾಂತೇಪಿ — ದೃಷ್ಟಾಂತವಾಗಿ ಹೇಳದ ಸ್ಥಲದಲ್ಲಿಯೂ, ವರ್ತನಾತ್—(ದೃಶ್ಯತ್ವವು) ಇರುವುದರಿಂದ, ಸಾಕ್ಷಿವೇದ್ಯಾಜ್ಞಾನಪೂರ್ವೇ — ಸಾಕ್ಷಿವೇದ್ಯವಾದ ಅಜ್ಞಾನ ಮುಂತಾದ್ದರಲ್ಲಿಯೇ, ಭಾಗಾಸಿದ್ಧಿಪ್ರಸಂಗತಃ—ಭಾಗಾಸಿದ್ಧಿಯೆಂಬ (ಹೇತುವಿರೋಧರೂಪ) ಅನುಮಾನದೋಷಕ್ಕೆ ಅವಕಾಶವಾಗುವುದರಿಂದ (ಸಹ) ಯುಕ್ತಿಯು ಸಾಧುವಲ್ಲ (೯೩೨). ಕಥಂಚಿತ್ — ಕಷ್ಟದಿಂದ, ಯುಕ್ತಿವೇದ್ಯತ್ವಾತ್ — ಯುಕ್ತಿಯಿಂದ (ಮಿಥ್ಯಾತ್ವವನ್ನು) ತಿಳಿಸಬಹುದಾದ್ದರಿಂದ, ಶ್ರುತಿವೇದ್ಯತ್ವತಃ—ಶ್ರುತಿವೇದ್ಯವೂ (ಶ್ರುತಿಯಿಂದ ತಿಳಿಯುವುದೂ) ಆಗಿದೆ ಆದ್ದರಿಂದ, ತತ್—ಅನುಮಾನವು, ಯದಿ ವೃತ್ತಿವ್ಯಾಪ್ಯಂ — ಬುದ್ಧಿಗೆ ಹಿಡಿಸಬಹುದಾದರೂ, ತದಾ — ಆಗ, ಐಕ್ಯೇ—ಐಕ್ಯವನ್ನು ಸಾಧಿಸುವುದರಲ್ಲಿ, ವ್ಯಭಿಚಾರಿತಾ ಸ್ಯಾತ್ — (ಯುಕ್ತಿಯು) ವ್ಯಭಿಚರಿತವಾಗುತ್ತದೆ (ಶಕ್ಯವಿಲ್ಲದ್ದಾಗುತ್ತದೆ) (೯೩೩) ; ಅತ್ಯಂತಾ ಸತಿ ಅಪಿ—ಅತ್ಯಂತ ಅಸತ್ತಿನ ವಿಷಯದಲ್ಲಿಯೂ, ಜ್ಞಾನಂ—ಜ್ಞಾನವನ್ನು, ಅರ್ಥೇ—ಅರ್ಥದಲ್ಲಿ, ಶಬ್ದಃ—ಶಬ್ದವು, ಕರೋತಿ ಹಿ—ಮಾಡುವುದಷ್ಟೆ; 'ಇತ್ಯುಕ್ತೇ—ಹೀಗೆ ಹೇಳಿದಲ್ಲಿ, ಶಶಶೃಂಗಾದೌ—ಶಶವಿಷಾಣಾದಿಯಲ್ಲಿ, ತ್ವದ್ರೀತ್ಯಾ—ನಿನ್ನಂತೆಯೇ, ವ್ಯಭಿಚಾರಿತಾ—ತಪ್ಪುತ್ತದೆ (ಈ ನಿಯಮವು ತಪ್ಪುತ್ತದೆ) (೯೩೪); ವೃತ್ತ್ಯಾಕಾರಾಕಾರಿತಾಯಾಂ—ವೃತ್ತಿಯಲ್ಲಿ (ಮನಸ್ಸಿನಲ್ಲಿ) ಶಬ್ದವು (ಅಸದ್ವಿಷಯಕಶಬ್ದವು) ಒಂದು ಆಕಾರವನ್ನುಂಟುಮಾಡುವುದೆಂದರೆ ), ಮೇ — ನನಗೆ, ಹೇತ್ವಸಿದ್ಧಿಶ್ಚ — ಹೇತುವಿನ ಅಸಿದ್ಧಿಯೇ, ಭವೇತ್—ಉಂಟಾಗುತ್ತದೆ (ದೊರೆಯುತ್ತದೆ) (೯೩೫). ಕಿಂಚ—ಇನ್ನು ಏನೆಂದರೆ, ದೃಶ್ಯತ್ವ ಜಡತಾ ಪರಿಚ್ಛಿನ್ನತ್ವಪೂರ್ವಕೇ—ದೃಶ್ಯತ್ವ, ಜಡತ್ವ, ಪರಿಚ್ಛಿನ್ನತ್ವ ಮೊದಲಾದ, ಧರ್ಮೇ — ಧರ್ಮವು, ಸತ್ಯಪಿ — ಇದ್ದರೂ ತೇನ

ಹೇತುನಾ–ಯಾವ ಹೇತುವಿನಿಂದ, ಶುಕ್ತಿಃ–ಶುಕ್ತಿಯು, ತೇನ–ಆ ಕಾರಣದಿಂದ, ಮಿಥ್ಯಾ–ಮಿಥ್ಯೆಯಾಗುತ್ತದೆ ? (೯೩೬) ತದ್ರೂಪ್ಯಸ್ಯ–ಶುಕ್ತಿಯಲ್ಲಿನ ರಜತದ, ಮಿಥ್ಯಾತ್ವೇ–ಮಿಥ್ಯಾತ್ವದಲ್ಲಿ, ಬಾಧಃ ಏವ–ಬಾಧವೇ (ರಜತವಿಲ್ಲವೆಂಬ ಜ್ಞಾನವೇ) ಪ್ರಯೋಜಕವೆಂದು) ವಾಚ್ಯಃ–ಹೇಳಲ್ಪಡಬೇಕು, ತ್ವಯಾಪಿ–ನಿನ್ನಿಂದಲೂ, ನ ತು ಅನ್ಯಃ–ಬೇರೆಯಲ್ಲ ; ಸಃ ತು–ನೋಡುವವನಾದರೂ (ಅನ್ಯನು), ನಾಸ್ತಿ ಏವ– (ರಜತವು) ಇಲ್ಲವೆಂದೇ, ಮನ್ಯತೇ – ತಿಳಿಯುತ್ತಾನೆ (೯೩೭) ; ನಿಷ್ಪ್ರಕಾರಕ ಧೀಪಕ್ಷೇ–ರಜತ ಪ್ರಕಾರಕ ಜ್ಞಾನವಿಷಯದಲ್ಲಿ, ಭವತಃ ಅಪಿ–ನಿನಗಾದರೂ, ಬಾಧಃ ತು–ಬಾಧವೇ, ನ–ಇರುವುದಿಲ್ಲ ; ಯತ್–ಏಕೆಂದರೆ, ವಿಪಶ್ಚಿತಃ–ವಿವೇಕಿ ಗಳು, ನಾಸ್ತಿತ್ವಾಕಾರಬೋಧಂ–ಇಲ್ಲೆಂಬ ರೂಪದ ಜ್ಞಾನವನ್ನು, ಬಾಧಂ– ಬಾಧವನ್ನಾಗಿ, ಆಹುಃ–ಹೇಳುವರು (೯೩೮) ; ಬಾಧೇನ–ಬಾಧದಿಂದ, ಬಾಧ ಬಾಧೇಪಿ–ಬಾಧದ ಅಭಾವವಾದರೂ, ತದಭಾವೇ–ಬಾಧವಿಲ್ಲದೇ, ಸ ಏವ ಸನ್– ಪೂರ್ವದ ರಜತವೇ ಇರುವುದಾಗುತ್ತದೆ ; ಅತಃ – ಆದ್ದರಿಂದ, ತೇ – ನಿನ್ನ, ಮಿಥ್ಯಾತ್ವವಾದಃ – ಮಿಥ್ಯಾತ್ವವಾದವು, ಯುಕ್ತೇಃ–ಯುಕ್ತಿಯು, ಮಿಥ್ಯಾತ್ವಂ– ಮಿಥ್ಯಾತ್ವವನ್ನು, ಆನಯತ್–ಹೊಂದಿಸಿತು (೯೩೯) ; (ಬಾಧಜ್ಞಾನದ ಬಾಧ ದಿಂದ (ಅಭಾವದಿಂದ), ಬಾಧವಿಲ್ಲದಂತಾಗಿ, ಪೂರ್ವದ ರಜತವೇ ಇರುವುದಾಗು ತ್ತದೆ ; ಮಿಥ್ಯಾತ್ವವು ಸಿದ್ಧಿಸಲಿಲ್ಲ–ನಿನ್ನ ಯುಕ್ತಿಯೇ ಮಿಥ್ಯೆ ಆಯಿತು ; ಎಂಬು ದರಿಂದ), ಸತ್ಯತ್ವವಾದಿನಾಂ ಏವ–ಸತ್ಯತ್ವವಾದಿಗಳಿಗೇ, ಸಹಾಯಂ–ಸಹಾಯ ವನ್ನು, ಅಕರೋತ್ ಅಹೋ–ಮಾಡಿದನು, ಆಶ್ಚರ್ಯವು ; ಅಸ್ಯ ಸರ್ವಸ್ಯ–ಈ ಎಲ್ಲದರ, ವಿಸ್ತರಃ ತು–ವಿಸ್ತಾರವಾದರೋ, ಮೂಲ ಶಾಸ್ತ್ರೇ–ಶ್ರೀಮಧ್ವರ ಗ್ರಂಥ ಗಳಲ್ಲಿ, ಪ್ರದೃಶ್ಯತಾಂ–ನೋಡಲ್ಪಡಲಿ (ಕಾಣಬಹುದಾಗಿದೆ) (೯೪೦).

**ಚರ್ಚೇಯಂ ಪರರೀತ್ಯೈವ ಪರಾವದ್ಯಾಭಿಧಿತ್ಸಯಾ ।**
**ತನ್ಮನ್ಯೇ ಮಾಧ್ವರಾದ್ಧಾಂತಂ ವಿದ್ವನ್ಮಕುಟವರ್ಧನಂ ॥ ೯೪೧ ॥**

ಇಯಂ ಚರ್ಚಾ – ಈ ಚರ್ಚೆಯು, ಪರರೀತ್ಯಾ ಏವ – ಪರನ ರೀತಿ ಯಿಂದಲೇ, ಪರಾವದ್ಯಾಭಿಧಿತ್ಸಯಾ–ಪರನ ಯುಕ್ತಿಗಳಲ್ಲಿರುವ ದೋಷಗಳನ್ನು

---

ಸಹಾಯ ಮಾಡಿದಂತೆ ಆಯಿತು–ಆಶ್ಚರ್ಯವು ; ಈ ಎಲ್ಲದರ ವಿಸ್ತಾರವನ್ನು ಶ್ರೀಮಧ್ವರ ಮೂಲಗ್ರಂಥಗಳಲ್ಲಿ ಕಾಣಬಹುದಾಗಿದೆ (೯೪೦). ಹೀಗೆ ಭಾಗವತ

ತಿಳಿಸಲಿಕ್ಕೆ ಮಾತ್ರ, ಆ ಇಚ್ಛೆಯಿಂದ (ಮಾಡಿದ್ದಾಗಿರುತ್ತದೆ) ; ತತ್–ಆದ್ದರಿಂದ (ಉಕ್ತರೀತಿಯಿಂದ, ಭಾಗವತ ವಾಕ್ಯಗಳೆಲ್ಲವೂ ಮಧ್ವಸಿದ್ಧಾಂತಾನುಕೂಲ ವಾಗಿರುವುದರಿಂದ), ಮಾಧ್ವರಾದ್ಧಾಂತಂ – ಮಧ್ವಸಿದ್ಧಾಂತವು, ವಿದ್ವನ್ಮಕುಟ ವರ್ಧನಂ–ವಿದ್ವಾಂಸರಿಗೆ ಕಿರೀಟದಂತೆ ಭೂಷಣವು (ವಿದ್ವಾಂಸರನ್ನು ತಲೆ ಎತ್ತಿ ಪರನನ್ನು ಎದುರಿಸಲು ಸಮರ್ಥರನ್ನಾಗಿಸಲು ಶಕ್ತವಾಗಿದೆ), ಮನ್ಯೇ–(ಎಂದು ಭಾವಿಸುತ್ತೇನೆ).

**ಜರತೀಭಿಃ ಕಾರುರಹಮಶ್ವೋವೋಢೇತಿ ವಾಕ್ ತ್ರಯಂ ।**
**ವಕ್ತಿ ವೈಕುಂಠಮಾಹಾತ್ಮ್ಯಂ ತಚ್ಚ ಕಿಂಚಿದ್ವಿವೃಣ್ಮಹೇ ॥ ೯೪೨ ॥**

ವೈಕುಂಠವೆಂಬ ಮುಕ್ತಸ್ಥಾನದ, ವಿವಿಧ ಜೀವರಿಂದ ತುಂಬಿರುವುದೆಂಬ ಮುಂತಾದ ಮಹಿಮೆಯನ್ನು, ಅದನ್ನು ಹೊಂದಿಸುವ ಮುಖ್ಯಪ್ರಾಣನ ಮಾಹಾತ್ಮ್ಯಯನ್ನು, ಪ್ರಾಪ್ಯನಾದ ಭಗವಂತನ ಮಹಾತ್ಮೆಯನ್ನು ವಿಸ್ತಾರ ದಿಂದ ಪ್ರತಿಪಾದಿಸುವ, ಮುಮುಕ್ಷುಗಳೂ ದೇವರ್ಷ್ಯಾದಿಗಳೂ ಮಾಡುವ ಪ್ರಾರ್ಥನಾರೂಪದ, ಸೋಮಸೂಕ್ತವನ್ನು, (ಮರಣಕಾಲದಲ್ಲಿ ಕಿವಿಯಲ್ಲಿ ಜಪಿಸಲು ಯೋಗ್ಯವಾದ), ಶ್ರುತಿಯ ಅರ್ಥ ತಾತ್ಪರ್ಯವನ್ನು ಉತ್ತರ ಶ್ಲೋಕ ಗಳಿಂದ (ವರ್ಗಚತುಷ್ಟಯದ–ನಾಲ್ಕು ವರ್ಗಗಳ ೨೦ ಮಂತ್ರಗಳ ಸಾರವನ್ನು) ನಿರೂಪಿಸುತ್ತಾರೆ :—

ಜರತೀಭಿಃ–'ಜರತೀಭಿರೋಷಧೀಭಿಃ'ಇತ್ಯಾದಿ, ಕಾರುರುಹಂ–'ಕಾರುರುಹಂ ತತೋ ಭಿಷಕ್' ಇತ್ಯಾದಿ, ಅಶ್ವೋವೋಢಾ–'ಅಶ್ವೋವೋಢಾ' ಇತ್ಯಾದಿ,

---

ವಾಕ್ಯಗಳೆಲ್ಲವೂ ಮಧ್ವಮತಾನುಕೂಲಗಳಾಗಿಯೇ ಇರುವುದೆಂದು ಪರರೀತಿ ಯಿಂದಲೇ ಚರ್ಚಿಸಿ ಮಧ್ವ ಸಿದ್ಧಾಂತವು, ವಿದ್ವಜ್ಜನರ ಶಿರೋಭೂಷಣವಾದ ಮಕುಟವೆಂದೂ ನಾನು ಪ್ರದರ್ಶಿಸಿ ನಂಬಿದ್ದೇನೆ (೯೪೧). 'ಜರತೀಭಿಃ', 'ಕಾರುರಹಂ' ಮತ್ತು ಅಶ್ವೋವೋಢಾ' ಇತ್ಯಾದಿ ಸೋಮ ಸೂಕ್ತದ ವಾಕ್ಯಗಳು, ಮುಕ್ತರ ಆವಾಸವಾದ ವೈಕುಂಠಪುರವನ್ನು ವರ್ಣಿಸುತ್ತವೆ ; ಈ ಸೋಮ ಸೂಕ್ತದಲ್ಲಿ ಸೋಮನಾಮಕ ಮುಖ್ಯ ಪ್ರಾಣನನ್ನು, ಮುಕ್ತರು (ಮುಮುಕ್ಷುಗಳು) ಈ ಪರಿಯಲ್ಲಿ ವಿರಾಜಿಸುವ ನಿತ್ಯಾನಂದ ಸ್ಥಿತಿರೂಪದ ವೈಕುಂಠವನ್ನು ಹೊಂದಿ ಸೆಂದು ಪ್ರಾರ್ಥಿಸುತ್ತಾರೆ ; ಆ ವೈಕುಂಠ ಮಹಾತ್ಮ್ಯವನ್ನು ಸ್ವಲ್ಪಮಟ್ಟಿಗೆ

ಇತಿ ವಾಕ್ ತ್ರಯಂ–ಎಂಬ ಮೂರು ವಾಕ್ಯಗಳುಳ್ಳ, ಸೋಮಸೂಕ್ತವು,[1] ವೈಕುಂಠ ಮಾಹಾತ್ಮ್ಯಂ–ವೈಕುಂಠದ (ಮುಕ್ತರಿರುವ ಸ್ಥಾನದ) ಮಹಿಮೆಯನ್ನು, ವಕ್ತಿ–ಹೇಳುತ್ತದೆ; ತತ್ ಚ–ಅದನ್ನೇ (ಇದರ ಜ್ಞಾನವು ಅವಶ್ಯವಾದ್ದರಿಂದ), ಕಿಂಚಿತ್–ಸ್ವಲ್ಪಮಟ್ಟಿಗೆ, ವಿವೃಣ್ಮಹೇ–ವಿವರಿಸುತ್ತೇವೆ.

**ಕರ್ಮಾರಃ ಕಾರುಜಾತೀಯೋ ಯತ್ರ ಮುಕ್ತೌ ಹರೇಃ ಪುರಿ ।**
**ಜರತೀಭಿಃ ಪ್ರವೃದ್ಧಾಭಿರೋಷಧೀಭಿಶ್ಚಿದಾತ್ಮಭಿಃ ॥ ೯೪೩ ॥**

---

(ಸಂಗ್ರಹವಾಗಿ) ವರ್ಣಿಸುತ್ತೇವೆ (೯೪೨). ಜರತೀಭಿಃ ಎಂದರೆ ಈ ಮೊದಲು (ಬಹುಕಾಲದ ಹಿಂದೆ) ಮುಕ್ತರಾದ ಜೀವರು (ನಿತ್ಯ ತರುಣರಾದ ಮುಕ್ತರಿಗೆ ವೃದ್ಧಾಪ್ಯವೆಲ್ಲಿದೆ?); ಕಾರು ಎಂದರೆ ಕರ್ಮಾರ ಜಾತಿಯವರು; ಶ್ರೀಹರಿ ಪುರದಲ್ಲಿ ವಿವಿಧ ಜಾತೀಯ ಮುಕ್ತಜೀವರು ಇರುವರು; ಔಷಧಿಗಳೆಂದರೆ ಚಿದಾತ್ಮಕಗಳೇ; ಇವುಗಳನ್ನು ಪ್ರಯೋಗಿಸುವ (ಲೀಲೆಗಾಗಿ) ವೈದ್ಯರೂ

---

[1] ಪ್ರಸಕ್ತವಾದ ಮೂರು ಶ್ರುತಿ ವಾಕ್ಯಗಳು ಈ ಮುಂದಿನಂತಿವೆ:

(೧) 'ಜರತೀಭಿರೋಷಧೀಭಿಃ ಪರ್ಣೇಭಿಃ ಶಕುನಾಂ ।
ಕರ್ಮಾರೋ ಅಶ್ಮಭಿರ್ದ್ಯುಭಿರ್ಹಿರಣ್ಯವಂತಮಿಚ್ಛತೀಂದ್ರಾಯೇಂದೋ ಪರಿಸ್ರವ'

(೨) 'ಕಾರುರಹಂ ತತೋಭಿಷಗುಪಲ ಪ್ರಕ್ಷಿಣೀನನಾ ।
ನಾನಾಧಿಯೋವಸೂಯವೋನುಗಾ ಇವತಸ್ಥಿ ಮೇಂದ್ರಾಯೇಂದೋಪರಿಸ್ರವ ।'

(೩) ಅಶ್ವೋವೋಢಾ ಸುಖಂರಥಂ ಹಸನಾಮುಪಮಂತ್ರಿಣಃ ।
ಶೇಪೋ ರೋಮಣ್ವಂತೌ ಭೇದೌ ವಾರಿನ್ಮಂಡೂಕ ಇಚ್ಛತೀಂ-
ದ್ರಾಯೇಂದೋಪರಿಸ್ರವ ।'

ಇವುಗಳ ಭಾವಾರ್ಥ:—ಹೇ ಇಂದೋ–ಇಂದು ನಾಮಕ ಪವಮಾನ! ಯತ್ರ–ಯಾವ (ವಿಷ್ಣು) ಲೋಕದಲ್ಲಿ ಮಾಂ–ನನ್ನನ್ನು, ಇಂದ್ರಾಯ–ಪರಮೈಶ್ವರ್ಯ ಸಂಪನ್ನನಾದ ಪರಮಾತ್ಮನಿಗೆ, ಪರಿಸ್ರವ–ಸರಿಯಾಗಿ ಹೊಂದಿಸು; ಅಲ್ಲಿ, ಪೂರ್ವಮುಕ್ತರು ವೃದ್ಧರು (ಆದರೂ ತರುಣರೇ) (ಬಹುಕಾಲದಿಂದ ಅಲ್ಲಿಯೇ ಬಹುವರ್ಷ ವಾಸಿಸುತ್ತಿರುವರಾದ್ದರಿಂದ), ಹಳೇಕಾಲದ ಮರದಿಂದ, ಧನುಸ್ಸು ಶರಾದಿಗಳನ್ನು ಚಿತ್ರವಿಚಿತ್ರವಾದ ಪಕ್ಷಿಗಳನ್ನು ರತ್ನಗಳಿಂದ ನಿರ್ಮಿಸಿ, ಭಂಗಾರದಲ್ಲಿ ಸೇರಿಸಿ, ಧನುರಾದಿಗಳನ್ನು ಅಲಂಕರಿಸುತ್ತಿರುವರು: ಈ ಕೆಲಸದಲ್ಲಿ ಆನಂದದಿಂದ ನಿರತರಾದ ಮುಕ್ತರಿರುವರು: ಮುಕ್ತ್ಯನಂತರವೂ ಬಡಗಿಜಾತಿಗೆ ಸೇರಿದವರೆಂದೂ ವೈದ್ಯರೆಂದೂ, ಶಿಲಾನಿರ್ಮಿತ ಲೀಲಾರ್ಥವಾಗಿ ನಿರ್ಮಿತ ಪಟ್ಟಣಾಲಂಕಾರ ಉಪಯುಕ್ತ ಪದಾರ್ಥಗಳನ್ನು ನಿರ್ಮಿಸುವ ಯಂತ್ರವಿಶೇಷಗಳೊಂದಿಗೆ ಕೆಲಸಮಾಡುವ

**ವಂಶಾದಿಭಿರ್ಧ್ವಜಂ ಚಾಪಂ ಬಾಣವೇಣುರಥಾದಿಕಂ ।**
**ಕ್ರೀಡಾಯ್ಯೈ ರಚಿತಂ ದಿವ್ಯಂ ಶಾಕುನಾನಾಂ ಪತತ್ರಿಣಾಂ ॥ ೯೪೪ ॥**
**ಪರ್ಣೈಃ ಪತ್ರೈಃ ಶಿಖಂಡಾದ್ಯೈರ್ದ್ಯುಭಿರ್ದ್ಯೋತನಕಾರಿಭಿಃ ।**
**ಅಶ್ಮಭಿಶ್ಚಿತ್ರರತ್ನೈಶ್ಚ ಚಿತ್ರಿತಂ ಪುನರಿಚ್ಛತಿ ।**
**ಹಿರಣ್ಯವಂತಂ ಕರ್ತುಂ ಚ ತತ್ರ ಮಾಮಮೃತಂ ಕೃಧಿ ॥ ೯೪೫ ॥**

---

ಇರುವರು ; (೯೪೩) ; ಕಮ್ಮಾರರು, ಚಿದಾತ್ಮಕ ಮರಗಳಿಂದ, ರಥಧ್ವಜ, ವಂಶಗಳನ್ನು, ಧನುರ್ಬಾಣಗಳನ್ನು, ಗಳುಗಳಿಂದ (ವೇಣು) ರಥಾದಿಗಳನ್ನು ಕಟ್ಟುವರು ; ಕೇವಲ ಲೀಲೆಗೋಸ್ಕರ ವಿಲಕ್ಷಣವಾದ ಪಕ್ಷಿಗಳನ್ನು, ಪರ್ಣಗಳಿಂದ ರೆಕ್ಕೆಗಳನ್ನು, ನವಿಲು ಮುಂತಾದ ಕಾಂತಿಯುಕ್ತವಾದವುಗಳನ್ನು ನಿರ್ಮಿಸುತ್ತಾರೆ (೯೪೪) ; ಚಿತ್ರವಿಚಿತ್ರ ರತ್ನಗಳಿಂದ ನಾನಾ ಅಲಂಕಾರಗಳನ್ನು ರಚಿಸಿ, ಇಚ್ಛಾನುಸಾರವಾಗಿ ಅವುಗಳನ್ನು ಸುವರ್ಣ ಖಚಿತವನ್ನಾಗಿ ಮಾಡುತ್ತಾರೆ ; ಹೀಗೆ ಸ್ವೇಚ್ಛಾ ಪ್ರವೃತ್ತಿಯುಳ್ಳವರಾಗಿ, ಲೀಲೆಗಾಗಿ ಕ್ರೀಡಿಸುತ್ತ ಆನಂದಿಸುವ ಮುಕ್ತರಸ್ಥಾನಕ್ಕೆ

---

ರೆಂದೂ ವಿಭಿನ್ನ ಕಸಬುಗಳಲ್ಲಿ ತೊಡಗಿರುವ ವಿಚಿತ್ರಮುಕ್ತಜೀವರೂ ಇರುವರು ; ಎಲ್ಲರೂ ಶ್ರೀಹರಿಯನ್ನು ಅನುಸರಿಸುವರೇ ಆಗಿರುವರು ; ಭೂಮಿಯಲ್ಲಿ ಪರಮಾತ್ಮನ (ಅವರ ಮಧ್ಯೆ ಸದಾ ಇರುವ ನಾರಾಯಣನ) ಅವತಾರವಾದರೂ, ಆತನನ್ನು ಅನುಗರಾಗಿ ಬಾರದಿರುವ ಮುಕ್ತರು, ಆದರೂ ಅವತಾರಗಳನ್ನು ಸೇವಾರ್ಥವಾಗಿ ಹುಟ್ಟುವರು ಸರ್ವದಾ ಆಜ್ಞಾಧಾರಿಗಳಾಗಿರುವಂತೆ, ಅಲ್ಲಿಯೂ ಆ ಆಜ್ಞೆಗಳನ್ನೇ ಇವರೂ (ಮುಕ್ತರೂ) ಪಾಲಿಸುತ್ತಿರುವರು ; ಅಲ್ಲಿ ಮುಕ್ತರಾದ ಅಶ್ವಗಳು ಮುಕ್ತ ಕ್ರೀಡಾರ್ಥವಾಗಿ, ಅವರ ಸ್ತ್ರೀಯರೊಂದಿಗೆ, ವಾಹನಗಳನ್ನು ಎಳೆದು ಆನಂದಿಸುವರು ; ಮೈತುಂಬ ರೋಮವುಳ್ಳರಾಗಿ (ಮುಕ್ತ ಮೇಷಾದಿಗಳು) ಶ್ರೀಹರಿ ಸಮೀಪದಲ್ಲಿ ಸೇವಾಸಕ್ತರಾದ, ಬ್ರಹ್ಮೇಂದ್ರಾದಿ ಮುಕ್ತ ಸಮೂಹಗಳಿಗೆ, ಆನಂದದಿಂದ ಇಚ್ಛಾನುಸಾರ ಕ್ರೀಡೆಗಳನ್ನು ಪ್ರದರ್ಶಿಸುತ್ತಾರೆ ; ಪರಿಹಾಸದಶಾದಲ್ಲಿ ಯುದ್ಧಾದಿಗಳನ್ನು ಮಾಡುತ್ತಾರೆ ; ಸ್ವಜಾತ್ಯುಚಿತವಾದ ಜಲವನ್ನು, ಮಂಡೂಕದಂತೆ, ಮುಕ್ತರೂ ಇಚ್ಛಿಸುತ್ತಾರೆ ; ಏವಂಚ ಮುಕ್ತಿಯಲ್ಲಿಯೂ, ಕಾರು, ವೈದ್ಯ, ಔಷಧಿ ಅಶ್ವ ಮೇಷಾದಿ ಸ್ವಜಾತ್ಯುಚಿತವಾದ ಲೀಲೆಗಳಲ್ಲಿಯೂ ತೊಡಗುತ್ತಾರೆ ; ಆ ವೈಕುಂಠ ಸ್ಥಾನದಲ್ಲಿ ನಮ್ಮನ್ನು ಸೇರಿಸೆಂದು ಮುಖ್ಯಪ್ರಾಣನ ಪ್ರಾರ್ಥನೆಯಿದು ;

ಸೋಮಸೂಕ್ತದ ನಾಲ್ಕು ವರ್ಗಗಳು ಈ ವರ್ಣನೆಯನ್ನೇ ಮುಂದರಿಸುತ್ತವೆ ; ನಿತ್ಯ ಮುಕ್ತಿಯ ವೈವಿಧ್ಯವೂ, ಅಲ್ಲಿಯೂ ತಪ್ಪದೇ ಇರುವುದಾದ, ಮುಖ್ಯಪ್ರಾಣನ ಹಾಗೂ ಶ್ರೀವಿಷ್ಣುವಿನ ಮಹಾತ್ಮ್ಯೆಯೂ ಮುಕ್ತಿಯ ಮಹಿಮೆಯನ್ನೇ ನಿರೂಪಿಸಿ, ಮುಮುಕ್ಷುಗಳ ಮನಸ್ಸನ್ನು ಆಕರ್ಷಿಸುತ್ತವೆ.

ಪ್ರಾಯಪಾತಬಲಾದತ್ರಾಪ್ಯೇತದ್ವಾಕ್ಯಂ ಕಿಲೋಹ್ಯತೇ ।
ಪರಿಸ್ರವಸ್ರಾವಯೇಂದೋ ತತ್ರ ಮಾಮಿತಿ ವಾ ಭವೇತ್ ॥ ೯೪೬ ॥

ಯತ್ರ ಕಾರುರಹಂ ತ್ವಷ್ಟಾ ಯತ್ರಾಸ್ತೇ ಜಾತಿತೋ ಭಿಷಕ್ ।
ಯತ್ರೋಪಲಕ್ಷೋಪಣೀಚನನಾನಾನಾವಿಧಃ ಕಿಲ ॥ ೯೪೭ ॥

ನಾನಾಧಿಯಸ್ತಾರತಮ್ಯಬುದ್ಧಯೋ ವಸವೋಽಖಿಲಾಃ ।
ವಿಚಿತ್ರವಸುಯುಕ್ತಾ ವಾ ಮುಕ್ತಾಃ ಸರ್ವೇಽನುಗಾ ಇವ ॥ ೯೪೮ ॥

ವಯಂ ತಸ್ಥಿಮ ಕೃಷ್ಣಸ್ಯ ತತ್ರ ಮಾಮಮೃತಂ ಕೃಧಿ ।
ಅವತಾರೇಽನುಗಮನಾಭಾವಾತ್ಸರ್ವೇಽನುಗಾ ಇವ ॥ ೯೪೯ ॥

ಯತ್ರ ವಿಷ್ಣೋಃ ಸಮೀಪಸ್ಥಸಾಮಂತಸ್ಯ ಪ್ರಧಾನಿನಃ ।
ಉಪಮಂತ್ರಿಪದೋಕ್ತಸ್ಯ ಮುಕ್ತಶಕ್ರಾದಿರೂಪಿಣಃ ॥ ೯೫೦ ॥

---

ನನ್ನನ್ನು ಹೊಂದಿಸಿ, ಮುಕ್ತನನ್ನಾಗಿ ಮಾಡು (೯೪೫); 'ತತ್ರ ಮಾಮಮೃತಂ ಕೃಧಿ' ಎಂದಾಗಲಿ, 'ಇಂದ್ರಾಯೇಂದೋಪರಿಸ್ರವ' ಎಂಬುದನ್ನಾಗಿ, ಬಹುವೇಳೆ ಸೂಕ್ತದಲ್ಲಿ ಹೇಳಿರುವುದರಿಂದ ಇಲ್ಲಿಯೂ ಅದನ್ನು ಅನುವರ್ತಿಸಬೇಕೆಂದು ಸೂಚಿಸಲು, ಇಲ್ಲಿಯೂ ಅದನ್ನು ಹೇಳಿದ್ದೇವೆ (೯೪೬); ಎಲ್ಲಿ ಕಮ್ಮಾರನೆಂಬುವರೂ (ಬಡಗಿಯೂ), ಜಾತ್ಯಾವೈದ್ಯಾದಿಗಳೂ, ನಾನಾವಿಧ ಚಿತ್ರಗಾರರೂ ಇರುವರೋ (೯೪೭), ಮತ್ತು ಎಲ್ಲಿ ಸರ್ವಮುಕ್ತರೂ, ವಿವಿಧವಾದ ಬುದ್ಧಿಶಕ್ತಿಯುಳ್ಳವರಾಗಿ ತಾರತಮ್ಯೋಪೇತರಾಗಿರುವರೋ, (ಅಷ್ಟವಸುಗಳೂ ಸಹ ತಾರತಮ್ಯವುಳ್ಳವ ರಾಗಿಯೇ ಇರುವರೋ) ವಿವಿಧವಾದ ಸಂಪದಾದಿಯುಕ್ತರಾಗಿರುವರೋ ಮತ್ತು ಸದಾ ಶ್ರೀನಾರಾಯಣನ ಅನುಚರರಂತೆ ವರ್ತಿಸುತ್ತ ಸುಖಿಸುವರೋ (೯೪೮), ಪರಮಾತ್ಮನು ಅವತರಿಸಿ, ಭೂಮಿಗೆ ಒಂದು ರೂಪದಿಂದ ಬಂದರೂ, ಯಾರು ಅನುಸರಿಸಿ ಭೂಮಿಗೆ ಬರುವುದಿಲ್ಲವೋ (ಪುನರ್ಜನ್ಮವಿಲ್ಲವೋ) ಆದರೂ ಅವತಾರಗಳ ಅನುಚರರಂತೆ ನಡೆದುಕೊಳ್ಳುವರೋ (ಆದ್ದರಿಂದ 'ಅನುಗಾಇವ' ಎಂದು ಹೇಳಲಾಗಿದೆ) (೯೪೯); ಮತ್ತು ಎಲ್ಲಿ ಶ್ರೀವಿಷ್ಣು ಸಮೀಪದಲ್ಲಿ ಸದಾ ಸಾಮಂತರಾಜನಂತೆ ವಿರಾಜಿಸುವ ಮುಖ್ಯ ಪ್ರಾಣನೆಂಬ ಪ್ರಧಾನಿಯ ಉಪಮಂತ್ರಿ ಗಳಾದ, (ಎಲ್ಲರೂ, ಉಪಮಂತ್ರಿಗಳೇ) ಇಂದ್ರಾದಿರೂಪ ಮುಕ್ತರು ಸಿದ್ಧರಾಗಿರು ವರೋ ಅಲ್ಲಿಗೆ ನನ್ನನ್ನು ಕರೆದೊಯ್ದು ಮುಕ್ತನನ್ನಾಗಿಸು; (೯೫೦).

*

**ರಥಂ ಜ್ಞಾನಾನಂದಮಯಮಶ್ವೋಮುಕ್ತತುರಂಗಮಃ ।**
**ಸುಖಂ ಸುಖೇನೈವ ವೋಢಾ ಪರ್ಯಕ್ ಪ್ರಾಪಯಿತಾ ಕಿಲ ॥೯೫೦॥**

೯೪೨ನೇ ಶ್ಲೋಕದ ಅಡಿ ಟಿಪ್ಪಣಿಯಲ್ಲಿ ಸಂಗ್ರಹವಾಗಿ ನಿರೂಪಿಸಿದ ಸೂಕ್ತಗತ ಶಬ್ದಗಳ ಅರ್ಥವನ್ನು ಈ ಶ್ಲೋಕಗಳಿಂದ ನಿರೂಪಿಸುತ್ತಾರೆ :—

ಯತ್ರ – ಎಲ್ಲಿ ಮುಕ್ತೌ ಹರೇಃ ಪುರಿ – ಮುಕ್ತಿಯಲ್ಲಿ ಹರಿಪುರದಲ್ಲಿ, ಕರ್ಮಾರಃ–ಬಡಗಿ ಜಾತಿಯವನು, ಜರತೀಭಿಃ–ಪ್ರವೃದ್ಧಾಭಿಃ– ಜರತೀಭಿಃ ಎಂದರೆ ಪ್ರವೃದ್ಧರಾದ, ಓಷಧೀಭಿಃ ಚಿದಾತ್ಮಭಿಃ – ಔಷಧಿಗಳಿಂದ ಎಂದರೆ ಚೇತನ ಸ್ವರೂಪದ ಸಸ್ಯಾದಿಗಳಿಂದ, ವಂಶಾದಿಭಿಃ–ಬೊಂಬುಗಳಿಂದ, ಅವು ಚಿದಾತ್ಮಕವೇ), 'ಧ್ವಜಂ ಚಾಪಂ ಚ–ರಥ ಧ್ವಜ ಮತ್ತು ಧನುಸ್ಸುಗಳನ್ನು, ಬಾಣವೇಣು ರಥಾದಿಕಂ–ಬಾಣ, ಬೆತ್ತದ ರಥಾದಿಗಳನ್ನು, ಕ್ರೀಡಾಯೈ–ಲೀಲೆಗಾಗಿ, ರಚಿತಂ– ನಿರ್ಮಿತವಾದ, ದಿವ್ಯಂ – ವಿಲಕ್ಷಣವಾದ (ರಥಾದಿಗಳುಳ್ಳ) ಶಾಕುನಾನಾಂ– ಎಂದರೆ, ಪತತ್ರಿಣಾಂ – ಪಕ್ಷಿಗಳ, ಪರ್ಣೈಃ – ಎಲೆಗಳಂತಿರುವ, ಪತ್ರೈಃ–ರೆಕ್ಕೆ ಗಳಿಂದಲೂ, ಶಿಖಂಡಾದ್ಯೈಃ–ನವಿಲು ಮೊದಲಾದ ಪಕ್ಷಿಗಳಿಂದಲೂ, ದ್ಯುಭಿಃ– ಎಂದರೆ, ದ್ಯೋತನಕಾರಿಭಿಃ–ಹೊಳೆಯುವ ಕಾಂತಿಯುಳ್ಳವುಗಳಾದ, ಅಶ್ಮಭಿಃ– ಎಂದರೆ, ಚಿತ್ರ ರತ್ನೈಃ–ವಿಚಿತ್ರ ರತ್ನಗಳಿಂದ, ಚಿತ್ರಿತಂ–(ರಥಾದಿಗಳನ್ನು) ಚಿತ್ರಿ ಸಿದವುಗಳನ್ನಾಗಿಮಾಡಲು, ಪುನಃ ಇಚ್ಛತಿ–ಮತ್ತು ಅಶಿಸುತ್ತಾರೆ, ಚ–ಮತ್ತು, ಹಿರಣ್ಯವಂತಂ ಕರ್ಮಂ–ಸುವರ್ಣಾತ್ಮಕವಾಗಿ ಮಾಡಲು, (ಇಚ್ಛಂತಿ–ಇಚ್ಛಿಸು ತ್ತಾರೆ),ತತ್ರ–ಅಲ್ಲಿ (ವೈಕುಂಠದಲ್ಲಿ), ಮಾಂ–ನನ್ನನ್ನು, ಅಮೃತಂ–ಮುಕ್ತನನ್ನಾಗಿ, ಕೃಧಿ–ಮಾಡು ; ಪ್ರಾಯಪಾಠ ಬಲಾತ್ – ಬಹುಲವಾಗಿ ಪ್ರಯೋಗಿಸುವುದ ರಿಂದ, ಅತ್ರಾಪಿ–ಇಲ್ಲಿಯೂ, ಏತದ್ವಾಕ್ಯಂ–'ತತ್ರ ಮಾಮಮೃತಂ ಕೃಧಿ' ಎಂಬ ಈ ವಾಕ್ಯವನ್ನು ಊಹ್ಯತೇ ಕಿಲ–ಊಹೆಯಿಂದ ಸೇರಿಸಿಕೊಂಡಿದ್ದೇನೆ ; ಪರಿಸ್ರವ– ಎಂದರೆ, ಸ್ರಾವಯ–ಕರೆದೊಯ್ದು ಮುಟ್ಟಿಸು, ಇಂದೋ–ಹೇ ಪವಮಾನ ; ತತ್ರ ಮಾಂ–ಅಲ್ಲಿ ನನ್ನನ್ನು, ಇತಿ ವಾ–ಎಂದಾಗಲಿ (' ತತ್ರಮಾಮಮೃತಂಕೃಧಿ ' ಎಂಬುದರ ಬದಲು), ಭವೇತ್–ಊಹಿಸಲ್ಪಡಬಹುದು ; ಯತ್ರ–ಎಲ್ಲಿ, ಅಹಂ– ನಾನು, ಕಾರುಃ–ಕಮ್ಮಾರನು, ತ್ವಷ್ಟಾ–(ಎಂದರೆ) ಬಡಗಿಕೆಲಸದವನು, ಯತ್ರ–

ಈಉಪಮಂತ್ರಿಗಳೇ ಜ್ಞಾನಾನಂದಮಯಗಳಾದ ಅಶ್ವಗಳಾಗಿದ್ದು ಚಿದಾನಂದಾತ್ಮಕ ರಥಗಳನ್ನು ಹೊತ್ತು ಶ್ರೀಹರಿಯನ್ನು ಸುತ್ತಲೂ ತಿರುಗಿಸಿ ತರುವರೋ, ಅಲ್ಲಿ

ಎಲ್ಲಿ, ಜಾತಿತಃ_ಜಾತಿಯಿಂದ (ಆ ಗುಂಪಿನ ಜೀವರಿಂದ), ಭಿಷಕ್–ವೈದ್ಯನೂ, ಆಸ್ತೇ – ಇರುವನೋ, ಯತ್ರ – ಎಲ್ಲಿ, ನಾನಾ ವಿಧಃ – ವಿವಿಧವಾದ, ಉಪ ಲಕ್ಷೇಪಣೇಚನ–ಅಲಂಕಾರವಸ್ತು ನಿರ್ಮಾಪಕ ಯಂತ್ರ ವಿಶೇಷಗಳೂ, ಕಿಲ– ಇರುತ್ತವೆಯೋ ; ನಾನಾಧಿಯಃ_ಬಹು ವಿಧದ, ಬುದ್ಧಿಯುಳ್ಳ, ತಾರತಮ್ಯ ಬುದ್ಧಯಃ_ತಾರತಮ್ಯ ಕ್ರಮದ ಬುದ್ಧಿಗಳುಳ್ಳ, ಅಖಿಲಾಃ ವಸವಃ – ಸಮಸ್ತ ಜೀವರೂ ಇರುವರೋ, ವಾ_ಅಥವಾ, ವಿಚಿತ್ರ ವಸುಯುಕ್ತಾಃ_ವಿಚಿತ್ರ ಐಶ್ವರ್ಯ ಗಳುಳ್ಳವರಾಗಿರುವರೋ, ಸರ್ವೇ ಮುಕ್ತಾಃ_ಎಲ್ಲ ಮುಕ್ತರೂ, ಯತ್ರ_ಯಾವ ಸ್ಥಲದಲ್ಲಿ, ಅನುಗಾಃ_ಶ್ರೀಹರಿಯ ಅನುಚರರೇ ಆಗಿರುವರೋ, ಅವತಾರೇ– ಪರಮಾತ್ಮನ ಅವತಾರದಲ್ಲಿ, ಅನುಗಮನಾಭಾವಾತ್_ಹಿಂಬಾಲಿಸಿ ಭೂಮಿಗೆ ತಾವು ಹೋಗದವರೇ ಆದ್ದರಿಂದ, ಸರ್ವೇ ಅನುಗಾಃ ಇವ_ಸರ್ವಮುಕ್ತರೂ ಅನುಚರರಂತೆ ಎಂದಿರುತ್ತದೆ (ಸೂಕ್ತದಲ್ಲಿ) ; ಕೃಷ್ಣಸ್ಯ–ಕೃಷ್ಣನ (ಪರಮಾತ್ಮನ), ವಯಂ ತಸ್ಥಿಮ_ನಾವೆಲ್ಲರೂ ಇಲ್ಲಿಯೇ ನಿತ್ಯ ಸ್ಥಿತರಾದರೂ (ಕೃಷ್ಣನು ನಮ್ಮ ಮಧ್ಯದಲ್ಲಿರುವನೇ ಆಗಿರುವನಾದ್ದರಿಂದ), ತತ್ರ – ಅಲ್ಲಿ, ಮಾಂ – ನನ್ನನ್ನು, ಅಮೃತಂ_ಮುಕ್ತನನ್ನಾಗಿ, ಕೃಧಿ_ಮಾಡೆಂದು ಪ್ರಾರ್ಥಿಸುತ್ತೇನೆ ; ಯತ್ರ_ಎಲ್ಲಿ, ವಿಷ್ಣೋಃ_ವಿಷ್ಣುವಿನ, ಸಮೀಪಸ್ಥ ಸಾಮಂತಸ್ಯ–ವಿಷ್ಣು ಸಮೀಪದಲ್ಲಿ ಸಾಮಂತನ, ಪ್ರಧಾನಿನಃ_ಪ್ರಧಾನಿಗೆ, (ವಾಯುದೇವನಿಗೆ), ಉಪಮಂತ್ರಿಪದೋಕ್ತಸ್ಯ–ಉಪ ಮಂತ್ರಿಪದದಿಂದ ಹೇಳಲಾದ, ಮುಕ್ತ ಶಕ್ರಾದಿರೂಪಿಣಃ_ಮುಕ್ತ (ಬ್ರಹ್ಮ) ಇಂದ್ರಾದಿರೂಪದ ಮುಕ್ತರಿಗೆ, ರಥಂ_ರಥವೂ, ಜ್ಞಾನಾನಂದಮಯಂ_ಜ್ಞಾನಾ ನಂದಾತ್ಮಕವಾದುದೇ, ಅಶ್ವಃ – ತುರಗವೂ, ಮುಕ್ತತುರಂಗಮಃ_ಮುಕ್ತವಾದ ಕುದುರೆಯೇ, ಸುಖಂ_ಸುಖಸ್ವರೂಪರನ್ನು, ಸುಖೇನ ಏವ_ಸುಖದಿಂದಲೇ, (ಯಾವ ಶ್ರಮವೂ ಇಲ್ಲದೇ–ಅದನ್ನೇ ಆನಂದವೆಂದು ತಿಳಿದು) ವೋಢಾ_ಹೊತ್ತು ಪರ್ಯಕ್_ಸುತ್ತಲೂ, ಪ್ರಾಪಯತಾ ಕಿಲ_ತಿರುಗಿಸುವರಷ್ಟೆ.

**ರೋಮಣ್ವಂತೌ ರೋಮನವಂತೌ ಮೇಷೌ ಜ್ಞಾನಶರೀರಿಣೌ ।**
**ತೌ ಭೇದೌ ಪುರತಸ್ತಸ್ಯ ಮಿಥಸ್ತಾಡನಕಾರಿಣೌ ॥ ೯೫೨ ॥**

---

ನನ್ನನ್ನು ಮುಕ್ತನನ್ನಾಗಿ ಮಾಡು ; ಆ ಉಪಮಂತ್ರಿಗಳಿಗೂ, ಅವರನ್ನು ಹೊತ್ತು ತಿರುಗಿಸುವ ಮುಕ್ತ ಅಶ್ವಗಳು ಮತ್ತು ಚಿದಾನಂದಾತ್ಮಕ ರಥಗಳೂ (ಯಥಾ ಯೋಗ್ಯವಾದವು) ಸಿದ್ಧವೇ ಆಗಿರುತ್ತವೆ (೯೫೧). ಮೈತುಂಬ ರೋಮಗಳಿರುವ

ರೋಮಣ್ವಂತೌ–ಎಂದರೆ, ರೋಮವಂತೌ–(ನೈತುಂಬ) ಕೂದಲುಳ್ಳ ಮೇಷೌ–ಮೇಷದ್ವಯವು (ಎರಡು ಮೇಷಗಳು), ಜ್ಞಾನಶರೀರಿಣೌ–ಚಿದಾನಂದ ಸ್ವರೂಪವುಳ್ಳವೇ (ಆಗಿವೆ) ; ತಸ್ಯ–ಆ ಮೇಷದ್ವಯದ, ತೌ ಭೇದೌ–ಪರಸ್ಪರ ಭಿನ್ನಗಳು, ಪುರತಃ–ಎದುರಿಗೆ (ನಾರಾಯಣನ ಮತ್ತು ಮುಕ್ತರ ಎದುರಿನಲ್ಲಿ), ಮಿಥಃ – ಪರಸ್ಪರವಾಗಿ (ಒಂದಕ್ಕೊಂದು) ತಾಡನಕಾರಿಣೌ – ಹೊಡೆದಾಡುವ (ಲೀಲೆಯ ಪ್ರದರ್ಶನಕ್ಕೆ) ಕಾರಣವಾಗಿವೆ.

**ಸುಖಂ ಸುಖೇನೈವ ದುಃಖಂ ವೈರಾದ್ಯಂ ತು ನ ಕಿಂಚನ ।**
**ಮುಕ್ತತ್ವಾತ್ತಸ್ಯ ಶೇಪೋಂಡಂ ಮಹತ್ಸುಖಮಯಂ ಸದಾ ॥ ೯೫೩ ॥**
**ಹಂಸಾನಾಂ ಮಂತ್ರಿಣಸ್ತಸ್ಯ ವೋಢಾರೌ ಯತ್ರ ಲೀಲಯಾ ।**
**ಯದ್ಭಿಂತ ಇತಿ ಭೇದೌ ಚ ಸ್ಯಾತಾಂ ಭೇದನಕಾರಿಣೌ ॥ ೯೫೪ ॥**

ಸುಖೇನ ಏವ–ಆನಂದದಿಂದಲೇ, ಸುಖಂ–ಸುಖವಾಗಿಯೇ (ಈ ಟಗರುಗಳ ಪರಸ್ಪರ ಹೋರಾಟವು ನಡೆಯುತ್ತದೆ) (ತಾಡನ ಕಾರಿಣೌ ಎಂದು ಹಿಂದಿನ ಶ್ಲೋಕಕ್ಕೆ ಅನ್ವಯಿಸಿಕೊಳ್ಳಬೇಕು) ; ದುಃಖಂ – ದುಃಖವೂ, ವೈರಾದ್ಯಂ – ವಿರೋಧಾದಿಯೂ (ದ್ವೇಷಭಾವನೆಯೂ), ಕಿಂಚನ–ಸ್ವಲ್ಪವೂ, ನ ತು–ಇಲ್ಲವೇ ಇಲ್ಲ (ಏಕೆಂದರೆ), ಮುಕ್ತತ್ವಾತ್–(ಮೇಷದ್ವಯವೂ) ಮುಕ್ತವೇ ಆದ್ದರಿಂದ ; ತಸ್ಯ–ಆ ಮೇಷದ್ವಯದ, ಶೇಪೋಂಡಂ–ಪುರುಷ ಗುಹ್ಯೇಂದ್ರಿಯ ಮತ್ತು ಅಂಡಗಳು, ಸದಾ–ಸರ್ವದಾ, ಮಹತ್ಸುಖಂ–ಅಖಂಡಸುಖರೂಪವೇ ಆದುದು (ಶೇಪಃ ಪದ ವನ್ನು ಯಥಾಸ್ಥಿತ ವಿಭಕ್ತ್ಯಂತವನ್ನಾಗಿಯೂ ತಿಳಿಯಬಹುದು, ಆಗ ಪೂರ್ವೋಕ್ತ ಸುಖಶಬ್ದವನ್ನು ಆವೃತ್ತಿ ಮಾಡಿಕೊಳ್ಳಬೇಕು) ; ಹಂಸಾನಾಂ ಉಪಮಂತ್ರಿಣಃ– ಎಂಬುದು, ಸೂಕ್ತದಲ್ಲಿರುವ 'ಹಸನಾಮುಪಮಂತ್ರಿಣಃ' ಎಂಬುದರ ಅರ್ಥವನ್ನು

---

ಎರಡು ಟಗರುಗಳು (ಗಂಡು ಕುರಿಗಳು) ಮುಕ್ತರು ಮತ್ತು ನಾರಾಯಣನ ಸಮ್ಮುಖದಲ್ಲಿ ಲೀಲೆಗಾಗಿ, ಕಾಳಗವಾಡುತ್ತವೆ ; ಎರಡೂ ಭಿನ್ನಗಳೇ ಆಗಿವೆ– ಜ್ಞಾನಶರೀರವುಳ್ಳವು ( ೯೫೨ ). ಅವು ಲೀಲೆಗಾಗಿ ಸುಖದಿಂದಲೇ ಯುದ್ಧ ಮಾಡುತ್ತವೆ ; ಅವುಗಳಲ್ಲಿ ದುಃಖವೈರಾದಿಗಳು ಸ್ವಲ್ಪವೂ ಇಲ್ಲ (ಇದು ಸರ್ವರ ಮುಕ್ತರ ಉಪಲಕ್ಷಣವು) ; ಅವೂ ಮುಕ್ತಮೇಷಗಳೇ ಆದ್ದರಿಂದ, ಪುರುಷೇಂದ್ರಿಯ ಮತ್ತು ಅಂಡಗಳೂ ಮಹತ್ಸುಖಮಯವೇ, (ಅಖಂಡ ಸುಖರೂಪವೇ ಆಗಿವೆ ;

ಹೇಳುತ್ತದೆ ; ಭೇದೌ–ಸೂಕ್ತಗತ ಭೇದೌಶಬ್ದವು, ಯತ್–ಯಾವ ಕಾರಣದಿಂದ, ಭೇದನಕಾರಿಣೌ – ಪರಸ್ಪರ ವಿರೋಧವನ್ನು ಪ್ರದರ್ಶಿಸುವ ಮೇಷದ್ವಯವು, ಭಿಂತ ಇತಿ ಭೇದೌ–ಭೇದಪ್ರದರ್ಶಕವಾದ್ದರಿಂದ ಭೇದೌ ಎಂದು, ಸ್ಯಾತಾಂ–ಆಗುತ್ತವೆ.

**ಯದಿತ್ಥಂ ಯತ್ರ ಮಂಡೂಕಾ ವಾಃ ಸರೋವರವಾರಿ ಚ ।**
**ಇಚ್ಛಂತಿ ಚಿತ್ಸುಖಾಕಾರಾಸ್ತತ್ರ ಮಾಮ್ಮೃತಂ ಕೃಧಿ ।**
**ಜಾತ್ಯೇಕವಚನಂ ಚೇದನೇಕಭೇಕಂ ಸರಃ ಕ್ವ ತತ್ ॥ ೯೫೫ ॥**

ಯತ್ರ–ಎಲ್ಲಿ, ಮಂಡೂಕಾಃ–ಕಪ್ಪೆಗಳು, ವಾಃ–ಜಲವನ್ನು, ಸರೋವರವಾರಿ ಚ–ಸರೋವರದ ಜಲವನ್ನೇ, ಇಚ್ಛಂತಿ–ಇಚ್ಛಿಸುತ್ತವೆಯೋ; ಚಿತ್ಸುಖಾಕಾರಾಃ–(ಆದರೂ) ಚಿದಾನಂದಾತ್ಮಕವೇ ಆಗಿವೆ; ತತ್ರ – ಅಲ್ಲಿ, ಮಾಂ – ನನ್ನನ್ನು, ಅಮೃತಂ–ಮುಕ್ತನನ್ನಾಗಿ, ಕೃಧಿ–ಮಾಡು ; ಇದಂ–ಶ್ರುತಿಗತವಾದ 'ಮಂಡೂಕ ಇಚ್ಛತಿ' ಎಂಬಲ್ಲಿರುವ ಮಂಡೂಕಶಬ್ದವು, ಜಾತ್ಯೇಕವಚನಂ–ಆ ಜಾತಿಯನ್ನೇ ಉದ್ದೇಶಿಸುವ ಏಕವಚನವು; ಏಕಭೇಕಃ–ಒಂದೇ ಕಪ್ಪೆಯುಳ್ಳ, ಸರಃ–ಸರೋವರವು, ಕ್ವ–ಎಲ್ಲಿದೆ? ತತ್–ಆದ್ದರಿಂದ (ಜಾತ್ಯೇಕವಚನವು ಅವು ಅಸಂಖ್ಯ ಮುಕ್ತ ಮಂಡೂಕಗಳೇ).

**ಏವಂ ನಾನಾವಿಧಾ ಮುಕ್ತಾ ಯತ್ರ ತತ್ರಾಮೃತಂ ಕೃಧಿ ।**
**ಇತ್ಯುಕ್ತ್ಯಾ ತದ್ಗಜೀವಾನಾಂ ಮುಕ್ತತ್ವಂ ಸುತರಾಮಭೂತ್ ॥ ೯೫೬ ॥**

---

(ಮುಕ್ತರ ಸಕಲ ಕರಚರಣಾದಿ ಅವಯವಗಳೂ ಚಿದಾನಂದಾತ್ಮಕವೆಂಬಲ್ಲಿ ನಿದರ್ಶನವಾಗುತ್ತದೆ) ; 'ಹಸನಾವಮ್' ಎಂದರೆ ಹಂಸರುಗಳ ಉಪಮಂತ್ರಿಗಳು, ಎಂದರೆ ಅಲ್ಲಿ ಶ್ರೇಷ್ಠರ ಸಲಹೆಗಾರರು ಸಹ ಜ್ಞಾನರೂಪಿಗಳೇ ; ಭಿನ್ನಗಳೆಂದು ಭೇದೌ ಶಬ್ದವು ಹೇಳುತ್ತದೆ–ವಿರೋಧ ಪ್ರದರ್ಶನಕಾರಿಗಳೆಂಬ ಅರ್ಥವನ್ನು ಸೂಚಿಸುತ್ತದೆ ; (೯೫೩–೯೫೪). ಎಲ್ಲಿ ಮುಕ್ತ ಮಂಡೂಕಗಳು, ಸರೋವರದ ಜಲವನ್ನೇ ಇಚ್ಛಿಸುತ್ತವೆಯೋ, ಹೀಗಿರುವ ಮುಕ್ತಲೋಕದಲ್ಲಿ, (ಆದರೂ ಕಪ್ಪೆಗಳೂ ಚಿದಾನಂದರೂಪಗಳೇ ಆಗಿರುವುವೋ ಅಲ್ಲಿ ನನ್ನನ್ನು ಮುಕ್ತನನ್ನಾಗಿ ಸೇರಿಸು ; ಮಂಡೂಕವೆಂಬುದು ಜಾತ್ಯೇಕವಚನವು ; ಬಹುಮುಕ್ತಮಂಡೂಕಗಳೇ (ಆ ಜಾತಿಯ ಜೀವರೇ) ಇರುವರು ; ಒಂದೇ ಮಂಡೂಕವುಳ್ಳ ಸರೋವರವು ಎಲ್ಲಿರುವುದು ? ಆದ್ದರಿಂದ ಜಾತ್ಯೇಕವಚನವೆಂಬುದು ಸ್ಪಷ್ಟವಿದೆ (೯೫೫). ಹೀಗಿರುವ ಲೋಕದಲ್ಲಿ ನನ್ನನ್ನು ಮುಕ್ತನನ್ನಾಗಿ ಮಾಡೆಂಬ ಪ್ರಾರ್ಥನೆಯು, ಅಲ್ಲಿ

ಏವಂ–ಹೀಗೆ, ಯತ್ರ–ಯಾವ ಲೋಕದಲ್ಲಿ, ನಾನಾ ವಿಧಾ–ಬಹು ವಿಧರಾದ, ಮುಕ್ತಾಃ – ಮುಕ್ತಜೀವರೋ (ಇರುವರೋ – ಅನಾದಿಕಾಲದಿಂದ ಮುಕ್ತರಾದವರೆಲ್ಲರೂ ಇರುವರೋ), ತತ್ರ–ಅಲ್ಲಿ, ಅಮೃತಂ–ಮುಕ್ತನನ್ನಾಗಿ, ಕೃಧಿ–ಮಾಡು; ಇತ್ಯುಕ್ತ್ಯಾ–ಎಂಬ ಪ್ರಾರ್ಥನಾರೂಪದ ವಾಕ್ಯದಿಂದ, ತದ್ಗ ಜೀವಾನಾಂ–ಆ ಲೋಕದಲ್ಲಿರುವ ಮಂಡೂಕಾದಿ ಜೀವರಿಗೆ, ಮುಕ್ತತ್ವಂ–ಮುಕ್ತ ರೆಂಬುವುದು, ಸುತರಾಂ–ಯಾವ ಶ್ರಮವೂ ಇಲ್ಲದೇ (ಸುಲಭವಾಗಿ), ಅಭೂತ್– ಸಿದ್ಧವಾಗುತ್ತದೆ (ಆಯಿತು).

**ತದುತ್ತರರ್ಚಾಂ ಚರ್ಚಾ ಚ ಕಿಂಚಿತ್ಕಿಂಚಿದ್ವಿವಿಚ್ಯತೇ ।**
**ಅಮೃತೇ ಅಕ್ಷಿತೇ ಯತ್ರ ಲೋಕೇ ಸುಕೃತಕರ್ಮಭಿಃ ।**
**ಸುಷ್ಠ್ವಾಚೀರ್ಣ ನಿವೃತ್ತಾಖ್ಯಮುಕ್ತಿಸಾಧನಕರ್ಮಭಿಃ ॥ ೯೫೭ ॥**
**ದೇವೈರ್ಮಹೀಯತೇ ವಿಷ್ಣೋಃ ಪರಮಂ ತತ್ಪದಂ ಸದಾ ।**
**ತತ್ರಾಮೃತಂ ಮಾಂ ಕೃಧೀಂದೋ ಪವಮಾನೇಷ್ಟದಾಯಕ ॥ ೯೫೮ ॥**
**ಇಂದ್ರಾಯ ಪರಮೈಶ್ವರ್ಯಸಂಪನ್ನಾಯ ಪರಿಸ್ರವ ।**
**ಪರಿತಃ ಸ್ರಾವಯೇಂದ್ರಂ ತಮುದ್ದಿಶ್ಯ ಪ್ರಾಪಯಾಶು ಮಾಂ ॥೯೫೯॥**
**ಣಿಚೋಂತರ್ನೀತತಾ ತಸ್ಯ ಸಹಪ್ರಾಪ್ತಿವಿವಕ್ಷಯಾ ।**
**ಇತ್ಯರ್ಥಾನಾಂ ಮುಮುಕ್ಷೂಣಾಂ ಕರ್ಣೇದ್ಯಾಪಿ ಜಪಂತಿ ಯಾಂ ॥ ೯೬೦ ॥**

---

ವಿವಿಧ ಮುಕ್ತರಿರುವರೆಂದೂ ಅದು ಸಕಲ ಮುಕ್ತಜೀವರ ವಾಸಸ್ಥಾನವೆಂದೂ (ಸೂಚಿತವಾಗಿದೆ) ಸಿದ್ಧವಾಯಿತು (೯೫೬). ಈ ಸೋಮಸೂಕ್ತದ ಇತರ ಮುಂದಿನ ಋಕ್ಕುಗಳ ವಿಷಯಚರ್ಚೆಯನ್ನು, ಮುಂದೆ ಸ್ವಲ್ಪಮಟ್ಟಿಗೆ ಮಾಡಲಾಗುತ್ತದೆ; ಆ ಎಲ್ಲ ಋಕ್ಕುಗಳೂ ವೈಕುಂಠ ಮಹಾತ್ಮ್ಯದ ಪ್ರಶಂಸಾರೂಪವಾದುವೇ ಆಗಿವೆ; ನಿತ್ಯವಾದ ಈ ಮುಕ್ತಲೋಕವು ಮಹಾಪುಣ್ಯಕರ್ಮಗಳಿಂದ ಲಭ್ಯವಾದುದು; ಆ ಸತ್ಕರ್ಮಗಳೆಂದರೆ, ಭಕ್ತಿಯಿಂದ ಆಚರಿಸಲ್ಪಟ್ಟ ನಿಷ್ಕಾಮ ಕರ್ಮಗಳೇ ಆಗಿವೆ–ಅದೇ ನಿವೃತ್ತಕರ್ಮವು–ಮುಕ್ತಿಸಾಧನವು; ಶ್ರೀವಿಷ್ಣುವಿನ ಈ ಪರಮಪದವು ಬ್ರಹ್ಮಾದಿ ದೇವತೆಗಳಿಂದ ನಿತ್ಯ ವಿರಾಜಿಸುತ್ತದೆ; ಅಲ್ಲಿಗೆ ನನ್ನನ್ನು ಹೊಂದಿಸು, ಹೇ ಇಷ್ಟಪ್ರದನಾದ ಇಂದೋ! ಪವಮಾನ! ಮುಖ್ಯಪ್ರಾಣ! ಎಂದು ಪ್ರಾರ್ಥನೆಯು; ಮಹದೈಶ್ವರ್ಯಸಂಪನ್ನನಾದ, ಅತಏವ

**ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ ।**
**ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮಮೃತಂ ಕೃಧಿ ॥ ೯೬೧ ॥**
**ಇತಿ ಶ್ರುತೇಃ ಶಿರಃಪಾಣಿದ್ವಯಮಧ್ಯಾಂಘ್ರಿರೂಪಿಣಃ ।**
**ಪ್ರಿಯಮೋದಪ್ರಮೋದಾನಂದಮುದಾಖ್ಯಾಃ ಸದಾಸತೇ ॥ ೯೬೨ ॥**

ತದುತ್ತರಚರ್ಚಾಂ–ಆ ಮುಂದಿನ [1] ವೈಕುಂಠ ಪ್ರಶಂಸಾರೂಪದ ಋಕ್ಕುಗಳ, ಚಚರ್ಾಂ–ಚರ್ಚೆಯನ್ನು (ವಿವೇಚನೆಯನ್ನು), ಕಿಂಚಿತ್ ಕಿಂಚಿತ್ ಚ–ಸ್ವಲ್ಪ ಸ್ವಲ್ಪವಾಗಿಯೇ, ವಿವಿಚ್ಯತೇ–ಮಾಡಲ್ಪಡುತ್ತದೆ; ಸುಕೃತ ಕರ್ಮಭಿಃ–ಸತ್ಕರ್ಮ

ಇಂದ್ರಶಬ್ದ ಮುಖ್ಯವಾಚ್ಯನಾದ ಶ್ರೀವಿಷ್ಣುವನ್ನೇ ಉದ್ದೇಶಿಸಿ, ಸರ್ವಪ್ರಕಾರದಿಂದ ಆತನನ್ನೇ ಸೇರುವಂತೆಮಾಡು (ಪರಿತಃ ಸ್ರಾವಯ=ಪರಿಸ್ರವ); ನಿನ್ನೊಂದಿಗೆ ಕರೆದೊಯ್ದು ನನ್ನನ್ನು ಸೇರಿಸೆಂಬುದನ್ನು 'ಣಿಚ್' ಪ್ರತ್ಯಯವು ಅಡಗಿರುವುದು, ಇದನ್ನೇ ಸೂಚಿಸುತ್ತದೆ; ಈ ಅರ್ಥವಿಶೇಷಗಳುಳ್ಳ ಋಕ್ಕುಗಳನ್ನು, ಸುಜೀವರ (ಮುಮೂರ್ಷುಗಳ – ಮರಣಕಾಲದಲ್ಲಿ) ಕಿವಿಯಲ್ಲಿ ಜಪಿಸಬೇಕೆಂಬ ಶ್ರೌತ ವಿಧಿಯೂ ಇರುತ್ತದೆ; ಮುಖ್ಯ ತಾತ್ಪರ್ಯವೇನೆಂದರೆ, ಮುಕ್ತಿಯಲ್ಲಿ ಸಕಲ ಸುಖ

[1] ಶ್ಲೋಕ (೯೪೨) ರಲ್ಲಿ ಮೂರು ವಾಕ್ಯಗಳಿಂದ ಅಲ್ಲದೇ ಮುಂದಿನ ವರ್ಗಗಳಲ್ಲಿ ನಿರೂಪಿತವಾದ ವೈಕುಂಠಮಾಹಾತ್ಮ್ಯೆಯನ್ನು ಕಿಂಚಿತ್ ಸಂಕ್ಷೇಪವಾಗಿ ಸೂಚಿಸುತ್ತೇವೆನ್ನುತ್ತಾರೆ; ಆ ವರ್ಗಗಳ (ಸೋಮಸೂಕ್ತದ) ಮಂತ್ರಗಳು ಮುಂದಿನಂತಿವೆ:—

I ನೇ ವರ್ಗ ೧ನೇ ವರ್ಗದ ಮೊದಲನೇ ಮಂತ್ರ:—

(i) ನಾನಾನಂ ವಾಜನೋ ಧಿಯೋ ವಿಭ್ರತಾನಿ ಜನಾನಾಂ। ತಕ್ಷಾರಿಷ್ಟಂ ರುತಂಭಿಷಗ್ಬ್ರಹ್ಮಾ ಸುನ್ವಂತಮಿಚ್ಛತೀಂದ್ರಾಯೇಂದೋಪರಿಸ್ರವ ॥

(ii) ೨, ೩, ೪ನೇ ಮಂತ್ರಗಳನ್ನು ಅವುಗಳ ಭಾವಾರ್ಥವನ್ನು ಶ್ಲೋಕ ೯೪೨ರಲ್ಲಿ ಕೊಡಲಾಗಿದೆ.

II ನೇ ವರ್ಗ ೫ರಿಂದ ೯ ರವರೆಗೆ:—

೫ನೇ ಮಂತ್ರ:—ಶರ್ಯಣಾವತಿ ಸೋಮಮಿಂದುಃ ಪಿಬತು ವೃತ್ರಹಾ। ಬಲಂ ದಧಾನ ಆತ್ಮನಿ ಕರಿಷ್ಯನ್ ವೀರ್ಯಂ ಮಹದಿಂದ್ರಾಯೇಂದೋ...॥ ೬ನೇ ಮಂತ್ರ:— ಆ ಪವಸ್ವ ದಿಶಾಂಪತ ಆರ್ಜೀಕಾತ್ಸೋಮಮೀಢ್ವಃ। ಋತವಾಕೇನ ಸತ್ಯೇನ ಶ್ರದ್ಧಯಾ ತಪಸಾ ಸುತ ಇಂದ್ರಾ...॥ ೭ನೇ ಮಂತ್ರ:—ಪರ್ಜನ್ಯ ವೃದ್ಧಂ ಮಹಿಷಂ ತಂ ಸೂರ್ಯಸ್ಯ ಮಹಿತಾ ಭರತ್। ತಂ ಗಂಧರ್ವಾಃ ಪ್ರತ್ಯಕ್ ಋಭ್ಣಂತಂ ಸೋಮೇ ರಸ ಮಾದಧುರಿಂದ್ರಾ...॥ ೮ನೇ ಮಂತ್ರ:—ಋತಂ ವದನ್ನೃತದ್ಯುಮ್ನ ಸತ್ಯಂ ವದನ್

